# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಆದಿಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 1**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*
**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*
**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*
**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*
**ದಿ|| ವಿದ್ವಾನ್ ರಾಮೇಶ್ವರಾವಧಾನೀ**

ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್,M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

**ಮೂಕಂ ಕರೋತಿ ವಾಚಾಲಂ ಪಙ್ಗುಂ ಲಙ್ಘಯತೇ ಗಿರಿಮ್ ।**
**ಯತ್ಕೃಪಾ ತಮಹಂ ವನ್ದೇ ಪರಮಾನನ್ದಮಾಧವಮ್ ॥**

ಪರಮಾತ್ಮನ ಇಚ್ಛೆಯಿಂದಾಗಿ 1953-54ನೇ ವರ್ಷಗಳಲ್ಲಿ ಶ್ರೀಮನ್ಮಹಾಭಾರತವನ್ನು ಆಮೂಲಾಗ್ರವಾಗಿ ನಾಲ್ಕಾರು ಬಾರಿ ಓದಿಮುಗಿಸುವ ಸದವಕಾಶ ಸಿಕ್ಕಿತು. ಅಂದಿನಿಂದಲೂ ತತ್ತ್ವಗಳ ಈ ಖನಿಯನ್ನು ಸಾರ್ವಜನಿಕರಿಗೆ ಹಂಚಬೇಕೆನ್ನುವ ತವಕವು ಮನಸ್ಸಿನಲ್ಲಿ ಉಂಟಾಯಿತು. ಸತ್ಸಂಕಲ್ಪಕ್ಕೆ ಪರಮಾತ್ಮನ 'ಅಸ್ತು' ಕಾರವು ಸಿಕ್ಕಿತೋ ಎಂಬಂತೆ 1956ರ ವೇಳೆಗೆ 'ವಿಕ್ರಮ' ಪತ್ರಿಕೆಯ ಸಂಪಾದಕರಾದ ಶ್ರೀ ಸುಬ್ಬರಾಯ-ನಾರಾಯಣ-ಮಲ್ಯರು ಈ ಸದಾಶಯವನ್ನು ಕಾರ್ಯಗತಮಾಡಿಕೊಡಲು ಪೂರ್ಣ ನೆರವಾದರು. ಅವರ ಸಂಪೂರ್ಣ ಬೆಂಬಲದಿಂದಾಗಿ ಮಹಾಭಾರತದ ಪ್ರಚಾರಕ್ಕಾಗಿಯೇ ಮೀಸಲಾದ 'ಭಾರತ ದರ್ಶನ' ಮಾಸ ಪತ್ರಿಕೆಯು 1957ನೇ ಸಂಕ್ರಾಂತಿಯ ಶುಭದಿನದಂದು ಪ್ರಾರಂಭವಾಯಿತು. ಸಾರ್ವಜನಿಕರಿಗೆ ಬಹುಸುಲಭವಾಗಿ ಮಹಾಭಾರತವನ್ನು ಹಂಚುವ ಸದಿಚ್ಛೆಯಿಂದ ಈ ಪತ್ರಿಕೆಯ ಚಂದಾಹಣವನ್ನು ಪ್ರಪ್ರಥಮವಾಗಿ ಕೇವಲ ರೂ.1/- ಇಡಲಾಗಿತ್ತು. ಅನೇಕರು ರಾಮನವಮಿಗೆ ಕೊಡುವ ಚಂದಾಹಣದಂತೆ ಚಂದಾ ಸಲ್ಲಿಸಿ ಚಂದಾದಾರರಾದರು. ಎಷ್ಟೋ ಮಂದಿಗೆ ಈ ಚಂದಾಹಣಕ್ಕೆ ವರ್ಷಪೂರ್ತಿಯಾಗಿ ಪತ್ರಿಕೆಯು ಬರುವುದೆಂಬ ನಿರೀಕ್ಷೆಯೂ ಇರಲಿಲ್ಲ.

ಪ್ರಾರಂಭದಿಂದ ಮೂರು ವರ್ಷಗಳವರೆಗೆ ಪತ್ರಿಕೆಯು ಸುವ್ಯವಸ್ಥಿತವಾಗಿ ನಡೆಯಿತು. ಮೂರು ವರ್ಷಗಳನಂತರ ಪ್ರತ್ಯೇಕವಾದ ಮುದ್ರಣಾಲಯವು ಬೇಕೆಂಬ ಆಸೆಯು ಮೂಡಿ ಅದರೊಂದಿಗೆ ಕಷ್ಟವನ್ನೂ ಕೊಂಡುಕೊಳ್ಳಲಾಯಿತು. 1960-61-62 ಈ ಮೂರು ವರ್ಷಗಳು ಬಹಳ ಕಷ್ಟ ದಿಂದ ಸಾಗಿದುವು.

1965ನೇ ವರ್ಷದಲ್ಲಿ 'ಭಾರತ ದರ್ಶನ' ಬೆಂಬಲದಿಂದ ಶ್ರೀಮದ್ವಾಲ್ಮೀಕಿರಾಮಾಯಣವನ್ನೂ ಪ್ರಾರಂಭಿಸಲಾಯಿತು. ಈ ನಮ್ಮ ಎರಡು ಪ್ರಕಟಣೆಗಳೂ ಬಹಳ ಬೇಗ ಜನಪ್ರಿಯವಾದುವು. ಚಂದಾದಾರರ

ಸಂಖ್ಯೆ ವರ್ಷೇ ವರ್ಷೇ ಏರಿತು. ಆದರೆ ಪ್ರತಿಯೊಬ್ಬರೂ ಹಿಂದಿನ ಕಥಾ ಭಾಗವನ್ನು ಅಪೇಕ್ಷಿಸುತ್ತಿದ್ದರು. ಅದನ್ನು ಒದಗಿಸಲು ನಮಗೆ ಸಾಧ್ಯವಿಲ್ಲ ವಾಯಿತು. 'ಈಗ ಕೊಡುತ್ತೇವೆ, ಆಗ ಕೊಡುತ್ತೇವೆ' ಎಂದು ಹೇಳುತ್ತಲೇ ಬಂದೆವು. ರಾಮಾಯಣಕ್ಕೂ ಸಹ ಇದೇ ಅವಸ್ಥೆಯಾಯಿತು. ನಾವು ಪ್ರಕಟಿಸಿದ್ದ ರಾಮಾಯಣದ ಮೊದಲನೆಯ ಸಂಪುಟದ ಸಾವಿರ ಪ್ರತಿಗಳೂ ಕೇವಲ ಮೂರು ತಿಂಗಳಲ್ಲಿ ಖರ್ಚಾಗಿಹೋದುವು.

1966ರಲ್ಲಿ ಪುನಃ ನಮ್ಮ ಕಷ್ಟಗಳು ಗಗನಕ್ಕೆ ಮುಟ್ಟಿದುವು. ಆ ಸಮಯದಲ್ಲಿ ದೈವಯೋಗದಿಂದ ಸನಾತನಧರ್ಮಾನುರಾಗಿಗಳಾದ, ಇನ್‌ಕಂ ಟ್ಯಾಕ್ಸ್ ಪ್ರಾಕ್ಟೀಷನರ್ ಶ್ರೀ ವಿ. ಸೂರ್ಯನಾರಾಯಣರವರು ನೆರವು ನೀಡಿದರು. ಅವರೊಡನೆ ಭೇಟಿಯಾದುದು, ಅವರು ಸಹಕಾರ ನೀಡಿ ದುದು–ಇವುಗಳೆಲ್ಲವೂ ಕೇವಲ ದೈವೇಚ್ಛೆಯಿಂದ ನಡೆದುವುಗಳು. ಇವುಗಳಿಗೆ ಕಾರ್ಯ-ಕಾರಣಗಳನ್ನು ನಿರೂಪಿಸುವುದು ಊಹಾತೀತವಾಗಿದೆ.

ವನಪರ್ವವನ್ನು ಮುಗಿಸಲಿದ್ದಾಗ ಹಿಂದಿನ ಸಂಪುಟಗಳನ್ನೆಲ್ಲಾ ಪುನ ರ್ಮುದ್ರಣಮಾಡುವ ಇಚ್ಛೆಯನ್ನು ಪ್ರಕಟಿಸುತ್ತಲೇ ಇದ್ದೆವು. ಪ್ರಕಟಣವಾಗುವ ತಾರೀಖನ್ನು ತಿಳಿಸುತ್ತಿದ್ದೆವು. ಆದರೆ ಕಾರ್ಯಗತಮಾಡಲು ಸಾಧ್ಯವಾಗುತ್ತಿರಲಿಲ್ಲ. ಸಾವಿರಾರು ಪತ್ರಗಳಿಗೆ ಉತ್ತರವನ್ನೇ ಕೊಡದೇ ಸುಮ್ಮನಿರಬೇಕಾಯಿತು. ಅನೇಕರ ನಿಂದೆಗೂ ಪಾತ್ರರಾಗಬೇಕಾಯಿತು. '15 ವರ್ಷಕ್ಕೆ ವನಪರ್ವವನ್ನು ಮುಗಿಸಿರುವ ನೀವು ಯಾವ ಕಾಲಕ್ಕೆ ಉಳಿದ 15 ಪರ್ವಗಳನ್ನು ಮುಗಿಸುವಿರಿ?' ಎಂದು ಗ್ರಾಹಕರು ಪದೇ-ಪದೇ ಪ್ರಶ್ನಿಸು ತ್ತಿದ್ದರು. ಇದಕ್ಕೆ ಸರಿಯಾದ ಉತ್ತರವು ನಮಗೂ ಸಿಕ್ಕುತ್ತಿರಲಿಲ್ಲ. ಪರಮಾತ್ಮನ ಇಚ್ಛೆಯಿಂದ ಹೊರಟಿರುವ ಮಹಾಗ್ರಂಥವು ಅವನ ಸಂಕಲ್ಪದಿಂದಲೇ ಪೂರ್ಣವಾಗಬೇಕು–ಇಷ್ಟು ಮಾತ್ರ ನಮ್ಮ ಉತ್ತರವಾಗಿತ್ತು; ನಮ್ಮ ದೃಢನಂಬಿಕೆಯಾಗಿತ್ತು.

ಕಳೆದ ಹದಿನೈದು ವರ್ಷಗಳಲ್ಲಿ ಭಾರತ ದರ್ಶನದಲ್ಲಿ ಪ್ರಕಟವಾಗಿರುವ ಮಹಾಭಾರತ ಕಥೆಯನ್ನು ಪರಾಮರ್ಶಿಸಿ ನಮ್ಮ ಸರ್ಕಾರದ ಸಾಹಿತ್ಯ ಮತ್ತು ಸಾಂಸ್ಕೃತಿಕ ಅಭಿವೃದ್ಧಿ ಇಲಾಖೆಯವರು ಇಪ್ಪತ್ತೈದುಸಾವಿರ ರೂಪಾಯಿಗಳನ್ನು ಮಂಜೂರುಮಾಡಿ ಮಹಾಭಾರತದ ಮೊದಲನೆಯ ಐದು ಸಂಪುಟಗಳ

ಸಾವಿರ ಪ್ರತಿಗಳನ್ನು ಇಲಾಖೆಗೆ ಕೊಡಬೇಕೆಂದು ಆಜ್ಞೆಮಾಡಿದುದು ಈ ಸಂಪುಟದ ಪ್ರಕಟಣೆಗೆ ಕಾರಣವಾಯಿತು.

ಇಂದು ನಮ್ಮ ಮನಸ್ಸಿನಲ್ಲಿ ಮಹಾಭಾರತವು ಮುಗಿಯುವುದೋ ಇಲ್ಲವೋ–ಎಂಬ ಆತಂಕವಿಲ್ಲ.

ಮಹಾಭಾರತವನ್ನು 30 ಸಂಪುಟಗಳಲ್ಲಿ ಆರು ಅಥವಾ ಏಳು ವರ್ಷಗಳ ಅವಧಿಯಲ್ಲಿ ಪೂರ್ಣಗೊಳಿಸುವ ಸಾಧ್ಯತೆಯಿದೆ. ಉಳಿದ 25 ಸಂಪುಟಗಳನ್ನೂ ಸರ್ಕಾರದವರು ಪಡೆದು ಪ್ರೋತ್ಸಾಹಿಸುವರೆಂಬ ಭರವಸೆಯಿದೆ. ಈ ಸಂದರ್ಭದಲ್ಲಿಯೂ ಸಹ ಶ್ರೀ ವಿ. ಸೂರ್ಯನಾರಾಯಣರವರ ನೆರವು ಚಿರಸ್ಮರಣೀಯವಾದುದು. ಅವರ ಸಂಪೂರ್ಣ ಸಹಕಾರದಿಂದಾಗಿ ಈ ಮೊದಲನೆಯ ಸಂಪುಟವು ಹೊರಬರಲು ಸಾಧ್ಯವಾಯಿತು. ಇವೆಲ್ಲವೂ ದೈವರಹಸ್ಯಕ್ಕೆ ಸೇರಿದ್ದಾಗಿದೆ. ಯಾರಿಂದ ಯಾವ ಕಾರ್ಯವು ನಡೆಯಬೇಕೆನ್ನುವುದು ಅವನಿಗೇ ಗೊತ್ತು. ನಾವು ಸ್ವಲ್ಪಕಾಲ ದಾರಿಯನ್ನು ಕಾಣದೇ ಪರಿತಪಿಸುತ್ತಿರುತ್ತೇವೆ. ಈ ಸಂದರ್ಭದಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಇಲಾಖೆಯ ಡೈರಕ್ಟರಾದ ಶ್ರೀ ಟಿ. ವಿ. ತಿಮ್ಮೇಗೌಡರು, ಡೆಪ್ಯುಟಿ ಡೈರೆಕ್ಟರಾದ ವಿದ್ವಾನ್ ಎನ್. ಎಸ್. ಅನಂತರಂಗಾಚಾರ್ಯರು, ಶ್ರೀ ಬಿ. ನಾಗೇಶರಾಯರು ಮತ್ತು ಕನ್ನಡ ಸಾಹಿತ್ಯಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ, ಶ್ರೀ ತಿ. ತಾ. ಶರ್ಮಾ, ಶ್ರೀ ಕೆ. ಸಂಪದ್ಗಿರಿರಾವ್, ಸನ್ಮಿತ್ರರಾದ ಶ್ರೀ ವಿ. ಎಸ್. ಕೌಶಿಕ್. ಹೆಚ್. ಸಿ. ಭಟ್–ಇವರ ಸಕಾಲಿಕವಾದ ನೆರವನ್ನು ಇಲ್ಲಿ ಸ್ಮರಿಸಿಕೊಳ್ಳದಿದ್ದರೆ ಅಪಚಾರವಾದೀತು. ಇವರೆಲ್ಲರ ಸಂಪೂರ್ಣ ಸಹಕಾರದಿಂದಾಗಿ ಈ ಮಹಾಕಾರ್ಯವಿಂದು ಮುಂದುವರಿಯುತ್ತಿದೆ.

ವ್ಯಾಸಪ್ರಣೀತವಾದ ಮಹಾಭಾರತವನ್ನು ಯಥಾವತ್ತಾಗಿ ಕನ್ನಡಕ್ಕೆ ಭಾಷಾಂತರಿಸಲಾಗಿದೆ. ಭಾಷಾಂತರಿಸುವುದರಲ್ಲಿ ವಿದ್ವಾನ್ ರಾಮೇಶ್ವರಾವಧಾನೀ, ವಿದ್ವಾನ್ ಹೆಚ್. ಎನ್. ರಂಗಸ್ವಾಮಿ, ಶ್ರೀಹರಿ, ಶ್ರೀ ನೆ. ಮಂ. ಶ್ರೀನಿವಾಸರಾಯ, ಶ್ರೀ ಅನಂತಾಚಾರ್–ಇವರುಗಳು ಸಂಪೂರ್ಣ ನೆರವು ನೀಡುತ್ತಿದ್ದಾರೆ.

ಇವರೆಲ್ಲರೂ ಯಾವ ವಿಧವಾದ ಪ್ರತಿಫಲವನ್ನೂ ಅಪೇಕ್ಷಿಸದೇ ನೆರವು ನೀಡುತ್ತಿದ್ದಾರೆಂದರೆ ಅಚ್ಚರಿಯಾಗಿ ಕಾಣಬಹುದು. ನಮ್ಮ ಎಲ್ಲ ಪ್ರಕಟಣೆಗಳಲ್ಲಿಯೂ ಇವರುಗಳು ಸಹೋದರರಂತೆಯೂ ಸನ್ಮಿತ್ರರಂತೆಯೂ ಒತ್ತಾಸೆ

ನೀಡುತ್ತಿದ್ದಾರೆ. ನಮ್ಮ ಗೌರವಪ್ರತಿನಿಧಿಗಳಾದ ವಿದ್ವಾನ್ ಟಿ. ನಾರಾಯಣ ಶಾಸ್ತ್ರೀ, ಶ್ರೀ ಕೆ. ಎಸ್. ಕೇಶವಮೂರ್ತಿ, ವೇ॥ ಬ್ರ॥ ಶ್ರೀ ಸೂರ್ಯ ನಾರಾಯಣ ಉಪಾಧ್ಯಾಯ–ಇವರುಗಳು ಮಹಾಭಾರತ-ರಾಮಾಯಣಗಳ ಪ್ರಚಾರಕಾರ್ಯವನ್ನು ಉತ್ಸಾಹದಿಂದ ಮಾಡಿ ಒತ್ತಾಸೆ ನೀಡುತ್ತಿದ್ದಾರೆ. ಇವರೆಲ್ಲರಿಗೂ ಭಗವಂತನು ಆಯುರಾರೋಗ್ಯೈಶ್ವರ್ಯಾದಿಗಳನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

ವ್ಯಾಸಭಾರತದಲ್ಲಿನ ಶ್ಲೋಕಗಳನ್ನು ಯಥಾವತ್ತಾಗಿ ಕನ್ನಡಕ್ಕೆ ಭಾಷಾಂತರಿಸಲಾಗುತ್ತಿದೆ. ಕೆಲವು ಕಡೆ ಅರ್ಥವಿವರಣೆ ಮತ್ತು ವಿಶೇಷ ವಿಷಯಗಳನ್ನೂ ಕೊಡಲಾಗುತ್ತಿದೆ. ತತ್ತ್ವಯುಕ್ತವಾದ ಶ್ಲೋಕಗಳು, ಸ್ತೋತ್ರ ಗಳು–ಇವುಗಳೆಲ್ಲವನ್ನೂ ಯಥಾವತ್ತಾಗಿ ಕೊಟ್ಟು ಅರ್ಥವನ್ನೂ ಕೊಡಲಾ ಗುತ್ತಿದೆ.

ನಮ್ಮ ಈ ಮೊದಲನೆಯ ಸಂಪುಟಕ್ಕೆ ಭೂಮಿಕೆಯನ್ನು ಬರೆದುಕೊಡ ಬೇಕೆಂದು ಪ್ರಾರ್ಥಿಸಿದಾಗ ಶ್ರೀ ವರದಣ್ಣನವರು ( ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು ) ಬಹಳ ಅಕ್ಕರೆಯಿಂದ ಬರೆದು ಕೊಡುವುದಾಗಿ ಹೇಳಿದರು. ಅವರೇ ಈ ಮಹಾಕಾರ್ಯಕ್ಕೆ ಸ್ಫೂರ್ತಿದಾಯ ಕರು. ಅವರ ಅಂತರಂಗದಲ್ಲಿರುವ ಗುರುಭಗವಂತನು ನಮ್ಮ ಅಂತರಂಗ ದಲ್ಲಿಯೂ ಕುಳಿತು ಈ ಮಹಾಕಾರ್ಯವನ್ನು ಮಾಡಿಸುತ್ತಿದ್ದಾನೆ. ಈ ಪ್ರಥಮ ಸಂಪುಟವು ಗುರುಭಗವಂತನ ಕೃಪೆಯಿಂದ ಜನಪ್ರಿಯವಾಗಲೆಂದೂ ಮಹಾಭಾರತದ ಲೇಖಕನಾದ ಮಹಾಗಣಪತಿಯ ಅನುಗ್ರಹದಿಂದ ಈ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತವಾಗಲೆಂದೂ ಪ್ರಾರ್ಥಿಸುತ್ತೇವೆ.

ನಮ್ಮ ಶ್ರೇಯಃ-ಪ್ರೇಯಗಳನ್ನು ಸರ್ವಕಾಲದಲ್ಲಿಯೂ ಆಶಿಸುತ್ತಾ ಅನೇಕವಿಧಗಳಲ್ಲಿ ನೆರವು ನೀಡುತ್ತಿರುವ ತೆರೆಮರೆಯ ಮಿತ್ರರಿಗೆ ನಮ್ಮ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

ವಿಷಯನಿರೂಪಣೆಯಲ್ಲಿ ಏನಾದರೂ ಅನುಮಾನ-ಪ್ರಮಾದಗಳು ಕಂಡುಬಂದರೆ ಮಾನ್ಯವಾಚಕರು ತಿಳಿಸಬೇಕಾಗಿ ಕೋರುತ್ತೇವೆ.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ಸಮಸ್ತಸನ್ಮಙ್ಗಲಾನಿ ಭವನ್ತು

**–ಪ್ರಕಾಶಕರು.**

## ಎರಡನೆಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ಕರುಣೆಯಿಂದಾಗಿ ಮಹಾಭಾರತ ಪ್ರಥಮ ಸಂಪುಟದ ಪುನರ್ಮುದ್ರಣವು ಮುಗಿದಿದೆ.

ಕಳೆದು ಆರೆಂಟು ತಿಂಗಳುಗಳ ಹಿಂದೆಯೇ ಮುಗಿದುಹೋದ ಪ್ರಥಮ ಸಂಪುಟವನ್ನು ಈಗ ಪುನರ್ಮುದ್ರಣಮಾಡಿ ಮುಗಿಸುತ್ತಿದ್ದೇವೆ. ಪುನರ್ಮುದ್ರಣವೆಂಬುದೇ ಈ ಮಹಾಗ್ರಂಥದ ಪ್ರಕಟಣೆಯಲ್ಲಿರುವ ಒಂದು ದೊಡ್ಡ ತಲೆನೋವು. ಪುನರ್ಮುದ್ರಣವನ್ನು ಮಾಡುವುದು ಕಷ್ಟಸಾಧ್ಯ. ಪುನರ್ಮುದ್ರಣ ಮಾಡದೇ ಗತ್ಯಂತರವಿಲ್ಲ. ಇದೇ ಇದರ ಸಮಸ್ಯೆ. ಇದನ್ನು ಇನ್ನೂ ಬಿಡಿಸಿ ಹೇಳುವುದಾದರೆ ಮೊದಲನೆಯ ಸಂಪುಟವನ್ನು ಅನೇಕರು ಕೊಳ್ಳುತ್ತಾರೆ. ಅವರಲ್ಲಿ ಶೇ. 20 ಭಾಗ ಮಧ್ಯದಲ್ಲಿಯೇ ಕೈಬಿಡುತ್ತಾರೆ. ಅಂದರೆ 4,000 ಪ್ರತಿಗಳನ್ನು ಅಚ್ಚುಹಾಕಿಸಿದರೆ 800 ಪ್ರತಿಗಳು ವ್ಯರ್ಥವಾದಂತೆಯೇ ಸರಿ. ಹೊಸ ಗ್ರಾಹಕರು ಶೇ. 30ರಷ್ಟು ಹೆಚ್ಚುತ್ತಾರೆ. ಆದರೆ ಅವರಿಗೆ ಪ್ರಥಮಸಂಪುಟವು ಇಲ್ಲವಾಗುತ್ತದೆ. ಪ್ರಥಮ ಸಂಪುಟವು ದೊರಕದೆಂದು ಹೇಳಿಬಿಟ್ಟರೆ ಉತ್ಸಾಹಿಗಳು ಗ್ರಾಹಕರಾಗಲು ಹಿಂಜರಿಯುತ್ತಾರೆ. ಆದುದರಿಂದ ಪುನರ್ಮುದ್ರಣದ ಆಶ್ವಾಸನೆಯನ್ನು ಕೊಡಬೇಕಾಗುತ್ತದೆ ; ಪುನರ್ಮುದ್ರಣವನ್ನು ಮಾಡಲೂ ಬೇಕಾಗುತ್ತದೆ. ಆದರೆ ಈ ಪುನರ್ಮುದ್ರಣದಿಂದ ನಾವು ಇದಕ್ಕೆ ಹಾಕುವ ಮೂಲನಿಧಿಗೆ ಅನುಗುಣವಾಗಿ ಪ್ರತಿಫಲವು ಒಡನೆಯೇ ಸಿಕ್ಕುವುದಿಲ್ಲ. ಎರಡನೆಯದಾಗಿ : ಪ್ರಕಟಣೆಯು ಕುಂಠಿತವಾಗುತ್ತದೆ. 7ನೆಯ ಸಂಪುಟವು ಈ ವೇಳೆಗೆ ಹೊರಬರಬೇಕಾಗಿದ್ದಿತು. ಪ್ರಥಮ ಸಂಪುಟದ ಪುನರ್ಮುದ್ರಣದಿಂದಾಗಿ ಅದು ಸಾವಕಾಶವಾಯಿತು. ಪ್ರಥಮಸಂಪುಟವು ಮುಗಿದಿದೆ. ಮುಂದೆ ಮುಗಿದ ಸಂಪುಟಗಳ ಪುನರ್ಮುದ್ರಣವು ಹೀಗೆಯೇ ಮುಂದುವರಿಯುತ್ತಾ ಹೋಗುತ್ತದೆ.

ಮಹಾಭಾರತವನ್ನು ಕರ್ನಾಟಕದ ಆದ್ಯಂತವಾಗಿ ಎಲ್ಲರ ಮನೆಗಳಲ್ಲಿಯೂ ದೀವಿಗೆ ಯಂತೆ ಮಾಡಬೇಕೆಂಬ ಆಶಯವು ನಮಗಿರುವುದರಿಂದ ಈ ಪುನರ್ಮುದ್ರಣದ ಸಮಸ್ಯೆಯನ್ನು ಧೈರ್ಯದಿಂದ ಎದುರಿಸಬೇಕಾಗಿದೆ. ದಯಾಮಯನಾದ ಪರಮಾತ್ಮನು ಈ ಚೈತನ್ಯವನ್ನೂ ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ. ಎರಡನೆಯ ಮುದ್ರಣದಲ್ಲಿ ತಾತ್ಪರ್ಯರೂಪವಾಗಿದ್ದ ಮೊದಲನೆಯ ಅಧ್ಯಾಯವನ್ನು ವಿವರಿಸಿ ಕೊಡಲಾಗಿದೆ. ಕೆಲವು ಕಡೆಗಳಲ್ಲಿ ಇಂದಿನ ಪ್ರಪಂಚದೊಡನೆ ಕೊಟ್ಟಿದ್ದ ಹೋಲಿಕೆಗಳನ್ನು ಕೈಬಿಡಲಾಗಿದೆ. ಶ್ಲೋಕಾನುಕ್ರಮಣಿಕೆಯನ್ನು ಕೈಬಿಡಲಾಗಿದೆ. ಸಂಪಾದಕಮಂಡಲಿಯವರು ಸಂಪೂರ್ಣಶ್ರಮವಹಿಸಿ ಸಹಕರಿಸಿರುತ್ತಾರೆ. ನಮ್ಮ ಗೆಳೆಯರ ಪ್ರಚಾರವೇ ಪುನರ್ಮುದ್ರಣಕ್ಕೆ ಮುಖ್ಯಕಾರಣವಾಗಿದೆ. ಮಹಾಭಾರತದ ಹಿತೈಷಿಗಳೆಲ್ಲರಿಗೂ ದಯಾಮಯನಾದ ಪರಮಾತ್ಮನು ಶಾಂತಿಯನ್ನೂ, ಪುಷ್ಟಿಯನ್ನೂ, ತುಷ್ಟಿಯನ್ನೂ ಕೊಟ್ಟು ಕಾಪಾಡಲೆಂದು ಅನನ್ಯಶರಣರಾಗಿ ಪ್ರಾರ್ಥಿಸುತ್ತೇವೆ.

**—ಪ್ರಕಾಶಕರು.**

## ಮೂರನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಮೊದಲನೆಯ ಸಂಪುಟದ ಮೂರನೆಯ ಆವೃತ್ತಿಯನ್ನು ಮುಗಿಸಿದ್ದೇವೆ. ಮೊದಲನೆಯ ಸಂಪುಟವು ಮೂರನೆಯ ಮುದ್ರಣವನ್ನು ಕಂಡಿರುವುದು ಮಹಾಭಾರತದ ಪ್ರಚಾರವು ಎಷ್ಟಾಗಿದೆ ಎಂಬುದಕ್ಕೆ ಒಂದು ಸ್ಪಷ್ಟ ನಿದರ್ಶನವಾಗಿದೆ. ಕಾಲಾನುಕ್ರಮದಲ್ಲಿ ಕನ್ನಡದ ಜನತೆಗೆ ಮಹಾಭಾರತದ ಮಹತ್ತ್ವವು ತಿಳಿಯುತ್ತಿದ್ದು ಗ್ರಾಹಕರಾಗುತ್ತಿರುವುದು ಸಂತಸದ ವಿಷಯವಾಗಿದೆ. ನಮ್ಮ ಗ್ರಾಹಕರು ಹೆಚ್ಚುತ್ತಿರುವುದಕ್ಕೆ ಮುಖ್ಯಕಾರಣರು ನಮ್ಮ ಪ್ರಿಯವಾಚಕರೇ ಆಗಿದ್ದಾರೆ. ತಾವು ಓದಿ ಮಹಾಭಾರತದ ಸವಿಯನ್ನು ಸವಿದು ತಮ್ಮ ಬಂಧು-ಮಿತ್ರರಿಗೂ ಹೇಳಿ ಅವರನ್ನೂ ಮಹಾಭಾರತದ ವಾಚಕರ ಬಳಗದಲ್ಲಿ ಸೇರಿಸುತ್ತಿರುವುದರಿಂದ ನಮ್ಮ ಗ್ರಾಹಕರ ಸಂಖ್ಯೆಯೂ ದಿನ-ದಿನಕ್ಕೂ ಹೆಚ್ಚುತ್ತಿದೆ. ಇದರ ಜೊತೆಗೆ ಕೆನರಾ, ಸಿಂಡಿಕೇಟ್, ಕರ್ಣಾಟಕ, ಕಾರ್ಪೋರೇಷನ್ ಮತ್ತು ದಿ ನ್ಯಾಷನಲ್ ಕೋ-ಆಪರೇಟಿವ್–ಈ ಐದು ಬ್ಯಾಂಕುಗಳೂ ಪೂರ್ಣಮಾಲೆಗೆ ಸಾಲಸೌಲಭ್ಯವನ್ನು ಒದಗಿಸುತ್ತಿರುವುದೂ ಗ್ರಾಹಕರ ಸಂಖ್ಯೆಯು ಹೆಚ್ಚಲು ಮತ್ತೊಂದು ಮುಖ್ಯ ಕಾರಣವಾಗಿದೆ. ಆದರೆ ಮೂರು ಕೋಟಿ ಕನ್ನಡಿಗರಲ್ಲಿ ಕೇವಲ ಆರೆಂಟು ಸಾವಿರ ಜನರು ಮಾತ್ರ ಮಹಾಭಾರತವನ್ನು ಕೊಳ್ಳುತ್ತಿದ್ದಾರೆಂಬುದನ್ನು ನೆನಸಿಕೊಂಡಾಗ–'ಇದರ ಪ್ರಚಾರವು ಏನೇನೂ ಆಗಿಲ್ಲ'–ಎನಿಸುತ್ತದೆ. ಎಲ್ಲ ಕನ್ನಡಿಗ ಸಹೋದರರ ಮನೆಯಲ್ಲೂ ಈ ಪವಿತ್ರಗ್ರಂಥವಿದ್ದು ಎಲ್ಲರ ಜೀವನಕ್ಕೂ ಇದೊಂದು ದಾರಿದೀಪವಾಗಿ ಪ್ರತಿಯೊಬ್ಬರೂ ನಿಜವಾದ ಭಾರತರಾಗಬೇಕೆಂಬುದು ನಮ್ಮ ಸವಿಗನಸಾಗಿದೆ. ಇದನ್ನು ಪೂರೈಸಿಕೊಡುವುದು ದಯಾಮಯನಾದ ಪರಮಾತ್ಮನಿಗೆ ಸೇರಿದ್ದು. ಅವನು ಅನುಗ್ರಹಿಸಿದರೆ ಇದೇನೂ ಅಗಾಧವಾದ ವಿಷಯವಲ್ಲ. ಇಷ್ಟು ಮಾಡಿದವನು ಅಷ್ಟು ಮಾಡಲಾರನೇ?

ನಮ್ಮ ಸಂಪಾದಕಮಂಡಲಿಯವರು ಈ ಮೂರನೆಯ ಮುದ್ರಣದ ಪರಿಷ್ಕರಿಸುವಿಕೆಯಲ್ಲಿಯೂ ಸಂಪೂರ್ಣಸಹಕಾರವನ್ನು ನೀಡಿ ಉಪಕರಿಸಿದ್ದಾರೆ. ಇವರೆಲ್ಲರಿಗೂ ಮತ್ತು ಮಹಾಭಾರತದ ಬಂಧುವರ್ಗಕ್ಕೂ ದಯಾಮಯನಾದ ಪರಮಕಾರುಣಿಕನಾದ ಪರಮಾತ್ಮನು ಸಕಲವಿಧವಾದ ಇಷ್ಟಾರ್ಥಗಳನ್ನೂ ದಯಪಾಲಿಸಲಿ.

**ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು : ಸಮಸ್ತಸನ್ಮಙ್ಗಲಾನಿ ಭವನ್ತು**

**–ಪ್ರಕಾಶಕರು.**

## ನಾಲ್ಕನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಮೊದಲನೆಯ ಸಂಪುಟದ ಮೂರನೆಯ ಮುದ್ರಣದ ಪ್ರತಿಗಳೂ ಮುಗಿದು ನಾಲ್ಕನೆಯ ಮುದ್ರಣವನ್ನು ಮಾಡಿಸಬೇಕಾಯಿತು. ಆ ಸಮಯದಲ್ಲಿ ನಮ್ಮ ಮುದ್ರಣಾಲಯದಲ್ಲಿ ವ್ಯವಧಾನವಿರಲಿಲ್ಲ. ಪೂರ್ಣಮಾಲಿಕೆಗೆ ಗ್ರಾಹಕರಾದವರು ಮೊದಲನೆಯ ಸಂಪುಟವಿಲ್ಲದ ಕಾರಣ ಬೇಸರಪಡುತ್ತಿದ್ದರು. ಈ ಕಾರಣದಿಂದ ಅನಿವಾರ್ಯವಾಗಿ ಬೇರೆಯ ಕಡೆ ಮುದ್ರಣಮಾಡಿಸಬೇಕಾಯಿತು. ಇದು ಛಾಯಾಮುದ್ರಣ. ಇದರ ವೆಚ್ಚವು ನಮ್ಮಲ್ಲಾಗುವ ಮುದ್ರಣಕ್ಕಿಂತಲೂ ಎರಡು-ಮೂರು ಪಟ್ಟು ಹೆಚ್ಚು. ಆದರೂ ಪರಮಾತ್ಮನಲ್ಲಿ ಪ್ರಾರ್ಥಿಸಿ

ಛಾಯಾಮುದ್ರಣಕ್ಕೆ ಕೊಡಲಾಯಿತು. ಮುದ್ರಣಕಾರ್ಯವೂ ಮುಗಿಯಿತು. ಆ ವೇಳೆಗೆ ಸರಿಯಾಗಿ ನಮ್ಮ 22ನೆಯ ಸಂಪುಟದ ಪ್ರಕಾಶನ ಸಮಾರಂಭವೂ ನಡೆಯಿತು. ಪ್ರಕಾಶನ ಸಮಾರಂಭಕ್ಕೆ ತಿರುಮಲೆ-ತಿರುಪತಿ ದೇವಸ್ಥಾನದ ಮುಖ್ಯಾಧಿಕಾರಿಗಳಾದ ಸನ್ಮಾನ್ಯ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್‌ರವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಆ ಶುಭಸಮಾರಂಭದಲ್ಲಿ ಅವರು ಮುಂದಿನ ಮತ್ತು ಪುನರ್ಮುದ್ರಣವಾಗುವ ಎಲ್ಲ ಸಂಪುಟಗಳಿಗೂ ಸಂಪುಟ ಒಂದಕ್ಕೆ ಐದು ಸಾವಿರ ರೂ.ಗಳ ಸಹಾಯಧನವನ್ನು ಕೊಡುವುದಾಗಿ ಆಶ್ವಾಸನೆಯನ್ನಿತ್ತರು. ಸಹಾಯಧನವು ಈ ಸಂಪುಟಕ್ಕೂ ದೊರೆಯುವಂತಾಯಿತು. ಪರಮಾತ್ಮನಲ್ಲಿ ಮಾಡಿಕೊಂಡಿದ್ದ ಪ್ರಾರ್ಥನೆಯೂ ಸಾರ್ಥಕವಾಯಿತು. ಕರುಣಾಮಯನಾದ ಅವನ ದಯೆಯಿಂದಲೇ ಈ ಮಹಾಕಾರ್ಯವು ನಡೆಯುತ್ತಿರುವುದೆಂಬುದಕ್ಕೆ ಇದಕ್ಕಿಂತಲೂ ಉತ್ತಮನಿದರ್ಶನ ಅನಾವಶ್ಯಕ, ಅಲ್ಲವೇ? ಅವನ ಕಾರ್ಯವನ್ನವನು ಹೇಗೋ ನಡೆಸಿಕೊಳ್ಳುತ್ತಾನೆ. ನಿಃಸ್ಪೃಹತೆಯಿಂದ ಕೆಲಸಮಾಡು ವುದು ನಮ್ಮ ಕರ್ತವ್ಯವಾಗಿರುತ್ತದೆ. ಪರಮಾತ್ಮನ ಪ್ರೇರಣೆಯಿಂದ ಈ ಮಹಾಕಾರ್ಯಕ್ಕೆ ಒತ್ತಾಸೆ ನೀಡಲು ನಿರ್ಧರಿಸಿರುವ ತಿರುಮಲೆ-ತಿರುಪತಿ ದೇವಸ್ಥಾನದ ಆಡಳಿತಾಧಿಕಾರಿಗಳಾದ ಸನ್ಮಾನ್ಯ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್‌ರವರಿಗೆ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

**—ಪ್ರಕಾಶಕರು.**

## ಐದನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಮೊದಲನೆಯ ಸಂಪುಟದ ಐದನೆಯ ಆವರ್ತಿಯನ್ನು ಮುಗಿಸಲಾಗಿದೆ. ಆದರೆ ಇದಕ್ಕಿಂತಲೂ ಬಹಳ ಹಿಂದೆಯೇ ಮುಗಿದಿರುವ ಸಂಪುಟಗಳನ್ನು ಪುನರ್ಮುದ್ರಣ ಮಾಡಿಲ್ಲ. ನೂತನಗ್ರಾಹಕರಿಗೆ ಓದನ್ನು ಪ್ರಾರಂಭಿಸಲು 1-2-3 ಸಂಪುಟಗಳು ಅವಶ್ಯಕವಾದುದರಿಂದ ಹೀಗೆ ಮಾಡಲಾಯಿತು. ನೂತನಗ್ರಾಹಕರಿಗೆ 2-3ನೇ ಸಂಪುಟಗಳನ್ನು ಸ್ವಲ್ಪ ದಿವಸಗಳಲ್ಲಿಯೇ ಸಿದ್ಧಗೊಳಿಸಿ ಕಳುಹಿಸುವ ವ್ಯವಸ್ಥೆ ಮಾಡಲಾಗುವುದು. ಪ್ರಸಕ್ತ ನಮ್ಮಲ್ಲಿ ಈ ಸಂಪುಟವೂ ಸೇರಿದಂತೆ 32 ಸಂಪುಟಗಳಲ್ಲಿ 18 ಸಂಪುಟಗಳು ಮಾತ್ರವೇ ಇವೆ. ಈ ವರ್ಷದ ಕಡೆಯ ವೇಳೆಗೆ ಹೆಚ್ಚು ಸಂಪುಟಗಳು ಸಿಕ್ಕಬಹುದು. ಈ ಸಂಪುಟವನ್ನು ಸಂಪಾದಕಮಂಡಲಿಯ ವಿದ್ವಾಂಸರು ಪರಿಶೋಧಿಸಿ ಕೊಟ್ಟಿರುತ್ತಾರೆ. ಅವರಿಗೆ ನಮ್ಮ ಹೃತ್ಪೂರ್ವಕವಂದನೆಗಳು. ಪರಮಾತ್ಮನ ದಯೆಯಿಂದ ಗ್ರಾಹಕರ ಸಂಖ್ಯೆಯು ಅಧಿಕವಾಗಿ ಬೆಳೆಯುವಂತಾಗಲಿ. ಪರಮಪವಿತ್ರವಾದ ಈ ಮಹಾಗ್ರಂಥವನ್ನು ಓದುವಂತಾಗಲಿ.

**—ಪ್ರಕಾಶಕರು.**

ಶ್ರೀಃ

॥ ಶ್ರೀರಂಗಸದ್ಗುರವೇ ನಮಃ ॥

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

## ವಿಷಯಪ್ರವೇಶ

ಮಹಾಭಾರತಕಥೆಯ ಪ್ರಸಾರವೆಂಬ ಮಹಾಧ್ಯೇಯದ ಸಾಧನೆಗಾಗಿ ಸದಾ ಕಾರ್ಯತತ್ಪರರಾಗಿರುವ ಭಾರತ ದರ್ಶನ ಸಂಸ್ಥೆಯ ವ್ಯವಸ್ಥಾಪಕರಾದ ಸನ್ಮಾನ್ಯಮಿತ್ರ ಶ್ರೀ ಸುಬ್ರಹ್ಮಣ್ಯ ಕೌಶಿಕರು–ತಾವು ಪ್ರಕಾಶಪಡಿಸುತ್ತಿರುವ ಮಹಾಭಾರತದ ಕನ್ನಡ ಅನುವಾದ ಗ್ರಂಥಮಾಲೆಯ ಭೂಮಿಕೆಯನ್ನು ಬರೆದುಕೊಡಬೇಕೆಂದು ನಮ್ಮನ್ನು ಪ್ರಾರ್ಥಿಸಿದ್ದಾರೆ. ಇವರು ಕೈಗೊಂಡಿರುವ ಕೆಲಸ ಪರಮಾರ್ಥಬುದ್ಧಿಯಿಂದ ಪ್ರೇರಿತವಾಗಿದೆ. ಈ ಕಾಲದಲ್ಲಿ ಭಾರತದ ಕಥೆ ಭಾರತದಲ್ಲೇ ಅನೇಕರಿಗೆ ಅಪರಿಚಿತವಾಗಿದೆ. ಕೆಲವರಿಗೆ ಕಥೆಯು ಅಲ್ಪ-ಸ್ವಲ್ಪ ಪರಿಚಿತವಾಗಿದ್ದರೂ ಅಪಾರ್ಥಕ್ಕೂ–ಅಪಹಾಸ್ಯಕ್ಕೂ ವಿಷಯ ವಾಗಿದೆ. ಇಂತಹ ಸನ್ನಿವೇಶದಲ್ಲಿ ಭಾರತದ ಮೂಲಕಥೆಯ ಸಾರವು ಕನ್ನಡ ಬರುವವರಿಗಾದರೂ ಅರ್ಥವಾಗಬೇಕು ; ಅವರ ಬುದ್ಧಿಪ್ರಚೋದನೆಗೂ, ಹೃದಯದ ರಸಾನುಭವಕ್ಕೂ, ಆತ್ಮವಿಶ್ವಾಸಕ್ಕೂ ಕಾರಣವಾಗಬೇಕು–ಎಂಬ ಶುಭವಾದ ಆಶಯದಿಂದ ಇವರು ಈ ಮಹಾಕಾರ್ಯವನ್ನು ಪ್ರಾರಂಭಿಸಿ ದ್ದಾರೆ. ಭಾರತೀಯಸಂಸ್ಕೃತಿಯಲ್ಲಿ ಆಸ್ಥೆಯುಳ್ಳ ಎಲ್ಲರೂ ಇವರ ಉತ್ಸಾಹ ದೀಪಕ್ಕೆ ಸ್ನೇಹಧಾರೆಯನ್ನೆರೆಯಬೇಕು.

ಮಹಾಭಾರತದ ಕನ್ನಡ ಕಥಾನುವಾದವನ್ನು ಇದಕ್ಕೆ ಹಿಂದೆಯೂ ಅನೇಕಮಹನೀಯರು ಮಾಡಿದ್ದಾರೆ. ಆದರೆ ಗ್ರಂಥವು ಗ್ರಾಹಕರಿಗೂ ತೊಂದರೆಯಾಗದೇ, ಪ್ರಕಾಶಕರಿಗೂ ಕೈಯನ್ನು ಕಚ್ಚದೇ ಸುಲಭಮೌಲ್ಯದಲ್ಲಿ ಎಲ್ಲರಿಗೂ ದೊರೆಯುವಂತಾಗಲಿ–ಎಂಬ ವಿಶಿಷ್ಟವಾದ ಸಂಕಲ್ಪದಿಂದ ಇವರು ಈ ಕೆಲಸಕ್ಕೆ ಕೈಹಾಕಿದ್ದಾರೆ. ಅದರ ಫಲಸ್ವರೂಪವಾಗಿರುವ ಈ ಗ್ರಂಥಪ್ರಕಾಶನದ ಹಿನ್ನೆಲೆಯಲ್ಲಿ ನಾವೂ ಸ್ವಲ್ಪಹೊತ್ತು ಮಹಾಭಾರತ ಮಹಾಂಬುಧಿಯಲ್ಲಿ ಯಥಾಶಕ್ತಿ ಅವಗಾಹನಮಾಡುತ್ತೇವೆ.

**ಸಾಗರಸ್ನಾನತಃ ಸರ್ವನದೀಮಜ್ಜನಪುಣ್ಯಭಾಕ್ ।**

ಸಮುದ್ರದಲ್ಲಿ ಸ್ನಾನಮಾಡಿದರೆ ಎಲ್ಲ ನದಿಗಳಲ್ಲೂ ಸ್ನಾನಮಾಡಿದ ಪುಣ್ಯವು ಬರುತ್ತದೆ.

## ಮಹಾಭಾರತದ ಬಹುಮುಖಪ್ರಾಮುಖ್ಯ :

ಮಹಾಭಾರತವೂ ಶ್ರೀಮದ್ರಾಮಾಯಣದಂತೆ ಭಾರತೀಯರ ಧರ್ಮ-ಸಂಸ್ಕೃತಿ-ನಾಗರಿಕತೆಗಳ ಸಮಗ್ರದರ್ಶನವನ್ನು ಮಾಡಿಸಿಕೊಡುವ ಜ್ಞಾನ-ವಿಜ್ಞಾನಮಯವಾದ ಪ್ರದೀಪ.

**ಯೇನ ತ್ವಯಾ ಭಾರತತೈಲಪೂರ್ಣಃ ಪ್ರಜ್ವಾಲಿತೋ**
**ಜ್ಞಾನಮಯಃ ಪ್ರದೀಪಃ ॥**
**ಇದಂ ತು ತ್ರಿಷು ಲೋಕೇಷು ಮಹಜ್ಜ್ಞಾನಂ ಪ್ರತಿಷ್ಠಿತಮ್ ।**
**ಜ್ಞಾನಂ ವಿಜ್ಞಾನಸಹಿತಂ ಇದಂ ವಕ್ಷ್ಯಾಮ್ಯಶೇಷತಃ ॥**

ಧರ್ಮಮಯವಾದ ಸಂಸ್ಕೃತಿಯ ಒಳ-ಹೊರ ರೂಪುಗಳೆರಡನ್ನೂ ತೋರಿಸಿಕೊಡುವ ಪಾರದರ್ಶಕವಾದ ಮಣಿದರ್ಪಣ ; ಜನಾಂಗದ ಎಲ್ಲ ಆಶೆ, ಆಕಾಂಕ್ಷೆ, ಸಾಧನೆ, ಸಿದ್ಧಿಗಳ ಅನುಭವಗಳನ್ನು ಏಕತ್ರ ಸೇರಿಸಿಕೊಂಡಿರುವ ಭವ್ಯಭಾಂಡಾಗಾರ ; ಎಲ್ಲ ಪುರುಷಾರ್ಥಗಳ ಕಲ್ಪತರು ; ವೇದ, ವೇದಾಂಗ, ಇತಿಹಾಸ, ಲೋಕವ್ಯವಹಾರ, ಆತ್ಮವ್ಯವಹಾರ, ಎಲ್ಲ ಶಾಸ್ತ್ರಗಳ ಸಾರಸರ್ವಸ್ವವಾಗಿ ಅವುಗಳ ತತ್ತ್ವವನ್ನು ಸಂಕ್ಷೇಪವಾಗಿಯೂ ಸವಿಸ್ತರವಾಗಿಯೂ ನಿರೂಪಿಸುವ ವಿಶ್ವಕೋಶ.

**ವೇದಾ ಯೋಗಃ ಸವಿಜ್ಞಾನೋ ಧರ್ಮೋಽರ್ಥಃ ಕಾಮ ಏವ ಚ ।**
**ಧರ್ಮಕಾಮಾರ್ಥಯುಕ್ತಾನಿ ಶಾಸ್ತ್ರಾಣಿ ವಿವಿಧಾನಿ ಚ ।**
**ಲೋಕಯಾತ್ರಾವಿಧಾನಂ ಚ ಸರ್ವಂ ತತ್ ದೃಷ್ಟವಾನೃಷಿಃ ॥**
**ವಿಸ್ತೀರ್ಯೈತನ್ಮಹಜ್ಜ್ಞಾನಮೃಷಿಃ ಸಂಕ್ಷಿಪ್ಯ ಚಾಬ್ರವೀತ್ ।**
**ಇಷ್ಟಂ ಹಿ ವಿದುಷಾಂ ಲೋಕೇ ಸಮಾಸವ್ಯಾಸಧಾರಣಮ್ ॥**

ಪರಮಪುಣ್ಯವಾದ ಇತಿಹಾಸ ; ನಮಗೆ ದೊರೆತಿರುವ ಇತಿಹಾಸಗಳಲ್ಲಿ ಪ್ರಾಚೀನತಮವಾದ ಇತಿಹಾಸ ಮತ್ತು ಎಣೆಯಿಲ್ಲದ ಕಾವ್ಯರತ್ನ ; ಅನಂತಕಾವ್ಯಗಳಿಗೆ ಆಕರವಾದ ಮೂಲಕಾವ್ಯ.

**ಇತಿಹಾಸಮಿಮಂ ಚಕ್ರೇ ಪುಣ್ಯಂ ಸತ್ಯವತೀಸುತಃ ।**
**ಕೃತಂ ಮಯೇದಂ ಭಗವನ್ ಕಾವ್ಯಂ ಪರಮಪೂಜಿತಮ್ ॥**

ಉಳಿದ ಮೂರು ಆಶ್ರಮಗಳೂ ಗೃಹಸ್ಥಾಶ್ರಮವನ್ನು ಮೀರಿಸಲಾರವು. ಅಂತೆಯೇ ಉಳಿದ ಯಾವ ಕಾವ್ಯಗಳೂ ಇದನ್ನು ಮೀರಲಾರವು. ದಿವ್ಯವೂ ಮಾನುಷವೂ ಆದ ಸಮರ್ಥಶಬ್ದಗಳೂ ಮತ್ತು ಶುಭವಾದ ಶಬ್ದಗಳೂ

ಅಲಂಕರಿಸಿರುವ ಕಾವ್ಯವಿದು. ಪ್ರಾಣಿಗಳೆಲ್ಲವೂ ಮಳೆಗರೆಯುವ ಮೋಡ ವನ್ನು ಆಶ್ರಯಿಸುವಂತೆ–ಕವಿಪುಂಗವರೆಲ್ಲರೂ ಇದನ್ನು ಆಶ್ರಯಿಸಿದ್ದಾರೆ. ಅಳಿವಿಲ್ಲದ ಮಹಾವೃಕ್ಷವು ಈ ಮಹಾಭಾರತ–

ಅಸ್ಯ ಕಾವ್ಯಸ್ಯ ಕವಯೋ ನ ಸಮರ್ಥಾ ವಿಶೇಷಣೇ ।
ವಿಶೇಷೇಣ ಗೃಹಸ್ಥಸ್ಯ ಶೇಷಾಸ್ತ್ರಯ ಇವಾಶ್ರಮಾಃ ॥
ಅಲಂಕೃತಂ ಶುಭೈಃ ಶಬ್ದೈಃ ಸಮರ್ಥೈರ್ದಿವ್ಯಮಾನುಷೈಃ ॥
ಸರ್ವೇಷಾಂ ಕವಿಮುಖ್ಯಾನಾಮುಪಜೀವ್ಯೋ ಭವಿಷ್ಯತಿ ।
ಪರ್ಜನ್ಯ ಇವ ಭೂತಾನಾಮಕ್ಷಯೋ ಭಾರತದ್ರುಮಃ ॥

ಇದರ ಮಹಿಮೆ ಅಪಾರವಾದುದು. ಅಜ್ಞಾನದ ಕತ್ತಲೆಯಿಂದ ಕುರುಡಾಗಿ ಹಾದಿ ತಿಳಿಯದೇ ಮಿಡುಕಾಡುತ್ತಿರುವ ಲೋಕದ ಕಣ್ಣುಗಳನ್ನು ಜ್ಞಾನಾಂಜನದ ಕಡ್ಡಿಗಳಿಂದ ತೆರೆಯಿಸಿದ ಅಗ್ಗಳಿಕೆ ಇದರದು. ಧರ್ಮಾರ್ಥ-ಕಾಮ-ಮೋಕ್ಷಗಳನ್ನು ಸಂಕ್ಷೇಪವಾಗಿ, ವಿಸ್ತಾರವಾಗಿ, ಬಗೆ-ಬಗೆಯಾಗಿ ಹೇಳಿ ಜನರ ತಮಸ್ಸನ್ನು ಹೋಗಲಾಡಿಸುವ ಸೂರ್ಯನಂತೆ–ಶ್ರುತಿಯ ಬೆಳ್ದಿಂಗಳನ್ನು ಪ್ರಸರಿಸುವ ಪೂರ್ಣಚಂದ್ರನಂತೆ–ಮನುಷ್ಯರ ಬುದ್ಧಿಯೆಂಬ ಕನ್ನೈದಿಲೆಗಳನ್ನು ಅರಳಿಸುವ ಪೂರ್ಣಚಂದ್ರನಂತೆ–ಬೆಳಗುತ್ತಿದೆ ಇದು. ಮೋಹದ ಆವರಣವನ್ನು ಕಳೆದುಹಾಕಿ ಲೋಕವೆಂಬ ಗರ್ಭಗೃಹವನ್ನು ಪೂರ್ತಿ ಬೆಳಗಿದ ಪ್ರದೀಪ–

ಅಜ್ಞಾನತಿಮಿರಾನ್ಧಸ್ಯ ಲೋಕಸ್ಯ ತು ವಿಚೇಷ್ಟತಃ ।
ಜ್ಞಾನಾಂಜನಶಲಾಕಾಭಿರ್ನೇತ್ರೋನ್ಮೀಲನಕಾರಕಮ್ ॥
ಧರ್ಮಾರ್ಥಕಾಮಮೋಕ್ಷಾರ್ಥೈಃ ಸಮಾಸವ್ಯಾಸಕೀರ್ತನೈಃ ।
ತಥಾ ಭಾರತಸೂರ್ಯೇಣ ನೃಣಾಂ ವಿನಿಹಿತಂ ತಮಃ ॥
ಪುರಾಣಪೂರ್ಣಚಂದ್ರೇಣ ಶ್ರುತಿಜ್ಯೋತ್ಸ್ನಾ ಪ್ರಕಾಶಿತಾಃ ।
ನೃಬುದ್ಧಿಕೈರವಾಣಾಂ ಚ ಕೃತಮೇತತ್ ಪ್ರಕಾಶನಮ್ ।
ಲೋಕಗರ್ಭಗೃಹಂ ಕೃತ್ಸ್ನಂ ಯಥಾವತ್ ಸಂಪ್ರಕಾಶಿತಮ್ ॥

ವೇದಕ್ಕೆ ಸಮಾನವೆಂದು ಪರಿಗಣಿತವಾದ ಗ್ರಂಥ ; "ಭಾರತಂ ಪಂಚಮೋ ವೇದಃ" "ಕಾರ್ಷ್ಣಂ ವೇದಮಿಮಂ ಪುಣ್ಯಂ।" ವೇದಕ್ಕೆ ಯಾವುದು ಪ್ರತಿಪಾದ್ಯವಿಷಯವೋ ಇದಕ್ಕೂ ಅದೇ ಪ್ರತಿಪಾದ್ಯವಿಷಯ. ಎರಡರ ತಾತ್ಪರ್ಯವೂ ಪರಮಾತ್ಮನೇ.

**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
**ಆದಾವನ್ತೇ ಚ ಮಧ್ಯೇ ಚ ಹರಿಃ ಸರ್ವತ್ರ ಗೀಯತೇ ॥**

ವೇದಕ್ಕಿಂತಲೂ ಸುಲಭವಾದ ಶೈಲಿಯಿಂದ ತತ್ತ್ವವನ್ನು ನಿರೂಪಿಸುವುದರಿಂದ ವೇದಕ್ಕಿಂತಲೂ ಹಿರಿದೆಂದು ಪ್ರಶಂಸಿತವಾದ ಗ್ರಂಥವಿದು.

**ಏಕತಶ್ಚತುರೋ ವೇದಾನ್ ಭಾರತಂ ಚೈತದೇಕತಃ ।**
**ಪುರಾ ಕಿಲ ಸುರೈಃ ಸರ್ವೈಃ ಸಮೇತ್ಯ ತುಲಯಾ ಧೃತಮ್ ।**
**ಚತುರ್ಭ್ಯಃ ಸರಹಸ್ಯೇಭ್ಯೋ ವೇದೇಭ್ಯೋ ಹ್ಯಧಿಕಂ ಯದಾ ॥**

ವೇದಗಳೊಡನೆ ತೂಕಮಾಡಿ ನೋಡಿದಾಗ ಮಹತ್ತಿನಲ್ಲೂ ಮತ್ತು ಭಾರದಲ್ಲೂ ಎರಡರಲ್ಲೂ ಶ್ರೇಷ್ಠವೆಂದು ಕಂಡುಬಂದುದರಿಂದ 'ಮಹಾಭಾರತ' ಎನಿಸಿಕೊಂಡಿತಂತೆ–

**ಮಹತ್ತ್ವೇ ಚ ಗುರುತ್ವೇ ಚ ಧ್ರಿಯಮಾಣಂ ಯತೋಽಧಿಕಮ್ ।**
**ಮಹತ್ತ್ವಾತ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ॥**

ಮಾನವನಿಗೆ ಸನ್ಮಾರ್ಗವನ್ನು ಬೋಧಿಸಲು ಪ್ರಭುಸಮ್ಮಿತ (ಚಕ್ರವರ್ತಿಯ ಕಟ್ಟಾಜ್ಞೆಯನ್ನು ಹೋಲುವ ನೀತಿ), ಮಿತ್ರಸಮ್ಮಿತ (ಸ್ನೇಹಿತನ ಹಿತವಾದ ನೀತಿ), ಕಾಂತಾಸಮ್ಮಿತ (ಇನಿಯಳ ಮಧುರ ನೀತಿ)–ಎಂಬ ಮೂರು ಮಾರ್ಗಗಳುಂಟು. ಶ್ರುತಿ-ಸ್ಮೃತಿಗಳು, ಪುರಾಣೇತಿಹಾಸಗಳು ಮತ್ತು ಕಾವ್ಯಗಳು–ಕ್ರಮವಾಗಿ ಇವಕ್ಕೆ ಉದಾಹರಣೆಗಳು. ಆದರೆ ಮಹಾಭಾರತವು ಸ್ಮೃತಿ, ಪುರಾಣ, ಇತಿಹಾಸ, ಕಾವ್ಯ–ಎಲ್ಲವೂ ಆಗಿರುವುದರಿಂದ ಮೇಲೆ ಹೇಳಿದ ಮೂರು ದಾರಿಗಳಿಂದಲೂ ಜನರಿಗೆ ಶ್ರೇಯಸ್ಸನ್ನು ಬೋಧಿಸುವ ಅದ್ವಿತೀಯವಾದ ಸ್ಥಾನ ಇದಕ್ಕೆ ಸೇರಿದುದಾಗಿದೆ.

ಈ ಗ್ರಂಥದ ಆಕಾರವೂ ನಿಸ್ಸಮಾಭ್ಯಧಿಕವಾಗಿದೆ. ಇಷ್ಟು ದೊಡ್ಡ ಗ್ರಂಥವು ಪ್ರಪಂಚದಲ್ಲೇ ಬೇರಾವುದೂ ಇಲ್ಲ. ಈಗಿನ ರೂಪದಲ್ಲಿ ಇದರ ಶ್ಲೋಕಗಳ ಸಂಖ್ಯೆ ಒಂದು ಲಕ್ಷಕ್ಕಿಂತ ಹೆಚ್ಚಾಗಿದೆ. ಅಧ್ಯಾಯಗಳ ಸಂಖ್ಯೆ 2,109. ಇದರ 18 ಪರ್ವಗಳೂ ಮತ್ತು ಅವಾಂತರಪರ್ವಗಳೂ ಒಂದೊಂದೂ ಉದ್ಗ್ರಂಥದಂತಿವೆ. ಶ್ರೀಕೃಷ್ಣನ ವಂಶವನ್ನೂ, ಕಥೆಯನ್ನೂ ಹೇಳುವ ಹರಿವಂಶವೆಂಬ ಮೂರು ಪರ್ವಗಳುಳ್ಳ ಖಿಲಗ್ರಂಥವು ಇದರ ಒಂದು ಸಣ್ಣಭಾಗ. ಗ್ರೀಕ್ ಭಾಷೆಯಲ್ಲಿ ಮಹತ್ತು-ಬೃಹತ್ತುಗಳೆರಡರಲ್ಲೂ ಹಿರಿಯ ಕಾವ್ಯಗಳಾದ ಇಲಿಯಟ್ ಮತ್ತು ಒಡಿಸ್ಸೆ–ಇವೆರಡನ್ನೂ ಸೇರಿಸಿ

ಎಂಟರಿಂದ ಗುಣಿಸಿದರೆ ಅದರ ಪ್ರಮಾಣದಷ್ಟಾಗುತ್ತದೆ ಇದರ ಸುಮಾರು ಪ್ರಮಾಣ.

ಹೀಗೆ ಎಲ್ಲ ದೃಷ್ಟಿಗಳಿಂದಲೂ ಉತ್ಕೃಷ್ಟವಾಗಿರುವ ಈ ಗ್ರಂಥಕ್ಕೆ ಉಪಮೆಯಿಲ್ಲವಾದುದರಿಂದ ಇದರಂತೆಯೇ ಅನುಪಮವಾಗಿರುವ ಸಮುದ್ರಕ್ಕೂ ಹಿಮವಂತನಿಗೂ ಇದನ್ನು ಹೋಲಿಸಿರುವುದು ಯುಕ್ತವಾಗಿದೆ :

**ಯಥಾ ಸಮುದ್ರೋ ಭಗವಾನ್ ಯಥಾ ಚ ಹಿಮವಾನ್ ಗಿರಿಃ ।**
**ಖ್ಯಾತಾವುಭೌ ರತ್ನನಿಧೀ ತಥಾ ಭಾರತಮುಚ್ಯತೇ ॥**

ಸಮುದ್ರದಂತೆ ಅಪಾರಪಾರಾವಾರ ಮತ್ತು ರತ್ನಾಕರವಾಗಿದೆ ; ಹಿಮವಂತನಂತೆ ಅತ್ಯುನ್ನತ ಮತ್ತು ಅನಂತರತ್ನಪ್ರಭವವಾಗಿದೆ–ಮಹಾಭಾರತ. ಇದರ ಮಹಿಮೆಯನ್ನು ಭಾರತೀಯರು ಮಾತ್ರವಲ್ಲದೇ ಗುಣಗ್ರಾಹಿಗಳಾದ ವಿದೇಶೀಯರೂ ಕೂಡ ಮುಕ್ತಕಂಠದಿಂದ ಪ್ರಶಂಸೆಮಾಡಿದ್ದಾರೆ.

''The Mahabharatha has opened me, as it were, a new world, and I have been surprised beyond measure at the Wisdom, Truth, Knowledge and love of the right which I have found displayed in its pages. Not only so, but I have found many of the truths which my own heart has taught me in regard to the Supreme Being and His creations set forth in beautiful, clear language.'' **– J.A. Hassler.**

''It is one of the priceless treasures of the East.''

**–Edwin Arnold.**

**ಭಾರತದಲ್ಲಿ ಸರ್ವಪುರುಷಾರ್ಥಗಳ ನಿರೂಪಣೆ:** "ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ವಿಷಯದಲ್ಲಿ ಈ ಗ್ರಂಥದಲ್ಲಿ ಏನಿದೆಯೋ ಅದು ಬೇರೆಡೆಯಲ್ಲಿದೆ. ಇಲ್ಲಿ ಏನಿಲ್ಲವೋ ಅದು ಬೇರೆ ಎಲ್ಲಿಯೂ ಇಲ್ಲ"–

**ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।**
**ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ಕ್ವಚಿತ್ ॥**

ಎಂದು ಮಹಾಭಾರತವೇ ತನ್ನ ವಿಷಯದಲ್ಲಿ ಘೋಷಣೆಮಾಡಿಕೊಂಡಿದೆ. ಇಡೀ ಗ್ರಂಥವನ್ನು ಆಳವಾಗಿ ಅಧ್ಯಯನಮಾಡಿದರೆ–"ಇದು

ಒಣಹೆಮ್ಮೆಯಲ್ಲ ; ಸತ್ಯಾನಪೇತವಾದ ವಾಣಿ"–ಎಂದು ಇಂದಿಗೂ ನಾವು ಹೇಳಬೇಕಾಗಿದೆ.

–ಪುರುಷಾರ್ಥಗಳಲ್ಲಿ ಧರ್ಮಕ್ಕೆ ಅಗ್ರಸ್ಥಾನ. ಇದರ ಸರ್ವಶ್ರೇಷ್ಠತೆಯನ್ನು ಮುಕ್ತಕಂಠದಿಂದ ಘೋಷಣೆಮಾಡುತ್ತದೆ ಮಹಾಭಾರತ.

**ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ ।**
**ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಧರ್ಮಾನ್ವಕ್ಷ್ಯಾಮಿ ಶಾಶ್ವತಾನ್ ॥**

ಎಂದು ಧರ್ಮದ ಪ್ರಣಾಮದಿಂದಲೇ ಧರ್ಮಪ್ರಾಣರಾದ ಭೀಷ್ಮರು ತಮ್ಮ ಉಪದೇಶವನ್ನು ಪ್ರಾರಂಭಿಸುತ್ತಾರೆ.

**ಧಾರಣಾದ್ಧರ್ಮ ಇತ್ಯಾಹುರ್ಧರ್ಮೇಣ ವಿಧೃತಾಃ ಪ್ರಜಾಃ ॥**

ಯಾವುದು ಎಲ್ಲವನ್ನೂ ಹೊತ್ತಿದೆಯೋ ಅದೇ ಧರ್ಮ–ಎಂದು ಧರ್ಮದ ಲಕ್ಷಣವನ್ನು ಹೇಳಿ–'ಅರ್ಥ-ಕಾಮಗಳಿಗೂ ಅದು ಕಾರಣವಾಗಿರುವುದಾದರೂ ಜನರು ಅದನ್ನೇಕೆ ಸೇವಿಸುವುದಿಲ್ಲ?'–ಎಂದು ಧರ್ಮಮೂರ್ತಿ ವ್ಯಾಸರು ಕೊರಗುತ್ತಾರೆ–

**ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ।**

ಧರ್ಮವನ್ನು ಯಥಾವತ್ತಾಗಿ ಆಚರಿಸುತ್ತಿದ್ದರೆ, ಅರ್ಥ-ಕಾಮಗಳೂ ಆನುಷಂಗಿಕವಾಗಿ ತಾವಾಗಿಯೇ ಸಿದ್ಧಿಸುತ್ತವೆಯೆಂದು ಸ್ಪಷ್ಟವಾಗಿ ಎಲ್ಲರಿಗೂ ಮನವರಿಕೆಯಾಗುವ ದೃಷ್ಟಾಂತದಿಂದ ಪ್ರತಿಪಾದಿಸುತ್ತದೆ ಈ ಧರ್ಮಗ್ರಂಥ :

**ಯಥೇಕ್ಷುಹೇತೋಃ ಸಲಿಲಂ ನಿಷೇಚಿತಂ**
**ತೃಣಾನಿ ವಲ್ಲೀರಪಿ ಚ ಪ್ರಸಿಂಚತಿ ।**
**ತಥಾ ನರೋ ಧರ್ಮಪಥೇನ ವರ್ತಯನ್**
**ಯಶಶ್ಚ ಕಾಮಾಂಶ್ಚ ವಸೂನಿ ಸೋಽಶ್ನುತೇ ॥**

ಕಬ್ಬಿನ ಗಿಡ ಬೆಳೆಯಲೆಂದು ಹಾಯಿಸಿದ ನೀರು, ಹುಲ್ಲು ಮತ್ತು ಬಳ್ಳಿಗಳನ್ನೂ ತಾನಾಗಿಯೇ ಬೆಳೆಸುತ್ತದೆ. ಹಾಗೆಯೇ ಮನುಷ್ಯನು ಧರ್ಮಮಾರ್ಗದಲ್ಲಿ ನಡೆದರೆ ಕೀರ್ತಿ, ಕಾಮ, ಹಣ–ಮುಂತಾದುವುಗಳನ್ನೂ ಅನುಭವಿಸುತ್ತಾನೆ.

ಧರ್ಮವು ನಿತ್ಯವಾದುದು–"**ಧರ್ಮೋ ನಿತ್ಯಃ ಸುಖದುಃಖೇ ತ್ವನಿತ್ಯೇ**"–ಧರ್ಮವನ್ನು ಬಿಡದೇ ಆಚರಿಸಿ–ಎಂದು ನಾನಾರೂಪಗಳಲ್ಲಿ

ಬೋಧಿಸುತ್ತದೆ. ಈ ಧರ್ಮಶಾಸ್ತ್ರಗ್ರಂಥದಲ್ಲಿ ಪ್ರಸಂಗವಶದಿಂದ ಮಧ್ಯೇ ಮಧ್ಯೇ ಧರ್ಮದ ಪ್ರತಿಪಾದನೆಯನ್ನು ಮಾಡುವುದಲ್ಲದೇ ಸಾಮಾನ್ಯ ಮತ್ತು ವಿಶೇಷಧರ್ಮಗಳನ್ನು ರಾಜಧರ್ಮದಿಂದ ಪ್ರಾರಂಭಿಸಿ ಎಲ್ಲ ವರ್ಣಗಳಿಗೂ ಮತ್ತು ಆಶ್ರಮಗಳಿಗೂ ಬೋಧನೆಮಾಡಲು ಮಹಾಭಾರತದ ಒಂದು ಪರ್ವವೇ ಮೀಸಲಾಗಿದೆ.

ಮಹಾಭಾರತವು ಧರ್ಮಕ್ಕೆ ಅನುಗುಣವಾದ ಅರ್ಥನೀತಿಯನ್ನೂ ಪ್ರತಿಪಾದಿಸುತ್ತದೆ. "ಸಂನ್ಯಾಸಿಯು ಅರ್ಥಸಂಗ್ರಹಮಾಡಬಾರದು. ಆದರೆ ಗೃಹಸ್ಥನು ಮತ್ತು ರಾಜನು ಅವಶ್ಯವಾಗಿ ಹಣವನ್ನು ಸಂಪಾದಿಸಬೇಕು ಮತ್ತು ಸಂಪಾದಿಸಿದ ಹಣದ ಸದ್ವಿನಿಯೋಗಮಾಡಬೇಕು. ರಾಜನು ಪ್ರಜೆಗಳಿಂದ ಕಂದಾಯವನ್ನು ಹೇಗೆ ಸಂಗ್ರಹಿಸಬೇಕು? ಎಂದರೆ : ಅವರಿಗೆ ಕಿಂಚಿತ್ತೂ ತೊಂದರೆಯಾಗದಂತೆ, ತಮ್ಮಿಂದ ಹಣವನ್ನು ರಾಜನು ತೆಗೆದುಕೊಳ್ಳುತ್ತಿದ್ದಾನೆ ಎಂಬುದರ ಅರಿವೇ ಆಗದಂತೆ–ಮೃದುವಾದ ವಿಧಾನದಿಂದ ದುಂಬಿಯು ಜೇನನ್ನು ಸಂಗ್ರಹಿಸುವಂತೆ–ಸಂಗ್ರಹಿಸಬೇಕು" ಎಂಬ ಭಾರತ ವಚನ ಎಷ್ಟು ವಿವೇಕಪೂರ್ಣವಾಗಿದೆ! ಅರ್ಥನೀತಿಯಲ್ಲಿ ಧನಸಂಗ್ರಹಮಾಡುವುದು ಮಾತ್ರವಲ್ಲ, ಅದನ್ನು ಒಳ್ಳೆಯ ದೇಶ-ಕಾಲ-ಪಾತ್ರಗಳಲ್ಲಿ ದಾನಮಾಡಿ ಸದ್ವಿನಿಯೋಗಮಾಡಬೇಕು–ಎಂದೂ ಅದು ಬೋಧಿಸುತ್ತದೆ.

**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಮತಮ್ ।**

ಇನ್ನು ಕಾಮದ ವಿಷಯ : ಕಾಮವು ತನಗೆ ವಶನಾದವನನ್ನು ಹಳ್ಳಕ್ಕೆ ತಳ್ಳುತ್ತದೆ–ಎಂಬುದರಲ್ಲಿ ಸಂಶಯವಿಲ್ಲ.

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**

ಅದು ಕ್ರೋಧದಂತೆಯೇ ಮಾನವನಿಗೆ ನಿತ್ಯಶತ್ರು. ಆದರೆ ಧರ್ಮಕ್ಕೆ ವಿರೋಧಬರದಂತೆ ಹತೋಟಿಯಲ್ಲಿಟ್ಟು ಅದನ್ನು ಬಳಸಿದರೆ ದೋಷವಿಲ್ಲ–ಎನ್ನುತ್ತದೆ ಮಹಾಭಾರತ.

**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ।**

ಗೀತೆಯಲ್ಲಿ ಭಗವಂತನೇ ಇದನ್ನು ಉಪದೇಶಿಸುತ್ತಾನೆ.

ಪುರುಷಾರ್ಥಗಳಲ್ಲಿ ಶ್ರೇಷ್ಠತಮವಾದುದು ಮೋಕ್ಷ. ಪರಮಪುರುಷಾರ್ಥವೆನ್ನುತ್ತಾರೆ ಇದನ್ನು. ಮಹಾಭಾರತದಲ್ಲಿ ಇದರ ಈ ಅನುಪಮವಾದ

ಶ್ರೇಷ್ಠತೆಯು ಅನೇಕಸ್ಥಳಗಳಲ್ಲಿ ಉದ್ಘೋಷಿತವಾಗಿದೆ. ಮೋಕ್ಷಶಾಸ್ತ್ರಗಳಲ್ಲಿ ಮೂರ್ಧನ್ಯವಾದ ಭಗವದ್ಗೀತೆಯು ಮಹಾಭಾರತದ ಒಂದು ಅವಿಭಾಜ್ಯವಾದ ಅಂಗವೆಂಬುದನ್ನು ಮರೆಯಬಾರದು. ಇದು ಕಾಲಾಂತರ ದಲ್ಲಿ ಮಹಾಭಾರತಕ್ಕೆ ಸೇರಿಸಲ್ಪಟ್ಟಿತೆಂಬ ವಾದವು ಪಾಮರರಮಣೀಯ.

**ಅಸ್ಥಾನಸ್ನೇಹಕಾರುಣ್ಯಧರ್ಮಾಧರ್ಮಧಿಯಾಕುಲಮ್ ।**
**ಪಾರ್ಥಂ ಪ್ರಪನ್ನಮುದ್ದಿಶ್ಯ ಶಾಸ್ತ್ರಾವತರಣಂ ಕೃತಮ್ ॥**

ಎಂಬ ಭಗವದ್ಯಾಮುನರ ಗೀತಾರ್ಥಸಂಗ್ರಹಶ್ಲೋಕವು–ಶ್ರೀಕೃಷ್ಣನ ಉಪದೇಶವು ದೇಶ-ಕಾಲ-ಪಾತ್ರಗಳಿಗೆ ಸರ್ವಥಾ ಹೊಂದಿಕೊಳ್ಳುತ್ತದೆ ಯೆಂಬುದನ್ನು ಸಂಕ್ಷೇಪವಾಗಿದ್ದರೂ ಉಪಪತ್ತಿಯುಕ್ತವಾಗಿ ಪ್ರತಿಪಾದಿಸು ತ್ತದೆ. ಮಹಾಭಾರತವು ಶ್ರೇಷ್ಠತಮವಾದ ಮೋಕ್ಷಶಾಸ್ತ್ರವೆಂಬುದನ್ನು ಸಾಧಿ ಸಲು ಭಗವದ್ಗೀತೆಯೊಂದೇ ಪರ್ಯಾಪ್ತವಾಗಿದೆ. ಮೋಕ್ಷವನ್ನೂ, ಅದಕ್ಕೆ ಸಾಧಕವಾದ ಜ್ಞಾನ-ಭಕ್ತಿ-ಕರ್ಮಯೋಗಗಳನ್ನೂ ಪ್ರತಿಪಾದಿಸುವ ಐದು ಮುಖ್ಯರತ್ನಗಳು ಮಹಾಭಾರತಸುಧಾಂಬುಧಿಯನ್ನಲಂಕರಿಸಿವೆ :–

**ಗೀತಾ ಸಹಸ್ರನಾಮೈವ ಸ್ತವರಾಜೋ ಹ್ಯನುಸ್ಮೃತಿಃ ।**
**ಗಜೇಂದ್ರಮೋಕ್ಷಣಂ ಚೈವ ಪಂಚರತ್ನಾನಿ ಭಾರತೇ ॥**

ಭಗವದ್ಗೀತೆ, ವಿಷ್ಣುಸಹಸ್ರನಾಮ, ಭೀಷ್ಮಸ್ತವರಾಜ, ಅನುಸ್ಮೃತಿ ಮತ್ತು ಗಜೇಂದ್ರಮೋಕ್ಷ–ಇವು ಐದೇ ಆ ರತ್ನಗಳು. ಇವಲ್ಲದೇ "ಸನತ್ಸುಜಾತೀಯ" ಭಾಗವೂ ಆತ್ಮವಿಜ್ಞಾನದ ರತ್ನಪೇಟಿಕೆಯಾಗಿದೆ. ಮೋಕ್ಷಧರ್ಮ ವನ್ನು ನಿರೂಪಿಸುವ ಒಂದು ಪರ್ವವೇ ಮಹಾಭಾರತವನ್ನು ಅಲಂಕರಿ ಸಿದೆಯೆಂಬುದು ಗಮನಾರ್ಹ.

ಹೀಗೆ ಅರ್ಥ-ಕಾಮಗಳನ್ನು ಧರ್ಮ-ಮೋಕ್ಷಗಳ ಹದ್ದುಬಸ್ತಿನಲ್ಲಿ ಇರಿಸಿಕೊಂಡು ಎಲ್ಲ ಪುರುಷಾರ್ಥಗಳನ್ನೂ ಯಥೋಚಿತವಾಗಿ ಸೇವಿಸುವ, ಪೂರ್ಣಜೀವನವನ್ನು ಆದರ್ಶವನ್ನಾಗಿ ನಿರೂಪಿಸುವ ಪೂರ್ಣಾತ್ಮರ ಅನು ಭವದ ಉಸಿರು ಮಹಾಭಾರತ. "ಧರ್ಮವನ್ನಾಚರಿಸಬೇಕು. ಮೋಕ್ಷವನ್ನು ಸಂಪಾದಿಸಬೇಕು. ಆದರೆ ಅರ್ಥ-ಕಾಮಗಳನ್ನು ತ್ಯಜಿಸಬೇಕೆಂಬ ನಿಯಮ ವೇನಿಲ್ಲ. ಅವು ಸ್ವತಃ ತುಂಟಹಸುಗಳಂತೆ. ಧರ್ಮ ಮತ್ತು ಮೋಕ್ಷಗಳೆಂಬ ಕಂಬಗಳಿಗೆ ಅವುಗಳನ್ನು ಎರಡು ಕಡೆಗಳಲ್ಲಿಯೂ ಕಟ್ಟಿಹಾಕಿ ಕರೆದರೆ ಅವು ಅಮೃತವನ್ನೇ ಕರೆಯುತ್ತವೆ." "ಅರ್ಥವು ಪರಮಾರ್ಥಕ್ಕೆ ಅನುಗುಣವಾಗಿರ

ಬೇಕು. ಕಾಮವು ಭಗವತ್ಕಾಮಜೀವನಕ್ಕೆ ವಿರೋಧವಾಗಿರಬಾರದು"–ಎಂಬ ಅರ್ಥದ ಶ್ರೀರಂಗಗುರುದೇವರ ವಚನಾಮೃತಬಿಂದುಗಳನ್ನು ಇಲ್ಲಿ ಸ್ಮರಿಸುತ್ತೇವೆ.

## ಅನೇಕಗ್ರಂಥಗಳಿಗೆ ಅಕ್ಷಯ ಆಕರ

ಮಹಾಭಾರತವು ಶಕುಂತಲೋಪಾಖ್ಯಾನ, ಸಾವಿತ್ರಿಯ ಕಥೆ, ನಲೋಪಾಖ್ಯಾನಗಳೇ ಮುಂತಾದ ಸುಂದರವಾದ ಉಪಾಖ್ಯಾನಗಳಿಂದಲೂ, ನೀತಿಕಥೆಗಳಿಂದಲೂ, ದಾರ್ಶನಿಕಕಥೆಗಳಿಂದಲೂ ಶೋಭಿಸುತ್ತಿರುವ ರಮಣೀಯವಾದ ಉದ್ಯಾನವನ. ಮುಂದೆ ಹುಟ್ಟಿದ ಕವಿಗಳೂ, ಶಾಸ್ತ್ರಕಾರರೂ ಇದರಿಂದ ಸ್ಫೂರ್ತಿಪಡೆದು ಇದರ ವಸ್ತುವನ್ನು ನಾನಾರೂಪಗಳಿಂದ ಬಳಸಿಕೊಂಡಿದ್ದರೆ ಆಶ್ಚರ್ಯವೇನಿಲ್ಲ. ಮಹಾಭಾರತದಿಂದ ಹೀಗೆ ವಿಷಯಸಂಗ್ರಹಮಾಡುವುದು ಯಾರಿಗೂ ಲಜ್ಜಾಕರವಲ್ಲ. ಏಕೆಂದರೆ : ಸಾಗರ, ಹಿಮವಂತ, ಭೂಮಿ, ಸೂರ್ಯ-ಚಂದ್ರಾದಿಗಳಂತೆ ಇದು ಎಲ್ಲರಿಗೂ ಉಪಜೀವ್ಯವಾದ ಗ್ರಂಥ.

ಮಹಾಭಾರತದ ಶ್ಲೋಕಗಳನ್ನು 'ಸ್ಮೃತಿ' ಎಂದು ಪ್ರಮಾಣವನ್ನಾಗಿ ಗೌರವಿಸಿ ಆಚಾರ್ಯರು ಉದಹರಿಸಿರುತ್ತಾರೆ. ಮಹಾಭಾರತದ ಒಂದು ಭಾಗವಾಗಿರುವ ಭಗವದ್ಗೀತೆಯು ಸಾಕ್ಷಾತ್ ಭಗವಂತನ ವಾಣಿಯೆಂದೂ, ಪ್ರಸ್ಥಾನತ್ರಯದಲ್ಲಿ ಸೇರಿದ ಮಾನ್ಯಗ್ರಂಥವೆಂದೂ ಸುಪ್ರಸಿದ್ಧವಾಗಿರುವ ವಿಷಯವೇ ಆಗಿದೆ. ಅರ್ಥಶಾಸ್ತ್ರಗಳೂ, ಪಂಚತಂತ್ರ–ಹಿತೋಪದೇಶಗಳೇ ಮುಂತಾದ ನೀತಿಕಥಾಗ್ರಂಥಗಳೂ ಇದರ ಕಥೆ, ಶ್ಲೋಕ, ಉಪಮಾನ–ಮುಂತಾದುವುಗಳನ್ನು ಧಾರಾಳವಾಗಿ ಬಳಸಿಕೊಂಡಿವೆ.

ಇದು ಕವಿಗಳಿಗೆ ಅಕ್ಷಯವಾದ ಆಕರವಾಗಿದೆ ಎನ್ನುವುದಕ್ಕೆ ಸಂಸ್ಕೃತ ಮತ್ತು ದೇಶಭಾಷೆಗಳಲ್ಲಿ ಇದನ್ನು ಆಧರಿಸಿ ಬರೆಯಲ್ಪಟ್ಟಿರುವ ನಾಟಕ, ಮಹಾಕಾವ್ಯ, ಚಂಪೂ–ಮುಂತಾದ ಹಲವು ಬಗೆಯ ಕಾವ್ಯಗಳನ್ನು ಉದಹರಿಸಬಹುದು. ಭಾಸಕವಿಯ ದೂತವಾಕ್ಯ, ದೂತಘಟೋತ್ಕಚ, ಪಂಚರಾತ್ರ, ಕರ್ಣಭಾರ, ಊರುಭಂಗ, ಮಧ್ಯಮವ್ಯಾಯೋಗ, ಕಾಳಿದಾಸನ ಅಭಿಜ್ಞಾನ ಶಾಕುಂತಲ, ಭಟ್ಟನಾರಾಯಣನ ವೇಣೀಸಂಹಾರ, ಶ್ರೀಹರ್ಷ-ಭಾರವಿ-ಮಾಘಕವಿಗಳು ರಚಿಸಿರುವ ನೈಷಧೀಯ-ಕಿರಾತಾರ್ಜುನೀಯ-ಶಿಶುಪಾಲವಧ ಮಹಾಕಾವ್ಯಗಳು, ಅನನ್ತಭಟ್ಟನ ಭಾರತಚಂಪೂ,

ಕ್ಷೇಮೇಂದ್ರನ ಭಾರತ ಮಂಜರೀ, ನಾರಣಪ್ಪನ ಗದುಗಿನ ಭಾರತ–ಇವು ಗಳನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಪ್ರಪಂಚದ ಎಲ್ಲ ನಾಗರಿಕಭಾಷೆ ಯಲ್ಲೂ ಮಹಾಭಾರತದ ಅನುವಾದವಾಗಿದೆ ಎಂಬುದೂ ಗಮನಾರ್ಹ.

## ನವರಸಭರಿತ ಮಹಾಕಾವ್ಯ

ಭಾರತವು ಸ್ವತಃ ನವರಸಭರಿತವಾದ ಮಹಾಕಾವ್ಯ. ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಬೀಭತ್ಸ, ರೌದ್ರ–ಎಂಬ ರಸಗಳು ಆಯಾ ಸ್ಥಾನಗಳಲ್ಲಿ ಉಚಿತಪ್ರಮಾಣದಲ್ಲಿ ಇದನ್ನು ತುಂಬಿಕೊಂಡು ಕಳೆ ಯನ್ನು ತುಂಬಿವೆಯಾದರೂ ಕೊನೆಗೆ ಪ್ರಧಾನವಾಗಿ ಉಳಿದುಕೊಳ್ಳುವುದು ಶಾಂತರಸ. ತ್ರಿಗುಣಗಳ ಸಾಂಕರ್ಯದಿಂದ ಉಂಟಾಗಿರುವ ಎಂಟು ರಸ ಗಳೂ ತಮ್ಮ ತಮ್ಮ ಆಟಗಳನ್ನು ತೋರಿಸಿ–ಮೋಡಗಳಿಗೆ ಆಕಾಶವು ಹೇಗೋ ಹಾಗೆ–ತಮಗೆಲ್ಲಾ ಆಧಾರವಾಗಿರುವ ಶಾಂತರಸವು ಉಳಿಯುವುದಕ್ಕೆ ದಾರಿಮಾಡಿಕೊಡುತ್ತವೆ. ಕೌರವರೂ-ಪಾಂಡವರೂ ರಾಜ್ಯಕ್ಕಾಗಿ ಜೀವನದ ಬಹುಭಾಗ ಛಲ-ಮಾತ್ಸರ್ಯ–ಇವುಗಳನ್ನು ಸಾಧಿಸಿ ಯುದ್ಧದ ಉದ್ಯೋಗ ಮಾಡಿದರು. ಮಹಾಭಾರತಯುದ್ಧವೂ ನಡೆಯಿತು. ಆದರೆ ಅದರ ಫಲ ಬಹುಜನವಿಧ್ವಂಸ. ಆದುದರಿಂದ ಸ್ತ್ರೀಪರ್ವವು ಕರುಣಾಕ್ರಂದದಿಂದ ತುಂಬಿಹೋಗಿದೆ. ಕೊನೆಗೆ ಧರ್ಮರಾಜನು ಕೆಲವು ವರ್ಷ ರಾಜ್ಯ ಭಾರಮಾಡಿದರೂ ಅದು ಕೊಂಚಕಾಲ ಮಾತ್ರ. "ಅಂತೂ ಇಂತೂ ಕುಂತೀ ಮಕ್ಕಳಿಗೆ ರಾಜ್ಯವಿಲ್ಲ"–ಎಂಬ ಗಾದೆಯು ಪ್ರಸಿದ್ಧವಾಗಿದೆ. ಕೊನೆಗೆ "ಭೌತಿಕ ಸಂಪತ್ತು–ಅದರ ಆಕಾಂಕ್ಷೆ ಎಲ್ಲವೂ ಅಶಾಶ್ವತ ; ಶಾಂತನಾಗಿ ಪರಮಾರ್ಥ ವನ್ನು ಸಾಧಿಸುವುದೇ ಜೀವನದ ಗುರಿ"–ಎಂಬ ಮನವರಿಕೆ ಉಂಟಾಗುತ್ತದೆ.

## ಕಾವ್ಯದ ನಾಯಕನಾರು?

ಮಹಾಭಾರತದ ನಾಯಕನಾರು?–ಎಂಬ ವಿಷಯದಲ್ಲಿ ವಿಪುಲವಾದ ಚರ್ಚೆ ನಡೆದಿದೆ. ವಿಜಯವನ್ನು ಗಳಿಸಿ ಫಲಸ್ವಾಮಿಯಾದವನು ಧರ್ಮರಾಜ ನಾದುದರಿಂದ ಅವನೇ ನಾಯಕ ಎನ್ನಬಹುದು. ಅನುಸ್ಯೂತವಾಗಿ ಪರಮೋತ್ಸಾಹ-ಪರಾಕ್ರಮಗಳನ್ನು ಪ್ರದರ್ಶನಮಾಡಿದ ಧೀರೋದಾತ್ತನಾದ ಅರ್ಜುನನನ್ನೂ ನಾಯಕ ಎನ್ನುವವರುಂಟು. ದೃಷ್ಟಿಭೇದದಿಂದ ವಿಚಾರದ ಒಂದೊಂದು ಘಟ್ಟದಲ್ಲಿ ಇವರಿಬ್ಬರನ್ನೂ ನಾಯಕರೆಂಬುದಾಗಿ ಹೇಳಬಹುದು. ಆದರೆ ಇವರಿಬ್ಬರಿಗೂ ಚೈತನ್ಯಕೊಡುವವನು ಶ್ರೀಕೃಷ್ಣ. ಎಲ್ಲ ಪಾತ್ರಗಳ

ಮಹತ್ತ್ವವೂ ಅವನ ಸಂಕಲ್ಪಶಕ್ತಿಯನ್ನೇ ಅವಲಂಬಿಸಿದೆ. ಆದುದರಿಂದ ದಾರ್ಶನಿಕ ಹಿನ್ನೆಲೆಯೊಡನೆ ನೋಡಿದಾಗ :

**ಲೋಕತ್ರಯಾವಿರತನಾಟಕವಸ್ತುತಂತ್ರಪ್ರಸ್ತಾವನಪ್ರತಿಸಮಾಪನ–**
**ಸೂತ್ರಧಾರಃ ।**

ಎಂದು ಪ್ರಸಿದ್ಧನಾಗಿರುವ ಶ್ರೀಕೃಷ್ಣಪರಮಾತ್ಮನೇ ಇದರ ನಾಯಕ. ವಿಶ್ವಮಹಾನಾಟಕದ ಸೂತ್ರಧಾರನೂ ಅವನೇ ಅಲ್ಲವೇ?

## ಶೈಲಿ

ಮಹಾಭಾರತದ ಶೈಲಿಯು ಹೃದಯಂಗಮವಾಗಿದೆ. ಇಡೀ ಗ್ರಂಥದಲ್ಲಿ ಒಂದೇ ವಸ್ತುವಿನ್ಯಾಸ, ಶೈಲಿ, ಛಂದಸ್ಸು–ಕಂಡುಬರುವುದಿಲ್ಲ. ಕೆಲವು ಕಡೆ ಉಪನಿಷತ್ತುಗಳ ಶೈಲಿ ಇದೆ. ಕೆಲವೆಡೆಗಳಲ್ಲಿ ಮಹಾಕಾವ್ಯಗಳಿಗೆ ಹತ್ತಿರದ ಪದರಚನೆ ಇದೆ. ಆದರೆ ಒಟ್ಟಿನಲ್ಲಿ ಗ್ರಂಥದ ಭಾಷೆಯು ಸರಳವಾಗಿದೆ. ನೇರ ವಾಗಿ ವಿಷಯವನ್ನು ಬೋಧಿಸುತ್ತಾ ಪ್ರಭಾವಶಾಲಿಯಾಗಿದೆ.

**ಛಂದೋವೃತ್ತೈಶ್ಚ ವಿವಿಧೈರನ್ವಿತಂ ವಿದುಷಾಂ ಪ್ರಿಯಮ್ ।**

ಎಂಬ ಅದರ ಹೇಳಿಕೆಯಂತೆ ಬಗೆ-ಬಗೆಯ ಛಂದಸ್ಸುಗಳಿದ್ದರೂ ಅನು ಷ್ಟುಪ್ ಛಂದಸ್ಸೇ ಹೆಚ್ಚಾಗಿ ಕಂಡುಬರುತ್ತದೆ. ಗ್ರಂಥದ ಕೆಲವು ಭಾಗ ಗದ್ಯರೂಪದಲ್ಲಿದೆ. ಶ್ಲೋಕಗಳ ಮಧ್ಯೆ ಬರುವ 'ಶ್ರೀ ಭಗವಾನ್ ಉವಾಚ' ಮುಂತಾದ ಬಿಡಿ ವಾಕ್ಯಗಳು ಕಾವ್ಯಕ್ಕೆ ಮಧ್ಯೇ-ಮಧ್ಯೇ ನಾಟಕೀಯ ಕಳೆಯನ್ನು ಕೊಟ್ಟು ಪ್ರಭಾವಶಾಲಿಯನ್ನಾಗಿ ಮಾಡಿವೆ. ಅತಿಮಾನುಷ ವ್ಯಾಪಾರಗಳು ವರ್ಣಿತವಾಗಿದ್ದರೂ ಇಡೀ ಗ್ರಂಥದಲ್ಲಿ ಮನುಷ್ಯತ್ವವೇ ಅನುಸ್ಯೂತವಾಗಿದೆ. ಪಾತ್ರಗಳು ಗುಣ-ದೋಷ ಎರಡರಿಂದಲೂ ಕೂಡಿ ಮನುಷ್ಯಸಹಜವಾಗಿ ಚಿತ್ರಿಸಲ್ಪಟ್ಟಿವೆ.

## ಮಹಾಭಾರತದ ಕರ್ತೃ ಯಾರು?

ಮಹಾಭಾರತದ ರಸಮಯವಾದ ಅಂಶಗಳನ್ನು ವಿವೇಚನೆಮಾಡಿ ಯಾಯಿತು. ಇನ್ನು ಗ್ರಂಥದ ಕರ್ತೃ ಯಾರು? ಇದರ ರಚನೆಯ ಕಾಲ ಯಾವುದು? ಇದರ ಪ್ರಾಮಾಣಿಕಭಾಗ ಯಾವುದು? ಪ್ರಕ್ಷಿಪ್ತಭಾಗ ಯಾವುದು? ಇತ್ಯಾದಿ ವಿಷಯಗಳನ್ನೂ ಸ್ವಲ್ಪ ವಿವೇಚನೆಮಾಡಬಹುದು.

'ಇಡೀ ಮಹಾಭಾರತಗ್ರಂಥವು ರಚಿತವಾಗಲು ಸುಮಾರು 8-9 ಶತಮಾನಗಳು ಹಿಡಿದಿರಬೇಕು. ಇದಕ್ಕೆ ಒಬ್ಬನೇ ಕರ್ತೃವಿಲ್ಲ. ಗ್ರಂಥದ

ಬೆಳವಣಿಗೆಯಲ್ಲಿ ಮೂರು ಘಟ್ಟಗಳು ಸ್ಪಷ್ಟವಾಗಿ ಕಾಣುತ್ತವೆ'–ಎಂದು ಕೆಲವು ಆಧುನಿಕ ವಿಮರ್ಶಕರು ಹೇಳುತ್ತಾರೆ. ಆದರೆ ಮೂಲರೂಪದಲ್ಲಾದರೂ ಇದರ ಕರ್ತೃತ್ವ ವ್ಯಾಸಮಹರ್ಷಿಯದೆಂಬುದನ್ನು ಯಾವ ಪ್ರಮಾಣದಿಂದಲೂ ನಿರಾಕರಿಸಲು ಸಾಧ್ಯವಿಲ್ಲ.

ಮಹಾಭಾರತದ ಕರ್ತೃ ಸತ್ಯವತೀ-ಪರಾಶರರ ಪುತ್ರರಾದ ಕೃಷ್ಣ ದ್ವೈಪಾಯನರು. ದ್ವೀಪದಲ್ಲಿ ಹುಟ್ಟಿದುದರಿಂದ ದ್ವೈಪಾಯನರೆಂದೂ, ಪರಾಶರರ ಪುತ್ರರಾದುದರಿಂದ ಪಾರಾಶರ್ಯರೆಂದೂ, ವೇದಗಳನ್ನು ವಿಭಾಗಮಾಡಿದುದರಿಂದ ವೇದವ್ಯಾಸರೆಂದೂ, ಬದರೀಕ್ಷೇತ್ರದಲ್ಲಿ ಆಶ್ರಮವನ್ನು ಮಾಡಿಕೊಂಡು ಇದ್ದುದರಿಂದ ಬಾದರಾಯಣರೆಂದೂ ಪ್ರಸಿದ್ಧರಾಗಿರುವ ಮಹಾ ತ್ಮರು. ಬ್ರಹ್ಮರ್ಷಿಗಳಲ್ಲಿ ಶ್ರೇಷ್ಠರಾದ ವಸಿಷ್ಠರ ಮರಿಮಗ, ಶಕ್ತಿ ಮಹರ್ಷಿಯ ಮೊಮ್ಮಗ, ಪರಾಶರರ ಪುತ್ರ ಮತ್ತು ಶುಕಬ್ರಹ್ಮರ್ಷಿಯ ತಂದೆಯಾದ ಅಕಲ್ಮಷರೂ ತಪೋನಿಧಿಯೂ ಆದ ವ್ಯಾಸಮಹರ್ಷಿಗೆ ನಮೋ ನಮಃ!"–

**ವ್ಯಾಸಂ ವಸಿಷ್ಠನಪ್ತಾರಂ ಶಕ್ತೇಃ ಪೌತ್ರಮಕಲ್ಮಷಮ್ ।**
**ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಮ್ ॥**

–ಎಂಬ ಶ್ಲೋಕ ಇವರ ಗೋತ್ರ-ವಂಶಗಳನ್ನು ಹೇಳುತ್ತದೆ. ವೇದ ರಾಶಿಯನ್ನು ವಿಭಾಗಮಾಡಿ, ವೇದಾಂತನ್ಯಾಯವನ್ನು ಸಮರ್ಥಿಸುವ ಬ್ರಹ್ಮ ಸೂತ್ರವನ್ನು ರಚಿಸಿದ್ದಲ್ಲದೇ, ವೇದಾರ್ಥವನ್ನು ವಿವರಿಸುವ ಹದಿನೆಂಟು ಪುರಾಣಗಳನ್ನು ರಚಿಸಿದವರೂ ಇವರೇ ಎಂದು ಸಂಪ್ರದಾಯವು ಹೇಳುತ್ತದೆ:

**ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ ।**

ಪುರಾಣಗಳ ಈಗಿನ ರೂಪವು ಇವರದೆಂದು ಪ್ರತಿಜ್ಞೆಮಾಡಲು ಸಾಧ್ಯ ವಿಲ್ಲವಾದರೂ, ಪುರಾಣಗಳಿಗೆ ಮೂಲವಾದ "ಪುರಾಣಸಂ ಹಿತಾ" ಎಂಬ ಗ್ರಂಥವನ್ನು ರಚಿಸಿದವರು ಇವರೆಂದು ಹೇಳುವುದೂ ಉಂಟು. ವ್ಯಾಸಸ್ಮೃತಿ ಯೆಂಬ ಸ್ಮೃತಿಗ್ರಂಥವೂ ಹಲವಾರು ಕಡೆ ಉದಾಹೃತವಾಗಿದೆ. ಪತಂಜಲಿ ಮಹರ್ಷಿಯ ಯೋಗಸೂತ್ರಕ್ಕೆ ವ್ಯಾಸಭಾಷ್ಯವೆಂದು ಪ್ರಸಿದ್ಧವಾದ ಭಾಷ್ಯ ವಿದೆ. ವೈದಿಕಧರ್ಮದ ರಕ್ಷಣೆಗೆ ಮೂಲಭೂತವಾಗಿರುವ ಇಷ್ಟು ಗ್ರಂಥಗಳನ್ನು ರಚಿಸಿ ಧರ್ಮಸೇತುವನ್ನು ಸಂರಕ್ಷಿಸಿದ ವೇದವ್ಯಾಸರಿಗೆ ಭಾರತೀಯ ಸಂಸ್ಕೃತಿಯ ಉಪಾಸಕರು ಎಷ್ಟು ಕೃತಜ್ಞರಾಗಿದ್ದರೂ ಸಾಲದು.

**ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।**
**ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥**

–ಎಂಬಂತೆ ವ್ಯಾಸರು ಚಿರಂಜೀವಿಗಳಾಗಿದ್ದು ಆಗಾಗ್ಗೆ ಭಕ್ತರಿಗೆ ದರ್ಶನವಿತ್ತು ವರಗಳನ್ನು ಕರುಣಿಸುವ ಮಹಾತ್ಮರಲ್ಲಿ ಪರಿಗಣಿತರಾಗಿದ್ದಾರೆ. ಮುನಿಗಳಲ್ಲಿ ಶ್ರೇಷ್ಠತಮರಾದವರು ವ್ಯಾಸರು–ಮುನೀನಾಮಪ್ಯಹಂ ವ್ಯಾಸಃ ಎಂದು ಗೀತಾಚಾರ್ಯನಾದ ಶ್ರೀಕೃಷ್ಣಪರಮಾತ್ಮನೇ ಘೋಷಿಸಿದ್ದಾನೆ. ಸ್ನಾನಾಂಗ ದೇವರ್ಷಿ–ಪಿತೃತರ್ಪಣದಲ್ಲಿ

**"ಕೃಷ್ಣದ್ವೈಪಾಯನಾದಯೋ ಯೇ ಋಷಯಃ ।**
**ತಾನೃಷೀಗ್ಂಸ್ತರ್ಪಯಾಮಿ ।"**

–ಎಂದು ಋಷಿಗಳಿಗೆ ಮೂರ್ಧನ್ಯರೆಂದು ಕೀರ್ತಿಸಲ್ಪಟ್ಟ ಮಹಾತ್ಮರು ಇವರು. ಲೋಕಕ್ಕೆ ಜ್ಞಾನಪ್ರಕಾಶವನ್ನು ನೀಡಲು ನಾರಾಯಣನ ಆಜ್ಞೆಯಂತೆ ಅವತರಿಸಿದ **"ಅಪಾಂತರತಮಾಃ"**ಎಂಬ ದಿವ್ಯಮಹರ್ಷಿಯೇ ಅಥವಾ ಸಾಕ್ಷಾನ್ನಾರಾಯಣನ ರೂಪವೇ ಇವರೆಂದು ಸ್ತುತಿಸಲ್ಪಟ್ಟಿರುವ ಅವತಾರ ಪುರುಷರು.

**"ಅಪಾಂತರತಮಾ ನಾಮ ವೇದಾಚಾರ್ಯಃ ಪುರಾಣರ್ಷಿಃ ವಿಷ್ಣುನಿಯೋಗಾತ್ ಕಲಿದ್ವಾಪರಯೋಃ ಸಂಧೌ ಕೃಷ್ಣದ್ವೈಪಾಯನಃ ಸಂಬಭೂವ"** ( ಶಂ.ಭಾ.ಬ್ರ.ಸೂ. )

**"ದ್ವಾಪರೇ ಸರ್ವತ್ರ ಜ್ಞಾನೇ ಆಕುಲೀಭೂತೇ ತನ್ನಿರ್ಣಯಾಯ ಬ್ರಹ್ಮರುದ್ರೇಂದ್ರಾದಿಭಿರರ್ಥಿತಃ ಭಗವನ್ನಾರಾಯಣೋ ವ್ಯಾಸತ್ವೇನಾವತತಾರ"** (ಮ.ಭಾ.ಬ್ರ.ಸೂ.)

**ತೈರ್ವಿಜ್ಞಾಪಿತಕಾರ್ಯಸ್ತು ಭಗವಾನ್ಪುರುಷೋತ್ತಮಃ ।**
**ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್ ॥**

**ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ ।**
**ನಮೋ ವೈ ಬ್ರಹ್ಮನಿಧಯೇ ವಾಸಿಷ್ಠಾಯ ನಮೋ ನಮಃ ॥**

**ಬ್ರಹ್ಮಸೂತ್ರ ಮತ್ತು ಮಹಾಭಾರತದ ಕರ್ತೃ ಒಬ್ಬರೆ?**

ವ್ಯಾಸರೆಂಬ ನಾಮಧೇಯದಿಂದ ಅಲಂಕೃತರಾದ ಮಹಾತ್ಮರು ಅನೇಕರಿದ್ದಿರಬಹುದು. ಆದರೆ ಬ್ರಹ್ಮಸೂತ್ರವನ್ನು ರಚಿಸಿದ ಬಾದರಾಯಣ

ಮತ್ತು ಮಹಾಭಾರತದ ಕರ್ತೃ ವೇದವ್ಯಾಸ–ಇವರಿಬ್ಬರೂ ಒಂದೇ ವ್ಯಕ್ತಿಯೋ ಅಥವಾ ಬೇರೆ- ಬೇರೆಯೋ ಎಂಬ ವಿಷಯದಲ್ಲಿ ವಿಪುಲವಾಗಿ ಚರ್ಚೆ ನಡೆದಿದೆ. ಇವರಿಬ್ಬರೂ ಒಂದೇ ಎಂದು ಒಂದು ಸಂಪ್ರದಾಯವು ಹೇಳುತ್ತದೆ. ವೇದಾಂತಸೂತ್ರ ಭಾಷ್ಯ, ವಿಷ್ಣುಸಹಸ್ರನಾಮ ಇವುಗಳ ಪಾರಾಯಣದ ಪ್ರಾರಂಭದಲ್ಲಿ–

**ಸಮ್ಯಗ್ನ್ಯಾಯಕಲಾಪೇನ ಮಹತಾ ಭಾರತೇನ ಚ ।**
**ಉಪಬೃಂಹಿತವೇದಾಯ ನಮೋ ವ್ಯಾಸಾಯ ವಿಷ್ಣವೇ ॥**

–ಎಂಬ ಸ್ತುತಿಯನ್ನು ಮಾಡುತ್ತೇವೆ. ವೇದಾಂತಸೂತ್ರಗಳಿಂದಲೂ ಮತ್ತು ಮಹಾಭಾರತದಿಂದಲೂ ವೇದಾರ್ಥವನ್ನು ವಿವರಿಸಿದವರು ವಿಷ್ಣು ಸ್ವರೂಪಿಯಾದ ವ್ಯಾಸದೇವರು–ಎಂದು ಸ್ಪಷ್ಟವಾಗಿ ಹೇಳುತ್ತದೆ.

ಬ್ರಹ್ಮಸೂತ್ರಕಾರರೂ, ಮಹಾಭಾರತಕಾರರೂ ಬೇರೆ ಬೇರೆ–ಎಂದು ಪ್ರತಿಪಾದಿಸುವವರು ಹೇಳುವ ವಾದಗಳನ್ನು ಹೀಗೆ ಸಂಗ್ರಹಿಸಬಹುದು :–

(೧) "ಶ್ರೀ ಶಂಕರಭಗವತ್ಪಾದರು ತಮ್ಮ ಭಾಷ್ಯದಲ್ಲಿ ಬಾದರಾಯಣ ರನ್ನು ಪೂಜ್ಯ ಆಚಾರ್ಯರನ್ನಾಗಿಯೂ

("ಉತ್ತರಂ ಭಗವಾನ್ ಬಾದರಾಯಣಾಚಾರ್ಯಃ ಪಠತಿ") ವೇದವ್ಯಾಸರನ್ನು ಸರ್ವಜ್ಞರಾದ ಅವತಾರಪುರುಷರನ್ನಾಗಿಯೂ ("ವೇದ ವ್ಯಾಸಃ ಸರ್ವಜ್ಞೋ ಭಗವಾನ್") ಬೇರೆ ಬೇರೆಯಾಗಿ ಭಾವಿಸಿದ್ದಾರೆ. ಸೂತ್ರಕಾರರನ್ನು ಬಾದರಾಯಣರೆಂದೇ ಕರೆಯುತ್ತಾರೆ. ಮಹಾಭಾರತವನ್ನು ಸ್ಮೃತಿಯೆಂದು ಕರೆಯುತ್ತಾರೆ.

(೨) ಬಾದರಾಯಣರು ಪತಂಜಲಿಯ ಅಭಿಪ್ರಾಯವನ್ನು ಉದಹರಿಸು ತ್ತಾರೆ ಮತ್ತು ಪಾತಂಜಲಯೋಗಸೂತ್ರಕ್ಕೆ ಇರುವ ಭಾಷ್ಯವು ಇವರದೆಂದು ಪ್ರತೀತಿಯಿದೆ. ಪತಂಜಲಿಯ ಕಾಲ ಕ್ರಿ. ಪೂ. ೯ನೆಯ ಮತ್ತು ೧೦ನೆಯ ಶತಮಾನ. (ಪತಂಜಲಿಯ ಕಾಲ ಕ್ರಿ. ಪೂ.೧೪೪ ಎಂದೂ, ಮಹಾಭಾಷ್ಯ ಕಾರರೂ–ಯೋಗಸೂತ್ರಕಾರರೂ ಬೇರೆ-ಬೇರೆ ಎಂದೂ ಕೆಲವರ ಮತ.) ಆ ಸಮಯದಲ್ಲಿ ಅಥವಾ ಅದಕ್ಕಿಂತ ಈಚಿನವರಾದ ಬಾದರಾಯಣರನ್ನು ಕಲಿ-ದ್ವಾಪರಸಂಧಿಯಲ್ಲಿ (ಕ್ರಿ. ಪೂ. ೩೧೦೨) ಮಹಾಭಾರತವನ್ನು ರಚಿಸಿದ, (ಶ್ರೀಕೃಷ್ಣನ ಸಮಕಾಲೀನರಾದ) ಕೃಷ್ಣದ್ವೈಪಾಯನರೇ ಇವರು ಎಂದು ಹೇಳುವುದು ನ್ಯಾಯಕ್ಕೆ ವಿರೋಧ.

(೩) ಬಾದರಾಯಣಸೂತ್ರದಲ್ಲಿ ಜೈನ-ಬೌದ್ಧ-ಚಾರ್ವಾಕಮತಗಳ ಖಂಡನೆಯಿದೆ. ಈ ಮತಗಳ ಪ್ರವರ್ತಕರು ಮಹಾಭಾರತಕಾಲಕ್ಕಿಂತಲೂ ತುಂಬಾ ಈಚಿನವರು. ಆದುದರಿಂದ ಬ್ರಹ್ಮಸೂತ್ರಕಾರರೂ, ಮಹಾಭಾರತ ಕಾರರೂ ಒಬ್ಬರೇ ಆಗಿರಲು ಸಾಧ್ಯವಿಲ್ಲ.

(೪) ಮಹಾವಿದ್ವಾಂಸರಾದ ಶ್ರೀಶಂಕರಾನಂದರು ತಮ್ಮ ಗೀತಾಭಾಷ್ಯದ ಅವತರಣಿಕೆಯಲ್ಲಿ ಕೃಷ್ಣದ್ವೈಪಾಯನರೂ, ವೇದಾಂತಸೂತ್ರಕಾರರೂ ಬೇರೆ-ಬೇರೆ ಎಂದು ಸ್ಪಷ್ಟವಾಗಿ ನಿರೂಪಿಸಿರುತ್ತಾರೆ.

(೫) ಕೃಷ್ಣದ್ವೈಪಾಯನರು ಪರಾಶರರ ಪುತ್ರರು. ಇವರ ಆಶ್ರಮ ಪ್ರಯಾಗದ ಬಳಿ ಇದ್ದಿರಬೇಕು. ಬಾದರಾಯಣರಾದರೋ ಅವರ ಹೆಸರೇ ಹೇಳುವಂತೆ ಹಿಮಾಲಯದ ಬದರಿಕ್ಷೇತ್ರನಿವಾಸಿಗಳು ಅಥವಾ ಬದರಿಕ್ಷೇತ್ರ ನಿವಾಸಿಗಳಾದ 'ಬದರ' ಎಂಬ ಮಹರ್ಷಿಯ ಪುತ್ರರು.

ಮೇಲ್ಕಂಡ ಅಭಿಪ್ರಾಯಗಳನ್ನು ಖಂಡಿಸಿ ಬ್ರಹ್ಮಸೂತ್ರಕಾರರೂ, ವೇದವ್ಯಾಸರೆಂದು ಪ್ರಸಿದ್ಧರಾದ ಮಹಾಭಾರತಕಾರರೂ ಒಬ್ಬರೇ ಎಂದು ಪ್ರತಿಪಾದಿಸುವವರ ವಾದಗಳು ಇವೆಲ್ಲಕ್ಕಿಂತಲೂ ಪ್ರಬಲವಾಗಿವೆ.

(i) ಪ್ರಬಲವಾದ ಯುಕ್ತಿವಿರೋಧವಿಲ್ಲದಿದ್ದರೆ ಸಂಪ್ರದಾಯವನ್ನು ಪ್ರಮಾಣವೆಂದು ಅಂಗೀಕರಿಸಬೇಕು. ಸಂಪ್ರದಾಯದ ಪ್ರಕಾರ ವೇದಾಂತ ಸೂತ್ರಕಾರರೂ, ಮಹಾಭಾರತಕಾರರೂ ಒಬ್ಬರೇ ಆಗಿದ್ದಾರೆ. ಅದನ್ನು ಖಂಡಿಸುವ ಯುಕ್ತಿಗಳು ದುರ್ಬಲವಾಗಿವೆ.

(ii) ಶ್ರೀಶಂಕರಭಗವತ್ಪಾದರು ಸೂತ್ರಕಾರರನ್ನು ಆಚಾರ್ಯರನ್ನಾಗಿಯೂ, ಮಹಾಭಾರತಕಾರರನ್ನು ಭಗವದವತಾರವನ್ನಾಗಿಯೂ ಕರೆದಿದ್ದಾರೆ. ಆದರೆ ಇವರಿಬ್ಬರೂ ಬೇರೆ-ಬೇರೆ ಎಂದು ಹೇಳಿಲ್ಲ. ಒಂದೇ ವ್ಯಕ್ತಿಗೆ ಆಚಾರ್ಯ, ಭಗವದವತಾರ–ಎಂಬ ಎರಡು ವ್ಯವಹಾರವೂ ಬರುವುದು ಅಸಂಭವವಲ್ಲ. ತತ್ತ್ವಬೋಧನೆಯನ್ನು ಉಪಪತ್ತಿಗಳೊಡನೆ ಮಾಡುತ್ತಿರುವಾಗ ಆಚಾರ್ಯ-ಗುರು ಎಂಬುದಾಗಿಯೂ, ಅವರ ಮೂಲಸ್ವರೂಪವನ್ನು ಧ್ಯಾನ-ಸ್ತೋತ್ರಾದಿಗಳಲ್ಲಿ ಭಾವಿಸಿದಾಗ ಭಗವಂತನೆಂಬುದಾಗಿಯೂ ಕರೆಯಬಹುದು. ಶ್ರೀಕೃಷ್ಣನು ಗೀತಾಚಾರ್ಯನೂ ಆಗಿದ್ದಾನೆ. **"ಆದ್ಯಂ ಗುರುಂ ಗುರುಪರಂಪರಯಾಧಿಗಮ್ಯಂ" "ನಾರಾಯಣಾಖಿಲಗುರೋ ಭಗವನ್ನಮಸ್ತೇ" ನಾರಾಯಣಂ ಪದ್ಮಭುವಂ ವಸಿಷ್ಠಂ" "ಲಕ್ಷ್ಮೀನಾಥ**

**ಸಮಾರಂಭಾಂ ನಾಥಯಾಮುನಮಧ್ಯಮಾಂ" "ವಂದೇ ನಿತ್ಯಂ ಗುರುಮಪಿ ಗುರೋರಾಗಮಾರ್ಥಪ್ರಕಾಶಂ"**–ಎಂಬ ಶಾಸ್ತ್ರವಾಕ್ಯಗಳೂ ವೇದಾಂತಮತದ ಎಲ್ಲ ಶಾಖೆಗಳ ಆಚಾರ್ಯಸೂಕ್ತಿಗಳೂ ಅವನನ್ನು ಆಚಾರ್ಯನೆಂದೂ ಕರೆಯುತ್ತವೆ ; ಉಪಾಸ್ಯತಮನಾದ ಪರಮಾತ್ಮನೆಂದೂ ನಿಸ್ಸಂಶಯವಾಗಿ ಭಾವಿಸುತ್ತವೆ. ಪ್ರಸಂಗವಶದಿಂದ ಒಬ್ಬನನ್ನೇ ಆಚಾರ್ಯ ನೆಂದೂ, ಸ್ಮೃತಿಕಾರನೆಂದೂ, ಭಗವದವತಾರವೆಂದೂ ಕರೆಯಬಹುದು.

ಬ್ರಹ್ಮಸೂತ್ರದಲ್ಲಿ ವೇದವ್ಯಾಸರಿಗೆ 'ಬಾದರಾಯಣ' ಎಂಬ ಪದದಿಂದ ವ್ಯವಹಾರವಿರುವುದರಿಂದ ಶ್ರೀಶಂಕರರು ಸೂತ್ರಭಾಷ್ಯದಲ್ಲಿ 'ಬಾದರಾಯಣ' ಎಂದೇ ಅವರನ್ನು ಕುರಿತು ಹೇಳಿದ್ದಾರೆ. ಅವರು ಮಹಾಭಾರತಕಾರರಿಂದ ಬೇರೆಯೆಂದು ಎಲ್ಲಿಯೂ ಹೇಳಿಲ್ಲ.

(iii) ಯೋಗಸೂತ್ರಕಾರರಾದ ಜೈನ-ಬೌದ್ಧ-ಚಾರ್ವಾಕಮತಪ್ರವರ್ತಕ ರಾದ ಆಚಾರ್ಯರು ಈಚಿನವರಾಗಿರಬಹುದಾದರೂ ಅವರ ಅಭಿಪ್ರಾಯ ಗಳೂ ಈಚಿನವೇ ಎಂದು ಹೇಳಲಾಗುವುದಿಲ್ಲ. ಅನಾದಿಕಾಲದಿಂದಲೂ ಪ್ರಕೃತಿಯಲ್ಲಿ ಬರುತ್ತಿರುವ ಅಭಿಪ್ರಾಯಗಳಿಗೆ ಕಾಲಮಾನವನ್ನು ಹೇಳುವುದು ಮೂರ್ಖತನ. ಮೇಲೆ ಹೇಳಿದ ಮಾತುಗಳ ಉಲ್ಲೇಖ ಮಹಾಭಾರತದಲ್ಲೇ ಇರುವುದರಿಂದ ಅವುಗಳ ಪರಿಚಯ ಪಡೆದಿರುವ ಮಹಾಭಾರತಕಾರರೂ, ಬ್ರಹ್ಮಸೂತ್ರಕಾರರೂ ಒಬ್ಬರೇ ಎಂದು ಹೇಳುವುದರಲ್ಲಿ ನ್ಯಾಯವಿರೋಧ ವೇನೂ ಇಲ್ಲ.

(iv) ಶ್ರೀಶಂಕರಾನಂದರಿಗಿಂತಲೂ ಹಿಂದಿನವರಾದ ಭಗವದ್ರಾಮಾ ನುಜಮುನಿಗಳೂ, ಶ್ರೀಆನಂದತೀರ್ಥರೂ ಸೂತ್ರಕಾರ–ಮಹಾಭಾರತ ಕಾರರನ್ನು ಒಂದಾಗಿಯೇ ಸ್ಪಷ್ಟವಾಗಿ ಭಾವಿಸಿ ಪೂಜಿಸಿದ್ದಾರೆ :

**ಪಾರಾಶರ್ಯವಚಸ್ಸುಧಾಮುಪನಿಷದ್ದುಗ್ಧಾಬ್ಧಿಮಧ್ಯೋದ್ಧೃತಾಂ**

[ಶ್ರೀರಾಮಾನುಜರ ಶ್ರೀಭಾಷ್ಯದ ಶ್ಲೋಕ ೨]

**ಸೂತ್ರಕಾರೇಣ ವೇದಾನ್ತನ್ಯಾಯಾಭಿಧಾಯಿನೀ**
**ಸೂತ್ರಾಣ್ಯಭಿಧಾಯ ವೇದೋಪಬ್ರಂಹಣಾಯ ಚ**
**ಭಾರತಸಂಹಿತಾಂ ಕುರ್ವತಾ ಮೋಕ್ಷಧರ್ಮೇ ಜ್ಞಾನಕಾಂಡೇ**
**ಅಭಿಹಿತಮ್**

[ಶ್ರೀಭಾಷ್ಯ-ಉತ್ಪತ್ತ್ಯಸಂಭವಾಧಿಕರಣ]

**ವೇದಮುತ್ಸನ್ನಂ ವ್ಯಂಜಯನ್ ಚತುರ್ಧಾ ವ್ಯಭಜತ್ ।**
**ಚತುರ್ವಿಂಶತಿಧೈಕಶತಧಾ ಸಹಸ್ರಧಾ ದ್ವಾದಶಧಾ ಚ ।**
**ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ ।**

[ಬ್ರಹ್ಮಸೂತ್ರದ ಮಧ್ವಭಾಷ್ಯದ ಅವತರಣಿಕೆ]

(v) ವೇದಾಂತಸೂತ್ರಕಾರರೂ, ವೇದವ್ಯಾಸಕೃಷ್ಣದ್ವೈಪಾಯನರೂ ಒಬ್ಬರೇ. ಅವರು ನಾರಾಯಣನ ಅವತಾರವಾದ ವೇದವ್ಯಾಸರು ಎಂಬುದಾಗಿ ಸ್ಕಾಂದಪುರಾಣವು ಸ್ಪಷ್ಟವಾಗಿಯೇ ಹೇಳುತ್ತದೆ :

**ಉತ್ಸನ್ನಾನ್ಭಗವಾನ್ವೇದಾನುಜ್ಜಹಾರ ಹರಿಃ ಸ್ವಯಮ್ ।**
**ಚತುರ್ಧಾ ವ್ಯಭಜತ್ತಾಂಶ್ಚ ಚತುರ್ವಿಂಶತಿಧಾ ಪುನಃ ॥**
**ಶತಧಾ ಚೈಕಧಾ ಚೈವ ತಥೈವ ಚ ಸಹಸ್ರಧಾ ।**
**ಕೃಷ್ಣೋ ದ್ವಾದಶಧಾ ಚೈವ ಪುನಸ್ತಸ್ಯಾರ್ಥವಿತ್ತಯೇ ।**
**ಚಕಾರ ಬ್ರಹ್ಮಸೂತ್ರಾಣಿ ಯೇಷಾಂ ಸೂತ್ರತ್ವಮಂಜಸಾ ॥**

(vi) ಶ್ರೀಶಂಕರಾಚಾರ್ಯರು ವೃದ್ಧಬ್ರಾಹ್ಮಣರೂಪದಲ್ಲಿ ಬಂದ ವೇದಾಂತಸೂತ್ರಕಾರರಾದ ವೇದವ್ಯಾಸರ ಸಂದರ್ಶನವನ್ನು ಪಡೆದು–'ತದನ್ತರಪ್ರತಿಪತ್ತೌ ರಂಹತಿ'–ಎಂಬ ಸೂತ್ರದ ಅರ್ಥವನ್ನು ವಿವರಿಸಿ ಅವರನ್ನು ಸಂತೋಷಪಡಿಸಿದಾಗ–ವ್ಯಾಸರು ಅವರಿಗೆ ನಿಜರೂಪವನ್ನು ತೋರಿ, ಅವರ ಆಯುಸ್ಸು ವೃದ್ಧಿಹೊಂದುವಂತೆ ಆಶೀರ್ವದಿಸಿದರೆಂದು ಶ್ರೀಶಂಕರರ ಜೀವನಕಥೆಯಲ್ಲಿ ಉಲ್ಲೇಖವಿದೆ.

(vii) ವೇದವ್ಯಾಸರ ಆಶ್ರಮವು ಹಿಮಾಲಯದಲ್ಲಿ ಉಂಟು–ಎಂಬುದಕ್ಕೆ 'ವ್ಯಾಸಗುಹಾ' ಎಂದು ಪ್ರಸಿದ್ಧವಾಗಿರುವ ಹಿಮಾಲಯದ ಪ್ರದೇಶವು ಆಧಾರವಾಗಿದೆ.

(viii) ಭಗವದ್ಗೀತೆಯ ೧೩ನೆಯ ಅಧ್ಯಾಯದಲ್ಲಿ

**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ।**

ಎಂಬಲ್ಲಿ ವೇದಾಂತಸೂತ್ರಗಳು (ಶಾರೀರಕಮೀಮಾಂಸಾಸೂತ್ರಗಳು) ಭಗವದ್ಗೀತೆಗಿಂತಲೂ ಹಿಂದೆ ಇದ್ದುವು ಎಂದು ಸ್ಪಷ್ಟವಾಗಿಯೇ ಹೇಳಲ್ಪಟ್ಟಿದೆ. ಇವುಗಳ ಕರ್ತೃ ವೇದವ್ಯಾಸರೇ ಆಗಿರಬೇಕು. ಬ್ರಹ್ಮಸೂತ್ರವನ್ನು ರಚಿಸಿದ ಬೇರೆ ಯಾವ ಆಚಾರ್ಯರ ಹೆಸರನ್ನೂ ವೇದಾಂತದ ಮತತ್ರಯಾಚಾರ್ಯರಲ್ಲಿ ಯಾರೂ ಎಲ್ಲೂ ಹೇಳಿರುವುದಿಲ್ಲ.

ಆದುದರಿಂದ ಈ ಪ್ರಬಲಕಾರಣಗಳಿಂದ ವೇದಾಂತಸೂತ್ರಕಾರರೂ, ಮಹಾಭಾರತಕಾರರೂ–ಶ್ರೀಕೃಷ್ಣದ್ವೈಪಾಯನವ್ಯಾಸರೇ ಎಂಬುದು ನಮ್ಮ ಅಭಿಪ್ರಾಯ.

## ಆತ್ಮಕಥಾಕಾರನ ಸತ್ಯಪ್ರಿಯತೆ–ಧೈರ್ಯ

ವೇದವ್ಯಾಸರು ಮಹಾಭಾರತಕಾರರು ಮಾತ್ರವಲ್ಲದೇ–ಮಹಾಭಾರತದ ಒಂದು ಪಾತ್ರವೂ ಆಗಿದ್ದಾರೆ. ಆದುದರಿಂದ ಮಹಾಭಾರತವು ಸ್ವಲ್ಪ ಮಟ್ಟಿಗೆ ವ್ಯಾಸರ ಆತ್ಮಕಥೆಯೂ ಆಗಿದೆ. ಆತ್ಮಕಥೆಯನ್ನು ಬರೆಯುವವನಿಗೆ ಇರಬೇಕಾದ ಸತ್ಯಪ್ರಿಯತೆ–ನಿರ್ಭಯತೆ ಇವರಲ್ಲಿ ಎದ್ದುಕಾಣುತ್ತದೆ. ತನ್ನನ್ನು ಕನ್ಯೆಯ ಪುತ್ರ, ದಾಶಕನ್ಯೆಯ ಪುತ್ರ–ಎಂಬುದಾಗಿಯೇ ಅವರು ಹೇಳಿಕೊಂಡಿದ್ದಾರೆ. ಪಾಮರರು ತಮ್ಮನ್ನು ಈ ಕಾರಣದಿಂದ ಅವಹೇಳನ ಮಾಡಬಹುದೆಂಬ ಭಯ ಅವರಿಗೆ ಕಿಂಚಿತ್ತೂ ಇಲ್ಲ. ಬ್ರಹ್ಮಜ್ಞಾನಿಗಳಾದ ಮಹರ್ಷಿಗಳಲ್ಲಿ ಶ್ರೇಷ್ಠರೂ ಭಗವದವತಾರಪುರುಷರೂ ಆದ ಈ ಮಹಾನುಭಾವರಿಗೆ ಯಾವ ಪಾಪಲೇಪವೂ ಇಲ್ಲ. ಸತ್ಯವನ್ನು ಮರೆಮಾಚದೇ ಹೇಳುವ ಇವರ ಧೈರ್ಯವು ಎಲ್ಲರಿಗೂ ಆದರ್ಶವಾದುದು.

## ರಚನಾಕಾಲ, ಪ್ರಾಮಾಣಿಕ–ಪ್ರಕ್ಷಿಪ್ತಭಾಗಗಳು, ಕಥಾವಸ್ತುವಿಕಾಸ

ಮಹಾಭಾರತದ ರಚನಾಕಾಲ ಮತ್ತು ಪ್ರಾಮಾಣಿಕ–ಪ್ರಕ್ಷಿಪ್ತಭಾಗಗಳ ವಿಷಯದಲ್ಲಿ ಆಧುನಿಕರ ಅಭಿಪ್ರಾಯ ಹೀಗಿದೆ :

ಮಹಾಭಾರತದ ರಚನೆಗೆ ಸುಮಾರು 8 ರಿಂದ 9 ಶತಮಾನಗಳಷ್ಟು ಕಾಲ ಹಿಡಿದಿರಬೇಕು. ಗ್ರಂಥವನ್ನು ಆಳವಾಗಿ ಪರಿಶೀಲಿಸಿದರೆ ಅದರಲ್ಲಿ ಮುಬ್ಬಗೆಯ ವಿಭಾಗ ಮೂರು ಕ್ಷೇತ್ರಗಳಲ್ಲಿ ಕಂಡುಬರುತ್ತದೆ.

(i) ಶ್ಲೋಕಗಳ ಸಂಖ್ಯೆಯ ವಿಷಯದಲ್ಲಿ 8,800, 24,000, 1,00,000 ಎಂದು ಮೂರು ಹೇಳಿಕೆಗಳಿವೆ :

**ಅಷ್ಟೌ ಶ್ಲೋಕಸಹಸ್ರಾಣಿ ಅಷ್ಟೌ ಶ್ಲೋಕಶತಾನಿ ಚ ।**
**ಅಹಂ ವೇದ್ಮಿ ಶುಕೋ ವೇತ್ತಿ ಸಂಜಯೋ ವೇತ್ತಿ ವಾ ನ ವಾ ॥**

**ಚತುರ್ವಿಂಶತಿಸಾಹಸ್ರೀಂ ಚಕ್ರೇ ಭಾರತಸಂಹಿತಾಮ್ ।**
**ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ ।**

**ಇದಂ ಶತಸಹಸ್ರಂ ತು ಶ್ಲೋಕಾನಾಂ ಪುಣ್ಯಕರ್ಮಣಾಮ್ ।**
**ಉಪಾಖ್ಯಾನೈಃ ಸಹ ಜ್ಞೇಯಂ ಆದ್ಯಂ ಭಾರತಮುತ್ತಮಮ್ ॥**

(ii) ಗ್ರಂಥಕ್ಕೆ (೧) ಕೃಷ್ಣ-ಪಾಂಡವಕಥಾ (೨) ಧರ್ಮಭಕ್ತಿದೇವ-ತಾಂತರಕಥಾ (೩) ವಿಷ್ಣುವೈಭವಕಥಾ–ಎಂಬ ಮೂರು ಅರ್ಥಗಳು ಎಂದು ಶ್ರೀ ಮಧ್ವರು ಹೇಳುತ್ತಾರೆ.

**ಮನ್ವಾದಿ ಭಾರತಂ ಕೇಚಿತ್ ಆಸ್ತಿಕಾದಿ ತಥಾಪರೇ ।**
**ತಥೋಪರಿಚರಾದ್ಯನ್ಯೇ ವಿಪ್ರಾಸ್ಸಮ್ಯಗಧೀಯತೇ ॥**

ಗ್ರಂಥಕ್ಕೆ ಮೂರು ಪ್ರಾರಂಭಶ್ಲೋಕಗಳಿವೆ.

ಕಥೆಯನ್ನು ಉಪದೇಶಮಾಡಿದವರು ಮತ್ತು ಉಪದೇಶಪಡೆದವರು ಮೂರು ಮಂದಿಯೆಂಬ ಹೇಳಿಕೆಯಿದೆ :

(೧) ವ್ಯಾಸರು ವೈಶಂಪಾಯನರಿಗೂ (೨) ವೈಶಂಪಾಯನರು ಜನಮೇಜಯನಿಗೂ (೩) ಸೂತಪುರಾಣಿಕರು ನೈಮಿಷಾರಣ್ಯದಲ್ಲಿ ಸೇರಿದ ಋಷಿಗಳಿಗೂ ಬೋಧಿಸಿದರು.

(iii) ಜಯ, ಭಾರತ ಮತ್ತು ಮಹಾಭಾರತ–ಎಂಬ ಮೂರು ಹೆಸರುಗಳಿಂದ ಕರೆಯಲ್ಪಟ್ಟಿದೆ.

ಆದುದರಿಂದ ಗ್ರಂಥದ ವಿಕಾಸದಲ್ಲಿ ಮೂರು ಘಟ್ಟಗಳಿವೆ. ಮೂರರ ಕಾಲ–ಸನ್ನಿವೇಶ–ವಿಷಯಗಳನ್ನೂ ಬೇರೆ ಬೇರೆಯಾಗಿಯೇ ಹೇಳಬೇಕು.

ಕಥೆಯ ಐತಿಹಾಸಿಕಬೀಜವು ಕ್ರಿ. ಪೂ. 10ನೆಯ ಶತಮಾನಕ್ಕಿಂತಲೂ ಹಿಂದಿನದಾಗಿರಬೇಕು. ಏಕೆಂದರೆ : ಯಜುರ್ವೇದದಲ್ಲಿ ಕುರು ಮತ್ತು ಪಾಂಚಾಲರಾಜ್ಯಗಳನ್ನು ಸಂಯುಕ್ತವಾಗಿ ಹೇಳಿದೆ. ಮೊದಲು ಬೇರೆ-ಬೇರೆ ಬಣಕ್ಕೆ ಸೇರಿದ್ದ ನೆರೆಯ ರಾಜ್ಯಗಳಾಗಿದ್ದು ಕೊನೆಗೆ ಒಂದಾಗಿ ಕಲೆತ ರಾಜ್ಯಗಳಿವು. ಇವುಗಳ ಸಂಘರ್ಷದ ಬಗ್ಗೆ ಪ್ರಚಲಿತವಾಗಿದ್ದ ಹಲ-ಕೆಲವು ಹಾಡುಗಳನ್ನು ಸೇರಿಸಿ ಸಂಕ್ಷಿಪ್ತವಾದ ವೀರಗಾಥಾಕಾವ್ಯವು ಮೊದಲು ರಚಿತವಾಗಿರಬೇಕು.

ಮೊದಲನೆಯ ಘಟ್ಟದಲ್ಲಿ ಬ್ರಹ್ಮನಿಗೆ ಮಾನ್ಯತೆಯಿದೆ. ವೇದಗಳಲ್ಲಿ ಬ್ರಹ್ಮನಿಗೆ ಉನ್ನತಸ್ಥಾನವಿಲ್ಲ. ಬುದ್ಧನ ಕಾಲದಲ್ಲಿ ಬ್ರಹ್ಮನಿಗೆ ವಿಶೇಷ ಪೂಜ್ಯತೆಯಿತ್ತೆಂದು ಬೌದ್ಧಗ್ರಂಥಗಳಿಂದ ತಿಳಿದುಬರುತ್ತದೆ. ಆದುದರಿಂದ

ಇದು ವೇದಗಳ ಅನಂತರದ ಮತ್ತು ಬುದ್ಧನಿಗೆ ಹಿಂದಿನ ಕಾಲ–ಸುಮಾರು ಕ್ರಿ. ಪೂ. 5-6ನೆಯ ಶತಮಾನಗಳ ಕಾಲ. ಈ ಸಮಯದಲ್ಲಿ ಗ್ರಂಥದ ಶ್ಲೋಕಸಂಖ್ಯೆ 8,800 ಆಗಿರಬೇಕು.

ಎರಡನೆಯ ಘಟ್ಟದ ಕಾಲ-ಸುಮಾರು ಕ್ರಿ. ಪೂ.300., ಈ ಸಮಯ ದಲ್ಲಿ ಮಹಾಭಾರತದಲ್ಲಿ ಶ್ರೀಕೃಷ್ಣನು ಭಗವಂತನ ಅವತಾರವೆಂದು ಮನ್ನಣೆ ಪಡೆದಿದ್ದನು. ಕ್ರಿ.ಪೂ.೩೦೦ರ ವೇಳೆಗೆ ಭಾರತಕ್ಕೆ ಬಂದಿದ್ದ ಮೆಗಾಸ್ತನೀಸನು ಭಾರತೀಯರು ಶ್ರೀಕೃಷ್ಣನನ್ನು ಪರದೇವತೆಯನ್ನಾಗಿ ಪೂಜಿಸುತ್ತಿದ್ದರೆಂದು ಹೇಳುತ್ತಾನೆ. ಯವನರ ಮತ್ತು ಬೌದ್ಧದೇವಾಲಯಗಳ ವಿಷಯ ಈ ಸಮಯದ ಗ್ರಂಥದಲ್ಲಿ ಬಂದಿದೆ. ಆದುದರಿಂದ ಇದು ಬುದ್ಧ, ಅಲೆಕ್ಸಾಂಡರನ ದಂಡಯಾತ್ರೆ–ಇವುಗಳಿಗಿಂತಲೂ ಈಚಿನ ಮತ್ತು ಮೆಗಾಸ್ತನೀಸನಿಗೆ ಹಿಂದಿನ ಕಾಲ. ಈ ಸಮಯದಲ್ಲಿ ಗ್ರಂಥದ ಶ್ಲೋಕಸಂಖ್ಯೆ 24,000ಕ್ಕೆ ಏರಿತ್ತು.

ಮೂರನೆಯ ಘಟ್ಟದಲ್ಲಿ ಮಹಾಭಾರತವು ಸ್ಮೃತಿ-ದರ್ಶನಗ್ರಂಥಗಳ ರೂಪ ತಾಳಿರಬೇಕು. ಕ್ರಿ. ಶ. 5ನೆಯ ಶತಮಾನದ ಶಿಲಾಶಾಸನದಲ್ಲಿ ಪವಿತ್ರ ಸ್ಮೃತಿಗ್ರಂಥವಾದ ಮಹಾಭಾರತದ ಪ್ರವಚನಕಾರ್ಯಕ್ಕಾಗಿ ಭೂಮಿಯನ್ನು ದತ್ತಿಕೊಟ್ಟಿದ್ದರೆಂದು ಉಲ್ಲೇಖವಿದೆ. ಆದುದರಿಂದ ಇದಕ್ಕೆ ಹಿಂದೆಯೇ ಸುಮಾರು ಕ್ರಿ. ಶ. 300ರ ವೇಳೆಗೆ ಇದು ಈಗಿನ ರೂಪವನ್ನು ತಾಳಿ ಒಂದು ಲಕ್ಷಶ್ಲೋಕದ ಗ್ರಂಥವಾಗಿತ್ತು. ಈ ಮಹಾಕಾಲದಲ್ಲಿ ಮಹಾಭಾರತಕ್ಕೆ ಮಧ್ಯೇ ಮಧ್ಯೇ ಅನೇಕ ಪ್ರಕ್ಷಿಪ್ತಶ್ಲೋಕಗಳು ಸೇರಿಕೊಂಡಿವೆ. ವ್ಯಾಸರು 60 ಲಕ್ಷ ಶ್ಲೋಕಸಂಖ್ಯೆಯುಳ್ಳ ಮತ್ತೊಂದು ಭಾರತವನ್ನು ರಚಿಸಿದರು. ಇದರಲ್ಲಿ 30 ಲಕ್ಷ ಶ್ಲೋಕಗಳು ದೇವಲೋಕದಲ್ಲೂ, 15 ಲಕ್ಷ ಶ್ಲೋಕಗಳು ಪಿತೃಲೋಕದಲ್ಲೂ, 14 ಲಕ್ಷ ಶ್ಲೋಕಗಳು ಗಂಧರ್ವಲೋಕದಲ್ಲೂ ಮತ್ತು 1 ಲಕ್ಷ ಶ್ಲೋಕಗಳು ಮನುಷ್ಯಲೋಕದಲ್ಲೂ ಪ್ರಕಾಶಿತವಾಯಿತು–ಎಂಬ ಮಹಾಭಾರತದ ಹೇಳಿಕೆ ವಿಶ್ವಾಸಕ್ಕೆ ಯೋಗ್ಯವಲ್ಲ ಎಂದೂ ಆಧುನಿಕರು ಹೇಳುತ್ತಾರೆ.

ಸಾಮಾನ್ಯವಾಗಿ ಆಧುನಿಕರು ಹೇಳುವ ಅಭಿಪ್ರಾಯವು ಇದಾದರೂ ಇನ್ನೂ ಕೆಲವು ವಿಶೇಷವಾದ ಅಭಿಪ್ರಾಯಗಳನ್ನು ಹೇಳುವವರೂ ಉಂಟು. ಉದಾಹರಣೆಗೆ :–

(೧) ಅಶೋಕನ ಕಾಲದಲ್ಲಿ ಒಬ್ಬ ಬೌದ್ಧಕವಿಯು ಹಿಂದಿನ ಕಾಲದ ಕಥೆಗಳನ್ನು ಸೇರಿಸಿ ಮೂಲಭಾರತಕಥೆಯನ್ನು ರಚಿಸಿದನು. ಅದರಲ್ಲಿ

ದುರ್ಯೋಧನನೇ ಉದಾತ್ತನಾಯಕ. ಅಶೋಕನನ್ನು ಪ್ರತಿನಿಧಿಸುವ ಮಹಾತ್ಮ. ಆದರೆ ಕ್ರಿ. ಶ. 800ರ ವೇಳೆಗೆ ವಿಷ್ಣುಭಕ್ತರಾದ ಬ್ರಾಹ್ಮಣಕವಿಗಳು ಅದನ್ನು ಪರಿಷ್ಕರಿಸಿ, ಅದು ಪಾಂಡವರ ಪರವಾಗಿಯೂ, ವಿಷ್ಣುಭಕ್ತಿ ಪ್ರಧಾನವಾಗಿಯೂ ಆಗುವಂತೆ ಮಾಡಿದರು–ಎಂದು ಹೋಲ್ಟ್ಸ್‌ಮನ್ ಹೇಳುತ್ತಾರೆ.

(೨) ಯೇಸುಕ್ರಿಸ್ತನ ಕಾಲವಾದ ಮೇಲೆ ಅವನ ಕಥೆಯನ್ನು ಅನುಕರಿಸಿ ಶ್ರೀಕೃಷ್ಣನನ್ನು ಪೂಜಿಸುವ ಕಥೆಯು ಮಹಾಭಾರತದಲ್ಲಿ ಹೆಣೆಯಲ್ಪಟ್ಟಿತು ಎಂದು ಹೇಳಿರುವವರೂ ಉಂಟು.

(೩) ಗ್ರಂಥವು ಮೊದಲು ಗದ್ಯರೂಪವಾಗಿತ್ತೆಂದು ಕೆಲವರೂ, ಪ್ರಾಕೃತಭಾಷೆಯಲ್ಲಿದ್ದು ಅನಂತರ ಸಂಸ್ಕೃತಕ್ಕೆ ಭಾಷಾಂತರಿಸಲ್ಪಟ್ಟಿತೆಂದು ಕೆಲವರೂ ಹೇಳಿರುತ್ತಾರೆ.

(೪) ಇಡೀ ಗ್ರಂಥವು ಒಬ್ಬನೇ ಕವಿಯ ರಚನೆ. ಮೊದಲಿನಿಂದಲೂ ಉಪದೇಶಾತ್ಮಕವಾದ ಸ್ಮೃತಿಗ್ರಂಥವೂ ಆಗಿತ್ತು. ಬುದ್ಧನ ಕಾಲಕ್ಕೆ ಮೊದಲೇ ರಚಿತವಾದ, ವಿಶೇಷವಾಗಿ ಕ್ಷತ್ರಿಯರಿಗಾಗಿ ರಚಿತವಾದ ಭಾಗವತಧರ್ಮದ ಗ್ರಂಥ–ಎಂದು ರೆವರೆಂಡ್ ದಾಲ್‌ಮನ್‌ರವರು ಹೇಳುತ್ತಾರೆ.

ಮಹಾಭಾರತಗ್ರಂಥವನ್ನು ಅಧ್ಯಯನಮಾಡಿ, ಮೇಲೆ ಹೇಳಿದ ಅಭಿ ಪ್ರಾಯಗಳನ್ನು ಪೂರ್ವಾಗ್ರಹವಿಲ್ಲದೇ ಪರಿಶೀಲಿಸಿದಾಗ ನಮಗೆ ತೋರುವ ಅಭಿಪ್ರಾಯವೇನೆಂದರೆ : ಹಿಂದೆ ಹೇಳಿರುವಂತೆ ಯುಕ್ತಿಗೆ ವಿರೋಧವಿಲ್ಲ ದಿದ್ದರೆ ಆ ವಿಷಯದಲ್ಲಿ ಸಂಪ್ರದಾಯವನ್ನು ಪ್ರಮಾಣವೆಂದು ಅಂಗೀಕರಿಸ ಬಹುದು. ಮಹಾಕಾಲಾವಕಾಶದ ಮಧ್ಯದಲ್ಲಿ ಮಹಾಭಾರತದಲ್ಲಿ ಅನೇಕ ಪ್ರಕ್ಷಿಪ್ತಶ್ಲೋಕಗಳು ಸೇರಿಕೊಂಡಿವೆಯೆಂಬುದು ನಿಜವಾದರೂ ನಮಗೆ ಬೇಡವಾದುದನ್ನೆಲ್ಲಾ ಪ್ರಕ್ಷಿಪ್ತವೆಂದು ತೆಗೆದುಹಾಕಬಾರದು. ಉದಾಹರಣೆಗೆ : ವೈಷ್ಣವಧರ್ಮವು ತುಂಬಾ ಈಚಿನದು–ಎಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿ ಕೂರಿಸಿಕೊಂಡು ಆ ಧರ್ಮದ ವಿಷಯ ಮಹಾಭಾರತದಲ್ಲಿ ಕಂಡುಬಂದರೆ ಅದನ್ನು ಕಾಲಾನಂತರದ ಕೃತಿ, ಮೂಲಭಾರತದಲ್ಲಿಲ್ಲ–ಎನ್ನುವುದು ; ನೀತಿಯುತಭಾವನೆ ಹಿಂದೂಗಳಿಗೆ ಕ್ರೈಸ್ತಧರ್ಮದ ಪ್ರಭಾವದಿಂದ ಉಂಟಾಯಿತು–ಎಂಬ ಪೂರ್ವಾಗ್ರಹವನ್ನು ತುಂಬಿಕೊಂಡು–'ಮೂಲ ಭಾರತವು ಕೇವಲ ವೀರಗಾಥಾಕಾವ್ಯವಾಗಿತ್ತು. ಅದಕ್ಕೆ ನೀತಿ, ಉಪದೇಶಗಳ

ಭಾಗ ಅನಂತರದ ಕಾಲದಲ್ಲಿ ಸೇರಿಸಲ್ಪಟ್ಟಿತು'–ಎನ್ನುವುದು ಇತ್ಯಾದಿ. ಯಾವುದು ತತ್ತ್ವಕ್ಕೆ ವಿರೋಧವಾಗಿದೆಯೋ, ಕಥಾವಸ್ತು–ವಾಕ್ಯರಚನೆ ಮುಂತಾದುವುದರಲ್ಲಿ ಪೂರ್ವಾಪರವಿರೋಧವಾಗಿದೆಯೋ, ಯುಕ್ತಿ ವಿರೋಧವಾಗಿದೆಯೋ–ಅದನ್ನು ಪ್ರಕ್ಷಿಪ್ತಭಾಗವೆಂದು ಪರಿಗಣಿಸಬೇಕು. ಈ ನೀತಿಯನ್ನು ಭಾರತೀಯ ಸಂಸ್ಕೃತಿ-ಸಂಪ್ರದಾಯಗಳ ಹಿನ್ನೆಲೆಯಲ್ಲಿ ಇಟ್ಟು ಕೊಂಡು ನೋಡುವುದಾದರೆ–ಮಹಾಭಾರತವು ಮೊದಲಿನಿಂದಲೂ ಧರ್ಮ ಪ್ರತಿಪಾದಕವಾದ ಕಾವ್ಯವಾಗಿತ್ತು. 'ಇದು ಹೀಗಾಗಿರಲಿಲ್ಲ'–ಎನ್ನುವುದಕ್ಕೆ ಯಾವ ಆಧಾರವೂ ಇಲ್ಲ. ಧರ್ಮವನ್ನು ಉಪದೇಶಿಸುವ ಕಥೆಗಳು ವೇದೋ ಪನಿಷತ್ತುಗಳಲ್ಲಿಯೂ ಕಂಡುಬರುತ್ತವೆ. ಮೂಲಮಹಾಭಾರತವು ಈ ನೀತಿ ಯನ್ನು ಪ್ರಾರಂಭದಿಂದಲೇ ವಿಸ್ತರಿಸಿಕೊಂಡಿದ್ದರೆ ಅಚ್ಚರಿಯೇನಿಲ್ಲ.

ಬ್ರಹ್ಮನಿಗಾಗಲೀ, ವಿಷ್ಣುವಿಗಾಗಲೀ, ರುದ್ರನಿಗಾಗಲೀ–ಪರದೇವತೆ ಯೆಂದು ಮಾನ್ಯತೆ ಕೊಡುವಿಕೆ ; ಧರ್ಮದ ನಿರೂಪಣೆ–ಇವೆಲ್ಲವೂ ಏಕಕಾಲದಲ್ಲಿ ಒಂದೇ ದೇಶದಲ್ಲಿ ರೂಢಿಯಲ್ಲಿರಬಹುದಾದ ವಿಷಯ. 'ಇವು ಬೇರೆ ಬೇರೆ ಕಾಲಕ್ಕೆ ಸೇರಿದುವುಗಳು' ಎನ್ನುವುದಕ್ಕೆ ಪ್ರಮಾಣವಿಲ್ಲ. ಒಬ್ಬನೇ ವ್ಯಕ್ತಿಯು ಈ ಮೂವರು ದೇವರನ್ನೂ ಪೂಜಿಸಬಹುದು. ಆದುದರಿಂದ ಈ ದೇವತಾಪೂಜೆಯ ಅಥವಾ ಧರ್ಮೋಪದೇಶದ ಆಧಾರದ ಮೇಲೆ ಮಹಾಭಾರತರಚನಾಕಾಲದ ಘಟ್ಟಗಳನ್ನು ಕಲ್ಪಿಸುವುದು ಸರಿಯಲ್ಲ.

ಮಹಾಭಾರತದಲ್ಲಿ ಈಗ ಕಂಡುಬರುವ ಎಲ್ಲ ಶ್ಲೋಕಗಳೂ ಸಾಕ್ಷಾ ತ್ತಾಗಿ ವ್ಯಾಸಕೃತವೆಂದು ನಾವು ವೀರಪ್ರತಿಜ್ಞೆ ಮಾಡಬೇಕಾಗಿಲ್ಲ. ಗುರುಗಳ ಆಶಯವನ್ನನುಸರಿಸಿ ಶಿಷ್ಯರು ಕೆಲವು ಶ್ಲೋಕಗಳನ್ನು ರಚಿಸಿ ಸೇರಿಸಿದ್ದರೂ ಅದರಿಂದ ವ್ಯಾಸರ ಹಿರಿಮೆಗೆ ಕುಂದಿಲ್ಲ. ವ್ಯಾಸರ ಚರಣವ್ಯೂಹಕ್ಕೆ ಸೇರಿದ ಶಿಷ್ಯರ ಒಳ್ಳೆಯ ಕೃತಿಗಳನ್ನು ವ್ಯಾಸಕೃತವೆಂದೇ ಹೇಳಬಹುದು. ಚಂದ್ರನಲ್ಲಿ ತೋರುವ ಪ್ರಕಾಶ ನಿಜವಾಗಿಯೂ ಸೂರ್ಯನದೇ ಅಲ್ಲವೇ? ಶ್ಲೋಕಗಳ ಸಂಖ್ಯೆಯ ವಿಷಯದಲ್ಲಿ ಹೇಳಿರುವ ಮೊದಲನೆಯ ವಚನವು (8,800 ಶ್ಲೋಕಗಳು ಎಂಬುದು) ವ್ಯಾಸರು ರಚಿಸಿದ ಕೂಟಶ್ಲೋಕಗಳಿಗೂ, ಎರಡ ನೆಯ ವಚನವು (24,000 ಶ್ಲೋಕಗಳು ಎಂಬ ಹೇಳಿಕೆ) ಅವರೇ ರಚಿಸಿದ ಧರ್ಮಪ್ರತಿಪಾದಕವಾದ ಕಥೆಗೂ ಅನ್ವಯಿಸುತ್ತದೆಯೆಂಬುದು ನಮ್ಮ ಅಭಿ ಪ್ರಾಯ. ಶ್ರೀಮದ್ರಾಮಾಯಣದ ಶ್ಲೋಕಸಂಖ್ಯೆಯೂ ಮೂಲತಃ 24,000.

ವೇದದ ಸಾರವಾದ ಗಾಯತ್ರಿಯ 24 ಅಕ್ಷರಗಳ ಅರ್ಥವುಳ್ಳ ಈ ಶ್ಲೋಕ ಸಂಖ್ಯೆಯು ವೇದದ ಅವತಾರವೆಂದು ಪ್ರಸಿದ್ಧವಾಗಿರುವ ರಾಮಾಯಣ-ಮಹಾಭಾರತ ಎರಡಕ್ಕೂ ಹೊಂದಿಕೊಳ್ಳುತ್ತದೆ. ಒಂದು ಲಕ್ಷಶ್ಲೋಕಗಳಿಗೆ ಅವುಗಳ ವಿಸ್ತಾರವನ್ನು ವೇದವ್ಯಾಸರಾಗಲೀ, ಅವರ ಚರಣವ್ಯೂಹಕ್ಕೆ ಸೇರಿದ ಶಿಷ್ಯರಾಗಲೀ ಮಾಡಿರಬಹುದು. ದೈವಾನುಗ್ರಹಪೂರಿತರಾದ ಪ್ರತಿಭಾವಂತ ರಾದ ಒಬ್ಬನೇ ವ್ಯಕ್ತಿಗೆ ಅಷ್ಟು ದೊಡ್ಡ ಗ್ರಂಥವನ್ನು ರಚಿಸುವುದೂ ಅಸಾಧ್ಯವೇನೂ ಅಲ್ಲ. ಒಬ್ಬರೇ ವ್ಯಾಸರು 60 ಲಕ್ಷಶ್ಲೋಕಗಳನ್ನು ರಚಿಸಿ ದೇವಲೋಕ–ಮುಂತಾದುವುಗಳಲ್ಲಿ ಅವುಗಳ ಪ್ರಚಾರಮಾಡಿಸಿದರೆಂಬ ಹೇಳಿಕೆಯೂ ತತ್ತ್ವಾರ್ಥಪೂರಿತವಾಗಿದೆ. ವೇದದ ವಿಸ್ತಾರವನ್ನು ಅರಿಯುವ ವಿಷಯದಲ್ಲಿ ದೇವತೆಗಳು, ಪಿತೃಗಳು, ಗಂಧರ್ವರು ಮತ್ತು ಮನುಷ್ಯರು ಇವರಿಗಿರುವ ಶಕ್ತಿಭೇದವನ್ನು ಇದು ಸೂಚಿಸುತ್ತದೆ–ಎಂದು ನಾವು ತಿಳಿಯು ತ್ತೇವೆ. 'ಒಟ್ಟಿನಲ್ಲಿ ಮಹಾಭಾರತದ ಬಹುಭಾಗವು ಒಬ್ಬನೇ ಋಷಿಯ ರಚನೆ. ಅದು ಮೊದಲಿನಿಂದಲೂ ಕಾವ್ಯ, ಧರ್ಮಗ್ರಂಥ, ಭಕ್ತಿಶಾಸ್ತ್ರ–ಎಲ್ಲವೂ ಆಗಿತ್ತು' ಎಂಬ ಮತವನ್ನು ನಾವು ಅನುಮೋದಿಸುತ್ತೇವೆ.

'ಮಹಾಭಾರತವು ಮೊದಲು (ಅಶೋಕನ ಕಾಲದಲ್ಲಿ) ದುರ್ಯೋಧನನ ಪರವಾದ ಬೌದ್ಧಗ್ರಂಥವಾಗಿತ್ತು. ಆಮೇಲೆ ಕ್ರಿ. ಶ. 800ರ ವೇಳೆಗೆ ಬ್ರಾಹ್ಮಣರು ಅದನ್ನು ಪಾಂಡವಪರವಾಗಿಯೂ, ವಿಷ್ಣುಭಕ್ತಿಪರವಾಗಿಯೂ ಬದಲಾಯಿಸಿದರು'–ಎಂಬ ಮತವು ಪಾಮರರಮಣೀಯ. ಅದು ತಮ್ಮ ಗ್ರಂಥಗಳಲ್ಲಿ ಸೇರಿದೆ–ಎಂದು ಯಾವ ಬೌದ್ಧಗ್ರಂಥದಲ್ಲಿಯೂ ಉಲ್ಲೇಖ ವಿಲ್ಲ. ಬೌದ್ಧಧರ್ಮದ ಎಲ್ಲ ಕುರುಹುಗಳನ್ನೂ ಪೂರ್ಣವಾಗಿ ಅಳಿಸಿ ಅದನ್ನು ಬ್ರಾಹ್ಮಣಧರ್ಮದ ಗ್ರಂಥವನ್ನಾಗಿ ಅಷ್ಟು ಬೇಗನೇ ಪರಿವರ್ತಿಸಲು ಸಂಪ್ರದಾಯನಿಷ್ಠವಾದ ಜನಾಂಗವುಳ್ಳ ನಮ್ಮ ದೇಶದಲ್ಲಿ ಸಾಧ್ಯವಿಲ್ಲ.

ಕ್ರೈಸ್ತಮತದ ಪ್ರಭಾವದಿಂದ ಶ್ರೀಕೃಷ್ಣನ ಪೂಜೆಯು ಪ್ರಾರಂಭವಾಯಿತು ಎಂಬ ಮತವೂ ಹಾಸ್ಯಾಸ್ಪದ. ಕ್ರಿ. ಪೂ. 300ರಲ್ಲಿ ನಮ್ಮ ದೇಶಕ್ಕೆ ಬಂದಿದ್ದ ಮೆಗಾಸ್ತನೀಸನು–'ಶ್ರೀಕೃಷ್ಣಪರಮಾತ್ಮನ ಪೂಜೆ ತನ್ನ ಪ್ರವಾಸದ ಕಾಲದಲ್ಲಿ ನಡೆಯುತ್ತಿತ್ತು'–ಎಂಬುದಕ್ಕೆ ಆಧಾರವಾದ ಬರವಣಿಗೆಯನ್ನು ಬಿಟ್ಟುಹೋಗಿ ದ್ದಾನೆ. ಕ್ರಿಸ್ತಪೂರ್ವದಲ್ಲಿದ್ದ ಮಹಾಭಾಷ್ಯಕಾರರು ತಮ್ಮ ಕಾಲದಲ್ಲಿ ಶ್ರೀಕೃಷ್ಣನ

ಕಥೆಯನ್ನಾಶ್ರಯಿಸಿದ ಭಕ್ತಿಪ್ರಚೋದಕವಾದ ನಾಟಕಗಳು ಇದ್ದುದಕ್ಕೆ ಪ್ರಮಾಣವಾದ ವಚನಗಳನ್ನು ನುಡಿದಿದ್ದಾರೆ.

## ಮಹಾಭಾರತಯುದ್ಧದ ಕಾಲ

ಮಹಾಭಾರತಯುದ್ಧದ ಕಾಲ, ಧರ್ಮರಾಜನ ಕಾಲ, ವೇದವಿಭಾಗ ಕಾಲ–ಇವುಗಳ ವಿಷಯದಲ್ಲೂ ಆಧುನಿಕರಲ್ಲಿ ಮತಭೇದವಿದೆ. ಯುದ್ಧವು ನಡೆದುದು ಕ್ರಿ. ಪೂ. 1370ರಲ್ಲಿ ಎಂದು ವಿಲ್ ಫೋರ್ಡ್‌ರವರೂ, 13ನೆಯ ಶತಮಾನದಲ್ಲಿ ಎಂದು ಬುಛನನ್, ಫರ್ಗುಸನ್, ಆರ್. ಸಿ. ದತ್ತ, ಶಾಮ ಶಾಸ್ತ್ರಿ–ಮುಂತಾದವರೂ ಹೇಳುತ್ತಾರೆ. ವೇದವಿಭಾಗ ನಡೆದುದು ಕ್ರಿ. ಪೂ. 14ನೆಯ ಶತಮಾನದಲ್ಲಿ ಎಂದು ಕೋಲ್‌ಬ್ರೂಕ್ ಅವರು ಹೇಳುತ್ತಾರೆ. ಯುಧಿಷ್ಠಿರನ ಕಾಲ ಕ್ರಿ. ಪೂ. 525 ಎಂದು ಎಂ.ಬೆಂಟ್ಲೆ ಅವರ ಅಭಿಪ್ರಾಯ.

ಸಂಪ್ರದಾಯದ ಅಭಿಪ್ರಾಯದಲ್ಲಿ ಮಹಾಭಾರತಯುದ್ಧವು ನಡೆದುದು ದ್ವಾಪರಯುಗದ ಕೊನೆಯಲ್ಲಿ–ಕ್ರಿ. ಪೂ. 37ನೆಯ ಶತಮಾನದಲ್ಲಿ. ಖಗೋಳ ಶಾಸ್ತ್ರಗಳ ಸಿದ್ಧಾಂತಗಳೂ ಈ ಅಭಿಪ್ರಾಯಕ್ಕೆ ಪೋಷಕವಾಗಿವೆ. ಆದ್ದರಿಂದ ಇದು ಸರಿಯಾಗಿದೆಯೆಂದು ನಮ್ಮ ವಿಶ್ವಾಸ.

## ಮಹಾಭಾರತವು ಶೈವಗ್ರಂಥವೇ–ವೈಷ್ಣವಗ್ರಂಥವೇ?

ಮಹಾಭಾರತವು ವೈಷ್ಣವಗ್ರಂಥವೇ ಅಥವಾ ಶೈವಗ್ರಂಥವೇ? ಎಂಬ ವಿಷಯದಲ್ಲೂ ಚರ್ಚೆಮಾಡುವವರಿದ್ದಾರೆ. ಆದರೆ ಇದು ಅಷ್ಟು ಮುಖ್ಯವಾದ ಸಮಸ್ಯೆಯಲ್ಲ. ಶೈವ-ವೈಷ್ಣವ ಎಂಬ ಪದಗಳಿಗೆ ಈಚೆಗೆ ರೂಢಿಗೆ ಬಂದಿರುವ ಸಂಕುಚಿತವಾದ ಅರ್ಥ ಮಹಾಭಾರತದ ಕಾಲದಲ್ಲಿರಲಿಲ್ಲ. ಈ ಗ್ರಂಥವು ಶಿವನನ್ನೂ ಮತ್ತು ನಾರಾಯಣನನ್ನೂ ಇಬ್ಬರನ್ನೂ ಹೇರಳವಾಗಿ ಸ್ತುತಿಸುತ್ತದೆ. ಶಿವನೂ ಮತ್ತು ನಾರಾಯಣನೂ ಒಬ್ಬರನ್ನೊಬ್ಬರು ಸ್ತೋತ್ರ ಮಾಡುವ ಪ್ರಸಂಗಗಳೂ ಇದರಲ್ಲಿ ಬಂದಿವೆ. ಭಗವಂತನ ಎರಡು ರೂಪಗಳ ವಿಷಯದಲ್ಲೂ ಮಹಿಮೆಯನ್ನು ಹೇಳುವ ಕಥೆಗಳನ್ನು ಇದು ಒಳಗೊಂಡಿದೆ. ಇದರಲ್ಲಿ ಶಿವಸಹಸ್ರನಾಮವೂ ಇದೆ. ವಿಷ್ಣುಸಹಸ್ರನಾಮವೂ ಇದೆ. ಇದರ ಒಂದು ಅಂಗವಾದ ಹರಿವಂಶದಲ್ಲಿ ಶಿವನು ಶ್ರೀಕೃಷ್ಣನಿಗೆ ನಿನ್ನ ಹೆಸರುಗಳೇ ನನ್ನ ಹೆಸರುಗಳು, ನಿನ್ನನ್ನು ದ್ವೇಷಿಸುವವನು ನನಗೂ ದ್ವೇಷಿ, ನಮ್ಮಿಬ್ಬರಿಗೂ ಅಂತರವಿಲ್ಲ–ಎಂದು ಹೇಳುತ್ತಾನೆ :

**ಯಾನ್ಯೇವ ತವ ನಾಮಾನಿ ಮಮ ನಾಮಾನಿ ಚಾಚ್ಯುತ ।**
**ಯಸ್ತ್ವಾಂ ದ್ವೇಷ್ಟಿ ದೇವೇಶ ಸ ಮಾಂ ದ್ವೇಷ್ಟಿ ನ ಸಂಶಯಃ ॥**
**ಆವಯೋರನ್ತರಂ ನಾಸ್ತಿ ಅರ್ಥತಃ ಶಬ್ದತೋಽಪಿ ವಾ ।**

ವಿಷ್ಣುವಿನ ಸ್ತುತಿಯು ಹೆಚ್ಚಾಗಿ ಕಂಡುಬಂದರೂ ಒಟ್ಟಿನಲ್ಲಿ ಮಹಾಭಾರತವು ಶೈವ-ವೈಷ್ಣವರಿಬ್ಬರಿಗೂ ಪ್ರಿಯವಾದ ಗ್ರಂಥ–ಎಂದು ಹೇಳಬಹುದು.

ರಾಮಾಯಣ ಮತ್ತು ಮಹಾಭಾರತ ಇವುಗಳನ್ನು ಹೋಲಿಕೆಮಾಡಿ- ೧) ಮೊದ'ಲನೆಯದು ಪೂರ್ವದೇಶದ ಸಂಸ್ಕೃತಿಯನ್ನು ಹೇಳುತ್ತದೆ ಮತ್ತು ಸೂರ್ಯವಂಶದ ಮಹಿಮೆಯನ್ನು ಗಾನಮಾಡುತ್ತದೆ. ಮಹಾಭಾರತವು ಮಧ್ಯದೇಶದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ ಮತ್ತು ಚಂದ್ರವಂಶದ ಮಹಿಮೆಯನ್ನು ಗಾನಮಾಡುತ್ತದೆ. 2) ರಾಮಾಯಣವು ಒಂದು ಸುಸಂಬದ್ಧವಾದ ಕಥೆಯನ್ನು ಹೇಳುತ್ತದೆ. ಒಬ್ಬ ಕವಿಯ ರಚನೆಯಾಗಿದೆ. ಆದರೆ ಮಹಾಭಾರತವು ಅಂತಹ ಏಕತೆಯನ್ನು ಹೊಂದಿಲ್ಲ. 3) ಮಹಾಭಾರತದಲ್ಲಿ ಕಥಾಭಾಗ, ನೀತಿಯ ಭಾಗ, ಮುಖ್ಯವಾದುದರಿಂದ ಅದು ಇತಿಹಾಸ-ಪುರಾಣಗಳ ಗುಂಪಿಗೆ ಸೇರಿದೆ.

ರಾಮಾಯಣದಲ್ಲಿ ಕಥಾಭಾಗಕ್ಕಿಂತಲೂ ಕಾವ್ಯಭಾಗಕ್ಕೆ ಹೆಚ್ಚು ಪ್ರಾಮುಖ್ಯ. “ಕಾವ್ಯದೃಷ್ಟಿಯಿಂದ ರಾಮಾಯಣವು ಮಹಾಭಾರತಕ್ಕಿಂತಲೂ ಸುಂದರವಾಗಿದೆ. ಅದರ ಉಪಮೆಗಳೂ, ರೂಪಕಗಳೂ, ಪ್ರಕೃತಿವರ್ಣನೆಗಳೂ, ಭಾಷೆಯೂ ತುಂಬ ಪರಿಮಾರ್ಜಿತವಾಗಿದೆ. ಮೃದುಮಧುರವಾಗಿದೆ”–ಎಂದು ಕೆಲವು ವಿಮರ್ಶಕರು ಹೇಳುತ್ತಾರೆ. ಇದರಲ್ಲಿ ಕೊಂಚ ಸತ್ಯಾಂಶವುಂಟು. ಆದರೆ ಮೌಲಿಕತ್ವದ ದೃಷ್ಟಿಯಿಂದ ‘ಎರಡು ಗ್ರಂಥಗಳೂ ಕೂಡ ವೇದದ ವಿಸ್ತಾರವಾಗಿವೆ ; ಧರ್ಮವನ್ನು ಎತ್ತಿಹಿಡಿಯುವ ಮಹಾಕಾವ್ಯಗಳಾಗಿವೆ’–ಎಂಬುದನ್ನು ಮರೆಯಬಾರದು. ಭಾರತದೇಶದಲ್ಲಿ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಎಲ್ಲೆಲ್ಲಿಯೂ ರೂಪಿತವಾಗಿರುವುದು ಮಹರ್ಷಿಗಳ ಸಂಸ್ಕೃತಿಯೇ. ಪ್ರಾಂತೀಯವಾದ ವ್ಯತ್ಯಾಸಗಳು ಬಹಳ ಕಡಿಮೆ. ಸುಂದರವಾದ ಅಲಂಕಾರಗಳು, ಪ್ರಕೃತಿವರ್ಣನೆ ಮತ್ತು ರಸಪರಿಪೋಷಣೆ–ಇವು ಮಹಾಭಾರತದಲ್ಲಿ ಹಲವು ಕಡೆ ತುಂಬಾ ಅತಿಶಯವಾಗಿವೆ.

## ರಾಮಾಯಣ-ಮಹಾಭಾರತಗಳಲ್ಲಿ ಯಾವುದು ಪ್ರಾಚೀನ?

ಎರಡು ಗ್ರಂಥಗಳನ್ನೂ ತೋಲನೆಮಾಡಿ ಕೆಲವು ಆಧುನಿಕರು ಒಂದು ವಿಚಿತ್ರವಾದ ಅಭಿಪ್ರಾಯವನ್ನು ಹೇಳುತ್ತಾರೆ. ವೆಬರ್ ಮತ್ತು ಆರ್. ಸಿ. ದತ್ತ, ವಿಲಿಯಮ್ಸ್–ಮುಂತಾದವರು ರಾಮಾಯಣಕ್ಕಿಂತಲೂ ಮಹಾಭಾರತವೇ ಪ್ರಾಚೀನವಾದುದು ಎಂದು ನಿರೂಪಿಸುತ್ತಾರೆ. ಅವರು ಕೊಡುವ ಕಾರಣಗಳು ಯಾವುವೆಂದರೆ :

1) 'ರಾಮಾ ಯಣದ ಭಾಷಾಶೈಲಿಯು ಮುಂದಿನ ಮಹಾಕಾವ್ಯಗಳಿಗೆ ಸಮೀಪವಾಗಿದೆ. ಮಹಾಭಾರತದಲ್ಲಿ ವೇದೋಪನಿಷತ್ತುಗಳಿಗೆ ಸಮೀಪದ ಶೈಲಿಯಿದೆ.

2) ರಾಮಾಯಣವು ವೈದಿಕವಾದ ಬ್ರಾಹ್ಮಣಧರ್ಮವೊಂದನ್ನೇ ಎತ್ತಿ ಹಿಡಿಯುತ್ತದೆ. ಮಹಾಭಾರತದಲ್ಲಿ ವೈದಿಕ, ಆಧ್ಯಾತ್ಮಿಕ, ಭೌತಿಕ, ಏಕ ದೇವತೋಪಾಸಕ ಮತ್ತು ಬಹುದೇವತೋಪಾಸಕ–ಮುಂತಾದ ನಾನಾ ಮತ ಗಳಿವೆ.

3) ರಾಮಾಯಣದಲ್ಲಿ ಬರುವ ಶ್ರೀರಾಮನ ಕಥೆಗೂ ಮೂಲಭಾರತ ದಲ್ಲಿ ಬರುವ ಶ್ರೀರಾಮನ ಕಥೆಗೂ ಅನೇಕ ವ್ಯತ್ಯಾಸಗಳಿವೆ. ಮಹಾಭಾರತ ದಲ್ಲಿ ರಾಮಾಯಣದ ಕರ್ತೃ ವಾಲ್ಮೀಕಿ ಎಂಬ ವಿಷಯವೇ ಬರುವುದಿಲ್ಲ. ಆದುದರಿಂದ ಮಹಾಭಾರತದ ವಸ್ತುವು ರಾಮಾಯಣದ ವಸ್ತುವಿಗಿಂತಲೂ ಪ್ರಾಚೀನವಾದುದು ಅಥವಾ ಮಹಾಭಾರತದಲ್ಲಿ ಬರುವ ಶ್ರೀರಾಮಕಥೆಯು ಬೇರೊಂದು ರಾಮೋಪಾಖ್ಯಾನವನ್ನು ಆಧರಿಸಿರಬಹುದು.'

ಶ್ರೀರಾಮನ ಕಾಲವು ತ್ರೇತಾಯುಗ. ಕೌರವ-ಪಾಂಡವರ ಕಾಲವು ದ್ವಾಪರಯುಗದ ಕೊನೆ. ರಾಮಾವತಾರವು ಕೃಷ್ಣಾವತಾರಕ್ಕಿಂತಲೂ ಪ್ರಾಚೀನ–ಎಂಬ ನಂಬಿಕೆಯುಳ್ಳ ನಮಗೆ ಮೇಲಿನ ಅಭಿಪ್ರಾಯವು ವಿಚಿತ್ರ ವಾಗಿ ಕಂಡುಬರುತ್ತದೆ. ಆದರೆ ಆಧುನಿಕರು ಸಮಯಾಸಮಯಗಳೆನ್ನದೇ ಎಲ್ಲ ಕಡೆಗಳಲ್ಲೂ ಪ್ರಯೋಗಿಸಿರುವ ವಿಕಾಸವಾದದ ನೀತಿಯಿಂದಲೇ ಅವರ ಮೇಲ್ಕಂಡ ಅಭಿಪ್ರಾಯವು ತಪ್ಪೆಂದು ತೋರಿಸಿಕೊಡಬಹುದು. ರಾಮಾ ಯಣವು ಮಹಾಭಾರತಕ್ಕಿಂತಲೂ ಹಿಂದಿನದೆಂಬ ಭಾರತೀಯರ ಅಭಿಪ್ರಾಯವನ್ನು ಅನೇಕ ಬಾಹ್ಯ ಮತ್ತು ಆಂತರಿಕಪ್ರಮಾಣಗಳಿಂದ ಸಿದ್ಧ ಪಡಿಸಬಹುದು.

1) ಮಹಾಭಾರತದ ವನಪರ್ವದಲ್ಲಿ ರಾಮಾಯಣದ ಕಥೆಯು ಬರುತ್ತದೆ. ಆದರೆ ರಾಮಾಯಣದಲ್ಲಿ ಎಲ್ಲಿಯೂ ಮಹಾಭಾರತದ ಕಥೆಯ ಉಲ್ಲೇಖ ಕಂಡುಬರುವುದಿಲ್ಲ. ಭಾರತಕಥೆಯು ತನಗಿಂತಲೂ ಹಿಂದಿನದಾಗಿದ್ದರೆ ರಾಮಾಯಣವು ಭಾರತದ ಅತಿಪ್ರಸಿದ್ಧಘಟನೆಯಾದ ಮಹಾಭಾರತದ ಯುದ್ಧದ ಹೆಸರನ್ನಾದರೂ ಹೇಳುತ್ತಿರಲಿಲ್ಲವೇ? ಮಹಾಭಾರತದ ಮಹಾವೀರರೊಬ್ಬರ ಹೆಸರನ್ನಾದರೂ ಹೇಳುತ್ತಿರಲಿಲ್ಲವೇ?

2) ವ್ಯಾಸರ ಕಾಲದಲ್ಲಿ ರಾಮಕಥೆಯು ಪ್ರಸಿದ್ಧವಾಗಿದ್ದರಿಂದ ಅದರ ವಿವರಣೆಯನ್ನು ಅವರು ಕೊಟ್ಟಿಲ್ಲ. ವಾಲ್ಮೀಕಿಯು ರಾಮಾಯಣದ ಕರ್ತಾ ಎಂಬುದನ್ನೂ ಅದು ಪ್ರಸಿದ್ಧವಾಗಿದ್ದುದರಿಂದ ಹೇಳಿಲ್ಲ.

3) ಶ್ರೀರಾಮನು ಓಡಾಡಿದ ಶೃಂಗಿಬೇರಪುರ, ಗೋಪ್ರತಾರ, ಮುಂತಾದುವು ಪವಿತ್ರಯಾತ್ರಾಸ್ಥಳಗಳೆಂದು ಮಹಾಭಾರತವು ಹೇಳುತ್ತದೆ. ಆದುದರಿಂದ ಶ್ರೀರಾಮನು ಭಗವದವತಾರವೆಂದು ಮಹಾಭಾರತದ ಕಾಲದಲ್ಲಿ ಸುಪ್ರಸಿದ್ಧವಾಗಿಬಿಟ್ಟಿತ್ತು.

4) ರಾಮಾಯಣದ ಶ್ಲೋಕಗಳು ಮಹಾಭಾರತದಲ್ಲಿ ಉದ್ಧೃತವಾಗಿವೆ. ಮಹಾಭಾರತದ ಯಾವ ಶ್ಲೋಕವೂ ರಾಮಾಯಣದಲ್ಲಿಲ್ಲ.

5) ವಾಲ್ಮೀಕಿಯು ದಕ್ಷಿಣಭಾಗದಲ್ಲಿ ನಾಗರಿಕತೆಯುಳ್ಳ ಯಾವ ರಾಜ್ಯವನ್ನೂ ಉಲ್ಲೇಖಿಸಿರುವುದಿಲ್ಲ. ವಿಂಧ್ಯದ ದಕ್ಷಿಣದೇಶವು ವಿರಾಧ, ಕಬಂಧ–ಮುಂತಾದ ಅನಾಗರಿಕರಾಕ್ಷಸರ ನಿವಾಸವಾಗಿತ್ತು. ದಶರಥನು ತನ್ನ ಆಸ್ಥಾನಕ್ಕೆ ಕರೆಯುವ ರಾಜರಲ್ಲಿ ದಕ್ಷಿಣದೇಶದ ಒಬ್ಬ ರಾಜನ ಹೆಸರೂ ಕಂಡುಬರುವುದಿಲ್ಲ. ಮಹಾಭಾರತದಲ್ಲಿಯಾದರೋ ದಕ್ಷಿಣಭಾಗದಲ್ಲಿ ಅನೇಕ ನಾಗರಿಕ ರಾಜ್ಯಗಳು ಇದ್ದುದಾಗಿ ಉಲ್ಲೇಖವಿದೆ. ಧರ್ಮರಾಜನು ಮಾಡುವ ರಾಜಸೂಯಯಜ್ಞಕ್ಕೆ ದಕ್ಷಿಣದೇಶದ ಅನೇಕರಾಜರು ಬರುತ್ತಾರೆ. ಭೀಷ್ಮಪರ್ವದಲ್ಲಿ ಹೇಳಿರುವ ಭಾರತದೇಶದ ಭೌಗೋಳಿಕಜ್ಞಾನವು ರಾಮಾಯಣಕ್ಕಿಂತಲೂ ಹೆಚ್ಚು ವಿಸ್ತಾರವಾಗಿದೆ.

6) ಮಹಾಭಾರತದಲ್ಲಿ ಮ್ಲೇಚ್ಛರಾಜರು ಯುದ್ಧದಲ್ಲಿ ಭಾಗವಹಿಸುವುದಾಗಿ ಹೇಳಿದೆ. ಮ್ಲೇಚ್ಛನಾಯಕನಾದ ಪುರೋಚನನು ದುರ್ಯೋಧನನ ಆಜ್ಞೆಯಂತೆ ಅರಗಿನಮನೆಯನ್ನೇ ನಿರ್ಮಿಸುತ್ತಾನೆ. ರಾಮಾಯಣದಲ್ಲಿ ಯವನ-ಮ್ಲೇಚ್ಛಶಬ್ದಗಳು ಬಂದಿದ್ದರೂ ಅವರ ವಿವರಣೆ ಕಂಡುಬರುವುದಿಲ್ಲ.

7) ರಾಮಾಯಣದಲ್ಲಿರುವ ನಂಬಿಕೆಗಳು ಮಹಾಭಾರತದಲ್ಲಿರುವ ನಂಬಿಕೆಗಳಿಗಿಂತಲೂ ಪ್ರಾಚೀನವಾದುದು. ಉದಾಹರಣೆಗೆ : ಮನುಷ್ಯರು ಕಪಿ-ಕರಡಿಗಳೊಡನೆ ಮನುಷ್ಯರಂತೆ ವ್ಯವಹರಿಸುವುದು ; ಹತ್ತು ತಲೆಗಳ ರಾವಣನ ಕಲ್ಪನೆ ; ಋಷ್ಯಶೃಂಗನು ಸ್ತ್ರೀ-ಪುರುಷರಾರು ಇಲ್ಲದ ಜಾಗದಲ್ಲಿದ್ದನು ; ಅವನ ತಲೆಯ ಮೇಲೆ ಒಂದು ಕೊಂಬು ಇತ್ತು–ಇತ್ಯಾದಿ ಭಾವನೆಗಳು ರಾಮಾಯಣದಲ್ಲಿ ಕಂಡುಬರುತ್ತವೆ. ರಾಮಾಯಣದಲ್ಲಿ ಸೇನೆಯ ವ್ಯೂಹಗಳ ರಚನೆಯನ್ನು ಹೇಳಿಲ್ಲ. ಮಹಾಭಾರತದ ಯುದ್ಧದಲ್ಲಿ ಅನೇಕ ವ್ಯೂಹಗಳೂ, ವ್ಯವಸ್ಥಿತವಾದ ಸೈನಿಕಪರೀಕ್ಷೆ–ಮುಂತಾದುವೂ ಕಂಡುಬರುತ್ತವೆ. ಸೀತಾಸ್ವಯಂವರದಲ್ಲಿ ಧನುಸ್ಸನ್ನು ಎತ್ತಿ ಹೆದೆಯೇರಿಸಿದರೆ ಮಹಾವೀರನೆಂದು ತೀರ್ಮಾನ. ಮಹಾಭಾರತದಲ್ಲಿ ಕುಶಲವಾದ ಲಕ್ಷ್ಯಭೇದನವನ್ನು ವೀರತ್ವದ ಕುರುಹಾಗಿ ಅಪೇಕ್ಷಿಸಿದ್ದಾರೆ.

8) ರಾಮನು ವನವಾಸಕ್ಕೆ ಹೊರಟಾಗ ಸೀತೆಯು ತನ್ನನ್ನು ಕರೆದುಕೊಂಡು ಹೋಗಬೇಕೆಂದು ರಾಮನನ್ನು ಪ್ರಾರ್ಥಿಸುತ್ತಾಳೆ. ಆತನಿಗೆ ಎದುರುಮಾತನಾಡುವುದಿಲ್ಲ. ದ್ರೌಪದಿಯು ಪತಿಯೊಡನೆ ಕಾಡಿಗೆ ಬಂದರೂ ಆತನು ಹೆಂಡತಿಯನ್ನು ಪಣವಾಗಿಟ್ಟು ಜೂಜಾಡಿದುದು ಸರಿಯಲ್ಲ–ಎಂದು ಆತ ನೊಡನೆ ವಾದಿಸುತ್ತಾಳೆ. ಆತನ ಕ್ಷಮಾಗುಣವನ್ನು ಹಳಿಯುವುದೂಉಂಟು. ಆದುದರಿಂದ ಈಕೆಯು ಸೀತೆಗಿಂತ ನಮ್ಮ ಯುಗಕ್ಕೆ ಹತ್ತಿರದವಳು.

9) ರಾಮಾಯಣದಲ್ಲಿ ಪರಪುರುಷಸ್ಪರ್ಶವೂ ಮಹಾಪಾಪವೆಂಬ ಭಾವನೆಯಿತ್ತು. ರಾವಣನು ಸೀತೆಯನ್ನು ಬಲಾತ್ಕಾರವಾಗಿ ಅಪಹರಿಸುತ್ತಾನೆ. ಆದರೆ ಸೀತೆಯು ಹನುಮಂತನ ಬೆನ್ನೇರಿ ರಾಮನ ಬಳಿಗೆ ಬರಲು ಒಪ್ಪುವುದಿಲ್ಲ. ಪರಗೃಹನಿವಾಸದ ಪಾಪಪರಿಹಾರಕ್ಕಾಗಿ ಸೀತೆಯು ಅಗ್ನಿಪರೀಕ್ಷೆಗೆ ಒಳಪಡಬೇಕಾಗುತ್ತದೆ. ಆದರೆ ಮಹಾಭಾರತದಲ್ಲಿ ಜಯದ್ರಥನು ದ್ರೌಪದಿಯನ್ನು ಅಪಹರಿಸುತ್ತಾನೆ. ಪಾಂಡವರು ಆತನನ್ನು ಸೋಲಿಸಿ ದ್ರೌಪದಿಯನ್ನು ಹಿಂದಕ್ಕೆ ಕರೆದುಕೊಂಡು ಬಂದಾಗ 'ಶುದ್ಧಿ'ಯ ಪ್ರಸಂಗವೇ ಇಲ್ಲ. ಆಚಾರ-ನಿಯಮಗಳ ಮಡಿವಂತಿಕೆ ರಾಮಾಯಣದ ಕಾಲದಲ್ಲಿ ಹೆಚ್ಚು ಕಠಿನವಾಗಿತ್ತು.

10) ರಾಮಾಯಣದಲ್ಲಿ–'ಗುರು-ಹಿರಿಯರಿಗೆ ವಿಧೇಯರಾಗಿರ ಬೇಕು. ಸಹೋದರರು ಪ್ರೀತಿ-ವಿಶ್ವಾಸಗಳಿಂದಿರಬೇಕು. ಎಂತಹ ಸನ್ನಿವೇಶದಲ್ಲಿಯೂ ಅಧರ್ಮವನ್ನಾಚರಿಸಬಾರದು'–ಎಂಬ ಆದರ್ಶವು ಕಂಡುಬರುತ್ತದೆ. ಮಹಾಭಾರತದಲ್ಲಿ ಈ ನಿಯಮಗಳ ಪಾಲನೆ ನಿಯತವಾಗಿಲ್ಲ. ಭೀಮನು ಮಧ್ಯೇ-ಮಧ್ಯೇ ಅಣ್ಣನ ವಿರುದ್ಧವಾಗಿ ದಂಗೆಯೇಳುತ್ತಾನೆ. ಕೌರವರೂ-ಪಾಂಡವರೂ ಇಬ್ಬರೂ ಸರಳವಾದ ಸತ್ಯದ ನಿಯಮಗಳನ್ನು ಮಧ್ಯೇ-ಮಧ್ಯೇ ಮೀರಿ ನಡೆದು ಅವನ್ನು ಹೇಗಾದರೂ ಸರಿಯೆಂದು ಸಾಧಿಸುವ ಪ್ರಯತ್ನಮಾಡುತ್ತಾರೆ.

11) ಗುಣ-ದೋಷ ಎರಡೂ ತುಂಬಿದ ಮಹಾಭಾರತದ ಪಾತ್ರಗಳು ಗುಣಗಳನ್ನು ಮಾತ್ರ ಹೊಂದಿರುವ ರಾಮಾಯಣದ ಆದರ್ಶಪಾತ್ರಗಳಿಗಿಂತಲೂ ನಮಗೆ ಹತ್ತಿರದವರು.

ಮೇಲೆ ಹೇಳಿದ ಕಾರಣಗಳಿಂದ ಮಹಾಭಾರತವು ನಿಸ್ಸಂಶಯವಾಗಿಯೂ ರಾಮಾಯಣಕ್ಕಿಂತಲೂ ಈಚಿನದು. ನಮ್ಮ ಯುಗಕ್ಕೆ ಸಮೀಪವಾದುದು–ಎಂದು ಸಿದ್ಧವಾಗುತ್ತದೆ. ರಾಮಾಯಣದ ಶೈಲಿಯು ಹೆಚ್ಚು ಪರಿಷ್ಕಾರವಾಗಿರುವುದಕ್ಕೆ ಕಾರಣ ಅದರ ಆಧುನಿಕತೆಯಲ್ಲ : ಅದರ ಕಾವ್ಯತ್ವಪ್ರಧಾನತೆ.

ಶ್ರೀಮದ್ರಾಮಾಯಣ ಮತ್ತು ಮಹಾಭಾರತ–ಇವೆರಡೂ ನಮ್ಮ ಧರ್ಮ-ಸಂಸ್ಕೃತಿಗಳ ಗವಾಕ್ಷಗಳು. ಎರಡರ ಶೈಲಿ ಬೇರೆ-ಬೇರೆಯಾಗಿದ್ದರೂ ಗುರಿಮಾತ್ರ ಒಂದೇ : ನಾಲ್ಕು ಪುರುಷಾರ್ಥಗಳ ನಿರೂಪಣೆ. ಶ್ರೀಮದ್ರಾಮಾಯಣದಲ್ಲಿ ನಾಲ್ಕನೆಯ ಪುರುಷಾರ್ಥವನ್ನು ಹೆಚ್ಚಾಗಿ ಹೇಳದಿದ್ದರೂ ಅಲ್ಲಿ ಉಪಾತ್ತವಾಗಿರುವ 'ಧರ್ಮ' ಪದವು ಅಭ್ಯುದಯ ಮತ್ತು ಮೋಕ್ಷ ಎರಡಕ್ಕೂ ಕಾರಣವಾಗಿದೆ.

**ಯತೋಽಭ್ಯುದಯನಿಃಶ್ರೇಯಸಸಿದ್ಧಿಃ ಸ ಧರ್ಮಃ ॥**

ಭೌತಿಕವಾಗಿ ಏಳಿಗೆ ಮತ್ತು ಪಾರಮಾರ್ಥಿಕವಾದ ಮೋಕ್ಷ–ಇವೆರಡೂ ಯಾವುದರಿಂದ ಉಂಟಾಗುತ್ತದೆಯೋ ಅದೇ ಧರ್ಮ–ಎಂದೇ ಧರ್ಮದ ಪ್ರಯೋಜನವನ್ನು ಹೇಳುವ ಲಕ್ಷಣವಿದೆಯಲ್ಲವೇ?

## ಭಾರತ-ರಾಮಾಯಣಗಳೆರಡೂ ವೇದಾರ್ಥಪ್ರತಿಪಾದಕಗಳು

ಈ ಎರಡು ಗ್ರಂಥಗಳೂ ವೇದದ ಅರ್ಥವನ್ನು ವಿವರಿಸುವುದರಿಂದ ವೇದಕ್ಕೆ ಸಮನಾಗಿ ಗೌರವಿಸಲ್ಪಟ್ಟಿವೆ. **'ರಾಮಾಯಣಂ ವೇದಸಮಂ' 'ಭಾರತಂ ಪಂಚಮೋ ವೇದಃ ।'** ಗಾಯತ್ರಿಯ ಇಪ್ಪತ್ತುನಾಲ್ಕು ಅಕ್ಷರಗಳನ್ನು ಉಪಬೃಂಹಣಮಾಡುವ 24,000 ಶ್ಲೋಕಗಳಿಂದ ಕೂಡಿವೆ. ಇವುಗಳ ಉಪದೇಶದ ಪ್ರಯೋಜನವು ವೇದಾರ್ಥದ ವಿಸ್ತಾರವೆಂದು ಗ್ರಂಥಗಳೇ ಪ್ರತಿಜ್ಞೆಮಾಡುತ್ತವೆ.

**ವೇದೋಪಬೃಂಹಣಾರ್ಥಾಯ ತಾವಗ್ರಾಹಯತ ಪ್ರಭುಃ ।**
**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ॥**

ಇವೆರಡೂ ಮಹರ್ಷಿಗಳು ಧ್ಯಾನಯೋಗದಿಂದ ಕಂಡುಕೊಂಡ ಸತ್ಯ-ಧರ್ಮಗಳ ರೂಪವಾದ ಕಾವ್ಯಗಳು.

**ತತಃ ಪಶ್ಯತಿ ಧರ್ಮಾತ್ಮಾ ತತ್ಸರ್ವಂ ಯೋಗಮಾಸ್ಥಿತಃ ।**
**ಪ್ರವಿಶ್ಯ ಯೋಗಂ ಜ್ಞಾನೇನ ಸೋಽಪಶ್ಯತ್ಸರ್ವಮನ್ತತಃ ॥**

ಇವು ಯಾವ ಕಾಲದಲ್ಲೂ ಲೌಕಿಕಾರ್ಥದ ಕೇವಲ ವೀರಗಾಥಾಕಾವ್ಯ (heroic epic) ವಾಗಿತ್ತೆಂದು ಹೇಳಲು ಆಧಾರವಿಲ್ಲ. ಆ ಪದವನ್ನು ಗ್ರಂಥದ ವಿಷಯದಲ್ಲಿ ಬಳಸಲೇಬೇಕಾಗಿದ್ದರೆ ಧರ್ಮವೀರರ, ಜ್ಞಾನವೀರರ ಗಾಥಾಕಾವ್ಯ ಎನ್ನಬೇಕಾಗುತ್ತದೆ.

ಇವೆರಡರಲ್ಲಿಯೂ ಶ್ರೀಭಗವಂತನು ನಾನಾರೂಪಗಳಿಂದ ಪ್ರತಿಪಾದಿಸಲ್ಪಡುತ್ತಾನೆ.

**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
**ಆದಾವನ್ತೇ ಚ ಮಧ್ಯೇ ಚ ಹರಿಃ ಸರ್ವತ್ರ ಗೀಯತೇ ॥**
**ಭಗವಾನ್ ವಾಸುದೇವಶ್ಚ ಕೀರ್ತ್ಯತೇಽತ್ರ ಸನಾತನಃ ।**
**ಸ ಹಿ ಸತ್ಯಮೃತಂ ಚೈವ ಪವಿತ್ರಂ ಪುಣ್ಯಮೇವ ಚ ॥**

ಮಹಾಭಾರತದ ಅರ್ಥವನ್ನು ವಿವರಿಸುವ ಹಲವಾರು ಟೀಕಾ-ಟಿಪ್ಪಣಿ ಗ್ರಂಥಗಳೂ, ಸಾರಾಂಶಗ್ರಂಥಗಳೂ, ಖಿಲಗ್ರಂಥಗಳೂ ರಚಿತವಾಗಿರುವುದು ಸಹಜವಾಗಿದೆ. ಆ ಗ್ರಂಥಕಾರರಲ್ಲಿ ನೀಲಕಂಠ, ಅರ್ಜುನಮಿಶ್ರ, ಸರ್ವಜ್ಞ ನಾರಾಯಣ, ಯಜ್ಞನಾರಾಯಣ, ವೈಶಂಪಾಯನ, ವಾದಿರಾಜ,

ಶ್ರೀನಂದನ, ವಿಮಲದೇವ–ಮುಂತಾದವರ ಹೆಸರುಗಳನ್ನು ಉದಾಹರಿಸ ಬಹುದು. ಶ್ರೀಧರಾಚಾರ್ಯರು ಮಹಾಭಾರತದ ಮೋಕ್ಷಧರ್ಮವೊಂದರ ಮೇಲೆಯೇ ವ್ಯಾಖ್ಯಾನವನ್ನು ಬರೆದಿದ್ದಾರೆ.

ಶ್ರೀಮನ್ಮಧ್ವಾಚಾರ್ಯರು–'ಮಹಾಭಾರತತಾತ್ಪರ್ಯನಿರ್ಣಯ'– ಎಂಬ ಮಹಾಭಾರತದ ಸಾರವಾದ ಗ್ರಂಥವನ್ನು ರಚಿಸಿದ್ದಾರೆ. ಇದಕ್ಕೆ ಶ್ರೀ ವಾದಿರಾಜ, ಶ್ರೀವ್ಯಾಸತೀರ್ಥ–ಮುಂತಾದವರು ಟೀಕೆಮಾಡಿದ್ದಾರೆ. ವ್ಯಾಸರ ಕೂಟಶ್ಲೋಕಗಳನ್ನು ವಿವರಿಸುವ ವ್ಯಾಸಕೂಟ ಎಂಬ ಗ್ರಂಥವೂ ಇದೆ. ಇದರ ಕರ್ತೃವಿನ ವಿಷಯ ತಿಳಿಯದು. ನಾರಾಯಣದಾಸರ ಭಾರತಯುದ್ಧ ವಿವಾದ– ಎಂಬ ಗ್ರಂಥವು ಭಾರತಯುದ್ಧವು ನಡೆದ ಕಾಲವನ್ನು ವಿಮರ್ಶಿಸು ತ್ತದೆ. ಇವೇ ಅಲ್ಲದೇ ಶುಭಚಂದ್ರರ ಬೃಹತ್ಪಾಂಡವಪುರಾಣ, ವಾದಿಚಂದ್ರರ ಪಾಂಡವಪುರಾಣ, ದೇವಪ್ರಭಸೂರಿಯ ಪಾಂಡವಚರಿತ–ಮುಂತಾದ ಜೈನ ಭಾರತಗ್ರಂಥಗಳೂ ವಿಪುಲವಾಗಿವೆ. ಶ್ರೀಕೃಷ್ಣನ ವಂಶ ಮತ್ತು ಸಾಹಸ ಕಾರ್ಯಗಳನ್ನು ಪ್ರಧಾನವಾಗಿ ವರ್ಣಿಸುವ 16,000 ಶ್ಲೋಕಗಳ ಹರಿವಂಶ ವೆಂಬ ಖಿಲಗ್ರಂಥವೂ ಇದೆ. ಇದರಲ್ಲಿ ಹರಿವಂಶಪರ್ವ, ವಿಷ್ಣುಪರ್ವ, ಭವಿಷ್ಯಪರ್ವ–ಎಂಬ ಮೂರು ಭಾಗಗಳು ಇವೆ. ಈ ಗ್ರಂಥವೂ ವ್ಯಾಸರಚಿತ ವೆಂದು ಹೇಳುತ್ತಾರೆ.

ಜಿನಸೇನ ಎಂಬುವರು ಇದನ್ನು ಜೈನಧರ್ಮಕ್ಕೆ ಅನುಗುಣವಾಗಿ ಪರಿವರ್ತಿಸಿ ಜೈನಹರಿವಂಶವನ್ನು ಬರೆದಿದ್ದಾರೆ.

ಪದ-ವಾಕ್ಯ-ಪ್ರಮಾಣಗಳನ್ನನುಸರಿಸಿ ಉಪಪತ್ತಿಸಹಿತವಾಗಿ ಈ ಗ್ರಂಥಕ್ಕೆ ಹೀಗೆ ಅನೇಕಮಹನೀಯರು ವ್ಯಾಖ್ಯಾನಗಳನ್ನು ಬರೆದಿದ್ದರೂ– 'ಅವುಗಳ ಅಧ್ಯಯನದಿಂದಲೇ ಭಾರತವು ನಮಗೆ ಚೆನ್ನಾಗಿ ಅರ್ಥವಾಗಿಬಿಡು ತ್ತದೆ. ಅದರಲ್ಲಿನ ಸಮಸ್ಯೆಗಳೆಲ್ಲಾ ಪರಿಹಾರವಾಗುತ್ತವೆ'–ಎಂದು ತಿಳಿಯ ಬಾರದು. ಸತ್ಯಸಾಕ್ಷಾತ್ಕಾರವನ್ನು ಪಡೆದು ಜ್ಞಾನ-ವಿಜ್ಞಾನದೃಷ್ಟಿಸಂಪನ್ನನಾದ ಸತ್ಯಾಚಾರ್ಯನ ಅನುಗ್ರಹದಿಂದ, ಸಾಧನೆಯ ಫಲವಾದ ಅನುಭವದಿಂದ ತಿಳಿಯಬೇಕಾದ ವಿಷಯಗಳು ತುಂಬಾ ಇವೆ. ಶಾಸ್ತ್ರಜ್ಞಾನ, ಮೇಧೆ, ಊಹಾ ಪೋಹವಿಚಕ್ಷಣತೆ–ಇವುಗಳೂ ಸೇರಬೇಕು. ಭಗವದನುಗ್ರಹದಿಂದ ಇವೆಲ್ಲಾ ಕೂಡಿಬಂದಾಗ ಸಮಸ್ಯೆಗಳ ಪರಿಹಾರವಾಗುತ್ತದೆ.

ಮಹಾಭಾರತದಲ್ಲಿ ಅನೇಕಮತಧರ್ಮಗಳ ಉಲ್ಲೇಖವು ಬರುತ್ತದೆ. ಆದರೆ ಅವೆಲ್ಲಾ ವ್ಯಾಸರಿಗೆ ಸಮ್ಮತವಾದುವು–ಎಂದು ಭಾವಿಸಬೇಕಾಗಿಲ್ಲ.

ಧರ್ಮನಿಷ್ಠರಾದ ಮಹಾಪುರುಷರೂ ವಿಧಿಪ್ರಚೋದಿತರಾಗಿ ತಪ್ಪುಕೆಲಸ ಗಳನ್ನು ಮಾಡುತ್ತಾರೆ. ಆದರೆ ಅವು ನಮಗೆ ಆದರ್ಶವಲ್ಲ. ಉದಾಹರಣೆಗೆ : ಧರ್ಮರಾಜನು ತನ್ನ ಸೋದರರನ್ನೂ, ಪತ್ನಿಯನ್ನೂ ಪಣವಿಟ್ಟು ಜೂಜಾಡಿ ದುದು ; ಎರಡನೆಯ ಬಾರಿಯೂ ಜೂಜಾಡಲು ಒಪ್ಪಿಕೊಂಡುದು ; ದ್ರೌಪದಿಗೆ ಮಾನಭಂಗಮಾಡಲು ದುರ್ಯೋಧನನು ಪ್ರಯತ್ನಿಸುತ್ತಿದ್ದಾಗ ಭೀಷ್ಮ-ದ್ರೋಣಾದಿಗಳು ತೀವ್ರವಾದ ಪ್ರತಿಭಟನೆಯನ್ನು ಮಾಡದೇ ಇದ್ದುದು–ಇತ್ಯಾದಿ. ಅವರು ಏಕೆ ಹಾಗೆ ಆಚರಿಸಿದರು ಎಂಬುದು ಅವರ ಪ್ರಕೃತಿಯ ಗುಣಕ್ಕೆ ಸಂಬಂಧಪಟ್ಟ ವಿಷಯ. ಪ್ರಕೃತಿಯ ದೌರ್ಬಲ್ಯವನ್ನು ಮೀರಿ ಅವರು ಆಚರಿಸಿರುವ ಧರ್ಮವೀರರ ನಡೆ ಮತ್ತು ಧರ್ಮವೀರ್ಯದಿಂದ ಪ್ರೇರಿತವಾದ ಅವರ ನುಡಿ–ಇವು ನಮಗೆ ಆದರ್ಶವಾಗಬೇಕು.

ದೇಶ-ಕಾಲ-ಸನ್ನಿವೇಶಗಳಿಗೆ ಅನುಗುಣವಾಗಿ ಒಬ್ಬ ವ್ಯಕ್ತಿಗೆ ಧರ್ಮ ವಾದುದು ಸದಾ ಸರ್ವರಿಗೂ ಧರ್ಮವಾಗುವುದಿಲ್ಲ. ಧರ್ಮರಾಜನು ವ್ಯಾಜ ದಿಂದ ಸುಳ್ಳುಹೇಳುತ್ತಾನೆ ; ಶಿಖಂಡಿಯನ್ನು ಮಧ್ಯದಲ್ಲಿ ನಿಲ್ಲಿಸಿ ಅರ್ಜುನನು ಭೀಷ್ಮರ ಮೇಲೆ ಬಾಣಪ್ರಯೋಗ ಮಾಡುತ್ತಾನೆ ; ಭೀಮಸೇನನು ಯುದ್ಧದ ನಿಯಮವನ್ನು ಮೀರಿ ದುರ್ಯೋಧನನ ತೊಡೆಯ ಮೇಲೆ ಗದಾಪ್ರಹಾರ ಮಾಡುತ್ತಾನೆ ; ಪಾಂಡವರೈವರೂ ದ್ರೌಪದಿಯನ್ನು ವಿವಾಹಮಾಡಿಕೊಳ್ಳು ತ್ತಾರೆ–ಇವು ಎಲ್ಲರಿಗೂ ಆದರ್ಶವೆಂದು ವ್ಯಾಸರು ಅಭಿಪ್ರಾಯಪಡುವುದಿಲ್ಲ. ಆದರೆ ಆಯಾ ವ್ಯಕ್ತಿಗಳಿಗೆ ಆಯಾ ಸನ್ನಿವೇಶಗಳಲ್ಲಿ ಅವು ಹೇಗೆ ಆಚರಣೀಯವಾದುವು–ಎಂಬ ವಿಷಯದಲ್ಲಿ ಮಹಾಭಾರತವೇ ಸ್ವಲ್ಪ ಮಟ್ಟಿಗೆ ವಿವರಣೆ ಕೊಡುತ್ತದೆ. ವ್ಯಾಖ್ಯಾನಗ್ರಂಥಗಳೂ ಸ್ವಲ್ಪ ಸಹಾಯಮಾಡುತ್ತವೆ. ಪೂರ್ವಗ್ರಹದೋಷವಿಲ್ಲದೇ ಸತ್ಯವನ್ನು ನಿರ್ಭಯವಾಗಿ ಹೇಳುವ ಧರ್ಮ ಜ್ಞಾನಸಂಪನ್ನರಾದ ಮಹಾತ್ಮರನ್ನು ಪ್ರಶ್ನೆಮಾಡಿ ತಿಳಿದುಕೊಳ್ಳಬೇಕಾದ ಅಂಶಗಳೂ ಇವೆ.

ಶಾಶ್ವತವಾದ ಧರ್ಮವು ನಿತ್ಯ-ಶುದ್ಧ-ಬುದ್ಧ-ಮುಕ್ತಸ್ವರೂಪವಾದ ಪರಬ್ರಹ್ಮವೊಂದೇ. ಅದರ ಅನುಭವಕ್ಕೆ ಅದರ ಸತ್ಯಕಾಮ-ಸತ್ಯಸಂಕಲ್ಪದ ಧರ್ಮಚಕ್ರವು ನಡೆಯುವುದಕ್ಕೆ ಯಾವುದು ಸಹಾಯವಾದರೂ ಅದು ಧರ್ಮವೇ.

**ಅಯಂ ವಃ ಪರಮೋ ಧರ್ಮಃ ಯದ್ಯೋಗೇನಾತ್ಮದರ್ಶನಮ್**

ಸತ್ಯವೂ, ಶಾಂತಿಸಮೃದ್ಧವೂ, ಅಮೃತವೂ ಆದ ಪರಮಾತ್ಮಧರ್ಮದ ಪ್ರತಿಷ್ಠೆಗೆ ಸಾಧಕವಾಗಿ ಮಹಾತ್ಮರು ಆಚರಿಸಿದ ಕೆಲವು ಧರ್ಮಗಳು ನಮಗೆ ಅಧರ್ಮದಂತೆ ಕಾಣಬಹುದು. ಆದರೆ ಅದು ಅಧರ್ಮವಲ್ಲ. ಸತ್ಯದ ಕೇಂದ್ರಕ್ಕೆ ಒಯ್ಯಲು, ಸತ್ಯದ ಆಶಯವನ್ನು ವಿಸ್ತಾರಪಡಿಸಲು ಸಾಕ್ಷಾತ್ತಾಗಿಯೋ, ಪರಂಪರಾಸಂಬಂಧದಿಂದಲೋ ಅವರು ಮಾಡಿದ ಧರ್ಮದ ಗುಟ್ಟು ನಮಗೆ ತಿಳಿಯದಿದ್ದರೆ ನಾವು ಅದನ್ನು ನಿಂದಿಸಬೇಕಾಗಿಲ್ಲ.

**ಅಲೋಕಸಾಮಾನ್ಯಮಚಿನ್ತ್ಯಹೇತುಕಂ ದ್ವಿಷನ್ತಿ ಮಂದಾಶ್ಚರಿತಂ ಮಹಾತ್ಮನಾಮ್ ।**

"ಅಹಿಂಸೆಯೆಂದರೆ ಯಾರಿಗೂ ನೋವನ್ನುಂಟುಮಾಡದಿರುವ ವರ್ತನೆಯಲ್ಲ. ಅಂತಹ ಅಹಿಂಸೆಯನ್ನು ಯಾರಿಂದಲೂ ಆಚರಿಸಲು ಸಾಧ್ಯ ವಿಲ್ಲ. ಜ್ಞಾನಾನಂದ-ಶಾಂತಿ-ಸುಖಸ್ವರೂಪನಾಗಿರುವ ಪರಮಾತ್ಮನ ಬಳಿಗೆ ಒಯ್ಯುವ ಮಾರ್ಗವೇ ಅಹಿಂಸಾಮಾರ್ಗ"–ಎಂಬ ಶ್ರೀರಂಗಗುರು ವಾಣಿಯನ್ನು ಇಲ್ಲಿ ಸ್ಮರಿಸುತ್ತೇವೆ. ನಾವು ಹಿಂದೆ ಪ್ರತಿಪಾದಿಸಿರುವಂತೆ ರಾಮಾಯಣ-ಮಹಾಭಾರತಗಳು ಕೇವಲ ವಾನರ-ರಾಕ್ಷಸ, ಪಾಂಡವ-ಕೌರವ ಯುದ್ಧಪ್ರಸಂಗದ ವರದಿಯಲ್ಲ. ಅದು ದೇವ-ದಾನವರನ್ನು ವಾನರ-ರಾಕ್ಷಸ, ಪಾಂಡವ-ಕೌರವ ಮುಂತಾದ ರೂಪಗಳಲ್ಲಿ ಭೂಮಿಗೆ ಅವತಾರ ಮಾಡಿಸಿ, ಪರತತ್ತ್ವವಾದ ಪರಮಾತ್ಮನನ್ನೂ ಶ್ರೀರಾಮ-ಶ್ರೀಕೃಷ್ಣರ ರೂಪದಲ್ಲಿ ಧರೆಗೆ ಇಳಿಯಿಸಿ, ಧರ್ಮಾಧರ್ಮಗಳ ಸಂಗ್ರಾಮವನ್ನು ಹೂಡಿಸಿ, ಧರ್ಮವಿಜಯದ ದುಂದುಭಿಯನ್ನು ಮೊಳಗಿಸುವ ಮಹಾಕಾವ್ಯವಾಗಿಯೂ ಧ್ವನಿಪೂರ್ಣವಾಗಿಯೂ ನಿರೂಪಿಸುತ್ತದೆ. ದುರ್ಯೋಧನನು ಕ್ರೋಧ-ಶೋಕರೂಪವಾದ ಮಹಾವೃಕ್ಷ ; ಕರ್ಣನು ಅದರ ಕಾಂಡ ; ಶಕುನಿಯು ಅದರ ಕೊಂಬೆಗಳು ; ದುಃಶಾಸನನು ಅದರಲ್ಲಿ ತುಂಬಿರುವ ಹೂವು-ಹಣ್ಣುಗಳು ಮತ್ತು ಅದರ ಮೂಲ ಮೂರ್ಖನಾದ ಧೃತರಾಷ್ಟ್ರರಾಜ.

ಧರ್ಮರಾಜನು ಧರ್ಮರೂಪವಾದ ಮಹಾವೃಕ್ಷ ; ಅರ್ಜುನನು ಅದರ ಕಾಂಡ ; ಭೀಮಸೇನನು ಅದರ ಕೊಂಬೆಗಳು ; ನಕುಲ-ಸಹದೇವರು ಅದರಲ್ಲಿ ತುಂಬಿದ ಹೂವು-ಹಣ್ಣುಗಳು ಮತ್ತು ಪರಬ್ರಹ್ಮನಾದ ಶ್ರೀಕೃಷ್ಣನೂ, ವೇದಗಳೂ ಮತ್ತು ಬ್ರಹ್ಮಜ್ಞಾನಿಗಳೂ ಅದರ ಮೂಲ.

**ದುರ್ಯೋಧನೋ ಮನ್ಯುಮಯೋ ಮಹಾದ್ರುಮಃ**
**ಸ್ಕನ್ಧಃ ಕರ್ಣಃ ಶಕುನಿಸ್ತಸ್ಯ ಶಾಖಾಃ ।**
**ದುಃಶಾಸನಃ ಪುಷ್ಪಫಲೇ ಸಮೃದ್ಧೇ**
**ಮೂಲಂ ರಾಜಾ ಧೃತರಾಷ್ಟ್ರೋಽಮನೀಷೀ ॥**

**ಯುಧಿಷ್ಠಿರೋ ಧರ್ಮಮಯೋ ಮಹಾದ್ರುಮಃ**
**ಸ್ಕನ್ಧೋಽರ್ಜುನೋ ಭೀಮಸೇನೋಽಸ್ಯ ಶಾಖಾಃ ।**
**ಮಾದ್ರೀಸುತೌ ಪುಷ್ಪಫಲೇ ಸಮೃದ್ಧೇ**
**ಮೂಲಂ ಕೃಷ್ಣೋ ಬ್ರಹ್ಮ ಚ ಬ್ರಾಹ್ಮಣಾಶ್ಚ ॥**

ಸುಪ್ತಜನರನ್ನು ತಟ್ಟಿ ಎಬ್ಬಿಸುವ ಸುಪ್ರಭಾತಕಾಲದ ಮಂಗಳವಾದ್ಯ ಘೋಷದಂತೆ ಮೊಳಗುತ್ತಿರುವ ಮಹಾಯೋಗಿ ಕುರುಕುಲಪಿತಾಮಹ ಭೀಷ್ಮರ ಉಪದೇಶವಾಣಿಯನ್ನೂ, ವೇದವ್ಯಾಸ-ವಸಿಷ್ಠರ ಎಚ್ಚರಿಕೆಯ ನುಡಿ ಯನ್ನೂ–**"ಸತ್ಯೇ ಹಿ ಯತಿತವ್ಯಂ ವಃ" "ಧರ್ಮೋ ನಿತ್ಯಃ" "ದೀರ್ಘಂ ಪಶ್ಯತ ಮಾ ಹ್ರಸ್ವಂ"** (ನೀವು ಸತ್ಯಕ್ಕಾಗಿ ಪ್ರಯತ್ನಿಸಬೇಕು. ಧರ್ಮವೇ ನಿತ್ಯವಾದುದು. ದೀರ್ಘವಾದ ನೋಟವನ್ನು ನೋಡಿರಿ. ಸ್ವಲ್ಪದೂರದ ನೋಟ ಸಾಲದು.) ಮುಂತಾದ ವಾಕ್ಯಗಳನ್ನೂ ಸ್ಮರಿಸಿ ಈ ಪೀಠಿಕಾಪ್ರಬಂಧಕ್ಕೆ ಮಂಗಳಮಾಡುತ್ತೇವೆ. ಹಿಂದೆ ಶ್ರೀಮದ್ರಾಮಾಯಣಕ್ಕೆ ಭೂಮಿಕೆಯನ್ನು ಬರೆಯುವ ಅವಕಾಶ ನಮಗೆ ಒದಗಿತ್ತು. ಈಗ ಮಹಾಭಾರತಕ್ಕೆ ಹಿನ್ನೆಲೆ ಯನ್ನು ಬರೆಯುವ ಯೋಗವು ಒದಗಿದೆ. ಇವೆರಡು ಯೋಗಗಳೂ ಯೋಗೇಶ್ವರನ ಅನುಗ್ರಹಕ್ಕೆ ವಿಷಯವಾಗಲಿ–ಎಂದು ಆಶಂಸೆಮಾಡಿ ಈ ಗ್ರಂಥದ ಪ್ರಕಾಶನಕ್ಕೆ ಶುಭವನ್ನು ಕೋರುತ್ತೇವೆ.

**ಪಾರಾಶರ್ಯವಚಃಸರೋಜಮಮಲಂ ಗೀತಾರ್ಥಗನ್ಧೋತ್ಕಟಂ**
**ನಾನಾಖ್ಯಾನಕಕೇಸರಂ ಹರಿಕಥಾಸಂಬೋಧನಾಬೋಧಿತಮ್ ।**
**ಲೋಕೇ ಸಜ್ಜನಷಟ್ಪದೈರಹರಹಃ ಪೇಪೀಯಮಾನಂ ಮುದಾ**
**ಭೂಯಾದ್ಭಾರತಪಙ್ಕಜಂ ಕಲಿಮಲಪ್ರಧ್ವಂಸಿ ನಃ ಶ್ರೇಯಸೇ ॥**

| | |
|---|---|
| ಪರೀಧಾವಿ ಜ್ಯೇಷ್ಠ ಬಹುಳ | **ವರದದೇಶಿಕಾಚಾರ್ಯರಂಗಪ್ರಿಯ,** |
| ಏಕಾದಶೀ ಶುಕ್ರವಾರ | ಅಷ್ಟಾಂಗಯೋಗವಿಜ್ಞಾನಮಂದಿರಂ |
| 7-7-1972 | ಬೆಂಗಳೂರು. |

ಶ್ರೀಃ

# ಮಹಾಭಾರತ : ಆದಿಪರ್ವ-ವಿಷಯಾನುಕ್ರಮಣಿಕೆ

## ಎಂಟನೆಯ ಮುದ್ರಣದ ಪ್ರಸ್ತಾವನೆ

ಕರುಣಾಮಯನಾದ ಭಗವಂತನ ದಿವ್ಯಾನುಗ್ರಹದಿಂದಲೂ ಶ್ರೀರಂಗಸದ್ಗುರುವಿನ ಅಮೋಘವಾದ ಆಶೀರ್ವಾದದಿಂದಲೂ ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ 1ನೇ ಸಂಪುಟದ 8ನೇ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. ಇದರಿಂದಾಗಿ ಮಹಾಭಾರತದ ಪ್ರಥಮ ಸಂಪುಟದ 30 ಸಾವಿರ ಪ್ರತಿಗಳು ಹೊರಬಂದಿವೆ. ಆದರೆ ನಮ್ಮ ನಿರೀಕ್ಷೆ 1 ಲಕ್ಷ ಪ್ರತಿಯಾಗಿದೆ. 1 ಲಕ್ಷವನ್ನು ಮುಟ್ಟಿಸಿ ಕರ್ನಾಟಕದ ಸಹೋದರರ ಪ್ರತಿಯೊಂದು ಮನೆಯಲ್ಲಿಯೂ ಈ ಲೋಕೋತ್ತರ ಸದ್ಗ್ರಂಥವು ಇರಬೇಕೆಂಬುದು ನಮ್ಮ ಆಶಯವಾಗಿದೆ. ಭಗವಂತನ ದಯೆಯಿಂದ ಈ ಸತ್ಸಂಕಲ್ಪವು ಎಂದಿಗಾದರೂ ನೆರವೇರುತ್ತದೆಂದು ಭಾವಿಸಿದ್ದೇವೆ. ಪ್ರತಿಯೊಬ್ಬ ಗ್ರಾಹಕರು ಕೂಡ ತಮ್ಮ ನೆಂಟರಿಷ್ಟರು-ಬಂಧು- ಬಳಗದವರಲ್ಲಿ ಇಬ್ಬರನ್ನಾದರೂ ಗ್ರಾಹಕರನ್ನಾಗಿ ಮಾಡಿಕೊಟ್ಟು ಈ ಆಶಯವನ್ನು ಸಾರ್ಥಕಗೊಳಿಸುವಿರೆಂದು ಭಾವಿಸಿದ್ದೇವೆ. ಮಹಾಭಾರತದ ಪುನರ್ಮುದ್ರಣವಾಗದೆ ಉಳಿದಿರುವ 8 ಸಂಪುಟಗಳನ್ನು ಸಾಧ್ಯವಾದಷ್ಟು ಬೇಗ ಹೊರತರುವ ಪ್ರಯತ್ನದಲ್ಲಿದ್ದೇವೆ. ಹೊಸ ಗ್ರಾಹಕರು ಸ್ವಲ್ಪವಾದರೂ ಸಂಶಯಿಸದೆ ಇರುವ ಸಂಪುಟಗಳನ್ನು ಇಂದೇ ತೆಗೆದುಕೊಂಡು ಹೋಗಿ ನಮಗೆ ಸಹಕಾರ ನೀಡಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

ಶಾಂತಿ-ಪುಷ್ಟಿ-ತುಷ್ಟಿಗಳು ಸಮಸ್ತರಿಗೂ ಲಭಿಸಲಿ.

**–ಪ್ರಕಾಶಕರು.**

## ಪರಿಶಿಷ್ಟ

## ಮಧುಪರ್ಕದಲ್ಲಿ ಗೋಹನನವಿದೆಯೇ?

೬೦ನೆಯ ಅಧ್ಯಾಯದಲ್ಲಿ–ಜನಮೇಜಯನು ವ್ಯಾಸರನ್ನು ಸತ್ಕರಿಸಲು ಹಸುವನ್ನು ತಂದು ಸಮರ್ಪಿಸಿದುದೂ ಮತ್ತು ಹಸುವನ್ನು ಹೊಡೆದುಕೊಂಡು ಹೋಗುವಂತೆ ವ್ಯಾಸರು ಹೇಳಿದುದೂ–ಈ ಎರಡು ವಿಷಯಗಳೂ ಹೇಳಲ್ಪಟ್ಟಿವೆ. **ಅರ್ಘ್ಯಂ ಗಾಂ ಚ ವಿಧಾನತಃ। ಗಾಂ ಚೈವ ಸಮನುಜ್ಞಾಪ್ಯ**– ಇಲ್ಲಿ ಹಸುವನ್ನೇಕೆ ತಂದರೆಂಬುದೊಂದು ಸಮಸ್ಯೆ. ಮಧುಪರ್ಕಕ್ಕಾಗಿ ಹಸುವಿನ ಮಾಂಸವನ್ನು ಬಳಸುತ್ತಿದ್ದರೆಂದು ಕೆಲವರ ವಾದ. ಆಂಗ್ಲಭಾಷಾಂತರಕಾರನು–**ಗಾಂ ಚೈವ ಸಮನುಜ್ಞಾಪ್ಯ**–ಎಂಬುದಕ್ಕೆ 'ordering the kine also not to be slain' ಎಂದೇ ಭಾಷಾಂತರಿಸಿದ್ದಾನೆ. ಅರ್ಥಾತ್ ಹಸುವನ್ನು ಕೊಲ್ಲುವ ಸಲುವಾಗಿಯೇ ತರಲಾಯಿತೆಂಬ ಅರ್ಥವಾಗುತ್ತದೆ. ಆದರೆ ಈ ಅರ್ಥವು ಭಾರತೀಯಸಂಸ್ಕೃತಿಯ ನೈಜ ಸ್ವರೂಪವನ್ನು ತಿಳಿಯದೇ ಮಾಡುವ ಅರ್ಥವಾಗಿದೆ. **ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ** – ಎಂದು ಅನುದಿನವೂ ಸ್ವಸ್ತಿವಾಚನ ಹೇಳುವವರು ಹಸುವಿನ ಮಾಂಸವನ್ನೇ ಮಧುಪರ್ಕಕ್ಕಾಗಿ ಉಪಯೋಗಿಸುತ್ತಿದ್ದರೆಂಬುದು ಕೇವಲ ಅವಿವೇಕದ ಮಾತಾಗಿದೆ. ಇಂತಹ ದುಷ್ಟಸಂಪ್ರದಾಯವೊಂದಿದ್ದರೆ ಇದುವರೆಗೂ ಆ ಸಂಪ್ರದಾಯವು ಏಕೆ ಬೆಳೆದುಬಂದಿಲ್ಲವೆಂಬುದನ್ನಾದರೂ–ಹೀಗೆ ಅರ್ಥಮಾಡುವವರು ಯೋಚಿಸಬೇಕಾಗಿದ್ದಿತು. ಸಂಪ್ರದಾಯಗಳು ಸಾರ್ವಜನಿಕವಾಗಿ ಉಳಿಯದಿದ್ದರೂ ಸಂಪೂರ್ಣವಾಗಿ ನಶಿಸಿಹೋಗುವುದಿಲ್ಲ. ಅದರ ಕುರುಹಾದರೂ ಇರುತ್ತದೆ. ಯಂತ್ರಗಳಿಗೆ ಬಲಿಯನ್ನು ಕೊಡುವುದು ಒಂದು. ಅದೀಗ ನಿಂತುಹೋಗಿದೆ. ಆದರೆ ಬೂದುಕುಂಬಳ ಕಾಯಿಯಲ್ಲಿ ಓಕುಳಿಯನ್ನು ಹಾಕಿ ಅದನ್ನು ಯಂತ್ರಕ್ಕೆ ನಿವಾಳಿಸಿ ಒಡೆಯುವ ಪದ್ಧತಿ ಇಂದಿಗೂ ನಡೆದುಬಂದಿದೆ. ಈ ಕಾರಣದಿಂದಾಗಿ ಮಧುಪರ್ಕಕ್ಕೆ ಗೋವಿನ ಮಾಂಸವೇ ಬೇಕೆನ್ನುವುದಾಗಿದ್ದರೆ ಅದರ ಪ್ರತ್ಯಾಮ್ನಾಯವಾಗಿ ಏನನ್ನಾದರೂ ಸೇರಿಸುತ್ತಿದ್ದರು. ಕಡೆಗೆ ಅದರ ಒಂದು ತೊಟ್ಟು ರಕ್ತವನ್ನಾದರೂ ತೆಗೆದುಬಿಡುವ ಸಾಧ್ಯತೆಯಿದ್ದಿತು. ಆದರೆ ಹಾಗೆ ಮಾಡುತ್ತಿಲ್ಲ. ಕಾರಣ : ಹಸುವನ್ನು ಮಧುಪರ್ಕದ ಸಮಯದಲ್ಲಿ ತರುವುದು ಅದನ್ನು ವಧಿಸುವುದಕ್ಕಾಗಿ ಅಲ್ಲ. ಒಂದು ವೇಳೆ ಆ ದುಷ್ಟಸಂಪ್ರದಾಯವು ಸಂಪೂರ್ಣವಾಗಿ ಬಿಟ್ಟು

ಹೋಗಿದೆಯೆಂದೇ ಇಟ್ಟುಕೊಳ್ಳೋಣ. ಎಂದಾ ದರೂ ಒಂದೆರಡು ಕಡೆಗಳಲ್ಲಿ ನಡೆದಿದ್ದುದರ ಸಾಕ್ಷಿಯಾದರೂ ಇರಬೇಡವೇ? ಯಜ್ಞಗಳಲ್ಲಿ ಪಶುಗಳ (ಆಡುಗಳ) ಹನನವಾಗುತ್ತಿದ್ದುದಕ್ಕೆ ಸಾಕ್ಷಿಯಿದೆ. ಅದನ್ನು ನಿಲ್ಲಿಸಲು ಅನೇಕರು ಪ್ರಯತ್ನಿಸಿದ್ದ ವಿಷಯಗಳೂ ಚರಿತ್ರೆಯಲ್ಲಿ ಉಲ್ಲೇಖಿಸಲ್ಪಟ್ಟಿವೆ. ಆದರೆ ಮಧುಪರ್ಕಸಮಯದಲ್ಲಿ ಗೋಹನನ ಮಾಡುತ್ತಿದ್ದರೆಂಬುದು ಪೌರ್ವಾತ್ಯ ಅಥವಾ ಪಾಶ್ಚಾತ್ಯರ ಉಲ್ಲೇಖಗಳಲ್ಲಿ ಕಂಡುಬರುವುದಿಲ್ಲ. ಯಾವ ಚರಿತ್ರಕಾರನೂ ಈ ವಿಧವಾದ ಉಲ್ಲೇಖನ ಕೊಟ್ಟಂತೆ ಕಾಣುವುದಿಲ್ಲ. ಶ್ರುತಿ-ಸ್ಮೃತಿಗಳಲ್ಲಿರುವ ಕೆಲವು ಪದಗಳನ್ನು ತೆಗೆದುಕೊಂಡು ಅಪಾರ್ಥವನ್ನು ಕಲ್ಪಿಸಿದ್ದಾರೆ. ಇದನ್ನು ಸಿದ್ಧಪಡಿಸಲು ಪುಸ್ತಕವನ್ನೇ ಬರೆಯಬಹುದಾಗಿದೆ. ಪ್ರಕೃತಸಂದರ್ಭದಲ್ಲಿ ಜನಮೇಜಯನು ವ್ಯಾಸಮಹರ್ಷಿಗಳನ್ನು ಸತ್ಕರಿಸಲು ಹಸುವನ್ನೇಕೆ ತಂದನು? ಮತ್ತು ಅದೇ ಹಸುವನ್ನು ವ್ಯಾಸರು ಹಿಂದಕ್ಕೆ ಕಳುಹಿಸಿದರೇಕೆ?–ಎಂಬ ವಿಷಯವನ್ನು ತೆಗೆದುಕೊಳ್ಳೋಣ ; ಮಧುಪರ್ಕಕ್ಕೆ ಬೇಕಾದ ಸಾಮಗ್ರಿಗಳು : **ಆಜ್ಯಂ ದಧಿ ಮಧು ಮಿಶ್ರಂ ಮಧುಪರ್ಕೋ ವಿದುರ್ಬುಧಾಃ**(ತಂತ್ರಸಾರ) ತುಪ್ಪ, ಮೊಸರು ಮತ್ತು ಜೇನುತುಪ್ಪ–ಇವುಗಳ ಮಿಶ್ರಣವನ್ನು ಮಧುಪರ್ಕವೆನ್ನುತ್ತಾರೆ.

ಯಾಜ್ಞವಲ್ಕ್ಯಸ್ಮೃತಿಯಲ್ಲಿ–

**ಕಾಂಸ್ಯಪಾತ್ರೇ ಸಮಾಯುಕ್ತಂ ದಧಿಮಧುಘೃತೈರ್ಯುತಮ್ ।**
**ಮಧುಪರ್ಕಃ ಸ ವಿಜ್ಞೇಯಃ**

ಕಂಚಿನ ಪಾತ್ರೆಯಲ್ಲಿ ಸಿದ್ಧಗೊಳಿಸಿದ ಮೊಸರು, ಜೇನುತುಪ್ಪ ಮತ್ತು ಆಜ್ಯಮಿಶ್ರವಾದ ಪದಾರ್ಥಕ್ಕೆ ಮಧುಪರ್ಕವೆಂದು ಹೆಸರು. ಅರ್ಥಾತ್ ಮಧುಪರ್ಕದಲ್ಲಿ ಗೋಸಂಬಂಧವಾದ ಮೊಸರು ಮತ್ತು ತುಪ್ಪಗಳಿರ ಬೇಕೆಂದು ವಿಧಿಯಿರುವುದೇ ಹೊರತು ಹಸುವಿನ ಮಾಂಸವಿರಬೇಕೆಂಬ ಅಂಶವು ಸ್ವಲ್ಪವಾದರೂ ಕಾಣುವುದಿಲ್ಲ. ಆದುದರಿಂದ ಋಷಿ-ಮಹರ್ಷಿಗಳಿಗೆ ಮಧುಪರ್ಕವನ್ನು ಕೊಟ್ಟು ಸತ್ಕರಿಸುವಾಗ ಮತ್ತು ಮದುವೆಯಲ್ಲಿ ವರನಿಗೆ ಮಧುಪರ್ಕವನ್ನು ಕೊಡುವಾಗ ಕಂಚಿನ ಪಾತ್ರೆಯಲ್ಲಿ ಮೊಸರು, ತುಪ್ಪ, ಜೇನುತುಪ್ಪಗಳಿಂದ ಸಿದ್ಧಪಡಿಸಿದ ಮಧುಪರ್ಕವನ್ನು ಕೊಡಬೇಕೆಂಬ ಅಭಿಪ್ರಾಯವು ಬಂದಂತಾಯಿತು. ಮಧುಪರ್ಕದ ಸಮಯದಲ್ಲಿ ಹಸುವನ್ನು ತರುವ ಸಂಪ್ರದಾಯವೇಕೆ ಬಂತು?–ಎಂಬುದನ್ನಿಲ್ಲಿ ಸ್ವಲ್ಪ ವಿವೇಚಿಸಬೇಕಾ

ಗಿದೆ. ಗೋವಿಗೂ ಬ್ರಾಹ್ಮಣನಿಗೂ ನಿಕಟಸಂಬಂಧವಿದೆ. ಗೋವಿಲ್ಲದಿದ್ದರೆ ಬ್ರಾಹ್ಮಣನ ಎಷ್ಟೋ ನಿತ್ಯಕರ್ಮಗಳು ನಡೆಯುವುದಿಲ್ಲ. ಅವನು ಮಾಡ ಬೇಕಾದ ಅಗ್ನಿಹೋತ್ರ, ವೈಶ್ವದೇವ, ಔಪಾಸನಗಳೆಲ್ಲಕ್ಕೂ ತುಪ್ಪವು ಅತ್ಯಾ ವಶ್ಯಕ. ಈ ಕಾರಣದಿಂದ ಮಧುಪರ್ಕವನ್ನಿತ್ತು ಸತ್ಕರಿಸುವಾಗ ಅವನಿಗೆ ಪರಮಪ್ರಿಯವಾದ ಹಸುವನ್ನೂ ಪಾರಿತೋಷಿಕವಾಗಿ ಕೊಡುವ ಪದ್ಧತಿ ಬೆಳೆದು ಬಂದಿದೆ. ಮಗಳನ್ನು ಗಂಡನ ಮನೆಗೆ ಕಳುಹಿಸುವಾಗ ಅಡಿಗೆಯ ಪಾತ್ರೆಗಳನ್ನೂ ಕೊಟ್ಟು ಕಳುಹಿಸುವ ಪದ್ಧತಿಯಿದೆಯಲ್ಲವೇ? ವಿವಾಹಕಾಲ ದಲ್ಲಿ ಹಸುವನ್ನೂ ಧಾರೆಯೆರೆದುಕೊಡುವ ಪದ್ಧತಿಯೂ ಈಗಲೂ ಹಲವ ರಲ್ಲಿದೆ. ಅದೇ ರೀತಿಯಲ್ಲಿ–'ಹಸುವಿನ ತುಪ್ಪದಿಂದ ಮತ್ತು ಮೊಸರಿನಿಂದ ತಮಗೆ ಇಂದು ಮಧುಪರ್ಕವನ್ನು ಸಮರ್ಪಿಸಿದ್ದೇವೆ. ಮಧುಪರ್ಕವನ್ನು ತಾವು ನಮ್ಮ ಹೆಸರಿನಲ್ಲಿ ಅನುದಿನವೂ ಸ್ವೀಕರಿಸಲು ಸಾಧ್ಯವಾಗುವ ರೀತಿಯಲ್ಲಿ ಈ ಹಸುವನ್ನೂ ಸಹ ಸ್ವೀಕರಿಸಬೇಕು'–ಎಂಬ ಅಭಿಪ್ರಾಯದಿಂದ ಮಧುಪರ್ಕದ ಜೊತೆಗೆ ಹಸುವನ್ನೂ ತರುತ್ತಾರೆ. 'ಇಂದಿನ ಮಧುಪರ್ಕದಿಂದಲೇ ಸುಪ್ರೀತನಾಗಿರುತ್ತೇನೆ. ಇನ್ನು ಹಸುವಿನ ಅವಶ್ಯಕತೆಯಿಲ್ಲ'–ಎಂದು ಹಸುವನ್ನು ಹಿಂದಕ್ಕೆ ಕಳುಹಿಸುವುದು ಒಂದು ಸತ್ಸಂಪ್ರದಾಯ. ಅದು ಹೊರತಾಗಿ ಮಧುಪರ್ಕಕ್ಕೆ ಗೋಮಾಂಸವು ಬೇಕೆನ್ನುವುದಾಗಲೀ ಆ ಕಾರಣದಿಂದ ಹಸುವನ್ನು ತಂದರೆನ್ನುವುದಾಗಲೀ ಅಸಂಗತವಾದುದು. ಪ್ರಕೃತಸಂದರ್ಭವನ್ನೇ ತೆಗೆದುಕೊಳ್ಳೋಣ. ಒಂದು ವೇಳೆ ಹಸುವಿನ ಮಾಂಸವು ಮಧುಪರ್ಕಕ್ಕೆ ಅವಶ್ಯವೆನ್ನುವುದಾಗಿದ್ದಿದ್ದರೆ ವ್ಯಾಸಮಹರ್ಷಿಗಳು ಮೊದಲು 'ಹಸುವು ಬೇಡ' ಎಂದು ಹೇಳಿ ಅನಂತರದಲ್ಲಿ ಹಸುವನ್ನು ಬಿಟ್ಟು ಮಾಡಿದ ಸತ್ಕಾರದಿಂದಲೇ ಸುಪ್ರೀತರಾದರೆಂದು ಹೇಳುವ ಅವಶ್ಯಕತೆಯೇ ನಿದ್ದಿತು? **'ಪ್ರತಿಗೃಹ್ಯ ತು ತಾಂ ಪೂಜಾಂ'** ಅವನು ಸಮರ್ಪಿಸಿದ ಮಧುಪರ್ಕವನ್ನು ಸ್ವೀಕರಿಸಿ ಅನಂತರದಲ್ಲಿ **'ತಾಂ ಚೈವ ಸಮನುಜ್ಞಾಪ್ಯ'** (ಶ್ಲೋಕ ೧೪) ಗೋವನ್ನು ಗೋಶಾಲೆಗೆ ಕೊಂಡೊಯ್ಯಲು ಅನುಮತಿಯನ್ನಿತ್ತು–ಎಂದು ಸ್ಪಷ್ಟವಾಗಿ ಹೇಳಿದೆ. ಇತ್ಯಾದ್ಯನೇಕ ಕಾರಣಗಳಿಂದ ವೇದವಿದನಾದ ಮತ್ತು ಬ್ರಹ್ಮಜ್ಞನಾದ ಬ್ರಾಹ್ಮಣನಿಗೆ ಹೆಚ್ಚಿನ ಮರ್ಯಾದೆಯನ್ನು ತೋರಿಸುವ ಕಾರಣದಿಂದ ಹಸುವನ್ನು ಮಧುಪರ್ಕದ ಸಮಯದಲ್ಲಿ ತರುತ್ತಿದ್ದರೇ ಹೊರತು ಇದಕ್ಕೆ ಮತ್ತಾವ ಅರ್ಥವಾಗಲೀ–ಕಾರಣವಾಗಲೀ ಇಲ್ಲ.

ಎರಡನೆಯದಾಗಿ : ಮತ್ತೊಂದು ವಿಷಯವನ್ನೂ ನಾವಿಲ್ಲಿ ಯೋಚಿಸ ಬೇಕಾಗಿದೆ. ಗೋಮಧುಪರ್ಕವನ್ನು ಕೊಡುವ ಕಡೆಗಳಲ್ಲೆಲ್ಲಾ 'ಓಮುತ್ಸೃಜತ' 'ಹಸುವನ್ನು ಬಿಟ್ಟುಬಿಡಿರಿ' ಎಂಬ ವಾಕ್ಯವು ಕೂಡಿಯೇ ಬರುತ್ತದೆ. ಹಸುವನ್ನು ಹನನಮಾಡಿ ಮಧುಪರ್ಕ ನೀಡುವುದೇ ಹಸುವನ್ನು ತರುವ ಉದ್ದೇಶವಾಗಿ ದ್ದರೆ ಒಮ್ಮೆಯಾದರೂ ಒಬ್ಬರಾದರೂ–'ಗೋಮಾಂಸದಿಂದ ಕೂಡಿದ ಮಧುಪರ್ಕವನ್ನು ಸ್ವೀಕರಿಸಿ ಪ್ರೀತನಾಗಿದ್ದೇನೆ'–ಎಂದೇಕೆ ಹೇಳಿಲ್ಲ? ಆದು ದರಿಂದ ಈ ಅರ್ಥವು ನಿಶ್ಚಯವಾಗಿಯೂ ಅಪಾರ್ಥವೇ ಸರಿ. ಈಗಿನ ಕಾಲದಲ್ಲಿ ದೊಡ್ಡ-ದೊಡ್ಡ ಅಧಿಕಾರಿಗಳನ್ನೂ ಮಠಾಧಿಪತಿಗಳನ್ನೂ ಮಂತ್ರ ಪೂತವಾದ ಪೂರ್ಣಕುಂಭದೊಡನೆ ಸ್ವಾಗತಿಸುತ್ತಾರೆ. ಬಂದ ಮಾನ್ಯ ಆಹ್ವಾನಿತರು ಪೂರ್ಣಕುಂಭವನ್ನು ಸಾಂಪ್ರದಾಯಿಕವಾಗಿ ಮುಟ್ಟಿ ಒಳಗೆ ಬರುತ್ತಾರೆ. ಹಿಂದೆ ಇದೇ ರೀತಿಯಲ್ಲಿ ಋಷಿಗಳನ್ನೂ ತಪಸ್ವಿಗಳನ್ನೂ ಗೌರವಿ ಸಲು ಗೋಮಧುಪರ್ಕವನ್ನು ಕೊಡುತ್ತಿದ್ದರು. ಸಿಂಗರಿಸಿದ ಹಸುವನ್ನು ಅಭ್ಯಾಗತನ ಮುಂದೆ ತಂದು ನಿಲ್ಲಿಸುವುದು ಅಂದಿನ ಸಂಪ್ರದಾಯವಾಗಿತ್ತು. ಇದೇ ಹೊರತಾಗಿ ಬೇರೆ ಯಾವ ಅರ್ಥವೂ ಇದರಿಂದ ಕಂಡುಬರುವುದಿಲ್ಲ. ಈ ವಿಧದಲ್ಲಿ ವೇದಗಳಿಗೆ, ಶ್ರುತಿ-ಸ್ಮೃತಿಗಳಿಗೆ ಕುತ್ಸಿತವಾಗಿ ಅರ್ಥಮಾಡು ವವರನ್ನು ನಮ್ಮ ವಿದ್ವಾಂಸರು ಆಯಾ ಸಮಯಗಳಲ್ಲಿಯೇ ಖಂಡಿಸದಿದ್ದರೆ ನಮ್ಮ ಸಂಸ್ಕೃತಿಯು ಕುಸಂಸ್ಕೃತಿಯಾಗಿಯೂ ಪರಿಣಮಿಸಬಹುದು.

---

## ಆರನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಶ್ರೀಮನ್ಮಹಾಭಾರತದ ಮೊದಲನೆಯ ಸಂಪುಟದ ಆರನೆಯ ಮುದ್ರಣವನ್ನು ಮುಗಿಸುತ್ತಿದ್ದೇವೆ. ಈ ಜನಪ್ರಿಯ ಸಂಪುಟವು ಆರನೆಯ ಮುದ್ರಣವನ್ನು ಕಾಣುತ್ತಿದೆಯೆಂಬ ಹಿಗ್ಗು ನಮಗಿದೆ. ಆದರೆ ಇದನ್ನು ಹೊರತರಬೇಕಾದರೆ ಆಗುವ ಆರ್ಥಿಕವಾದ ಕಷ್ಟವನ್ನು ನೆನಸಿಕೊಂಡರೆ ಪ್ರತಿಗಳು ಏಕೆ ಮುಗಿದು ಹೋಗುತ್ತವೆ?–ಎಂಬ ಅನಿಸಿಕೆ ಉಂಟಾಗುತ್ತದೆ. ಈಗಿನ ಬೆಲೆಗಳಿಗೆ ಅನುಗುಣವಾಗಿ ಸಂಪುಟಕ್ಕೆ ಆಗುವ ವೆಚ್ಚವನ್ನು ನಿರ್ಧರಿಸಿ ಯಥೋಚಿತವಾದ ಲಾಭವನ್ನೂ ಸೇರಿಸಿ ಮೂಲಬೆಲೆಯನ್ನು ನಿರ್ಧರಿಸುವುದಾದರೆ 640 ಪುಟಗಳ ಕ್ಯಾಲಿಕೋ ಸಂಪುಟದ ಬೆಲೆ ಕಡೆಯಪಕ್ಷ 35/-ರೂ.ಗಳಾಗುತ್ತವೆ. ಆಗ ಹೆಚ್ಚು ಕೊಳ್ಳುವವರೂ ಮುಂದೆ ಬರುವುದಿಲ್ಲ. ಪುನರ್ಮುದ್ರಣಮಾಡುವ ಪ್ರಶ್ನೆಯೂ ಉದ್ಭವಿಸುವುದಿಲ್ಲ.

ಆದರೆ ಹೀಗೆ ಮಾಡಿದರೆ ನಮ್ಮ ಮೂಲೋದ್ದೇಶಕ್ಕೆ ಘಾತವಾಗುತ್ತದೆ. ಸುಲಭಬೆಲೆಯಲ್ಲಿ ಜನಸಾಮಾನ್ಯರಿಗೆ ಎಟಕುವಂತೆ ಮಹಾಭಾರತ-ರಾಮಾಯಣ- ಭಾಗವತಗಳನ್ನು ಪ್ರಕಟಿಸಿ ವಿತರಿಸುವುದು. ಎಲ್ಲ ಕನ್ನಡಿಗರ ಮನೆಗಳಲ್ಲಿಯೂ ಈ ದಿವ್ಯಜ್ಞಾನಜ್ಯೋತಿಗಳು ಬೆಳಗುವಂತೆ

ಮಾಡುವುದು ; ಇದು ನಮ್ಮ ಪ್ರಕಟಣೆಯ ಮುಖ್ಯವಾದ ಉದ್ದೇಶ. ಮಹಾಭಾರತ-ರಾಮಾಯಣಗಳ ಅಧ್ಯಯನ ಜೀವನದಲ್ಲಿ ಅತ್ಯಾವಶ್ಯಕ. ಮಾನವನು ದೈವತ್ವವನ್ನು ಹೊಂದಬೇಕಾದರೆ ಇವುಗಳನ್ನು ಅಧ್ಯಯನಮಾಡಲೇಬೇಕು–ಎಂದು ನಾವು ಎಷ್ಟೇ ಬೋಧಿಸಿದರೂ ಮಧ್ಯಮವರ್ಗದ ಜನರಿಗೆ ಒಂದು ಸಾವಿರ ರೂ.ಗಳನ್ನು ಕೊಟ್ಟು ಮಹಾಭಾರತದ ಸೆಟ್ಟನ್ನು ಪಡೆದುಕೊಳ್ಳಲು ಸಾಧ್ಯವಾಗುವುದೆಂದು ಹೇಳಲಾಗುವುದಿಲ್ಲ. ಈ ಕಾರಣದಿಂದಲೇ ಲಾಭವೂ ಇಲ್ಲ ; ನಷ್ಟವೂ ಇಲ್ಲ ಎಂಬ ನೀತಿಯನ್ನು ಅನುಸರಿಸಿ ಬೆಲೆಯನ್ನು ನಿರ್ಧರಿಸುತ್ತಿದ್ದೆವು. ಆದರೆ ಕಾಗದದ ಮತ್ತು ಇತರ ಪದಾರ್ಥಗಳ ಅನಿರೀಕ್ಷಿತವಾದ ಬೆಲೆಯ ಹೆಚ್ಚಳದಿಂದಾಗಿ ನಮ್ಮ ಯೋಜನೆಗಳೆಲ್ಲವೂ ತಲೆಕೆಳಗಾಗಿದೆ. ಐದು ಸಾವಿರ ಪ್ರತಿಗಳಿಗೆ ಆಗುತ್ತಿದ್ದ ವೆಚ್ಚವು ಮೂರು ಸಾವಿರ ಪ್ರತಿಗಳಿಗೆ ಆಗುತ್ತಿದೆ. ಈ ಕಾರಣದಿಂದ ನಮ್ಮ ಆರ್ಥಿಕಸ್ಥಿತಿಯು ದುರ್ಬಲವಾಗುತ್ತಿದೆ.

ನಮ್ಮ ಗ್ರಾಹಕವೃಂದದಲ್ಲಿ ಹಲವಾರು ಆಢ್ಯರಿದ್ದಾರೆ. ಈ ಸಮಯದಲ್ಲಿ ದೈವಪ್ರೇರಣೆಯಿಂದ ಅಂತಹವರೇನಾದರೂ ಆರ್ಥಿಕನೆರವು ನೀಡಲು ಮುಂದೆ ಬಂದರೆ ನಮ್ಮ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಈ ಮಹಾಗ್ರಂಥಗಳನ್ನು ವ್ಯಾಪಕವಾಗಿ ಪ್ರಚಾರಮಾಡಲು ನಮಗೂ ಸಾಧ್ಯವಾಗುತ್ತದೆ. ಇದು ದಯಾಮಯನಾದ ಪರಮಾತ್ಮನ ಪ್ರೇರಣೆಯಿಂದ ಆಗಬೇಕು.

ಎಂದಿನಂತೆಯೇ ಸಂಪಾದಕಮಂಡಲಿಯ ವಿದ್ವಾಂಸರು ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟು ಸಹಕರಿಸಿರುತ್ತಾರೆ. ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಕೆಲವು ದಿವಸಗಳಲ್ಲಿಯೇ 2 ಮತ್ತು 3ನೆಯ ಸಂಪುಟಗಳನ್ನು ಪುನರ್ಮುದ್ರಣಮಾಡುವ ಯೋಜನೆಯಿದೆ. 15 ಮತ್ತು 29ನೆಯ ಸಂಪುಟಗಳನ್ನು ಅವಶ್ಯವಾಗಿ ಪುನರ್ಮುದ್ರಣಮಾಡಬೇಕಾಗಿದೆ. ಸುಮಾರು ನಾಲ್ಕು ವರ್ಷಗಳಿಂದ ಆ ಸಂಪುಟಗಳಿಗಾಗಿ ಗ್ರಾಹಕರು ಕಾದಿರುತ್ತಾರೆ. ಎಲ್ಲ ಸಂಪುಟಗಳ ಪುನರ್ಮುದ್ರಣವನ್ನೂ ಮಾಡುವ ಚೈತನ್ಯವನ್ನು ದಯಾಮಯನಾದ ಭಗವಂತನು ದಯಪಾಲಿಸಲೆಂಬ ಹೃತ್ಪೂರ್ವಕವಾದ ಪ್ರಾರ್ಥನೆಯೊಡನೆ ವಿರಮಿಸುವೆವು.

**–ಪ್ರಕಾಶಕರು.**

ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಶ್ರೀಮನ್ಮಹಾಭಾರತ-ಆದಿಪರ್ವ
# ಒಂದನೆಯ ಸಂಪುಟ

೧ನೆಯ ಅಧ್ಯಾಯ ಅನುಕ್ರಮಣಿಕಾಪರ್ವ

## ಗ್ರಂಥದ ಉಪಕ್ರಮ : ಗ್ರಂಥದಲ್ಲಿ ಬರುವ ವಿಷಯಗಳ ಸಂಕ್ಷೇಪಸೂಚಿ ಮತ್ತು ಮಹಾಭಾರತದ ಮಹಿಮೆ

## ಓಂ ನಮೋ ಭಗವತೇ ವಾಸುದೇವಾಯ

"ನಾರಾಯಣನನ್ನೂ, ನರಶ್ರೇಷ್ಠನಾದ ಅರ್ಜುನನನ್ನೂ, ಸರಸ್ವತೀದೇವಿಯನ್ನೂ–ನಮಸ್ಕರಿಸಿದನಂತರದಲ್ಲಿ ಜಯವನ್ನು (ಮಹಾಭಾರತವನ್ನು) ಪ್ರವಚನಮಾಡಬೇಕು. ನಾರಾಯಣನನ್ನೂ, ನರಶ್ರೇಷ್ಠನಾದ ನರಮುನಿಯನ್ನೂ (ಅರ್ಜುನನನ್ನೂ) ಮತ್ತು ಸರಸ್ವತೀದೇವಿಯನ್ನೂ ನಮಸ್ಕರಿಸಿ ಅನಂತರ ಜಯವನ್ನು (ಮಹಾಭಾರತವನ್ನು) ಹೇಳಬೇಕು."

---

* 'ಸರಸ್ವತೀಂ ಚೈವ' ಎಂಬುದರ ಬದಲು 'ಸರಸ್ವತೀಂ ವ್ಯಾಸ' ಎಂಬ ಪಾಠಾಂತರವೂ ಉಂಟು. ಇದು ವ್ಯಾಸಭಾರತದ ಮಂಗಳಶ್ಲೋಕ. ವ್ಯಾಸರು ಮಂಗಳ ಶ್ಲೋಕದಲ್ಲಿ ತಾವೇ ತಮ್ಮ ನಮಸ್ಕಾರವನ್ನು ಹೇಳಿಕೊಳ್ಳುತ್ತಾರೆಯೇ? ಆದ್ದರಿಂದ 'ದೇವೀಂ ಸರಸ್ವತೀಂ ಚೈವ' ಎಂಬ ಪಾಠವೇ ಸರಿ ಎಂದು ಒಂದು ಅಭಿಪ್ರಾಯ. 'ವ್ಯಾಸಂ' ಎನ್ನುವುದು ಒಂದು ಪದವಿಯ ಹೆಸರಾದ್ದರಿಂದ ವೇದವ್ಯಾಸರೂ ಅದಕ್ಕೆ ನಮಸ್ಕಾರ ಮಾಡುವುದರಲ್ಲಿ ದೋಷವಿಲ್ಲ. ಆದ್ದರಿಂದ 'ದೇವೀಂ ಸರಸ್ವತೀಂ ವ್ಯಾಸಂ' ಎಂಬ ಪಾಠವೂ ಸರಿಯೆಂದು ಕೆಲವರು ಹೇಳುತ್ತಾರೆ. ಜೀವಾತ್ಮ-ಪರಮಾತ್ಮಸ್ವರೂಪದಿಂದ ನರ-ನಾರಾಯಣರಿಗೂ, ಅವರ ನಿಜಸ್ವರೂಪವನ್ನು ಪ್ರಕಟಿಸುವ ದಿವ್ಯವಾಣಿಯಾದ ಸರಸ್ವತಿಗೂ, ಅದನ್ನು ದಯಪಾಲಿಸಿದ ವೇದವ್ಯಾಸಮುನಿಗಳಿಗೂ ನಮಸ್ಕಾರಮಾಡಿದರೆ ಧರ್ಮವಿಜಯ ಮತ್ತು ಆತ್ಮವಿಜಯಗಳು ಸಿದ್ಧಿಸುತ್ತವೆ.

**ಓಂ ನಮೋ ಭಗವತೇ ವಾಸುದೇವಾಯ**
**ಓಂ ನಮಃ ಪಿತಾಮಹಾಯ**
**ಓಂ ನಮಃ ಪ್ರಜಾಪತಿಭ್ಯಃ**
**ಓಂ ನಮಃ ಕೃಷ್ಣದ್ವೈಪಾಯನಾಯ**
**ಓಂ ನಮಃ ಸರ್ವವಿಘ್ನವಿನಾಯಕೇಭ್ಯಃ**

ಭಗವಂತನಾದ, ಓಂಕಾರಸ್ವರೂಪನಾದ ವಾಸುದೇವನಿಗೆ ನಮಸ್ಕಾರ ವಿರಲಿ. ಓಂಕಾರಸ್ವರೂಪನಾದ ಪಿತಾಮಹನಿಗೆ ನಮಸ್ಕಾರವಿರಲಿ. ಓಂಕಾರ ಸ್ವರೂಪರಾದ ಪ್ರಜಾಪತಿಬ್ರಹ್ಮರಿಗೆ ನಮಸ್ಕಾರವಿರಲಿ. ಓಂಕಾರಸ್ವರೂಪರಾದ ಕೃಷ್ಣದ್ವೈಪಾಯನರಿಗೆ ನಮಸ್ಕಾರವಿರಲಿ. ಓಂಕಾರಸ್ವರೂಪರಾದ, ಸರ್ವ ವಿಘ್ನವಿನಾಶಕರಾದ ವಿನಾಯಕರಿಗೆ ನಮಸ್ಕಾರವಿರಲಿ.

ಹಿಂದೊಮ್ಮೆ ನೈಮಿಷಾರಣ್ಯದಲ್ಲಿ *ಕುಲಪತಿಗಳಾದ ಶೌನಕರ ಹನ್ನೆರಡು ವರ್ಷಪರ್ಯಂತವಾದ ಸತ್ರಯಾಗದಲ್ಲಿ ಭಾಗವಹಿಸಿದ್ದ ಋತ್ವಿಜರು ಯಜ್ಞದ ವಿರಾಮಕಾಲದಲ್ಲಿ ವಿಶ್ರಾಂತಿಸುಖವನ್ನನುಭವಿಸು ತ್ತಿದ್ದರು. ಸುಖಾಸೀನರಾಗಿದ್ದ, ಕಠೋರವ್ರತನಿಷ್ಠರಾಗಿದ್ದ ಬ್ರಹ್ಮರ್ಷಿಗಳಿಗೆ ಲೋಮಹರ್ಷಣರ ಪುತ್ರರಾದ ಪೌರಾಣಿಕರಾದ ಉಗ್ರಶ್ರವಸೌತಿಗಳು ವಿನೀತರಾಗಿ ನಮಸ್ಕರಿಸಿದರು.

ತಮ್ಮ ಆಶ್ರಮಕ್ಕೆ ಆಗಮಿಸಿದ ಪೌರಾಣಿಕರನ್ನು ಕಂಡೊಡನೆಯೇ

---

ಆ ಧರ್ಮವಿಜಯ–ಆತ್ಮವಿಜಯಗಳನ್ನು ಸಾರುವ ವಾಣಿಯಾದ ಭಾರತಕ್ಕೂ 'ಜಯ' ಎಂಬ ಹೆಸರು ಅನ್ವರ್ಥವಾಗಿದೆ.

ಭಾರತಕ್ಕೆ ಮಾತ್ರವಲ್ಲದೇ ಪುರಾಣಗಳು, ರಾಮಾಯಣ, ವಿಷ್ಣುಧರ್ಮ, ಶಿವಧರ್ಮ, ಪುರುಷಾರ್ಥಪ್ರತಿಪಾದಕವಾದ ಬ್ರಹ್ಮಸೂತ್ರ ಮುಂತಾದುವುಗಳಿಗೂ 'ಜಯ' ವೆಂಬ ಸಂಜ್ಞೆಯಿದೆ. ಅವೆಲ್ಲದರ ಗುರಿಯೂ ಧರ್ಮವಿಜಯ-ಆತ್ಮವಿಜಯಗಳೇ ಆಗಿವೆ.

"ಅಷ್ಟಾದಶಪುರಾಣಾನಿ ರಾಮಸ್ಯ ಚರಿತಂ ತಥಾ । ಕಾರ್ಷ್ಣಂ ವೇದಂ ಪಂಚಮಂ ಚ ಯಂ ಮಹಾಭಾರತಂ ವಿದುಃ । ತಥೈವ ವಿಷ್ಣುಧರ್ಮಾಶ್ಚ ಶಿವಧರ್ಮಾಶ್ಚ ಶಾಶ್ವತಾಃ । ಜಯೇತಿ ನಾಮ ತೇಷಾಂ ಚ ಪ್ರವದನ್ತಿ ಮನೀಷಿಣಃ ॥" (ಭವಿಷ್ಯಪುರಾಣ)

* ಹತ್ತು ಸಾವಿರ ಜಿಜ್ಞಾಸುಗಳಿಗೆ ಅನ್ನ-ಪಾನಾದಿಗಳನ್ನಿತ್ತು ಪೋಷಿಸುವ ಬ್ರಹ್ಮರ್ಷಿಗೆ ಕುಲಪತಿಯೆಂದು ಹೆಸರು.

ಸುಖಾಸೀನರಾಗಿದ್ದ *ನೈಮಿಷಾರಣ್ಯವಾಸಿಗಳಾದ ತಪಸ್ವಿಗಳು ಚಿತ್ರ-ವಿಚಿತ್ರ ವಾದ ಕಥೆಗಳನ್ನು ಸೌತಿಗಳಿಂದ ಕೇಳಿ ತಿಳಿದುಕೊಳ್ಳಬೇಕೆಂಬ ಆಶಯದಿಂದ ಅವರನ್ನು ಸುತ್ತುವರಿದು ಕುಳಿತರು. ಸತ್ಪುರುಷರಿಂದ ಸತ್ಕೃತರಾದ ಸೌತಿಗಳು ತಮ್ಮ ಸುತ್ತಲೂ ಕುಳಿತಿದ್ದ ಎಲ್ಲ ಋಷಿಗಳಿಗೂ ಅಭಿವಾದನಮಾಡಿ ಬದ್ಧಾಂಜಲಿಗಳಾಗಿ–'ತಮ್ಮ ತಪಸ್ಸು ಈತಿಬಾಧೆಗಳಿಲ್ಲದೇ ವೃದ್ಧಿಸುತ್ತಿರು ವುದೇ?'–ಎಂದು ಪ್ರಶ್ನಿಸಿದರು .

ಪರಸ್ಪರ ಕುಶಲಪ್ರಶ್ನೆಗಳಾದನಂತರ ಉಗ್ರಶ್ರವಸೌತಿಗಳಿಗೆ ಒಂದು ಆಸನವನ್ನು ಸಿದ್ಧಪಡಿಸಿ, ಕುಳಿತುಕೊಳ್ಳುವಂತೆ ಅವರನ್ನು ಪ್ರಾರ್ಥಿಸಿ, ತಪಸ್ವಿಗಳೆಲ್ಲರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು. ಋಷಿ ಸತ್ತಮರಿತ್ತ ಆಸನದಲ್ಲಿ ಸೌತಿಗಳು ಬಹುವಿನೀತರಾಗಿ ಕುಳಿತರು. ಸ್ವಲ್ಪ ಹೊತ್ತು ಕಳೆದನಂತರ ಸುಖಾಸೀನರಾಗಿದ್ದ ಸೌತಿಗಳು ಆಯಾಸವನ್ನು ಪರಿ ಹಾರಮಾಡಿಕೊಂಡಿರುವರೆಂಬುದನ್ನು ಅವರ ಮುಖಭಾವದಿಂದ ತಿಳಿದು ಕೊಂಡು ಋಷಿಗಳ ಸಮೂಹದಲ್ಲಿದ್ದವರೊಬ್ಬರು ಸಮಯೋಚಿತವಾಗಿ ಮಾತನಾಡುತ್ತಾ ಸೌತಿಗಳನ್ನು ಪ್ರಶ್ನಿಸಿದರು :

"ಕಮಲಪತ್ರಾಕ್ಷರೇ! ತಾವು ಎಲ್ಲಿಂದ ಆಗಮಿಸಿದಿರಿ? ಇದುವರೆಗೂ ತಾವು ಎಲ್ಲಿದ್ದಿರಿ?–ಈ ನನ್ನ ಪ್ರಶ್ನೆಗಳಿಗೆ ದಯಮಾಡಿ ಉತ್ತರಿಸಿರಿ."

ಅದಕ್ಕೆ ವಚನಸಂಪನ್ನರಾದ ಸೌತಿಗಳು, ಭಾವಿತಾತ್ಮರಾದ ಮುನಿಗಳಿದ್ದ ಆ ಮಹಾಸಭೆಯಲ್ಲಿ ಸಭ್ಯರಿಗೆ ಹೀಗೆ ಹೇಳಿದರು :

"ಮಹಾತ್ಮನಾದ, ಪಾರ್ಥಿವೇಂದ್ರನಾದ, ರಾಜರ್ಷಿಯಾದ ಪಾರಿಕ್ಷಿತನ (ಜನಮೇಜಯನ) ಸರ್ಪಯಾಗದಲ್ಲಿ–ಶ್ರೀಕೃಷ್ಣದ್ವೈಪಾಯನಪ್ರೋಕ್ತವಾದ, ಪುಣ್ಯಕರವಾದ ವಿಧ-ವಿಧವಾದ ಕಥೆಗಳು ವೈಶಂಪಾಯನರಿಂದ ಹೇಳ ಲ್ಪಟ್ಟುವು. ವಿಚಿತ್ರಾರ್ಥಗಳಿಂದ ಕೂಡಿದ ಮಹಾಭಾರತದಲ್ಲಿರುವ ಆ ಕಥೆ

---

* 'ನೈಮಿಷ' ಎಂಬ ಪದದ ಅರ್ಥವು ವರಾಹಪುರಾಣದಲ್ಲಿ ವಿವೃತವಾಗಿದೆ :

ಏವಂ ಕೃತ್ವಾ ತತೋ ದೇವೋ ಮುನಿಂ ಗೌರಮುಖಂ ತದಾ ।
ಉವಾಚ ನಿಮಿಷೇಣೇದಂ ನಿಹತಂ ದಾನವಂ ಬಲಮ್ ॥
ಅರಣ್ಯೇಽಸ್ಮಿಂಸ್ತತಸ್ತ್ವೇತನ್ನೈಮಿಷಾರಣ್ಯಸಂಜ್ಞಿತಮ್ ।

ಗಳನ್ನು ವೈಶಂಪಾಯನರಿಂದ ಕೇಳಿಕೊಂಡು ನಾನು ಅಲ್ಲಿಂದ ಮುಂದೆ ತೀರ್ಥ ಯಾತ್ರೆಗೆಂದು ಹೊರಟು, ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ಹಿಂದೆ ಕೌರವ-ಪಾಂಡವರ ಯುದ್ಧಭೂಮಿಯಾಗಿದ್ದ ಕುರುಕ್ಷೇತ್ರದ ಸಮೀಪದಲ್ಲಿರುವ ಸಮಂತಪಂಚಕವೆಂಬ ಸರೋವರವನ್ನು ಸಂದರ್ಶಿಸಿದೆನು. ತಪೋಧನರಾದ ತಮ್ಮ ದರ್ಶನಾಕಾಂಕ್ಷೆಯಿಂದ ಇಂದು ಇಲ್ಲಿಗೆ ಬಂದಿರುವೆನು. ಇಲ್ಲಿ ಉಪಸ್ಥಿತರಾಗಿರುವ, ಶೌನಕರ ಮಹಾಸತ್ರದಲ್ಲಿ ಋತ್ವಿಜರ ಸ್ಥಾನವನ್ನು ವಹಿಸಿರುವ ನೀವೆಲ್ಲರೂ ಆಯುಷ್ಮಂತರೂ, ಬ್ರಹ್ಮಭೂತರೂ, ಮಹಾ ಭಾಗರೂ, ಸೂರ್ಯಾಗ್ನಿಗಳಿಗೆ ಸಮಾನವಾದ ತೇಜಸ್ಸುಳ್ಳವರೂ ಆಗಿರುವಿ ರೆಂಬುದು ನನ್ನ ಅಭಿಪ್ರಾಯವಾಗಿದೆ. ನೀವೆಲ್ಲರೂ ಸ್ನಾನ, ಸಂಧ್ಯಾವಂದನೆ, ಜಪ ಮತ್ತು ಅಗ್ನಿಹೋತ್ರಗಳನ್ನು ಮುಗಿಸಿಕೊಂಡು ನಿಮ್ಮ-ನಿಮ್ಮ ಆಸನಗಳಲ್ಲಿ ಸ್ವಸ್ಥಚಿತ್ತದಿಂದ ಉಪಸ್ಥಿತರಾಗಿರುವಿರಿ. ಬ್ರಾಹ್ಮಣೋತ್ತಮರೇ! ನಾನು ಯಾವ ಕಥಾಭಾಗವನ್ನು ಹೇಳಬೇಕೆಂಬುದನ್ನು ನೀವು ದಯಮಾಡಿ ಆಜ್ಞಾಪಿಸಿರಿ. ಧರ್ಮ ಮತ್ತು ಅರ್ಥಗಳ ರಹಸ್ಯಗಳನ್ನೊಳಗೊಂಡ, ಅಂತಃಕರಣದ ಶುದ್ಧಿಯನ್ನುಂಟುಮಾಡುವ ಪುರಾಣಗಳನ್ನು ಹೇಳಲೇ? ಉದಾರಚಿತ್ತರಾದ, ಮಹಾತ್ಮರಾದ, ನರೇಂದ್ರರ ಮತ್ತು ಮಹರ್ಷಿಗಳ ಇತಿಹಾಸಗಳನ್ನು ಹೇಳಲೇ?"

ಮಹಾಭಾರತದ ಕಥೆಯನ್ನು ವೈಶಂಪಾಯನರಿಂದ ಕೇಳಿಬಂದಿರುವು ದಾಗಿ ಸೌತಿಗಳು ಈ ಹಿಂದೆ ಹೇಳಿದ್ದರಿಂದ ಋಷಿಗಳಿಗೂ ಸಹ ಮಹಾ ಭಾರತದ ಕಥೆಯನ್ನೇ ಕೇಳಬೇಕೆನ್ನಿಸಿತು. ಅಂತೆಯೇ ಸೌತಿಗಳನ್ನು ಕುರಿತು ಹೇಳಿದರು :

"ಪರಮರ್ಷಿಗಳಾದ ಕೃಷ್ಣದ್ವೈಪಾಯನರಿಂದ ಯಾವುದು ಹೇಳ ಲ್ಪಟ್ಟಿತೋ, ಯಾವ ಪುಣ್ಯಚರಿತವನ್ನು ಕೇಳಿ ದೇವತೆಗಳೂ ಮತ್ತು ಬ್ರಹ್ಮರ್ಷಿ ಗಳೂ ಅಭಿನಂದಿಸಿದರೋ, ಯಾವುದು ಎಲ್ಲ ಆಖ್ಯಾನಗಳಿಗೂ ಶ್ರೇಷ್ಠವಾದು ದೆಂದು ಪರಿಗಣಿತವಾಗಿರುವುದೋ, ಯಾವುದರ ಒಂದೊಂದು ಪದವೂ– ವಾಕ್ಯವೂ–ಪರ್ವವೂ ವಿಚಿತ್ರವಾಗಿದೆಯೋ, ಯಾವುದು ಯುಕ್ತಶಬ್ದವಿನ್ಯಾಸ ದಿಂದಲೂ ಮತ್ತು ರಮಣೀಯವಾದ ಅರ್ಥದಿಂದಲೂ ಕೂಡಿರುವುದೋ, ಯಾವುದರಲ್ಲಿ ಆತ್ಮದ ಸೂಕ್ಷ್ಮಸ್ವರೂಪನಿರ್ಣಯವಿರುವುದೋ, ಆತ್ಮಾನು

ಭವಕ್ಕಾಗಿ ಅನೇಕಮಾರ್ಗಗಳು ಯಾವುದರಲ್ಲಿ ವರ್ಣಿತವಾಗಿರುವುದೋ ಮತ್ತು ವೇದಾರ್ಥಗಳಿಂದ ಯಾವುದು ಭೂಷಿತವಾಗಿರುವುದೋ–ಅಂತಹ ಭರತವಂಶದವರ ಇತಿಹಾಸವಾದ, ಮಹಾಪುಣ್ಯಕರವಾದ, ಗ್ರಂಥದ ಗುಪ್ತ ಭಾಗವನ್ನು ಸುಸ್ಪಷ್ಟವಾಗಿ ವಿವರಿಸುವ, ಪದ-ವಾಕ್ಯಗಳ ವ್ಯುತ್ಪತ್ತಿಯಿಂದ ಕೂಡಿರುವ, ಸುಸಂಸ್ಕೃತವಾದ, ನಾನಾಶಾಸ್ತ್ರಗಳ ನಾನಾವಿಧವಾದ ಸಿದ್ಧಾಂತ ಗಳನ್ನೂ ತನ್ನಲ್ಲಿಯೇ ಅಳವಡಿಸಿಕೊಂಡಿರುವ ಯಾವ ದಿವ್ಯವಾಣಿಯನ್ನು ವ್ಯಾಸರ ಆಜ್ಞೆಯಿಂದ ಜನಮೇಜಯನ ಸರ್ಪಯಾಗದ ಸಮಯದಲ್ಲಿ ವೈಶಂಪಾಯನರು ಹೇಳಿದರೋ–ಅಂತಹ ನಾಲ್ಕು ವೇದಗಳ ಅರ್ಥವನ್ನೂ ತನ್ನಲ್ಲಿಯೇ ಅಳವಡಿಸಿಕೊಂಡಿರುವ, ಪುಣ್ಯಕರವಾದ, ಪಾಪಭಯವಿನಾಶಕ ವಾದ, ಅದ್ಭುತಕರ್ಮರಾದ ವ್ಯಾಸರ ದಿವ್ಯಸಂಹಿತೆಯನ್ನು ( ಮಹಾಭಾರತ ವನ್ನು ) ನಾವು ನಿಮ್ಮಿಂದ ಕೇಳಲಿಚ್ಛಿಸುತ್ತೇವೆ.”

ಸೌತಿಗಳು ಮಂದಸ್ಮಿತರಾಗಿ ದೀರ್ಘಪ್ರಣವೋಚ್ಚಾರಣಪೂರ್ವಕವಾಗಿ ಪ್ರವಚನವನ್ನು ಪ್ರಾರಂಭಿಸುತ್ತಾ ಹೇಳತೊಡಗಿದರು :

“ಯಾವನು ಎಲ್ಲಕ್ಕೂ ಆದಿಯೂ, ಕಾರಣನೂ, ಅಂತ ರ್ಯಾಮಿಯೂ, ನಿಯಂತೃವೂ ಆಗಿರುವನೋ–ಯಜ್ಞದಲ್ಲಿ ಯಾರನ್ನು ಆಹ್ವಾನಮಾಡುವರೋ–ಯಾವನನ್ನು ಅನೇಕಪುರುಷರು ಅನೇಕ ನಾಮಗಳಿಂದ ಸ್ತುತಿಸುವರೋ, ಯಾವನು ಸತ್ಯಸ್ವರೂಪನೂ, ಪ್ರಣವಸ್ವರೂ ಪನೂ, ಅವಿನಾಶಿಯೂ, ಸರ್ವವ್ಯಾಪಿಯೂ ಆಗಿರುವನೋ–ಯಾವನು ಸಾಕಾರನೂ ನಿರಾಕಾರನೂ ಆಗಿರುವನೋ, ಯಾವನು ಸನಾತನನೋ, ಸತ್-ಅಸತ್ ಈ ಎರಡು ರೂಪಗಳಿಂದಲೂ ಯಾವನು ವಿರಾಜಮಾನ ನಾಗಿರುವನೋ, ಹೀಗಿದ್ದರೂ ಯಾವನು ಸತ್ ಮತ್ತು ಅಸತ್ತುಗಳಿಂದ ಬೇರೆ ಯಾಗಿರುವನೋ, ಈ ವಿಶ್ವವು ಯಾವನಿಂದ ಅಭಿನ್ನವಾಗಿರುವುದೋ, ಯಾವನು ಸ್ಥೂಲ-ಸೂಕ್ಷ್ಮ ಜಗತ್ತುಗಳ ಸೃಷ್ಟಿಗೂ ಕಾರಣನೋ, ಪುರಾಣ ಪುರುಷನೋ, ಸರ್ವಶ್ರೇಷ್ಠನೋ, ವೃದ್ಧ್ಯಾದಿವಿಕಾರರಹಿತನೋ, ಶುದ್ಧನೋ, ಯಾವನು ಹೃಷೀಕೇಶನೋ (ಮನಸ್ಸು ಮತ್ತು ಇಂದ್ರಿಯಗಳಿಗೆ ಪ್ರೇರಕನೋ), ಚರಾಚರಗಳೆಲ್ಲಕ್ಕೂ ಪರಮಗುರುವೋ–ಅಂತಹ ಮಂಗಲ

ಕರನಾದ, ಮಂಗಲಮಯನಾದ ಶ್ರೀಮಹಾವಿಷ್ಣುವನ್ನು ನಮಸ್ಕರಿಸಿ ಸರ್ವ ಲೋಕಪೂಜಿತರಾದ, ಮಹಾತ್ಮರಾದ ಅದ್ಭುತಕರ್ಮರಾದ ವ್ಯಾಸಮಹರ್ಷಿಗಳು ರಚಿಸಿರುವ ಪುಣ್ಯಪ್ರಾಪಕವಾದ ಸಚ್ಚರಿತ್ರೆಯನ್ನು ಹೇಳುತ್ತೇನೆ. ಪೃಥ್ವಿಯಲ್ಲಿ ಅನೇಕ ಕವಿಗಳು ಈ ಆಖ್ಯಾನವನ್ನು ಈಗಾಗಲೇ ಹೇಳಿರುವರು. ಈಗಲೂ ಅನೇಕರು ಹೇಳುತ್ತಿದ್ದಾರೆ. ಮುಂದೆಯೂ ಸಹ ಅನೇಕರು ಈ ಇತಿಹಾಸವನ್ನು ಹೇಳುತ್ತಾರೆ. ಈ ಮಹಾಭಾರತವು ಮೂರು ಲೋಕಗಳಲ್ಲಿಯೂ ಮಹಾಜ್ಞಾನದ ರೂಪದಲ್ಲಿ ಪ್ರತಿಷ್ಠಿತವಾಗಿದೆ. ಬ್ರಾಹ್ಮಣಾದಿ ದ್ವಿಜರು ಈ ಇತಿಹಾಸವನ್ನು ಸೂಕ್ಷ್ಮರೂಪದಲ್ಲಿಯೂ ಮತ್ತು ವಿಸ್ತಾರವಾಗಿಯೂ ಪರಂಪರಾಗತವಾಗಿ ಪಡೆದುಕೊಂಡು ತಮ್ಮ ಹೃದಯಗಳಲ್ಲಿ ಧಾರಣಮಾಡಿಕೊಂಡಿರುತ್ತಾರೆ. ಈ ಮಹಾಭಾರತವು ಲಲಿತವಾದ ಮತ್ತು ಮಂಗಲಮಯವಾದ ಶಬ್ದವಿನ್ಯಾಸಗಳಿಂದ ಸುಶೋಭಿತವಾಗಿದೆ. ವೈದಿಕ-ಲೌಕಿಕ, ಸಂಸ್ಕೃತ-ಪ್ರಾಕೃತಸಂಕೇತಗಳಿಂದ ಸುಶೋಭಿತವಾಗಿದೆ. ಅನುಷ್ಟುಪ್, ಇಂದ್ರವಜ್ರಾ–ಇವೇ ಮೊದಲಾದ ಛಂದಸ್ಸುಗಳಿಂದ ಕೂಡಿರುವುದಾಗಿದೆ. ಆದುದರಿಂದಲೇ ಈ ಮಹಾಗ್ರಂಥವು ವಿದ್ವಾಂಸರಿಗೆ ಬಹುಪ್ರಿಯವಾಗಿದೆ.

ಯುಗಾಂತ್ಯದಲ್ಲಿ ಪ್ರಪಂಚವೆಲ್ಲವೂ ಅಂಧಕಾರಮಯವಾಗಿರುವಾಗ ಸಕಲಚರಾಚರಗಳ ಬೀಜಸ್ವರೂಪವಾದ ದೊಡ್ಡ ಅಂಡವೊಂದು ಹುಟ್ಟಿತು. ಅದಕ್ಕೆ ಮಹಾದಿವ್ಯವೆಂದು ಹೆಸರು. ಅದನ್ನು ಶಾಶ್ವತಪರಬ್ರಹ್ಮವಸ್ತುವೆಂದೂ ಹೇಳುತ್ತಾರೆ. ಆ ಅಂಡವು ಅದ್ಭುತವೂ, ಅಚಿಂತ್ಯವೂ ಆಗಿದ್ದಿತು. ಅದು ಸರ್ವತ್ರ ಸಮಾನರೂಪದಿಂದ ಕೂಡಿದ್ದಿತು. ಅವ್ಯಕ್ತವೂ, ಸೂಕ್ಷ್ಮವೂ, ಕಾರಣ ಸ್ವರೂಪವೂ, ಸತ್ ಮತ್ತು ಅಸತ್ತುಗಳಿಗೆ ಆತ್ಮಸ್ವರೂಪವೂ ಆಗಿದ್ದಿತು. ಆ ಅಂಡದಿಂದ ಮೊದಲು ಪ್ರಜಾಪಾಲಕನಾದ, ಪ್ರಭುವಾದ, ದೇವಗುರುವಾದ ಪಿತಾಮಹಬ್ರಹ್ಮನು ಪ್ರಕಟವಾದನು. ಅವನನ್ನೇ ಅನುಸರಿಸಿ ರುದ್ರ, ಮನು, ಪ್ರಜಾಪತಿ, ಪರಮೇಷ್ಠೀ, ಪ್ರಚೇತಸನ ಪುತ್ರ, ದಕ್ಷ ಮತ್ತು ದಕ್ಷಪುತ್ರರು ಪ್ರಕಟವಾದರು. ದಕ್ಷನಿಗೆ ಕ್ರೋಧ, ತಮಸ, ದಮ, ವಿಕ್ರೀತ, ಅಂಗಿರಸ, ಕರ್ದಮ ಮತ್ತು ಅಶ್ವ–ಎಂಬ ಏಳು ಮಕ್ಕಳು ಹುಟ್ಟಿದರು. ಅನಂತರದಲ್ಲಿ ಮರೀಚ್ಯಾದಿ ಸಪ್ತರ್ಷಿಗಳೂ, ಹದಿನಾಲ್ಕು ಮನುಗಳೂ ಅನುಕ್ರಮವಾಗಿ ಹುಟ್ಟಿದರು. ಯಾವನನ್ನು ಎಲ್ಲ ಋಷಿಗಳೂ ಮಹಾಪುರುಷನೆಂದೂ,

ಅಪ್ರಮೇಯಾತ್ಮನೆಂದೂ, ತಿಳಿದಿರುವರೋ ಅಂತಹ ಮಹಾವಿಷ್ಣುವೂ ಮತ್ತು ಅವನನ್ನನುಸರಿಸಿ ವಿಶ್ವೇದೇವತೆಗಳೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ ಮತ್ತು ಅಶ್ವಿನೀದೇವತೆಗಳೂ ಪ್ರಕಟವಾದರು. ಅನಂತರದಲ್ಲಿ ಯಕ್ಷರು, ಸಾಧ್ಯರು, ಪಿಶಾಚರು, ಗುಹ್ಯಕರು, ಪಿತೃದೇವತೆಗಳು ಪ್ರಾದುರ್ಭವಿಸಿದರು. ಅನಂತರ ವಿದ್ವಾಂಸರಾದ ಶಿಷ್ಟಾಚಾರಸಂಪನ್ನರಾದ ಬ್ರಹ್ಮರ್ಷಿಗಳು ಹುಟ್ಟಿದರು. ಅನಂತರ ಶೌರ್ಯ-ಸದ್ಗುಣಸಂಪನ್ನರಾದ ಅನೇಕಾನೇಕ ರಾಜರ್ಷಿಗಳು ಹುಟ್ಟಿದರು. ಜಲ, ದ್ಯುಲೋಕ, ಪೃಥಿವೀ, ವಾಯು, ಅಂತರಿಕ್ಷ ಮತ್ತು ದಶದಿಕ್ಕುಗಳು ಪ್ರಾದುರ್ಭೂತವಾದುವು. ಸಂವತ್ಸರಗಳು, ಆರು ಋತುಗಳು, ಹನ್ನೆರಡು ಮಾಸಗಳು, ಶುಕ್ಲ-ಕೃಷ್ಣಪಕ್ಷಗಳು, ಹಗಲು ಮತ್ತು ರಾತ್ರಿಗಳು–ಇವುಗಳ ಮೂಲಕವಾಗಿ ಕಾಲದ ವ್ಯವಸ್ಥೆಯೂ ಆಯಿತು. ಇವುಗಳೇ ಅಲ್ಲದೇ ಕಣ್ಣುಗಳಿಗೆ ಗೋಚರವಾಗಿರುವ ಕಿವಿಗಳಿಂದ ಕೇಳಿರಬಹುದಾದ ಅಸಂಖ್ಯಾತವಾದ ಚರಾಚರವಸ್ತುಗಳೆಲ್ಲವೂ ಅದ್ಭುತವಾದ ಆ ಅಂಡದಿಂದಲೇ ಉತ್ಪನ್ನವಾದುವು. ಮಹಾಮುನಿಗಳೇ! ನಮ್ಮ ಕಣ್ಣುಗಳಿಗೆ ಕಾಣುತ್ತಿರುವ ಈ ಸ್ಥಾವರ-ಜಂಗಮಗಳೆಲ್ಲವೂ ಯುಗಕ್ಷಯವಾದನಂತರ ಅಣುಪ್ರಾಯವಾಗಿ ಪುನಃ ಪರಮಾದ್ಭುತವಾದ ಆ ಅಂಡದಲ್ಲಿಯೇ ಸೇರಿಕೊಳ್ಳುತ್ತವೆ. ಯಾವ ರೀತಿಯಲ್ಲಿ ವಸಂತಾದಿ ಋತುಗಳು ಪ್ರಾದು ರ್ಭವಿಸಿದೊಡನೆಯೇ ವೃಕ್ಷಗಳು ಚಿಗುರಿ ಹೂಬಿಟ್ಟು ಕಾಯಾಗಿ ಹಣ್ಣಾಗಿ ಕೆಳಗುದುರಿಹೋಗುತ್ತವೆಯೋ–ಅದೇ ರೀತಿಯಲ್ಲಿ ಸೃಷ್ಟಿಕಾಲವು ಪ್ರಾಪ್ತ ವಾದೊಡನೆಯೇ ವಿಶ್ವವು ಯಥಾಪೂರ್ವವಾಗಿ ಉದಯಿಸಿ ಬೆಳೆಯುತ್ತಲಿದ್ದು ಲಯಕಾಲವು ಪ್ರಾಪ್ತವಾಗುತ್ತಿದ್ದಂತೆ ಅಣುರೂಪದಲ್ಲಿ ಪುನಃ ಅಂಡವನ್ನು ಸೇರಿಕೊಳ್ಳುತ್ತದೆ. ಈ ರೀತಿಯಾಗಿ ಅನಾದಿಯಾದ ಮತ್ತು ಅನಂತವಾದ ಕಾಲಚಕ್ರವು ಲೋಕದಲ್ಲಿ ಪ್ರವಾಹರೂಪವಾಗಿ ತಿರುಗುತ್ತಲೇ ಇದ್ದು ಪ್ರಾಣಿ ಗಳ ಉತ್ಪತ್ತಿ ಮತ್ತು ಲಯಗಳನ್ನು ಮಾಡುತ್ತಲೇ ಇರುತ್ತದೆ. ಆ ಚಕ್ರಕ್ಕೆ ಉತ್ಪತ್ತಿ ಎಂಬುದೂ ಇಲ್ಲ ; ವಿನಾಶವೆಂಬುದೂ ಇಲ್ಲ. ದೇವತೆಗಳ ಸೃಷ್ಟಿಯನ್ನು ಸಂಕ್ಷೇಪಿಸಿ ಹೇಳುವುದಾದರೆ ಮೂವತ್ತು ಮೂರು ಸಾವಿರ (33,000), ಮೂವತ್ತು ಮೂರು ನೂರು (3,300) ಮತ್ತು ಮೂವತ್ತು ಮೂರು (33) ಒಟ್ಟು ಮೂವತ್ತು ಆರು ಸಾವಿರದ ಮುನ್ನೂರ ಮೂವತ್ತಮೂರು (36,333) ಎಂದು ಹೇಳಬಹುದಾಗಿದೆ.

ಜ್ಯೋತಿರ್ಮಯನಾದ ಆದಿತ್ಯನಿಗೆ ವಿವಸ್ವಂತನೆಂಬ ಹೆಸರೂ ಇದೆ. ಅವನಿಗೆ ದಿವಃಪುತ್ರ, ಬೃಹದ್ಭಾನು, ಚಕ್ಷು, ಆತ್ಮಾ, ವಿಭಾವಸು, ಸವಿತಾ, ಋಚೀಕ, ಅರ್ಕ, ಭಾನು, ಆಶಾವಹ, ರವಿ ಮತ್ತು ಮನು ಎಂಬ ಪುತ್ರರಿದ್ದರು. ಅವರಲ್ಲಿ ಮನುವೇ ಕಿರಿಯವನು. ಮನುವಿಗೆ ದೇವಭ್ರಾಜನೆಂಬ ಮಗನು ಹುಟ್ಟಿದನು. ದೇವಭ್ರಾಜನಿಗೆ ಸುಭ್ರಾಜನೆಂಬ ಮಗನೂ, ಸುಭ್ರಾಜನಿಗೆ ದಶಜ್ಯೋತಿ, ಶತಜ್ಯೋತಿ, ಸಹಸ್ರಜ್ಯೋತಿ–ಎಂಬ ಮೂವರು ಮಕ್ಕಳೂ ಹುಟ್ಟಿದರು. ಮಹಾತ್ಮನಾದ ದಶಜ್ಯೋತಿಗೆ ಹತ್ತು ಸಾವಿರ ಮಕ್ಕಳೂ, ಶತಜ್ಯೋತಿಗೆ ಲಕ್ಷಪುತ್ರರೂ, ಸಹಸ್ರಜ್ಯೋತಿಗೆ ಹತ್ತು ಲಕ್ಷ ಪುತ್ರರೂ ಹುಟ್ಟಿದರು. ಕುರು, ಯದು, ಭರತ, ಯಯಾತಿ, ಇಕ್ಷ್ವಾಕು-ಮೊದಲಾದ ಮಹಾಪುರುಷರ ಉದಯಕ್ಕೆ ಆ ಮೂವರೇ ಕಾರಣರು. ಅವರಿಂದ ಅನೇಕಾನೇಕ ವಂಶಗಳು ಬೆಳೆದುವು. ಪ್ರಾಣಿಗಳ ಸವಿಸ್ತಾರವಾದ ವಂಶಪರಂಪರೆಯೂ ಅವರಿಂದಲೇ ಬೆಳೆಯಿತು. ಭಗವಾನ್ ವೇದವ್ಯಾಸರು ತಮ್ಮ ಅಂತರ್ದೃಷ್ಟಿಯಿಂದ ಪ್ರಾಣಿಗಳ ರಹಸ್ಯ, ಜ್ಞಾನರೂಪವಾದ ವೇದ, ವಿಜ್ಞಾನಸಹಿತವಾದ ಯೋಗ, ಧರ್ಮಾರ್ಥಕಾಮಗಳು, ಧರ್ಮಾರ್ಥಕಾಮಗಳನ್ನು ಪ್ರತಿಪಾದಿಸುವ ವಿವಿಧಶಾಸ್ತ್ರಗಳು, ಲೋಕವ್ಯವಹಾರಕ್ಕೆ ಅನುಕೂಲವಾದ ಆಯುರ್ವೇದ, ಧನುರ್ವೇದ, ಸ್ಥಾಪತ್ಯವೇದ, ಗಾಂಧರ್ವವೇದ ಇವೇ ಮೊದಲಾದ ಲೌಕಿಕಶಾಸ್ತ್ರಗಳು–ಇವುಗಳೆಲ್ಲವನ್ನೂ ಕಂಡುಕೊಂಡರು. ಸರ್ವದರ್ಶಿಗಳಾದ ವ್ಯಾಸರು ವ್ಯಾಖ್ಯಾನಸಹಿತವಾದ ಆ ಎಲ್ಲ ಇತಿಹಾಸಗಳ ರಹಸ್ಯಗಳನ್ನೂ, ಶ್ರುತಿಗಳ ರಹಸ್ಯವನ್ನೂ ಈ ಮಹಾಭಾರತದಲ್ಲಿ ತುಂಬಿಬಿಟ್ಟಿದ್ದಾರೆ. ಎಲ್ಲ ಶಾಸ್ತ್ರಗಳ, ಇತಿಹಾಸಗಳ ಮತ್ತು ಶ್ರುತಿಗಳ ರಹಸ್ಯಗಳೂ ಇದರಲ್ಲಿ ಪರಿಪೂರ್ಣತೆಯಿಂದಿರುವುದೇ ಈ ಮಹಾಗ್ರಂಥದ ವೈಶಿಷ್ಟ್ಯವಾಗಿದೆ.

ಮಹಾಭಾರತದಲ್ಲಿ ಸಂಕ್ಷೇಪಭಾರತ ಮತ್ತು ವಿಶಾಲಭಾರತಗಳೆಂಬ ಎರಡು ಭಾಗಗಳಿವೆ. ಜ್ಞಾನಿಗಳು ಎರಡು ಭಾಗಗಳನ್ನೂ ತಿಳಿದುಕೊಂಡಿರುತ್ತಾರೆ. ಕೆಲವರು ಮಹಾಭಾರತವನ್ನು ಆದಿಪರ್ವದಿಂದಲೂ, ಮತ್ತೆ ಕೆಲವರು ಆಸ್ತೀಕಪರ್ವದಿಂದಲೂ, ಹಲವರು ಉಪರಿಚರಪರ್ವದಿಂದಲೂ ಪ್ರಾರಂಭಿಸಿ ಹೇಳುತ್ತಾರೆ.

ವಿದ್ವಾಂಸರಾದವರು ಈ ಭಾರತಸಂಹಿತೆಯನ್ನು ವಿವಿಧರೀತಿಯಲ್ಲಿ ಪ್ರವಚನಮಾಡುತ್ತಾರೆ. ವಿವಿಧರೀತಿಯಿಂದ ಇದರಲ್ಲಿರುವ ತತ್ತ್ವಗಳನ್ನು ಹೊರತೆಗೆದು ಹೇಳಿ ಶ್ರೋತೃಗಳ ಬುದ್ಧಿಯನ್ನು ವಿಕಾಸಗೊಳಿಸುತ್ತಾರೆ. ಈ ಮಹಾಭಾರತವನ್ನು ವ್ಯಾಖ್ಯಾನಮಾಡುವುದರಲ್ಲಿಯೇ ಅನೇಕರು ಬಹು ಕುಶಲರಾಗಿದ್ದಾರೆ. ಕೆಲವು ವಿದ್ವಾಂಸರು ತಮ್ಮ ಬಹುತೀಕ್ಷ್ಣವಾದ ಮೇಧಾ ಶಕ್ತಿಯಿಂದ ಸಮಗ್ರಮಹಾಭಾರತವನ್ನೇ ತಮ್ಮ ಬುದ್ಧಿಯಲ್ಲಿ ಧಾರಣಮಾಡಿ ಕೊಂಡಿರುತ್ತಾರೆ. ತಪಸ್ಸಿನಿಂದಲೂ ಮತ್ತು ಬ್ರಹ್ಮಚರ್ಯೆಯಿಂದಲೂ ಸನಾತನವಾದ ವೇದಗಳನ್ನೇ ವಾಙ್ಮಯದ ಮೂಲಕವಾಗಿ ವಿವರಿಸಿ ಪವಿತ್ರವೂ, ಪಾವನವೂ ಆಗಿರುವ ಈ ಮಹಾಭಾರತವನ್ನು ಸತ್ಯವತಿಯ ಮಕ್ಕಳಾದ ವೇದವ್ಯಾಸರು ರಚಿಸಿರುವರು.

ಪರಾಶರಮಹರ್ಷಿಗಳ ಮಕ್ಕಳಾದ, ವಿದ್ವಾಂಸರಾದ, ಬ್ರಹ್ಮರ್ಷಿ ಗಳಾದ, ಕಠಿನವ್ರತನಿಷ್ಠರಾದ, ಪ್ರಭುಗಳಾದ ಕೃಷ್ಣದ್ವೈಪಾಯನರು ಇತಿಹಾಸ ಶಿರೋಮಣಿಯೆನಿಸಿರುವ ಮಹಾಭಾರತವನ್ನು ರಚಿಸಿದನಂತರ ಅದನ್ನು ಶಿಷ್ಯರಿಗೆ ಯಾವ ರೀತಿಯಲ್ಲಿ ಅಧ್ಯಾಪನಮಾಡಿಸಬೇಕೆಂದು ಚಿಂತಿಸತೊಡ ಗಿದರು. ಮಹರ್ಷಿಗಳು ಚಿಂತಿಸುತ್ತಿರುವುದನ್ನು ಲೋಕಗುರುವಾದ ಭಗವಾನ್ ಚತುರ್ಮುಖನು ತಿಳಿದವನಾಗಿ ಮಹರ್ಷಿಗಳ ಪ್ರೀತ್ಯರ್ಥವಾಗಿಯೂ ಮತ್ತು ಲೋಕಗಳ ಹಿತಾಸಕ್ತಿಯಿಂದಲೂ ತಾನಾಗಿಯೇ ವ್ಯಾಸರ ಆಶ್ರಮಕ್ಕೆ ತೆರಳಿದನು.

ಭಗವಂತನಾದ ಚತುರ್ಮುಖನು ಅನಾಹೂತನಾಗಿ ತಮ್ಮ ಆಶ್ರಮಕ್ಕೆ ಬಂದುದನ್ನು ನೋಡಿ ವಿಸ್ಮಿತರಾದ ವ್ಯಾಸರು ಆಶ್ರಮದಲ್ಲಿದ್ದ ಇತರ ಮುನಿ ಸ್ತೋಮದಿಂದೊಡಗೂಡಿ ಚತುರ್ಮುಖನನ್ನು ಸ್ವಾಗತಿಸಿ-ಸತ್ಕರಿಸಿ, ಆಸನ ದಲ್ಲಿ ಕುಳ್ಳಿರಿಸಿದರು. ಶ್ರೇಷ್ಠವಾದ ಆಸನದಲ್ಲಿ ಕುಳಿತಿದ್ದ ಆ ಹಿರಣ್ಯಗರ್ಭನನ್ನು ವ್ಯಾಸರು ಪ್ರದಕ್ಷಿಣೆಮಾಡಿ ನಮಸ್ಕರಿಸಿ ಚತುರ್ಮುಖನ ಸಮೀಪದಲ್ಲಿಯೇ ನಿಂತುಕೊಂಡರು. ಬ್ರಹ್ಮನಿಂದ ಅನುಜ್ಞೆಯನ್ನು ಪಡೆದನಂತರ ಬಹುಪ್ರೀತರಾದ ಕೃಷ್ಣದ್ವೈಪಾಯನರು ಮಂದಸ್ಮಿತರಾಗಿ ಬ್ರಹ್ಮನ ಸಮೀಪದಲ್ಲಿಯೇ ಕುಳಿತರು. ಅನಂತರ ಮಹಾತೇಜಸ್ವಿಗಳಾದ ವ್ಯಾಸರು ಪರಮೇಷ್ಠಿ ಬ್ರಹ್ಮನಿಗೆ ಹೇಳಿದರು:

“ಪರಮಪೂಜ್ಯನೇ! ಪರಮಪೂಜ್ಯವಾದ ಈ ಮಹಾಕಾವ್ಯವನ್ನು ರಚಿಸಿರುತ್ತೇನೆ. ನಾನು ಈ ಮಹಾಗ್ರಂಥದಲ್ಲಿ ವೇದಗಳ ರಹಸ್ಯವನ್ನೂ ಇತರ ಶಾಸ್ತ್ರಗಳ ಸಾರವನ್ನೂ ಪ್ರತಿಷ್ಠಾಪಿಸಿದ್ದೇನೆ. ವೇದಗಳ ಷಡಂಗಗಳ ಸಾರವನ್ನೂ ಮತ್ತು ಉಪನಿಷತ್ತುಗಳ ಸಾರವನ್ನೂ ಈ ಮಹಾಗ್ರಂಥದಲ್ಲಿ ಅಳವಡಿಸಿದ್ದೇನೆ. ಇತಿಹಾಸ-ಪುರಾಣಗಳೆಲ್ಲವನ್ನೂ ಇದರಲ್ಲಿ ತುಂಬಿಬಿಟ್ಟಿದ್ದೇನೆ. ಭೂತ, ವರ್ತಮಾನ ಮತ್ತು ಭವಿಷ್ಯಗಳೆಂಬ ಮೂರು ಕಾಲಸಂಜ್ಞೆಗಳ ವಿಷಯವಾಗಿಯೂ ಇದರಲ್ಲಿ ನಿರೂಪಣೆಯಿದೆ. ವೃದ್ಧಾಪ್ಯ, ಮೃತ್ಯು, ಭಯ, ರೋಗ, ಪದಾರ್ಥಗಳ ಸತ್ಯತ್ವ ಮತ್ತು ಮಿಥ್ಯಾತ್ವ–ಇವುಗಳ ಸ್ವರೂಪ-ಲಕ್ಷಣಗಳನ್ನೂ ನಿಶ್ಚಯಿಸಿ ಹೇಳಲಾಗಿದೆ. ವಿವಿಧಧರ್ಮಗಳ ಮತ್ತು ಆಶ್ರಮಗಳ ಲಕ್ಷಣಗಳನ್ನು ಸಹ ಇದರಲ್ಲಿ ಅಳವಡಿಸಿದ್ದೇನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ–ಈ ನಾಲ್ಕು ವರ್ಣದವರ ಕರ್ತವ್ಯ, ಪುರಾಣಗಳ ಮೂಲತತ್ತ್ವ–ಇವುಗಳನ್ನೂ ಸ್ಪಷ್ಟಪಡಿಸಿದ್ದೇನೆ. ತಪಸ್ಸು ಮತ್ತು ಬ್ರಹ್ಮಚರ್ಯೆಯ ಸ್ವರೂಪ, ಅವುಗಳ ಅನುಷ್ಠಾನ ಮತ್ತು ಅದರಿಂದ ಪ್ರಾಪ್ತವಾಗುವ ಫಲಗಳ ವಿವರಣೆಯೂ ಈ ಮಹಾಗ್ರಂಥದಲ್ಲಿದೆ. ಪೃಥ್ವೀ, ಚಂದ್ರ, ಸೂರ್ಯ, ಗ್ರಹ-ನಕ್ಷತ್ರ-ತಾರೆಗಳು, ಕೃತ, ತ್ರೇತಾ, ದ್ವಾಪರ, ಕಲಿ–ಈ ನಾಲ್ಕು ಯುಗಗಳ ಪರಿಮಾಣ ಮತ್ತು ಪ್ರಮಾಣ, ಋಗ್ಯಜುಸ್ಸಾಮವೇದಗಳಲ್ಲಿ ಬರುವ ಆಧ್ಯಾತ್ಮಿಕವಿಷಯಗಳು ಈ ಎಲ್ಲವನ್ನೂ ಈ ಮಹಾಗ್ರಂಥದಲ್ಲಿ ಅಳವಡಿಸಲಾಗಿದೆ. ನ್ಯಾಯ, ಶಿಕ್ಷಾ, ಚಿಕಿತ್ಸೆ, ದಾನ ಮತ್ತು ಪಾಶುಪತ (ಪಶುಪತಿಯ ಉಪದೇಶ) ಇವುಗಳನ್ನೂ ಸಹ ಈ ಗ್ರಂಥದಲ್ಲಿ ವಿಶದೀಕರಿಸಲಾಗಿದೆ. ಇದರೊಂದಿಗೆ ದೇವತೆಗಳ, ಮನುಷ್ಯರ ಮತ್ತು ಮೃಗ-ಪಕ್ಷಿಗಳ ಯೋನಿಗಳಲ್ಲಿ ಜನ್ಮಪಡೆಯುವ ಕಾರಣಗಳನ್ನೂ ನಿರೂಪಿಸಲಾಗಿದೆ. ಈ ಮಹಾಭಾರತದಲ್ಲಿ ಪುಣ್ಯತೀರ್ಥಗಳ, ನದಿಗಳ, ಪರ್ವತಗಳ, ಅರಣ್ಯಗಳ ಮತ್ತು ಸಾಗರಗಳ ಕೀರ್ತನವಿದೆ. ದಿವ್ಯನಗರಗಳ ಮತ್ತು ದುರ್ಗಗಳ ನಿರ್ಮಾಣ, ಹಿಂದಿನ ಕಾಲದಲ್ಲಿ ರಾಜರಲ್ಲಿದ್ದ ಯುದ್ಧಕೌಶಲ–ಇವುಗಳ ವರ್ಣನೆಯಿದೆ. ವಿವಿಧ ಭಾಷೆಗಳ, ವಿವಿಧಜಾತಿವಿಶೇಷಗಳ ವರ್ಣನೆಯಿದೆ. ಲೋಕವ್ಯವಹಾರಕ್ಕೆ ಉಪಯುಕ್ತವಾದ ಉಕ್ತಿಗಳಿವೆ. ಸರ್ವಪ್ರಾಣಿಗಳ ಹೃದಯಗುಹೆಗಳಲ್ಲಿಯೂ ಇರುವ ಬ್ರಹ್ಮವಸ್ತುವಿನ ವಿಷಯವಾಗಿಯೂ ಪ್ರತಿಪಾದನೆಮಾಡಲಾಗಿದೆ.

ಬ್ರಹ್ಮದೇವ! ಆದರೆ ಈ ಮಹಾಗ್ರಂಥವನ್ನು ಪುಸ್ತಕರೂಪದಲ್ಲಿ ತರಲು ಲೇಖಕನೊಬ್ಬನನ್ನು ಈ ಪೃಥ್ವಿಯಲ್ಲಿ ಕಾಣದವನಾಗಿದ್ದೇನೆ."

ಪರಮೇಷ್ಠಿಯು ಹೇಳುತ್ತಾನೆ :

"ಮಹರ್ಷಿಯೇ! ನಿನ್ನನ್ನು ತಪೋವಿಶಿಷ್ಟರಾದ ಎಲ್ಲ ಮುನಿಗಳಿಗಿಂತಲೂ ಶ್ರೇಷ್ಠತಮನಾದವನೆಂದು ನಾನು ಭಾವಿಸಿದ್ದೇನೆ. ಏಕೆಂದರೆ : ಜಗತ್ತು, ಜೀವ, ಈಶ್ವರ–ಈ ಎಲ್ಲದರ ರಹಸ್ಯಗಳನ್ನೂ ನೀನು ತಿಳಿದವನಾಗಿರುವೆ.

ಹುಟ್ಟಿದ ಮೊದಲ್ಗೊಂಡು ನಿನ್ನ ವಾಣಿಯು ಬ್ರಹ್ಮಪ್ರತಿಪಾದಕವೂ, ಸತ್ಯಪ್ರತಿಷ್ಠಾನವುಳ್ಳದ್ದೂ ಆಗಿರುವುದೆಂಬುದನ್ನು ನಾನು ತಿಳಿದಿರುತ್ತೇನೆ. ನೀನು ರಚಿಸಿರುವ ಮಹಾಗ್ರಂಥವನ್ನು ನೀನು ಕಾವ್ಯವೆಂದು ಹೇಳಿದೆಯಾದ ಕಾರಣ ಅದು ಕಾವ್ಯವೆಂದೇ ಪ್ರಸಿದ್ಧಿಹೊಂದುತ್ತದೆ. ಪ್ರಪಂಚದ ಎಂತೆಂತಹ ಮಹಾಕವಿಗಳೂ ನೀನು ರಚಿಸಿರುವುದಕ್ಕಿಂತಲೂ ಶ್ರೇಷ್ಠವಾದ ಕಾವ್ಯವನ್ನು ರಚಿಸಲಾರರು. ಬ್ರಹ್ಮಚರ್ಯ, ವಾನಪ್ರಸ್ಥ ಮತ್ತು ಸಂನ್ಯಾಸಾಶ್ರಮಗಳು ಶ್ರೇಷ್ಠತೆಯಲ್ಲಿ ಗೃಹಸ್ಥಾಶ್ರಮಕ್ಕೆ ಯಾವ ರೀತಿಯಲ್ಲಿ ಸಮಾನವಾಗಲಾರವೋ ಅದೇ ರೀತಿಯಲ್ಲಿ ನಿನ್ನ ಕಾವ್ಯಕ್ಕೆ ಯಾವ ಕಾವ್ಯಗಳೂ ಸಮಾನವಾಗಲಾರವು. ಮಹರ್ಷಿಯೇ! ನೀನೀಗ ಲೇಖಕನ ವಿಷಯವಾಗಿ ಪ್ರಸ್ತಾಪಿಸಿದೆಯಲ್ಲವೇ? ಲೇಖಕನ ಕಾರ್ಯಕ್ಕಾಗಿ ವಿಘ್ನಹರನಾದ ಗಣೇಶನನ್ನೇ ಸ್ಮರಿಸು."

ಹೀಗೆ ಹೇಳಿ ಬ್ರಹ್ಮನು ತನ್ನ ಲೋಕಕ್ಕೆ ತೆರಳಿದನು.

ಬ್ರಹ್ಮನ ಸಲಹೆಯಂತೆ ಸತ್ಯವತಿಯ ಮಕ್ಕಳಾದ ವ್ಯಾಸರು ಹೇರಂಬನನ್ನು ಸ್ಮರಿಸಿದರು. ಭಕ್ತಸಂಕಲ್ಪಪೂರಕನಾದ, ವಿಘ್ನೇಶನಾದ ಗಣೇಶನು ವ್ಯಾಸರು ಸ್ಮರಿಸಿದಮಾತ್ರದಿಂದಲೇ ಅವರಿದ್ದ ಸ್ಥಳಕ್ಕೆ ಆಗಮಿಸಿದನು. ಗಣೇಶನು ಆಗಮಿಸಿದೊಡನೆಯೇ ಪರಮಪ್ರೀತರಾದ ವ್ಯಾಸರು ಅವನನ್ನು ಯಥಾವಿಧಿಯಾಗಿ ಪೂಜಿಸಿ ಸತ್ಕರಿಸಿ ಹೇಳಿದರು :

"ಗಣನಾಯಕನೇ! ನನ್ನ ಮನಸ್ಸಿನಿಂದ ಕಲ್ಪಿತವಾಗಿರುವ ಮತ್ತು ನನ್ನಿಂದಲೇ ಹೇಳಲ್ಪಡುವ ಮಹಾಭಾರತಗ್ರಂಥಕ್ಕೆ ನೀನು ಲೇಖಕನಾಗು."

ವ್ಯಾಸರ ಮಾತನ್ನು ಕೇಳಿದೊಡನೆಯೇ ವಿಘ್ನೇಶನು ಹೇಳಿದನು :

"ಮಹರ್ಷಿಯೇ! ನೀನು ಹೇಳುವುದನ್ನು ನಾನು ಬರೆಯುತ್ತಾ ಹೋಗುವೆನು. ನನ್ನ ಲೇಖನಿಗೆ ವಿರಾಮವು ಸಿಗದ ರೀತಿಯಲ್ಲಿ ನೀನು ಮಹಾಭಾರತವನ್ನು ಹೇಳುತ್ತಾ ಹೋಗಬೇಕು. ಹಾಗಾಗುವುದಾದರೆ ಮಾತ್ರವೇ ನಾನು ನಿನ್ನ ಮಹಾಗ್ರಂಥದ ಲೇಖಕನಾಗಲು ಒಪ್ಪುವೆನು."

ಗಣೇಶನ ನಿಬಂಧನೆಗೆ ವ್ಯಾಸರು ಒಪ್ಪಿ ತಾವೂ ಒಂದು ಸಣ್ಣ ನಿಬಂಧನೆಯನ್ನು ಗಣೇಶನ ಮುಂದೆ ಹೇಳಿದರು.



"ದೇವ! ನೀನು ಪ್ರಸಂಗಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳದೇ ಬರೆಯುತ್ತಾ ಹೋಗಬಾರದು. ವಿಷಯಗಳನ್ನು ಪೂರ್ಣವಾಗಿ ಗ್ರಹಿಸಿ ಬರೆಯಬೇಕು."

ವಿದ್ಯಾನಿಧಿಯಾದ ಗಣಪತಿಗೆ ಆ ನಿಬಂಧನೆಯು ಅಷ್ಟೇನೂ ದೊಡ್ಡ ದೆನಿಸಲಿಲ್ಲ. ವ್ಯಾಸರ ಮಾತಿಗೆ 'ಓಂ' ಕಾರಪೂರ್ವಕವಾಗಿ ಒಪ್ಪಿಗೆ ಯನ್ನಿತ್ತನು.

ವಿದ್ಯಾಗಣಪತಿಯೂ ಕ್ಷಣಕಾಲ ಯೋಚಿಸಿ ಅರ್ಥಮಾಡಿಕೊಳ್ಳಬೇಕಾ ಗುವಂತೆ ರಹಸ್ಯವಾದ ಕೂಟಶ್ಲೋಕಗಳನ್ನು ಕೇವಲ ಕುತೂಹಲದ ಕಾರಣ ದಿಂದಾಗಿ ವ್ಯಾಸರು ರಚಿಸಿದರು. ಆ ಸಂಬಂಧವಾಗಿ ತಾವು ಇಷ್ಟೇ ಕೂಟ ಶ್ಲೋಕಗಳನ್ನು ರಚಿಸಿರುವುದಾಗಿ ವ್ಯಾಸರು ಪ್ರತಿಜ್ಞಾಪೂರ್ವಕವಾಗಿ ಹೇಳಿರುತ್ತಾರೆ.

"ಮಹಾಭಾರತದಲ್ಲಿರುವ ಎಂಟುಸಾವಿರದ ಎಂಟುನೂರು ಕೂಟ ಶ್ಲೋಕಗಳ ಅರ್ಥವನ್ನು ನಾನು ತಿಳಿದಿರುತ್ತೇನೆ. ಶುಕನು ತಿಳಿದಿರುತ್ತಾನೆ. ಸಂಜಯನಿಗಿದು ತಿಳಿದಿರಲೂಬಹುದು ; ತಿಳಿಯದೇ ಇರಲೂಬಹುದು. ಇದು ಸ್ವಲ್ಪ ಸಂದೇಹದ ವಿಷಯವೇ ಆಗಿದೆ."

ಶೌನಕರೇ! ಆ ಕೂಟಶ್ಲೋಕಗಳು ಈಗಲೂ ಸಹ ಸುದೃಢವಾಗಿಯೂ ಬಹುಕ್ಲಿಷ್ಟವಾಗಿಯೂ ಇವೆ. ಅವುಗಳ ಅರ್ಥವು ಬಹಳ ಗೂಢವಾಗಿರು ವುದರಿಂದಲೂ ಮತ್ತು ಶಬ್ದವು ಯೋಗವೃತ್ತಿ ಮತ್ತು ರೂಢವೃತ್ತಿ ಇವೇ ಮೊದಲಾದ ರಚನಾವೈಚಿತ್ರ್ಯದಿಂದ ಕೂಡಿರುವುದರಿಂದಲೂ ಆ ಶ್ಲೋಕಗಳ ಅಭಿಪ್ರಾಯವೇನೆಂಬುದನ್ನು ತಿಳಿದುಕೊಳ್ಳಲು ಇಂದಿಗೂ ಸಾಧ್ಯವಾಗಿಲ್ಲ. ಗಣೇಶನು ಸರ್ವಜ್ಞನೇ ಆಗಿದ್ದರೂ ಆ ಕೂಟಶ್ಲೋಕಗಳನ್ನು ವ್ಯಾಸರು ಹೇಳಿದಾಗ ಅವುಗಳ ಅರ್ಥವನ್ನು ಗ್ರಹಿಸಲು ಕ್ಷಣಕಾಲ ಸ್ತಬ್ಧನಾಗಿ ಕುಳಿತು ಕೊಳ್ಳುತ್ತಿದ್ದನು. ಆ ವೇಳೆಯಲ್ಲಿ ವ್ಯಾಸರು ಮುಂದು-ಮುಂದಕ್ಕೆ ಶ್ಲೋಕಗಳನ್ನು ರಚಿಸುತ್ತಾ ಹೋಗುತ್ತಿದ್ದರು.

**ಅಜ್ಞಾನತಿಮಿರಾನ್ಧಸ್ಯ ಲೋಕಸ್ಯ ತು ವಿಚೇಷ್ಟತಃ ।**
**ಜ್ಞಾನಾಞ್ಜನಶಲಾಕಾಭಿರ್ನೇತ್ರೋನ್ಮೀಲನಕಾರಕಮ್ ॥೮೪॥**

**ಧರ್ಮಾರ್ಥಕಾಮಮೋಕ್ಷಾರ್ಥೈಃ ಸಮಾಸವ್ಯಾಸಕೀರ್ತನೈಃ ।**
**ತಥಾ ಭಾರತಸೂರ್ಯೇಣ ನೃಣಾಂ ವಿನಿಹಿತಂ ತಮಃ ॥೮೫॥**

ಅಜ್ಞಾನವೆಂಬ ಕತ್ತಲೆಯಿಂದ ಕುರುಡಾಗಿ ತೊಳಲಾಡುತ್ತಿರುವ

ಲೋಕಕ್ಕೆ ಈ ಮಹಾಭಾರತವು ಜ್ಞಾನವೆಂಬ ಅಂಜನದ ಶಲಾಕೆಗಳಿಂದ ಕಣ್ಣುಗಳನ್ನು ಅರಳಿಸುವ ಸಾಧನವಾಗಿದೆ.

ಧರ್ಮಾರ್ಥ-ಕಾಮ-ಮೋಕ್ಷಗಳಿಂದ ಮತ್ತು ಅವುಗಳ ಸೂಕ್ಷ್ಮ ಮತ್ತು ವಿಸ್ತಾರವಾದ ಕಥನದಿಂದ ಭಾರತವೆಂಬ ಸೂರ್ಯನು ಮಾನವರ ಅಜ್ಞಾನ ವನ್ನು ಹೋಗಲಾಡಿಸಿದ್ದಾನೆ.

ಚಂದ್ರನು ತನ್ನ ಮನೋಹರವಾದ ಬೆಳದಿಂಗಳಿನಿಂದ ಕನ್ನೈದಿಲೆಯನ್ನು ಅರಳಿಸುವಂತೆ–ಮಹಾಭಾರತವು ಶ್ರುತಿದೀವಿಗೆಗಳ ಹೊಂಬೆಳಕನ್ನು ಮಾನವನ ಬುದ್ಧಿಯ ಮೇಲೆ ಚೆಲ್ಲಿ ಅದನ್ನು ವಿಕಾಸಗೊಳಿಸುತ್ತದೆ.

ಈ ಮಹಾಭಾರತದ ಇತಿಹಾಸವು ಜಾಜ್ವಲ್ಯಮಾನವಾದ ದೀಪ ಪ್ರಾಯವಾಗಿದೆ. ಈ ಬೆಳಕು ಮೋಹದ ಆವರಣವನ್ನು ಸಂಪೂರ್ಣವಾಗಿ ವಿನಾಶಗೊಳಿಸುತ್ತದೆ. ಲೋಕಕ್ಕೆ ಗರ್ಭಗೃಹವೆನಿಸಿರುವ ಸಕಲಪ್ರಾಣಿಗಳ ಹೃದಯಗುಹೆಗಳ ಮೇಲೆ ಬಹಳ ಚೆನ್ನಾಗಿ ಈ ಮಹಾಭಾರತವು ಬೆಳಕನ್ನು ಚೆಲ್ಲುತ್ತದೆ. ಈ ಮಹಾಭಾರತಕ್ಕೆ ಸಂಗ್ರಹಾಧ್ಯಾಯವೆಂಬುದೇ ಬೀಜಪ್ರಾಯ ವಾಗಿದೆ. ಪೌಲೋಮ ಮತ್ತು ಆಸ್ತೀಕಪರ್ವಗಳು ಮಹಾಭಾರತವೃಕ್ಷದ ಬೇರಿನಂತಿವೆ. ಸಂಭವಪರ್ವವು ಇದರ ನಡುಭಾಗ. ಸಭಾ ಮತ್ತು ಅರಣ್ಯ ಪರ್ವಗಳು ಈ ವೃಕ್ಷದ ಮೇಲೆ ಪಕ್ಷಿಗಳು ವಾಸಮಾಡಲು ಯೋಗ್ಯವಾದ ಪೊಟರೆಗಳ ರೂಪದಲ್ಲಿವೆ. ಅರಣೀಪರ್ವವು ಈ ಮಹಾಭಾರತವೃಕ್ಷದ ಗ್ರಂಥಿಸ್ಥಲವಾಗಿದೆ. ವಿರಾಟ ಮತ್ತು ಉದ್ಯೋಗಪರ್ವಗಳೇ ಈ ಮಹಾ ಭಾರತವೃಕ್ಷದ ಸಾರಭೂತವಾದ ಭಾಗಗಳು. ಭೀಷ್ಮಪರ್ವವು ಮಹಾ ಭಾರತವೃಕ್ಷದ ದೊಡ್ಡ ಕೊಂಬೆಯಾಗಿದೆ. ದ್ರೋಣಪರ್ವವು ಇದರ ಎಲೆಗಳು. ಕರ್ಣಪರ್ವವು ಮಹಾಭಾರತ ವೃಕ್ಷದ ಶ್ವೇತಕುಸುಮಗಳು. ಶಲ್ಯಪರ್ವವು ಈ ಕುಸುಮಗಳ ಸುಗಂಧರೂಪದಲ್ಲಿದೆ. ಸ್ತ್ರೀ ಮತ್ತು ಐಷೀಕಪರ್ವಗಳು ಈ ವೃಕ್ಷದ ಛಾಯಾರೂಪದಲ್ಲಿವೆ. ಶಾಂತಿಪರ್ವವೇ ಈ ಮಹಾಭಾರತವೃಕ್ಷದ ಮಹಾಫಲ. ಅಶ್ವಮೇಧಪರ್ವವೇ ಈ ವೃಕ್ಷದ ಅಮೃತರಸ. ಆಶ್ರಮವಾಸಿಕಪರ್ವವು ವೃಕ್ಷದಡಿಯಲ್ಲಿ ಕುಳಿತುಕೊಳ್ಳಲು ಯೋಗ್ಯ ವಾದ ಒಂದು ನಿವಾಸಸ್ಥಾನದಂತಿದೆ. ಶ್ರುತಿರೂಪವಾಗಿರುವ ಮೌಸಲ ಪರ್ವವು ಎಲ್ಲ ಶಾಖೆಗಳ ಅಂತಿಮಭಾಗರೂಪದಲ್ಲಿದ್ದು ಶಿಷ್ಟರಿಂದಲೂ

ದ್ವಿಜರಿಂದಲೂ ಸೇವಿಸಲ್ಪಡಲು ಯೋಗ್ಯವಾಗಿದೆ. ಮೇಘವು ಯಾವ ರೀತಿಯಲ್ಲಿ ಸರ್ವಭೂತಗಳಿಗೂ ಆಶ್ರಯದಾಯಕವಾಗಿದೆಯೋ–ಅದೇ ರೀತಿಯಲ್ಲಿ ಈ ಭಾರತಕಲ್ಪವೃಕ್ಷವು ಸರ್ವಕವಿಮುಖ್ಯರಿಗೂ ಆಶ್ರಯವಾಗಿದೆ. ಈ ಭಾರತವೃಕ್ಷದಲ್ಲಿ ರುಚಿಕರವಾದ, ಪವಿತ್ರವಾದ, ರಸಯುಕ್ತವಾದ, ಅವಿನಾಶಿಯಾದ ಪುಷ್ಪಗಳೂ ಮತ್ತು ಫಲಗಳೂ ಇವೆ. ಈ ವೃಕ್ಷವನ್ನು ದೇವತೆಗಳೂ ಛೇದನಮಾಡಲಾರರು. ಇಂತಹ ಮಹಾಭಾರತಮಹಾವೃಕ್ಷದ ವರ್ಣನೆಯನ್ನು ನಾನೀಗ ಮಾಡುತ್ತೇನೆ."

ಸೌತಿಗಳು ಮುಂದುವರಿದು ಹೇಳುತ್ತಾರೆ :

"ಧರ್ಮಾತ್ಮರಾದ ಕೃಷ್ಣದ್ವೈಪಾಯನರು–ತಾಯಿಯಾದ ಸತ್ಯವತಿಯ ಮತ್ತು ಗಂಗಾಪುತ್ರನಾದ ಭೀಷ್ಮನ ಆದೇಶದಂತೆ ವಿಚಿತ್ರವೀರ್ಯನ ಇಬ್ಬರು ರಾಣಿಯರಲ್ಲಿ ಮತ್ತು ಒಬ್ಬಳು ದಾಸಿಯಲ್ಲಿ ಅಗ್ನಿತ್ರಯಗಳಂತೆ ಪ್ರಕಾಶಮಾನರಾದ ಧೃತರಾಷ್ಟ್ರ, ಪಾಂಡು, ವಿದುರರೆಂಬ ಮೂವರು ಮಕ್ಕಳನ್ನು ಅನುಗ್ರಹಿಸಿ, ತಪಶ್ಚರಣೆಮಾಡಲು ಪುನಃ ತಮ್ಮ ಆಶ್ರಮಕ್ಕೆ ಹೊರಟು ಹೋದರು. ಅವರೆಲ್ಲರೂ ಹುಟ್ಟಿ ಬೆಳೆದು ವೃದ್ಧರಾಗಿ ಪರಮಪದವನ್ನು ಹೊಂದಿದನಂತರ ಈ ಮನುಷ್ಯಲೋಕದಲ್ಲಿ ಮಹರ್ಷಿಗಳು ಕುರುರಾಜ ಕುಮಾರರಿಗೆ ಸಂಬಂಧಿಸಿದ ಈ ಮಹಾಭಾರತವನ್ನು ಹೇಳಿದರು. ಜನಮೇಜಯನಿಂದಲೂ, ಸಾವಿರಾರು ಬ್ರಾಹ್ಮಣರಿಂದಲೂ ಪ್ರಾರ್ಥಿತರಾದ ವೇದವ್ಯಾಸರು ತಮ್ಮ ಸಮೀಪದಲ್ಲಿಯೇ ಕುಳಿತಿದ್ದ ವೈಶಂಪಾಯನರಿಗೆ ಮಹಾಭಾರತಕಥಾಪ್ರವಚನಮಾಡುವಂತೆ ನಿರ್ದೇಶಿಸಿದರು. ಯಜ್ಞದಲ್ಲಿ ಭಾಗವಹಿಸಿದ್ದ ಸದಸ್ಯರೊಡನೆ ಕುಳಿತಿದ್ದ ವೈಶಂಪಾಯನರು ಯಜ್ಞದ ವಿರಾಮಕಾಲಗಳಲ್ಲಿ ಸದಸ್ಯರಿಂದ ಪುನಃ ಪುನಃ ಪ್ರಾರ್ಥಿಸಲ್ಪಟ್ಟವರಾಗಿ ಈ ಮಹಾಭಾರತದ ಕಥೆಯನ್ನು ಹೇಳುತ್ತಿದ್ದರು.

ವ್ಯಾಸರು ಮಹಾಭಾರತದಲ್ಲಿ ಕುರುವಂಶದ ವಿಸ್ತಾರವನ್ನೂ, ಗಾಂಧಾರಿಯ ಧರ್ಮಶೀಲತೆಯನ್ನೂ, ವಿದುರನ ಜ್ಞಾನವನ್ನೂ, ಕುಂತಿಯ ಸ್ಥೈರ್ಯವನ್ನೂ, ವಾಸುದೇವನ ಮಾಹಾತ್ಮ್ಯವನ್ನೂ, ಪಾಂಡವರ ಸತ್ಯನಿಷ್ಠೆಯನ್ನೂ, ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳ ದುರ್ವೃತ್ತ

ಗಳನ್ನೂ ಬಹಳ ಚೆನ್ನಾಗಿ ಚಿತ್ರಿಸಿದ್ದಾರೆ. ಲೋಕದ ಪುಣ್ಯಶಾಲಿಗಳ ಉಪಾಖ್ಯಾನಗಳಿಂದ ಕೂಡಿರುವ ಈ ಆದ್ಯಮಹಾಭಾರತವು ಒಂದು ಲಕ್ಷ ಶ್ಲೋಕಗಳಿಂದ ಕೂಡಿರುವುದೆಂದು ತಿಳಿಯಬೇಕು.

ಕೃಷ್ಣದ್ವೈಪಾಯನರು ಉಪಕಥೆಗಳನ್ನು ಬಿಟ್ಟು ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳಿಂದ ಭಾರತವನ್ನು ರಚಿಸಿದರು. ಜ್ಞಾನಿಗಳು ಆ ಭಾಗಕ್ಕೆ ಮಾತ್ರ ಮಹಾಭಾರತವೆನ್ನುತ್ತಾರೆ. ಅನಂತರ ಭೂಮಿಕೆಯಾಗಿ 150 ಶ್ಲೋಕಗಳನ್ನೂ ಪರ್ವಸಂಗ್ರಹವನ್ನೂ ರಚಿಸಿದರು. ಮೊಟ್ಟಮೊದಲು ಮಹಾಭಾರತವನ್ನು ವ್ಯಾಸರು ಶುಕರಿಗೂ, ಅನಂತರ ಶುಕರಂತೆ ಪಾಂಡಿತ್ಯವನ್ನು ಪಡೆದಿದ್ದ ಇತರ ಶಿಷ್ಯರಿಗೂ ಉಪದೇಶಿಸಿದರು. ಅದಾದನಂತರ 60 ಲಕ್ಷ ಶ್ಲೋಕಗಳುಳ್ಳ ಮತ್ತೊಂದು ಮಹಾಗ್ರಂಥವನ್ನು ರಚಿಸಿದರು. ಅದರಲ್ಲಿ 30 ಲಕ್ಷ ಶ್ಲೋಕಗಳು ದೇವಲೋಕದಲ್ಲಿಯೂ, 15 ಲಕ್ಷ ಶ್ಲೋಕಗಳು ಪಿತೃಲೋಕದಲ್ಲಿಯೂ, 14 ಲಕ್ಷ ಶ್ಲೋಕಗಳು ಗಂಧರ್ವಲೋಕದಲ್ಲಿಯೂ, ಉಳಿದ ಒಂದು ಲಕ್ಷ ಶ್ಲೋಕಗಳು ಮಾನವಲೋಕದಲ್ಲಿಯೂ ಪ್ರಚಾರದಲ್ಲಿವೆ. ನಾರದರು ದೇವತೆಗಳಿಗೂ, ದೇವಲರು ಪಿತೃಗಳಿಗೂ, ಶುಕರು ಗಂಧರ್ವ-ಯಕ್ಷ-ರಾಕ್ಷಸರಿಗೂ ಇದನ್ನು ಹೇಳಿದರು. ವ್ಯಾಸಶಿಷ್ಯರಾದ ಧರ್ಮಾತ್ಮರಾದ ವೈಶಂಪಾಯನರು ಮನುಷ್ಯಲೋಕದಲ್ಲಿ ಇದರ ಪ್ರಚಾರಕರಾದರು. ಋಷಿಸತ್ತಮರೇ! ನಾನೂ ಕೂಡ ಒಂದು ಲಕ್ಷ ಶ್ಲೋಕಗಳ ಪಾಠವನ್ನು ಮಾಡಿದ್ದೇನೆ. ಅದನ್ನೇ ನೀವೂ ಕೇಳಿರಿ :

ಮಹಾಭಾರತದಲ್ಲಿ ಎರಡು ಮುಖ್ಯಪಾತ್ರಗಳಿವೆ. ಒಂದು ದುರ್ಯೋಧನ ; ಇನ್ನೊಂದು ಧರ್ಮಜ ಇವರಲ್ಲಿ–

**ದುರ್ಯೋಧನೋ ಮನ್ಯುಮಯೋ ಮಹಾದ್ರುಮಃ**
**ಸ್ಕನ್ಧಃ ಕರ್ಣಃ ಶಕುನಿಸ್ತಸ್ಯ ಶಾಖಾಃ ।**
**ದುಃಶಾಸನಃ ಪುಷ್ಪಫಲೇ ಸಮೃದ್ಧೇ**
**ಮೂಲಂ ರಾಜಾ ಧೃತರಾಷ್ಟ್ರೋಽಮನೀಷೀ ॥೧೧೦॥**

ದುರ್ಯೋಧನನು ಕಾಮ-ಕ್ರೋಧ-ಲೋಭ-ಮೋಹಾದಿ ದುರ್ಗುಣಗಳಿಂದ ಕೂಡಿರುವ ಒಂದು ಮಹಾವೃಕ್ಷ. ಕರ್ಣನು ಆ ವೃಕ್ಷದ ಕಾಂಡ.

ಶಕುನಿಯು ಅದರ ಕೊಂಬೆ. ದುಃಶಾಸನನು ಆ ಮರದ ಫಲ-ಪುಷ್ಪಪ್ರಾಯನು ಮತ್ತು ಚಂಚಲಬುದ್ಧಿಯ ಧೃತರಾಷ್ಟ್ರನು ಅದರ ಬೇರು.

**ಯುಧಿಷ್ಠಿರೋ ಧರ್ಮಮಯೋ ಮಹಾದ್ರುಮಃ**
**ಸ್ಕನ್ಧೋಽರ್ಜುನೋ ಭೀಮಸೇನೋಽಸ್ಯ ಶಾಖಾಃ ।**
**ಮಾದ್ರೀಸುತೌ ಪುಷ್ಪಫಲೇ ಸಮೃದ್ಧೇ**
**ಮೂಲಂ ಕೃಷ್ಣೋ ಬ್ರಹ್ಮ ಚ ಬ್ರಾಹ್ಮಣಾಶ್ಚ ॥೧೧೧॥**

ಧರ್ಮರಾಜನು ಧರ್ಮರೂಪವಾದ ಒಂದು ಮಹಾವೃಕ್ಷ. ಅರ್ಜುನನು ಅದರ ಕಾಂಡ. ಭೀಮನು ಮರದ ಕೊಂಬೆ. ನಕುಲ-ಸಹದೇವರು ಆ ವೃಕ್ಷದ ಫಲ-ಪುಷ್ಪಗಳು. ಶ್ರೀಕೃಷ್ಣನ, ಬ್ರಹ್ಮ ( ವೇದ ) ಮತ್ತು ಬ್ರಾಹ್ಮಣರೇ ಆ ಮರದ ಬೇರುಗಳು.

ಪಾಂಡುವು ಭುಜಬಲ-ಪರಾಕ್ರಮಗಳಿಂದ ಅನೇಕರಾಜ್ಯ-ಕೋಶಗಳನ್ನು ಗೆದ್ದು, ಬೇಟೆಯಾಡುವ ಸಲುವಾಗಿ ಅರಣ್ಯಕ್ಕೆ ಹೋಗಿದ್ದನು. ಒಂದು ದಿನ ಬೇಟೆಯಾಡುತ್ತಿದ್ದಾಗ, ರತಿಕ್ರೀಡೆಯಲ್ಲಿದ್ದ ಜಿಂಕೆಗಳ ಯುಗ್ಮವು ಕಣ್ಣಿಗೆ ಬಿದ್ದಿತು. ರಾಜನು ಕಾರ್ಯಾಕಾರ್ಯವಿವೇಚನೆಯನ್ನು ಅರಿತಿದ್ದರೂ ವಿಧಿಯ ಕಟ್ಟಳೆಯಂತೆ ಆ ಜಿಂಕೆಗಳ ಜೋಡಿಯನ್ನು ಕೊಂದು ವಿರಹ ವೇದನೆಯನ್ನನುಭವಿಸುವ ಶಾಪರೂಪವಾದ ಮಹಾವಿಪತ್ತಿಗೆ ಗುರಿಯಾದನು. ಆದರೆ ಪಾಂಡುವಿನ ಪತ್ನಿಯರಾದ ಕುಂತೀ-ಮಾದ್ರಿಯರು ಧರ್ಮಸಂರಕ್ಷಣಾರ್ಥವಾಗಿ ಧರ್ಮ, ವಾಯು, ಇಂದ್ರ ಮತ್ತು ಅಶ್ವಿನೀದೇವತೆಗಳ ಅನುಗ್ರಹದಿಂದ ಐದು ಜನ ಮಕ್ಕಳನ್ನು ಪಡೆದರು. ಆ ಪಂಚಪಾಂಡವರು ತಮ್ಮ ಇಬ್ಬರು ತಾಯಿಯರಿಂದ ಪೋಷಿಸಲ್ಪಡುತ್ತಾ ದಟ್ಟವಾದ ಅರಣ್ಯಗಳಲ್ಲಿದ್ದ ತಪಸ್ವಿಗಳ ಪುಣ್ಯಾಶ್ರಮಗಳಲ್ಲಿ ತಪಸ್ವೀಜನರ ಮಧ್ಯದಲ್ಲಿದ್ದುಕೊಂಡು ದಿನ-ದಿನಕ್ಕೂ ವೃದ್ಧಿಹೊಂದುತ್ತಿದ್ದರು. ( ವಿಧಿಯ ನಿಯಮದಂತೆ ಒಂದು ವಸಂತಸಮಯದಲ್ಲಿ ಪಾಂಡುವು ಮನ್ಮಥನ ಪೀಡೆಯನ್ನು ತಾಳಲಾರದೇ ಮಾದ್ರಿಯೊಡನೆ ರಮಿಸಲು ಹೋಗಿ ಪರಲೋಕವನ್ನೈದಿದನು. )

ಧರ್ಮಾದಿಗಳು ಕೆಲವು ವರ್ಷಗಳ ಕಾಲ ಕಾಡಿನಲ್ಲಿ ಬೆಳೆದನಂತರ, ಅಲ್ಲಿದ್ದ ಋಷಿಗಳೆಲ್ಲರೂ ಸೇರಿ ರಾಜಕುಮಾರರು ರಾಜಧಾನಿಯನ್ನು ಸೇರು

ವುದು ಸೂಕ್ತವೆಂದು ನಿಶ್ಚಯಿಸಿ ಹಸ್ತಿನಾಪುರಕ್ಕೆ ತಾಯಿ-ಮಕ್ಕಳನ್ನು ಕರೆದೊಯ್ದರು.

ಆ ಸಮಯದಲ್ಲಿ ಬ್ರಹ್ಮಚಾರಿಗಳಾಗಿದ್ದ ಪಾಂಡುವಿನ ಮಕ್ಕಳು ಜಟಾಧಾರಿಗಳೂ ರೂಪವಂತರೂ ಆಗಿದ್ದರು.

ತಾಪಸೋತ್ತಮರು, ಧೃತರಾಷ್ಟ್ರನ ಮತ್ತು ಅವನ ಮಕ್ಕಳ ಸಮ್ಮುಖಕ್ಕೆ ಪಾಂಡುಪುತ್ರರನ್ನು ಕರೆದೊಯ್ದು–"ಈ ಬಾಲಕರು ನಿಮ್ಮ ಪುತ್ರರೂ, ಭ್ರಾತೃಗಳೂ, ಶಿಷ್ಯರೂ ಮತ್ತು ಸುಹೃದರೂ ಆಗಿರುತ್ತಾರೆ"–ಎಂದು ಹೇಳಿ ಅಂತರ್ಧಾನಹೊಂದಿದರು. ಋಷಿಗಳು ಹೀಗೆ ಹೇಳುತ್ತಲೇ ಕೌರವರೂ, ಶಿಷ್ಟರೂ, ಪಟ್ಟಣಿಗರೂ ಮತ್ತು ವರ್ಣಾಶ್ರಮಿಗಳೂ ಪಾಂಡುಕುಮಾರರನ್ನು ನೋಡಿ ಆನಂದಭರಿತರಾದರು. ಕೆಲವರಿಗೆ–'ಇವರು ಪಾಂಡುಪುತ್ರರೇ?' ಎಂಬ ವಿಷಯದಲ್ಲಿ ಜಿಜ್ಞಾಸೆಯೂ ಉಂಟಾಯಿತು. ಅವರಲ್ಲಿ ಕೆಲವರು 'ಇವರು ಪಾಂಡುಪುತ್ರರೇ ಅಲ್ಲ'–ಎಂದೂ ಹೇಳಿಬಿಟ್ಟರು. ಮತ್ತೆ ಕೆಲವರು ಅವರ ಮುಖಲಕ್ಷಣಗಳನ್ನು ನೋಡಿ–'ಇವರು ಪಾಂಡುವಿನ ಪುತ್ರರೇ ಆಗಿರುವರು'–ಎಂದು ದೃಢೀಕರಿಸಿ ಹೇಳಿದರು. 'ಪಾಂಡುವು ಸತ್ತು ಬಹಳ ಕಾಲವೇ ಆಗಿಹೋಗಿರುವಾಗ ಇವರು ಅವನ ಮಕ್ಕಳು ಹೇಗೆ ತಾನೇ ಆದಾರು?' ಎಂದು ಇನ್ನೂ ಕೆಲವರು ತಮ್ಮ ಸಂಶಯವನ್ನು ವ್ಯಕ್ತಪಡಿಸಿದರು.

ಆದರೂ 'ನಾವು ಖಂಡಿತವಾಗಿಯೂ ಈ ಬಾಲಕರನ್ನು ಸ್ವಾಗತಿಸುತ್ತೇವೆ. ಅದೃಷ್ಟವಶದಿಂದ ನಾವಿಂದು ಪಾಂಡುವಿನ ಸಂತಾನವನ್ನು ಕಾಣುತ್ತಿದ್ದೇವೆ. ಎಲ್ಲರೂ ಪಾಂಡುವಿನ ಮಕ್ಕಳಿಗೆ ಸ್ವಾಗತವೆಂದು ಘೋಷಿಸಿರಿ'–ಎಂಬೀ ಮಾತುಗಳು ನಾಲ್ಕು ದಿಕ್ಕುಗಳಿಂದಲೂ ಕೇಳಿಬಂದುವು. ನಾಗರಿಕರ ಆ ಘೋಷ-ಪ್ರತಿಘೋಷಗಳು ಶಾಂತವಾದನಂತರ, ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯುಂಟುಮಾಡುತ್ತಾ ಅದೃಶ್ಯಭೂತಗಳ ಶಬ್ದವೊಂದು ಕೇಳಿಬಂದಿತು. (ಇವರು ಪಾಂಡುವಿನ ಮಕ್ಕಳೇ ಎಂಬುದನ್ನು ಆ ಅಶರೀರವಾಣಿಯು ಸ್ಥಿರಪಡಿಸಿತು.) ಅಶರೀರವಾಣಿಯನ್ನು ಕೇಳುತ್ತಲೇ ಪೌರಸಮೇತರಾದ ಕೌರವರು ಪಾಂಡವರನ್ನು ಕರೆದೊಯ್ದರು. ಆ ಸಮಯದಲ್ಲಿ ಅರಮನೆಯೊಳಗೆ ಪಾಂಡುಕುಮಾರರ ಮೇಲೆ ಪುಷ್ಪವೃಷ್ಟಿಯಾಯಿತು. ಸುಗಂಧದ್ರವ್ಯಗಳ ಸೇಚನೆಯಾಯಿತು. ದುಂದುಭಿಗಳು ಮೊಳಗಿದುವು.

ಅದು ಪೌರರೆಲ್ಲರಿಗೂ ಪರಮಾದ್ಭುತವಾಗಿ ಕಂಡಿತು. ಪಾಂಡವರ ಮೇಲಿನ ಪ್ರೀತಿಯಿಂದಾಗಿ ಪಟ್ಟಣಿಗರ ಹರ್ಷೋದ್ವೇಗಗಳಿಂದ ಹೊರಹೊರಟ ಮಹಾ ನಿನಾದವು ಸ್ವರ್ಗವನ್ನೇ ಮುಟ್ಟಿತು ಮತ್ತು ಅದು ಪಾಂಡವರ ಕೀರ್ತಿಯನ್ನು ವರ್ಧಿಸುವ ಮಹಾಶಬ್ದವೂ ಆಗಿದ್ದಿತು. ಪಾಂಡವರು ಧೃತರಾಷ್ಟ್ರನ ಅರಮನೆ ಯಲ್ಲಿ ವೇದ-ವೇದಾಂಗಗಳನ್ನೂ, ಸಕಲಶಾಸ್ತ್ರಗಳನ್ನೂ ಅಧ್ಯಯನಮಾಡು ತ್ತಿದ್ದು ಎಲ್ಲರ ಪ್ರೀತಿಗೂ ಪಾತ್ರರಾದರು. ಯಾವ ವಿಧವಾದ ಭಯವೂ ಅವರಿಗಿರಲಿಲ್ಲ.

ಧರ್ಮರಾಜನ ಶೌಚ[1] (ಪರಿಶುದ್ಧತೆ), ಭೀಮನ ಧೈರ್ಯ, ಅರ್ಜುನನ ಶೌರ್ಯ, ನಕುಲ-ಸಹದೇವರ ಗುರುಶುಶ್ರೂಷೆ, ತಾಳ್ಮೆ, ವಿನಯ–ಈ ಗುಣಗಳು ಪ್ರಜೆಗಳನ್ನು ಸಂತೋಷಗೊಳಿಸಿದುವು.

ಕೆಲವು ದಿನಗಳನಂತರ ಅನೇಕರಾಜಕುಮಾರರ ಮಧ್ಯದಲ್ಲಿದ್ದ ಅರ್ಜು ನನು ಅತ್ಯಂತದುಷ್ಕರವಾದ ಪರಾಕ್ರಮವನ್ನು ಪ್ರದರ್ಶಿಸಿ, ಸ್ವಯಂವರದಲ್ಲಿ ಪತಿಯನ್ನು ಆರಿಸಿಕೊಳ್ಳಲು ನಿಶ್ಚಯಿಸಿದ್ದ ದ್ರುಪದರಾಜಪುತ್ರಿಯಾದ ದ್ರೌಪದಿಯನ್ನು ಪಡೆದುಕೊಂಡನು. ಅದು ಮೊದಲ್ಗೊಂಡು ಅರ್ಜುನನು ಪ್ರಪಂಚದಲ್ಲಿರುವ ಸರ್ವಧನುಷ್ಮಂತರಿಗೂ ಪೂಜ್ಯನೆಂಬ ಕೀರ್ತಿಯನ್ನು ಪಡೆದನು. ಮಧ್ಯಾಹ್ನದ ವೇಳೆಯಲ್ಲಿ ಸೂರ್ಯನು ದುಷ್ಪ್ರೇಕ್ಷ್ಯನಾಗುವಂತೆ–

---

1 ಆಚಾರಾಪರಿಹಾರಶ್ಚ ಸಂಸರ್ಗಶ್ಚಾಪ್ಯನಿನ್ದಿತೈಃ ।
ಆಚಾರೇ ಚ ವ್ಯವಸ್ಥಾನಂ ಶೌಚಮಿತ್ಯಭಿಧೀಯತೇ ॥

ಶಾಸ್ತ್ರೋಕ್ತವಾದ ಆಚಾರಗಳನ್ನು ಪರಿತ್ಯಾಗಮಾಡದಿರುವುದು, ಸತ್ಪುರುಷರೊಡನೆ ಸಹವಾಸ, ಸದಾಚಾರದಲ್ಲಿ ದೃಢವಿಶ್ವಾಸವಿರುವಿಕೆ–ಇವಕ್ಕೆ ಶೌಚವೆಂದು ಹೆಸರು.

ಇಷ್ಟಾನಿಷ್ಟಾರ್ಥಸಮ್ಪ್ರಾಪ್ತೌ ಚಿತ್ತಸ್ಯಾವಿಕೃತಿರ್ಧೃತಿಃ ।

ಇಷ್ಟವಾದುದೇ ನಡೆಯಲಿ ; ಅನಿಷ್ಟವಾದುದೇ ನಡೆಯಲಿ–ಮನಸ್ಸನ್ನು ವಿಕಾರ ಗೊಳಿಸದಿರುವುದೇ ಧೃತಿ ಅಥವಾ ಧೈರ್ಯ.

ಸರ್ವಾತಿಶಯಸಾಮರ್ಥ್ಯಂ ವಿಕ್ರಮಂ ಪರಿಚಕ್ಷತೇ।

ಸರ್ವರನ್ನೂ ಮೀರಿಸುವ ಸಾಮರ್ಥ್ಯವಿರುವಿಕೆಯು ವಿಕ್ರಮವೆನಿಸಿಕೊಳ್ಳುತ್ತದೆ.

ವೃತ್ತಾನುವೃತ್ತಿಃ ಶುಶ್ರೂಷಾ.

ಸದಾಚಾರಪರಾಯಣರಾದ ಗುರುಜನರನ್ನು ಅನುಸರಣೆಮಾಡಿಕೊಂಡಿರುವುದೇ ಶುಶ್ರೂಷೆ.

ಯುದ್ಧಗಳಲ್ಲಿ ಅರ್ಜುನನು ದುಷ್ಪ್ರೇಕ್ಷ್ಯನೆಂದೂ–ದುರ್ಧರನೆಂದೂ ಪರಿಗಣಿತನಾದನು.

ಧರ್ಮಜನು ಮಾಡಬೇಕೆಂದಿದ್ದ ರಾಜಸೂಯಯಾಗಕ್ಕೆ ಅರ್ಜುನನು ಅಣಿಮಾಡಿಕೊಟ್ಟನು. ಅತ್ಯುತ್ಕೃಷ್ಟವಾದ ರೀತಿಯಲ್ಲಿ ರಾಜಸೂಯವೂ ನೆರವೇರಿತು.

ಭಗವಂತನಾದ ಶ್ರೀಕೃಷ್ಣನ ಸುನೀತಿಯಿಂದಲೂ, ಭೀಮಾರ್ಜುನರ ಬಲದಿಂದಲೂ ಜರಾಸಂಧನ ಮತ್ತು ಬಲದಿಂದ ಬಹುಗರ್ವಿತನಾಗಿದ್ದ ಶಿಶುಪಾಲನ ಸಂಹಾರವೂ ಆಗಿ ಧರ್ಮರಾಜನ ರಾಜಸೂಯಯಾಗವು ಪೂರ್ಣವಾಯಿತು. ಯುಧಿಷ್ಠಿರನು ಮಾಡಿದ ಆ ರಾಜಸೂಯಮಹಾಕ್ರತುವು ಅನ್ನಸಮೃದ್ಧವೂ, ದಕ್ಷಿಣಾಸಮೃದ್ಧವೂ, ಮಹಾಯಜ್ಞದ ಸಕಲಗುಣಗಳಿಂದ[2] ಪರಿಪೂರ್ಣವಾದುದೂ ಆಗಿದ್ದಿತು. ಆ ರಾಜಸೂಯಯಾಗದ ಸಮಯದಲ್ಲಿ ದುರ್ಯೋಧನನೇ ಕೋಶಾಧ್ಯಕ್ಷನಾಗಿದ್ದನು. ನಾನಾದೇಶಗಳ ಅನೇಕರಾಜರುಗಳಿಂದ ತರಲ್ಪಡುತ್ತಿದ್ದ ಮಣಿ-ಕಾಂಚನ-ರತ್ನಗಳೂ, ಹಸು-ಕುದುರೆ-ಆನೆಗಳೂ, ಐಶ್ವರ್ಯಗಳೂ, ಚಿತ್ರ-ವಿಚಿತ್ರವಾದ ಬಟ್ಟೆಗಳೂ, ಆಭರಣಗಳೂ, ಕಂಬಲಗಳೂ, ಮೃಗಚರ್ಮಗಳೂ, ರತ್ನಗಳೂ, ರಂಕು ಎಂಬ ಹೆಸರಿನ ಮೃಗದ ಕೂದಲಿನಿಂದ ಮಾಡಿದ ಮೃದುವಾದ ಆಸ್ತರಣಗಳೂ–

---

**ಕ್ಷಾನ್ತಿರಾಗಸ್ಯವಿಕ್ರಿಯಾ**

ಇಂತಹವನಿಂದ ಅಪರಾಧವಾಗಿದೆಯೆಂದು ತಿಳಿದನಂತರವೂ ಅಪರಾಧಿಯ ಮೇಲೆ ಕೋಪಗೊಳ್ಳದಿರುವುದು ಮತ್ತು ಅಪರಾಧಿಯನ್ನು ಶಿಕ್ಷಿಸಲು ಇಚ್ಛಿಸದಿರುವುದು-ಕ್ಷಮಾಶೀಲತೆ.

**ಜಿತೇಂದ್ರಿಯತ್ವಂ ವಿನಯೋಽಥವಾನುದ್ಧತಶೀಲತಾ ।**

ಜಿತೇಂದ್ರಿಯತೆ ಅಥವಾ ಉದ್ಧತನಾಗದಿರುವುದಕ್ಕೆ ವಿನಯವೆಂದು ಕರೆಯುತ್ತಾರೆ.

**ಶೌರ್ಯಮಧ್ಯವಸಾಯಸ್ಸ್ಯಾದ್ಬಲಿನೋಽಪಿ ಪರಾಭವೇ ।**

ಶತ್ರುವು ಮಹಾಬಲಿಷ್ಠನಾಗಿದ್ದರೂ ಅವನನ್ನು ಪರಾಜಯಗೊಳಿಸಲು ಮಾಡುವ ಪ್ರಯತ್ನಕ್ಕೆ ಶೌರ್ಯವೆಂದು ಹೆಸರು.

2 ಆಚಾರ್ಯ, ಬ್ರಹ್ಮಾ, ಋತ್ವಿಕ್, ಸದಸ್ಯರು, ಯಜಮಾನ, ಯಜಮಾನನ ಪತ್ನೀ, ಧನಸಂಪತ್ತಿ, ಶ್ರದ್ಧೆ, ಉತ್ಸಾಹ, ವಿಧಿ-ವಿಧಾನಗಳನ್ನು ಯಥಾವತ್ತಾಗಿ ಪರಿಪಾಲಿಸುವುದು ಮತ್ತು ಸದ್ಬುದ್ಧಿ–ಇವುಗಳೇ ಯಜ್ಞದ ಮಹಾಗುಣಗಳು.

ಧನಾಧ್ಯಕ್ಷನಾಗಿದ್ದ ದುರ್ಯೋಧನನ ಬಳಿಗೆ ಪ್ರವಾಹರೂಪದಲ್ಲಿ ಬಂದು ಸೇರುತ್ತಿದ್ದುವು.

ಪಾಂಡವರ ಸಮೃದ್ಧವಾದ ಆ ಸಂಪತ್ತನ್ನು ಕಂಡು ದುರ್ಯೋಧನನಿಗೆ ಈರ್ಷ್ಯೆಯುಂಟಾಯಿತು. ಅಸೂಯೆಯಿಂದ ಮಹಾಕೋಪವೂ ಹುಟ್ಟಿತು. ಪಾಂಡವರ ಸಲುವಾಗಿ ಮಯನಿಂದ ಸುನಿರ್ಮಿತವಾಗಿದ್ದ ವಿಮಾನಸದೃಶ ವಾದ ಸಭಾಮಂಟಪವನ್ನು ಕಂಡು ದುರ್ಯೋಧನನಿಗೆ ತುಂಬಾ ಸಂತಾಪ ವುಂಟಾಯಿತು.

ಅರಮನೆಯಲ್ಲಿ ಸುತ್ತಲೂ ತಿರುಗುತ್ತಿದ್ದಾಗ, ಶಿಲ್ಪಿಯು ಕುಶಲತೆಯಿಂದ ಚಿತ್ರಿಸಿದ ಭಾಗಗಳನ್ನು ಸಹಜವೋ–ಅಸಹಜವೋ ಎಂದು ಭ್ರಮಿಸಿ ವರ್ತಿಸಿದ ದುರ್ಯೋಧನನು, ಶ್ರೀಕೃಷ್ಣನ ಸಮಕ್ಷಮದಲ್ಲಿ, ಅಲ್ಲಿಯೇ ನಿಂತಿದ್ದ ಭೀಮಸೇನನ ಮೂದಲಿಕೆಗೆ ಗುರಿಯಾದನು.

ದುರ್ಯೋಧನನು ರಾಜಯೋಗ್ಯವಾದ ಸುಖೋಪಭೋಗಗಳನ್ನೇ ಅನುಭವಿಸುತ್ತಿದ್ದನು. ನಾನಾವಿಧವಾದ ರತ್ನಗಳಿಂದ ತನ್ನ ಶರೀರವನ್ನು ಅಲಂಕರಿಸಿಕೊಳ್ಳುತ್ತಿದ್ದನು. ಆದರೂ ಪಾಂಡವರ ಮೇಲಿನ ಮಾತ್ಸರ್ಯದ ಕಾರಣದಿಂದ ಅವನು ಕೃಶನಾಗಿ ಕಳೆಗುಂದಿದನು. ಆ ವಿಷಯವನ್ನು ದುರ್ಯೋಧನನ ಸುಹೃದರು ಧೃತರಾಷ್ಟ್ರನಿಗೂ ಹೇಳಿದರು.

ವಿದುರಾದಿಗಳು ವಿರೋಧಿಸಿದರೂ ಸಹ ಪುತ್ರವಾತ್ಸಲ್ಯದಿಂದ ಪಾಂಡ ವರ ವಿನಾಶಕ್ಕೆಂದು ಅಣಿಮಾಡಿದ್ದ ದ್ಯೂತಕ್ಕೆ ರಾಜನು ಅನುಮತಿಯನ್ನಿತ್ತನು. ದ್ಯೂತವಾರ್ತೆಯನ್ನು ಕೇಳಿ ಕೃಷ್ಣನಿಗೆ ಬಹಳ ಕೋಪವೇ ಬಂದಿತು.

ನಿಶ್ಚಯವಾಗಿಯೂ ಧೃತರಾಷ್ಟ್ರನಿಗೆ ತನ್ನ ಮಕ್ಕಳು ಮಾಡಿದ ಕಾರ್ಯವು ಸ್ವಲ್ಪವೂ ಪ್ರಿಯವಾಗಿರಲಿಲ್ಲ. ಆದರೂ ಪಾಂಡವ-ಕೌರವರ ವಿವಾದವನ್ನು ಅವನು ಅನುಮೋದಿಸಿದನು. ಅನೀತಿಯಿಂದ ಕೂಡಿದ ದ್ಯೂತಾದಿಗಳನ್ನೂ, ಘೋರಕೃತ್ಯಗಳನ್ನೂ, ಅನ್ಯಾಯಗಳನ್ನೂ ಅವನು ಉಪೇಕ್ಷೆಮಾಡಿಬಿಟ್ಟನು.

ಧೃತರಾಷ್ಟ್ರನು ಆ ಸಮಯದಲ್ಲಿ ಮಾಡಿದ ಉಪೇಕ್ಷೆಯೇ ಸರ್ವಕ್ಷತ್ರಿ ಯರ ವಿನಾಶಕ್ಕೂ ಕಾರಣವಾಯಿತು. ವಿದುರ, ಭೀಷ್ಮ, ದ್ರೋಣ, ಕೃಪ– ಇವರು ಹೇಳಿದ ಬುದ್ಧಿವಾದವನ್ನು ತಿರಸ್ಕರಿಸಿ, ಪಾಂಡವ-ಕೌರವರ ವೈಮನ

ಸ್ಯದ ಕಾರಣದಿಂದುಂಟಾದ ಆ ಮಹಾಯುದ್ಧದಲ್ಲಿ ಕ್ಷತ್ರಿಯರು ಪರಸ್ಪರವಾಗಿ ಕಾದಾಡಿ ತಮ್ಮ-ತಮ್ಮ ಕ್ರೋಧಾಗ್ನಿಯಿಂದಲೇ ಒಬ್ಬರು ಮತ್ತೊಬ್ಬರನ್ನು ದಹಿಸಿಬಿಟ್ಟರು.

ಪಾಂಡವರು ಜಯಗಳಿಸುತ್ತಿರಲಾಗಿ, ಅವರು ದಿನ-ದಿನಕ್ಕೂ ಜಯ ಶಾಲಿಗಳಾಗುತ್ತಿರುವರೆಂಬ ಅಪ್ರಿಯವಾರ್ತೆಯನ್ನು ಧೃತರಾಷ್ಟ್ರನು ಸಂಜಯ ನಿಂದ ಕೇಳಿ–ದುರ್ಯೋಧನ, ಕರ್ಣ ಮತ್ತು ಶಕುನಿಗಳ ಅಭಿಪ್ರಾಯವೇನಿ ತ್ತೆಂಬುದನ್ನೂ ತಿಳಿದು ಬಹುಕಾಲ ಚಿಂತಿಸುತ್ತಿದ್ದು ಅನಂತರದಲ್ಲಿ ಸಂಜಯ ನನ್ನು ಕುರಿತು ಹೇಳಿದನು : "ಸಂಜಯ! ನಾನು ಹೇಳುವುದೆಲ್ಲವನ್ನೂ ಕೇಳು. ಈಗ ನಡೆಯುತ್ತಿರುವ ಯುದ್ಧಕ್ಕೆ ಅಥವಾ ಸರ್ವವಿನಾಶಕ್ಕೆ ನಾನೇ ಕಾರಣನೆಂದು ನಿಂದಿಸಬೇಡ. ನೀನು ವಿದ್ಯಾವಂತನೂ, ಮೇಧಾವಿಯೂ, ಬುದ್ಧಿವಂತನೂ, ಪ್ರಾಜ್ಞಸಮ್ಮತನೂ ಆಗಿರುವೆ. ಪಾಂಡವರೊಡನೆ ಯುದ್ಧ ಮಾಡಲು ನನಗೆ ಮನಸ್ಸಿರಲಿಲ್ಲ. ಈಗಾಗುತ್ತಿರುವ ಕುಲಕ್ಷಯವು ನನಗೆ ಪ್ರೀತಿಕರವಾಗಿಲ್ಲ. ನನಗೆ ನನ್ನ ಪುತ್ರರಲ್ಲಿ ಮತ್ತು ಪಾಂಡುವಿನ ಪುತ್ರರಲ್ಲಿ ಯಾವ ವಿಧವಾದ ಭೇದಭಾವವೂ ಇರಲಿಲ್ಲ. ಆದರೆ ಕ್ರೋಧಪರವಶರಾದ ನನ್ನ ಮಕ್ಕಳು ವೃದ್ಧನಾದ ನನ್ನನ್ನು ನಿಂದಿಸುತ್ತಿದ್ದರು. ಕುರುಡನಾದ ನಾನು ಪುತ್ರಪ್ರೇಮದ ಕೃಪಣತೆಯಿಂದ ಅವೆಲ್ಲವನ್ನೂ ಸಹಿಸಿಕೊಳ್ಳುತ್ತಿದ್ದೆನು. ಮಂದಬುದ್ಧಿಯಾದ ದುರ್ಯೋಧನನು ಪಾಂಡವರ ಐಶ್ವರ್ಯವನ್ನು ನೆನೆದು ಅಸೂಯೆಯಿಂದ ದುಃಖಿಸಿದರೆ ನಾನೂ ಅವನೊಡನೆ ದುಃಖಿಸುತ್ತಿದ್ದೆನು ; ನಾನೂ ಮೋಹಪರವಶನಾಗುತ್ತಿದ್ದೆನು.

ರಾಜಸೂಯಯಾಗದ ಸಮಯದಲ್ಲಿ ಮಹಾಪರಾಕ್ರಮಿಗಳಾದ ಪಾಂಡವರ ಮಹೈಶ್ವರ್ಯವನ್ನು ಕಂಡು ಸಭಾಭವನದ ಉಪ್ಪರಿಗೆಯನ್ನು ಹತ್ತಿ ನೋಡುತ್ತಿದ್ದ ಸಮಯದಲ್ಲಿ ಭೀಮನಿಂದಾದ ಅಪಹಾಸ್ಯಕ್ಕೆ ಗುರಿಯಾಗಿ ದುರ್ಯೋಧನನು ಕುಪಿತನಾದನು. ಆದರೆ ಪಾಂಡವರನ್ನು ಜಯಿಸುವ ಸಾಮರ್ಥ್ಯವು ಅವನಿಗಿರಲಿಲ್ಲ. ಕ್ಷತ್ರಿಯನಾಗಿದ್ದರೂ ಅವನಿಗೆ ಯುದ್ಧದಲ್ಲಿ ನಿರುತ್ಸಾಹವುಂಟಾಯಿತು. ಆಗವನು ಪಾಂಡವರ ಸಂಪತ್ತನ್ನು ಅಪಹರಿಸಲು ಬೇರೊಂದು ಮಾರ್ಗವನ್ನು ಹುಡುಕಿದನು. ಶಕುನಿಯಿಂದೊಡಗೂಡಿ ಮೋಸದ ಪಗಡೆಯಾಟಕ್ಕೆ ಪಾಂಡವರನ್ನು ಆಹ್ವಾನಿಸಿದನು. ಈ ರೀತಿಯಾಗಿ

ಪಾಂಡವರೊಡನೆ ಪಗಡೆಯಾಡಬೇಕೆಂದು ನನ್ನ ಮಗನು ನಿಶ್ಚಯಿಸಿದ ನಂತರ–ಯಾವ ಯಾವ ಘಟನೆಗಳು ನಡೆದುವು? ಅದರ ಹಿಂದೆ ಯಾವ ಘಟನೆಗಳು ನಡೆದಿದ್ದುವು? ಆಯಾ ಘಟನೆಗಳು ನಡೆದ ಸಮಯದಲ್ಲಿ ನನ್ನ ಮನಸ್ಸಿನ ಮೇಲೆ ಅದರಿಂದಾದ ಪರಿಣಾಮವೇನು? ಎಲ್ಲವನ್ನೂ ಸಮಗ್ರ ವಾಗಿ ಹೇಳುವೆನು ಕೇಳು, ಸಂಜಯ! ಬುದ್ಧಿಯುಕ್ತವಾದ ನನ್ನ ವಾಕ್ಯಗಳನ್ನು ಸಮಗ್ರವಾಗಿ ಕೇಳಿದನಂತರ ನಾನು ನಿಶ್ಚಯವಾಗಿಯೂ ಪ್ರಜ್ಞಾಚಕ್ಷು ವೆಂಬುದನ್ನು (ವಿವೇಕವಂತನೆಂಬುದನ್ನು) ನೀನು ದೃಢಪಡಿಸಿಕೊಳ್ಳುವೆ.

**ಯದಾಶ್ರೌಷಂ ಧನುರಾಯಮ್ಯ ಚಿತ್ರಂ**
**ವಿದ್ಧಂ ಲಕ್ಷ್ಯಂ ಪಾತಿತಂ ವೈ ಪೃಥಿವ್ಯಾಮ್ ।**
**ಕೃಷ್ಣಾಂ ಹೃತಾಂ ಪ್ರೇಕ್ಷತಾಂ ಸರ್ವರಾಜ್ಞಾಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೫೦॥**

ಸಂಜಯ! 'ಬ್ರಾಹ್ಮಣವೇಷಧಾರಿಯಾಗಿದ್ದ ಅರ್ಜುನನು ಚಿತ್ರ-ವಿಚಿತ್ರವಾದ, ಬಹಳ ಭಾರವಾದ ಧನುಸ್ಸನ್ನೆತ್ತಿ ನಾಣನ್ನು ಸೆಳೆದು ಕಟ್ಟಿ, ಲಕ್ಷ್ಯವನ್ನು ಭೇದಿಸಿದನು. ಸರ್ವರಾಜರ ಸಮ್ಮುಖದಲ್ಲಿ ಪಾಂಚಾಲಿಯನ್ನು ಪಾಂಡವರು ಕರೆದುಕೊಂಡು ಹೋದರು'–ಎಂಬ ವಾರ್ತೆಯನ್ನು ಎಂದು ನಾನು ಕೇಳಿದೆನೋ–ಅಂದೇ ನನ್ನ ಮಕ್ಕಳು ಜಯಗಳಿಸುವರೆಂಬ ಆಸೆಯನ್ನು ಬಿಟ್ಟುಬಿಟ್ಟೆನು.

**ಯದಾಶ್ರೌಷಂ ದ್ವಾರಕಾಯಾಂ ಸುಭದ್ರಾಂ**
**ಪ್ರಸಹ್ಯೋಢಾಂ ಮಾಧವೀಮರ್ಜುನೇನ ।**
**ಇಂದ್ರಪ್ರಸ್ಥಂ ವೃಷ್ಣಿವೀರೌ ಚ ಯಾತೌ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೫೧॥**

ಮಧುವಂಶದ ರಾಜಕುಮಾರಿಯಾದ ಸುಭದ್ರೆಯನ್ನು ಅರ್ಜುನನು ಅಪಹರಿಸಿಕೊಂಡು ಹೊರಟುಹೋದನು. ಆದರೆ ಅದಕ್ಕೆ ಪ್ರತಿಯಾಗಿ–'ಕೃಷ್ಣ-ಬಲರಾಮರು ಸೌಹಾರ್ದದಿಂದ ಬಳುವಳಿಗಳೊಡನೆ ಇಂದ್ರಪ್ರಸ್ಥಕ್ಕೆ ಹೋದರು'–ಎಂಬ ವಾರ್ತೆಯನ್ನು ಕೇಳಿದೊಡನೆಯೇ ನಾನು ಜಯದ ಆಸೆಯನ್ನೇ ಬಿಟ್ಟುಬಿಟ್ಟೆನು, ಸಂಜಯ!

**ಯದಾಶ್ರೌಷಂ ದೇವರಾಜಂ ಪ್ರವಿಷ್ಟಂ**
**ಶರೈರ್ದಿವ್ಯೈರ್ವಾರಿತಂ ಚಾರ್ಜುನೇನ ।**
**ಅಗ್ನಿಂ ತಥಾ ತರ್ಪಿತಂ ಖಾಣ್ಡವೇ ಚ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೫೨॥**

ದೇವೇಂದ್ರನೇ ಅರ್ಜುನನೊಡನೆ ಯುದ್ಧಕ್ಕೆ ಬಂದಾಗಲಾದರೂ ಅರ್ಜುನನು ಸೋತುಹೋಗಬಾರದಾಗಿತ್ತೇ? ಆದರೆ ಅಗ್ನಿಯು ಖಾಂಡವ ವನವನ್ನು ಸುಟ್ಟು ಭಸ್ಮಮಾಡುತ್ತಿದ್ದಾಗ, ಸಕಲಮೇಘಗಳೊಡನೆ ಆಗಮಿಸಿದ ಇಂದ್ರನನ್ನು ಅರ್ಜುನನು ತನ್ನ ದಿವ್ಯವಾದ ಶರಗಳ ಜಾಲದಿಂದ ಹಿಂದಿರುಗಿಸಿ ಅಗ್ನಿಯನ್ನು ಸಂತೃಪ್ತಿಗೊಳಿಸಿದನು. ಸಂಜಯ! ಆ ವಾರ್ತೆಯನ್ನು ಕೇಳಿ ದೊಡನೆಯೇ ನನ್ನ ಮಕ್ಕಳು ಜಯಶಾಲಿಗಳಾಗುತ್ತಾರೆಂಬ ಆಸೆಯೇ ಹೊರಟುಹೋಯಿತು.

**ಯದಾಶ್ರೌಷಂ ಜಾತುಷಾದ್ವೇಶ್ಮನಸ್ತಾ-**
**ನ್ಮುಕ್ತಾನ್ಪಾರ್ಥಾನ್ಪಞ್ಚ ಕುನ್ತ್ಯಾಸಮೇತಾನ್ ।**
**ಯುಕ್ತಂ ಚೈಷಾಂ ವಿದುರಂ ಸ್ವಾರ್ಥಸಿದ್ಧ್ಯೈ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೫೩॥**

ನನ್ನ ಮಕ್ಕಳು ಪಾಂಡವರ ನಿರ್ಮೂಲಕ್ಕಾಗಿ ಅರಗಿನ ಮನೆಯನ್ನು ಕಟ್ಟಿಸಿದ್ದರು. ಅಲ್ಲಿ ತಂಗಲು ವ್ಯವಸ್ಥೆಯಾದನಂತರ ಅವರು ಉಳಿಯುವು ದೆಂತು? ಅಲ್ಲಿಂದಲೂ ಕುಂತಿಯೊಡನೆ ಆ ಪಾಂಡವರೈವರೂ ತಪ್ಪಿಸಿ ಕೊಂಡೇಬಿಟ್ಟರು. ಸ್ವಯಂ ವಿದುರನೇ ಆ ಕಾರ್ಯಸಿದ್ಧಿಗೆ ಅನುವಾದನು. (ವಿದುರನ ಸೂಚನೆಯಿಂದಲೇ ಪಾಂಡವರು ಪಾರಾದರು.) ಆ ವಾರ್ತೆಯನ್ನು ನಾನು ಕೇಳಿದೊಡನೆಯೇ ನನ್ನ ಮಕ್ಕಳು ವಿಜಯಗಳಿಸುವ ಆಸೆಯು ನನಗೆ ಉಳಿಯಲಿಲ್ಲ.

**ಯದಾಶ್ರೌಷಂ ದ್ರೌಪದೀಂ ರಙ್ಗಮಧ್ಯೇ**
**ಲಕ್ಷ್ಯಂ ಭಿತ್ತ್ವಾ ನಿರ್ಜಿತಾಮರ್ಜುನೇನ ।**
**ಶೂರಾನ್ಪಾಞ್ಚಾಲಾನ್ಪಾಣ್ಡವೇಯಾಂಶ್ಚ ಯುಕ್ತಾಂ-**
**ಸ್ತದಾ ನಾಶಂಸೇ ವಿಜಯಾಯ ಸಂಜಯ ॥೧೫೪॥**

ಅರ್ಜುನನು ಲಕ್ಷ್ಯವನ್ನು ಭೇದಿಸಿ ದ್ರೌಪದಿಯನ್ನು ಪಡೆದುದರಿಂದ

ಪಾಂಡವ-ಪಾಂಚಾಲರಿಗೆ ಮೈತ್ರಿಯುಂಟಾಯಿತೆಂಬ ವಾರ್ತೆಯನ್ನು ತಿಳಿದ ನಂತರ ನನ್ನ ಮಕ್ಕಳು ಜಯಿಸುವರೆಂಬ ಆಸೆಯನ್ನು ತೊರೆದೆನು, ಸಂಜಯ!

**ಯದಾಶ್ರೌಷಂ ಮಾಗಧಾನಾಂ ವರಿಷ್ಠಂ**
**ಜರಾಸಂಧಂ ಕ್ಷತ್ರಮಧ್ಯೇ ಜ್ವಲನ್ತಮ್ ।**
**ದೋರ್ಭ್ಯಾಂ ಹತಂ ಭೀಮಸೇನೇನ ಗತ್ವಾ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೫೫॥**

ಸಂಜಯ! ಮಗಧರಾಜ್ಯದಲ್ಲಿ ಅತ್ಯಂತಶ್ರೇಷ್ಠನಾದ ಜರಾಸಂಧನು ಕ್ಷತ್ರಿಯರಾಜರ ಮಧ್ಯದಲ್ಲಿ ರತ್ನಪ್ರಾಯನಾಗಿದ್ದನು. ಅಂತಹವನನ್ನೂ ಭೀಮಸೇನನು ಆಯುಧಗಳನ್ನೇ ಉಪಯೋಗಿಸದೇ ಬಾಹುಬಲದಿಂದಲೇ ಸಂಹರಿಸಿದ ನೆಂದು ತಿಳಿದೊಡನೆಯೇ ನನಗೆ ಜಯದ ಆಸೆಯೇ ಹೊರಟುಹೋಯಿತು.

**ಯದಾಶ್ರೌಷಂ ದಿಗ್ವಿಜಯೇ ಪಾಣ್ಡುಪುತ್ರೈ-**
**ರ್ವಶೀಕೃತಾನ್ಭೂಮಿಪಾಲಾನ್ಪ್ರಸಹ್ಯ ।**
**ಮಹಾಕ್ರತುಂ ರಾಜಸೂಯಂ ಕೃತಂ ಚ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೫೬॥**

ಸಂಜಯ! ಯುಧಿಷ್ಠಿರನು ರಾಜಸೂಯಯಾಗವನ್ನು ಮಾಡುವ ಮೊದಲು ಭೀಮಾದಿಗಳು ದಿಗ್ವಿಜಯಕ್ಕಾಗಿ ಹೊರಟರು. ಭೂಮಂಡಲದ ಎಲ್ಲ ರಾಜರನ್ನೂ ಅವರು ಬಲಪೂರ್ವಕವಾಗಿಯೇ ತಮ್ಮ ಆಶ್ರಿತರನ್ನಾಗಿ ಮಾಡಿಕೊಂಡರು. ಮಹಾಕ್ರತುವಾದ ರಾಜಸೂಯವನ್ನೂ ಯುಧಿಷ್ಠಿರನು ಮಾಡಿಬಿಟ್ಟನು. ಆ ವಾರ್ತೆಯನ್ನು ಕೇಳಿದೊಡನೆಯೇ ನನಗೆ ಜಯಗಳಿಸುವ ಆಸೆಯೇ ಹೊರಟುಹೋಯಿತು.

**ಯದಾಶ್ರೌಷಂ ದ್ರೌಪದೀಮಶ್ರುಕಣ್ಠೀಂ**
**ಸಭಾಂ ನೀತಾಂ ದುಃಖಿತಾಮೇಕವಸ್ತ್ರಾಮ್ ।**
**ರಜಸ್ವಲಾಂ ನಾಥವತೀಮನಾಥವ-**
**ತ್ತದಾ ನಾಶಂಸೇ ವಿಜಯಾಯ ಸಂಜಯ ॥೧೫೭॥**

ಸಂಜಯ! ದ್ರೌಪದಿಯ ಕಣ್ಣುಗಳಲ್ಲಿ ನೀರು ಹರಿಯುತ್ತಿದ್ದಿತು. ಆಕೆ ಒಂದೇ ವಸ್ತ್ರವನ್ನುಟ್ಟಿದ್ದಳು. ಮೇಲಾಗಿ ರಜಸ್ವಲೆಯಾಗಿದ್ದಳು. ಐದುಮಂದಿ

ವೀರರನ್ನು ನಾಥರನ್ನಾಗಿ ಪಡೆದಿದ್ದ ಅವಳನ್ನು ಅನಾಥೆಯೊಬ್ಬಳನ್ನು ಸೆಳೆದು ತರುವಂತೆ–ತುಂಬಿದ ಸಭೆಗೆ ಸೆಳೆದುತಂದರೆಂದು ತಿಳಿದ ಕ್ಷಣದಲ್ಲಿಯೇ ನಾನು ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ವಾಸಸಾಂ ತತ್ರ ರಾಶಿಂ**
**ಸಮಾಕ್ಷಿಪತ್ಕಿತವೋ ಮನ್ದಬುದ್ಧಿಃ ।**
**ದುಃಶಾಸನೋ ಗತವಾನ್ನೈವ ಚಾನ್ತಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೫೮॥**

ಧೂರ್ತನಾದ, ಮಂದಬುದ್ಧಿಯವನಾದ ನನ್ನ ಮಗ ದುಃಶಾಸನನು ದ್ರೌಪದಿಯ ಸೆರಗನ್ನು ಹಿಡಿದು ಸೀರೆಯನ್ನು ಎಳೆಯುತ್ತಲೇ ಇದ್ದನು. ಸೀರೆಗಳು ರಾಶಿ-ರಾಶಿಯಾಗಿ ಬಿದ್ದುವೇ ಹೊರತು ಅದರ ಕೊನೆಯನ್ನವನು ಕಾಣಲೇ ಇಲ್ಲ. ಆ ವಾರ್ತೆಯನ್ನು ನಾನು ಕೇಳಿದೊಡನೆಯೇ ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಹೃತರಾಜ್ಯಂ ಯುಧಿಷ್ಠಿರಂ**
**ಪರಾಜಿತಂ ಸೌಬಲೇನಾಕ್ಷವತ್ಯಾಮ್ ।**
**ಅನ್ವಾಗತಂ ಭ್ರಾತೃಭಿರಪ್ರಮೇಯೈ-**
**ಸ್ತದಾ ನಾಶಂಸೇ ವಿಜಯಾಯ ಸಂಜಯ ॥೧೫೯॥**

ಶಕುನಿಯಾಡಿದ ಪಗಡೆಯಾಟದಲ್ಲಿ ಯುಧಿಷ್ಠಿರನು ಪರಾಜಿತನಾಗಿ ಹೋದನು. ಅಣ್ಣನು ಪಗಡೆಯಾಟದಲ್ಲಿ ರಾಜ್ಯ-ಕೋಶಗಳನ್ನು ಕಳೆದು ಕೊಂಡುದಕ್ಕಾಗಿ ಸ್ವಲ್ಪವಾದರೂ ಪ್ರತಿಭಟಿಸದೇ ಮಹಾಪರಾಕ್ರಮಿಗಳಾದ ಭೀಮಾದಿಗಳು ಅಣ್ಣನನ್ನೇ ಅನುಸರಿಸಿ ಹೊರಟುಹೋದರೆಂಬ ವಾರ್ತೆಯನ್ನು ಕೇಳಿದೊಡನೆಯೇ ನಾನು ವಿಜಯದ ಆಸೆಯನ್ನಿಟ್ಟುಕೊಳ್ಳಲಿಲ್ಲ, ಸಂಜಯ!

**ಯದಾಶ್ರೌಷಂ ವಿವಿಧಾಸ್ತತ್ರ ಚೇಷ್ಟಾ**
**ಧರ್ಮಾತ್ಮನಾಂ ಪ್ರಸ್ಥಿತಾನಾಂ ವನಾಯ ।**
**ಜ್ಯೇಷ್ಠಪ್ರೀತ್ಯಾ ಕ್ಲಿಶ್ಯತಾಂ ಪಾಣ್ಡವಾನಾಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೬೦॥**

ಅಣ್ಣನ ಮೇಲಿನ ಪ್ರೀತಿಯಿಂದಾಗಿ ಅಣ್ಣನ ಮನಸ್ಸಿಗೆ ನೋವ ನ್ನುಂಟುಮಾಡಕೂಡದೆಂಬ ಕಾರಣದಿಂದ, ತಮಗುಂಟಾದ ಮಹಾಸಂಕಟ

ವನ್ನು ನುಂಗಿಕೊಂಡು ಭೀಮಾದಿಗಳು ಅರಣ್ಯಕ್ಕೇನೋ ಹೊರಟರು. ಆದರೆ ಹೊರಡುವ ಮೊದಲು ಪಾಂಡವರು ಆಪತ್ಸೂಚಕಗಳಾದ ಚೇಷ್ಟೆಗಳನ್ನು ಮಾಡಿದರೆಂದು ತಿಳಿದನಂತರ ನಾನು ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಸ್ನಾತಕಾನಾಂ ಸಹಸ್ರೈ-**
**ರನ್ವಾಗತಂ ಧರ್ಮರಾಜಂ ವನಸ್ಥಮ್ ।**
**ಭಿಕ್ಷಾಭುಜಾಂ ಬ್ರಾಹ್ಮಣಾನಾಂ ಮಹಾತ್ಮನಾಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೬೧॥**

ಅರಣ್ಯಕ್ಕೆ ಅನುಜರೊಡನೆ ತೆರಳಿದ ಧರ್ಮರಾಜನನ್ನೇ ಸಾವಿರಾರು ಸ್ನಾತಕರೂ, ಭಿಕ್ಷೆಯಿಂದಲೇ ಜೀವಿಸುತ್ತಿದ್ದ ಅನೇಕಬ್ರಾಹ್ಮಣರೂ ಅನುಸರಿಸಿ ಹೋದರೆಂಬ ವಾರ್ತೆಯನ್ನು ಕೇಳಿದೊಡನೆಯೇ ನಾನು ಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಮರ್ಜುನಂ ದೇವದೇವಂ**
**ಕಿರಾತರೂಪಂ ತ್ರ್ಯಮ್ಬಕಂ ತೋಷ್ಯ ಯುದ್ಧೇ ।**
**ಅವಾಪ್ತವನ್ತಂ ಪಾಶುಪತಂ ಮಹಾಸ್ತ್ರಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೬೨॥**

ಸಂಜಯ! ಅರ್ಜುನನು ಕಿರಾತವೇಷಧರನಾದ, ದೇವದೇವನಾದ ತ್ರ್ಯಂಬಕನನ್ನು ಯುದ್ಧದಲ್ಲಿ ಸಂತೋಷಗೊಳಿಸಿ ಪಾಶುಪತವೆಂಬ ಮಹಾಸ್ತ್ರ ವನ್ನು ಪಡೆದನೆಂಬ ವಾರ್ತೆಯನ್ನು ಕೇಳಿದೊಡನೆಯೇ ನಾನು ಜಯದ ಆಸೆ ಯನ್ನು ತೊರೆದೆನು.

**ಯದಾಶ್ರೌಷಂ ತ್ರಿದಿವಸ್ಥಂ ಧನಂಜಯಂ**
**ಶಕ್ರಾತ್ಸಾಕ್ಷಾದ್ದಿವ್ಯಮಸ್ತ್ರಂ ಯಥಾವತ್ ।**
**ಅಧೀಯಾನಂ ಶಂಸಿತಂ ಸತ್ಯಸಂಧಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೬೩॥**

ಸಶರೀರವಾಗಿ ಮಾನವರು ಸ್ವರ್ಗಕ್ಕೆ ಹೋಗುವ ಸಾಧ್ಯತೆಯೇ ಇಲ್ಲ. ಆದರೆ ಅರ್ಜುನನು ಸಶರೀರನಾಗಿಯೇ ಸ್ವರ್ಗಕ್ಕೆ ಹೋಗಿ ಇಂದ್ರನೊಡನಿದ್ದು ದಿವ್ಯಾಸ್ತ್ರಗಳನ್ನು ಯಥಾವತ್ತಾಗಿ ಪಡೆದನಲ್ಲದೇ, ಸತ್ಯಸಂಧನಾದ ಕಿರೀಟಿಯು

ಇಂದ್ರನ ಪ್ರಶಂಸೆಗೂ ಪಾತ್ರನಾದನೆಂಬ ವಾರ್ತೆಯನ್ನು ಕೇಳಿದನಂತರ ನಾನು ಜಯವನ್ನು ಆಶಿಸಲಿಲ್ಲ.

**ಯದಾಶ್ರೌಷಂ ಕಾಲಕೇಯಾಸ್ತತಸ್ತೇ**
**ಪೌಲೋಮಾನೋ ವರದಾನಾಚ್ಚ ದೃಪ್ತಾಃ ।**
**ದೇವೈರಜೇಯಾ ನಿರ್ಜಿತಾಶ್ಚಾರ್ಜುನೇನ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೬೪॥**

ವರಪ್ರಾಪ್ತಿಯಿಂದ ಕೊಬ್ಬಿಹೋಗಿದ್ದ, ದೇವತೆಗಳಿಂದಲೂ ಜಯಿಸಲು ಅಶಕ್ಯರಾಗಿದ್ದ ಪೌಲೋಮರೂ ಮತ್ತು ಕಾಲಕೇಯರೂ ಅರ್ಜುನನಿಂದ ಪರಾಜಿತರಾದರೆಂಬ ವಾರ್ತೆಯನ್ನು ತಿಳಿದೊಡನೆಯೇ ನಾನು ವಿಜಯದ ಆಸೆಯನ್ನು ತೊರೆದನು.

**ಯದಾಶ್ರೌಷಮಸುರಾಣಾಂ ವಧಾರ್ಥೇ**
**ಕಿರೀಟಿನಂ ಯಾನ್ತಮಮಿತ್ರಕರ್ಶನಮ್ ।**
**ಕೃತಾರ್ಥಂ ಚಾಪ್ಯಗತಂ ಶಕ್ರಲೋಕಾ-**
**ತ್ತದಾ ನಾಶಂಸೇ ವಿಜಯಾಯ ಸಂಜಯ ॥೧೬೫॥**

ಮಿತ್ರರಲ್ಲದವರನ್ನು ಸಂಕಟಪಡಿಸುವ ( ಶತ್ರುಸಂಕಟನಾದ ) ಅರ್ಜುನನು ಅಸುರರ ಸಂಹಾರಕ್ಕಾಗಿ ಇಂದ್ರಲೋಕಕ್ಕೆ ಹೋಗಿ, ದೇವತೆಗಳ ಶತ್ರುಗಳನ್ನು ಸಂಹರಿಸಿ, ದಿವ್ಯಾಸ್ತ್ರಗಳನ್ನು ಪಡೆದು ಕೃತಾರ್ಥನಾಗಿ ಭೂಮಿಗೆ ಹಿಂದಿರುಗಿದನೆಂಬ ವಾರ್ತೆಯನ್ನು ಕೇಳಿದೊಡನೆಯೇ ನಾನು ಜಯದ ಆಸೆಯನ್ನು ತೊರೆದೆನು, ಸಂಜಯ!

**ಯದಾಶ್ರೌಷಂ ವೈಶ್ರವಣೇನ ಸಾರ್ಧಂ**
**ಸಮಾಗತಂ ಭೀಮಮನ್ಯಾಂಶ್ಚ ಪಾರ್ಥಾನ್ ।**
**ತಸ್ಮಿನ್ದೇಶೇ ಮಾನುಷಾಣಾಮಗಮ್ಯೇ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೬೬॥**

ಮನುಷ್ಯರ ಪ್ರವೇಶಕ್ಕೆ ಅವಕಾಶವೇ ಇಲ್ಲದ ಕುಬೇರನ ಪಟ್ಟಣಕ್ಕೆ ಭೀಮಾದಿಗಳು ಹೋಗಿ ಕುಬೇರನೊಡನೆ ಸ್ನೇಹಪೂರ್ವಕವಾಗಿ ವ್ಯವಹರಿಸಿದರೆಂಬ ವಾರ್ತೆಯನ್ನು ಕೇಳಿದನಂತರ ನಾನು ಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಘೋಷಯಾತ್ರಾಗತಾನಾಂ**
**ಬನ್ಧಂ ಗನ್ಧರ್ವೈರ್ಮೋಕ್ಷಣಂ ಚಾರ್ಜುನೇನ ।**
**ಸ್ವೇಷಾಂ ಸುತಾನಾಂ ಕರ್ಣಬುದ್ಧೌ ರತಾನಾಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೬೭॥**

ಕರ್ಣನ ಮಾತಿನಲ್ಲಿಯೇ ಹೆಚ್ಚು ವಿಶ್ವಾಸವಿರುವ ನನ್ನ ಮಕ್ಕಳು ಘೋಷಯಾತ್ರೆಯ ನೆಪಮಾಡಿಕೊಂಡು ಅರಣ್ಯಕ್ಕೆ ಹೋಗಿದ್ದರು. ಅವರನ್ನು ಗಂಧರ್ವರು ಬಂಧಿಸಿ ತಮ್ಮ ಲೋಕಕ್ಕೆ ಸೆಳೆದೊಯ್ಯುತ್ತಿದ್ದರು. ಆ ಸಮಯ ದಲ್ಲಿ ಅರ್ಜುನನು ಗಂಧರ್ವರೊಡನೆ ಯುದ್ಧಮಾಡಿ ಎಲ್ಲರನ್ನೂ ಬಿಡಿಸಿ ಕೊಂಡುಬಂದನು. ಆ ವಾರ್ತೆಯನ್ನು ತಿಳಿದೊಡನೆಯೇ ನಾನು ಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಯಕ್ಷರೂಪೇಣ ಧರ್ಮಂ**
**ಸಮಾಗತಂ ಧರ್ಮರಾಜೇನ ಸೂತ ।**
**ಪ್ರಶ್ನಾನ್ಕಾಂಶ್ಚಿದ್ವಿಬ್ರುವಾಣಂ ಚ ಸಮ್ಯ-**
**ಕ್ತದಾ ನಾಶಂಸೇ ವಿಜಯಾಯ ಸಂಜಯ ॥೧೬೮॥**

ಯಕ್ಷರೂಪವನ್ನು ಧರಿಸಿ ಯಮಧರ್ಮನು ಯುಧಿಷ್ಠಿರನ ಬಳಿಗೆ ಬಂದಿದ್ದನ್ನೂ ಮತ್ತು ಯಕ್ಷರೂಪಿಯಾದ ಯಮಧರ್ಮನು ಕೇಳಿದ ಕೆಲವು ಪ್ರಶ್ನೆಗಳಿಗೆ ಯುಧಿಷ್ಠಿರನು ಸಮಂಜಸವಾದ ಉತ್ತರಕೊಟ್ಟನೆಂಬ ವಾರ್ತೆ ಯನ್ನೂ ಕೇಳಿದನಂತರ ನನಗೆ ಜಯದ ಆಸೆಯೇ ಹೊರಟುಹೋಯಿತು.

**ಯದಾಶ್ರೌಷಂ ನ ವಿದುರ್ಮಾಮಕಾಸ್ತಾ-**
**ನ್ಪ್ರಚ್ಛನ್ನರೂಪಾನ್ವಸತಃ ಪಾಣ್ಡವೇಯಾನ್ ।**
**ವಿರಾಟರಾಷ್ಟ್ರೇ ಸಹ ಕೃಷ್ಣಯಾ ಚ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೬೯॥**

ವಿರಾಟರಾಜನ ರಾಜಧಾನಿಯಲ್ಲಿ ದ್ರೌಪದಿಯೊಡನೆ ಪಂಚಪಾಂಡ ವರೂ ತಮ್ಮ ವೇಷಗಳನ್ನು ಮರೆಸಿಕೊಂಡು ಅಜ್ಞಾತವಾಸದಲ್ಲಿದ್ದರು. ನನ್ನ ಮಕ್ಕಳು ಎಷ್ಟೇ ಪ್ರಯತ್ನಿಸಿದರೂ ಹದಿಮೂರನೆಯ ವರ್ಷದ ಅಜ್ಞಾತವಾಸವು ಕಳೆಯುವವರೆಗೂ ಅವರನ್ನು ಕಂಡುಹಿಡಿಯಲಾಗಲಿಲ್ಲವೆಂದು ತಿಳಿದ ನಂತರ ನಾನು ವಿಜಯಕ್ಕೆ ಆಸೆಪಡಲಿಲ್ಲ.

**ಯದಾಶ್ರೌಷಂ ಕೀಚಕಾನಾಂ ವರಿಷ್ಠಂ**
**ನಿಷೂದಿತಂ ಭ್ರಾತೃಶತೇನ ಸಾರ್ಧಮ್ ।**
**ದ್ರೌಪದ್ಯರ್ಥಂ ಭೀಮಸೇನೇನ ಸಂಖ್ಯೇ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೭೦॥**

ನೂರು ಮಂದಿ ತಮ್ಮಂದಿರಿಂದ ಕೂಡಿದ್ದ ಪರಾಕ್ರಮಿಯಾದ ಕೀಚಕನನ್ನು ದ್ರೌಪದಿಯ ಸಲುವಾಗಿ ಭೀಮಸೇನನು ಯುದ್ಧದಲ್ಲಿ ಸಂಹರಿಸಿದನೆಂಬ ವಾರ್ತೆಯನ್ನು ಕೇಳಿದನಂತರ ನಾನು ಜಯದ ಆಸೆಯನ್ನೇ ತೊರೆದೆನು.

**ಯದಾಶ್ರೌಷಂ ಮಾಮಕಾನಾಂ ವರಿಷ್ಠಾ-**
**ನ್ಧನಂಜಯೇನೈಕರಥೇನ ಭಗ್ನಾನ್ ।**
**ವಿರಾಟರಾಷ್ಟ್ರೇ ವಸತಾ ಮಹಾತ್ಮನಾ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೭೧॥**

ವಿರಾಟರಾಜನ ಗೋವುಗಳ ಆಕ್ರಮಣಕ್ಕಾಗಿ ಶೂರಾಧಿಶೂರರಾದ ನನ್ನ ಮಕ್ಕಳೆಲ್ಲರೂ ಭೀಷ್ಮ-ದ್ರೋಣರೇ ಮೊದಲಾದ ಅತಿರಥ-ಮಹಾರಥರೊಡನೆ ದೊಡ್ಡಸೈನ್ಯವನ್ನೇ ತೆಗೆದುಕೊಂಡು ಹೋಗಿದ್ದರು. ಆದರೆ ಆ ಮಹಾಶೂರರನ್ನೂ, ಅಪಾರಸೈನ್ಯವನ್ನೂ ಆ ಸಮಯದಲ್ಲಿ ವಿರಾಟನಗರದಲ್ಲಿ ವಾಸಮಾಡುತ್ತಿದ್ದ ಅರ್ಜುನನೊಬ್ಬನೇ ರಥದಲ್ಲಿ ಕುಳಿತು ಎದುರಿಸಿ ಪರಾಜಯಗೊಳಿಸಿದನೆಂಬ ವಾರ್ತೆಯನ್ನು ಕೇಳಿದೊಡನೆಯೇ ನನ್ನ ಜಯ ಗಳಿಸುವ ಆಸೆಯು ಮಣ್ಣುಪಾಲಾಯಿತು.

**ಯದಾಶ್ರೌಷಂ ಸತ್ಕೃತಾಂ ಮತ್ಸ್ಯರಾಜ್ಞಾ**
**ಸುತಾಂ ದತ್ತಾಮುತ್ತರಾಮರ್ಜುನಾಯ ।**
**ತಾಂ ಚಾರ್ಜುನಃ ಪ್ರತ್ಯಗೃಹ್ಣಾತ್ಸುತಾರ್ಥೇ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೭೨॥**

ಅರ್ಜುನನು ಶತ್ರುಗಳಿಂದ ಗೋವುಗಳನ್ನು ಬಿಡಿಸಿಕೊಂಡು ಬಂದ ನೆಂಬ ವಾರ್ತೆಯನ್ನು ಕೇಳಿ ಮತ್ಸ್ಯರಾಜನು ಸಂತುಷ್ಟನಾಗಿ ಅರ್ಜುನನನ್ನು ಗೌರವಿಸಿ ತನ್ನ ಮಗಳಾದ ಸತ್ಕೃತಳಾದ ಉತ್ತರೆಯನ್ನು ಅರ್ಜುನನಿಗೆ ಅರ್ಪಿಸಿದನೆಂಬುದನ್ನೂ ಮತ್ತು ಧರ್ಮಾತ್ಮನಾದ ಅರ್ಜುನನು ಉತ್ತರೆಯನ್ನು

ತಾನು ಪರಿಗ್ರಹಿಸದೇ ತನ್ನ ಮಗನ ಸಲುವಾಗಿ ಪರಿಗ್ರಹಿಸಿದನೆಂಬ ವಾರ್ತೆಯನ್ನೂ ಕೇಳಿದನಂತರ ನಾನು ವಿಜಯದ ಆಸೆಯನ್ನು ಬಿಟ್ಟುಬಿಟ್ಟೆನು.

**ಯದಾಶ್ರೌಷಂ ನಿರ್ಜಿತಸ್ಯಾಧನಸ್ಯ**
**ಪ್ರವ್ರಾಜಿತಸ್ಯ ಸ್ವಜನಾತ್ಪ್ರಚ್ಯುತಸ್ಯ ।**
**ಅಕ್ಷೌಹಿಣೀಃ ಸಪ್ತ ಯುಧಿಷ್ಠಿರಸ್ಯ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೭೩॥**

ಸಂಜಯ! ಯುಧಿಷ್ಠಿರನು ಪಗಡೆಯಾಟದಲ್ಲಿ ಸೋತು ನಿರ್ಧನನಾಗಿದ್ದನು. ಸ್ವಜನರೆಲ್ಲರ ಸಂಬಂಧವನ್ನೂ ಕಡಿದುಕೊಂಡು ಹನ್ನೆರಡು ವರ್ಷಗಳ ಕಾಲ ಅರಣ್ಯದಲ್ಲಿದ್ದನು. ಅಂತಹವನು ಏಳು ಅಕ್ಷೌಹಿಣೀಸೈನ್ಯವನ್ನು ಕೂಡಿಸಿದನೆಂಬ ವಾರ್ತೆಯನ್ನು ಕೇಳಿದೊಡನೆಯೇ ನಾನು ಜಯದ ಆಸೆಯನ್ನು ಪೂರ್ಣವಾಗಿ ತೊರೆದೆನು.

**ಯದಾಶ್ರೌಷಂ ಮಾಧವಂ ವಾಸುದೇವಂ**
**ಸರ್ವಾತ್ಮನಾ ಪಾಣ್ಡವಾರ್ಥೇ ನಿವಿಷ್ಟಮ್ ।**
**ಯಸ್ಯೇಮಾಂ ಗಾಂ ವಿಕ್ರಮಮೇಕಮಾಹು-**
**ಸ್ತದಾ ನಾಶಂಸೇ ವಿಜಯಾಯ ಸಂಜಯ ॥೧೭೪॥**

ಮಾಧವನಾದ, ವಾಸುದೇವನಾದ ಶ್ರೀಕೃಷ್ಣನು ಹಿಂದೆ ವಾಮನಾವತಾರದಲ್ಲಿ ಈ ಭೂಮಂಡಲವನ್ನು ತನ್ನ ಒಂದೇ ಹೆಜ್ಜೆಯಿಂದ ಅಳೆದಿದ್ದನು. ಅಂತಹ ಮಹಾನುಭಾವನಿಂದು ಪಾಂಡವರ ಯೋಗ-ಕ್ಷೇಮಕ್ಕಾಗಿ ಪಣತೊಟ್ಟು ನಿಂತಿರುವನೆಂಬ ವಾರ್ತೆಯನ್ನು ಕೇಳಿದನಂತರ ನನ್ನ ವಿಜಯದ ಆಸೆಯು ಮಣ್ಣುಗೂಡಿತು.

**ಯದಾಶ್ರೌಷಂ ನರನಾರಾಯಣೌ ತೌ**
**ಕೃಷ್ಣಾರ್ಜುನೌ ವದತೋ ನಾರದಸ್ಯ ।**
**ಅಹಂ ದ್ರಷ್ಟಾ ಬ್ರಹ್ಮಲೋಕೇ ಚ ಸಮ್ಯ-**
**ಕ್ತದಾ ನಾಶಂಸೇ ವಿಜಯಾಯ ಸಂಜಯ ॥೧೭೫॥**

ಸಂಜಯ! ನಾರದರೊಮ್ಮೆ ನನ್ನಲ್ಲಿಗೆ ಬಂದಿದ್ದರು. ಕೃಷ್ಣಾರ್ಜುನರು ಪುರಾತನರಾದ ನರ-ನಾರಾಯಣರಂತೆ. ಬ್ರಹ್ಮಲೋಕದಲ್ಲಿ ಅವರನ್ನು ಆ

ದೇವರ್ಷಿಗಳು ಹಲವುಬಾರಿ ಚೆನ್ನಾಗಿ ನೋಡಿದ್ದರಂತೆ. ಆ ವಾರ್ತೆಯು ನಾರದರಿಂದ ತಿಳಿದನಂತರ ನಾನು ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಲೋಕಹಿತಾಯ ಕೃಷ್ಣಂ**
**ಶಮಾರ್ಥಿನಮುಪಯಾತಂ ಕುರೂಣಾಮ್ ।**
**ಶಮಂ ಕುರ್ವಾಣಮಕೃತಾರ್ಥಂ ಚ ಯಾತಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೭೬॥**

ಲೋಕಹಿತಕ್ಕಾಗಿ–ಲೋಕದಲ್ಲಿ ಶಾಂತಿಯನ್ನು ಸ್ಥಾಪಿಸಲು ಶ್ರೀಕೃಷ್ಣನೇ ಶಾಂತಿಸಂಧಾನಕ್ಕಾಗಿ ಹಸ್ತಿನಾವತಿಗೆ ಬಂದಿದ್ದನು. ಆದರೆ ಶಾಂತಿಸಂಧಾನ ದಲ್ಲವನು ಕೃತಕೃತ್ಯನಾಗದೇ ಹಿಂದಿರುಗಬೇಕಾಯಿತು. ಅಂದೇ ನಾನು ವಿಜಯದ ಆಸೆಯನ್ನು ತೊರೆದೆನು, ಸಂಜಯ!

**ಯದಾಶ್ರೌಷಂ ಕರ್ಣದುರ್ಯೋಧನಾಭ್ಯಾಂ**
**ಬುದ್ಧಿಂ ಕೃತಾಂ ನಿಗ್ರಹೇ ಕೇಶವಸ್ಯ ।**
**ತಂ ಚಾತ್ಮಾನಂ ಬಹುಧಾ ದರ್ಶಯಾನಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೭೭॥**

ಶಾಂತಿಸಂಧಾನಕ್ಕಾಗಿ ಬಂದಿದ್ದ ಭಗವಾನ್ ಶ್ರೀಕೃಷ್ಣನು ಕೃತಕೃತ್ಯ ನಾಗದಿದ್ದರೂ ನಮ್ಮಿಂದ ಸತ್ಕೃತನಾಗಿ ಹಿಂದಿರುಗಬೇಕಾಗಿದ್ದಿತು. ಆದರೆ ದುರ್ಬುದ್ಧಿಯಿಂದ ಕೂಡಿದ್ದ ಕರ್ಣ-ದುರ್ಯೋಧನರು ಶ್ರೀಕೃಷ್ಣನನ್ನು ಬಂಧಿಸಲು ಹೋದರು. ಆಗ ಭಗವಾನ್ ಶ್ರೀಕೃಷ್ಣನು ವಿಶ್ವರೂಪವನ್ನೇ ತೋರಿಸಿದನು. ಆಗಲೇ ನಾನು ವಿಜಯದ ಆಸೆಯನ್ನು ಬಿಟ್ಟುಬಿಟ್ಟೆನು, ಸಂಜಯ!

**ಯದಾಶ್ರೌಷಂ ವಾಸುದೇವೇ ಪ್ರಯಾತೇ**
**ರಥಸ್ಯೈಕಾಮಗ್ರತಸ್ತಿಷ್ಠಮಾನಾಮ್ ।**
**ಆರ್ತಾಂ ಪೃಥಾಂ ಸಾನ್ತ್ವಿತಾಂ ಕೇಶವೇನ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೭೮॥**

ಸಭಾಭವನವನ್ನು ಬಿಟ್ಟು ರಥದಲ್ಲಿ ಕುಳಿತು ಶ್ರೀಕೃಷ್ಣನು ಹಿಂದಿರುಗು ತ್ತಿರುವಾಗ, ಆರ್ತಳಾದ ಕುಂತಿಯು ಏಕಾಕಿನಿಯಾಗಿ ರಥಕ್ಕೆ ಎದುರಾಗಿ

ಬಂದು ರಥದ ಒಂದು ಭಾಗವನ್ನು ಹಿಡಿದುಕೊಂಡು ದುಃಖಿಸುತ್ತಿದ್ದಳು. ಕೇಶವನು ಅವಳಿಗೆ ಪಾಂಡವರು ವಿಜಯಗಳಿಸುವರೆಂಬ ಆಶ್ವಾಸನೆಯನ್ನಿತ್ತು ಕಳುಹಿಸಿದನೆಂಬ ವಾರ್ತೆಯನ್ನು ಕೇಳಿದ ನಂತರ ನಾನು ವಿಜಯದ ಆಸೆ ಯನ್ನು ತೊರೆದೆನು.

**ಯದಾಶ್ರೌಷಂ ಮನ್ತ್ರಿಣಂ ವಾಸುದೇವಂ**
**ತಥಾ ಭೀಷ್ಮಂ ಶಾನ್ತನವಂ ಚ ತೇಷಾಮ್ ।**
**ಭಾರದ್ವಾಜಂ ಚಾಶಿಷೋಽನುಬ್ರುವಾಣಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೭೯॥**

ಸಂಜಯ! ಸಾಕ್ಷಾತ್ ವಾಸುದೇವನೇ ಪಾಂಡವರಿಗೆ ಮಂತ್ರಿಯಾದ ನೆಂಬುದನ್ನೂ, ಶಂತನುವಿನ ಮಗನಾದ ಭೀಷ್ಮನೂ ಮತ್ತು ಭರದ್ವಾಜರ ಮಕ್ಕಳಾದ ದ್ರೋಣರೂ ವಿಜಯಿಗಳಾಗುವಂತೆ ಪಾಂಡವರನ್ನು ಆಶೀರ್ವದಿ ಸಿದರೆಂಬ ವಾರ್ತೆಯನ್ನೂ ಕೇಳಿದನಂತರ ನಾನು ವಿಜಯದ ಆಸೆಯನ್ನು ಬಿಟ್ಟುಬಿಟ್ಟೆನು.

**ಯದಾಶ್ರೌಷಂ ಕರ್ಣ ಉವಾಚ ಭೀಷ್ಮಂ**
**ನಾಹಂ ಯೋತ್ಸ್ಯೇ ಯುಧ್ಯಮಾನೇ ತ್ವಯೀತಿ ।**
**ಹಿತ್ವಾ ಸೇನಾಮಪಚಕ್ರಾಮ ಚಾಪಿ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೮೦॥**

ನಮ್ಮ ಪಕ್ಷದ ಸೇನಾಪತಿಗಳಲ್ಲಿಯೇ ಪರಸ್ಪರದ್ವೇಷವಿದ್ದಿತು. ಸಂಜಯ! ಯುದ್ಧವು ನಡೆಯುವ ಮೊದಲು ಮಾತಿಗೆ ಮಾತು ಬೆಳೆದು ಕರ್ಣನು ಭೀಷ್ಮನ ಮೇಲೆ ಕೋಪಿಸಿಕೊಂಡು–'ನೀನು ದಂಡನಾಯಕನಾಗಿರುವವರೆಗೆ ನಾನು ಯುದ್ಧವನ್ನೇ ಮಾಡುವುದಿಲ್ಲ'–ಎಂದು ಪ್ರತಿಜ್ಞೆಮಾಡಿ ಸೇನಾಮುಖವನ್ನು ಬಿಟ್ಟು ಹೊರಟುಹೋದನೆಂಬ ವಾರ್ತೆಯನ್ನು ಕೇಳಿದನಂತರ ನನಗೆ ವಿಜಯದ ಆಸೆಯೇ ಉಳಿಯಲಿಲ್ಲ.

**ಯದಾಶ್ರೌಷಂ ವಾಸುದೇವಾರ್ಜುನೌ ತೌ**
**ತಥಾ ಧನುರ್ಗಾಣ್ಡೀವಮಪ್ರಮೇಯಮ್ ।**

**ತ್ರೀಣ್ಯುಗ್ರವೀರ್ಯಾಣಿ ಸಮಾಗತಾನಿ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೮೧॥**

ಸಂಜಯ! ವಾಸುದೇವಾರ್ಜುನರು ಉಗ್ರವೀರ್ಯರು. ಅರ್ಜುನನಲ್ಲಿರುವ ಗಾಂಡೀವಧನುಸ್ಸೂ ಸಹ ಅಪ್ರಮೇಯವಾದುದು. ಈ ಮೂರು ಉಗ್ರವೀರ್ಯಗಳೂ ಒಂದೆಡೆ ಸೇರಿದನಂತರ ನಾನು ವಿಜಯದ ಹಂಬಲವನ್ನೇ ಬಿಟ್ಟುಬಿಟ್ಟೆನು.

**ಯದಾಶ್ರೌಷಂ ಕಶ್ಮಲೇನಾಭಿಪನ್ನೇ**
**ರಥೋಪಸ್ಥೇ ಸೀದಮಾನೇಽರ್ಜುನೇ ವೈ ।**
**ಕೃಷ್ಣಂ ಲೋಕಾನ್ದರ್ಶಯಾನಂ ಶರೀರೇ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೮೨॥**

ಸಂಜಯ! ಯುದ್ಧದ ಮಧ್ಯದಲ್ಲಿ ರಥದಲ್ಲಿ ಕುಳಿತಿದ್ದ ಅರ್ಜುನನು ಮೋಹಗ್ರಸ್ತನಾದನು. ಅವನಿಗೆ ಕರ್ತವ್ಯಾಕರ್ತವ್ಯಗಳ ವಿಷಯವಾಗಿ ಮನಸ್ಸು ಡೋಲಾಯಮಾನವಾಯಿತು. ಆ ಸಮಯದಲ್ಲಿ ಶ್ರೀಕೃಷ್ಣನು ಗೀತೆಯನ್ನು ಉಪದೇಶಿಸಿದನಲ್ಲದೇ–ತನ್ನ ಶರೀರದಲ್ಲಿಯೇ ಎಲ್ಲ ಲೋಕಗಳನ್ನೂ ತೋರಿಸಿದನೆಂಬ ವಾರ್ತೆಯನ್ನು ಕೇಳಿದನಂತರ ನಾನು ವಿಜಯದ ಆಸೆಯನ್ನು ಸಂಪೂರ್ಣವಾಗಿ ತೊರೆದೆನು.

**ಯದಾಶ್ರೌಷಂ ಭೀಷ್ಮಮಮಿತ್ರಕರ್ಶನಂ**
**ನಿಘ್ನನ್ತಮಾಜಾವಯುತಂ ರಥಾನಾಮ್ ।**
**ನೈಷಾಂ ಕಶ್ಚಿದ್ವಧ್ಯತೇ ಖ್ಯಾತರೂಪ-**
**ಸ್ತದಾ ನಾಶಂಸೇ ವಿಜಯಾಯ ಸಂಜಯ ॥೧೮೩॥**

ಶತ್ರುಗಳ ವಿಧ್ವಂಸಕನಾದ ಭೀಷ್ಮನು ಅನುದಿನವೂ ಹತ್ತುಸಾವಿರ ಯೋಧರನ್ನು ಸಂಹರಿಸುತ್ತಿದ್ದುದೇನೋ ನಿಜ. ಆದರೆ ಪಾಂಡವಪಕ್ಷದಲ್ಲಿ ವಿಖ್ಯಾತನಾದ ಒಬ್ಬ ಯೋಧನನ್ನಾಗಲೀ–ಪಾಂಡವರಲ್ಲಿಯೇ ಒಬ್ಬನನ್ನಾಗಲೀ ಭೀಷ್ಮನು ಕೊಲ್ಲಲು ಕೂಡ ಸಮರ್ಥನಾಗಲಿಲ್ಲ. ಈ ವಿಷಯವನ್ನು ತಿಳಿದನಂತರ ನಾನು ವಿಜಯದ ಆಸೆಯನ್ನು ತೊರೆದೆನು, ಸಂಜಯ!

**ಯದಾಶ್ರೌಷಂ ಚಾಪಗೇಯೇನ ಸಂಖ್ಯೇ**
**ಸ್ವಯಂ ಮೃತ್ಯುಂ ವಿಹಿತಂ ಧಾರ್ಮಿಕೇಣ ।**

ತಚ್ಚಾಕಾರ್ಷುಃ ಪಾಣ್ಡವೇಯಾಃ ಪ್ರಹೃಷ್ಟಾ-
ಸ್ತದಾ ನಾಶಂಸೇ ವಿಜಯಾಯ ಸಂಜಯ ||೧೮೪||

ಧರ್ಮಾತ್ಮನಾದ ಗಾಂಗೇಯನೇ ತನ್ನ ಮರಣದ ರಹಸ್ಯವನ್ನು ಪಾಂಡವರಿಗೆ ಹೇಳಿದನು. ಅದನ್ನು ತಿಳಿದ ಪಾಂಡವರು ಸಂತೋಷಿಸಿದ ರಲ್ಲದೇ ಅವನು ಹೇಳಿದಂತೆಯೇ ಮಾಡಿದರು. ಆ ವಿಷಯವನ್ನು ಕೇಳಿದ ಮೇಲಂತೂ ನನಗೆ ವಿಜಯದಲ್ಲಿ ವಿಶ್ವಾಸವು ಸರ್ವಥಾ ಉಳಿಯಲಿಲ್ಲ, ಸಂಜಯ!

ಯದಾಶ್ರೌಷಂ ಭೀಷ್ಮಮತ್ಯನ್ತಶೂರಂ
ಹತಂ ಪಾರ್ಥೇನಾಹವೇಷ್ವಪ್ರಧೃಷ್ಯಮ್ ।
ಶಿಖಣ್ಡಿನಂ ಪುರತಃ ಸ್ಥಾಪಯಿತ್ವಾ
ತದಾ ನಾಶಂಸೇ ವಿಜಯಾಯ ಸಂಜಯ ||೧೮೫||

ಶಿಖಂಡಿಯನ್ನು ಭೀಷ್ಮನಿಗೆದುರಾಗಿ ನಿಲ್ಲಿಸಿ ಯುದ್ಧದಲ್ಲಿ ಅಪ್ರತಿಹತ ವಿಕ್ರಮನಾದ, ಮಹಾಶೂರನಾದ ಭೀಷ್ಮನನ್ನು ಪಾರ್ಥನು ಸಂಹರಿಸಿದನೆಂಬ (ಮೃತಪ್ರಾಯನನ್ನಾಗಿ ಮಾಡಿದನೆಂಬ ) ವಾರ್ತೆಯನ್ನು ಕೇಳಿದನಂತರ ನಾನು ವಿಜಯದ ಆಸೆಯನ್ನು ಬಿಟ್ಟುಬಿಟ್ಟೆನು.

ಯದಾಶ್ರೌಷಂ ಶರತಲ್ಪೇ ಶಯಾನಂ
ವೃದ್ಧಂ ವೀರಂ ಸಾದಿತಂ ಚಿತ್ರಪುಙ್ಖೈಃ ।
ಭೀಷ್ಮಂ ಕೃತ್ವಾ ಸೋಮಕಾನಲ್ಪಶೇಷಾಂ-
ಸ್ತದಾ ನಾಶಂಸೇ ವಿಜಯಾಯ ಸಂಜಯ ||೧೮೬||

ಚಿತ್ರ-ವಿಚಿತ್ರವಾದ ರೆಕ್ಕೆಗಳುಳ್ಳ ಬಾಣಗಳಿಂದ ಸೋಮವಂಶೀಯ ಯೋಧರನ್ನು ಕೆಲವರು ಮಾತ್ರವೇ ಉಳಿದಿರುವಂತೆಮಾಡಿ ( ಬಹುಮಂದಿ ಯನ್ನು ಕೊಂದು ) ವೃದ್ಧನಾದ, ವೀರನಾದ, ಭೀಷ್ಮನು ಅರ್ಜುನನಿಂದ ಅಡಗಿಸಲ್ಪಟ್ಟವನಾಗಿ ಶರತಲ್ಪದಲ್ಲಿ ಮಲಗಿದನೆಂಬ ವಾರ್ತೆಯನ್ನು ಕೇಳಿದ ನಂತರ ನಾನು ವಿಜಯದ ಆಸೆಯನ್ನು ತೊರೆದೆನು, ಸಂಜಯ!

ಯದಾಶ್ರೌಷಂ ಶಾನ್ತನವೇ ಶಯಾನೇ
ಪಾನೀಯಾರ್ಥೇ ಚೋದಿತೇನಾರ್ಜುನೇನ ।

ಭೂಮಿಂ ಭಿತ್ತ್ವಾ ತರ್ಪಿತಂ ತತ್ರ ಭೀಷ್ಮಂ
ತದಾ ನಾಶಂಸೇ ವಿಜಯಾಯ ಸಂಜಯ ॥೧೮೭॥

ಭೀಷ್ಮನು ಶರತಲ್ಪದಲ್ಲಿ ಮಲಗಿರುವಾಗ ತನಗೆ ಕುಡಿಯಲು ನೀರು ಬೇಕೆಂದು ಅರ್ಜುನನಿಗೆ ಹೇಳಿದನು. ಮಹಾವೀರನಾದ ಅರ್ಜುನನು ಕ್ಷಣ ಮಾತ್ರದಲ್ಲಿ ಭೂಮಿಯನ್ನು ಭೇದಿಸಿ ಅಂತರ್ಗಂಗೆಯನ್ನೇ ಮೇಲೆ ಬರುವಂತೆ ಮಾಡಿದನು. ಅರ್ಜುನನು ಮಾಡಿದ ಆ ಅದ್ಭುತಕಾರ್ಯವನ್ನು ಕೇಳಿದನಂತರ ನಾನು ವಿಜಯವನ್ನು ಆಶಿಸಲಿಲ್ಲ, ಸಂಜಯ!

ಯದಾ ವಾಯುಶ್ಚನ್ದ್ರಸೂರ್ಯೌ ಚ ಯುಕ್ತೌ
ಕೌನ್ತೇಯಾನಾಮನುಲೋಮಾ ಜಯಾಯ ।
ನಿತ್ಯಂ ಚಾಸ್ಮಾಞ್ಛ್ವಾಪದಾ ಭೀಷಯನ್ತಿ
ತದಾ ನಾಶಂಸೇ ವಿಜಯಾಯ ಸಂಜಯ ॥೧೮೮॥

'ಪಾಂಡವರ ಪಕ್ಷದಲ್ಲಿ ವಾತಾವರಣವು ಸುಖದಾಯಕವಾಗಿದೆ. ಚಂದ್ರ-ಸೂರ್ಯರು ಶುಭಸ್ಥಾನಗಳಲ್ಲಿದ್ದಾರೆ. ಇದು ಅವರಿಗೆ ವಿಜಯ ಸೂಚಕವಾಗಿದೆ. ನಮ್ಮ ಕಡೆಯಾದರೋ ನಾಯಿ-ನರಿಗಳು ಅನುದಿನವೂ ವಿಕಾರವಾಗಿ ಶಬ್ದಮಾಡುತ್ತಿರುವುದು ಕೇಳಿಬರುತ್ತಿದೆ.' ಈ ವಾರ್ತೆಯನ್ನು ಕೇಳಿ ನಾನು ಜಯದ ಆಸೆಯನ್ನು ತೊರೆದೆನು, ಸಂಜಯ!

ಯದಾ ದ್ರೋಣೋ ವಿವಿಧಾನಸ್ತ್ರಮಾರ್ಗಾ-
ನ್ನಿದರ್ಶಯನ್ಸಮರೇ ಚಿತ್ರಯೋಧೀ ।
ನ ಪಾಣ್ಡವಾಞ್ಶ್ರೇಷ್ಠತರಾನ್ನಿಹನ್ತಿ
ತದಾ ನಾಶಂಸೇ ವಿಜಯಾಯ ಸಂಜಯ ॥೧೮೯॥

ವಿಚಿತ್ರವಾಗಿ ಯುದ್ಧಮಾಡುವ ಸಾಮರ್ಥ್ಯವಿರುವ ನಮ್ಮ ಆಚಾರ್ಯರಾದ ದ್ರೋಣರು ವಿವಿಧವಾದ ಬಾಣಗಳನ್ನೇನೋ ಕುಶಲತೆಯಿಂದ ಪ್ರಯೋಗಿಸುತ್ತಿದ್ದರು. ಆದರೂ ಸಹ ಪಾಂಡವರಲ್ಲಿ ಒಬ್ಬನನ್ನಾಗಲೀ ಅಥವಾ ಅವರ ಪಕ್ಷದಲ್ಲಿದ್ದ ಸುಪ್ರಸಿದ್ಧನಾದ ಒಬ್ಬ ವೀರನನ್ನಾಗಲೀ ಸಂಹರಿಸಲು ಸಮರ್ಥರಾಗಲಿಲ್ಲ. ಈ ವಿಷಯವು ನನಗೆ ತಿಳಿದನಂತರ ವಿಜಯದ ಆಸೆಯನ್ನು ತೊರೆದೆನು, ಸಂಜಯ!

**ಯದಾಶ್ರೌಷಂ ಚಾಸ್ಮದೀಯಾನ್ಮಹಾರಥಾ-**
**ನ್ವ್ಯವಸ್ಥಿತಾನರ್ಜುನಸ್ಯಾನ್ತಕಾಯ ।**
**ಸಂಶಪ್ತಕಾನ್ನಿಹತಾನರ್ಜುನೇನ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೯೦॥**

ಅರ್ಜುನನನ್ನು ಸಂಹರಿಸುವ ಸಲುವಾಗಿ ನಮ್ಮ ಕಡೆಯಲ್ಲಿ ಅತಿರಥ-ಮಹಾರಥರಾದ ಸಂಶಪ್ತಕರು ಸಜ್ಜಾಗಿ ನಿಂತಿದ್ದರು. ಅವರೆಲ್ಲರನ್ನೂ ಅರ್ಜುನನು ಸಂಹರಿಸಿದನೆಂಬ ವಾರ್ತೆಯನ್ನು ಕೇಳಿದನಂತರ ನಾನು ವಿಜಯದ ಆಶಯವನ್ನು ಸಂಪೂರ್ಣವಾಗಿ ತೊರೆದೆನು.

**ಯದಾಶ್ರೌಷಂ ವ್ಯೂಹಮಭೇದ್ಯಮನ್ಯೈ-**
**ರ್ಭಾರದ್ವಾಜೇನಾತ್ತಶಸ್ತ್ರೇಣ ಗುಪ್ತಮ್ ।**
**ಭಿತ್ತ್ವಾ ಸೌಭದ್ರಂ ವೀರಮೇಕಂ ಪ್ರವಿಷ್ಟಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೯೧॥**

ನಮ್ಮ ದಂಡನಾಯಕರಾಗಿದ್ದ ದ್ರೋಣರು ಇತರರಿಂದ ಅಭೇದ್ಯವಾದ ಚಕ್ರವ್ಯೂಹವನ್ನು ರಚಿಸಿ, ಧನುಷ್ಪಾಣಿಗಳಾಗಿ ನಿಂತು ತಾವೇ ಆ ವ್ಯೂಹದ ರಕ್ಷಣೆಯನ್ನು ಮಾಡುತ್ತಿದ್ದರು. ಅಂತಹ ಅಭೇದ್ಯವೆನಿಸಿದ ಚಕ್ರವ್ಯೂಹವನ್ನೂ ಭೇದಿಸಿ ಸುಭದ್ರೆಯ ವೀರಪುತ್ರನಾದ ಅಭಿಮನ್ಯುವು ಒಳನುಗ್ಗಿದನೆಂಬ ವಾರ್ತೆಯನ್ನು ಕೇಳಿದನಂತರ ನನಗೆ ವಿಜಯದಲ್ಲಿ ಆಸೆಯುಳಿಯಲಿಲ್ಲ.

**ಯದಾಭಿಮನ್ಯುಂ ಪರಿವಾರ್ಯ ಬಾಲಂ**
**ಸರ್ವೇ ಹತ್ವಾ ಹೃಷ್ಟರೂಪಾ ಬಭೂವುಃ ।**
**ಮಹಾರಥಾ ಪಾರ್ಥಮಶಕ್ನುವನ್ತ-**
**ಸ್ತದಾ ನಾಶಂಸೇ ವಿಜಯಾಯ ಸಂಜಯ ॥೧೯೨॥**

ಮಹಾವೀರನಾದ ಅರ್ಜುನನಿಗೆದುರಾಗಿ ನಿಂತು ಯುದ್ಧಮಾಡಲು ಅಸಮರ್ಥರಾದ ನನ್ನ ಕಡೆಯ ಅತಿರಥ-ಮಹಾರಥರು ಏಕಾಕಿಯಾಗಿದ್ದ ಬಾಲಕನಾದ ಅಭಿಮನ್ಯುವನ್ನು ಸುತ್ತುವರಿದು ಸಂಹರಿಸಿ, ಅಷ್ಟು ಮಾತ್ರದಿಂದಲೇ ಆನಂದಪರವಶರಾದರು. ಆ ವಾರ್ತೆಯನ್ನು ಕೇಳುತ್ತಲೇ ನನಗೆ ಜಯವೇ ಬೇಡವೆನಿಸಿತು.

**ಯದಾಶ್ರೌಷಮಭಿಮನ್ಯುಂ ನಿಹತ್ಯ**
**ಹರ್ಷಾನ್ಮೂಢಾನ್ಕ್ರೋಶತೋ ಧಾರ್ತರಾಷ್ಟ್ರಾನ್ ।**
**ಕ್ರೋಧಾದುಕ್ತಂ ಸೈನ್ಧವೇ ಚಾರ್ಜುನೇನ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೬॥**

ಅತಿರಥ-ಮಹಾರಥರು ಸೇರಿ ಕೇವಲ ಒಬ್ಬ ಬಾಲಕನನ್ನು ಸಂಹರಿಸಿದುದಕ್ಕಾಗಿ ಲಜ್ಜಿತರಾಗದೇ ಮೂಢರಾದ ನನ್ನ ಪುತ್ರರು ಮಹಾವಿಜಯವನ್ನು ಗಳಿಸಿದವರಂತೆ ಆನಂದಪರವಶರಾಗಿ ಕೋಲಾಹಲಮಾಡುತ್ತಿದ್ದರು. ಆ ವಿಷಯವನ್ನು ತಿಳಿದ ಕಿರೀಟಿಯು ಚಕ್ರವ್ಯೂಹದ ಮುಂಭಾಗವನ್ನು ರಕ್ಷಿಸುತ್ತಿದ್ದ ಸೈಂಧವನೇ ತನ್ನ ಮಗನ ಮರಣಕ್ಕೆ ಕಾರಣನೆಂದು ನಿಶ್ಚಯಿಸಿ ಅವನನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿದನು. ಆ ವಾರ್ತೆಯನ್ನು ಕೇಳಿದನಂತರ ನನಗೆ ಜಯದ ಆಸೆಯು ಉಳಿಯಲಿಲ್ಲ.

**ಯದಾಶ್ರೌಷಂ ಸೈನ್ಧವಾರ್ಥೇ ಪ್ರತಿಜ್ಞಾಂ**
**ಪ್ರತಿಜ್ಞಾತಾಂ ತದ್ವಧಾಯಾರ್ಜುನೇನ ।**
**ಸತ್ಯಾಂ ತೀರ್ಣಾಂ ಶತ್ರುಮಧ್ಯೇ ಚ ತೇನ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೭॥**

ಸಂಜಯ! ಅರ್ಜುನನು ಸೈಂಧವನನ್ನು ಸಂಹರಿಸುವುದಾಗಿ ಪ್ರತಿಜ್ಞೆಯನ್ನೂ ಮಾಡಿದನು. ನಮ್ಮ ಪಕ್ಷದವರು ಸೈಂಧವನನ್ನುಳಿಸಲು ಎಷ್ಟೇ ಪ್ರಯತ್ನಿಸಿದರೂ ಅರ್ಜುನನು ತನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದನು. ಆ ವಾರ್ತೆಯನ್ನು ಕೇಳಿದನಂತರ ನನಗೆ ವಿಜಯದ ಆಸೆಯು ಉಳಿಯಲಿಲ್ಲ.

**ಯದಾಶ್ರೌಷಂ ಶ್ರಾನ್ತಹಯೇ ಧನಞ್ಜಯೇ**
**ಮುಕ್ತ್ವಾ ಹಯಾನ್ಪಾಯಯಿತ್ವೋಪವೃತ್ತಾನ್ ।**
**ಪುನರ್ಯುಕ್ತ್ವಾ ವಾಸುದೇವಂ ಪ್ರಯಾತಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೮॥**

ಅರ್ಜುನನ ರಥಕ್ಕೆ ಕಟ್ಟಿದ್ದ ಕುದುರೆಗಳು ಸೋತುಹೋಗಿದ್ದುವು. (ರಣರಂಗದ ಮಧ್ಯದಲ್ಲಿ) ಆ ಸಮಯದಲ್ಲಿ ಶ್ರೀಕೃಷ್ಣನೇ ಕುದುರೆಗಳನ್ನು ಬಿಚ್ಚಿ, ಅವುಗಳಿಗೆ ನೀರುಕುಡಿಸಿ, ಪುನಃ ರಥಕ್ಕೆ ಕಟ್ಟಿ ರಥವನ್ನು ನಡೆಸಿದನೆಂಬ ವಾರ್ತೆಯನ್ನು ಕೇಳಿ ನಾನು ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ವಾಹನೇಷ್ವಶ್ವಮೇಷು**
**ರಥೋಪಸ್ಥೇ ತಿಷ್ಠತಾ ಪಾಣ್ಡವೇನ ।**
**ಸರ್ವಾನ್ಯೋಧಾನ್ವಾರಿತಾನರ್ಜುನೇನ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೯೬॥**

ಆ ಸಮಯದಲ್ಲಿ ಕುದುರೆಗಳು ಬಹಳವಾಗಿ ನಿರ್ಬಲವಾಗಿದ್ದುವು. ಶ್ರೀಕೃಷ್ಣನು ನೀರುಕುಡಿಸಲು ಕುದುರೆಗಳನ್ನು ಹೊಡೆದುಕೊಂಡು ಹೋದಾಗ ಅರ್ಜುನನು ಸಾರಥಿಯಾಗಲೀ–ಕುದುರೆಗಳಾಗಲೀ ಇಲ್ಲದ ರಥದ ಮುಂದೆಯೇ ಶತ್ರುಗಳನ್ನು ಎದುರಿಸಿದನೆಂಬ ವಾರ್ತೆಯನ್ನು ಕೇಳಿದನಂತರ ನಾನು ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ನಾಗಬಲೈಃ ಸುದುಃಸಹಂ**
**ದ್ರೋಣಾನೀಕಂ ಯುಯುಧಾನಂ ಪ್ರಮಥ್ಯ ।**
**ಯಾತಂ ವಾರ್ಷ್ಣೇಯಂ ಯತ್ರ ತೌ ಕೃಷ್ಣಪಾರ್ಥೌ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೯೭॥**

ದ್ರೋಣರ ಸೇನೆಯು ಸುದುಸ್ಸಹವಾದ ಗಜಬಲದಿಂದಲೂ ಕೂಡಿದ್ದಿತು. ಅಂತಹ ಅಸಾಧಾರಣವಾದ ಗಜಸೇನೆಯನ್ನೂ ಧ್ವಂಸಗೊಳಿಸಿ ಸಾತ್ಯಕಿಯು ಅರ್ಜುನನ ಸಹಾಯಕ್ಕಾಗಿ ಪಾರ್ಥ-ಕೃಷ್ಣರಿದ್ದೆಡೆಗೆ ಆಗಮಿಸಿದನೆಂಬ ವಾರ್ತೆಯನ್ನು ಕೇಳಿದನಂತರ ನಾನು ಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಕರ್ಣಮಾಸಾದ್ಯ ಮುಕ್ತಂ**
**ವಧಾದ್ಭೀಮಂ ಕುತ್ಸಯಿತ್ವಾ ವಚೋಭಿಃ ।**
**ಧನುಷ್ಕೋಟ್ಯಾತುದ್ಯ ಕರ್ಣೇನ ವೀರಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೯೮॥**

ಒಮ್ಮೆ ಕರ್ಣ-ಭೀಮರಿಗೆ ನಡೆದ ಯುದ್ಧದಲ್ಲಿ ಕರ್ಣನು ಭೀಮನನ್ನು ವಧಿಸಿಬಿಡಬಹುದಾಗಿದ್ದಿತು. ಆದರೆ ಆ ಸಮಯದಲ್ಲಿ ಕರ್ಣನು ಭೀಮನ ವಧೆಮಾಡದೇ ಚುಚ್ಚುಮಾತುಗಳಿಂದ ಅವನನ್ನು ಮೂದಲಿಸಿ ಧನುಸ್ಸಿನ ತುದಿಯಿಂದ ತಿವಿದು ಪ್ರಾಣಸಹಿತವಾಗಿ ಬಿಟ್ಟುಬಿಟ್ಟನು. ಆ ವಾರ್ತೆಯನ್ನು ಕೇಳಿದನಂತರ ನನಗೆ ಜಯದ ಆಸೆಯು ಉಳಿಯಲಿಲ್ಲ, ಸಂಜಯ!

**ಯದಾ ದ್ರೋಣಃ ಕೃತವರ್ಮಾ ಕೃಪಶ್ಚ**
**ಕರ್ಣೋ ದ್ರೌಣಿರ್ಮದ್ರರಾಜಶ್ಚ ಶೂರಃ ।**
**ಅಮರ್ಷಯನ್ಸೈನ್ಧವಂ ವಧ್ಯಮಾನಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೧೯೯॥**

ದ್ರೋಣ, ಕೃತವರ್ಮಾ, ಕೃಪ, ಕರ್ಣ, ಅಶ್ವತ್ಥಾಮಾ, ಶೂರನಾದ ಶಲ್ಯ–ಇವರುಗಳು ಯಾವಾಗ ಜಯದ್ರಥನ ವಧೆಗೆ ತಕ್ಕ ಪ್ರತೀಕಾರಮಾಡ ಲಿಲ್ಲವೋ ( ವಧೆಯನ್ನು ತಡೆಯಲಾರದೇ ಹೋದರೋ )–ಆಗಲೇ ನಾನು ಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ದೇವರಾಜೇನ ದತ್ತಾಂ**
**ದಿವ್ಯಾಂ ಶಕ್ತಿಂ ವ್ಯಂಸಿತಾಂ ಮಾಧವೇನ ।**
**ಘಟೋತ್ಕಚೇ ರಾಕ್ಷಸೇ ಘೋರರೂಪೇ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೦॥**

ಅರ್ಜುನನನ್ನು ಸಂಹರಿಸುವ ಸಲುವಾಗಿಯೇ ಕರ್ಣನು ದೇವರಾಜ ನಿಂದ ದಿವ್ಯವಾದ ಶಕ್ತ್ಯಾಯುಧವನ್ನು ಪಡೆದುಕೊಂಡಿದ್ದನು. ಆದರೆ ಶ್ರೀಕೃಷ್ಣನು ಆ ದಿವ್ಯಶಕ್ತಿಯನ್ನು ಘೋರರೂಪಿಯಾದ, ಮಾಯಾವಿಯಾದ ಘಟೋತ್ಕಚರಾಕ್ಷಸನ ಮೇಲೆ ಪ್ರಯೋಗಿಸುವಂತೆ ಸನ್ನಾಹಮಾಡಿಬಿಟ್ಟನು. ಆ ವಾರ್ತೆಯನ್ನು ಕೇಳಿದನಂತರ ನಾನು ಜಯದ ಆಸೆಯನ್ನಿಟ್ಟುಕೊಳ್ಳಲಿಲ್ಲ.

**ಯದಾಶ್ರೌಷಂ ಕರ್ಣಘಟೋತ್ಕಚಾಭ್ಯಾಂ**
**ಯುದ್ಧೇ ಮುಕ್ತಾಂ ಸೂತಪುತ್ರೇಣ ಶಕ್ತಿಮ್ ।**
**ಯಯಾ ವಧ್ಯಃ ಸಮರೇ ಸವ್ಯಸಾಚೀ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೧॥**

ಯಾವ ದಿವ್ಯಶಕ್ತಿಯು ಕಿರೀಟಿಯ ವಧೆಗಾಗಿಯೇ ಮೀಸಲಾಗಿದ್ದಿತೋ ಅಂತಹ ದಿವ್ಯಶಕ್ತಿಯನ್ನು ಕರ್ಣನು ಘಟೋತ್ಕಚನೊಡನೆ ಮಾಡಿದ ಯುದ್ಧ ದಲ್ಲಿ ಆ ರಾಕ್ಷಸನ ಮೇಲೆ ಪ್ರಯೋಗಿಸಿಬಿಟ್ಟನು. ಆ ವಾರ್ತೆಯನ್ನು ಕೇಳಿದ ನಂತರ ನಾನು ಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ದ್ರೋಣಮಾಚಾರ್ಯಮೇಕಂ**
**ಧೃಷ್ಟದ್ಯುಮ್ನೇನಾಭ್ಯತಿಕ್ರಮ್ಯ ಧರ್ಮಮ್ ।**
**ರಥೋಪಸ್ಥೇ ಪ್ರಾಯಗತಂ ವಿಶಸ್ತಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೨॥**

ಮಗನು ಸತ್ತನೆಂಬ ವಾರ್ತೆಯನ್ನು ಕೇಳಿ ದ್ರೋಣರು ದುಃಖಿತರಾಗಿ ಶಸ್ತ್ರಸಂನ್ಯಾಸಮಾಡಿ ರಥದ ಮೇಲೆಯೇ ಪ್ರಾಯೋಪವೇಶಮಾಡಿದರು. ಆ ಸಮಯದಲ್ಲಿ ಧೃಷ್ಟದ್ಯುಮ್ನನು ವೀರಧರ್ಮವನ್ನೇ ಅತಿಕ್ರಮಿಸಿ ರಥವನ್ನು ಹತ್ತಿ ದ್ರೋಣರನ್ನು ಸಂಹರಿಸಿದನೆಂಬ ವಾರ್ತೆಯನ್ನು ಕೇಳಿದನಂತರ ನಾನು ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ದ್ರೌಣಿನಾ ದ್ವೈರಥಸ್ಥಂ**
**ಮಾದ್ರೀಸುತಂ ನಕುಲಂ ಲೋಕಮಧ್ಯೇ ।**
**ಸಮಂ ಯುದ್ಧೇ ಮಣ್ಡಲೇಭ್ಯಶ್ಚರನ್ತಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೩॥**

ಏಕಾಕಿಯಾಗಿ ರಥದಲ್ಲಿ ಕುಳಿತು ಮಹಾವೀರರನ್ನೆದುರಿಸುತ್ತಾ ರಣರಂಗದಲ್ಲಿ ತಿರುಗಾಡುತ್ತಿದ್ದ ನಕುಲನು ಯುದ್ಧದಲ್ಲಿ ಅಶ್ವತ್ಥಾಮನಿಗೆ ಸಮನಾಗಿ ಯುದ್ಧಮಾಡುತ್ತಿರುವನೆಂಬ ವಾರ್ತೆಯನ್ನು ಕೇಳಿದನಂತರ ನಾನು ಜಯದ ಆಸೆಯನ್ನು ತೊರೆದೆನು.

**ಯದಾ ದ್ರೋಣೇ ನಿಹತೇ ದ್ರೋಣಪುತ್ರೋ**
**ನಾರಾಯಣಂ ದಿವ್ಯಮಸ್ತ್ರಂ ವಿಕುರ್ವನ್ ।**
**ನೈಷಾಮನ್ತಂ ಗತವಾನ್ಪಾಣ್ಡವಾನಾಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೪॥**

ದ್ರೋಣರ ಸಂಹಾರವಾಯಿತು. ಕುಪಿತನಾದ ದ್ರೋಣಪುತ್ರನು ಪಾಂಡವರ ಸಂಹಾರಾರ್ಥವಾಗಿ ದಿವ್ಯವಾದ ನಾರಾಯಣಾಸ್ತ್ರವನ್ನೇ ಪ್ರಯೋಗಿಸಿದನು. ಆ ದಿವ್ಯಾಸ್ತ್ರಪ್ರಯೋಗದಿಂದಲೂ ಪಾಂಡವರನ್ನು ಧ್ವಂಸಗೊಳಿಸಲು ಸಾಧ್ಯವಾಗಲಿಲ್ಲ. ಆ ವಾರ್ತೆಯನ್ನು ಕೇಳಿದನಂತರ ನಾನು ಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಭೀಮಸೇನೇನ ಪೀತಂ**
**ರಕ್ತಂ ಭ್ರಾತುರ್ಯುಧಿ ದುಃಶಾಸನಸ್ಯ ।**
**ನಿವಾರಿತಂ ನಾನ್ಯತಮೇನ ಭೀಮಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೫॥**

ಯುದ್ಧದಲ್ಲಿ ಭೀಮನು ತಮ್ಮನಾದ ದುಃಶಾಸನನ ರಕ್ತಪಾನಮಾಡುತ್ತಿದ್ದರೂ ಯಾರೊಬ್ಬರೂ ಆ ಘೋರಕೃತ್ಯವನ್ನು ತಡೆಯುವ ಧೈರ್ಯ ಮಾಡಲಿಲ್ಲವೆಂಬ ವಾರ್ತೆಯನ್ನು ಕೇಳಿದನಂತರ ನಾನು ಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಕರ್ಣಮತ್ಯನ್ತಶೂರಂ**
**ಹತಂ ಪಾರ್ಥೇನಾಹವೇಷ್ವಪ್ರಧೃಷ್ಯಮ್ ।**
**ತಸ್ಮಿನ್ಭ್ರಾತೄಣಾಂ ವಿಗ್ರಹೇ ದೇವಗುಹ್ಯೇ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೬॥**

ಅಣ್ಣ-ತಮ್ಮಂದಿರಲ್ಲಿಯೇ ಪರಸ್ಪರವಾಗಿ ಯುದ್ಧನಡೆದುದೂ ದೇವರಹಸ್ಯವೇ ಆಗಿದ್ದಿತು. ಸಂಜಯ! ಈ ಮಹಾಯುದ್ಧದಲ್ಲಿ ಅಪ್ರತಿಮಪರಾಕ್ರಮಿಯಾದ ಮಹಾಶೂರನಾದ ಕರ್ಣನು ಅರ್ಜುನನಿಂದ ಹತನಾದನೆಂಬ ವಾರ್ತೆಯನ್ನು ಕೇಳಿದನಂತರ ನಾನು ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ದ್ರೋಣಪುತ್ರಂ ಚ ಶೂರಂ**
**ದುಃಶಾಸನಂ ಕೃತವರ್ಮಾಣಮುಗ್ರಮ್ ।**
**ಯುಧಿಷ್ಠಿರಂ ಧರ್ಮರಾಜಂ ಜಯನ್ತಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೭॥**

ಧರ್ಮರಾಜನಾದ ಯುಧಿಷ್ಠಿರನು ದ್ರೋಣಪುತ್ರನಾದ ಶೂರನಾದ ಅಶ್ವತ್ಥಾಮನನ್ನೂ–ದಂಡಿಸಲಾಗದ, ಕಡುಗಲಿಯಾದ, ಉಗ್ರವೀರ್ಯನಾದ ಕೃತಕರ್ಮನನ್ನೂ ಜಯಿಸಿದನೆಂದು ಕೇಳಿದನಂತರ ನಾನು ವಿಜಯದ ಆಸೆಯನ್ನು ಬಿಟ್ಟುಬಿಟ್ಟೆನು.

**ಯದಾಶ್ರೌಷಂ ನಿಹತಂ ಮದ್ರರಾಜಂ**
**ರಣೇ ಶೂರಂ ಧರ್ಮರಾಜೇನ ಸೂತ ।**

**ಸದಾ ಸಂಗ್ರಾಮೇ ಸ್ಪರ್ಧತೇ ಯಸ್ತು ಕೃಷ್ಣಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೮॥**

ಮದ್ರರಾಜನಾದ ಶಲ್ಯನು ಅತುಲಪರಾಕ್ರಮಿಯು. ಯುದ್ಧದಲ್ಲವನು ಶ್ರೀಕೃಷ್ಣನೊಡನೆ ಸ್ಪರ್ಧಿಸುತ್ತಿದ್ದನು. ಅಂತಹ ರಣಧೀರನನ್ನೂ ಧರ್ಮರಾಜನು ಸಂಹರಿಸಿದನೆಂದು ಕೇಳಿದನಂತರ ನಾನು ವಿಜಯದ ಆಸೆಯನ್ನಿಟ್ಟು ಕೊಳ್ಳಲಿಲ್ಲ.

**ಯದಾಶ್ರೌಷಂ ಕಲಹದ್ಯೂತಮೂಲಂ**
**ಮಾಯಾಬಲಂ ಸೌಬಲಂ ಪಾಣ್ಡವೇನ ।**
**ಹತಂ ಸಂಗ್ರಾಮೇ ಸಹದೇವೇನ ಪಾಪಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೦೯॥**

ಸಂಜಯ! ಪಾಂಡವರೊಡನೆ ಕಲಹಕ್ಕೂ ಮತ್ತು ಜೂಜಿಗೂ ಶಕುನಿಯೇ ಮೂಲಕಾರಣನು. ಆ ಪಾಪಿಯ ಅಪಾರವಾದ ಮಾಯಾಬಲವನ್ನೂ ಪಾಂಡವಕನಿಷ್ಠನಾದ ಸಹದೇವನು ಧ್ವಂಸಗೊಳಿಸಿ, ಅಂತಹ ಮಾಯಾ ಬಲವುಳ್ಳ ಶಕುನಿಯನ್ನು ಕೊಂದನೆಂಬ ವಾರ್ತೆಯನ್ನು ಕೇಳಿದನಂತರ ನಾನು ಜಯದ ಆಸೆಯನ್ನು ಬಿಟ್ಟೆನು.

**ಯದಾಶ್ರೌಷಂ ಶ್ರಾನ್ತಮೇಕಂ ಶಯಾನಂ**
**ಹ್ರದಂ ಗತ್ವಾ ಸ್ತಮ್ಭಯಿತ್ವಾ ತದಮ್ಭಃ ।**
**ದುರ್ಯೋಧನಂ ವಿರಥಂ ಭಗ್ನಶಕ್ತಿಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೧೦॥**

ಯುದ್ಧಮಾಡುತ್ತಿದ್ದಾಗ ದುರ್ಯೋಧನನ ರಥ-ಅಶ್ವಗಳೆಲ್ಲವೂ ಭಗ್ನವಾಗಿ ಹೋದುವು. ದುರ್ಯೋಧನನೂ ಶಕ್ತಿಗುಂದಿದ್ದನು. ಬಹಳ ಬಳಲಿದ್ದ ಅವನು ಸರೋವರವೊಂದಕ್ಕೆ ಹೋಗಿ ಜಲಸ್ತಂಭನಮಾಡಿ ಸರೋವರದ ತಳದಲ್ಲಿ ಮಲಗಿದನೆಂಬ ವಾರ್ತೆಯನ್ನು ಕೇಳಿದನಂತರ ನಾನು ಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಪಾಣ್ಡವಾಂಸ್ತಿಷ್ಠಮಾನಾ-**
**ನ್ಗತ್ವಾ ಹ್ರದೇ ವಾಸುದೇವೇನ ಸಾರ್ಧಮ್ ।**

ಅಮರ್ಷಣಂ ಧರ್ಷಯತಃ ಸುತಂ ಮೇ
ತದಾ ನಾಶಂಸೇ ವಿಜಯಾಯ ಸಂಜಯ ॥೨೧೧॥

ಸರೋವರದಲ್ಲಿ ಮಲಗಿದ್ದ ನನ್ನ ಮಗನನ್ನೂ ಪಾಂಡವರು ಬಿಡಲಿಲ್ಲ. ವಾಸುದೇವಸಮೇತರಾಗಿ ಅವರು ಸರೋವರದ ಸಮೀಪಕ್ಕೆ ಹೋಗಿ, ಮಹಾ ಕೋಪಿಷ್ಠನಾದ, ದುರಭಿಮಾನಿಯಾದ ನನ್ನ ಮಗನನ್ನು ಅಸಹ್ಯವಾದ ಮಾತುಗಳಿಂದ ಯುದ್ಧಕ್ಕೆ ಪ್ರಚೋದಿಸಿದರೆಂಬ ಸಮಾಚಾರವನ್ನು ಕೇಳಿದ ನಂತರ ನಾನು ಜಯದ ಆಸೆಯನ್ನು ತೊರೆದೆನು.

ಯದಾಶ್ರೌಷಂ ವಿವಿಧಾಂಶ್ಚಿತ್ರಮಾರ್ಗಾ-
ನ್ಗದಾಯುದ್ಧೇ ಮಣ್ಡಲಶಶ್ಚರನ್ತಮ್ ।
ಮಿಥ್ಯಾಹತಂ ವಾಸುದೇವಸ್ಯ ಬುದ್ಧ್ಯಾ
ತದಾ ನಾಶಂಸೇ ವಿಜಯಾಯ ಸಂಜಯ ॥೨೧೨॥

ನನ್ನ ಮಗನು ಸರೋವರದಿಂದ ಹೊರಬಂದು ಭೀಮನೊಡನೆ ನಾನಾ ವಿಧವಾದ ವರಸೆಗಳನ್ನು ಪ್ರದರ್ಶಿಸುತ್ತಾ ಬಹುನಿಪುಣತೆಯಿಂದ ಗದಾ ಯುದ್ಧಮಾಡುತ್ತಿದ್ದಾಗ–ವಾಸುದೇವನ ಪ್ರೇರಣೆಯಿಂದ ಭೀಮಸೇನನು ಯುದ್ಧಮರ್ಯಾದೆಯನ್ನೂ ಮೀರಿ, ನನ್ನ ಮಗನ ತೊಡೆಗೆ ಪ್ರಹರಿಸಿ ಅವನನ್ನು ಕೊಂದನೆಂಬ ವಾರ್ತೆಯನ್ನು ಕೇಳಿದನಂತರ ನನಗೆ ವಿಜಯದ ಆಸೆಯು ಉಳಿಯಲಿಲ್ಲ.

ಯದಾಶ್ರೌಷಂ ದ್ರೋಣಪುತ್ರಾದಿಭಿಸ್ತೈ-
ರ್ಹತಾನ್ಪಾಞ್ಚಾಲಾನ್ದ್ರೌಪದೇಯಾಂಶ್ಚ ಸುಪ್ತಾನ್ ।
ಕೃತಂ ಬೀಭತ್ಸಮಯಶಸ್ಯಂ ಚ ಕರ್ಮ
ತದಾ ನಾಶಂಸೇ ವಿಜಯಾಯ ಸಂಜಯ ॥೨೧೩॥

ನನ್ನ ಮಗನು ಅಸುವನ್ನು ನೀಗುತ್ತಿರುವಾಗ ಅಶ್ವತ್ಥಾಮನು ಬಂದು ನನ್ನ ಮಗನ ಮುಂದೆ ಪಾಂಡವರ ತಲೆಗಳನ್ನು ತುಂಡರಿಸಿ ತರುವುದಾಗಿ ಪ್ರತಿಜ್ಞೆಮಾಡಿ, ತಮ್ಮ ಜೊತೆಯವರೊಡನೆ ಹೋಗಿ ಮಲಗಿದ್ದ ಪಾಂಚಾಲ ರನ್ನೂ ದ್ರೌಪದಿಯ ಮಕ್ಕಳನ್ನೂ ಕೊಂದು ಭಯಾನಕವೂ, ಅಯಶಸ್ಕರವೂ ಆದ ಕಾರ್ಯವನ್ನು ಮಾಡಿದನೆಂಬ ವಾರ್ತೆಯನ್ನು ಕೇಳಿದನಂತರ ನಾನು ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ಭೀಮಸೇನಾನುಯಾತೇ-**
**ನಾಶ್ವತ್ಥಾಮ್ನಾ ಪರಮಾಸ್ತ್ರಂ ಪ್ರಯುಕ್ತಮ್ ।**
**ಕ್ರುದ್ಧೇನೈಷೀಕಮವಧೀದ್ಯೇನ ಗರ್ಭಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೧೪॥**

ಅಶ್ವತ್ಥಾಮನ ಕ್ರೂರವರ್ತನೆಯಿಂದಾಗಿ ಕುಪಿತನಾದ ಭೀಮಸೇನನು ಅವನ ಬೆನ್ನಟ್ಟಿ ಹೋಗುತ್ತಿರುವಾಗ–ಮತ್ತೂ ಕುಪಿತನಾದ ಅಶ್ವತ್ಥಾಮನು ಪಾಂಡವರ ವಂಶವನ್ನೇ ನಿರ್ವಂಶವನ್ನಾಗಿ ಮಾಡುವ ಅಭಿಲಾಷೆಯಿಂದ ಉತ್ತರೆಯ ಗರ್ಭವನ್ನೇ ಲಕ್ಷ್ಯವನ್ನಾಗಿಟ್ಟುಕೊಂಡು ಐಷೀಕವೆಂಬ ಮಹಾಸ್ತ್ರವನ್ನು ಪ್ರಯೋಗಿಸಿದನೆಂಬ ವಾರ್ತೆಯನ್ನು ಕೇಳಿದನಂತರ ನನಗೆ ವಿಜಯದ ಆಸೆಯು ಉಳಿಯಲಿಲ್ಲ.

**ಯದಾಶ್ರೌಷಂ ಬ್ರಹ್ಮಶಿರೋಽರ್ಜುನೇನ**
**ಸ್ವಸ್ತೀತ್ಯುಕ್ತ್ವಾಸ್ತ್ರಮಸ್ತ್ರೇಣ ಶಾನ್ತಮ್ ।**
**ಅಶ್ವತ್ಥಾಮ್ನಾ ಮಣಿರತ್ನಂ ಚ ದತ್ತಂ**
**ತದಾ ನಾಶಂಸೇ ವಿಜಯಾಯ ಸಂಜಯ ॥೨೧೫॥**

ಆದರೆ, ಸಂಜಯ! ಪಾಂಡವರ ವಂಶದ ವಿನಾಶಕ್ಕಾಗಿ ಗರ್ಭಕ್ಕೆ ಲಕ್ಷ್ಯವಿಟ್ಟು ಅಶ್ವತ್ಥಾಮನು ಐಷೀಕವನ್ನು ಪ್ರಯೋಗಿಸಿದರೂ ಅವನ ಆಶಯವು ಫಲಿಸಲಿಲ್ಲ. ಮರುಕ್ಷಣದಲ್ಲಿಯೇ ಅರ್ಜುನನು 'ಸ್ವಸ್ತ್ಯಸ್ತು' ಎಂದು ಹೇಳಿ ಪ್ರತ್ಯಸ್ತ್ರವನ್ನು ಬಿಟ್ಟು ಅಶ್ವತ್ಥಾಮನು ಬಿಟ್ಟಿದ್ದ ಬ್ರಹ್ಮಶಿರಸ್ಸನ್ನು ಶಾಂತಗೊಳಿಸಿದನು. ಅರ್ಜುನನು ಪ್ರಯೋಗಿಸಿದ ಮಹಾಸ್ತ್ರವು ಅಶ್ವತ್ಥಾಮನು ಪ್ರಯೋಗಿಸಿದ್ದ ಬ್ರಹ್ಮಾಸ್ತ್ರವನ್ನು ಶಾಂತಗೊಳಿಸಿತಲ್ಲದೇ ಅಶ್ವತ್ಥಾಮನನ್ನೂ ಬೆನ್ನಟ್ಟಿಹೋಯಿತು. ಅಶ್ವತ್ಥಾಮನು ತನ್ನ ಮಹಾಶಕ್ತಿಗೆ ಕಾರಣವಾಗಿದ್ದ ಮಣಿರತ್ನವನ್ನು ಕೊಟ್ಟು ತನ್ನ ಪ್ರಾಣವನ್ನುಳಿಸಿಕೊಂಡನು. ಆ ವಾರ್ತೆಯನ್ನು ತಿಳಿದನಂತರ ನಾನು ವಿಜಯದ ಆಸೆಯನ್ನು ತೊರೆದೆನು.

**ಯದಾಶ್ರೌಷಂ ದ್ರೋಣಪುತ್ರೇಣ ಗರ್ಭೇ**
**ವೈರಾಟ್ಯಾ ವೈ ಪಾತ್ಯಮಾನೇ ಮಹಾಸ್ತ್ರೈಃ ।**

**ದ್ವೈಪಾಯನಃ ಕೇಶವೋ ದ್ರೋಣಪುತ್ರಂ**
**ಪರಸ್ಪರೇಣಾಭಿಶಾಪೈಃ ಶಶಾಪ ॥೨೧೬॥**

ಅಶ್ವತ್ಥಾಮನು ಮಹಾಸ್ತ್ರಗಳ ಪ್ರಯೋಗದಿಂದ ವಿರಾಟನ ಮಗಳಾದ ಉತ್ತರೆಯ ಗರ್ಭವನ್ನು ಧ್ವಂಸಮಾಡಲು ಯತ್ನಿಸಿದಾಗ ಕೃಷ್ಣದ್ವೈಪಾಯನ ವ್ಯಾಸರೂ ಮತ್ತು ಭಗವಾನ್ ಶ್ರೀಕೃಷ್ಣನೂ ದ್ರೋಣಪುತ್ರನನ್ನು ಶಪಿಸಿಬಿಟ್ಟರು.

ಇಲ್ಲಿಗೆ ನನ್ನ ಜಯದ ಆಸೆಯು ಸಂಪೂರ್ಣವಾಗಿ ಪರಿಸಮಾಪ್ತಿ ಹೊಂದಿತು, ಸಂಜಯ!

**ಶೋಚ್ಯಾ ಗಾನ್ಧಾರೀ ಪುತ್ರಪೌತ್ರೈರ್ವಿಹೀನಾ**
**ತಥಾ ಬನ್ಧುಭಿಃ ಪಿತೃಭಿರ್ಭ್ರಾತೃಭಿಶ್ಚ ।**
**ಕೃತಂ ಕಾರ್ಯಂ ದುಷ್ಕರಂ ಪಾಣ್ಡವೇಯೈಃ**
**ಪ್ರಾಪ್ತಂ ರಾಜ್ಯಮಸಪತ್ನಂ ಪುನಸ್ತೈಃ ॥೨೧೭॥**

ಸಂಜಯ! ಈ ಸಮಯದಲ್ಲಿ ಪುತ್ರ-ಪೌತ್ರರಿಂದಲೂ ಬಂಧು ಗಳಿಂದಲೂ ವಿಹೀನಳಾಗಿರುವ ಗಾಂಧಾರಿಯ ಸ್ಥಿತಿಯಂತೂ ಅತ್ಯಂತಶೋಚ ನೀಯವೂ ಮತ್ತು ಅವರ್ಣನೀಯವೂ ಆಗಿದೆ. ಪಾಂಡುಪುತ್ರರಿಂದ ಬಹು ದುಷ್ಕರವಾದ ಕಾರ್ಯವೇ ಮಾಡಲ್ಪಟ್ಟಿತು ಮತ್ತು ಅವರು ದಾಯಾದರಿಂದ ರಹಿತವಾದ ನಿಷ್ಕಂಟಕವಾದ ರಾಜ್ಯವನ್ನೂ ಪಡೆದುಕೊಂಡರು.

**ಕಷ್ಟಂ ಯುದ್ಧೇ ದಶ ಶೇಷಾಃ ಶ್ರುತಾ ಮೇ**
**ತ್ರಯೋಽಸ್ಮಾಕಂ ಪಾಣ್ಡವಾನಾಂ ಚ ಸಪ್ತ।**
**ದ್ವ್ಯೂನಾ ವಿಂಶತಿರಾಹತಾಕ್ಷೌಹಿಣೀನಾಂ**
**ತಸ್ಮಿನ್ಸಂಗ್ರಾಮೇ ಭೈರವೇ ಕ್ಷತ್ರಿಯಾಣಾಮ್ ॥೨೧೮॥**

ಸಂಜಯ! ಈ ವಿರಹದುಃಖವನ್ನು ಸಹಿಸಲು ನನಗೆ ನಿಶ್ಚಯವಾಗಿಯೂ ಬಹಳ ಕಷ್ಟವಾಗಿದೆ. ಈ ಘೋರಯುದ್ಧದ ಕಡೆಯಲ್ಲಿ ಕೇವಲ ಹತ್ತು ಮಂದಿ ಮಾತ್ರವೇ ಉಳಿದುಕೊಂಡರೆಂದು ಕೇಳಿದೆನು. ಪಾಂಡವರೈವರು, ಕೃಷ್ಣ ಮತ್ತು ಸಾತ್ಯಕಿ–ಇವರು ಪಾಂಡವರ ಕಡೆಯಲ್ಲಿ ಉಳಿದು ಕೊಂಡ ಏಳು ಮಂದಿ. ಕೃಪಾಚಾರ್ಯ, ಅಶ್ವತ್ಥಾಮಾ ಮತ್ತು ಕೃತವರ್ಮರು

ನಮ್ಮ ಕಡೆಯವರಾಗಿ ಉಳಿದುಕೊಂಡರು. ಹದಿನೆಂಟು ಅಕ್ಷೌಹಿಣೀಸೈನ್ಯವೂ ಈ ಭೀಕರಸಂಗ್ರಾಮದಲ್ಲಿ ವಿನಾಶಹೊಂದಿತು.

ಈ ದುರ್ವಾರ್ತೆಯನ್ನು ಕೇಳಿ ನನ್ನ ಸುತ್ತಲೂ ಅಂಧಕಾರವು ಕವಿದಂತಾಗಿದೆ. ನನ್ನ ಹೃದಯವನ್ನು ಮೋಹವು ಆವರಿಸಿಬಿಟ್ಟಿದೆ. ಪ್ರಜ್ಞೆಯು ನಿಮಿಷ-ನಿಮಿಷಕ್ಕೂ ಮಸುಕಾಗುತ್ತಿದೆ. ಮನಸ್ಸು ಬಹುವಾಗಿ ವಿಹ್ವಲಗೊಂಡಿದೆ."

ಸೌತಿಗಳು ಮುಂದುವರಿದು ಹೇಳುತ್ತಾರೆ : "ರಾಜನಿಗೆ ಏನು ಮಾಡಬೇಕೆಂದೂ ತೋರುತ್ತಿರಲಿಲ್ಲ. ಕ್ಷಣ-ಕ್ಷಣಕ್ಕೂ ಪ್ರಜ್ಞಾಹೀನನಾಗಿ ನೆಲದ ಮೇಲೆ ಬೀಳುತ್ತಿದ್ದನು ; ಒಡನೆಯೇ ಎದ್ದು ಗಟ್ಟಿಯಾಗಿ ರೋದಿಸುತ್ತಿದ್ದನು ; ನಿಟ್ಟುಸಿರುಬಿಡುತ್ತಾ ಹೇಳುತ್ತಿದ್ದನು : "ಸಂಜಯ! ನಾನಿನ್ನು ಬದುಕಿರಲಾರೆ. ಪ್ರಾಣಬಿಡುತ್ತೇನೆ. ಏಕೆ ಜೀವಿಸಲಿ? ನಾನು ಜೀವಿಸಿರುವುದರಿಂದ ಕಿಂಚಿತ್ಫಲವನ್ನೂ ಕಾಣಲಾರೆನು."

ಇವೇ ಮುಂತಾಗಿ ಹೇಳಿಕೊಂಡು ದುಃಖಿಸುತ್ತಿದ್ದ, ಬಹುದೀನನಾಗಿದ್ದ, ನಾಗರಹಾವಿನಂತೆ ಬಾರಿ-ಬಾರಿಗೂ ದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದ ಧೃತರಾಷ್ಟ್ರನನ್ನು ಕುರಿತು ಧೀಮಂತನಾದ ಸಂಜಯನು ಮಹಾರ್ಥಯುಕ್ತವಾದ ಈ ಮಾತುಗಳನ್ನು ಹೇಳಿದನು :

"ಮಹಾರಾಜ! ಮಹರ್ಷಿಗಳಾದ ವ್ಯಾಸರ ಮತ್ತು ದೇವರ್ಷಿಗಳಾದ ನಾರದರ ಮುಖಾರವಿಂದದಿಂದ ನೀನು ಉತ್ಸಾಹಶಾಲಿಗಳಾದ, ಮಹಾಬಲಿಷ್ಠರಾದ ರಾಜರ ಅನೇಕಾನೇಕ ಸುಚರಿತಗಳನ್ನು ಕೇಳಿರುವೆ.

ಉತ್ತಮೋತ್ತಮವಾದ ರಾಜವಂಶಗಳಲ್ಲಿ ಹುಟ್ಟಿ, ಸರ್ವಗುಣಪರಿಪೂರ್ಣರಾಗಿ, ಸಕಲವಿಧವಾದ ಶಸ್ತ್ರಾಸ್ತ್ರಗಳನ್ನೂ ತಿಳಿದವರಾಗಿ, ಪರಾಕ್ರಮದಲ್ಲಿ ಇಂದ್ರನಿಗೆ ಸಮಾನರೆಂಬ ಖ್ಯಾತಿಯನ್ನೂ ಪಡೆದು, ಧರ್ಮಮೂಲವಾಗಿಯೇ ಈ ಪೃಥ್ವಿಯೆಲ್ಲವನ್ನೂ ಜಯಿಸಿ, ಅನೇಕಾನೇಕ ಯಜ್ಞ-ಯಾಗಾದಿಗಳನ್ನೂ ಮಾಡಿದ ಬ್ರಾಹ್ಮಣರಿಗೆ ಯಥೇಚ್ಛವಾದ ದಾನ-ದಕ್ಷಿಣೆಗಳನ್ನು ಕೊಟ್ಟು, ಈ ಲೋಕದಲ್ಲಿ ಶುಭಯಶಸ್ಸನ್ನು ಪಡೆದು ಕಾಲವಶರಾದ ಅನೇಕರ ಸುಚರಿತಗಳನ್ನು ನೀನು ಕೇಳಿರುವೆ. ಮಹಾರಥನಾದ ವೀರನಾದ ಶೈಬ್ಯ, ಜಯಶಾಲಿಗಳಲ್ಲಿ ಶ್ರೇಷ್ಠನಾದ ಸೃಂಜಯ, ಸುಹೋತ್ರ, ರಂತಿದೇವ,

ಕಾಕ್ಷೀವಂತ, ಔಶಿಜ, ಬಾಹ್ಲೀಕ, ದಮನ, ಚೈದ್ಯ, ಶರ್ಯಾತಿ, ಅಪರಾಜಿತ ನಾದ ನಲ, ಶತ್ರುಘಾತಿಯಾದ ವಿಶ್ವಾಮಿತ್ರ, ಮಹಾಬಲಿಷ್ಠನಾದ ಅಂಬ ರೀಷ, ಮರುತ್ತ, ಮನು, ಇಕ್ಷ್ವಾಕು, ಗಯ, ಭರತ, ದಶರಥಪುತ್ರನಾದ ಶ್ರೀರಾಮ, ಶಶಬಿಂದು, ಭಗೀರಥ, ಮಹಾಭಾಗ್ಯಶಾಲಿಯಾದ ಕೃತವೀರ್ಯ, ಜನಮೇಜಯ ಮತ್ತು ಶುಭಕರ್ಮನಾದ, ದೇವತೆಗಳಿಂದಲೇ ಯಜ್ಞ ಮಾಡಿಸಲ್ಪಟ್ಟ, ತನ್ನ ರಾಷ್ಟ್ರವನ್ನು ವೇದಿಕೆಯ ಆಕಾರವನ್ನಾಗಿ ಪರಿವರ್ತಿಸಿ ಚೈತ್ಯಗಳಿಂದಲೂ–ಯೂಪಸ್ತಂಭಗಳಿಂದಲೂ ತುಂಬಿಬಿಟ್ಟಿದ್ದ ಯಯಾತಿ– ಈ ಇಪ್ಪತ್ತುನಾಲ್ಕು ಮಂದಿ ರಾಜರ ಶುಭಚರಿತಗಳನ್ನು ದೇವರ್ಷಿಗಳಾದ ನಾರದರು ಹಿಂದೆ ಪುತ್ರಶೋಕದಿಂದಲೇ ಬಹಳ ವಿಷಣ್ಣನಾಗಿದ್ದ ಶ್ವೈತ್ಯರಾಜನಿಗೆ ಹೇಳಿದರು. ಅವರಿಗಿಂತಲೂ ಮೊದಲು ಅನೇಕಾನೇಕ ಬಲಿಷ್ಠರಾದ, ಗುಣಸಂಪನ್ನರಾದ, ಮಹಾರಥರಾದ, ಮಹಾತ್ಮರಾದ ರಾಜರು ಈ ಪೃಥ್ವಿಯನ್ನು ಆಳಿ ಕೀರ್ತಿಯನ್ನು ಗಳಿಸಿ ಪರಂಧಾಮವನ್ನೈದಿರುವರು.

ಪುರು, ಕುರು, ಯದು, ಶೂರ, ಮಹಾತೇಜಸ್ವಿಯಾದ ವಿಷ್ವಗಶ್ವ, ಅಣುಹ, ಯುವನಾಶ್ವ, ಕಕುತ್ಸ್ಥ, ಪರಾಕ್ರಮಿಯಾದ ರಘು, ವಿಜಯ, ವೀತಿಹೋತ್ರ, ಅಂಗ, ಭವ, ಶ್ವೇತ, ಬೃಹದ್ಗುರು, ಉಶೀನರ, ಶತರಥ, ಕಂಕ, ದುಲಿದುಹ, ದ್ರುಮ, ದಮ್ಭೋದ್ಭವ, ಪರ, ವೇನ, ಸಗರ, ಸಂಕೃತಿ, ನಿಮಿ, ಅಜೇಯ, ಪರಶು, ಪುಂಡ್ರ, ಶಂಭು, ಪಾಪರಹಿತನಾದ ದೇವಾವೃಧ, ದೇವಾಹ್ವಯ, ಸುಪ್ರತಿಮ, ಸುಪ್ರತೀಕ, ಬೃಹದ್ರಥ, ಉತ್ಸಾಹಶಾಲಿಯೂ ವಿನಯಶೀಲನೂ ಆದ ಸುಕ್ರತು, ನಿಷಧರಾಜನಾದ ನಲ, ಸತ್ಯವ್ರತ, ಶಾಂತ ಭಯ, ಸುಮಿತ್ರ, ಸುಬಲ, ಪ್ರಭು, ಜಾನುಜಂಘ, ಅನರಣ್ಯ, ಅರ್ಕ, ಪ್ರಿಯಭೃತ್ಯ, ಶುಚಿವ್ರತ, ಬಲಬಂಧು, ನಿರಾಮರ್ದ, ಕೇತುಶೃಂಗ, ಬೃಹದ್ಬಲ, ಧೃಷ್ಟಕೇತು, ಬೃಹತ್ಕೇತು, ದೀಪ್ತಕೇತು, ನಿರಾಮಯ, ಅವೀಕ್ಷಿತ್, ಚಪಲ, ಧೂರ್ತ, ಕೃತಬಂಧು, ದೃಢೇಷುಧಿ, ಪುರಾಣಪ್ರಸಿದ್ಧನಾದ ಪ್ರತ್ಯಂಗ, ಪರಹಾ ಮತ್ತು ಶ್ರುತಿ–ಇವರೆಲ್ಲರೂ ಕೀರ್ತಿವಂತರಾಗಿ ಈ ಪೃಥ್ವಿಯಲ್ಲಿ ಚಿರಕಾಲ ವಿದ್ದು ಪರಂಧಾಮವನ್ನೈದಿದರು. ಇವರುಗಳು ಮಾತ್ರವೇ ಅಲ್ಲ, ಮಹಾ ರಾಜ! ಇವರಂತೆ ನೂರಾರು, ಸಾವಿರಾರು, ಲಕ್ಷೋಪಲಕ್ಷ, ಕೋಟ್ಯಾನು ಕೋಟಿ ಬುದ್ಧಿವಂತರಾದ, ಮಹಾಬಲರಾದ, ಮಹಾತ್ಮರಾದ, ಗುಣಸಂಪನ್ನ

ರಾದ ರಾಜರೂ ನಿನ್ನ ಮಕ್ಕಳಂತೆಯೇ ವಿಪುಲವಾದ ಸುಖೋಪಭೋಗ ಗಳನ್ನೂ ಬಿಟ್ಟು ಪರಂಧಾಮವನ್ನೈದಿರುವರು. ಅವರ ದಿವ್ಯಕರ್ಮಗಳು, ಪರಾಕ್ರಮ, ತ್ಯಾಗ, ಮಾಹಾತ್ಮ್ಯ, ಆಸ್ತಿಕ್ಯ, ಸತ್ಯನಿಷ್ಠೆ, ಪರಿಶುದ್ಧತೆ, ದಯೆ, ಸರಳತೆ–ಇವೇ ಮೊದಲಾದ ಸದ್ಗುಣಗಳು ವಿದ್ವಾಂಸರಾದ ಪ್ರಾಚೀನಕವಿ ಗಳಿಂದ ವರ್ಣಿತವಾಗಿವೆ. ಇಂತಹ ಸಮಸ್ತಸಂಪತ್ತಿನಿಂದ ಪೂರ್ಣರಾಗಿಯೂ, ಸದ್ಗುಣಸಂಪನ್ನರಾಗಿಯೂ ಇದ್ದ ರಾಜರೆಲ್ಲರೂ ನಿಧನಹೊಂದಿರುವರು.

ನಿನ್ನ ಪುತ್ರರಾದರೋ ಸದ್ಗುಣಿಗಳಾಗಿರಲಿಲ್ಲ ; ದುರಾತ್ಮರಾಗಿದ್ದರು. ಕೋಪದಿಂದಲೇ ಉರಿದುಹೋಗುತ್ತಿದ್ದರು. ಲುಬ್ಧರಾಗಿದ್ದರು. ದುರ್ವೃತ್ತ ರಾಗಿದ್ದರು. ಇಂತಹವರ ವಿಷಯವಾಗಿ ನೀನು ಶೋಕಿಸುವ ಕಾರಣವಿಲ್ಲ. ನೀನು ಗುರುಜನರಿಂದ ಶಾಸ್ತ್ರಗಳನ್ನು ಅಧ್ಯಯನಮಾಡಿರುವೆ. ನಿನಗೆ ಧಾರಣಾಶಕ್ತಿಯಿದೆ. ಬುದ್ಧಿವಂತನಾಗಿರುವೆ. ಪ್ರಾಜ್ಞರಾದವರು ನಿನ್ನನ್ನು ಆದರಿಸುತ್ತಾರೆ.

**ಯೇಷಾಂ ಶಾಸ್ತ್ರಾನುಗಾ ಬುದ್ಧಿರ್ನ ತೇ ಮುಹ್ಯನ್ತಿ ಭಾರತ ॥೨೪೪॥**

ಯಾರ ಬುದ್ಧಿಯು ಶಾಸ್ತ್ರವನ್ನನುಸರಿಸಿರುತ್ತದೆಯೋ–ಅಂತಹವರು ಕ್ರೋಧ-ಮೋಹಗಳಿಂದ ಭ್ರಾಂತರಾಗುವುದಿಲ್ಲ.

ಪಾಂಡವರ ವಿಷಯದಲ್ಲಿ ನೀನು ದಯಾರಹಿತನಾಗಿದ್ದುದೂ, ನಿನ್ನ ಮಕ್ಕಳ ವಿಷಯದಲ್ಲಿ ಪಕ್ಷಪಾತತೋರಿದುದೂ–ನಿನ್ನ ಆತ್ಮಕ್ಕೆ ವಿದಿತವಾಗಿಯೇ ಇದೆ. ಹೀಗಿರುವಾಗ ನೀನು ಪುತ್ರರ ಮರಣದ ವಿಷಯದಲ್ಲಿ ಹೆಚ್ಚು ವ್ಯಾಕುಲಗೊಳ್ಳುವುದು ಖಂಡಿತವಾಗಿಯೂ ಯುಕ್ತವಲ್ಲ.

**ಭವಿತವ್ಯಂ ತಥಾ ತಚ್ಚ ನಾನುಶೋಚಿತುಮರ್ಹಸಿ ।**
**ದೈವಂ ಪ್ರಜ್ಞಾವಿಶೇಷೇಣ ಕೋ ನಿವರ್ತಿತುಮರ್ಹತಿ ॥೨೪೬॥**

ಹೇಗಾಗಬೇಕಾಗಿದ್ದಿತೋ ಹಾಗೆಯೇ ಆಗಿರುವುದು, ಮಹಾರಾಜ! ಆದುದರಿಂದ ನೀನು ಯೋಚಿಸುವ ಕಾರಣವಿಲ್ಲ. ವಿಶೇಷವಾದ ಬುದ್ಧಿ ವಂತಿಕೆಯಿಂದಲೂ ವಿಧಿನಿಯಮವನ್ನು ಬದಲಾಯಿಸಲು ಸಮರ್ಥನಾದ ವನು ಯಾವನಿದ್ದಾನೆ?

**ವಿಧಾತೃವಿಹಿತಂ ಮಾರ್ಗಂ ನ ಕಶ್ಚಿದತಿವರ್ತತೇ ।**
**ಕಾಲಮೂಲಮಿದಂ ಸರ್ವಂ ಭಾವಾಭಾವೌ ಸುಖಾಸುಖೇ ॥೨೪೭॥**

ಬ್ರಹ್ಮನಿಂದ ವಿಧಾಯಕವಾಗಿರುವ ಮಾರ್ಗವಿದು, ಮಹಾರಾಜ! ಇದನ್ನು ಮೀರಲು ಯಾರಿಂದಲೂ ಸಾಧ್ಯವಾಗಲಾರದು. ಹುಟ್ಟು-ಸಾವು, ಸುಖ-ದುಃಖ ಎಲ್ಲಕ್ಕೂ ಕಾಲವೇ ಮೂಲವಾಗಿರುತ್ತದೆ.

**ಕಾಲಃ ಸೃಜತಿ ಭೂತಾನಿ ಕಾಲಃ ಸಂಹರತೇ ಪ್ರಜಾಃ ।**
**ಸಂಹರನ್ತಂ ಪ್ರಜಾಃ ಕಾಲಂ ಕಾಲಃ ಶಮಯತೇ ಪುನಃ ॥೨೪೮॥**

ಕಾಲವೇ ಪ್ರಪಂಚದ ಪ್ರಾಣಿಗಳೆಲ್ಲವನ್ನೂ ಸೃಷ್ಟಿಸುತ್ತದೆ. ಅದೇ ಹುಟ್ಟಿದ ಪ್ರಾಣಿಗಳೆಲ್ಲವನ್ನೂ ಸಂಹರಿಸುತ್ತದೆ. ಪ್ರಜಾಸಂಹಾರಕವಾದ ಆ ಕಾಲವನ್ನೂ ಮಹಾಕಾಲನೆಂದು ಕರೆಯಿಸಿಕೊಳ್ಳುವ ಕಾಲಾತೀತನಾದ ಪರಮಾತ್ಮನು ಶಾಂತಗೊಳಿಸುತ್ತಾನೆ.

**ಕಾಲೋ ಹಿ ಕುರುತೇ ಭಾವಾನ್ಸರ್ವಲೋಕೇ ಶುಭಾಶುಭಾನ್ ।**
**ಕಾಲಃ ಸಂಕ್ಷಿಪತೇ ಸರ್ವಾಃ ಪ್ರಜಾ ವಿಸೃಜತೇ ಪುನಃ ॥೨೪೯॥**

ಕಾಲವು ಸರ್ವಲೋಕಗಳಲ್ಲಿಯೂ ಶುಭಾಶುಭಫಲಗಳನ್ನು ಕೊಡುತ್ತದೆ. ಸಕಲವಸ್ತುಗಳನ್ನೂ ನುಂಗಿಹಾಕುತ್ತದೆ. ಪುನಃ ತಾನು ನುಂಗಿಹಾಕಿದ ಪ್ರಾಣಿಗಳನ್ನು ಸೃಷ್ಟಿಯ ರೂಪದಿಂದ ಹೊರಗೆ ಹಾಕುತ್ತದೆ.

**ಕಾಲಃ ಸುಪ್ತೇಷು ಜಾಗರ್ತಿ ಕಾಲೋ ಹಿ ದುರತಿಕ್ರಮಃ ।**
**ಕಾಲಃ ಸರ್ವೇಷು ಭೂತೇಷು ಚರತ್ಯವಿಧೃತಃ ಸಮಃ ॥೨೫೦॥**

**ಅತೀತಾನಾಗತಾ ಭಾವಾ ಯೇ ಚ ವರ್ತನ್ತಿ ಸಾಮ್ಪ್ರತಮ್ ।**
**ತಾನ್ಕಾಲನಿರ್ಮಿತಾನ್ಬುದ್ಧ್ವಾ ನ ಸಂಜ್ಞಾಂ ಹಾತುಮರ್ಹಸಿ ॥೨೫೧॥**

ಪ್ರಪಂಚದ ಸಕಲಪ್ರಾಣಿಗಳೂ ಮಲಗಿ ನಿದ್ರೆಹೋಗುತ್ತಿರುವಾಗಲೂ ಕಾಲವು ಎಚ್ಚರವಾಗಿಯೇ ಇರುತ್ತದೆ. ಆದುದರಿಂದ ಕಾಲವನ್ನು ಮೀರಿ ಯಾರಿಂದಲೂ ನಡೆಯುವ ಸಾಧ್ಯತೆಯಿಲ್ಲ. ಕಾಲವು ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಯಾವ ವಿಧವಾದ ತಾರತಮ್ಯವಾಗಲೀ, ಆಲಸ್ಯವಾಗಲೀ ಇಲ್ಲದಂತೆ ನಡೆದುಕೊಳ್ಳುತ್ತದೆ. ಹಿಂದೆ ಆಗಿಹೋದುದು, ಮುಂದೆ ಆಗು

ವುದು, ಈಗ ಇರುವುದು–ಎಲ್ಲವೂ ಕಾಲನಿರ್ಮಿತವಾದುದು–ಎಂದು ನಿಶ್ಚಯಿಸು. ಜ್ಞಾನಶೂನ್ಯನಾಗಬೇಡ ; ಅದರಿಂದಾಗಿ ದುಃಖಿಸಬೇಡ."

ಸಂಜಯನು ಇವೇ ಮುಂತಾದ ಮಾತುಗಳಿಂದ ಪುತ್ರಶೋಕಪೀಡಿತನಾಗಿದ್ದ ಜನಾಧಿಪನಾದ ಧೃತರಾಷ್ಟ್ರನನ್ನು ಸಮಾಧಾನಪಡಿಸಿದನು.

ಈ ಇತಿಹಾಸವನ್ನೇ ಆಧಾರವನ್ನಾಗಿಟ್ಟುಕೊಂಡು ಉಪನಿಷತ್ಸ್ವರೂಪವಾದ, ಪುಣ್ಯಮಯವಾದ ಮಹಾಭಾರತದ ಕಥೆಯನ್ನು ಕೃಷ್ಣದ್ವೈಪಾಯನರು ರಚಿಸಿದರು. ವಿದ್ವಜ್ಜನರಿಂದಲೂ ಮತ್ತು ಕವಿಶ್ರೇಷ್ಠರಿಂದಲೂ ಲೋಕದಲ್ಲಿ ಪುರಾಣಪ್ರವಚನಸಮಯಗಳಲ್ಲಿ ಈ ಮಹಾಭಾರತಕಥೆಯು ಹೇಳಲ್ಪಡುತ್ತದೆ.

**ಭಾರತಾಧ್ಯಯನಂ ಪುಣ್ಯಮಪಿ ಪಾದಮಧೀಯತಃ ।**
**ಶ್ರದ್ಧಧಾನಸ್ಯ ಪೂಯನ್ತೇ ಸರ್ವಪಾಪಾನ್ಯಶೇಷತಃ ॥೨೫೪॥**

ಮಹಾಭಾರತವು ಅತಿಶಯಪುಣ್ಯದಾಯಕವೂ ಆಗಿದೆ. ಇದರ ಒಂದು ಶ್ಲೋಕದ ಅಥವಾ ಒಂದು ಶ್ಲೋಕಪಾದದ ಪಠನದಿಂದ ಮತ್ತು ಶ್ರವಣದಿಂದ ಮಾನವರು ಸಕಲಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾರೆ.

ಮಹರ್ಷಿಗಳೇ! ಇದಕ್ಕೆ ಕಾರಣವು ಈ ರೀತಿಯಾಗಿದೆ :

**ದೇವಾ ದೇವರ್ಷಯೋ ಹ್ಯತ್ರ ತಥಾ ಬ್ರಹ್ಮರ್ಷಯೋಽಮಲಾಃ ।**
**ಕೀರ್ತ್ಯನ್ತೇ ಶುಭಕರ್ಮಾಣಸ್ತಥಾ ಯಕ್ಷಾ ಮಹೋರಗಾಃ ॥೨೫೫॥**

ಶುಭಕರ್ಮರಾದ ದೇವತೆಗಳು, ದೇವರ್ಷಿಗಳು, ಬ್ರಹ್ಮರ್ಷಿಗಳು, ಯಕ್ಷ-ನಾಗರು ಈ ಮಹಾಭಾರತದಲ್ಲಿ ಕೀರ್ತಿತರಾಗಿದ್ದಾರೆ. ಈ ಪುಣ್ಯಪುರುಷರ ಚರಿತ್ರೆಗಳು ಅಲ್ಲಲ್ಲಿ ಹೇಳಲ್ಪಡುತ್ತವೆ. ಇದಕ್ಕಿಂತಲೂ ಮಿಗಿಲಾಗಿ–

**ಭಗವಾನ್ವಾಸುದೇವಶ್ಚ ಕೀರ್ತ್ಯತೇಽತ್ರ ಸನಾತನಃ ।**
**ಸ ಹಿ ಸತ್ಯಮೃತಂ ಚೈವ ಪವಿತ್ರಂ ಪುಣ್ಯಮೇವ ಚ ॥೨೫೬॥**

**ಶಾಶ್ವತಂ ಬ್ರಹ್ಮ ಪರಮಂ ಧ್ರುವಂ ಜ್ಯೋತಿಃ ಸನಾತನಮ್ ।**
**ಯಸ್ಯ ದಿವ್ಯಾನಿ ಕರ್ಮಾಣಿ ಕಥಯನ್ತಿ ಮನೀಷಿಣಃ ॥೨೫೭॥**

ಇಲ್ಲಿ ವಾಸುದೇವನ ಸದ್ಗುಣಗಳು ಕೀರ್ತಿತವಾಗಿವೆ. ವಾಸುದೇವ

ನಾದರೋ, ನಿತ್ಯನೂ, ನಿರ್ವಿಕಾರನೂ, ನಿರಾಮಯನೂ, ನಿತ್ಯಶುದ್ಧನೂ, ನಿತ್ಯಬುದ್ಧನೂ, ಪರಬ್ರಹ್ಮನೂ, ಜರಾ-ಮರಣರಹಿತನೂ, ಅಧ್ಯಾತ್ಮನೂ ಆಗಿರುವನು. ಇಂತಹ ಮಹಾತ್ಮನಾದ ಶ್ರೀಕೃಷ್ಣನ ಗುಣಗಳನ್ನು ಮಹಾ ಭಾರತದಲ್ಲಿ ಹೊಗಳಿರುತ್ತಾರೆ.

**ಅಸಚ್ಚ ಸದಸಚ್ಚೈವ ಯಸ್ಮಾದ್ವಿಶ್ವಂ ಪ್ರವರ್ತತೇ ।**
**ಸಂತತಿಶ್ಚ ಪ್ರವೃತ್ತಿಶ್ಚ ಜನ್ಮಮೃತ್ಯುಪುನರ್ಭವಾಃ ॥೨೫೮॥**

ಯಾವ ಪರಮಾತ್ಮನಿಂದ–ವ್ಯಕ್ತವಾದ, ಅವ್ಯಕ್ತವಾದ ಮತ್ತು ವ್ಯಕ್ತಾವ್ಯಕ್ತವಾದ ಚರಾಚರವಸ್ತುಗಳೂ ಮತ್ತು ಈ ವಿಶ್ವವೂ ಪ್ರವರ್ತಿತವಾಗಿವೆಯೋ ಮತ್ತು ಯಾವುದರಿಂದ ಸಂತತಿ, ಪ್ರವೃತ್ತಿ ( ಕರ್ತವ್ಯ ಮತ್ತು ಕರ್ಮ ), ಜನ್ಮ ಮೃತ್ಯು, ಪುನರ್ಜನ್ಮಗಳುಂಟಾಗುತ್ತವೆಯೋ–ಅಂತಹ ಕೃಷ್ಣಪರಮಾತ್ಮನ ಗುಣಗಳನ್ನೇ ಈ ಮಹಾಭಾರತದಲ್ಲಿ ವಿಶದೀಕರಿಸಲಾಗಿದೆ.

**ಅಧ್ಯಾತ್ಮಂ ಶ್ರೂಯತೇ ಯಚ್ಚ ಪಞ್ಚಭೂತಗುಣಾತ್ಮಕಮ್ ।**
**ಅವ್ಯಕ್ತಾದಿ ಪರಂ ಯಚ್ಚ ಸ ಏವ ಪರಿಗೀಯತೇ ॥೨೫೯॥**

ಪೃಥ್ವೀ, ಅಪ್, ತೇಜಸ್ಸು, ವಾಯು, ಆಕಾಶ–ಎಂಬ ಪಂಚಭೂತ ಗಳನ್ನೂ, ಸತ್ತ್ವ-ರಜಸ್ತಮೋಗುಣಗಳನ್ನೂ ಒಳಗೊಂಡ ಆತ್ಮನನ್ನು ಕುರಿತ ಯಾವ ವಿಷಯಗಳಿವೆಯೋ–ಅವುಗಳೆಲ್ಲವನ್ನೂ ಇಲ್ಲಿ ವಿವರಿಸಿ ಹೇಳ ಲಾಗಿದೆ.

ಮೂಲಪ್ರಕೃತಿಯೇ ಮೊದಲಾದುವುಗಳಿಗೂ ಶ್ರೇಷ್ಠವಾದ ಪರಬ್ರಹ್ಮ ವಸ್ತುವಿನ ವಿಷಯವಾಗಿಯೂ ಬಹಳ ಚೆನ್ನಾಗಿ ಇಲ್ಲಿ ನಿರೂಪಣೆ ಮಾಡ ಲಾಗಿದೆ.

ಸ್ವಚ್ಛವಾದ ಕನ್ನಡಿಯಲ್ಲಿ ಪ್ರತಿಬಿಂಬವನ್ನು ಕಾಣುವಂತೆ–ಮಹರ್ಷಿಗಳು ತಪೋಧ್ಯಾನಗಳಿಂದ ಪರಮಾತ್ಮನನ್ನು ತಮ್ಮಲ್ಲಿಯೇ ಕಂಡುಕೊಳ್ಳುತ್ತಾರೆ.

ಮಹರ್ಷಿಗಳೇ! ಮೊದಲನೆಯ ಈ ಅನುಕ್ರಮಣಿಕಾಧ್ಯಾಯದ ಪಾರಾಯಣವೂ ಬಹಳ ಪುಣ್ಯಪ್ರದವಾದುದು.

**ಶ್ರದ್ಧಧಾನಃ ಸದಾ ಯುಕ್ತಃ ಸದಾ ಧರ್ಮಪರಾಯಣಃ ।**
**ಆಸೇವನ್ನಿಮಮಧ್ಯಾಯಂ ನರಃ ಪಾಪಾತ್ಪ್ರಮುಚ್ಯತೇ ॥೨೬೧॥**

ಸದಾ ಧರ್ಮಪರಾಯಣನಾಗಿದ್ದು, ಶ್ರದ್ಧಾವಂತನಾಗಿ ಈ ಅಧ್ಯಾಯವನ್ನು ಪಾರಾಯಣಮಾಡುವವನು ಸಕಲಪಾಪಗಳಿಂದಲೂ ಮುಕ್ತನಾಗುತ್ತಾನೆ.

**ಅನುಕ್ರಮಣಿಕಾಧ್ಯಾಯಂ ಭಾರತಸ್ಯೇಮಮಾದಿತಃ ।**
**ಆಸ್ತಿಕಃ ಸತತಂ ಶೃಣ್ವನ್ನ ಕೃಚ್ಛ್ರೇಷ್ವವಸೀದತಿ ॥೨೬೨॥**

**ಉಭೇ ಸಂಧ್ಯೇ ಜಪನ್ಕಿಂಚಿತ್ಸದ್ಯೋ ಮುಚ್ಯೇತ ಕಿಲ್ಬಿಷಾತ್ ।**
**ಅನುಕ್ರಮಣ್ಯಾ ಯಾವತ್ಸ್ಯಾದಹ್ನಾರಾತ್ರ್ಯಾ ಚ ಸಂಚಿತಮ್ ॥೨೬೩॥**

ಭಾರತದ ಈ ಅನುಕ್ರಮಣಿಕಾಧ್ಯಾಯವನ್ನು ಮೊದಲಿನಿಂದಲೂ ಸತತವಾಗಿ ಕೇಳುವ ಆಸ್ತಿಕನು ಯಾವ ವಿಧವಾದ ಕಷ್ಟಗಳಿಗೂ ಸಿಲುಕಿಕೊಳ್ಳುವುದಿಲ್ಲ. ಯಾವನು ಈ ಅನುಕ್ರಮಣಿಕಾಧ್ಯಾಯದ ಸ್ವಲ್ಪಭಾಗವನ್ನಾದರೂ ಬೆಳಿಗ್ಗೆ, ಸಂಜೆ ಮತ್ತು ಮಧ್ಯಾಹ್ನಸಮಯಗಳಲ್ಲಿ ಪಾರಾಯಣಮಾಡುತ್ತಾನೆಯೋ ಅವನು ರಾತ್ರಿಯಲ್ಲಿ ಮತ್ತು ಹಗಲಿನಲ್ಲಿ ಮಾಡುವ ಪಾಪಗಳಿಂದ ಸಂಪೂರ್ಣವಾಗಿ ವಿಮುಕ್ತನಾಗುತ್ತಾನೆ.

**ಭಾರತಸ್ಯ ವಪುರ್ಹ್ಯೇತತ್ಸತ್ಯಂ ಚಾಮೃತಮೇವ ಚ ।**
**ನವನೀತಂ ಯಥಾ ದಧ್ನೋ ದ್ವಿಪದಾಂ ಬ್ರಾಹ್ಮಣೋ ಯಥಾ ॥೨೬೪॥**

**ಆರಣ್ಯಕಂ ಚ ವೇದೇಭ್ಯ ಓಷಧೀಭ್ಯೋಽಮೃತಂ ಯಥಾ ।**
**ಹ್ರದಾನಾಮುದಧಿಃ ಶ್ರೇಷ್ಠೋ ಗೌರ್ವರಿಷ್ಠಾ ಚತುಷ್ಪದಾಮ್ ।**
**ಅಥೈತಾನಿತಿಹಾಸಾನಾಂ ತಥಾ ಭಾರತಮುಚ್ಯತೇ ॥೨೬೫॥**

ಅನುಕ್ರಮಣಿಕಾಧ್ಯಾಯವು ಭಾರತದ ಶರೀರವಿದ್ದಂತೆ. ಇದು ಸತ್ಯವಾದುದು ಮತ್ತು ಅಮೃತಪ್ರಾಯವಾದುದು. ಬೆಣ್ಣೆಯು ಮೊಸರಿನ ಸಾರವಾಗಿರುವಂತೆ–ಮನುಷ್ಯರಲ್ಲಿ ಬ್ರಾಹ್ಮಣನು ಶ್ರೇಷ್ಠನಾಗಿರುವಂತೆ–ವೇದಗಳಲ್ಲಿ ಉಪನಿಷತ್ತುಗಳಂತೆ–ಔಷಧಗಳಲ್ಲಿನ ಅಮೃತದಂತೆ–ಮಹಾಭಾರತದಲ್ಲಿ ಅನುಕ್ರಮಣಿಕಾಧ್ಯಾಯವು ಶ್ರೇಷ್ಠವಾದುದು. ಸರೋವರಗಳಲ್ಲಿ ಸಮುದ್ರವು ಶ್ರೇಷ್ಠವಾಗಿರುವಂತೆ–ಚತುಷ್ಪಾದಪ್ರಾಣಿಗಳಲ್ಲಿ ಹಸುವು ಶ್ರೇಷ್ಠವಾಗಿರುವಂತೆ, ಇತಿಹಾಸಗಳಲ್ಲಿ ಭಾರತವು ಶ್ರೇಷ್ಠವಾದುದು.

**ಯಶ್ಚೈನಂ ಶ್ರಾವಯೇಚ್ಛ್ರಾದ್ಧೇ ಬ್ರಾಹ್ಮಣಾನ್ಪಾದಮನ್ತತಃ ।**
**ಅಕ್ಷಯ್ಯಮನ್ನಪಾನಂ ವೈ ಪಿತೄಂಸ್ತಸ್ಯೋಪತಿಷ್ಠತೇ ॥೨೬೬॥**

ಶ್ರಾದ್ಧದಲ್ಲಿ–ಬ್ರಾಹ್ಮಣಭೋಜನಕಾಲದಲ್ಲಿ ಈ ಅಧ್ಯಾಯವನ್ನು ಅಥವಾ ಒಂದು ಶ್ಲೋಕವನ್ನಾದರೂ ಆಮಂತ್ರಿತಬ್ರಾಹ್ಮಣರ ಸಮ್ಮುಖದಲ್ಲಿ ಯಾವನು ಪಠಿಸುವನೋ–ಅಂತಹವನ ಪಿತೃಗಳು ಅಕ್ಷಯವಾದ ಅನ್ನ-ಪಾನಗಳನ್ನು ಪಡೆಯುತ್ತಾರೆ.

ಅತಿರಹಸ್ಯವಾಗಿರುವ ವೇದಾರ್ಥಗಳನ್ನು ತಿಳಿಯಲು ಇತಿಹಾಸ-ಪುರಾಣಗಳ ಅಧ್ಯಯನವು ಬಹುಮುಖ್ಯವಾದುದು. ಋಷಿಸತ್ತಮರೇ!

**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಹರಿಷ್ಯತಿ ॥೨೬೭॥**

ಇತಿಹಾಸ-ಪುರಾಣಗಳ ಮೂಲಕವಾಗಿ ವೇದಗಳಲ್ಲಿರುವ ರಹಸ್ಯಾರ್ಥಗಳನ್ನು ವಿಸ್ತರಿಸಿ ಪ್ರಕಟಪಡಿಸಬೇಕು. ಇತಿಹಾಸ-ಪುರಾಣಗಳನ್ನು ಅಧ್ಯಯನ ಮಾಡದೇ ಇರತಕ್ಕ ಅಲ್ಪವಿದ್ಯಾವಂತನೊಬ್ಬನು ವೇದವನ್ನು ಅರ್ಥಮಾಡಲು ಹೋಗಿ ಅಪಾರ್ಥಮಾಡುವುದರ ಮೂಲಕ ತನ್ನನ್ನು ಧ್ವಂಸಮಾಡಿಬಿಡುವನೆಂದು ವೇದವು ಭಯಪಡುತ್ತದೆ. ( ಆದುದರಿಂದ ವೇದಾರ್ಥವನ್ನು ತಿಳಿಯಲಿಚ್ಛಿಸುವವರು ಪುರಾಣೇತಿಹಾಸಗಳ ಅಧ್ಯಯನವನ್ನು ಮಾಡಲೇಬೇಕು. )

**ಕಾರ್ಷ್ಣಂ ವೇದಮಿಮಂ ವಿದ್ವಾಞ್ಶ್ರಾವಯಿತ್ವಾರ್ಥಮಶ್ನುತೇ ॥೨೬೮॥**

ಕೃಷ್ಣದ್ವೈಪಾಯನಪ್ರಣೀತವಾದ ಈ ವೇದವನ್ನು ಮತ್ತೊಬ್ಬರಿಗೆ ಹೇಳಿದ್ದೇ ಆದರೆ ಶ್ರಾವಕನು ಸಕಲಮನೋವಾಂಛಿತಗಳನ್ನೂ ಪಡೆದುಕೊಳ್ಳುತ್ತಾನೆ. ಮಹಾಭಾರತದ ಶ್ರವಣ-ಪಠನಗಳಿಂದ ಭ್ರೂಣಹತ್ಯಾದಿ ಮಹಾಪಾಪಗಳೂ ವಿನಾಶಹೊಂದುತ್ತವೆ. ಯಾವನು ಈ ಅನುಕ್ರಮಣಿಕಾಧ್ಯಾಯವನ್ನು ಪರ್ವಕಾಲಗಳಲ್ಲಿ ಪಠನಮಾಡುತ್ತಾನೆಯೋ–ಅಂತಹವನಿಗೆ ಮಹಾಭಾರತವನ್ನೇ ಪೂರ್ಣಪಾಠಮಾಡಿದ ಫಲವುಂಟಾಗುವುದೆಂಬುದು ನನ್ನ ಅಭಿಪ್ರಾಯವಾಗಿದೆ. ಋಷಿಪ್ರೋಕ್ತವಾದ ಈ ಮಹಾಭಾರತವನ್ನು ಯಾವನು ಶ್ರದ್ಧಾ-ಭಕ್ತಿಸಮನ್ವಿತನಾಗಿ ಕೇಳುತ್ತಾನೆಯೋ–ಅಂತಹವನು ದೀರ್ಘಾಯುಷ್ಮಂತನಾಗಿ, ಕೀರ್ತಿಮಂತನಾಗಿ ಈ ಭೂಮಿಯಲ್ಲಿ ಬಾಳಿ, ಮರಣಾನಂತರದಲ್ಲಿ ಸ್ವರ್ಗವನ್ನೂ ಪಡೆದುಕೊಳ್ಳುತ್ತಾನೆ.

ಮಹಾಭಾರತವು ವೇದಗಳಿಗಿಂತಲೂ ಮಹತ್ವಪೂರ್ಣವಾದುದೆಂದು ದೇವತೆಗಳೂ ನಿಶ್ಚಯಿಸಿದ್ದಾರೆ :

**ಏಕತಶ್ಚತುರೋ ವೇದಾನ್ಭಾರತಂ ಚೈತದೇಕತಃ ।**
**ಪುರಾ ಕಿಲ ಸುರೈಃ ಸರ್ವೈಃ ಸಮೇತ್ಯ ತುಲಯಾ ಧೃತಮ್ ॥೨೭೧॥**
**ಚತುರ್ಭ್ಯಃ ಸರಹಸ್ಯೇಭ್ಯೋ ವೇದೇಭ್ಯೋ ಹ್ಯಧಿಕಂ ಯದಾ ।**
**ತದಾ ಪ್ರಭೃತಿ ಲೋಕೇಽಸ್ಮಿನ್ಮಹಾಭಾರತಮುಚ್ಯತೇ ।**
**ಮಹತ್ತ್ವೇ ಚ ಗುರುತ್ವೇ ಚ ಧ್ರಿಯಮಾಣಂ ಯತೋಽಧಿಕಮ್॥೨೭೨॥**

ಹಿಂದೆ ದೇವತೆಗಳು ನಾಲ್ಕು ವೇದಗಳನ್ನೂ ಮತ್ತು ಭಾರತವನ್ನೂ ತೂಗಲು ತಕ್ಕಡಿಯೊಂದನ್ನು ಕಲ್ಪಿಸಿ, ಅವುಗಳನ್ನು ಬೇರೆ-ಬೇರೆ ತಟ್ಟೆಗಳಲ್ಲಿಟ್ಟು ತೂಗಲಾಗಿ, ರಹಸ್ಯಗಳಿಂದ ಕೂಡಿರುವ ನಾಲ್ಕು ವೇದಗಳಿಗಿಂತಲೂ ಭಾರತವನ್ನಿಟ್ಟಿದ್ದ ತಟ್ಟೆಯೇ ಭಾರದಿಂದಾಗಿ ಕೆಳಗೆ ನಿಂತಿತು. ಅಂದಿನಿಂದ ಇದಕ್ಕೆ ಮಹಾಭಾರತವೆಂದು ಹೆಸರಾಯಿತು. ಮಹತ್ವದಿಂದಲೂ, ಗೌರವ ದಿಂದಲೂ ಮತ್ತು ಭಾರದಿಂದಲೂ ಇದು ವೇದಗಳಿಗಿಂತಲೂ ಅಧಿಕ ವಾಯಿತು.

**ಮಹತ್ತ್ವಾದ್ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ।**
**ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥೨೭೪॥**

ಅತಿಮಹತ್ವದಿಂದ ಕೂಡಿರುವ ವಿಷಯಗಳ ಸಂಗ್ರಹವಿರುವುದ ರಿಂದಲೂ ಮತ್ತು (ಗ್ರಂಥವು ಲಕ್ಷಶ್ಲೋಕಗಳನ್ನೊಳಗೊಂಡಿದ್ದು) ಭಾರ ವಾಗಿರುವುದರಿಂದಲೂ ಇದನ್ನು ಮಹಾಭಾರತವೆಂದು ಕರೆದಿದ್ದಾರೆ. ಈ ರೀತಿ ಈ ಗ್ರಂಥದ ನಿರ್ವಚನವನ್ನು ಯಾವನು ತಿಳಿಯುತ್ತಾನೆಯೋ–ಅವನು ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

ಆದುದರಿಂದ ಇಂತಹ ಮಹಿಮಾನ್ವಿತವಾದ ಮಹಾಭಾರತವನ್ನು ಯಾರು ಓದುವರೋ, ಯಾರು ಕೇಳುವರೋ–ಅವರು ತಮ್ಮ ನಡೆ-ನುಡಿ ಗಳಲ್ಲಿ ಪರಿಶುದ್ಧರಾಗುವರಲ್ಲದೇ ಜ್ಞಾನಿಗಳೂ, ವಿಜ್ಞಾನಿಗಳೂ, ಪಾಪರಹಿ ತರೂ ಆಗುವರು.

ಮಹರ್ಷಿಗಳೇ! ಈ ಮಹಾಭಾರತವನ್ನು ಶುದ್ಧಾಂತರಂಗರಾಗಿ ಏಕಾ ಗ್ರತೆಯಿಂದ ಅಧ್ಯಯನಮಾಡಬೇಕು. ಚಿತ್ತೈಕಾಗ್ರತೆಯಿಂದ ಸತ್ಸಂಕಲ್ಪದಿಂದ ಮಾಡದ ಯಾವ ಕಾರ್ಯವೂ ವ್ಯರ್ಥವೇ ಸರಿ.

**ತಪೋ ನ ಕಲ್ಕೋಽಧ್ಯಯನಂ ನ ಕಲ್ಕಃ**
**ಸ್ವಾಭಾವಿಕೋ ವೇದವಿಧಿರ್ನ ಕಲ್ಕಃ ।**

ಪ್ರಸಹ್ಯ ವಿತ್ತಾಹರಣಂ ನ ಕಲ್ಕ-
ಸ್ತಾನ್ಯೇವ ಭಾವೋಪಹತಾನಿ ಕಲ್ಕಃ ॥೨೭೫॥

ಆತ್ಮೋದ್ಧಾರಕ್ಕಾಗಿ ತಪಸ್ಸನ್ನು ಮಾಡುವುದು ದೋಷವೆನಿಸುವುದಿಲ್ಲ. ತತ್ತ್ವಜ್ಞಾನವನ್ನು ತಿಳಿದುಕೊಳ್ಳಲು ಮಾಡುವ ಶಾಸ್ತ್ರಗಳ ಅಧ್ಯಯನವೂ ದೋಷವೆನಿಸುವುದಿಲ್ಲ. ಸ್ವಾಭಾವಿಕವಾದ ವೇದೋಕ್ತವಿಧಿಗಳನ್ನು (ಔಪಾಸನ, ಅಗ್ನಿಹೋತ್ರ, ವೈಶ್ವದೇವಾದಿಗಳನ್ನು) ಆಚರಿಸುವುದೂ ದೋಷವೆನಿಸುವುದಿಲ್ಲ. ಕಷ್ಟಪಟ್ಟು ಧನವನ್ನಾರ್ಜಿಸುವುದೂ ದೋಷವೆನಿಸುವುದಿಲ್ಲ. ಆದರೆ ಈ ಎಲ್ಲ ಕ್ರಿಯೆಗಳನ್ನೂ (ತಪಸ್ಸು, ಅಧ್ಯಯನ, ವೇದವಿಹಿತಕರ್ಮ, ವಿತ್ತಸಂಚಯನಗಳನ್ನು) ಬೇರೆಯ ಉದ್ದೇಶದಿಂದ ಮಾಡಿದರೆ ದೋಷಪೂರ್ಣವಾಗುತ್ತವೆ. ಅರ್ಥಾತ್ ದುಷ್ಟವಾದ ಸಂಕಲ್ಪದಿಂದ ತಪಸ್ಸನ್ನು ಮಾಡುವುದು ದೋಷವೆನಿಸುತ್ತದೆ. ಶಾಸ್ತ್ರಾಧ್ಯಯನವನ್ನು ಪ್ರತಿಷ್ಠೆಯ ಸಾಧನೆಗಾಗಿಯೇ ಮಾಡುವುದು ದೋಷವೆನಿಸುತ್ತದೆ. ವೇದವಿಹಿತಕರ್ಮಗಳನ್ನು ಮಾಡಿದರೂ ಸಂಕಲ್ಪವು ಕುತ್ಸಿತವಾಗಿದ್ದರೆ ದೋಷವೆನಿಸುತ್ತದೆ. ಕಷ್ಟಪಟ್ಟು ಧನಾರ್ಜನೆಯನ್ನು ಮಾಡುವಾಗಲೂ ದುರ್ವೃತ್ತಿಯಿಂದ ಮಾಡುವ ಧನಾರ್ಜನೆಯು ದೋಷವೆನಿಸುತ್ತದೆ. ಹಾಗೆಯೇ ಮಹಾಭಾರತವನ್ನು ಅಧ್ಯಯನ ಮಾಡುವಾಗಲೂ ಏಕಾಗ್ರತೆಯಿಂದಿರಬೇಕಲ್ಲದೇ ಭಾವನೆಯೂ ಪರಿಶುದ್ಧವಾಗಿರಬೇಕು. ಹಾಗಿದ್ದು ಮಹಾಭಾರತವನ್ನು ಶ್ರವಣಮಾಡಿದರೆ ಮಹಾಫಲದಾಯಕವಾಗುತ್ತದೆ.”

ಗನೆಯ ಅಧ್ಯಾಯವು ಮುಗಿಯಿತು.

೨ನೆಯ ಅಧ್ಯಾಯ ಪರ್ವಸಂಗ್ರಹಪರ್ವ

## ಸಮಂತಪಂಚಕಕ್ಷೇತ್ರವರ್ಣನೆ : ಅಕ್ಷೌಹಿಣೀಸೇನೆಯ ಪ್ರಮಾಣ : ಮಹಾಭಾರತದಲ್ಲಿ ವರ್ಣಿತವಾಗಿರುವ ಪರ್ವಗಳಲ್ಲಿನ ಸಂಕ್ಷಿಪ್ತ ಪರಿಚಯ : ಮಹಾಭಾರತದ ಶ್ರವಣ-ಪಠನಗಳ ಫಲ

ನೈಮಿಷಾರಣ್ಯವಾಸಿಗಳಾದ ಋಷಿಗಳು ಸೌತಿಗಳನ್ನು ಪ್ರಾರ್ಥಿಸಿದರು :

ಸಮನ್ತಪಞ್ಚಕಮಿತಿ ಯದುಕ್ತಂ ಸೂತನನ್ದನ ।
ಏತತ್ಸರ್ವಂ ಯಥಾತತ್ತ್ವಂ ಶ್ರೋತುಮಿಚ್ಛಾಮಹೇ ವಯಮ್ ॥೧॥

"ಸೂತನಂದನರೇ! ಸಮಂತಪಂಚಕವೆಂದು ತಾವು ಯಾವುದನ್ನು ಹೇಳಿದಿರೋ–ಅದರ ವಿಷಯವಾಗಿಯೂ ಮತ್ತು ಅದಕ್ಕೆ ಸಂಬಂಧಿಸಿದಂತೆ ಅಲ್ಲಿರುವ ಇತರ ಪ್ರದೇಶಗಳ ವಿಷಯವಾಗಿಯೂ ಯಥಾವತ್ತಾಗಿ ನಾವು ತಮ್ಮಿಂದ ಕೇಳಿ ತಿಳಿದುಕೊಳ್ಳಬೇಕೆಂದಿದ್ದೇವೆ."

ಸೌತಿಗಳು ಹೇಳುತ್ತಾರೆ :

"ಎಲೈ ವಿಪ್ರಸತ್ತಮರೇ! ನಾನು ಹೇಳಲಿರುವ ಶುಭಕರವಾದ ಕಥೆಗಳನ್ನೂ ಮತ್ತು ಸಮಂತಪಂಚಕಕ್ಷೇತ್ರದ ವರ್ಣನೆಯನ್ನೂ ಕೇಳಿರಿ :

ತ್ರೇತಾ ಮತ್ತು ದ್ವಾಪರಯುಗಗಳ ಸಂಧಿಕಾಲದಲ್ಲಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಪರಶುರಾಮನು ಕ್ಷತ್ರಿಯರ ಮೇಲೆ ತನಗುಂಟಾದ ಕೋಪದಿಂದ ಪ್ರಚೋದಿತನಾಗಿ ಹಲವು ಬಾರಿ ಕ್ಷತ್ರಿಯರನ್ನು ಸಂಹಾರಮಾಡಿದನು. ಯಜ್ಞೇಶ್ವರನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಪರಶುರಾಮನು ತನ್ನ ಭುಜಬಲ-ಪರಾಕ್ರಮಗಳಿಂದ ಸರ್ವಕ್ಷತ್ರಿಯರನ್ನೂ ಧ್ವಂಸಮಾಡಿ ಸಮಂತ ಪಂಚಕಕ್ಷೇತ್ರದಲ್ಲಿ ಐದು ರಕ್ತಸರೋವರಗಳನ್ನು ನಿರ್ಮಿಸಿದನು.

ಕೋಪಾವಿಷ್ಟನಾಗಿದ್ದ ಪರಶುರಾಮನು ಆ ರಕ್ತದಿಂದಲೇ ತನ್ನ ಪಿತೃ ದೇವತೆಗಳಿಗೆ ತರ್ಪಣವನ್ನು ಕೊಟ್ಟನೆಂದೂ ಕೇಳಿದ್ದೇವೆ. ಒಮ್ಮೆ ಋಚೀಕನೇ ಮೊದಲಾದ ಪಿತೃದೇವತೆಗಳು ಅವನನ್ನು ಸಮೀಪಿಸಿ–"ವತ್ಸ, ಪರಶುರಾಮ! ನಿನ್ನ ಪರಾಕ್ರಮಕ್ಕೂ ಮತ್ತು ನೀನು ನಮ್ಮಲ್ಲಿಟ್ಟಿರುವ ಪೂಜ್ಯ ಭಾವನೆಗೂ ಮೆಚ್ಚಿದ್ದೇವೆ. ನಿನಗೆ ಮಂಗಳವಾಗಲಿ. ಮಹಾದ್ಯುತಿಮಂತನೇ! ನೀನು ಯಾವ ವರವನ್ನಪೇಕ್ಷಿಸುವೆಯೋ ಆ ವರವನ್ನು ಕೇಳು"–ಎಂದರು. ಪರಶುರಾಮನು ವಿನೀತನಾಗಿ ನಮಸ್ಕರಿಸಿ ದೈನ್ಯಭಾವದಿಂದ ಕೈಜೋಡಿಸಿ ನಿಂತು- "ಪಿತೃದೇವತೆಗಳು ನನ್ನ ಮೇಲೆ ಕರುಣೆಯುಳ್ಳವರಾಗಿದ್ದರೆ-ನಾನು ಕೋಪಾ ವಿಷ್ಟನಾಗಿ ಕ್ಷತ್ರಿಯರನ್ನು ಕೊಂದುದರಿಂದ ಸಂಭವಿಸಿರುವ ಪಾಪವು ಪರಿಹಾರಗೊಳ್ಳಲಿ ಮತ್ತು ನಾನು ನಿರ್ಮಿಸಿರುವ ಈ ರಕ್ತಸರೋವರಗಳು ಪರಮಪಾವನವಾದ ಸರೋವರಗಳೆಂದು ಪ್ರಸಿದ್ಧಿಯನ್ನು ಹೊಂದಲಿ"– ಎಂದು ಪ್ರಾರ್ಥಿಸಿದನು. ಪಿತೃದೇವತೆಗಳು 'ತಥಾಸ್ತು' ಎಂದು ಹೇಳಿ, ಕ್ಷತ್ರಿ ಯರನ್ನು ಕ್ಷಮಿಸಿಬಿಡಬೇಕೆಂದೂ ಮತ್ತು ಅವರನ್ನು ಸಂಹಾರಮಾಡ ಕೂಡದೆಂದೂ ಪರಶುರಾಮನಿಗೆ ಹೇಳಿದರು. ಪಿತೃದೇವತೆಗಳ ಮಾತಿನಂತೆ

ಪರಶುರಾಮನು ಯುದ್ಧದಿಂದ ವಿರಮಿಸಿದನು. ಆ ಐದು ರಕ್ತಸರೋವರಗಳ ಬಳಿಯಲ್ಲಿದ್ದ ದೇಶವೂ ಸಮಂತಪಂಚಕಕ್ಷೇತ್ರವೆಂದೇ ಮುಂದೆ ಪ್ರಸಿದ್ಧಿ ಹೊಂದಿತು. ಆ ಕ್ಷೇತ್ರವು ಬಹಳ ಪುಣ್ಯಪ್ರದವಾದುದು.

**ಯೇನ ಲಿಙ್ಗೇನ ಯೋ ದೇಶೋ ಯುಕ್ತಃ ಸಮುಪಲಕ್ಷ್ಯತೇ ।**
**ತೇನೈವ ನಾಮ್ನಾಂ ತಂ ದೇಶಂ ವಾಚ್ಯಮಾಹುರ್ಮನೀಷಿಣಃ ॥೧೨॥**

ಐದು ರಕ್ತಸರೋವರಗಳಿರುವ ಪ್ರದೇಶವನ್ನು ಸಮಂತಪಂಚಕಕ್ಷೇತ್ರವೆಂದು ಕರೆದಂತೆ–ಯಾವ ಒಂದು ಚಿಹ್ನೆಯಿಂದ ಯಾವ ಒಂದು ದೇಶವು ಕೂಡಿರುವುದೋ, ಆ ಚಿಹ್ನೆಯ ಹೆಸರಿನಿಂದಲೇ ಆ ದೇಶವನ್ನು ಅಥವಾ ಆ ಪ್ರದೇಶವನ್ನು ಕರೆಯಬೇಕೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ತ್ರೇತಾ ಮತ್ತು ದ್ವಾಪರಯುಗಗಳ ಸಂಧಿಕಾಲದಲ್ಲಿ ಸಮಂತಪಂಚಕಕ್ಷೇತ್ರದ ನಿರ್ಮಾಣವಾಯಿತು. ದ್ವಾಪರ ಮತ್ತು ಕಲಿಯುಗಗಳ ಸಂಧಿಕಾಲದಲ್ಲಿ ಆ ಮಹಾಕ್ಷೇತ್ರದಲ್ಲಿಯೇ ಕುರು-ಪಾಂಡವಸೇನೆಗಳ ನಡುವೆ ಮಹಾಯುದ್ಧವಾಯಿತು. ಪರಮಧರ್ಮಿಷ್ಠವಾದ [1]ಭೂದೋಷವರ್ಜಿತವಾದ ಸಮಂತಪಂಚಕಕ್ಷೇತ್ರಕ್ಕೆ ಹದಿನೆಂಟು ಅಕ್ಷೌಹಿಣೀಸೈನ್ಯಗಳು ಯುದ್ಧಮಾಡುವ ಆಸಕ್ತಿಯಿಂದ ಆಗಮಿಸಿದುವು. ಬ್ರಾಹ್ಮಣೋತ್ತಮರೇ! ಸೈನಿಕರೆಲ್ಲರೂ ಅಲ್ಲಿಗೆ ಯುದ್ಧಕ್ಕಾಗಿ ಆಗಮಿಸಿ ಅಲ್ಲಿಯೇ ನಿಧನಹೊಂದಿದರು. ಆದುದರಿಂದಲೇ ಆ ದೇಶಕ್ಕೆ [2]ಸಮಂತಪಂಚಕವೆಂಬ ಹೆಸರು ನಿಷ್ಪನ್ನವಾಗಿದೆ. ಬ್ರಾಹ್ಮಣೋತ್ತಮರೇ! ಮೂರು ಲೋಕಗಳಲ್ಲಿಯೂ ಆ ಸಮಂತಪಂಚಕ

---

1 ಹಳ್ಳ-ತಿಟ್ಟುಗಳಿಂದ ಕೂಡಿರುವುದು ; ಮುಳ್ಳುಗಳುಳ್ಳ ವೃಕ್ಷಗಳಿಂದಲೂ, ಬಳ್ಳಿಗಳಿಂದಲೂ ಆವೃತವಾಗಿರುವುದು : ಕಲ್ಲುಬಂಡೆಗಳಿಂದ ಕೂಡಿರುವುದು–ಇವುಗಳು ಭೂದೋಷಗಳೆಂದು ಪರಿಗಣಿತವಾಗಿದೆ.

2 **ಸಮೇತಾನಾಂ ಅನ್ತೋ ಯಸ್ಮಿನ್ ಸಃ** = ಅಲ್ಲಿ ಯುದ್ಧದ ಕಾರಣದಿಂದ ಸೇರಿದವರೆಲ್ಲರಿಗೂ ಅಲ್ಲಿಯೇ ಅಂತ್ಯವಾದುದರಿಂದ ಅದು ಸಮನ್ತ ; ಐದು ರುಧಿರಸರೋವರಗಳಿಂದ ಕೂಡಿರುವುದರಿಂದ ಪಞ್ಚಕವೂ ಆಗಿದೆ. ಆದುದರಿಂದ ಅದು ಸಮನ್ತಪಞ್ಚಕಕ್ಷೇತ್ರವಾಗಿರುತ್ತದೆ. ಆ ಪ್ರದೇಶವು ಪುಣ್ಯತಮವಾಗಿಯೂ, ರಮಣೀಯವಾಗಿಯೂ ಇರುವುದೆಂದು ಹೇಳಲ್ಪಟ್ಟಿದೆ.

ಕ್ಷೇತ್ರವು ಯಾವ ಕಾರಣದಿಂದ ಪ್ರಸಿದ್ಧಿಹೊಂದಿತೆಂಬ ವಿಷಯವನ್ನು ನಿಮಗೆ ಸವಿಸ್ತಾರವಾಗಿ ಹೇಳಿರುತ್ತೇನೆ."

ಶೌನಕಾದಿ ಮಹರ್ಷಿಗಳು ಪ್ರಶ್ನಿಸುತ್ತಾರೆ :

"ಸೌತಿಗಳೇ! ತಾವು 'ಅಕ್ಷೌಹಿಣೀ' ಎಂಬುದಾಗಿ ಹೇಳಿದಿರಲ್ಲವೇ! ಅಕ್ಷೌಹಿಣಿಗೆ ಸಂಬಂಧಿಸಿದಂತೆ ಎಲ್ಲ ವಿಷಯಗಳನ್ನೂ ತಮ್ಮಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇವೆ. ಅಕ್ಷೌಹಿಣಿಯ ಪರಿಮಾಣವು ಎಷ್ಟು? ಕಾಲಾಳುಗಳು, ಕುದುರೆಗಳು, ಆನೆಗಳು ಮತ್ತು ರಥಗಳು ಎಷ್ಟು ಸೇರಿದರೆ ಒಂದು ಅಕ್ಷೌಹಿಣಿಯಾಗುತ್ತದೆ?–ಈ ಎಲ್ಲವೂ ತಮಗೆ ತಿಳಿದಿರುವುದರಿಂದ ಎಲ್ಲ ವಿಷಯಗಳನ್ನೂ ನಮಗೆ ಯಥಾವತ್ತಾಗಿ ಹೇಳಿರಿ."

ಸೌತಿಗಳು ಹೇಳುತ್ತಾರೆ :

**ಏಕೋ ರಥೋ ಗಜಶ್ಚೈಕೋ ನರಾಃ ಪಞ್ಚ ಪದಾತಯಃ ।**
**ತ್ರಯಶ್ಚ ತುರಗಾಸ್ತಜ್ಞೈಃ ಪತ್ತಿರಿತ್ಯಭಿಧೀಯತೇ ॥೧೯॥**

"೧ ರಥ, ೧ ಆನೆ, ೫ ಕಾಲಾಳುಗಳು, ೩ ಕುದುರೆಗಳು = ೧ ಪತ್ತಿ.

**ಪತ್ತಿಂ ತು ತ್ರಿಗುಣಾಮೇತಾಮಾಹುಃ ಸೇನಾಮುಖಂ ಬುಧಾಃ।**
**ತ್ರೀಣಿ ಸೇನಾಮುಖಾನ್ಯೇಕೋ ಗುಲ್ಮ ಇತ್ಯಭಿಧೀಯತೇ ॥೨೦॥**

೩ ಪತ್ತಿಗಳು=೧ ಸೇನಾಮುಖ ; ೩ ಸೇನಾಮುಖಗಳು=೧ ಗುಲ್ಮ.

**ತ್ರಯೋ ಗುಲ್ಮಾ ಗಣೋ ನಾಮ ವಾಹಿನೀ ತು ಗಣಾಸ್ತ್ರಯಃ ।**
**ಸ್ಮೃತಾಸ್ತಿಸ್ರಸ್ತು ವಾಹಿನ್ಯಃ ಪೃತನೇತಿ ವಿಚಕ್ಷಣೈಃ ॥೨೧॥**

೩ ಗುಲ್ಮಗಳು=೧ ಗಣ ; ೩ ಗಣಗಳು=೧ ವಾಹಿನೀ ; ೩ ವಾಹಿನಿಗಳು= ೧ ಪೃತನಾ.

**ಚಮೂಸ್ತು ಪೃತನಾಸ್ತಿಸ್ರಸ್ತಿಸ್ರಶ್ಚಮ್ವಸ್ತ್ವನೀಕಿನೀ ।**
**ಅನೀಕಿನೀಂ ದಶಗುಣಾಂ ಪ್ರಾಹುರಕ್ಷೌಹಿಣೀಂ ಬುಧಾಃ ॥೨೨॥**

೩ ಪೃತನಾ=೧ ಚಮೂ ; ೩ ಚಮೂಗಳು=೧ ಅನೀಕಿನೀ ; ೧೦ ಅನೀಕಿನಿಗಳು = ೧ ಅಕ್ಷೌಹಿಣೀ.

ಸಂಖ್ಯಾಶಾಸ್ತ್ರಪರಿಣತರಾದವರು ಇದನ್ನು 'ಅಕ್ಷೌಹಿಣೀ' ಎಂದು ಕರೆಯುತ್ತಾರೆ. ತಪೋಧನರೇ! ಅಕ್ಷೌಹಿಣಿಯ ಸಂಪೂರ್ಣಕೋಷ್ಠಕವನ್ನೂ ನಿಮಗೆ ಹೇಳಿರುತ್ತೇನೆ. ಕುರು-ಪಾಂಡವಸೈನ್ಯಗಳು ಈ ಸಂಖ್ಯಾನುಸಾರ ವಾಗಿಯೇ ಇದ್ದುವು. ಎರಡು ಪಕ್ಷಗಳ ಸೈನ್ಯಗಳೂ ಸೇರಿ ಒಟ್ಟು ಹದಿನೆಂಟು ಅಕ್ಷೌಹಿಣಿಗಳಿದ್ದುವು.*

ಪರಮಾದ್ಭುತವಾದ ಕರ್ಮವನ್ನು ಮಾಡಿತೋರಿಸುವ ಕಾಲದ ಪ್ರೇರಣೆಯಿಂದಾಗಿ–ಕೌರವರನ್ನು ನಿಮಿತ್ತವನ್ನಾಗಿ ಮಾಡಿಕೊಂಡು–ಮೇಲೆ ಹೇಳಿದ ಹದಿನೆಂಟು ಅಕ್ಷೌಹಿಣೀಸೈನ್ಯಗಳೂ ಸಮಂತಪಂಚಕಕ್ಷೇತ್ರದಲ್ಲಿ ಸೇರಿ ಅಲ್ಲಿಯೇ ನಿಧನಹೊಂದಿದುವು.

ಹದಿನೆಂಟು ದಿನಗಳು ನಡೆದ ಕೌರವ-ಪಾಂಡವರ ಯುದ್ಧದಲ್ಲಿ ಭೀಷ್ಮನು ಹತ್ತು ದಿನಗಳ ಪರ್ಯಂತವಾಗಿ ಕೌರವಸೇನೆಯ ದಂಡನಾಯಕತ್ವವನ್ನು ವಹಿಸಿ ಯುದ್ಧಮಾಡಿದನು. ದ್ರೋಣರು ಐದು ದಿನಗಳೂ, ಕರ್ಣನು ಎರಡು ದಿನಗಳೂ, ಶಲ್ಯನು ಅರ್ಧದಿನವೂ ದಂಡನಾಯಕತ್ವವನ್ನು ವಹಿಸಿ ಮರಣಹೊಂದಿದನಂತರದಲ್ಲಿ ಉಳಿದ ಅರ್ಧದಿವಸದಲ್ಲಿ ಭೀಮ- ದುರ್ಯೋಧನರ ನಡುವೆ ಗದಾಯುದ್ಧವು ನಡೆಯಿತು. ಹದಿನೆಂಟನೆಯ ದಿವಸದ ಅಂತ್ಯದಲ್ಲಿಯೇ (ರಾತ್ರಿಯಲ್ಲಿ) ಅಶ್ವತ್ಥಾಮಾ, ಕೃತವರ್ಮಾ ಮತ್ತು ಕೃಪಾಚಾರ್ಯರು–ಯುದ್ಧ ಮುಗಿಯಿತೆಂದು ನಿಶ್ಚಿಂತೆಯಿಂದ ಮಲಗಿದ್ದ ಯುಧಿಷ್ಠಿರನ ಅಳಿದುಳಿದ ಸೇನೆಯನ್ನೂ ಧ್ವಂಸಮಾಡಿಬಿಟ್ಟರು."

ಸೌತಿಗಳು ಮುಂದುವರಿದು ಹೇಳುತ್ತಾರೆ :

"ಶೌನಕರೇ! ನಾನು ತಮ್ಮ ಯಾಗಸಮಯದಲ್ಲಿ ವ್ಯಾಸಪ್ರಣೀತ

---

* ಈ ಸಂಖ್ಯೆಗಳ ಪ್ರಕಾರ ಒಂದು ಅಕ್ಷೌಹಿಣೀಸೈನ್ಯದಲ್ಲಿ ೨೧,೮೭೦ ರಥಗಳೂ ಮತ್ತು ಅಷ್ಟೇ ಸಂಖ್ಯೆಯ ಆನೆಗಳೂ ಇರುತ್ತವೆ. ಪದಾತಿಗಳ ಸಂಖ್ಯೆ ೧,೦೯,೩೫೦. ಕುದುರೆಗಳ ಸಂಖ್ಯೆ ೬೫,೬೧೦.

ಕುರುಕ್ಷೇತ್ರದಲ್ಲಿ ಹೋರಾಡಲು ಸಿದ್ಧವಾಗಿದ್ದ ಹದಿನೆಂಟು ಅಕ್ಷೌಹಿಣೀಸೈನ್ಯದ ವಿವರಣೆ :–

| | | | |
|---|---|---|---|
| ರಥಗಳು | ೩,೯೩,೬೬೦ | ಕಾಲಾಳುಗಳು | ೧೯,೬೮,೩೦೦ |
| ಆನೆಗಳು | ೩,೯೩,೬೬೦ | ಕುದುರೆಗಳು | ೧೧,೮೦,೯೮೦ |

ವಾದ ಯಾವ ಮಹಾಭಾರತವನ್ನು ಹೇಳಲುಪಕ್ರಮಿಸಿರುವೆನೋ ಅದೇ ಈ ಭಾರತವನ್ನು ಹಿಂದೆ ವ್ಯಾಸರ ಶಿಷ್ಯರಾದ, ಧೀಮಂತರಾದ ವೈಶಂಪಾಯನರು ಜನಮೇಜಯನ ಸರ್ಪಯಾಗದ ಅವಭೃಥಾನಂತರದಲ್ಲಿ (ಸರ್ಪಸತ್ರದಲ್ಲಿ) ವ್ಯಾಸರ ನಿರ್ದೇಶದಂತೆ ಪ್ರಪಂಚದ ಸಕಲರಾಜರ ವೀರ್ಯ ಮತ್ತು ಯಶಸ್ಸುಗಳ ಪ್ರಾಪ್ತಿಗಾಗಿ ಹೇಳಿದರು. ಪೌಷ್ಯ, ಪೌಲೋಮ ಮತ್ತು ಆಸ್ತೀಕಪರ್ವಾನುಕ್ರಮವಾಗಿ ವೈಶಂಪಾಯನರು ಮಹಾಭಾರತಕಥೆಯನ್ನು ಪ್ರವಚನಮಾಡಿದರು.

ಮಹರ್ಷಿಗಳೇ! ಮೋಕ್ಷಾರ್ಥಿಯು ಹೇಗೆ ವೈರಾಗ್ಯದ ಆಶ್ರಯವನ್ನು ಪಡೆಯುತ್ತಾನೆಯೋ–ಅದೇ ರೀತಿಯಲ್ಲಿ ಧೀಮಂತನಾದ ಮನುಷ್ಯನು, ತನ್ನ ಧರ್ಮಾರ್ಥ-ಕಾಮ-ಮೋಕ್ಷಸಾಧನೆಗಾಗಿ ಅಲೌಕಿಕವಾದ ಅರ್ಥವುಳ್ಳ, ವಿಚಿತ್ರವಾದ ಪದಜಾಲಗಳಿಂದ ಕೂಡಿರುವ, ಅನೇಕಾನೇಕ ಆಖ್ಯಾನಗಳ ನ್ನೊಳಗೊಂಡಿರುವ ಭಾರತವನ್ನು ಆಶ್ರಯಿಸುತ್ತಾನೆ. ತಿಳಿಯಬೇಕಾದ ವಸ್ತುಗಳಲ್ಲಿ ಅತಿಮುಖ್ಯವಾದುದು ಆತ್ಮವಸ್ತುವಾಗಿರುವಂತೆ–ಪ್ರಿಯವಾದ ವಸ್ತುಗಳಲ್ಲಿ ಪ್ರಾಣವು ಅತ್ಯಂತಪ್ರಿಯವಾದ ವಸ್ತುವಾಗಿರುವಂತೆ–ಸರ್ವಾ ಗಮಗಳಲ್ಲಿಯೂ ಇತಿಹಾಸಗಳಲ್ಲಿಯೂ ಶ್ರೇಷ್ಠತಮವಾದ ಇತಿಹಾಸವು ಈ ಮಹಾಭಾರತವಾಗಿದೆ.

**ಅನಾಶ್ರಿತ್ಯೇದಮಾಖ್ಯಾನಂ ಕಥಾ ಭುವಿ ನ ವಿದ್ಯತೇ ।**
**ಆಹಾರಮನಪಾಶ್ರಿತ್ಯ ಶರೀರಸ್ಯೇವ ಧಾರಣಮ್ ॥೩೭॥**

ಆಹಾರವನ್ನು ಸ್ವೀಕರಿಸದೇ ಶರೀರಧಾರಣೆಯು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಮಹಾಭಾರತವನ್ನು ಆಶ್ರಯಿಸದಿರುವ ಯಾವುದೊಂದು ಆಖ್ಯಾನವೂ ಈ ಪ್ರಪಂಚದಲ್ಲಿಲ್ಲ.

ಔನ್ನತ್ಯವನ್ನಪೇಕ್ಷಿಸುವ ಸೇವಕರು ತಮ್ಮ ಸ್ವಾಮಿಯನ್ನು ನಿರಂತರವಾಗಿ ಆಶ್ರಯಿಸುವಂತೆ–ಕೀರ್ತಿಕಾಮರಾದ ಕವಿಗಳು ಭಾರತವನ್ನಾಶ್ರಯಿಸಿ ಕಾವ್ಯ ಗಳನ್ನೂ, ನಾಟಕಗಳನ್ನೂ ರಚಿಸಿ ಕೀರ್ತಿವಂತರಾಗುತ್ತಾರೆ. ಲೌಕಿಕ-ವೈದಿಕಾತ್ಮಕವಾದ ಎಲ್ಲ ರೀತಿಯ ಜ್ಞಾನಪ್ರಕಾಶಕ್ಕೆ ಸ್ವರ-ವ್ಯಂಜನಾತ್ಮಕವಾದ ಸಮಸ್ತವಾಙ್ಮಯವೇ ಆಧಾರವಾಗಿರುವಂತೆ–ಐಹಿಕಾಮುಷ್ಮಿಕಸಂಬಂಧವಾದ ಉತ್ತಮವಿದ್ಯಾಬುದ್ಧಿಗಳಿಗೆ ಈ ಇತಿಹಾಸವು ಮುಖ್ಯಸಾಧನವಾಗಿದೆ.

ದ್ವಿಜಸತ್ತಮರೇ! ಈ ಮಹಾಭಾರತವು ಜ್ಞಾನದ ಭಂಡಾರವಾಗಿದೆ. ಇದರ ಅನೇಕಪ್ರಕರಣಗಳು ರಹಸ್ಯಾರ್ಥಗಳಿಂದ ಕೂಡಿವೆ. ವೇದಾರ್ಥಗಳು ಈ ಇತಿಹಾಸದ ಅನೇಕಸಂದರ್ಭಗಳಲ್ಲಿ ಪ್ರತಿಪಾದಿತವಾಗಿವೆ. ಇಂತಹ ಶ್ರೇಷ್ಠವಾದ ಇತಿಹಾಸದ ಪರ್ವಸಂಗ್ರಹಪರ್ವವನ್ನು ಕೇಳಿರಿ. ಮೊದಲು ಪರ್ವಗಳ ಅನುಕ್ರಮಣಿಕೆಯನ್ನು ಹೇಳಿ ಅನಂತರ ಪರ್ವಗಳಲ್ಲಿರುವ ವಿಷಯಗಳನ್ನು ಸಂಗ್ರಹಿಸಿ ಹೇಳುತ್ತೇನೆ :

**ಮಹಾಭಾರತದಲ್ಲಿರುವ ಪರ್ವಗಳು, ಉಪಪರ್ವಗಳು**

೧) **ಆದಿಪರ್ವ :** ( ಅನುಕ್ರಮಣಿಕಾ, ಪರ್ವಸಂಗ್ರಹ ) ಪೌಷ್ಯ, ಪೌಲೋಮ, ಆಸ್ತೀಕ, ಆದಿ-ಅಂಶಾವತರಣ, ಅದ್ಭುತವೂ ರೋಮಾಂಚಕಾರಿಯೂ ಆದ ಸಂಭವ, ಜತುಗೃಹದಾಹ, ಹಿಡಿಂಬವಧ, ಬಕವಧ, ಚೈತ್ರರಥ, ಸ್ವಯಂವರ, ವೈವಾಹಿಕ, ವಿದುರಾಗಮನ, ರಾಜ್ಯಲಂಭ, ಅರ್ಜುನವನವಾಸ, ಸುಭದ್ರಾಹರಣ, ಹರಣಾಹರಣ, ಖಾಂಡವದಾಹ, ಮಯದರ್ಶನ.

೨) **ಸಭಾಪರ್ವ :** ಮಂತ್ರಪರ್ವ ( ಸಭಾಕ್ರಿಯಾ ), ಲೋಕಪಾಲ ಸಭಾಖ್ಯಾನ, ರಾಜಸೂಯಸಮಾರಂಭ, ಜರಾಸಂಧವಧ, ದಿಗ್ವಿಜಯ, ರಾಜಸೂಯಿಕಾ, ಅರ್ಘಾಭಿಹರಣ, ಶಿಶುಪಾಲವಧ, ದ್ಯೂತ, ಅನುದ್ಯೂತ.

೩) **ವನಪರ್ವ :** ಆರಣ್ಯಕ, ಕಿರ್ಮೀರವಧ, ಅರ್ಜುನಾಭಿಗಮನ, ಈಶ್ವರಾರ್ಜುನರ ಯುದ್ಧದ ವರ್ಣನೆಯಿರುವ ಕೈರಾತ, ಇಂದ್ರಲೋಕಾಭಿಗಮನ, ನಲೋಪಾಖ್ಯಾನ, ತೀರ್ಥಯಾತ್ರಾ, ಜಟಾಸುರವಧ, ಯಕ್ಷ ಯುದ್ಧ, ನಿವಾತಕವಚಯುದ್ಧ, ಆಜಗರ, ಮಾರ್ಕಂಡೇಯಸಮಾಸ್ಯಾ, ದ್ರೌಪದೀ-ಸತ್ಯಭಾಮಾಸಂವಾದ, ಘೋಷಯಾತ್ರಾ, ಮೃಗಸ್ವಪ್ನೋದ್ಭವ, ವ್ರೀಹಿದ್ರೌಣಿಕ, ಐಂದ್ರದ್ಯುಮ್ನ, ದ್ರೌಪದೀಹರಣ, ಜಯದ್ರಥಮೋಕ್ಷಣ, ಸಾವಿತ್ರಿಯ ಪಾತಿವ್ರತ್ಯದ ಅದ್ಭುತವಾದ ಮಹಿಮೆ, ರಾಮೋಪಾಖ್ಯಾನ, ಕುಂಡಲಾಹರಣ, ಆರಣೇಯ.

೪) **ವೈರಾಟಪರ್ವ :** ಪಾಂಡವಪ್ರವೇಶ, ಸಮಯಪಾಲನ, ಕೀಚಕವಧ, ಗೋಗ್ರಹಣ, ಅಭಿಮನ್ಯು-ಉತ್ತರೆಯರ ವಿವಾಹ.

೫) **ಉದ್ಯೋಗಪರ್ವ :** ಸೇನೋದ್ಯೋಗ, ಸಂಜಯಯಾನ,

ಪ್ರಜಾಗರ, ಗುಹ್ಯವಾದ ಅಧ್ಯಾತ್ಮದರ್ಶನವಿರುವ ಸನತ್ಸುಜಾತ, ಯಾನ ಸಂಧಿ, ಭಗವದ್ಯಾನ, ಇದರಲ್ಲಿ ಮಾತಲಿಯ ಉಪಾಖ್ಯಾನ, ಗಾಲವಚರಿತ, ಸಾವಿತ್ರಿ, ವಾಮದೇವ ಮತ್ತು ವೈನ್ಯರ ಉಪಾಖ್ಯಾನಗಳಿವೆ. ಜಮದಗ್ನಿ ಮತ್ತು ಹದಿನಾರು ಮಂದಿ ರಾಜರ ಉಪಾಖ್ಯಾನಗಳೂ ಇವೆ. ಶ್ರೀಕೃಷ್ಣನ ಸಭಾ ಪ್ರವೇಶ, ವಿದುಲೆಯು ತನ್ನ ಮಗನಿಗೆ ಮಾಡಿದ ಉಪದೇಶ, ಯುದ್ಧೋ ದ್ಯೋಗ, ಸೈನ್ಯನಿರ್ಮಾಣ ಮತ್ತು ವಿಶ್ವೋಪಾಖ್ಯಾನಗಳೂ ಕ್ರಮಶಃ ಇಲ್ಲಿ ಹೇಳಲ್ಪಟ್ಟಿವೆ. ಈ ಸಂದರ್ಭದಲ್ಲಿಯೇ ಮಹಾತ್ಮನಾದ ಕರ್ಣನ ವಿವಾದ ಪರ್ವವೂ ಇದೆ. ಅನಂತರ ಸೇನಾನಿರ್ಯಾಣ, ಉಲೂಕದೂತಾಗಮನ, ರಥಾತಿರಥಸಂಖ್ಯಾನ, ಅಂಬೋಪಾಖ್ಯಾನ ಇವು ಈ ಪರ್ವದಲ್ಲಿ ಉಕ್ತವಾಗಿವೆ.

೬) ಭೀಷ್ಮಪರ್ವ (ಭೀಷ್ಮಾಭಿಷೇಚನ): ಜಂಬೂಖಂಡ ವಿನಿರ್ಮಾಣ, ಭೂಮಿಪರ್ವ (ಇದರಲ್ಲಿ ದ್ವೀಪಗಳ ವಿಸ್ತಾರವಾದ ವರ್ಣನೆ ಯಿದೆ.) ಅನಂತರ ಭಗವದ್ಗೀತಾ, ಭೀಷ್ಮವಧಪರ್ವಗಳಿವೆ.

೭) ದ್ರೋಣಪರ್ವ: ದ್ರೋಣಾಭಿಷೇಚನ, ಸಂಶಪ್ತಕವಧ, ಅಭಿಮನ್ಯುವಧ, ಪ್ರತಿಜ್ಞಾ, ಜಯದ್ರಥವಧ, ಘಟೋತ್ಕಚವಧ, ದ್ರೋಣ ವಧ, ನಾರಾಯಣಾಸ್ತ್ರಮೋಕ್ಷಣ.

೮) ಕರ್ಣಪರ್ವ :

೯) ಶಲ್ಯಪರ್ವ : ಹ್ರದಪ್ರವೇಶನ, ಗದಾಯುದ್ಧ, ಸಾರಸ್ವತಪರ್ವ.

೧೦) ಸೌಪ್ತಿಕಪರ್ವ : ಐಷೀಕ

೧೧) ಸ್ತ್ರೀಪರ್ವ : ಜಲಪ್ರದಾನ, ಸ್ತ್ರೀವಿಲಾಪ, ಶ್ರಾದ್ಧ, ಬ್ರಾಹ್ಮಣನ ವೇಷದಲ್ಲಿದ್ದ ಚಾರ್ವಾಕರಾಕ್ಷಸನ ನಿಗ್ರಹಣ, ಆಭಿಷೇಚನಿಕ, ಗೃಹಪ್ರವಿಭಾಗ.

೧೨) ಶಾಂತಿಪರ್ವ : ರಾಜಧರ್ಮ, ಆಪದ್ಧರ್ಮ, ಮೋಕ್ಷಧರ್ಮ.

೧೩) ಆನುಶಾಸನಿಕಪರ್ವ : ದಾನಧರ್ಮ, ಭೀಷ್ಮಸ್ವರ್ಗಾರೋಹಣ.

೧೪) ಅಶ್ವಮೇಧಿಕಪರ್ವ : ಅಶ್ವಮೇಧಯಾಗ, ಅಧ್ಯಾತ್ಮವಾಚಕ ವಾದ ಅನುಗೀತೆ.

೧೫) **ಆಶ್ರಮವಾಸಿಕಪರ್ವ :** ಆಶ್ರಮವಾಸ, ಪುತ್ರದರ್ಶನ, ನಾರದಾಗಮನ.

೧೬) ಘೋರವೂ ದಾರುಣವೂ ಆದ ಮೌಸಲಪರ್ವ.

೧೭) **ಮಹಾಪ್ರಸ್ಥಾನಿಕಪರ್ವ :** ಇದರಲ್ಲಿಯೇ ಶುಕಪ್ರಶ್ನಾಭಿಗಮನ, ಬ್ರಹ್ಮಪ್ರಶ್ನಾನುಶಾಸನ, ದುರ್ವಾಸನ ಪ್ರಾದುರ್ಭಾವ ಮತ್ತು ಮಾಯಾ ಸಂವಾದ ಎಂಬ ಪರ್ವಗಳೂ ಇವೆ.

೧೮) **ಸ್ವರ್ಗಾರೋಹಣಪರ್ವ**

ಈ ಹದಿನೆಂಟು ಪರ್ವಗಳೂ ಮತ್ತು ಅವುಗಳಲ್ಲಿನ ಉಪಪರ್ವಗಳೂ ಮುಗಿದನಂತರ ಖಿಲವೆಂದು ಹೇಳಲ್ಪಟ್ಟಿರುವ ಹರಿವಂಶವಿದೆ. ಅದರಲ್ಲಿ ಶ್ರೀಕೃಷ್ಣನ ಬಾಲಲೀಲೆ–ಕಂಸವಧೆಗಳು ಉಕ್ತವಾಗಿವೆ. ಇದರಲ್ಲಿಯೇ ಅದ್ಭುತ ವಾದ ಮತ್ತು ಮಹತ್ವಪೂರ್ಣವಾದ ಭವಿಷ್ಯಪರ್ವವಿದೆ. ಹೀಗೆ ಮಹಾತ್ಮರಾದ ವ್ಯಾಸರು ನೂರು ಪರ್ವಗಳನ್ನು ಹೇಳಿದ್ದಾರೆ. ಸೂತಪುತ್ರರಾದ ಲೌಮಹರ್ಷಣಿಗಳು ಈ ಹದಿನೆಂಟು ಪರ್ವಗಳನ್ನೇ ನೈಮಿಷಾರಣ್ಯದಲ್ಲಿ ಋಷಿ-ಮಹರ್ಷಿಗಳ ಸಮ್ಮುಖದಲ್ಲಿ ಪ್ರವಚನಮಾಡಿದರು. ಹೀಗೆ ಭಾರತದ ಪರ್ವಸಂಗ್ರಹವು ಸಂಕ್ಷೇಪವಾಗಿ ಹೇಳಲ್ಪಟ್ಟಿದೆ :

ಮೊದಲನೆಯದಾದ ಆದಿಪರ್ವದಲ್ಲಿ ಹತ್ತೊಂಬತ್ತು ಉಪಪರ್ವ ಗಳಿವೆ. ಅನುಕ್ರಮಣಿಕಾಪರ್ವದ ವಿಷಯವನ್ನು ಈಗಾಗಲೇ ವಿಸ್ತಾರವಾಗಿ ಹೇಳಲಾಗಿದೆ.*

---

* ಇಲ್ಲಿ ಹೇಳಿರುವ ಅನುಕ್ರಮಣಿಕೆಗೂ ಯಥಾವತ್ತಾಗಿರುವುದಕ್ಕೂ ಅಲ್ಲಲ್ಲಿ ಅಲ್ಪ-ಸ್ವಲ್ಪ ವ್ಯತ್ಯಾಸಗಳಿವೆ. ಸಭಾಪರ್ವದ ಉಪಪರ್ವಗಳಲ್ಲಿ ಮೊದಲನೆಯದಕ್ಕೆ ಮಂತ್ರಪರ್ವ ಎಂದು ಇಲ್ಲಿರುವ ಶ್ಲೋಕದಲ್ಲಿ ಹೇಳಿದೆ.

**ಸಭಾಪರ್ವ ತತಃ ಪ್ರೋಕ್ತಂ ಮನ್ತ್ರಪರ್ವ ತತಃ ಪರಮ್ ।**

ಆದರೆ ಕಥಾಭಾಗದಲ್ಲಿ ಉಪಪರ್ವದ ಹೆಸರು ಸಭಾಕ್ರಿಯಾಪರ್ವ ಎಂದು ಹೇಳಲಾಗಿದೆ. ಇಲ್ಲಿ ಬರುವ ಶ್ಲೋಕದಲ್ಲಿ ಲೋಕಪಾಲಸಭಾಖ್ಯಾನ, ರಾಜಸೂಯಾರಂಭಪರ್ವಗಳು ಉಕ್ತವಾಗಿಲ್ಲ. ಆದರೆ ಇವುಗಳು ಕಥಾಭಾಗದಲ್ಲಿ ಉಪಪರ್ವಗಳೆಂದು ಪರಿಗಣಿತವಾಗಿವೆ. ತೀರ್ಥಯಾತ್ರೆಗಳ ಮಾಹಾತ್ಮ್ಯವನ್ನು ಹೇಳುವ ಸಾರಸ್ವತಪರ್ವವು ಗದಾಯುದ್ಧಕ್ಕೆ ಮೊದಲು

ಪೌಷ್ಯ, ಪೌಲೋಮ, ಆಸ್ತೀಕ, ಆದಿಅಂಶಾವತರಣ, ಸಂಭವ, ಲಾಕ್ಷಾ ಗೃಹ, ಹಿಡಿಂಬವಧ, ಬಕವಧ, ಚೈತ್ರರಥ, ದ್ರೌಪದೀದೇವಿಯ ಸ್ವಯಂವರ, ಕ್ಷಾತ್ರಧರ್ಮಾನುಸಾರವಾಗಿ ಕ್ಷತ್ರಿಯರೆಲ್ಲರನ್ನೂ ಜಯಿಸಿ ಪಾಂಡವರು ದ್ರೌಪದಿ ಯನ್ನು ವಿವಾಹಮಾಡಿಕೊಂಡುದು, ವಿದುರಾಗಮನ, ರಾಜ್ಯಲಂಭ, ಅರ್ಜು ನನ ವನವಾಸ, ಸುಭದ್ರಾಹರಣ, ಹರಣಾಹರಣ, ಖಾಂಡವದಾಹ, ಮಯ ದರ್ಶನ–ಇವುಗಳು ಆದಿಪರ್ವದಲ್ಲಿ ಉಕ್ತವಾಗಿರುವ ಕಥಾಪ್ರಸಂಗಗಳು.

ಪೌಷ್ಯಪರ್ವದಲ್ಲಿ ಉತ್ತಂಕನ ಮಹಿಮೆಯು ವರ್ಣಿತವಾಗಿದೆ.

ಪೌಲೋಮಪರ್ವದಲ್ಲಿ ಭೃಗುವಂಶದ ಇತಿಹಾಸವನ್ನು ಹೇಳಲಾಗಿದೆ.

ಆಸ್ತೀಕಪರ್ವದಲ್ಲಿ ಸರ್ಪ-ನಾಗಗಳ ಮತ್ತು ಗರುಡನ ಜನ್ಮವೃತ್ತಾಂತ, ಪಾಲ್ಗಡಲಿನ ಮಥನ, ಉಚ್ಚೈಃಶ್ರವಸ್ಸಿನ ಪ್ರಾದುರ್ಭಾವ, ಪಾರಿಕ್ಷಿತನ (ಜನಮೇಜಯನ) ಸರ್ಪಯಾಗ–ಇವುಗಳನ್ನು ಹೇಳಲಾಗಿದೆ.

ಅಂಶಾವತರಣಪರ್ವದಲ್ಲಿ–ಮಹಾತ್ಮರಾದ ಭರತವಂಶದ ರಾಜರ ಕಥೆಗಳನ್ನು ವಿಸ್ತರಿಸಿ ಹೇಳಲಾಗಿದೆ. ಯಾವ ಯಾವ ರಾಜರು ಹೇಗೆ ಹೇಗೆ ಹುಟ್ಟಿದರೆಂಬ ವಿಷಯವನ್ನು ಸವಿಸ್ತಾರವಾಗಿ ಹೇಳಲಾಗಿದೆ. ಕೃಷ್ಣದ್ವೈಪಾ ಯನರ ಜನ್ಮವೃತ್ತಾಂತವನ್ನೂ ಹೇಳಲಾಗಿದೆ. ಯಾವ-ಯಾವ ದೇವತೆಗಳ ಅಂಶಗಳಿಂದ ಮತ್ತು ದೈತ್ಯ-ದಾನವರ ಅಂಶಗಳಿಂದ ಯಾವ ಯಾವ ರಾಜರು ಹುಟ್ಟಿದರೆಂಬುದನ್ನೂ ಹೇಳಲಾಗಿದೆ.

ಸಂಭವಪರ್ವದಲ್ಲಿ: ಕಣ್ವರ ಆಶ್ರಮದಲ್ಲಿ ಶಕುಂತಲೆಯು ಬೆಳೆದುದು, ಶಕುಂತಲಾ-ದುಷ್ಯಂತರ ಸಮಾಗಮ, ಭರತನ ಜನ್ಮ–ಇವುಗಳನ್ನು ಹೇಳ

---

ಬರುತ್ತದೆ. ಆದರೆ ಕಥಾಭಾಗದಲ್ಲಿ ಸಾರಸ್ವತೋಪಪರ್ವದ ನಿರೂಪಣೆಯಿರುವುದಿಲ್ಲ. ಚಾರ್ವಾಕನಿಗ್ರಹ, ಆಭಿಷೇಚನಿಕ ಮತ್ತು ಗೃಹಪ್ರವಿಭಾಗ ಪರ್ವಗಳು ಶಾಂತಿಪರ್ವದ ಆದಿ ಯಲ್ಲಿರುತ್ತವೆ. ಆದರೆ ಇಲ್ಲಿರುವ ಶ್ಲೋಕಗಳು ಇವುಗಳನ್ನು ಸ್ತ್ರೀಪರ್ವಕ್ಕೆ ಸೇರಿದ್ದೆಂದು ಹೇಳುತ್ತವೆ.

ಶ್ರಾದ್ಧಪರ್ವ ತತೋ ಜ್ಞೇಯಂ ಕುರೂಣಾಮೌರ್ಧ್ವದೈಹಿಕಮ್ ।
ಚಾರ್ವಾಕನಿಗ್ರಹಃ ಪರ್ವ ರಕ್ಷಸೋ ಬ್ರಹ್ಮರೂಪಿಣಃ ॥೭೪॥
ಆಭಿಷೇಚನಿಕಂ ಪರ್ವ ಧರ್ಮರಾಜಸ್ಯ ಧೀಮತಃ ।
ಪ್ರವಿಭಾಗೋ ಗೃಹಾಣಾಂ ಚ ಪರ್ವೋಕ್ತಂ ತದನನ್ತರಮ್ ॥೭೫॥

ಲಾಗಿದೆ ; ಶಕುಂತಲೆಯ ಮಗನಾದ ಭರತನಿಂದಲೇ ಭರತವಂಶವು ಬೆಳೆಯಿತು. ಮಹಾತ್ಮರಾದ ವಸುಗಳು ಗಂಗಾದೇವಿಯ ಗರ್ಭದಲ್ಲಿ ಜನಿಸಿ ಒಡನೆಯೇ ಸ್ವರ್ಗಾರೋಹಣಮಾಡಿದುದು, ವಸುಗಳಲ್ಲಿ ಕಡೆಯವನು ಶಾಂತನುಮಹಾರಾಜನ ಪ್ರಾರ್ಥನೆಯಂತೆ ಭೀಷ್ಮನಾಗಿ ಉಳಿದು ಕೊಂಡುದು–ಈ ಎಲ್ಲ ವಿಷಯಗಳನ್ನೂ ಹೇಳಲಾಗಿದೆ. ಭೀಷ್ಮನು ತಂದೆಯ ಸಲುವಾಗಿ ಆಜನ್ಮಬ್ರಹ್ಮಚಾರಿಯಾಗಿರಲು ಪ್ರತಿಜ್ಞೆಮಾಡಿದುದು, ದಾಶಕನ್ಯೆ ಯಲ್ಲಿ ಚಿತ್ರಾಂಗದ-ವಿಚಿತ್ರವೀರ್ಯರ ಜನನ, ಚಿತ್ರಾಂಗದನು ಮರಣ ಹೊಂದಿದನಂತರ ಭೀಷ್ಮನು ವಿಚಿತ್ರವೀರ್ಯನನ್ನೇ ಸಿಂಹಾಸನದಲ್ಲಿ ಕುಳ್ಳಿರಿ ಸಿದುದು, ಯಮಧರ್ಮನು ಅಣಿಮಾಂಡವ್ಯನ ಶಾಪದಿಂದಾಗಿ ಮನುಷ್ಯನಾಗಿ ಜನ್ಮತಾಳಿದುದು, ಕೃಷ್ಣದ್ವೈಪಾಯನರ ಅನುಗ್ರಹದಿಂದ ಪಾಂಡು- ಧೃತರಾಷ್ಟ್ರ ಮತ್ತು ವಿದುರರ ಜನನ, ಪಾಂಡವ-ಕೌರವರ ಜನನ–ಈ ವಿಷಯಗಳೆಲ್ಲವೂ ಸಂಭವಪರ್ವದಲ್ಲಿ ಉಕ್ತವಾಗಿವೆ.

ಜತುವೇಶ್ಮ ಅಥವಾ ಜತುಗೃಹಪರ್ವದಲ್ಲಿ : ಪಾಂಡವರ ವಾರಣಾವತ ಯಾತ್ರಾವಿಷಯದಲ್ಲಿ ದುರ್ಯೋಧನನು ಧೃತರಾಷ್ಟ್ರನೊಡನೆ ಮಾಡಿದ ಸಮಾಲೋಚನೆ ; ಧರ್ಮರಾಜನಿಗೆ ವಿದುರನ ಸೂಚನೆ ; ವಿದುರನ ಮಾತಿ ನಂತೆ ಸುರಂಗದ ಮೂಲಕವಾಗಿ ಪಾಂಡವರು ಅರಗಿನ ಮನೆಯಿಂದ ತಪ್ಪಿಸಿ ಕೊಂಡುದು ; ಅದೇ ಸಮಯದಲ್ಲಿ ಅರಗಿನ ಮನೆಯಲ್ಲಿ ಮಲಗಿದ್ದ ಪುರೋಚನ, ನಿಷಾದ ಮತ್ತು ಅವಳ ಐವರು ಮಕ್ಕಳ ದಹನ–ಈ ವಿಷಯ ಗಳು ವಿಸ್ತಾರವಾಗಿ ಹೇಳಲ್ಪಟ್ಟಿವೆ.

ಹಿಡಿಂಬವಧಪರ್ವದಲ್ಲಿ : ಅರಗಿನ ಮನೆಯಿಂದ ಪಾಂಡವರು ತಪ್ಪಿಸಿ ಕೊಂಡು ಹೋದನಂತರ ಅರಣ್ಯದಲ್ಲಿ ಹಿಡಿಂಬೆಯಿಂದ ಪಾಂಡವರ ದರ್ಶನ; ಅಲ್ಲಿಯೇ ಮಹಾಬಲನಾದ ಭೀಮನಿಂದ ಹಿಡಿಂಬಾಸುರನ ವಧೆ; ಭೀಮ-ಹಿಡಿಂಬೆಯರ ವಿವಾಹ ; ಘಟೋತ್ಕಚನ ಜನನ ; ವ್ಯಾಸ ಮಹರ್ಷಿಗಳ ದರ್ಶನ ; ಅವರ ಆಜ್ಞೆಯಂತೆ ಅರಣ್ಯದಿಂದ ಏಕಚಕ್ರನಗರಾಭಿ ಗಮನ–ಇವುಗಳು ಹಿಡಿಂಬವಧಪರ್ವದಲ್ಲಿ ಹೇಳಲ್ಪಟ್ಟಿವೆ.

ಬಕವಧಪರ್ವದಲ್ಲಿ : ಪಾಂಡವರು ಅಜ್ಞಾತರಾಗಿ ಏಕಚಕ್ರನಗರಿಯಲ್ಲಿ

ಬ್ರಾಹ್ಮಣನೊಬ್ಬನ ಮನೆಯಲ್ಲಿ ವಾಸಮಾಡುತ್ತಿದ್ದುದು ; ಭೀಮನು ಬಕನನ್ನು ಸಂಹರಿಸಿದುದು ; ನಾಗರಿಕರ ಅಚ್ಚರಿ ; ಕೃಷ್ಣೆ ಮತ್ತು ಧೃಷ್ಟದ್ಯುಮ್ನರ ಜನ್ಮವೃತ್ತಾಂತ ; ದ್ರೌಪದಿಯ ಸ್ವಯಂವರವೃತ್ತಾಂತವನ್ನು ಕೇಳಿ ಅದನ್ನು ನೋಡುವ ಸಲುವಾಗಿ ಪಾಂಚಾಲನಗರಿಗೆ ಪಾಂಡವರ ಪ್ರಯಾಣ—ಇವುಗಳು ಈ ಪರ್ವದಲ್ಲಿ ಉಕ್ತವಾಗಿವೆ.

ಚೈತ್ರರಥಪರ್ವದಲ್ಲಿ : ಅರ್ಜುನನು ಗಂಗಾತೀರದಲ್ಲಿ ಅಂಗಾರಪರ್ಣ ನನ್ನು ಸೋಲಿಸಿ ಅವನೊಡನೆ ಸಖ್ಯಮಾಡಿಕೊಂಡುದು : ಅಂಗಾರಪರ್ಣ ನಿಂದ ವಸಿಷ್ಠ ಮತ್ತು ಔರ್ವರ ಆಖ್ಯಾನಗಳ ಕಥನ ; ಅನಂತರದಲ್ಲಿ ಅಣ್ಣ-ತಮ್ಮಂದಿರೊಡನೆ ಅರ್ಜುನನ ಪಾಂಚಾಲನಗರಿಯ ಪ್ರವೇಶ—ಈ ವಿಷಯ ಗಳು ಹೇಳಲ್ಪಟ್ಟಿವೆ.

ಸ್ವಯಂವರಪರ್ವದಲ್ಲಿ : ಬ್ರಾಹ್ಮಣವೇಷಧರನಾದ ಅರ್ಜುನನು ಸರ್ವರಾಜರ ಸಮ್ಮುಖದಲ್ಲಿ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಪಡೆದುದು ; ಭೀಮಾರ್ಜುನರು ಶಲ್ಯ-ಕರ್ಣರನ್ನೂ ಇತರ ರಾಜರನ್ನೂ ಯುದ್ಧದಲ್ಲಿ ಪರಾಜಯಗೊಳಿಸಿದುದು ; ತಾಯಿಯ ಮಾತಿನಂತೆ ಐವರೂ ದ್ರೌಪದಿಯನ್ನು ಮದುವೆಯಾಗುವ ವಿಷಯದಲ್ಲಿ ದ್ರುಪದನೊಡನೆ ಧರ್ಮಜಿಜ್ಞಾಸೆ—ಇವುಗಳು ವರ್ಣಿತವಾಗಿವೆ.

ವೈವಾಹಿಕಪರ್ವದಲ್ಲಿ : ಬ್ರಾಹ್ಮಣವೇಷಧಾರಿಗಳಾಗಿದ್ದ ಭೀಮಾರ್ಜು ನರ ಸಾಹಸವನ್ನು ಕಂಡು ಸಂಶಯಿಸಿದ ಬಲರಾಮ-ಶ್ರೀಕೃಷ್ಣರು ಪಾಂಡವರು ತಂಗಿದ್ದ ಕುಂಬಾರನ ಮನೆಗೆ ಹೋಗಿ ಪಾಂಡವರನ್ನು ಗುರುತಿಸಿದುದು ; ದ್ರುಪದನ ಜಿಜ್ಞಾಸೆ ; ದ್ರೌಪದಿಯ ಪೂರ್ವಜನ್ಮವೃತ್ತಾಂತ : ಪಂಚೇಂದ್ರರ ಉಪಾಖ್ಯಾನ—ಇವುಗಳು ಹೇಳಲ್ಪಟ್ಟಿವೆ. ಅಮಾನುಷವಾದ ದೇವವಿಹಿತವಾದ ರೀತಿಯಲ್ಲಿ ಪಾಂಡವರೈವರಿಗೆ ದ್ರೌಪದಿಯೊಡನೆ ವಿವಾಹ—ಇವುಗಳೂ ವೈವಾಹಿಕಪರ್ವದಲ್ಲಿ ಉಕ್ತವಾಗಿದೆ.

ವಿದುರಾಗಮನರಾಜ್ಯಲಂಭಪರ್ವದಲ್ಲಿ : ಧೃತರಾಷ್ಟ್ರನು ಪಾಂಡವ ರನ್ನು ಹಸ್ತಿನಾಪುರಕ್ಕೆ ಕರೆತರುವಂತೆ ವಿದುರನಿಗೆ ಹೇಳಿ ಕಳುಹಿಸಿದುದು ; ಅದೇ ಸಮಯದಲ್ಲಿ ಶ್ರೀಕೃಷ್ಣದರ್ಶನ ; ಧೃತರಾಷ್ಟ್ರನಿಂದ ರಾಜ್ಯಾರ್ಧವನ್ನು

ಪಡೆದ ಪಾಂಡವರು ಇಂದ್ರಪ್ರಸ್ಥದಲ್ಲಿ ವಾಸಮಾಡುತ್ತಿದ್ದಾಗ ಆಗಮಿಸಿದ ನಾರದರ ಆದೇಶದಂತೆ ದ್ರೌಪದಿಯೊಡನೆ ಇರುವ ವಿಷಯದಲ್ಲಿ ಐವರೂ ನಿಯಮಗಳನ್ನು ಮಾಡಿಕೊಂಡಿದ್ದು ; ಸುಂದೋಪಸುಂದರ ಆಖ್ಯಾನ–ಇವು ಗಳು ಹೇಳಲ್ಪಟ್ಟಿವೆ.

ಅರ್ಜುನವನವಾಸಪರ್ವದಲ್ಲಿ : ಯುಧಿಷ್ಠಿರ-ದ್ರೌಪದಿಯರು ಏಕಾಂತ ದಲ್ಲಿದ್ದಾಗ ಬ್ರಾಹ್ಮಣನ ಸಹಾಯಕ್ಕಾಗಿ ಆಯುಧವನ್ನು ತರಲು ಅರ್ಜುನನು ಏಕಾಂತಗೃಹಕ್ಕೆ ಅನಿವಾರ್ಯವಾಗಿ ಪ್ರವೇಶಮಾಡಿದುದು ; ಬ್ರಾಹ್ಮಣನ ಕಾರ್ಯವನ್ನು ಮಾಡಿಕೊಟ್ಟನಂತರ ನಿಯಮದ ಪರಿಪಾಲನೆಗಾಗಿ ಅರ್ಜುನನು ವನವಾಸಕ್ಕೆ ಹೊರಟುದು ; ದಾರಿಯಲ್ಲಿ ಉಲೂಪಿಯೊಡನೆ ಸಮಾಗಮ ; ಪುಣ್ಯತೀರ್ಥಪ್ರವಾಸಸಮಯದಲ್ಲಿ ಚಿತ್ರಾಂಗದೆಯೊಡನೆ ವಿವಾಹ ; ಬಭ್ರುವಾಹನನ ಜನನ ; ಬ್ರಾಹ್ಮಣಶಾಪದಿಂದ ಮೊಸಳೆಗಳಾಗಿದ್ದ ಐವರು ಅಪ್ಸರೆಯರ ಶಾಪವಿಮೋಚನೆ ; ಪ್ರಭಾಸತೀರ್ಥದಲ್ಲಿ ಶ್ರೀಕೃಷ್ಣದರ್ಶನ–ಈ ವಿಷಯಗಳು ಉಕ್ತವಾಗಿವೆ.

ಸುಭದ್ರಾಹರಣಪರ್ವದಲ್ಲಿ : ಸಂನ್ಯಾಸಿವೇಷದಿಂದ ದ್ವಾರಾವತಿಗೆ ಅರ್ಜುನನ ಪ್ರವೇಶ; ಸುಭದ್ರೆ ಮತ್ತು ಅರ್ಜುನರ ಪ್ರೇಮಸಮಾಗಮನ; ವಾಸುದೇವನ ಅನುಮತಿಯಿಂದ ಅರ್ಜುನನು ಸುಭದ್ರೆಯನ್ನು ಅಪಹರಿಸಿ ಕೊಂಡು ಹೋದುದು–ಇವುಗಳು ಉಕ್ತವಾಗಿವೆ.

ಹರಣಾಹರಣಪರ್ವದಲ್ಲಿ : ಶ್ರೀಕೃಷ್ಣ-ಬಲರಾಮರು ಉಡುಗೊರೆ ಗಳನ್ನು ತೆಗೆದುಕೊಂಡು ಪಾಂಡವರಲ್ಲಿಗೆ ಹೋದುದು ; ಸುಭದ್ರೆಯಲ್ಲಿ ಅಭಿಮನ್ಯುವಿನ ಜನನ ; ಇಲ್ಲಿಯೇ ಪಾಂಡವರಿಂದ ದ್ರೌಪದಿಗೆ ಐವರು ಮಕ್ಕಳು ಹುಟ್ಟಿದ ವಿಷಯವನ್ನು ಹೇಳಲಾಗಿದೆ–ಈ ವಿಷಯಗಳು ಹರಣಾ ಹರಣಪರ್ವದಲ್ಲಿ ಉಕ್ತವಾಗಿವೆ.

ಖಾಂಡವದಾಹಪರ್ವದಲ್ಲಿ : ವಿಹಾರಾರ್ಥವಾಗಿ ಕೃಷ್ಣಾರ್ಜುನರು ಯಮುನಾನದಿಯ ತೀರಕ್ಕೆ ಹೋಗಿದ್ದಾಗ ಬ್ರಾಹ್ಮಣವೇಷಧರನಾಗಿದ್ದ ಅಗ್ನಿಯ ಆಗಮನ ಮತ್ತು ಖಾಂಡವವನವನ್ನು ದಹನಮಾಡಲು ಅನುಮತಿ ಯನ್ನು ಕೇಳಿದುದು ; ಚಕ್ರ ಮತ್ತು ಧನುಸ್ಸುಗಳ ಪ್ರಾಪ್ತಿ ; ಖಾಂಡವದಾಹ;

ಕೃಷ್ಣಾರ್ಜುನರ ಸಲಹೆಯಂತೆ ಯಜ್ಞೇಶ್ವರನು ಮಯನನ್ನು ದಹಿಸದೇ ಬಿಟ್ಟುದು; ಅಶ್ವಸೇನನ ತಪ್ಪಿಸಿಕೊಳ್ಳುವಿಕೆ—ಈ ವಿಷಯಗಳನ್ನು ಹೇಳಲಾಗಿದೆ.

ಮಯದರ್ಶನಪರ್ವದಲ್ಲಿ : ಮಯನ ಕೃತಜ್ಞತೆ ; ಮಹರ್ಷಿ ಮಂದ ಪಾಲನು ಶಾರ್ಙ್ಗ ಎಂಬ ಪಕ್ಷಿಯಲ್ಲಿ ಪುತ್ರರನ್ನು ಪಡೆದ ಕಥೆ—ಇವುಗಳು ವಿಸ್ತಾರವಾಗಿ ಹೇಳಲ್ಪಟ್ಟಿವೆ. ಇಲ್ಲಿಗೆ ಆದಿಪರ್ವವು ಮುಗಿಯುತ್ತದೆ.

**ಅಧ್ಯಾಯಾನಾಂ ಶತೇ ದ್ವೇ ತು ಸಂಖ್ಯಾತೇ ಪರಮರ್ಷಿಣಾ ।**
**ಸಪ್ತವಿಂಶತಿರಧ್ಯಾಯಾ ವ್ಯಾಸೇನೋತ್ತಮತೇಜಸಾ ॥೧೩೦॥**

**ಅಷ್ಟೌ ಶ್ಲೋಕಸಹಸ್ರಾಣಿ ಅಷ್ಟೌ ಶ್ಲೋಕಶತಾನಿ ಚ ।**
**ಶ್ಲೋಕಾಶ್ಚ ಚತುರಾಶೀತಿರ್ಮುನಿನೋಕ್ತಾ ಮಹಾತ್ಮನಾ ॥೧೩೧॥**

ಮಹರ್ಷಿಗಳಾದ ವ್ಯಾಸರು ಆದಿಪರ್ವವನ್ನು ೨೨೭ ಅಧ್ಯಾಯಗಳ ನ್ನಾಗಿ ವಿಂಗಡಿಸಿ ೮,೮೮೪ ಶ್ಲೋಕಗಳಲ್ಲಿ ಈ ಪರ್ವವನ್ನು ಪೂರ್ಣಮಾಡಿ ದ್ದಾರೆ.

ಎರಡನೆಯದು ಸಭಾಪರ್ವ. ಇದರಲ್ಲಿ ಬಹುವೃತ್ತಾಂತಗಳು ಹೇಳ ಲ್ಪಟ್ಟಿವೆ. ಪಾಂಡವರ ಸಭಾರಚನಾಕಾರ್ಯ; ಕಿಂಕರರೆಂಬ ರಾಕ್ಷಸರ ದರ್ಶನ; ನಾರದರಿಂದ ಲೋಕಪಾಲರ ಸಭಾವರ್ಣನೆ ; ರಾಜಸೂಯಯಾಗದ ಆರಂಭ ; ಜರಾಸಂಧವಧೆ ; ಶ್ರೀಕೃಷ್ಣನಿಂದ ಗಿರಿವ್ರಜದಲ್ಲಿ ಬಂಧಿತರಾಗಿದ್ದ ರಾಜರ ವಿಮೋಚನೆ ; ಪಾಂಡವರ ದಿಗ್ವಿಜಯ ; ರಾಜಸೂಯಯಾಗಕ್ಕೆ ರಾಜ-ಮಹಾರಾಜರ ಆಗಮನ ; ಪ್ರಥಮಪೂಜೆ ಯಾರಿಗೆ ಸಲ್ಲಬೇಕೆಂಬ ವಿವಾದ ; ಶಿಶುಪಾಲವಧೆ ; ವೈಭವಪೂರ್ಣವಾದ ಯಜ್ಞವನ್ನು ನೋಡಿ ದುರ್ಯೋಧನನ ಅಸೂಯೆ ; ದುರ್ಯೋಧನನು ಸ್ಥಳವನ್ನು ನೀರೆಂದು ಭ್ರಮಿಸಿದುದಕ್ಕಾಗಿ ಭೀಮನ ಅಪಹಾಸ್ಯ ; ಆ ಸೇಡನ್ನು ತೀರಿಸಿಕೊಳ್ಳ ಲೋಸುಗ ದುರ್ಯೋಧನನು ದ್ಯೂತಕ್ಕೆ ಧರ್ಮಜನನ್ನು ಆಹ್ವಾನಿಸಿದುದು ; ಶಕುನಿಯು ಧರ್ಮಸುತನನ್ನು ಜೂಜಾಟದಲ್ಲಿ ಸೋಲಿಸಿದುದು ; ಜೂಜೆಂಬ ಮಹೋದಧಿಯಲ್ಲಿ ಮುಳುಗಿಹೋಗಿದ್ದ ದ್ರೌಪದಿಯನ್ನು ಧೃತರಾಷ್ಟ್ರನು ನೌಕೆಯೋಪಾದಿಯಲ್ಲಿ ಉದ್ಧರಿಸಿದುದು ; ಅದನ್ನರಿತ ದುರ್ಯೋಧನನು

ಪುನಃ ಪಾಂಡವರನ್ನು ಜೂಜಾಟಕ್ಕೆ ಆಹ್ವಾನಿಸಿದುದು ; ಅನುದ್ಯೂತದಲ್ಲಿ ಯುಧಿಷ್ಠಿರನನ್ನು ಗೆದ್ದು ದ್ರೌಪದಿಯೊಡನೆ ಪಾಂಡವರನ್ನು ಕಾಡಿಗಟ್ಟಿದುದು– ಈ ಎಲ್ಲ ವಿಷಯಗಳೂ ವಿಸ್ತಾರವಾಗಿ ಸಭಾಪರ್ವದಲ್ಲಿ ವ್ಯಾಸರಿಂದ ಉಕ್ತ ವಾಗಿವೆ.

**ಅಧ್ಯಾಯಾಃ ಸಪ್ತತಿರ್ಜ್ಞೇಯಾಸ್ತಥಾ ಚಾಷ್ಟೌ ಪ್ರಸಂಖ್ಯಯಾ ।**
**ಶ್ಲೋಕಾನಾಂ ದ್ವೇ ಸಹಸ್ರೇ ತು ಪಞ್ಚ ಶ್ಲೋಕಶತಾನಿ ಚ ।**
**ಶ್ಲೋಕಾಶ್ಚೈಕಾದಶ ಜ್ಞೇಯಾಃ ಪರ್ವಣ್ಯಸ್ಮಿನ್ದ್ವಿಜೋತ್ತಮಾಃ ॥**

ಮಹರ್ಷಿಗಳಾದ ವ್ಯಾಸರು ಸಭಾಪರ್ವವನ್ನು ೭೮ ಅಧ್ಯಾಯಗಳನ್ನಾಗಿ ವಿಂಗಡಿಸಿದ್ದಾರೆ. ಇದರಲ್ಲಿರುವ ಶ್ಲೋಕಗಳು ೨,೫೧೧.

ಮೂರನೆಯದು ವನಪರ್ವ. ಪಾಂಡವರು ಪಗಡೆಯಾಟದಲ್ಲಿ ದುರ್ಯೋಧನನೊಡನೆ ಮಾಡಿಕೊಂಡಿದ್ದ ನಿಬಂಧನೆಗೆ ಅನುಗುಣವಾಗಿ ಹನ್ನೆರಡು ವರ್ಷಗಳ ಕಾಲ ವನವಾಸಕ್ಕಾಗಿ ಪ್ರಯಾಣಮಾಡಿದುದು ; ಅವ ರನ್ನನುಸರಿಸಿ ಪಟ್ಟಣಿಗರೂ ಹೊರಟಿದ್ದು ; ಬ್ರಾಹ್ಮಣರ ರಕ್ಷಣಾರ್ಥವಾಗಿ ಧರ್ಮಜನಿಂದ ಸೂರ್ಯಪ್ರಾರ್ಥನೆ ; ಧೌಮ್ಯರ ಉಪದೇಶದಿಂದ ಸೂರ್ಯ ಪ್ರಾರ್ಥನೆಯನ್ನು ಮಾಡಿ ಅಕ್ಷಯಪಾತ್ರೆಯನ್ನು ಪಡೆದುದು ; ಹಿತೋಪದೇಶ ಮಾಡಿದ ವಿದುರನನ್ನು ಧೃತರಾಷ್ಟ್ರನು ಪರಿತ್ಯಾಗಮಾಡಿದುದು ; ಧೃತರಾಷ್ಟ್ರ ನಿಂದ ಪರಿತ್ಯಕ್ತನಾದ ವಿದುರನು ಅರಣ್ಯದಲ್ಲಿದ್ದ ಪಾಂಡವರ ಸಮೀಪಕ್ಕೆ ಬಂದುದು ; ಧೃತರಾಷ್ಟ್ರನ ಆಜ್ಞೆಯಂತೆ ಹಸ್ತಿನಾಪುರಕ್ಕೆ ವಿದುರನ ಪುನರಾ ಗಮನ ; ಕರ್ಣನ ಪ್ರೋತ್ಸಾಹದಿಂದ ಅರಣ್ಯದಲ್ಲಿದ್ದ ಪಾಂಡವರನ್ನು ನಾಶ ಗೊಳಿಸಲು ದುರ್ಮತಿಯಾದ ದುರ್ಯೋಧನನ ಮಂತ್ರಾಲೋಚನೆ ; ದುರ್ಯೋಧನನ ದುರಾಲೋಚನೆಯನ್ನು ಜ್ಞಾನದೃಷ್ಟಿಯಿಂದ ತಿಳಿದ ವ್ಯಾಸರು ಒಡನೆಯೇ ಧೃತರಾಷ್ಟ್ರನ ಬಳಿಗೆ ಹೋಗಿ ದುರ್ಯೋಧನನ ವನಪ್ರಯಾಣದ ಯೋಜನೆಯನ್ನು ನಿರೋಧಿಸಿದುದು ; ಕಾಮಧೇನುವಿನ ಆಖ್ಯಾನ ; ಧೃತರಾಷ್ಟ್ರನಿಗೆ ಮೈತ್ರೇಯ ಮಹರ್ಷಿಗಳ ಉಪದೇಶ ; ಅವರಿಂದಲೇ ದುರಭಿಮಾನಿಯಾದ ದುರ್ಯೋಧನನಿಗೆ ಬಂದ ಶಾಪ ; ಇತ್ತಲಾಗಿ ಅರಣ್ಯದಲ್ಲಿ ಭೀಮನಿಂದ ಕಿರ್ಮೀರನ ವಧೆ ; ಅರಣ್ಯಕ್ಕೆ ಶ್ರೀಕೃಷ್ಣ ಮತ್ತು ಪಾಂಚಾಲಕುಲದ ಅರಸರ ಆಗಮನ ; ಧರ್ಮರಾಜ-ದುರ್ಯೋಧನ

ರಿಗೆ ನಡೆದ ಪಗಡೆಯಾಟದಲ್ಲಿ ಶಕುನಿಯ ಮೋಸದಿಂದಾಗಿ ಧರ್ಮಜನು ಸೋತುಹೋದನೆಂಬ ವಾರ್ತೆಯನ್ನು ಕೇಳಿ ಶ್ರೀಕೃಷ್ಣನ ಕೋಪ ಮತ್ತು ಕುಪಿತನಾದ ಶ್ರೀಕೃಷ್ಣನನ್ನು ಅರ್ಜುನನು ಸಮಾಧಾನಪಡಿಸಿದುದು ; ದ್ರೌಪದಿಯು ಶ್ರೀಕೃಷ್ಣನೊಡನೆ ತನ್ನ ಹೃದಯದ ಸಂಕಟವನ್ನು ಹೇಳಿ ಕೊಂಡುದು ; ಶ್ರೀಕೃಷ್ಣನು ದ್ರೌಪದಿಯನ್ನು ಸಂತೈಸಿ ಅವಳಿಗೆ ವಿಜಯದ ಆಶ್ವಾಸನೆಯನ್ನಿತ್ತುದು–ಇವೆಲ್ಲವೂ ವರ್ಣಿತವಾಗಿವೆ. ಇಲ್ಲಿಯೇ ವ್ಯಾಸರು ಸೌಭವಧೆಯ ಆಖ್ಯಾನವನ್ನು ಹೇಳಿದ್ದಾರೆ. ಅನಂತರದಲ್ಲಿ ಶ್ರೀಕೃಷ್ಣನು ಸುಪುತ್ರಳಾದ ಸುಭದ್ರೆಯನ್ನು ದ್ವಾರಾವತಿಗೂ, ಧೃಷ್ಟದ್ಯುಮ್ನನು ದ್ರೌಪದಿಯ ಐವರು ಮಕ್ಕಳನ್ನು ಪಾಂಚಾಲದೇಶಕ್ಕೂ ಕರೆದೊಯ್ಯುತ್ತಾರೆ.

ದ್ವೈತವನದಲ್ಲಿ ಧರ್ಮಜ-ದ್ರೌಪದಿಯರ ಸಂವಾದ ; ಧರ್ಮ-ಭೀಮರ ಸಂವಾದ ; ಪಾಂಡುಪುತ್ರರ ಸಮೀಪಕ್ಕೆ ವ್ಯಾಸರ ಆಗಮನ ; ವ್ಯಾಸ ರಿಂದ ಯುಧಿಷ್ಠಿರನಿಗೆ ಪ್ರತಿಸ್ಮೃತಿವಿದ್ಯೆಯ ಉಪದೇಶ ; ವ್ಯಾಸರ ನಿರ್ಗಮನ; ಪಾಂಡವರಿಂದ ಕಾಮ್ಯಕವನಪ್ರವೇಶ ; ಮಹಾಸ್ತ್ರಗಳ ಪ್ರಾಪ್ತಿಗಾಗಿ ಅರ್ಜುನನ ಪ್ರವಾಸ ; ಕಿರಾತವೇಷಧರನಾದ ಪರಮೇಶ್ವರನೊಡನೆ ಪಾರ್ಥನ ಯುದ್ಧ ; ಅರ್ಜುನನಿಂದ ಲೋಕಪಾಲರ ಸಂದರ್ಶನ ; ಅವರಿಂದ ಮಹಾಸ್ತ್ರಗಳ ಪ್ರಾಪ್ತಿ; ಅಸ್ತ್ರಾರ್ಥವಾಗಿ ಇಂದ್ರಲೋಕಕ್ಕೆ ಅರ್ಜುನನ ಪ್ರಯಾಣ ; ಅದೇ ಸಮಯದಲ್ಲಿ ಹಸ್ತಿನಾಪುರದಲ್ಲಿ ಧೃತರಾಷ್ಟ್ರನ ಚಿಂತೆ ; ಕಾಮ್ಯಕವನದಲ್ಲಿದ್ದ ಯುಧಿಷ್ಠಿರನ ಬಳಿಗೆ ಮಹರ್ಷಿಗಳಾದ ಬೃಹದಶ್ವರ ಆಗಮನ ; ಅವರೊಡನೆ ಯುಧಿಷ್ಠಿರನ ವಿಲಾಪ ; ಯುಧಿಷ್ಠಿರನನ್ನು ಸಂತೈಸಲು ಬೃಹದಶ್ವರಿಂದ ನಲೋಪಾಖ್ಯಾನಕಥನ ; ಮಹರ್ಷಿಗಳಿಂದ ಅಕ್ಷಹೃದಯೋಪದೇಶ ; ಸ್ವರ್ಗ ಲೋಕದಿಂದ ಪಾಂಡವರ ಸಮೀಪಕ್ಕೆ ಲೋಮಶರ ಆಗಮನ ; ಲೋಮಶ ರಿಂದ ಸ್ವರ್ಗದಲ್ಲಿದ್ದ ಅರ್ಜುನನ ಸ್ಥಿತಿ-ಗತಿಗಳ ನಿರೂಪಣೆ ; ಅರ್ಜುನನ ಸಂದೇಶದಂತೆ ಲೋಮಶರೊಡನೆ ಪಾಂಡವರ ತೀರ್ಥಯಾತ್ರೆ ; ಲೋಮಶ ರಿಂದ ಪುಣ್ಯತೀರ್ಥಗಳ ಮಹತ್ತ್ವದ ಸಂಕೀರ್ತನ ; ನಾರದರ ಆಗಮನ ; ಪುಲಸ್ತ್ಯತೀರ್ಥಯಾತ್ರೆ ; ಇಂದ್ರನು ಕರ್ಣನಿಂದ ಕರ್ಣಕುಂಡಲಗಳನ್ನು ಪಡೆ ದುದು ; ಗಯಚಕ್ರವರ್ತಿಯ ಯಜ್ಞದ ವೈಭವ ; ಅಗಸ್ತ್ಯಾಖ್ಯಾನ ; ಅಗಸ್ತ್ಯ ರಿಂದ ವಾತಾಪಿಭಕ್ಷಣ ; ಅಗಸ್ತ್ಯರೊಡನೆ ಲೋಪಾಮುದ್ರೆಯ ಸಮಾಗಮ ;

ಋಷ್ಯಶೃಂಗನ ಚರಿತ್ರೆ ; ಜಮದಗ್ನಿಯ ಮಗನಾದ ಪರಶುರಾಮನ ಕಥೆ, (ಇದೇ ಕಥೆಯಲ್ಲಿಯೇ ಕಾರ್ತವೀರ್ಯನ ಮತ್ತು ಹೈಹಯರ ವಧೆಯೂ ವರ್ಣಿತವಾಗಿದೆ ) ; ಲೋಮಶರೊಡನೆ ಪಾಂಡವರು ಪ್ರಭಾಸತೀರ್ಥಕ್ಕೆ ಆಗಮಿಸಿದುದು ; ಅಲ್ಲಿಯೇ ಯಾದವರೊಡನೆ ಸಮಾಗಮ ; ಸುಕನ್ಯೆಯ ಉಪಾಖ್ಯಾನ ; ಶರ್ಯಾತಿಯು ಮಾಡಿದ ಯಜ್ಞದಲ್ಲಿ ಚ್ಯವನಮಹರ್ಷಿಯು ಅಶ್ವಿನೀದೇವತೆಗಳಿಗೆ ಹವಿರ್ಭಾಗವನ್ನು ಕೊಡಿಸಿದುದು ; ಅಶ್ವಿನೀದೇವತೆಗಳ ಅನುಗ್ರಹದಿಂದಾಗಿ ಚ್ಯವನನು ನಿತ್ಯಯೌವನವನ್ನು ಪಡೆದುದು ; ಮಾಂಧಾತೃವಿನ ಉಪಾಖ್ಯಾನ ; ಜಂತೂಪಾಖ್ಯಾನ ( ಇದರಲ್ಲಿ ಸೋಮಕರಾಜನು ಬಹುಪುತ್ರರನ್ನು ಪಡೆಯುವ ಸಲುವಾಗಿ ಪುತ್ರಯಾಗವನ್ನು ಮಾಡಿದ ಕಥೆಯಿದೆ ) ; ಅನಂತರದಲ್ಲಿ ಅತ್ಯುತ್ತಮವಾದ ಶ್ಯೇನ-ಕಪೋತೀಯಾಖ್ಯಾನವಿದೆ; ಆ ಆಖ್ಯಾನದಲ್ಲಿ ಇಂದ್ರ ಮತ್ತು ಅಗ್ನಿಗಳು ಶಿಬಿಚಕ್ರವರ್ತಿಯನ್ನು ಪರೀಕ್ಷಿಸುವ ಸಲುವಾಗಿ ಗಿಡುಗ-ಪಾರಿವಾಳಗಳ ರೂಪಗಳನ್ನು ಧರಿಸಿ ಬರುವ ಕಥೆಯಿದೆ. ಅನಂತರದಲ್ಲಿ ಅಷ್ಟಾವಕ್ರೀಯೋಪಾಖ್ಯಾನ ; ಅದರಲ್ಲಿ ಜನಕನ ಯಾಗಸಮಯದಲ್ಲಿ ಆಸ್ಥಾನಪಂಡಿತನಾದ ವಂದಿಯೊಡನೆ ಅಷ್ಟಾವಕ್ರನು ಮಾಡಿದ ವಾದಪ್ರಕರಣವಿದೆ. ವರುಣನ ಮಗನಾದ ನೈಯಾಯಿಕಶ್ರೇಷ್ಠನಾದ ( ತರ್ಕಪಂಡಿತನಾದ ) ವಂದಿಯು ಅಷ್ಟಾವಕ್ರನೊಡನೆ ಮಾಡಿದ ವಾದದಲ್ಲಿ ಸೋತುದು ; ಅಷ್ಟಾವಕ್ರನು ವಂದಿಯನ್ನು ಜಯಿಸಿ ತನ್ನ ತಂದೆಯನ್ನು ಸಮುದ್ರದಿಂದ ಪಡೆದುಕೊಂಡ ಕಥೆಯಿದೆ. ಅನಂತರ ಯವಕ್ರೀತೋಪಾಖ್ಯಾನ ; ರೈಭ್ಯೋಪಾಖ್ಯಾನ ; ಪಾಂಡವರಿಂದ ಗಂಧಮಾದನಪರ್ವತದ ಯಾತ್ರೆ ; ನಾರಾಯಣಾಶ್ರಮದಲ್ಲಿ ವಿಶ್ರಾಂತಿ ; ಸೌಗಂಧಿಕಪುಷ್ಪವನ್ನು ತರುವುದಕ್ಕಾಗಿ ದ್ರೌಪದಿಯು ಭೀಮನನ್ನು ಪ್ರಾರ್ಥಿಸಿದುದು ; ಹೋಗುವ ಹಾದಿಯಲ್ಲಿ ಭೀಮನಿಂದ ಹನುಮದ್ದರ್ಶನ ; ಹನುಮಂತನ ಆಶೀರ್ವಾದಪಡೆದು ಸರೋವರವನ್ನು ರಕ್ಷಿಸುತ್ತಿದ್ದ ಯಕ್ಷ-ರಾಕ್ಷಸರೊಡನೆ ಭೀಮನ ಯುದ್ಧ ; ಜಟಾಸುರವಧೆ ; ಪಾಂಡವರಿಂದ ವೃಷಪರ್ವ ಮತ್ತು ಆರ್ಷ್ಟಿಷೇಣರ ಆಶ್ರಮಗಳ ಸಂದರ್ಶನ ; ದ್ರೌಪದಿಯಿಂದ ಪ್ರೋತ್ಸಾಹಿತನಾದ ಭೀಮನು ಕೈಲಾಸಪರ್ವತಕ್ಕೆ ಹೋದುದು; ಅಲ್ಲಿ ಮಣಿಮಂತನೇ ಮೊದಲಾದ ಯಕ್ಷರೊಡನೆ ಭೀಮಸೇನನ ಯುದ್ಧ; ಕುಬೇರನೊಡನೆ

ಪಾಂಡವರ ಸಮಾಗಮ (ಅಲ್ಲಿಯೇ ಸ್ವರ್ಗದಿಂದ ಅರ್ಜುನನು ಆಗಮಿಸಿ ಧರ್ಮಾದಿಗಳೊಡನೆ ಸೇರಿದ ಕಥೆಯಿದೆ.) ; ದಿವ್ಯಾಸ್ತ್ರಗಳನ್ನು ಇಂದ್ರನಿಂದ ಪಡೆದ ಸವ್ಯಸಾಚಿಯು ಗುರುದಕ್ಷಿಣಾರ್ಥವಾಗಿ ಹಿರಣ್ಯಪುರವಾಸಿಗಳಾಗಿದ್ದ ನಿವಾತಕವಚರೊಡನೆ ಯುದ್ಧಮಾಡಿದುದು ; ಸುರಶತ್ರುಗಳಾದ ಬಲಿಷ್ಠರಾದ ಪೌಲೋಮರನ್ನೂ, ಕಾಲಕೇಯರನ್ನೂ ಮತ್ತು ನಿವಾತಕವಚರನ್ನೂ ಯುದ್ಧದಲ್ಲಿ ಕಿರೀಟಿಯು ಧ್ವಂಸಮಾಡಿದುದು ; ಧರ್ಮರಾಜನ ಸನ್ನಿಧಿಯಲ್ಲಿ ಅರ್ಜುನನು ತಾನು ಪಡೆದುಕೊಂಡ ಮಹಾಸ್ತ್ರಗಳ ಪ್ರದರ್ಶನಮಾಡಲಿಚ್ಛಿಸಿ ದುದು ; ಆ ಸಮಯಕ್ಕೆ ಸರಿಯಾಗಿ ನಾರದರ ಆಗಮನ ; ಮಹಾಸ್ತ್ರಗಳ ಪ್ರದರ್ಶನವನ್ನು ಪ್ರತಿನಿಷೇಧಿಸಿದುದು ; ಗಂಧಮಾದನಪರ್ವತದಿಂದ ಪಾಂಡವರ ಅವರೋಹಣ ; ನಿಬಿಡವಾದ ಅರಣ್ಯಪ್ರದೇಶದಲ್ಲಿ ಮಹಾಸರ್ಪ ವೊಂದು ಭೀಮನನ್ನು ಬಂಧಿಸಿದುದು ; ಸರ್ಪವು ಕೇಳಿದ ಪ್ರಶ್ನೆಗಳಿಗೆ ಧರ್ಮ ಜನು ಸಮಂಜಸವಾದ ಉತ್ತರಗಳನ್ನಿತ್ತನಂತರ ಸರ್ಪದಿಂದ ಭೀಮನ ವಿಮೋಚನೆ ; ಕಾಮ್ಯಕವನಕ್ಕೆ ಪಾಂಡವರ ಪುನರಾಗಮನ ; ಕಾಮ್ಯಕವನದಲ್ಲಿ ಪಾಂಡವರಿದ್ದಾರೆಂಬ ವಾರ್ತೆಯನ್ನು ಕೇಳಿ ಕಾಮ್ಯಕವನಕ್ಕೆ ವಾಸುದೇವನ ಆಗ ಮನ ; ಮಾರ್ಕಂಡೇಯರಿಂದ ಅನೇಕೋಪಾಖ್ಯಾನಗಳ ಪ್ರವಚನ ; ವೇನ ಪುತ್ರನಾದ ಪೃಥುವಿನ ಕಥೆ ; ತಾರ್ಕ್ಷ್ಯ-ಸರಸ್ವತೀಸಂವಾದ ; ಮತ್ಸ್ಯೋಪಾ ಖ್ಯಾನ ; ಮಾರ್ಕಂಡೇಯಸಮಾಸ್ಯೋಪಾಖ್ಯಾನ ; ಐಂದ್ರದ್ಯುಮ್ನೋಪಾ ಖ್ಯಾನ ; ಧುಂಧುಮಾರನ ಕಥೆ ; ಪತಿವ್ರತೋಪಾಖ್ಯಾನ ; ಅಂಗೀರಸೋಪಾ ಖ್ಯಾನ ; ದ್ರೌಪದೀ-ಸತ್ಯಭಾಮೆಯರ ಸಂವಾದ ; ಕಾಮ್ಯಕವನದಿಂದ ದ್ವೈತ ವನಕ್ಕೆ ಪಾಂಡವರ ಪುನರಾಗಮನ ; ದುರ್ಯೋಧನನ ಘೋಷಯಾತ್ರೆ ; ಗಂಧರ್ವರಿಂದ ದುರ್ಯೋಧನನ ಬಂಧನ ; ಧರ್ಮರಾಜನ ನಿರ್ದೇಶದಂತೆ ಕಿರೀಟಿಯಿಂದ ದುರ್ಯೋಧನನ ಬಂಧವಿಮೋಚನೆ ; ಯುಧಿಷ್ಠಿರನ ಸ್ವಪ್ನ ದಲ್ಲಿ ಜಿಂಕೆಯ ದರ್ಶನ ; ಕಾಮ್ಯಕವನಕ್ಕೆ ಪಾಂಡವರ ಪುನರ್ನಿರ್ಗಮನ ; ವ್ರೀಹಿದ್ರೌಣಿಕಸಮಾಖ್ಯಾನ ; ದುರ್ವಾಸರ ಉಪಾಖ್ಯಾನ ; ಜಯದ್ರಥನಿಂದ ಆಶ್ರಮದಲ್ಲಿದ್ದ ದ್ರೌಪದಿಯ ಅಪಹರಣ ; ಭೀಮಸೇನನು ಬೆನ್ನಟ್ಟಿಹೋಗಿ ಜಯದ್ರಥನನ್ನು ಬಂಧಿಸಿ ಆಶ್ರಮಕ್ಕೆ ಸೆಳೆದು ತಂದು ಅವನ ತಲೆಯನ್ನು

ಬೋಳಿಸಿ, ಅಸ್ತವ್ಯಸ್ತವಾಗಿ ಐದು ಶಿಖೆಗಳನ್ನುಳಿಸಿ, ಅವಮಾನಿಸಿ ಕಳುಹಿಸಿದುದು ಮತ್ತು ರಾಮೋಪಾಖ್ಯಾನದ ಕಥೆಯಿದೆ. ಇಲ್ಲಿಯೇ ರಾಮನು ರಾವಣನನ್ನು ಸಂಹರಿಸಿದ ಕಥೆಯಿದೆ. ಸಾವಿತ್ರ್ಯುಪಾಖ್ಯಾನ ; ಪುರಂದರನಿಂದ ಕರ್ಣನ ಕರ್ಣಕುಂಡಲಗಳ ಮತ್ತು ಕವಚದ ವಿಮೋಕ್ಷಣ ; ಕರ್ಣನಿಗೆ ಇಂದ್ರನು ದಿವ್ಯಶಕ್ತಿಯನ್ನು ಪ್ರದಾನಮಾಡಿದ ಕಥೆಯಿದೆ. ಅನಂತರ ಆರಣೇಯೋಪಾಖ್ಯಾನ. ಇದರಲ್ಲಿ ಯಮಧರ್ಮನು ತನ್ನ ಮಗನಾದ ಯುಧಿಷ್ಠಿರನನ್ನು ನಾನಾವಿಧವಾಗಿ ಪ್ರಶ್ನಿಸುತ್ತಾನೆ. ಧರ್ಮರಾಜನಿತ್ತ ಉತ್ತರಗಳಿಂದ ಸಂತುಷ್ಟನಾದ ಯಮಧರ್ಮನು ವರಪ್ರದಾನಮಾಡುತ್ತಾನೆ. ಯಮಧರ್ಮನಿಂದ ವರಪಡೆದ ಧರ್ಮಜನು ತನ್ನ ಅನುಜರೊಡನೆ ಪಶ್ಚಿಮದಿಕ್ಕಿನ ಕಡೆಗೆ ಪ್ರಯಾಣಮಾಡುತ್ತಾನೆ. ಇದು ಅರಣ್ಯಪರ್ವದ ಸೂಕ್ಷ್ಮಪರಿಚಯ.

**ಅತ್ರಾಧ್ಯಾಯಶತೇ ದ್ವೇ ತು ಸಂಖ್ಯಯಾ ಪರಿಕೀರ್ತಿತೇ ।**
**ಏಕೋನಸಪ್ತತಿಶ್ಚೈವ ತಥಾಧ್ಯಾಯಾಃ ಪ್ರಕೀರ್ತಿತಾಃ ॥೨೦೪॥**

**ಏಕಾದಶಸಹಸ್ರಾಣಿ ಶ್ಲೋಕಾನಾಂ ಷಟ್‌ಶತಾನಿ ಚ ।**
**ಚತುಃಷಷ್ಟಿಸ್ತಥಾ ಶ್ಲೋಕಾಃ ಪರ್ವಣ್ಯಸ್ಮಿನ್ಪ್ರಕೀರ್ತಿತಾಃ ॥೨೦೫॥**

ಈ ಪರ್ವದಲ್ಲಿ ೨೬೯ ಅಧ್ಯಾಯಗಳಿವೆ ಮತ್ತು ೧೧,೬೬೪ ಶ್ಲೋಕಗಳಿವೆ.

ಮಹರ್ಷಿಗಳೇ! ಅರಣ್ಯಪರ್ವದ ನಂತರ ವಿರಾಟಪರ್ವ. ಇದರಲ್ಲಿ ಪಾಂಡವರು ವಿರಾಟನಗರಾಭಿಮುಖವಾಗಿ ಪ್ರಯಾಣಮಾಡಿ ನಗರದ ಸಮೀಪದಲ್ಲಿ ಶಮೀವೃಕ್ಷದಲ್ಲಿ ತಮ್ಮ ಆಯುಧಗಳನ್ನಿಡುತ್ತಾರೆ. ವೇಷಗಳನ್ನು ಮರೆಸಿಕೊಂಡು ಹದಿಮೂರನೆಯ ವರ್ಷ ವಿರಾಟರಾಜನ ಅರಮನೆಯಲ್ಲಿ ವಾಸಮಾಡುತ್ತಿರುತ್ತಾರೆ. ಆ ಸಮಯದಲ್ಲಿ ದ್ರೌಪದಿಯನ್ನು ಮೋಹಿಸಿದ ಕೀಚಕನನ್ನು ಭೀಮಸೇನನು ಸಂಹರಿಸುತ್ತಾನೆ.

ಪಾಂಡವರಿರುವ ಸ್ಥಳವನ್ನು ಕಂಡುಹಿಡಿಯುವ ಸಲುವಾಗಿ ದುರ್ಯೋಧನನು ನಾನಾದೇಶಗಳಿಗೆ ಬಹುನಿಪುಣರಾದ ಗೂಢಚಾರರನ್ನು ಕಳುಹಿಸಿದುದು ; ಪಾಂಡವರನ್ನು ಕಂಡುಹಿಡಿಯಲು ಸಾಧ್ಯವಾಗದೇ ಹೋದುದು ;

ತ್ರಿಗರ್ತರಿಂದ ವಿರಾಟರಾಜನ ಗೋಗ್ರಹಣ ; ತ್ರಿಗರ್ತರೊಡನೆ ವಿರಾಟ ರಾಜನ ಯುದ್ಧ ; ಭೀಮನಿಂದ ವಿರಾಟರಾಜನ ಬಿಡುಗಡೆ ; ವೇಷಮರೆಸಿ ಕೊಂಡಿದ್ದ ಪಾಂಡವರಿಂದ ಗೋವುಗಳ ವಿಮೋಕ್ಷಣ ; ಕುರುಭೂಪರಿಂದ ಉತ್ತರ ಗೋಗ್ರಹಣ ; ಪಾರ್ಥನು ಕೌರವನ ಪಕ್ಷದಲ್ಲಿದ್ದ ಅತಿರಥ-ಮಹಾರಥರನ್ನೂ ಪರಾಜಯಗೊಳಿಸಿ ಗೋವುಗಳನ್ನು ಬಿಡಿಸಿಕೊಂಡು ಬಂದುದು ; ಸಂತುಷ್ಟನಾದ ವಿರಾಟನು ತನ್ನ ಮಗಳಾದ ಉತ್ತರೆಯನ್ನು ಅರ್ಜುನನಿಗೆ ಪ್ರದಾನಮಾಡಿದುದು ; ಅಭಿಮನ್ಯುವಿಗಾಗಿ ಅರ್ಜುನನು ಉತ್ತರೆಯನ್ನು ಸ್ವೀಕರಿಸಿದುದು–ಇವುಗಳು ವರ್ಣಿತವಾಗಿವೆ.

**ಸಪ್ತಷಷ್ಟಿರಥೋ ಪೂರ್ಣಾ ಶ್ಲೋಕಾನಾಮಪಿ ಮೇ ಶೃಣು ।**
**ಶ್ಲೋಕಾನಾಂ ದ್ವೇ ಸಹಸ್ರೇ ತು ಶ್ಲೋಕಾಃ ಪಞ್ಚಾಶದೇವ ತು ॥**

ಇದು ನಾಲ್ಕನೆಯ ಪರ್ವ. ಈ ಪರ್ವದಲ್ಲಿ ೬೭ ಅಧ್ಯಾಯಗಳೂ ೨,೦೫೦ ಶ್ಲೋಕಗಳೂ ಇವೆ.

ಐದನೆಯದು ಉದ್ಯೋಗಪರ್ವ :

ಅಜ್ಞಾತವಾಸದ ಬಳಿಕ ಉಪಪ್ಲವ್ಯನಗರದಲ್ಲಿ ಪಾಂಡವರು ಇರುತ್ತಿರುವಾಗ ಮುಂಬರುವ ಯುದ್ಧದಲ್ಲಿ ಜಯಗಳಿಸುವ ಆಸೆಯಿಂದ ದುರ್ಯೋಧನಾರ್ಜುನರಿಬ್ಬರೂ ಶ್ರೀಕೃಷ್ಣನ ಸಮೀಪದಲ್ಲಿ ಉಪಸ್ಥಿತರಾದುದು ; ಇಬ್ಬರೂ ಯುದ್ಧದಲ್ಲಿ ಶ್ರೀಕೃಷ್ಣನ ಸಹಾಯವನ್ನು ಕೋರಿದುದು ; ನಿರಾಯುಧನಾದ ತಾನೊಬ್ಬನು–ತನ್ನಲ್ಲಿರುವ ಸಾಯುಧವಾದ ಒಂದು ಅಕ್ಷೌಹಿಣೀಸೈನ್ಯ–ಈ ಎರಡರಲ್ಲಿ ಯಾವುದು ಬೇಕೆಂಬುದನ್ನು ತಿಳಿಸುವಂತೆ ಶ್ರೀಕೃಷ್ಣನು ಹೇಳಲಾಗಿ ಮಂದಬುದ್ಧಿಯ ದುರ್ಯೋಧನನು ಸೈನ್ಯವನ್ನೂ, ಅರ್ಜುನನು ನಿರಾಯುಧನಾದ ಶ್ರೀಕೃಷ್ಣನನ್ನೂ ಅಪೇಕ್ಷಿಸಿದುದು ಹೇಳಲ್ಪಟ್ಟಿದೆ. ಪಾಂಡವರ ಪಕ್ಷಕ್ಕೆ ಸೇರಲು ಸೈನ್ಯದೊಡನೆ ಆಗಮಿಸುತ್ತಿದ್ದ ಮದ್ರರಾಜನಿಗೆ ದುರ್ಯೋಧನನು ಮಾರ್ಗದಲ್ಲಿ ಉಪಾಹಾರಾದಿಗಳನ್ನಿತ್ತು ವಂಚಿಸಿ ಅವನನ್ನು ತನ್ನ ಕಡೆಗೆ ಸೆಳೆದುಕೊಂಡುದು ; ಧರ್ಮಾತ್ಮನಾದ ಶಲ್ಯನು ದುರ್ಯೋಧನನ ಕಡೆಗೆ ಸೇರಿ ಯುದ್ಧಮಾಡುವುದಾಗಿ ಅವನಿಗೆ ಅಭಿವಚನವಿತ್ತು ಪಾಂಡವರಲ್ಲಿಗೆ ಹೋದುದು ; ಅಲ್ಲಿ ಪಾಂಡವರನ್ನು ಸವಿನುಡಿಗಳಿಂದ

ಸಂತೈಸಿ ಇಂದ್ರನ ವಿಜಯದ ಕಥೆಯನ್ನು ಪಾಂಡವರಿಗೆ ಶಲ್ಯನು ಹೇಳಿದುದು ಉಕ್ತವಾಗಿದೆ. ಪಾಂಡವರು ದುರ್ಯೋಧನನ ಬಳಿಗೆ ತಮ್ಮ ಪುರೋಹಿತರನ್ನು ಕಳುಹಿಸಿದುದು ; ಧೃತರಾಷ್ಟ್ರನು ಸಂಜಯನನ್ನು ಶಾಂತಿಸಂಧಾನಕ್ಕಾಗಿ ಕಳುಹಿಸಿದುದು ; ಪಾಂಡವರ ನಾಯಕನು ಶ್ರೀಕೃಷ್ಣನೆಂದೂ–ಶ್ರೀಕೃಷ್ಣನನ್ನು ಮುಂದುಮಾಡಿಕೊಂಡು ಪಾಂಡವರು ಯುದ್ಧಸನ್ನದ್ಧರಾಗುತ್ತಿದ್ದಾರೆಂದೂ ತಿಳಿದ ಧೃತರಾಷ್ಟ್ರನಿಗೆ ವಿದುರನು ಹಿತವಾದ ವಿಚಿತ್ರಾರ್ಥದ ಮಾತುಗಳನ್ನು ಹೇಳಿದುದು ; ಇದೇ ರೀತಿಯಲ್ಲಿ ಸನತ್ಸುಜಾತರೂ ಸಹ ಶೋಕಸಂತಪ್ತನಾದ ಧೃತರಾಷ್ಟ್ರನಿಗೆ ಅಧ್ಯಾತ್ಮವಿದ್ಯೆಯನ್ನು ಶ್ರವಣಮಾಡಿಸಿದುದು ; ಸಭಾಮಧ್ಯದಲ್ಲಿ ಸಂಜಯನು ಧೃತರಾಷ್ಟ್ರನ ಆಶಯದಂತೆ ಕೃಷ್ಣಾರ್ಜುನರಿಗಿರುವ ಐಕಾತ್ಮ್ಯವನ್ನು ವಿವರಿಸಿದುದು ; ಆ ಸಮಯದಲ್ಲಿ ಪರಮದಯಾಳುವಾದ ಶ್ರೀಕೃಷ್ಣನು ಶಾಂತಿಸಂಧಾನಕ್ಕಾಗಿ ಹಸ್ತಿನಾವತಿಗೆ ತೆರಳಿದುದು ; ಯದ್ಯಪಿ ಶ್ರೀಕೃಷ್ಣನು ಉಭಯಪಕ್ಷಗಳ ಹಿತದೃಷ್ಟಿಯಿಂದ ಶಾಂತಿಗಾಗಿ ಪ್ರಾರ್ಥಿಸಿದರೂ ದುರ್ಯೋಧನನು ಒಪ್ಪದಿದ್ದುದೂ–ಗಾಲವಮಹರ್ಷಿಯ ಚರಿತ್ರವೂ ಉಕ್ತವಾಗಿದೆ. ವಿದುಲಾಪುತ್ರನ ಆಖ್ಯಾನವಿದೆ. ದುಷ್ಟರಾದ ಕರ್ಣ-ದುರ್ಯೋಧನರು ಶ್ರೀಕೃಷ್ಣನನ್ನು ಬಂಧಿಸಲು ಸಂಚುಮಾಡಿದುದು ; ಅದನ್ನು ತಿಳಿದ ಶ್ರೀಕೃಷ್ಣನು ತನ್ನ ವಿಶ್ವರೂಪವನ್ನು ತೋರಿಸಿದುದು ; ಧೃತರಾಷ್ಟ್ರನ ಸಭೆಯಿಂದ ಹೊರಬರುವಾಗ ಶ್ರೀಕೃಷ್ಣನು ಕರ್ಣನನ್ನು ಕರೆದು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ನಾನಾಕಾರಣಗಳನ್ನು ಮುಂದುಮಾಡಿ ಪಾಂಡವರ ಪಕ್ಷಕ್ಕೆ ಸೇರುವಂತೆ ಪ್ರೇರಣೆಮಾಡಿದುದು ; ಆ ಮಾತಿಗೆ ಕರ್ಣನು ಒಪ್ಪದಿದ್ದುದು ಹೇಳಲ್ಪಟ್ಟಿದೆ. ಹಸ್ತಿನಾಪುರದಿಂದ ಉಪಪ್ಲವ್ಯನಗರಕ್ಕಾಗಮಿಸಿದ ಶ್ರೀಕೃಷ್ಣನು ಅಲ್ಲಿ ನಡೆದುದೆಲ್ಲವನ್ನೂ ಪಾಂಡವರಿಗೆ ವಿವರವಾಗಿ ಹೇಳಿದುದು ; ಶ್ರೀಕೃಷ್ಣನ ಮಾತುಗಳನ್ನು ಕೇಳಿ ಆ ಸಮಯದಲ್ಲಿ ತಮ್ಮ ಹಿತವನ್ನು ಹೇಗೆ ಸಾಧಿಸಿಕೊಳ್ಳಬೇಕೆಂಬುದನ್ನು ಶ್ರೀಕೃಷ್ಣನೊಡನೆ ಸಮಾಲೋಚಿಸಿ, ಯುದ್ಧಮಾಡಬೇಕೆಂದೇ ನಿಶ್ಚಯಿಸಿದ ಪಾಂಡವರು ಯುದ್ಧಸನ್ನದ್ಧರಾದುದು ; ಯುದ್ಧಕ್ಕಾಗಿ ಗಜ-ರಥ-ತುರಗ-ಪದಾತಿಗಳ ನಿರ್ಗಮನ ; ಮಾರನೆಯ ದಿನ ಯುದ್ಧವಾಗುತ್ತದೆ ಎಂಬ ಸಂದರ್ಭದಲ್ಲಿ ದುರ್ಯೋಧನನು ಉಲೂಕನನ್ನು ದೌತ್ಯಕ್ಕಾಗಿ ಕಳುಹಿಸಿದುದು ; ಯುದ್ಧದಲ್ಲಿ ಭಾಗವಹಿಸುವವರಲ್ಲಿ ಅತಿರಥ ಮಹಾರಥರ

ಸಂಖ್ಯಾಗಣನೆ ; ಅಂಬೋಪಾಖ್ಯಾನ–ಇವುಗಳು ಐದನೆಯ ಪರ್ವವಾದ ಉದ್ಯೋಗಪರ್ವದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ.

**ಉದ್ಯೋಗಪರ್ವನಿರ್ದಿಷ್ಟಂ ಸಂಧಿವಿಗ್ರಹಮಿಶ್ರಿತಮ್ ।**
**ಅಧ್ಯಾಯಾನಾಂ ಶತಂ ಪ್ರೋಕ್ತಂ ಷಡಶೀತಿರ್ಮಹರ್ಷಿಣಾ ॥೨೪೨॥**

**ಶ್ಲೋಕಾನಾಂ ಷಟ್‌ಸಹಸ್ರಾಣಿ ತಾವನ್ತ್ಯೇವ ಶತಾನಿ ಚ ।**
**ಶ್ಲೋಕಾಶ್ಚ ನವತಿಃ ಪ್ರೋಕ್ತಾಸ್ತಥೈವಾಷ್ಟೌ ಮಹಾತ್ಮನಾ ।**
**ವ್ಯಾಸೇನೋದಾರಮತಿನಾ ಪರ್ವಣ್ಯಸ್ಮಿಂಸ್ತಪೋಧನಾಃ ॥೨೪೩॥**

ಸಂಧಿ-ವಿಗ್ರಹಮಿಶ್ರಿತವಾದ ಉದ್ಯೋಗಪರ್ವದಲ್ಲಿ ೧೮೬ ಅಧ್ಯಾಯಗಳಿವೆ. ಉದಾರಮತಿಗಳಾದ ವ್ಯಾಸರು ಈ ಪರ್ವದಲ್ಲಿ ೬,೬೯೮ ಶ್ಲೋಕಗಳನ್ನು ಹೇಳಿದ್ದಾರೆ.

ಇದಾದ ಮೇಲೆ ಆರನೆಯದು ವಿಚಿತ್ರಾರ್ಥಯುಕ್ತವಾದ ಭೀಷ್ಮಪರ್ವ. ಇಲ್ಲಿ ಜಂಬೂಖಂಡದ ನಿರ್ಮಾಣದ ವಿಷಯವನ್ನು ಸಂಜಯನು ವಿಸ್ತಾರವಾಗಿ ಹೇಳಿದ್ದಾನೆ. ಯುಧಿಷ್ಠಿರನ ಸೈನ್ಯವು ವಿಷಾದಹೊಂದಿದ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಭೀಷ್ಮನ ದಂಡನಾಯಕತ್ವದಲ್ಲಿ ಹತ್ತು ದಿನಗಳ ಕಾಲ ಘೋರಯುದ್ಧವು ನಡೆದಿದ್ದನ್ನಿಲ್ಲಿ ವರ್ಣಿಸಲಾಗಿದೆ. ಯುದ್ಧಸಮಯದಲ್ಲಿ ಅರ್ಜುನನಿಗುಂಟಾದ ಮನಸ್ಸಿನ ಕಲ್ಮಷವನ್ನು ಶ್ರೀಕೃಷ್ಣನು ತಾರ್ಕಿಕವಾದ ಕಾರಣ-ನಿರೂಪಣೆಗಳೊಡನೆ ಮೋಕ್ಷಸಾಧಕಗಳಾದ ಮಾತುಗಳಿಂದ ಹೋಗಲಾಡಿಸಿದುದು ; ತಾನು ನಿರಾಯುಧನಾಗಿ ಪಾಂಡವಪಕ್ಷದಲ್ಲಿರುವೆನೆಂದು ದುರ್ಯೋಧನನಿಗೆ ಪ್ರತಿವಚನವನ್ನಿತ್ತಿದ್ದರೂ ಉದಾರಮನಸ್ಕನಾದ, ಯುಧಿಷ್ಠಿರನ ಹಿತದಲ್ಲಿಯೇ ಅತ್ಯಂತವಾದ ಆಸಕ್ತಿಯನ್ನು ವಹಿಸಿದ್ದ ಶ್ರೀಕೃಷ್ಣನು ರಥದಿಂದ ಕೆಳಕ್ಕೆ ಧುಮ್ಮಿಕ್ಕಿ ಚಾವಟಿಯನ್ನೇ ಕೈಯಲ್ಲಿ ಹಿಡಿದು ರಭಸದಿಂದ ಭೀಷ್ಮನನ್ನು ಕೊಲ್ಲಲು ಮುನ್ನುಗ್ಗಿದುದು ; ಗಾಂಡೀವಧನ್ವನಾದ, ಸರ್ವಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠನೆನಿಸಿದ ಅರ್ಜುನನನ್ನು ಶ್ರೀಕೃಷ್ಣನು ಮರ್ಮಭೇದಕಗಳಾದ, ಚಾವಟಿಯ ಏಟಿನಂತಹ ಮಾತುಗಳಿಂದ ಪ್ರಹರಿಸಿ ಅವನನ್ನು ರಣೋನ್ಮುಖನನ್ನಾಗಿ ಮಾಡಿದುದು ; ಶ್ರೀಕೃಷ್ಣನಿಂದ ಪ್ರೇರಿತನಾದ

ಪಾರ್ಥನು ಶಿಖಂಡಿಯನ್ನು ಮುಂದುಮಾಡಿದುದು, ಒಡನೆಯೇ ಶಸ್ತ್ರಸಂನ್ಯಾಸ ಮಾಡಿದ ಭೀಷ್ಮನ ಮೇಲೆ ಬಾಣಗಳನ್ನು ಪ್ರಯೋಗಿಸಿ ಅವನನ್ನು ರಥದಿಂದ ಕೆಳಕ್ಕೆ ಬೀಳಿಸಿದುದು ; ಅನಂತರ ಭೀಷ್ಮನು ಅರ್ಜುನನೇ ನಿರ್ಮಿ ಸಿದ ಶರತಲ್ಪದಲ್ಲಿ ತನ್ನ ಮರಣಕಾಲವನ್ನು ನಿರೀಕ್ಷಿಸುತ್ತಾ ಮಲಗಿದುದು—ಈ ವಿಷಯಗಳೆಲ್ಲವೂ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಇಲ್ಲಿಗೆ ಆರನೆಯ ಪರ್ವವು ಮುಗಿಯುತ್ತದೆ.

**ಅಧ್ಯಾಯಾನಾಂ ಶತಂ ಪ್ರೋಕ್ತಂ ತಥಾ ಸಪ್ತದಶಾಪರೇ ।**
**ಪಞ್ಚಶ್ಲೋಕಸಹಸ್ರಾಣಿ ಸಂಖ್ಯಯಾಷ್ಟೌ ಶತಾನಿ ಚ ॥೨೫೨॥**

**ಶ್ಲೋಕಾಶ್ಚ ಚತುರಾಶೀತಿರಸ್ಮಿನ್ಪರ್ವಣಿ ಕೀರ್ತಿತಾಃ ।**
**ವ್ಯಾಸೇನ ವೇದವಿದುಷಾ ಸಂಖ್ಯಾತಾ ಭೀಷ್ಮಪರ್ವಣಿ ॥೨೫೩॥**

ಈ ಪರ್ವದಲ್ಲಿ ೧೧೭ ಅಧ್ಯಾಯಗಳಿವೆ. ವೇದವಿದರಾದ ವ್ಯಾಸರಿಂದ ಈ ಪರ್ವದಲ್ಲಿ ೫,೮೮೪ ಶ್ಲೋಕಗಳು ಹೇಳಲ್ಪಟ್ಟಿವೆ.

ಬ್ರಾಹ್ಮಣೋತ್ತಮರೇ! ಏಳನೆಯದು ದ್ರೋಣಪರ್ವ. ಇದರಲ್ಲಿ ಅನೇಕ ವೃತ್ತಾಂತಗಳು ಹೇಳಲ್ಪಟ್ಟಿವೆ. ಕೌರವಸೇನಾಧಿಪತ್ಯದಲ್ಲಿ ಅಭಿಷಿಕ್ತರಾದ ಆಚಾರ್ಯದ್ರೋಣರು ದುರ್ಯೋಧನನ ಪ್ರೀತ್ಯರ್ಥವಾಗಿ ಧೀಮಂತನಾದ ಪಾಂಡುಪುತ್ರನನ್ನು ( ಧರ್ಮಜನನ್ನು ) ಬಂಧಿಸಿ ತರುವುದಾಗಿ ಪ್ರತಿಜ್ಞೆಮಾಡಿ ದುದು ; ಸಂಶಪ್ತಕರು ಪಾರ್ಥನನ್ನು ಯುದ್ಧಕ್ಕಾಗಿ ಮತ್ತೊಂದು ರಂಗಕ್ಕೆ ಕರೆದೊಯ್ದುದು ; ಇಂದ್ರನಿಗೆ ಸಮನಾದ ಪರಾಕ್ರಮವುಳ್ಳ ಅರ್ಜುನನಿಂದ ಸುಪ್ರತೀಕವೆಂಬ ಆನೆಯ ಮೇಲೆ ಕುಳಿತಿದ್ದ ಭಗದತ್ತನ ವಧೆ ; ಅರ್ಜುನನಿಲ್ಲ ದಿದ್ದ ಸಮಯದಲ್ಲಿ ಬಾಲಕನಾಗಿದ್ದ ಅಭಿಮನ್ಯುವೇ ರಣರಂಗಕ್ಕೆ ಧಾವಿಸಿ ಬಂದುದು ; ಏಕಾಕಿಯಾಗಿದ್ದ ಬಾಲಕನನ್ನು ಜಯದ್ರಥನೇ ಮೊದಲಾದ ಅತಿರಥ-ಮಹಾರಥರೆಲ್ಲರೂ ಸೇರಿ ಸಂಹರಿಸಿದುದು ; ಅಭಿಮನ್ಯುವಿನ ಮರಣದಿಂದ ಕುಪಿತನಾದ ಅರ್ಜುನನು ಏಳು ಅಕ್ಷೌಹಿಣೀಸೈನ್ಯಗಳನ್ನು ಸಂಹರಿಸಿದ್ದಲ್ಲದೇ—ಜಯದ್ರಥನನ್ನೂ ಸಂಹರಿಸಿದುದು ; ಯುಧಿಷ್ಠಿರನ ಆಜ್ಞೆಯಂತೆ ಭೀಮ-ಸಾತ್ಯಕಿಯರು ಅರ್ಜುನನನ್ನು ಹುಡುಕಲು ದೇವತೆ ಗಳಿಂದಲೂ ಪ್ರವೇಶಿಸಲು ಸಾಧ್ಯವಾಗದ ಕೌರವಸೇನಾವ್ಯೂಹವನ್ನು ಪ್ರವೇ

ಶಿಸಿದುದು ; ಅರ್ಜುನನೊಡನೆ ಯುದ್ಧಮಾಡುತ್ತಿದ್ದ ಒಂಬತ್ತು ಕೋಟಿ ಸಂಶಪ್ತಕರಲ್ಲಿ ಒಬ್ಬರಾದರೂ ಉಳಿಯದಿದ್ದುದು ; ಧೃತರಾಷ್ಟ್ರನ ಪುತ್ರರೂ, ಕಲ್ಲುಬಂಡೆಗಳನ್ನೇ ಹೊತ್ತು ಯುದ್ಧಮಾಡುತ್ತಿದ್ದ ಅಲಂಬುಷ, ಶ್ರುತಾಯು, ಜಲಸಂಧ, ಸೌಮದತ್ತಿ, ವಿರಾಟ, ದ್ರುಪದ, ಘಟೋತ್ಕಚ–ಇವರೆಲ್ಲರೂ ದ್ರೋಣರ ಸೇನಾಧಿಪತ್ಯದಲ್ಲಿ ನಡೆದ ಯುದ್ಧದಲ್ಲಿ ಹತರಾದುದು ; ದ್ರೋಣರೂ ಹತರಾಗಲಾಗಿ ಪರಮಕ್ರುದ್ಧನಾದ ಅಶ್ವತ್ಥಾಮನು ಪಾಂಡವ ರನ್ನು ನಿಗ್ರಹಿಸಲು ಉಗ್ರವಾದ ನಾರಾಯಣಾಸ್ತ್ರವನ್ನು ಬಿಡಲು ಅನು ವಾದುದು–ಇವು ಹೇಳಲ್ಪಟ್ಟಿವೆ. ಈ ಸಂದರ್ಭದಲ್ಲಿ ಆಗ್ನೇಯಾಸ್ತ್ರದ ಮಹಿಮೆ, ರುದ್ರಮಹಿಮೆ, ಕೃಷ್ಣ-ಪಾರ್ಥರ ಮಹಿಮೆ, ವ್ಯಾಸರ ಆಗಮನ– ಇವುಗಳೂ ಹೇಳಲ್ಪಟ್ಟಿವೆ.

ಮಹತ್ತಾದ ಏಳನೆಯದಾದ ದ್ರೋಣಪರ್ವವು ಮುಗಿಯುವ ವೇಳೆಗೆ ಸಾಮಾನ್ಯವಾಗಿ ಎಲ್ಲ ಮಹಾಶೂರರೂ ಮಡಿದಿರುತ್ತಾರೆ.

**ಅತ್ರಾಧ್ಯಾಯಶತಂ ಪ್ರೋಕ್ತಂ ತಥಾಧ್ಯಾಯಾಶ್ಚ ಸಪ್ತತಿಃ ।**
**ಅಷ್ಟೌ ಶ್ಲೋಕಸಹಸ್ರಾಣಿ ತಥಾ ನವ ಶತಾನಿ ಚ ॥೨೬೮॥**

**ಶ್ಲೋಕಾ ನವ ತಥೈವಾತ್ರ ಸಂಖ್ಯಾತಾಸ್ತತ್ತ್ವದರ್ಶಿನಾ ।**
**ಪಾರಾಶರ್ಯೇಣ ಮುನಿನಾ ಸಂಚಿನ್ತ್ಯ ದ್ರೋಣಪರ್ವಣಿ ॥೨೬೯॥**

ಪರಾಶರರ ಮಕ್ಕಳಾದ ವ್ಯಾಸರು ದ್ರೋಣಪರ್ವವನ್ನು ೧೭೦ ಅಧ್ಯಾಯಗಳನ್ನಾಗಿ ವಿಂಗಡಿಸಿದ್ದಾರೆ. ಶ್ಲೋಕಗಳ ಸಂಖ್ಯೆ ೮,೯೦೯.

ಎಂಟನೆಯದು ಪರಮಾದ್ಭುತವಾದ ಕರ್ಣಪರ್ವ. ಕರ್ಣನಿಗೆ ಶಲ್ಯನ ಸಾರಥ್ಯವು ಲಭಿಸಿದುದು ; ( ಇಲ್ಲಿಯೇ ತ್ರಿಪುರಸಂಹಾರಪ್ರಕರಣವೂ ಹೇಳ ಲ್ಪಟ್ಟಿದೆ. ) ರಣರಂಗಕ್ಕೆ ಹೋಗುತ್ತಿರುವಾಗ ನಡುದಾರಿಯಲ್ಲಿ ಕರ್ಣ- ಶಲ್ಯರ ವಾಗ್ಯುದ್ಧ ; ಹಂಸ-ಕಾಕೀಯಾಖ್ಯಾನ ; ಅಶ್ವತ್ಥಾಮನಿಂದ ಪಾಂಡ್ಯನ ಸಂಹಾರ; ದಂಡಸೇನ ಮತ್ತು ದಂಡಧರರ ವಧೆ ; ಕರ್ಣನು ಯುಧಿಷ್ಠಿರನ ಪ್ರಾಣಾ ಪಹಾರ ಮಾಡಿಬಿಡಬಹುದೆನ್ನುವ ಸನ್ನಿವೇಶವೂ ಸನ್ನಿಹಿತವಾದುದು ; ಅಲ್ಲಿದ್ದ ಧನುರ್ಧರರೆಲ್ಲರೂ ಕಾತರತೆಯಿಂದ ಸನ್ನಿವೇಶವನ್ನು ವೀಕ್ಷಿಸುತ್ತಿದ್ದುದು; ಯುಧಿಷ್ಠಿರಾರ್ಜುನರ ಮಧ್ಯೆ ಕ್ರೋಧಯುಕ್ತವಾದ ವಾಗ್ವಾದ ; ಮಾಧವನು

ಅರ್ಜುನನ ಕೋಪವನ್ನು ಶಾಂತಗೊಳಿಸಿದುದು ; ತಾನು ಮಾಡಿದ್ದ ಪ್ರತಿಜ್ಞೆಯಂತೆ ಭೀಮನು ದುಃಶಾಸನನ ವಕ್ಷಸ್ಥಳವನ್ನು ಉಗುರುಗಳಿಂದಲೇ ಬಗೆದು ಯುದ್ಧದಲ್ಲಿ ಅವನ ರಕ್ತಪಾನಮಾಡಿದುದು ; ಕರ್ಣಾರ್ಜುನರಿಗೆ ನಡೆದ ದ್ವಂದ್ವಯುದ್ಧದಲ್ಲಿ ಅರ್ಜುನನು ಕರ್ಣನನ್ನು ಸಂಹರಿಸಿದುದು–ಈ ವಿಷಯಗಳೆಲ್ಲವೂ ಹೇಳಲ್ಪಟ್ಟಿವೆ. ಇಲ್ಲಿಗೆ ಕರ್ಣಪರ್ವವು ಮುಗಿಯುತ್ತದೆ.

**ಏಕೋನಸಪ್ತತಿಃ ಪ್ರೋಕ್ತಾ ಅಧ್ಯಾಯಾಃ ಕರ್ಣಪರ್ವಣಿ ।**
**ಚತ್ವಾರ್ಯೇವ ಸಹಸ್ರಾಣಿ ನವ ಶ್ಲೋಕಶತಾನಿ ಚ ।**
**ಚತುಃಷಷ್ಟಿಸ್ತಥಾ ಶ್ಲೋಕಾಃ ಪರ್ವಣ್ಯಸ್ಮಿನ್ಪ್ರಕೀರ್ತಿತಾಃ ॥೨೭೪॥**

ಕರ್ಣಪರ್ವದಲ್ಲಿ ೬೯ ಅಧ್ಯಾಯಗಳಿವೆ ಮತ್ತು ೪,೯೬೪ ಶ್ಲೋಕಗಳಿವೆ.

ಅನಂತರದಲ್ಲಿ ವಿಚಿತ್ರಾರ್ಥಯುಕ್ತವಾದ ಶಲ್ಯಪರ್ವವು ಕೀರ್ತಿತವಾಗಿದೆ. ಶಲ್ಯನು ಸೇನಾಧಿಪತ್ಯವನ್ನು ವಹಿಸಿಕೊಳ್ಳುವ ವೇಳೆಗೆ ಕೌರವರ ಪಕ್ಷದಲ್ಲಿದ್ದ ಪ್ರಮುಖಯೋಧರೆಲ್ಲರೂ ವಧಿಸಲ್ಪಟ್ಟಿದ್ದರು. ಈ ಪರ್ವದಲ್ಲಿ ಕಾರ್ತಿಕೇಯನ ಆಖ್ಯಾನವಿದೆ. ಅಳಿದುಳಿದ ಕುರುಮುಖ್ಯರೂ ಇಲ್ಲಿ ಸಾಯುತ್ತಾರೆ. ಧರ್ಮರಾಜನಿಂದ ಶಲ್ಯನು ಹತನಾಗುತ್ತಾನೆ. ಇದೇ ಪರ್ವದಲ್ಲಿಯೇ ಸಹದೇವನು ಶಕುನಿಯನ್ನು ಸಂಹರಿಸುವ ಆಖ್ಯಾನವಿದೆ. ಹನ್ನೊಂದು ಅಕ್ಷೌಹಿಣೀಸೈನ್ಯದಲ್ಲಿ ಬಹುಭಾಗವು ವಿನಾಶಹೊಂದಿ ಅತ್ಯಲ್ಪಸಂಖ್ಯೆಯಲ್ಲಿ ಸೈನ್ಯವು ಉಳಿಯಲಾಗಿ ಸುಯೋಧನನು ಸರೋವರವೊಂದರಲ್ಲಿ ಜಲಸ್ತಂಭನದಿಂದ ಅಡಗಿಕೊಳ್ಳುತ್ತಾನೆ. ವ್ಯಾಧರು ಆ ವಿಷಯವನ್ನು ಪಾಂಡವರಿಗೆ ಹೇಳುತ್ತಾರೆ. ಶ್ರೀಕೃಷ್ಣನೊಡನೆ ಪಾಂಡವರು ಸರೋವರದ ಸಮೀಪಕ್ಕೆ ಹೋಗಿ ಒಳಗಿದ್ದ ದುರ್ಯೋಧನನ ಮನಸ್ಸನ್ನು ಚುಚ್ಚುಮಾತುಗಳಿಂದ ಉದ್ವೇಗಗೊಳಿಸಿ ಅವನು ಮೇಲೆ ಬರುವಂತೆ ಮಾಡುತ್ತಾರೆ. ಸರೋವರದ ಸಮೀಪದಲ್ಲಿಯೇ ಭೀಮ-ದುರ್ಯೋಧನರಿಗೆ ಘೋರವಾದ ಗದಾಯುದ್ಧವು ನಡೆಯುತ್ತದೆ. ಅದೇ ಸಮಯಕ್ಕೆ ಸರಿಯಾಗಿ ತೀರ್ಥಯಾತ್ರೆಗಾಗಿ ಪ್ರಯಾಣಮಾಡಿದ್ದ ಬಲರಾಮನೂ ಆ ಸ್ಥಳಕ್ಕೆ ಆಗಮಿಸುತ್ತಾನೆ. ಬಲರಾಮನ ಯಾತ್ರೆಗೆ ಸಂಬಂಧಿಸಿದಂತೆ ಸರಸ್ವತಿಯೇ ಮೊದಲಾದ ಪುಣ್ಯತೀರ್ಥಗಳ ಕೀರ್ತನವಿದೆ. ಭೀಮ-ದುರ್ಯೋಧನರ ನಡುವೆ ನಡೆದ ಮಹತ್ತ್ವಪೂರ್ಣವಾದ ಗದಾಯುದ್ಧದ ಸುದೀರ್ಘವರ್ಣನೆಯಿದೆ. ಕಟ್ಟಕಡೆ

ಯಲ್ಲಿ ಭೀಮಸೇನನು ಗದೆಯಿಂದ ದುರ್ಯೋಧನನ ಎರಡು ತೊಡೆಗಳನ್ನೂ ಮುರಿದು ಬೀಳಿಸುತ್ತಾನೆ. ಇಲ್ಲಿಗೆ ಒಂಬತ್ತನೆಯ ಶಲ್ಯಪರ್ವವು ಮುಗಿಯುತ್ತದೆ.

**ಏಕೋನಷಷ್ಟಿರಧ್ಯಾಯಾಃ ಪರ್ವಣ್ಯತ್ರ ಪ್ರಕೀರ್ತಿತಾಃ ।**
**ಸಂಖ್ಯಾತಾ ಬಹುವೃತ್ತಾನ್ತಾಃ ಶ್ಲೋಕಸಂಖ್ಯಾತ್ರ ಕಥ್ಯತೇ ॥೨೮೯॥**

**ತ್ರೀಣಿ ಶ್ಲೋಕಸಹಸ್ರಾಣಿ ದ್ವೇ ಶತೇ ವಿಂಶತಿಸ್ತಥಾ ।**
**ಮುನಿನಾ ಸಮ್ಪ್ರಣೀತಾನಿ ಕೌರವಾಣಾಂ ಯಶೋಭೃತಾ ॥೨೯೦॥**

ಶಲ್ಯಪರ್ವದಲ್ಲಿ ೫೯ ಅಧ್ಯಾಯಗಳೂ ಮತ್ತು ೩,೨೨೦ ಶ್ಲೋಕಗಳೂ ಇವೆ.

ಶಲ್ಯಪರ್ವದನಂತರ ಬಹುದಾರುಣವಾದ ಸೌಪ್ತಿಕಪರ್ವವಿದೆ. ಭೀಮನು ತನ್ನ ಗದೆಯಿಂದ ದುರ್ಯೋಧನನ ತೊಡೆಗಳನ್ನು ಮುರಿದು ಕೆಳಗೆ ಬೀಳಿಸಿದ ನಂತರ ಪಾಂಡವರೆಲ್ಲರೂ ಹೊರಟುಹೋಗುತ್ತಾರೆ. ದುರ್ಯೋಧನನು ರಕ್ತದಿಂದ ತೋಯ್ದುಹೋದ ಶರೀರವುಳ್ಳವನಾಗಿ ಭೂಮಿಯ ಮೇಲೆ ಬಿದ್ದಿದ್ದನು. ಸಾಯಂಕಾಲ ಕೃತಕರ್ಮ-ಕೃಪ-ಅಶ್ವತ್ಥಾಮರು ಯುದ್ಧಭೂಮಿಗೆ ಆಗಮಿಸಿ ತಮ್ಮ ರಾಜನ ದುರವಸ್ಥೆಯನ್ನು ಕಂಡು ಬಹಳ ದುಃಖಿತರಾಗುತ್ತಾರೆ. ಅಶ್ವತ್ಥಾಮನು ದುರ್ಯೋಧನನ ದುರ್ದಶೆಯನ್ನು ಕಂಡು ಕ್ರೋಧಮೂರ್ಛಿತನಾಗಿ ಧೃಷ್ಟದ್ಯುಮ್ನನೇ ಮೊದಲಾದ ಸಕಲ ಪಾಂಚಾಲರನ್ನೂ, ಅಮಾತ್ಯಸಹಿತರಾದ ಪಾಂಡವರನ್ನೂ ಸಂಹರಿಸುವ ವರೆಗೂ ತಾನು ತೊಟ್ಟಿರುವ ಕವಚವನ್ನು ತೆಗೆಯುವುದಿಲ್ಲವೆಂದು ಘೋರ ಪ್ರತಿಜ್ಞೆಮಾಡಿ, ರಥದಲ್ಲಿ ಕುಳಿತು ಕೃಪ-ಕೃತವರ್ಮರೊಡನೆ ಹೊರಟು ಹೋಗುತ್ತಾನೆ. ಕೋಪಾವಿಷ್ಟನಾಗಿ ಅಶ್ವತ್ಥಾಮನು ಹೋಗುತ್ತಿದ್ದಾಗ ಕಾಡಿನಲ್ಲಿ ಆಲದಮರದ ಮೇಲೆ ಮಲಗಿ ನಿದ್ರಿಸುತ್ತಿದ್ದ ಕಾಗೆಗಳನ್ನು ಗೂಬೆಯೊಂದು ಕೊಲ್ಲುತ್ತಿರುವುದನ್ನು ಕಾಣುತ್ತಾನೆ. ಶಸ್ತ್ರಸಂನ್ಯಾಸಮಾಡಿ ಕುಳಿತಿದ್ದ ತನ್ನ ತಂದೆಯನ್ನು ಧೃಷ್ಟದ್ಯುಮ್ನನು ಕೊಂದುದು ಒಡನೆಯೇ ಸ್ಮೃತಿಪಥಕ್ಕೆ ಬಂದು ಕೋಪವು ಉಲ್ಬಣಿಸುತ್ತದೆ. ಧೃಷ್ಟದ್ಯುಮ್ನಾದಿಗಳು ಮಲಗಿರುವ ಶಿಬಿರದ್ವಾರದಲ್ಲಿ ಆಕಾಶದವರೆಗಿರುವ ಪ್ರದೇಶವನ್ನೂ ವ್ಯಾಪಿಸಿ ನಿಂತಿದ್ದ

ರಾಕ್ಷಸನನ್ನು ನೋಡುತ್ತಾನೆ. ಅಶ್ವತ್ಥಾಮನು ಅವನ ಮೇಲೆ ಮಾಡಿದ ಅಸ್ತ್ರ ಪ್ರಯೋಗಗಳೆಲ್ಲವೂ ವ್ಯರ್ಥವಾಗಿಹೋಗುತ್ತವೆ. ಒಡನೆಯೇ ಅಶ್ವತ್ಥಾಮನು ರುದ್ರನನ್ನಾರಾಧಿಸಿ, ಅವನನ್ನು ಪ್ರಸನ್ನಗೊಳಿಸಿ, ಕೃಪ-ಕೃತವರ್ಮರೊಡನೆ ಶಿಬಿರದೊಳಗೆ ನುಗ್ಗಿ ನಿಶ್ಚಿಂತೆಯಿಂದ ಮಲಗಿದ್ದ ಧೃಷ್ಟದ್ಯುಮ್ನನೇ ಮೊದಲಾದ ಪಾಂಚಾಲರನ್ನೂ ದ್ರೌಪದಿಯ ಮಕ್ಕಳನ್ನೂ ಸಂಹರಿಸಿಬಿಡುತ್ತಾನೆ. ಕೃಷ್ಣನ ಬಲದ ಆಶ್ರಯದಿಂದಾಗಿ ಪಂಚಪಾಂಡವರು ಮತ್ತು ಸಾತ್ಯಕಿ–ಇವರುಗಳು ಮಾತ್ರವೇ ಉಳಿದುಕೊಳ್ಳುತ್ತಾರೆ. ಧೃಷ್ಟದ್ಯುಮ್ನನ ಸಾರಥಿಯು ಪಾಂಡವರ ಬಳಿಗೆ ಬಂದು ಆ ದುರಂತವಾರ್ತೆಯನ್ನು ಹೇಳುತ್ತಾನೆ. ಅಶ್ವತ್ಥಾಮನ ಘೋರಕೃತ್ಯವನ್ನು ಕೇಳುತ್ತಲೇ ದ್ರೌಪದಿಯು ಬಹಳ ದುಃಖಿತಳಾಗುತ್ತಾಳೆ. ತಂದೆ, ಅಣ್ಣ ಮತ್ತು ಕಡೆಗೆ ಮಕ್ಕಳನ್ನೂ ದ್ರೌಪದಿಯು ಆ ಮಹಾಯುದ್ಧದಲ್ಲಿ ಕಳೆದುಕೊಳ್ಳುತ್ತಾಳೆ. ತನ್ನ ಮಕ್ಕಳನ್ನೂ ಅಣ್ಣನನ್ನೂ ಕೊಂದ ಮಹಾಪಾಪಿಗೆ ಪ್ರತೀಕಾರವನ್ನು ಮಾಡದಿದ್ದರೆ ತಾನು ಆಮರಣಾಂತವಾಗಿ ಉಪವಾಸಮಾಡುವುದಾಗಿ ಪ್ರತಿಜ್ಞೆಮಾಡುತ್ತಾಳೆ. ದ್ರೌಪದಿಯನ್ನು ಸಂತೈಸುವ ಸಲುವಾಗಿ ಭೀಮನು ಒಡನೆಯೇ ತನ್ನ ಗದೆಯನ್ನು ಹೆಗಲ ಮೇಲೆ ಹಾಕಿಕೊಂಡು ಅಶ್ವತ್ಥಾಮನ ಬೆನ್ನಟ್ಟಿ ಹೋಗುತ್ತಾನೆ. ಭೀಮಸೇನನ ಭಯದಿಂದಲೂ ದೈವಪ್ರೇರಣೆಯಿಂದಲೂ ಅಶ್ವತ್ಥಾಮನು ಪೃಥ್ವಿಯನ್ನು ಪಾಂಡವರಹಿತವನ್ನಾಗಿ ಮಾಡಬೇಕೆಂದು ಸಂಕಲ್ಪಿಸಿ ದಿವ್ಯಾಸ್ತ್ರವನ್ನು ಪ್ರಯೋಗಮಾಡಿಬಿಡುತ್ತಾನೆ. ಶ್ರೀಕೃಷ್ಣನು ತಾನಿದ್ದೆಡೆಯಲ್ಲಿಯೇ–'ಮೈವಂ' 'ಹೀಗೆಂದಿಗೂ ಆಗಬಾರದು' 'ಪಾಂಡವರೆಂದಿಗೂ ನಾಶವಾಗಕೂಡದು' – ಎಂದು ಹೇಳಿ ಅಸ್ತ್ರದ ಕ್ರೌರ್ಯವನ್ನು ಕಡಿಮೆಮಾಡುತ್ತಾನೆ. ಅರ್ಜುನನು ಒಡನೆಯೇ ಪ್ರತ್ಯಸ್ತ್ರವನ್ನು ಪ್ರಯೋಗಿಸಿ ಅಶ್ವತ್ಥಾಮನು ಬಿಟ್ಟ ಮಹಾಸ್ತ್ರವನ್ನು ಶಾಂತಗೊಳಿಸುತ್ತಾನೆ. ದ್ರೌಣಿಯ ಮನಸ್ಸಿನಲ್ಲಿ ದ್ರೋಹಪೂರ್ಣವಾದ ವಿಚಾರಧಾರೆಯು ಪ್ರವಹಿಸುತ್ತಿರುವುದನ್ನು ತಿಳಿದು ವ್ಯಾಸ-ಕೃಷ್ಣರು ಶಪಿಸುತ್ತಾರೆ. ಅದಕ್ಕೆ ಪ್ರತಿಯಾಗಿ ಕುಪಿತನಾದ ಅಶ್ವತ್ಥಾಮನೂ ಕೃಷ್ಣನನ್ನು ಹಳಿಯುತ್ತಾನೆ. ಪಾಂಡವರು ದ್ರೋಣಪುತ್ರನಿಂದ ಮಣಿಯನ್ನು ಕಸಿದುಕೊಂಡು ಬಂದು ದ್ರೌಪದಿಗೆ ಸಮರ್ಪಿಸುತ್ತಾರೆ. ಅದರಿಂದ ದ್ರೌಪದಿಯು ಪ್ರಸನ್ನಳಾಗುತ್ತಾಳೆ.

**ಏತದ್ವೈ ದಶಮಂ ಪರ್ವ ಸೌಪ್ತಿಕಂ ಸಮುದಾಹೃತಮ್ ।**
**ಅಷ್ಟಾದಶಾಸ್ಮಿನ್ನಧ್ಯಾಯಾಃ ಪರ್ವಣ್ಯುಕ್ತಾ ಮಹಾತ್ಮನಾ ॥೩೧೦॥**

**ಶ್ಲೋಕಾನಾಂ ಕಥಿತಾನ್ಯತ್ರ ಶತಾನ್ಯಷ್ಟೌ ಪ್ರಸಂಖ್ಯಯಾ ।**
**ಶ್ಲೋಕಾಶ್ಚ ಸಪ್ತತಿಃ ಪ್ರೋಕ್ತಾ ಮುನಿನಾ ಬ್ರಹ್ಮವಾದಿನಾ ॥೩೧೧॥**

ಇದು ಹತ್ತನೆಯದಾದ ಸೌಪ್ತಿಕಪರ್ವದ ಸಂಕ್ಷೇಪವಿವರಣೆ. ಈ ಪರ್ವವನ್ನು ಬ್ರಹ್ಮವಾದಿಗಳಾದ ವ್ಯಾಸರು ೧೮ ಅಧ್ಯಾಯಗಳನ್ನಾಗಿ ವಿಂಗಡಿಸಿರುತ್ತಾರೆ. ಇದರಲ್ಲಿ ೮೭೦ ಶ್ಲೋಕಗಳಿವೆ.

ವ್ಯಾಸರು ಈ ಸೌಪ್ತಿಕಪರ್ವದಲ್ಲಿಯೇ ಐಷೀಕಪರ್ವದ ಕಥೆಯನ್ನೂ ಅಳವಡಿಸಿದ್ದಾರೆ.

ಮುಂದಿನದು ಕರುಣಾಜನಕವಾದ ಸ್ತ್ರೀಪರ್ವ. ಧೃತರಾಷ್ಟ್ರನ ಪುತ್ರ ಶೋಕಕ್ಕೆ ಮಿತಿಯೇ ಇರಲಿಲ್ಲ. ತನ್ನ ದುಷ್ಟಪುತ್ರರೆಲ್ಲರನ್ನೂ ಸಂಹರಿಸಿದ ಭೀಮನನ್ನೊಮ್ಮೆ ಬಾಚಿತಬ್ಬಿಕೊಳ್ಳುವ ಆಶಯವನ್ನು ಧೃತರಾಷ್ಟ್ರನು ವ್ಯಕ್ತಪಡಿಸುತ್ತಾನೆ. ಇಂಗಿತಜ್ಞನಾದ ಶ್ರೀಕೃಷ್ಣನು ಭೀಮನನ್ನು ದೂರದಲ್ಲಿಯೇ ನಿಲ್ಲಿಸಿ ಲೋಹದ ಪ್ರತಿಮೆಯೊಂದನ್ನು ಧೃತರಾಷ್ಟ್ರನ ಮುಂದೆ ನಿಲ್ಲಿಸುತ್ತಾನೆ. ಪುತ್ರಶೋಕಕರ್ಶಿತನಾದ ಧೃತರಾಷ್ಟ್ರನಿಂದ ಆಲಿಂಗಿತವಾದ ಆ ಲೋಹದ ಪ್ರತಿಮೆಯು ಚೂರು-ಚೂರಾಗಿ ಹೋಗುತ್ತದೆ. ಶೋಕತಪ್ತನಾಗಿದ್ದ ಧೃತರಾಷ್ಟ್ರನಿಗೆ ವಿದುರನು ಸಂಸಾರದಲ್ಲಿನ ಸುಖ-ದುಃಖಗಳ ವಿಷಯವನ್ನು ಮನಮುಟ್ಟುವಂತೆ ಹೇಳಿದನಲ್ಲದೇ-ಸಂಸಾರವನ್ನು ತ್ಯಾಗಮಾಡುವ ವಿಧಾನವನ್ನೂ, ತನ್ಮೂಲಕವಾಗಿ ಮೋಕ್ಷದ ಸಾಧನೆಯನ್ನೂ ಯುಕ್ತಿಯುಕ್ತವಾಗಿ ತಿಳಿಸಿ ಸಮಾಧಾನಗೊಳಿಸುತ್ತಾನೆ. ಬಳಿಕ ಅಂತಃಪುರದ ಸ್ತ್ರೀಯರೊಡನೆ ಧೃತರಾಷ್ಟ್ರನು ಯುದ್ಧಭೂಮಿಗೆ ಬಂದುದೂ ಮತ್ತು ಅಲ್ಲಿ ವೀರಸ್ತ್ರೀಯರು ತಮ್ಮ ತಮ್ಮ ಪತಿಗಳ ದೇಹಗಳನ್ನು ತೊಡೆಗಳ ಮೇಲಿಟ್ಟುಕೊಂಡು ರೋದಿಸಿದ ಪ್ರಕರಣವೂ ಹೇಳಲ್ಪಟ್ಟಿದೆ. ಪತಿಗಳನ್ನು ಮಾತ್ರವಲ್ಲದೇ–ಸಂಗ್ರಾಮದಿಂದ ಹಿಂದಿರುಗದೇ ವೀರಸ್ವರ್ಗವನ್ನು ಪಡೆದ ಮಕ್ಕಳನ್ನೂ, ಸೋದರರನ್ನೂ, ತಂದೆಯರನ್ನೂ ಕ್ಷತ್ರಿಯಸ್ತ್ರೀಯರು ನೋಡಿ ದುಃಖಿಸಿದ ಉಲ್ಲೇಖವಿದೆ. ಧೃತರಾಷ್ಟ್ರ-ಗಾಂಧಾರಿಯರ ಕೋಪಾವೇಶ, ಮತ್ತೊಂದು ಕ್ಷಣದಲ್ಲಿ ಅಪಾರವಾದ ದುಃಖ, ಮರುಕ್ಷಣದಲ್ಲಿ ಮೂರ್ಛೆ–ಇವುಗಳನ್ನು ಕಣ್ಣಿಗೆ

ಕಟ್ಟುವಂತೆ ವ್ಯಾಸರು ಚಿತ್ರಿಸಿದ್ದಾರೆ. ಪುತ್ರ-ಪೌತ್ರರ ವಧೆಯಿಂದಾಗಿ ಶೋಕಕರ್ಶಿತಳಾಗಿದ್ದ ಗಾಂಧಾರಿಯ ಬಳಿಗೆ ಶ್ರೀಕೃಷ್ಣನೇ ಆಗಮಿಸಿ ಅವಳನ್ನು ಸಾಂತ್ವವಚನಗಳಿಂದ ಸಮಾಧಾನಗೊಳಿಸುತ್ತಾನೆ.

ಧರ್ಮಿಷ್ಠನಾದ ಯುಧಿಷ್ಠಿರನು ಯುದ್ಧದಲ್ಲಿ ಮರಣವನ್ನೈದಿದ ರಾಜ ಪುತ್ರರೆಲ್ಲರಿಗೂ ಯಥಾವಿಧಿಯಾಗಿ ದಹನಕ್ರಿಯೆಗಳನ್ನು ಮಾಡಿಸುತ್ತಾನೆ. ರಾಜರೆಲ್ಲರಿಗೂ ಜಲಪ್ರದಾನಮಾಡುವ ಕಾಲದಲ್ಲಿ ಕುಂತಿಯು ರಹಸ್ಯದಲ್ಲಿ ಹುಟ್ಟಿದ ತನ್ನ ಮಗನಾದ ಕರ್ಣನ ವಿಷಯವನ್ನು ಹೊರಗೆಡಹುತ್ತಾಳೆ.

ಹನ್ನೊಂದನೆಯದಾದ ಸ್ತ್ರೀಪರ್ವವು ನಿಶ್ಚಿತವಾಗಿಯೂ ಪಾಠಕರಾದ ಸಜ್ಜನರ ಮನಸ್ಸನ್ನು ಸಂಕಟಪಡಿಸುವುದೇ ಅಲ್ಲದೇ ಅವರ ಕಣ್ಣುಗಳನ್ನೂ ಅಶ್ರುಪೂರ್ಣಗಳನ್ನಾಗಿ ಮಾಡುತ್ತದೆ.

**ಸಪ್ತವಿಂಶತಿರಧ್ಯಾಯಾಃ ಪರ್ವಣ್ಯಸ್ಮಿನ್ಪ್ರಕೀರ್ತಿತಾಃ ।**
**ಶ್ಲೋಕಸಪ್ತಶತೀ ಚಾಪಿ ಪಞ್ಚಸಪ್ತತಿಸಂಯುತಾ ॥೩೨೪॥**

ಈ ಪರ್ವದಲ್ಲಿ ೨೭ ಅಧ್ಯಾಯಗಳೂ, ೭೭೫ ಶ್ಲೋಕಗಳೂ ಇವೆ.

ಅನಂತರದಲ್ಲಿ ಬುದ್ಧಿಯನ್ನು ಪ್ರವರ್ಧಿಸುವ ಶಾಂತಿಪರ್ವವು ವ್ಯಾಸರಿಂದ ಹೇಳಲ್ಪಟ್ಟಿದೆ. ಇದು ಹನ್ನೆರಡನೆಯ ಪರ್ವ. ಯುದ್ಧಾನಂತರದಲ್ಲಿ ಧರ್ಮರಾಜನು ಅಣ್ಣ-ತಮ್ಮಂದಿರನ್ನೂ, ಬಂಧುವರ್ಗದವರನ್ನೂ ಯುದ್ಧದಲ್ಲಿ ಸಂಹರಿಸಿದುದಕ್ಕಾಗಿ ವ್ಯಥೆಪಡುತ್ತಾನೆ. ಆ ಸಮಯದಲ್ಲಿ ಶರತಲ್ಪದಲ್ಲಿ ಮಲಗಿದ್ದ ಭೀಷ್ಮರು ಧರ್ಮರಾಜನಿಗೆ ರಾಜರು ಅವಶ್ಯವಾಗಿ ತಿಳಿದಿರಲೇಬೇಕಾದ ರಾಜಧರ್ಮವನ್ನೂ, ಕಾಲಹೇತುನಿದರ್ಶಕವಾದ ಆಪದ್ಧರ್ಮವನ್ನೂ, ಯಾವ ಧರ್ಮವನ್ನು ತಿಳಿಯುವುದರಿಂದ ಮಾನವನು ಸಕಲಧರ್ಮಗಳನ್ನೂ ಮತ್ತು ಸರ್ವಜ್ಞತ್ವವನ್ನೂ ಪಡೆಯುವನೋ ಅಂತಹ ಮೋಕ್ಷಧರ್ಮವನ್ನೂ ಸವಿಸ್ತಾರವಾಗಿ ಹೇಳುತ್ತಾರೆ. ಹನ್ನೆರಡನೆಯ ಈ ಶಾಂತಿಪರ್ವವು ಪ್ರಾಜ್ಞರಾದವರಿಗೆ ಬಹುಪ್ರಿಯವಾದ ಪರ್ವವಾಗಿದೆ.

**ಅತ್ರ ಪರ್ವಣಿ ವಿಜ್ಞೇಯಮಧ್ಯಾಯಾನಾಂ ಶತತ್ರಯಮ್ ।**
**ತ್ರಿಂಶಚ್ಚೈವ ತಥಾಧ್ಯಾಯಾ ನವ ಚೈವ ತಪೋಧನಾಃ ॥೩೩೦॥**
**ಚತುರ್ದಶ ಸಹಸ್ರಾಣಿ ತಥಾ ಸಪ್ತ ಶತಾನಿ ಚ ।**
**ಸಪ್ತ ಶ್ಲೋಕಾಸ್ತಥೈವಾತ್ರ ಪಞ್ಚವಿಂಶತಿಸಂಖ್ಯಯಾ ॥೩೩೧॥**

ಈ ಪರ್ವದಲ್ಲಿ ೩೩೯ ಅಧ್ಯಾಯಗಳಿವೆ ; ಶ್ಲೋಕಸಂಖ್ಯೆ ೧೪,೭೩೨.

ಮುಂದಿನದು ಹದಿಮೂರನೆಯದಾದ ಉತ್ತಮೋತ್ತಮವಾದ ಅನು ಶಾಸನಪರ್ವ. ಈ ಪರ್ವದಲ್ಲಿ ಕುರುರಾಜನಾದ ಯುಧಿಷ್ಠಿರನು ಭಾಗೀರಥಿಯ ಮಗನಾದ ಭೀಷ್ಮನಿಂದ ಧರ್ಮದ ನಿಶ್ಚಯಸ್ವರೂಪವೇನೆಂಬುದನ್ನು ತಿಳಿದುಕೊಂಡು ಹೇಗೆ ತನ್ನ ಮನಸ್ಸಿನ ವೇದನೆಯನ್ನು ದೂರಮಾಡಿ ಕೊಂಡನೆಂಬುದನ್ನು ಹೇಳಲಾಗಿದೆ. ಧರ್ಮಾರ್ಥಗಳ ಸಂಬಂಧವನ್ನೂ ಮತ್ತು ಆಚಾರ-ವ್ಯವಹಾರಗಳನ್ನೂ ಇಲ್ಲಿ ನಿರೂಪಿಸಲಾಗಿದೆ. ವಿವಿಧವಾದ ದಾನಗಳನ್ನೂ ಮತ್ತು ಅವುಗಳಿಂದ ಪ್ರಾಪ್ತವಾಗುವ ಫಲಗಳನ್ನೂ ವಿವರಿಸಿ ಹೇಳಲಾಗಿದೆ. ದಾನಕೊಡಲು ಉತ್ತಮಪಾತ್ರ, ಉತ್ತಮವಿಧಿ, ಆಚಾರ ಮತ್ತು ಗೋವುಗಳ ಮಾಹಾತ್ಮ್ಯ, ಧರ್ಮರಹಸ್ಯ, ತೀರ್ಥಗಳು ಮತ್ತು ಪರ್ವದಿನಗಳ ಮಹಿಮೆ ಮುಂತಾದ ಅನೇಕವೃತ್ತಾಂತಗಳು ಅನುಶಾಸನಪರ್ವದಲ್ಲಿ ಹೇಳಲ್ಪಟ್ಟಿವೆ. ಇದೇ ಪರ್ವದಲ್ಲಿಯೇ ಭೀಷ್ಮರ ಸ್ವರ್ಗಪ್ರಾಪ್ತಿಯ ವಿಷಯವನ್ನೂ ಹೇಳಲಾಗಿದೆ.

**ಏತತ್ತ್ರಯೋದಶಂ ಪರ್ವ ಧರ್ಮನಿಶ್ಚಯಕಾರಕಮ್ ।**
**ಅಧ್ಯಾಯಾನಾಂ ಶತಂ ತ್ವತ್ರ ಷಟ್ಚತ್ವಾರಿಂಶದೇವ ತು ॥೩೩೭॥**
**ಶ್ಲೋಕಾನಾಂ ತು ಸಹಸ್ರಾಣಿ ಪ್ರೋಕ್ತಾನ್ಯಷ್ಟೌ ಪ್ರಸಂಖ್ಯಯಾ ।**
**ತತೋಽಶ್ವಮೇಧಿಕಂ ನಾಮ ಪರ್ವ ಪ್ರೋಕ್ತಂ ಚತುರ್ದಶಮ್ ॥**

ಧರ್ಮದ ನಿರ್ಣಯವನ್ನು ಮಾಡಿ ಹೇಳುವ ಅನುಶಾಸನಿಕಪರ್ವವು ಹದಿಮೂರನೆಯದು. ಈ ಪರ್ವದಲ್ಲಿ ೧೪೬ ಅಧ್ಯಾಯಗಳೂ ೮,೦೦೦ ಶ್ಲೋಕಗಳೂ ಇವೆ.

ಹದಿನಾಲ್ಕನೆಯದು ಅಶ್ವಮೇಧಿಕಪರ್ವ. ಈ ಪರ್ವದಲ್ಲಿ ಉತ್ತಮ ಯೋಗಿಗಳಾದ ಸಂವರ್ತ ಮತ್ತು ಮರುತ್ತರ ಉಪಾಖ್ಯಾನವಿದೆ. ಯುಧಿಷ್ಠಿರ ನಿಗೆ ಚಿನ್ನದ ನಿಧಿಯು ಪ್ರಾಪ್ತವಾಗುವ ವೃತ್ತಾಂತವಿದೆ. ಪರೀಕ್ಷಿತನ ಜನ್ಮ ವೃತ್ತಾಂತವಿದೆ. ಪರೀಕ್ಷಿತನು ಗರ್ಭದಲ್ಲಿದ್ದಾಗ ಅಶ್ವತ್ಥಾಮನ ಅಸ್ತ್ರದಿಂದ ದಗ್ಧವಾಗಿ ಹೋಗಿದ್ದನು. ಅನಂತರ ಶ್ರೀಕೃಷ್ಣನ ಅನುಗ್ರಹದಿಂದ ಜೀವಂತ ನಾಗುತ್ತಾನೆ. ಇದರ ವಿವರಣೆಯಿದೆ. ಅಶ್ವಮೇಧಯಾಗಕ್ಕಾಗಿ ಅಶ್ವಮೇಧಾ ಶ್ವದ ವಿಮೋಚನೆ, ಪಾಂಡವನು (ಅರ್ಜುನನು) ಕುದುರೆಯನ್ನನುಸರಿಸಿ ಹೊರಟುದು, ಅಶ್ವವನ್ನು ಪ್ರತಿಬಂಧಿಸಿದವರೊಡನೆ ಯುದ್ಧಮಾಡಿದುದು–

ಇತ್ಯಾದಿಗಳು ವರ್ಣಿತವಾಗಿವೆ. ಕುದುರೆಯು ದೇಶ-ವಿದೇಶಗಳಲ್ಲಿ ಪರ್ಯಟನಮಾಡುತ್ತಿದ್ದಾಗ ಚಿತ್ರಾಂಗದೆಯ ಮಗನಾದ ಬಭ್ರುವಾಹನನು ಕುದುರೆಯನ್ನು ಕಟ್ಟಿಹಾಕುತ್ತಾನೆ. ಅರ್ಜುನ-ಬಭ್ರುವಾಹನರಿಗೆ ಘೋರ ಯುದ್ಧವಾಗುತ್ತದೆ. ಇದರ ವಿವರಣೆಯೂ ಈ ಪರ್ವದಲ್ಲಿಯೇ ಇದೆ. ಅಶ್ವಮೇಧಮಹಾಯಜ್ಞವು ನಡೆಯುತ್ತಿದ್ದಾಗ ನಕುಲಾಖ್ಯಾನವು ಹೇಳಲ್ಪಟ್ಟಿದೆ.

**ಅಧ್ಯಾಯಾನಾಂ ಶತಂ ಚೈವ ತ್ರಯೋಽಧ್ಯಾಯಾಶ್ಚ ಕೀರ್ತಿತಾಃ ।**
**ತ್ರೀಣಿ ಶ್ಲೋಕಸಹಸ್ರಾಣಿ ತಾವನ್ತ್ಯೇವ ಶತಾನಿ ಚ ।**
**ವಿಂಶತಿಶ್ಚ ತಥಾ ಲೋಕಾಃ ಸಂಖ್ಯಾತಾಸ್ತತ್ತ್ವದರ್ಶಿನಾ ॥೩೪೪॥**

ಅಶ್ವಮೇಧಿಕಪರ್ವದಲ್ಲಿ ೧೦೩ ಅಧ್ಯಾಯಗಳೂ, ೩,೩೭೦ ಶ್ಲೋಕಗಳೂ ಇವೆ.

ಆಶ್ರಮವಾಸಿಕವೆಂಬುದು ಹದಿನೈದನೆಯ ಪರ್ವ. ಈ ಪರ್ವದಲ್ಲಿ ಧೃತರಾಷ್ಟ್ರನು ರಾಜ್ಯವನ್ನು ಬಿಟ್ಟು ಗಾಂಧಾರಿಯೊಡನೆ ಅರಣ್ಯಕ್ಕೆ ಹೊರಟಿರುವುದನ್ನು ನೋಡಿ, ಸಾಧ್ವಿಯಾದ ಕುಂತಿಯೂ ಪುತ್ರನ ರಾಜ್ಯವನ್ನು ಪರಿತ್ಯಜಿಸಿ ಅವರ ಹಿಂದೆಯೇ ಹೊರಡುವಳು. ಅರಣ್ಯದಲ್ಲಿ ಧೃತರಾಷ್ಟ್ರನು ವ್ಯಾಸಮಹರ್ಷಿಗಳ ಅನುಗ್ರಹದಿಂದ ಯುದ್ಧದಲ್ಲಿ ಪ್ರಾಣತೊರೆದಿದ್ದ ಮಕ್ಕಳನ್ನೂ, ಮೊಮ್ಮಕ್ಕಳನ್ನೂ ಪ್ರತ್ಯಕ್ಷವಾಗಿ ಕಾಣುತ್ತಾನೆ. ಅನಂತರದಲ್ಲಿ ರಾಜನು ಪುತ್ರಶೋಕವನ್ನು ಸಂಪೂರ್ಣವಾಗಿ ಮರೆತು, ಪತ್ನೀಸಮೇತನಾಗಿ ಸದ್ಗತಿಯನ್ನು ಪಡೆಯುವ ಕಥಾಪ್ರಸಂಗವಿದೆ. ವಿದುರನೂ–ಮಹಾಮಾತ್ಯನಾದ ಗವಲ್ಗಣನ ಪುತ್ರನಾದ, ವಿದ್ವಾಂಸನಾದ ಸಂಜಯನೂ ಪರಮಪದವನ್ನು ಸೇರುತ್ತಾರೆ. ಈ ವಿಷಯಗಳೆಲ್ಲವೂ ಈ ಪರ್ವದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಯುಧಿಷ್ಠಿರ-ನಾರದರ ಸಮಾಗಮ, ಯಾದವರ ಕಲಹವೃತ್ತಾಂತ–ಇವುಗಳೂ ಆಶ್ರಮವಾಸಿಕಪರ್ವದಲ್ಲಿ ಉಕ್ತವಾಗಿವೆ.

**ದ್ವಿಚತ್ವಾರಿಂಶದಧ್ಯಾಯಾಃ ಪರ್ವೈತದಭಿಸಂಖ್ಯಯಾ ।**
**ಸಹಸ್ರಮೇಕಂ ಶ್ಲೋಕಾನಾಂ ಪಞ್ಚ ಶ್ಲೋಕಶತಾನಿ ಚ ।**
**ಷಡೇವ ಚ ತಥಾ ಶ್ಲೋಕಾಃ ಸಂಖ್ಯಾತಾಸ್ತತ್ತ್ವದರ್ಶಿನಾ ॥೩೫೨॥**

ಈ ಪರ್ವದಲ್ಲಿ ೪೨ ಅಧ್ಯಾಯಗಳೂ ೧,೫೦೬ ಶ್ಲೋಕಗಳೂ ಇವೆ.

ಮುಂದಿನದು ದಾರುಣವಾದ ಮೌಸಲಪರ್ವ. ಸಮುದ್ರದ ತೀರದಲ್ಲಿ ಯದು ವಂಶದ ವೀರರು ಪರಸ್ಪರವಾಗಿ ಯುದ್ಧಮಾಡುತ್ತಾ ಅಸ್ತ್ರ-ಶಸ್ತ್ರಗಳ ಸ್ಪರ್ಶ ಮಾತ್ರದಿಂದಲೇ ವಿಧ್ವಸ್ತರಾಗುತ್ತಾರೆ. ದೈವದ ಪ್ರೇರಣೆಯೋ ಎಂಬಂತೆ–ಮತ್ತೆ ಕೆಲವು ಯಾದವರು ಮಧುಪಾನಸ್ಥಳಕ್ಕೆ ಹೋಗಿ, ಮಿತಿಮೀರಿ ಮಧು ಪಾನಮಾಡಿ ಮತ್ತರಾಗಿ, ಬ್ರಾಹ್ಮಣಶಾಪದಿಂದ ಪೀಡಿತರಾಗಿ ಏರಕಾರೂಪದ (ಜೊಂಡುಹುಲ್ಲು ) ವಜ್ರಾಯುಧಗಳಿಂದ ಪರಸ್ಪರ ಹೊಡೆದಾಡಿ ಪ್ರಾಣ ತೊರೆಯುತ್ತಾರೆ. ಸರ್ವಕ್ಷಯಕ್ಕೂ ಕಾರಣರಾದ ಬಲರಾಮ-ಶ್ರೀಕೃಷ್ಣರು ಬಹುಸಮರ್ಥರಾಗಿದ್ದರೂ ಕಾಲನಿಯಮವನ್ನು ಉಲ್ಲಂಘಿಸಲಿಲ್ಲ.

ಅಣ್ಣನ ಮಾತಿನಂತೆ ಅರ್ಜುನನು ದ್ವಾರಾವತಿಗೆ ಹೋಗಿ ವೃಷ್ಣಿವಂಶವು ಪೂರ್ಣವಾಗಿ ವಿನಾಶಹೊಂದಿರುವುದನ್ನು ನೋಡಿ ಬಹುವಾಗಿ ದುಃಖಿಸು ತ್ತಾನೆ. ಮಾತುಲನಾದ ವಸುದೇವನಿಗೆ ದಹನಸಂಸ್ಕಾರವನ್ನು ಮಾಡಿ ಪಾನಭೂಮಿಗೆ ಹೋಗಿ ಅಲ್ಲಿ ಯದುವೀರರ ರೋಮಾಂಚಕಾರಿಯಾದ ವಿನಾಶದ ದೃಶ್ಯವನ್ನು ಕಾಣುತ್ತಾನೆ.

ಶ್ರೀಕೃಷ್ಣ-ಬಲರಾಮರಿಗೂ, ವೃಷ್ಣಿವಂಶದ ಪ್ರಧಾನನಾಯಕರಿಗೂ ಅರ್ಜುನನು ದೇಹಸಂಸ್ಕಾರಮಾಡುತ್ತಾನೆ. ದ್ವಾರವತಿಯಲ್ಲಿ ಅಳಿದುಳಿದಿದ್ದ ವೃದ್ಧ-ಬಾಲಕರನ್ನೂ, ಸ್ತ್ರೀಯರನ್ನೂ ಕರೆದುಕೊಂಡು ಹಸ್ತಿನಾವತಿಗೆ ಬರು ತ್ತಿರುವಾಗ-ದಾರಿಯಲ್ಲಿ ಅವನನ್ನು ಪ್ರತಿಭಟಿಸಿದ ಕಳ್ಳ-ಕಾಕರಿಂದಲೇ ಪರಾ ಜಿತನಾಗುತ್ತಾನೆ. ಗಾಂಡೀವದ ಶೌರ್ಯವೂ ಉಡುಗಿಹೋಗುತ್ತದೆ. ಯಾವ ಮಹಾಸ್ತ್ರಗಳೂ ಅವನ ಸ್ಮೃತಿಪಥಕ್ಕೆ ಸುಳಿಯದಾಗುತ್ತವೆ. ಅವನೆದುರಿನಲ್ಲಿಯೇ ಯಾದವರ ಭಾರ್ಯೆಯರನ್ನು ಕಳ್ಳರು ಅಪಹರಿಸಿಕೊಂಡು ಹೊರಟು ಹೋಗುತ್ತಾರೆ. ಆದರಿಂದಾಗಿ ಅರ್ಜುನನಿಗೆ ಬಹಳ ದುಃಖವಾಗುತ್ತದೆ. ಪುನಃ ಹಸ್ತಿನೆಗೆ ಹೋಗುವ ಆಶಯವೂ ಇರಲಿಲ್ಲ. ಆದರೆ ವ್ಯಾಸರ ಪ್ರೇರಣೆಯಂತೆ ಧರ್ಮರಾಜನಲ್ಲಿಗೆ ಹೋಗಿ ಎಲ್ಲ ವಿಷಯಗಳನ್ನೂ ಹೇಳಿ ಸಂನ್ಯಾಸವನ್ನು ತೆಗೆದುಕೊಳ್ಳಲು ಅನುಮತಿಯನ್ನು ಬೇಡುತ್ತಾನೆ. ಇದು ಹದಿನಾರನೆಯದಾದ ಮೌಸಲಪರ್ವದ ಸಂಕ್ಷೇಪವಾದ ಕಥಾನಿರೂಪಣೆ.

**ಅಧ್ಯಾಯಾಷ್ಟೌ ಸಮಾಖ್ಯಾತಾಃ ಶ್ಲೋಕಾನಾಂ ಚ ಶತತ್ರಯಮ್ ।**
**ಶ್ಲೋಕಾನಾಂ ವಿಂಶತಿಶ್ಚೈವ ಸಂಖ್ಯಾತಾಸ್ತತ್ತ್ವದರ್ಶಿನಾ ॥೩೬೩॥**

ಈ ಪರ್ವದಲ್ಲಿ ೮ ಅಧ್ಯಾಯಗಳೂ ೩೨೦ ಶ್ಲೋಕಗಳೂ ಉಕ್ತವಾಗಿವೆ.

ಹದಿನೇಳನೆಯದು *ಮಹಾಪ್ರಸ್ಥಾನಿಕಪರ್ವ. ಪಾಂಡವರು ರಾಜ್ಯವನ್ನು ತ್ಯಜಿಸಿ ದ್ರೌಪದಿಯೊಡನೆ ಮಹಾಪ್ರಸ್ಥಾನವನ್ನನುಸರಿಸಿ ಹೊರಟ ಕಥೆಯು ಈ ಪರ್ವದಲ್ಲಿ ಹೇಳಲ್ಪಟ್ಟಿದೆ.

ಕೆಂಪುಸಮುದ್ರದ ಸಮೀಪದಲ್ಲಿ ಪ್ರಯಾಣಮಾಡುತ್ತಿದ್ದಾಗ ಪಾಂಡವರು ಯಜ್ಞೇಶ್ವರನನ್ನು ಸಂದರ್ಶಿಸುತ್ತಾರೆ. ಅಗ್ನಿಯಿಂದ ಪ್ರೇರಿತನಾಗಿ ಅರ್ಜುನನು ಯಜ್ಞೇಶ್ವರನನ್ನು ಯಥೋಚಿತವಾಗಿ ಸಂಪೂಜಿಸಿ ಉತ್ತಮೋತ್ತಮವಾದ ಗಾಂಡೀವಧನುಸ್ಸನ್ನು ಅಗ್ನಿಗೆ ಅರ್ಪಿಸುತ್ತಾನೆ. ಅನ್ನಾಹಾರಗಳಿಲ್ಲದೇ ಯುಧಿಷ್ಠಿರನ ಜೊತೆಯಲ್ಲಿ ನಡೆದುಹೋಗುತ್ತಿದ್ದ ಭೀಮಾರ್ಜುನ-ನಕುಲ-ಸಹದೇವ-ದ್ರೌಪದಿಯರು ಒಬ್ಬೊಬ್ಬರಾಗಿ ಅಸುನೀಗಿ ಕೆಳಗೆ ಬೀಳುತ್ತಾರೆ. ಯುಧಿಷ್ಠಿರನದನ್ನು ನೋಡಿ ರಾಜ್ಯ-ಕೋಶಗಳೆಲ್ಲವನ್ನೂ ಪರಿತ್ಯಜಿಸಿದಂತೆಯೇ ಅವರೆಲ್ಲರನ್ನೂ ಪರಿತ್ಯಜಿಸಿ ತನ್ನ ಮಹಾಪ್ರಸ್ಥಾನದ ಪ್ರಯಾಣವನ್ನು ಮುಂದುವರಿಸುತ್ತಾನೆ. ಧರ್ಮರಾಜನನ್ನು ಸ್ವರ್ಗಕ್ಕೊಯ್ಯಲು ದೇವರಥವೊಂದು ಹಿಂಬಾಲಿಸಿರುತ್ತದೆ. ಜೊತೆಯಲ್ಲಿದ್ದ ನಾಯಿಯನ್ನು ಬಿಟ್ಟು ತಾನೊಬ್ಬನೇ ದೇವರಥದಲ್ಲಿ ಕುಳಿತುಕೊಳ್ಳಲು ಧರ್ಮಜನು ಇಷ್ಟಪಡುವುದಿಲ್ಲ. ಬಳಲಿಬೆಂಡಾಗಿರುವ ಧರ್ಮಜನನ್ನು ಕರೆದೊಯ್ಯಲು ದೇವರಥವು ಉಪಸ್ಥಿತವಾಗಿದ್ದರೂ ಧರ್ಮೈಕದೃಷ್ಟಿಯುಳ್ಳ ಮತ್ತು ಕರುಣಾಮಯನಾದ ಧರ್ಮಜನು ನಾಯಿಯನ್ನು ಬಿಟ್ಟು ರಥಕ್ಕೆ ಹತ್ತಲಾರೆನೆಂದು ಹೇಳಲಾಗಿ ನಾಯಿಯ ಸ್ವರೂಪವನ್ನು ಧರಿಸಿದ್ದ ಯಮಧರ್ಮನು ಪ್ರತ್ಯಕ್ಷನಾಗಿ ಮಗನೊಡನೆ ದಿವ್ಯರಥದಲ್ಲಿ ಕುಳಿತು ಸ್ವರ್ಗಕ್ಕೆ ಪ್ರಯಾಣಮಾಡುತ್ತಾನೆ. ಇಲ್ಲಿಗೆ ಮಹಾಪ್ರಸ್ಥಾನಿಕಪರ್ವವು ಮುಗಿಯುತ್ತದೆ.

**ಯತ್ರಾಧ್ಯಾಯಾಸ್ತ್ರಯಃ ಪ್ರೋಕ್ತಾಃ ಶ್ಲೋಕಾನಾಂ ಚ ಶತತ್ರಯಂ ।**
**ವಿಂಶತಿಶ್ಚ ತಥಾ ಶ್ಲೋಕಾಃ ಸಂಖ್ಯಾತಾಸ್ತತ್ತ್ವದರ್ಶಿನಾ ॥೩೬॥**

---

* ಮಹಾಪ್ರಸ್ಥಾನವೆಂದರೆ ಅರಮನೆಯನ್ನು ಅಥವಾ ಮನೆ-ಮಠಗಳನ್ನು ತೊರೆದು ಮರಣವನ್ನು ಹೊಂದುವ ಆಶಯದಿಂದ ಅನ್ನಾಹಾರಗಳನ್ನು ವರ್ಜಿಸಿ ಸ್ವೇಚ್ಛೆಯಿಂದ ದೇಶ-ವಿದೇಶಗಳಲ್ಲಿ ನಡೆದುಹೋಗುತ್ತಾ, ಪ್ರಾಣವಿನ್ನೂ ಉಳಿದಿದ್ದರೆ ಉತ್ತರದಿಕ್ಕಿನಲ್ಲಿರುವ ಹಿಮವತ್ಪರ್ವತವನ್ನು ಸೇರಿ ಅಲ್ಲಿ ಪ್ರಾಣತೊರೆಯುವುದು.

ಈ ಪರ್ವದಲ್ಲಿ ೩ ಅಧ್ಯಾಯಗಳೂ ೩೭೦ ಶ್ಲೋಕಗಳೂ ಇವೆ.

ಹದಿನೆಂಟನೆಯದು ಸ್ವರ್ಗಾರೋಹಣಪರ್ವ. ಇದರಲ್ಲಿ ಅನೇಕವಾದ ದಿವ್ಯವೃತ್ತಾಂತಗಳು ಹೇಳಲ್ಪಟ್ಟಿವೆ. ಅಲೌಕಿಕವಾದ ವೃತ್ತಾಂತಗಳಿವೆ. ಸ್ವರ್ಗಕ್ಕೆ ಹೋಗುವ ಹಾದಿಯಲ್ಲಿ ದೇವದೂತನು ವ್ಯಾಜಾಂತರದಿಂದ ಧರ್ಮಜನಿಗೆ ನರಕವನ್ನು ತೋರಿಸುತ್ತಾನೆ. ಅಲ್ಲಿ ತನ್ನ ತಮ್ಮಂದಿರ ಆರ್ತನಾದಗಳನ್ನು ಕೇಳಿ ಧರ್ಮಜನು ದುಃಖಿಸುತ್ತಾನೆ. ಮರುಕ್ಷಣದಲ್ಲಿಯೇ ದೇವಕಿಂಕರರೊಡನೆ ಮತ್ತೊಂದು ಪ್ರದೇಶದಲ್ಲಿ ಪ್ರಯಾಣಮಾಡುತ್ತಿದ್ದಾಗ ಅವನ ಅನುಜರೆಲ್ಲರೂ ಸದ್ಗತಿಯನ್ನು ಪಡೆದು ಸ್ವರ್ಗಸುಖವನ್ನನುಭವಿಸುತ್ತಿರುವ ದೃಶ್ಯವನ್ನೂ ದೇವರಾಜನೇ ತೋರಿಸುತ್ತಾನೆ. ಯುಧಿಷ್ಠಿರನು ಆಕಾಶಗಂಗೆಯಲ್ಲಿ ಸ್ನಾನಮಾಡಿ, ತನ್ನ ಪಾರ್ಥಿವಶರೀರವನ್ನು ಅಲ್ಲಿಯೇ ತೊರೆದು ದೇವರೂಪ ವನ್ನು ಧರಿಸಿ, ಸ್ವಧರ್ಮಾರ್ಜಿತವಾದ ಪುಣ್ಯಸ್ಥಾನವನ್ನು ಸ್ವರ್ಗದಲ್ಲಿ ಪಡೆದು ಇಂದ್ರನೇ ಮೊದಲಾದ ದೇವತೆಗಳಿಂದ ಸತ್ಕೃತನಾಗಿ ಆನಂದಭರಿತನಾಗಿರು ತ್ತಾನೆ. ವ್ಯಾಸಪ್ರೋಕ್ತವಾದ ಮಹಾಭಾರತದಲ್ಲಿ ಹದಿನೆಂಟನೆಯ ಪರ್ವವಿದು.

**ಅಧ್ಯಾಯಾಃ ಪಞ್ಚ ಸಂಖ್ಯಾತಾಃ ಪರ್ವಣ್ಯಸ್ಮಿನ್ಮಹಾತ್ಮನಾ ।**
**ಶ್ಲೋಕಾನಾಂ ದ್ವೇ ಶತೇ ಚೈವ ಪ್ರಸಂಖ್ಯಾತೇ ತಪೋಧನಾಃ ॥೩೭೭॥**

**ನವ ಶ್ಲೋಕಾಸ್ತಥೈವಾನ್ಯೇ ಸಂಖ್ಯಾತಾಃ ಪರಮರ್ಷಿಣಾ ।**
**ಅಷ್ಟಾದಶೈವಮೇತಾನಿ ಪರ್ವಾಣ್ಯುಕ್ತಾನ್ಯಶೇಷತಃ ॥೩೭೮॥**

ಈ ಪರ್ವದಲ್ಲಿ ಐದು ಅಧ್ಯಾಯಗಳೂ ೨೦೯ ಶ್ಲೋಕಗಳೂ ಇವೆ.

ಮಹಾಭಾರತದಲ್ಲಿ ಈ ಕಥಾಭಾಗಗಳನ್ನೊಳಗೊಂಡ ಹದಿನೆಂಟು ಪರ್ವಗಳು ವ್ಯಾಸರಿಂದ ಹೇಳಲ್ಪಟ್ಟಿವೆ.

ಖಿಲಭಾಗದಲ್ಲಿ ಹರಿವಂಶವೂ ಭವಿಷ್ಯದ್ವರ್ಣನೆಯೂ ಹೇಳಲ್ಪಟ್ಟಿದೆ.

**ದಶಶ್ಲೋಕಸಹಸ್ರಾಣಿ ವಿಂಶಚ್ಛ್ಲೋಕಶತಾನಿ ಚ ।**
**ಖಿಲೇಷು ಹರಿವಂಶೇ ಚ ಸಂಖ್ಯಾತಾನಿ ಮಹರ್ಷಿಣಾ ॥೩೮೦॥**

ಹರಿವಂಶದಲ್ಲಿ ೧೨,೦೦೦ ಶ್ಲೋಕಗಳಿವೆ.

ಈ ಪ್ರಕಾರವಾಗಿ ಮಹಾಭಾರತದ ಪರ್ವಸಂಗ್ರಹವು ಮಹರ್ಷಿಗಳಾದ ವ್ಯಾಸರಿಂದ ಹೇಳಲ್ಪಟ್ಟಿದೆ.

ಋಷಿಸತ್ತಮರೇ! ಹದಿನೆಂಟು ಅಕ್ಷೌಹಿಣೀಸಂಖ್ಯೆಯ ಸೈನ್ಯಗಳು ಯುದ್ಧಮಾಡುವ ಇಚ್ಛೆಯಿಂದ ಕುರುಕ್ಷೇತ್ರಕ್ಕೆ ಆಗಮಿಸಿದ್ದುವು. ಆ ಭಯಂಕರಯುದ್ಧವು ಹದಿನೆಂಟು ದಿನಗಳ ಪರ್ಯಂತವಾಗಿ ನಡೆಯಿತು.

**ಯೋ ವಿದ್ಯಾಚ್ಚತುರೋ ವೇದಾನ್ಸಾಙ್ಗೋಪನಿಷದೋ ದ್ವಿಜಃ ।**
**ನ ಚಾಖ್ಯಾನಮಿದಂ ವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ ॥೩೮೨॥**

ಯಾವ ಬ್ರಾಹ್ಮಣನೇ ಆಗಲಿ ನಾಲ್ಕು ವೇದಗಳನ್ನೂ, ವೇದಾಂಗಗಳನ್ನೂ, ಉಪನಿಷತ್ತುಗಳನ್ನೂ ಅಧ್ಯಯನಮಾಡಿರಬಹುದು. ಆದರೂ ಈ ಮಹಾಭಾರತದ ಆಖ್ಯಾನವನ್ನು ತಿಳಿದುಕೊಳ್ಳದಿದ್ದರೆ ಅಂತಹವನು ಖಂಡಿತವಾಗಿಯೂ ವಿಚಕ್ಷಣನೆನಿಸಿಕೊಳ್ಳಲಾರನು.

**ಅರ್ಥಶಾಸ್ತ್ರಮಿದಂ ಪ್ರೋಕ್ತಂ ಧರ್ಮಶಾಸ್ತ್ರಮಿದಂ ಮಹತ್ ।**
**ಕಾಮಶಾಸ್ತ್ರಮಿದಂ ಪ್ರೋಕ್ತಂ ವ್ಯಾಸೇನಾಮಿತಬುದ್ಧಿನಾ ॥೩೮೩॥**

ಈ ಮಹಾಭಾರತವು ಕೇವಲ ಒಂದು ವಿಷಯಕ್ಕೆ ಸೀಮಿತವಾಗಿಲ್ಲ. ಬಹುಬುದ್ಧಿಶಾಲಿಗಳಾದ ವ್ಯಾಸರು ಇದರಲ್ಲಿ ಅರ್ಥಶಾಸ್ತ್ರ, ಧರ್ಮಶಾಸ್ತ್ರ ಮತ್ತು ಕಾಮಶಾಸ್ತ್ರಗಳನ್ನೂ ಆಯಾ ಸಂದರ್ಭಗಳಿಗೆ ಅನುಗುಣವಾಗಿ ಹೇಳಿದ್ದಾರೆ.

ಭಾರತದ ಉಪಾಖ್ಯಾನವನ್ನು ಕೇಳುತ್ತಿರುವವನಿಗೆ ಬೇರೆಯ ಉಪಾಖ್ಯಾನಗಳನ್ನು ಕೇಳುವ ಅಭಿರುಚಿಯು ಖಂಡಿತವಾಗಿಯೂ ಉಂಟಾಗುವುದಿಲ್ಲ. ಕೋಗಿಲೆಯ ಸುಮಧುರಧ್ವನಿಯನ್ನು ಕೇಳಿದವರು ಕಾಗೆಯ ಕಾ-ಕಾ ಎಂಬ ಶಬ್ದವನ್ನು ಕೇಳಲು ಅಪೇಕ್ಷಿಸುವರೇ? ಪಂಚಭೂತಗಳಿಂದ ಮೂರು ಲೋಕಗಳೂ ಹುಟ್ಟುವಂತೆ–ಉತ್ತಮೋತ್ತಮವಾದ ಈ ಇತಿಹಾಸದಿಂದ ಕವಿಗಳಿಗೆ ಸ್ಫೂರ್ತಿಯು ಹುಟ್ಟುತ್ತದೆ. ಆಕಾಶದ ಮಡಿಲಿನಲ್ಲಿ ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ್ಜಗಳೆಂಬ ನಾಲ್ಕು ವಿಧವಾದ ಪ್ರಾಣಿಗಳಿರುವಂತೆ ಮಹಾಭಾರತದ ಮಡಿಲಿನಲ್ಲಿ ಹದಿನೆಂಟು ಪುರಾಣಗಳಿವೆ. ಸಮಸ್ತವಾದ ಇಂದ್ರಿಯಚೇಷ್ಟೆಗಳಿಗೂ ಮಾನಸಿಕಕ್ರಿಯೆಗಳು ಹೇಗೆ ಆಧಾರಭೂತವಾಗಿರುವುವೋ–ಹಾಗೆಯೇ ಸಂಪೂರ್ಣವಾದ ಲೌಕಿಕ-ವೈದಿಕಕರ್ಮಗಳಿಗೂ, ಸತ್ಕರ್ಮಗಳಿಗೂ ಈ ಆಖ್ಯಾನವು ಆಧಾರಭೂತವಾಗಿದೆ.

ಮಹರ್ಷಿಗಳೇ! ನಾನು ಹಿಂದೊಮ್ಮೆ ಹೇಳಿದಂತೆ ಆಹಾರವನ್ನು ಆಶ್ರಯಿಸದೇ ಶರೀರವು ಹೇಗೆ ಉಳಿಯುವುದಿಲ್ಲವೋ–ಹಾಗೆಯೇ ಮಹಾ ಭಾರತವನ್ನು ಆಶ್ರಯಿಸದಿರುವ ಕಥೆಯೇ ಈ ಪ್ರಪಂಚದಲ್ಲಿಲ್ಲ. ಕೀರ್ತಿ ಮಂತರಾಗಬೇಕಾದರೆ ಕವಿಗಳು ಇದರಲ್ಲಿರುವ ತತ್ತ್ವರಾಶಿಯನ್ನು ಅಧ್ಯಯನ ಮಾಡಬೇಕು. ಇದನ್ನಾಶ್ರಯಿಸಿಯೇ ಅವರು ಸುಲೇಖಕರೂ, ಸುಕವಿಗಳೂ ಆಗಬಲ್ಲರು. ಒಳ್ಳೆಯ ಸ್ಥಾನ-ಮಾನಗಳನ್ನು ಆಶಿಸುವ ಸೇವಕನು ಶ್ರೇಷ್ಠನಾದ ಯಜಮಾನನನ್ನು ಆಶ್ರಯಿಸುವಂತೆ–ಸಮಾಜದಲ್ಲಿ ಸತ್ಕೀರ್ತಿಯನ್ನು ಪಡೆ ಯಲು ಅಪೇಕ್ಷಿಸುವ ಲೇಖಕರೂ ಮತ್ತು ಕವಿಗಳೂ ಮಹಾಭಾರತವನ್ನೇ ಆಶ್ರಯಿಸಬೇಕು. ಬ್ರಹ್ಮಚರ್ಯ-ವಾನಪ್ರಸ್ಥ-ಸಂನ್ಯಾಸಾಶ್ರಮಗಳಿಗೆ ಗೃಹ ಸ್ಥಾಶ್ರಮವು ಆಶ್ರಯವಾಗಿರುವಂತೆ-ಈ ಮಹಾಭಾರತವು ಎಲ್ಲ ಕವಿಗಳಿಗೂ ಆಶ್ರಯಸ್ಥಾನವಾಗಿದೆ. ಮಹಾಭಾರತಕ್ಕೆ ಸಮಾನವಾದ ಕಾವ್ಯವನ್ನಾಗಲೀ ಇತಿಹಾಸವನ್ನಾಗಲೀ ರಚಿಸಲು ಯಾವ ಕವಿಗಳೂ ಸಮರ್ಥರಾಗುವುದಿಲ್ಲ.

ದ್ವಿಜಸತ್ತಮರೇ!

**ಧರ್ಮೇ ಮತಿರ್ಭವತು ವಃ ಸತತೋತ್ಥಿತಾನಾಂ**
**ಸ ಹ್ಯೇಕ ಏವ ಪರಲೋಕಗತಸ್ಯ ಬನ್ಧುಃ ।**
**ಅರ್ಥಾಃ ಸ್ತ್ರಿಯಶ್ಚ ನಿಪುಣೈರಪಿ ಸೇವ್ಯಮಾನಾ**
**ನೈವಾಪ್ತಭಾವಮುಪಯಾನ್ತಿ ನ ಚ ಸ್ಥಿರತ್ವಮ್ ॥**

ಸಂಸಾರಸಾಗರದಲ್ಲಿ ಮುಳುಗಿ ಮೇಲೇಳುತ್ತಿರುವ ನಿಮ್ಮ ಬುದ್ಧಿಯು ಯಾವಾಗಲೂ ಧರ್ಮದಲ್ಲಿಯೇ ಸ್ಥಿರವಾಗಿರಲಿ. ಪರಲೋಕವನ್ನೈದುವವನಿಗೆ ಧರ್ಮವೊಂದೇ ಬಂಧುವಾಗಿ ಉಳಿದಿರುತ್ತದೆ. ಮರಣವೆಂಬುದು ಯಾರಿಗೂ ತಪ್ಪಿದ್ದಲ್ಲ. ದರಿದ್ರನಾಗಲೀ, ಧನಿಕನಾಗಲೀ ಎಂದಾದರೊಂದು ದಿನ ಪರಲೋಕಯಾತ್ರೆಗೆ ಹೊರಡಲೇಬೇಕು. ಭೂಮಿಯಲ್ಲಿ ಜೀವಿಸುತ್ತಿರುವ ಸಮಯದಲ್ಲಿ ಚತುರರಾದವರು ಹಣವನ್ನು ಸಂಪಾದನೆಮಾಡಿಯಾರು ; ಸ್ತ್ರೀಯರೊಡನೆ ಸ್ವೇಚ್ಛೆಯಿಂದ ರಮಿಸಿಯಾರು. ಆದರೆ ದೇಹವನ್ನು ಬಿಟ್ಟುಹೊರಡುವ ಕಾಲದಲ್ಲಿ ಅರ್ಥವಾಗಲೀ–ಸ್ತ್ರೀಯರಾಗಲೀ ಜೊತೆಯಲ್ಲಿ ಬರುವುದಿಲ್ಲ. ಜೀವಿಸಿರುವವರೆಗೆ ಅವರು ಆಪ್ತರಾಗಿದ್ದರೂ ದೇಹವನ್ನು

ತೊರೆದ ಮೇಲೆ ಅವರಲ್ಲಿ ಆಪ್ತಭಾವವು ಸ್ವಲ್ಪವೂ ಉಳಿಯುವುದಿಲ್ಲ. ಮನುಷ್ಯನ ನಿಜವಾದ ಆಪ್ತನೆಂದರೆ ಧರ್ಮ. ಇದು ಯಾವಾಗಲೂ ಸ್ಥಿರ ವಾಗಿರುತ್ತದೆ. ದೇಹದ ಅಂತ್ಯವಾದ ಮೇಲೂ ಜೀವನೊಡನೆ ಸೇರಿ ಪರ ಲೋಕಕ್ಕೆ ಹೋಗಿ ಫಲವನ್ನು ಕೊಡಿಸುತ್ತದೆ. ಆದುದರಿಂದ ಮನಸ್ಸು ಯಾವಾಗಲೂ ಧರ್ಮದಲ್ಲಿಯೇ ಲೀನವಾಗಿರಬೇಕು.

**ದ್ವೈಪಾಯನೋಷ್ಠಪುಟನಿಃಸೃತಮಪ್ರಮೇಯಂ**
**ಪುಣ್ಯಂ ಪವಿತ್ರಮಥ ಪಾಪಹರಂ ಶಿವಂ ಚ ।**
**ಯೋ ಭಾರತಂ ಸಮಧಿಗಚ್ಛತಿ ವಾಚ್ಯಮಾನಂ**
**ಕಿಂ ತಸ್ಯ ಪುಷ್ಕರಜಲೈರಭಿಷೇಚನೇನ ॥೯೨॥**

ಇದು ದ್ವೈಪಾಯನಮಹರ್ಷಿಗಳ ತುಟಿಗಳೆರಡರ ಮಧ್ಯದಿಂದ ಹರಿದು ಬಂದಿರುವ ಅಪ್ರಮೇಯವಾದ, ಪುಣ್ಯಪ್ರದವಾದ, ಪವಿತ್ರವಾದ, ಪಾಪ ಹರವಾದ, ಮಂಗಳಕರವಾದ ಮಹಾಭಾರತವೆಂಬ ಪುಣ್ಯನದಿ. ಇಂತಹ ಪರಮಪವಿತ್ರವಾದ ವಾಙ್ಮಯವನ್ನು ಅನುದಿನವೂ ಕೇಳುವವರಿಗೆ ಪುಣ್ಯ ತೀರ್ಥಗಳಲ್ಲಿನ ಸ್ನಾನದ ಅವಶ್ಯಕತೆಯೇನಿದೆ? (ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡುವುದು ಪಾಪಪರಿಹಾರಕ್ಕಾಗಿ. ಮಹಾಭಾರತದ ಶ್ರವಣಮಾತ್ರ ದಿಂದಲೇ ಸಕಲಪಾಪಗಳೂ ಪರಿಹಾರವಾಗಿ ಸನ್ಮಂಗಳಗಳೂ ಉಂಟಾಗುತ್ತವೆ ಯಾದುದರಿಂದ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವ ಅವಶ್ಯಕತೆಯಿಲ್ಲ.)

**ಯದಹ್ನಾ ಕುರುತೇ ಪಾಪಂ ಬ್ರಾಹ್ಮಣಸ್ತ್ವಿಂದ್ರಿಯೈಶ್ಚರನ್ ।**
**ಮಹಾಭಾರತಮಾಖ್ಯಾಯ ಸಂಧ್ಯಾಂ ಮುಚ್ಯತಿ ಪಶ್ಚಿಮಾಮ್ ॥೯೩॥**

ಬ್ರಾಹ್ಮಣನು ಇಂದ್ರಿಯಗಳ ವಶಾನುಗನಾಗಿ ಹಗಲಿನಲ್ಲಿ ಮಾಡಿರ ಬಹುದಾದ ಪಾಪವು ಸಾಯಂಸಂಧ್ಯಾಸಮಯದಲ್ಲಿ ಮಹಾಭಾರತಪ್ರವಚನ ಮಾಡುವುದರಿಂದ ಪರಿಹಾರವಾಗುತ್ತದೆ.

**ಯದ್ರಾತ್ರೌ ಕುರುತೇ ಪಾಪಂ ಕರ್ಮಣಾ ಮನಸಾ ಗಿರಾ ।**
**ಮಹಾಭಾರತಮಾಖ್ಯಾಯ ಪೂರ್ವಾಂ ಸಂಧ್ಯಾಂ ಪ್ರಮುಚ್ಯತೇ ॥೯೪॥**

ಶರೀರ, ಮನಸ್ಸು, ಮಾತುಗಳಿಂದ–ರಾತ್ರಿಯಲ್ಲಿ ಮಾಡಿದ ಪಾಪವು

ಪ್ರಾತಃಸಂಧ್ಯಾಸಮಯದಲ್ಲಿ ಮಹಾಭಾರತಪ್ರವಚನಮಾಡುವುದರಿಂದ ಪರಿಹಾರವಾಗುತ್ತದೆ.

**ಯೋ ಗೋಶತಂ ಕನಕಶೃಙ್ಗಮಯಂ ದದಾತಿ**
**ವಿಪ್ರಾಯ ವೇದವಿದುಷೇ ಚ ಬಹುಶ್ರುತಾಯ ।**
**ಪುಣ್ಯಾಂ ಚ ಭಾರತಕಥಾಂ ಶೃಣುಯಾಚ್ಚ ನಿತ್ಯಂ**
**ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯ ಚೈವ ॥೩೯೫॥**

ಯಾವನು ಬಹುಶ್ರುತನಾದ, ವೇದವಿದನಾದ ಬ್ರಾಹ್ಮಣನಿಗೆ ಸ್ವರ್ಣಮಯವಾದ ಕೊಂಬುಗಳಿಂದ ಅಲಂಕೃತವಾದ ನೂರು ಹಸು ಗಳನ್ನು ದಾನಮಾಡುವನೋ ಅಂತಹವನಿಗೆ ಲಭಿಸುವ ಪುಣ್ಯ, ಮತ್ತು ಮಹಾಭಾರತವನ್ನು ಯಾವನು ಅನುದಿನವೂ ಕೇಳುತ್ತಿರುವನೋ ಅವನಿಗೆ ಲಭಿಸುವ ಪುಣ್ಯ–ಈ ಎರಡೂ ಒಂದೇ ವಿಧವಾದ ಫಲಗಳನ್ನು ಕೊಡುತ್ತವೆ.

**ಆಖ್ಯಾನಂ ತದಿದಮನುತ್ತಮಂ ಮಹಾರ್ಥಂ**
**ವಿಜ್ಞೇಯಂ ಮಹದಿಹ ಪರ್ವಸಂಗ್ರಹೇಣ ।**
**ಶ್ರುತ್ವಾದೌ ಭವತಿ ನೃಣಾಂ ಸುಖಾವಗಾಹಂ**
**ವಿಸ್ತೀರ್ಣಂ ಲವಣಜಲಂ ಯಥಾ ಪ್ಲವೇನ ॥೩೯೬॥**

ಪರ್ವಸಂಗ್ರಹದ ಓದುವಿಕೆಯಿಂದಲೇ ಈ ಮಹಾಭಾರತದ ಆಖ್ಯಾನವು ಉತ್ತಮೋತ್ತಮವಾದುದೆಂದೂ, ಮಹಾರ್ಥವುಳ್ಳದ್ದೆಂದೂ ಮೇಧಾವಿಯಾದವನು ತಿಳಿದುಕೊಳ್ಳಬೇಕು. ಮಹಾಸಮುದ್ರವನ್ನು ದಾಟಲು ದೋಣಿಯು ಸಾಧನವಾಗಿರುವಂತೆ–ಈ ಪರ್ವಸಂಗ್ರಹಪರ್ವದ ಶ್ರವಣವು ಅದ್ಭುತವಾದ ಮಹಾಭಾರತವನ್ನು ಶ್ರವಣಮಾಡುವುದಕ್ಕೆ ಸಹಕಾರಿಯಾಗಿ ಮನುಷ್ಯರಿಗೆ ಬಹಳ ಸುಖದಾಯಕವಾಗುತ್ತದೆ.”

ಎರಡನೆಯ ಅಧ್ಯಾಯವು ಮುಗಿಯಿತು.

## ಜನಮೇಜಯನಿಗೆ ಸರಮೆಯ ಶಾಪ: ಜನಮೇಜಯನು ಸೋಮಶ್ರವನನ್ನು ಪುರೋಹಿತನನ್ನಾಗಿ ಆರಿಸಿಕೊಂಡುದು : ಆರುಣಿ, ಉಪಮನ್ಯು, ವೇದ ಮತ್ತು ಉತ್ತಂಕ–ಇವರ ಗುರುಭಕ್ತಿ: ಉತ್ತಂಕನು ಸರ್ಪಯಾಗಮಾಡಲು ಜನಮೇಜಯನನ್ನು ಪ್ರೋತ್ಸಾಹಿಸಿದುದು

ಸೌತಿಗಳು ಮುಂದುವರಿಸಿ ಹೇಳುತ್ತಾರೆ :

**ಜನಮೇಜಯಃ ಪಾರಿಕ್ಷಿತಃ ಸಹ ಭ್ರಾತೃಭಿಃ ಕುರುಕ್ಷೇತ್ರೇ ದೀರ್ಘ ಸತ್ರಮುಪಾಸ್ತೇ । ತಸ್ಯ ಭ್ರಾತರಸ್ತ್ರಯಃ ಶ್ರುತಸೇನ ಉಗ್ರಸೇನೋ ಭೀಮಸೇನ ಇತಿ । ತೇಷು ತತ್ಸತ್ರಮುಪಾಸೀನೇಷ್ವಾಗಚ್ಛತ್ಸಾರ-ಮೇಯಃ॥೧॥**

“ಋಷಿಸತ್ತಮರೇ! ಪರೀಕ್ಷಿತನ ಪುತ್ರನಾದ ಜನಮೇಜಯನು ತನ್ನ ತಮ್ಮಂದಿರೊಡನೆ ದೀರ್ಘಕಾಲದ ಒಂದು ಸತ್ರವನ್ನಾರಂಭಿಸಿದನು. ಶ್ರುತ ಸೇನ, ಉಗ್ರಸೇನ ಮತ್ತು ಭೀಮಸೇನ–ಎಂಬುವರೇ ಜನಮೇಜಯನ ಅನುಜರಾಗಿದ್ದರು. ಆ ಮೂವರೂ ಯಜ್ಞಮಂಟಪದಲ್ಲಿ ಕುಳಿತಿರುವಾಗ ದೇವಲೋಕದ ನಾಯಿಯಾದ ಸರಮೆಯು ಯಜ್ಞಮಂಟಪದ ಸಮೀಪಕ್ಕೆ ಬಂದಿತು.

ಯಜ್ಞಮಂಟಪದ ಸಮೀಪಕ್ಕೆ ಬಂದ ನಾಯಿಯ ಮರಿಯನ್ನು ಅಲ್ಲಿಯೇ ಕುಳಿತಿದ್ದ ಜನಮೇಜಯನ ತಮ್ಮಂದಿರು ಪ್ರಹರಿಸಿದರು. ಒಡನೆಯೇ ಅದು ಗಟ್ಟಿಯಾಗಿ ಅಳುತ್ತಾ ತಾಯಿಯಾದ ಸರಮೆಯ ಸಮೀಪಕ್ಕೆ ಧಾವಿಸಿತು.

ಅಳುತ್ತಿದ್ದ ಮರಿಯನ್ನು ಮೃದುವಚನಗಳಿಂದ ಸಂತೈಸುತ್ತಾ “ಏಕಳುವೆ? ಕಂದ! ನಿನ್ನನ್ನಾರು ಪ್ರಹರಿಸಿದರು?”–ಎಂದು ಸರಮೆಯು ಕೇಳಿತು.

“ಜನಮೇಜಯನ ಅನುಜರು ನನ್ನನ್ನು ಹೊಡೆದರಮ್ಮಾ.”

"ಸುಮ್ಮನೆ ಹೊಡೆದುಬಿಡುವರೇ? ನೀನೇನೋ ಅಪರಾಧವನ್ನು ಮಾಡಿರಬೇಕು. ಅದಕ್ಕಾಗಿಯೇ ಅವನು ನಿನ್ನನ್ನು ಪ್ರಹರಿಸಿದ್ದಾರೆ."

"ನಿಶ್ಚಯವಾಗಿಯೂ ನಾನೇನೂ ತಪ್ಪುಮಾಡಲಿಲ್ಲವಮ್ಮ! ನಾನು ಯಜ್ಞವೇದಿಕೆಯ ಮೇಲಿದ್ದ ಹವಿಸ್ಸನ್ನು ನೋಡಲೂ ಇಲ್ಲ. ಸವಿಯಲೂ ಇಲ್ಲ."



ಮರಿಯು ಹೇಳಿದ ಮಾತನ್ನು ಕೇಳಿ ಮತ್ತು ಅದು ಅಳುತ್ತಿರುವುದನ್ನೂ ಕಂಡು ಬಹಳ ಸಂಕಟಗೊಂಡ ಸರಮೆಯು–ಅನುಜರೊಡನೆ ದೀರ್ಘಸತ್ರವನ್ನಾರಂಭಿಸಿದ್ದ ಜನಮೇಜಯನ ಯಾಗಭೂಮಿಗೆ ಆಗಮಿಸಿ, ಅನತಿ ದೂರದಲ್ಲಿ ಕುಳಿತಿದ್ದ ಜನಮೇಜಯನನ್ನು ಕೋಪದಿಂದಲೇ ಪ್ರಶ್ನಿಸಿತು :

"ನನ್ನ ಮರಿಯು ಯಾವ ಅಪರಾಧವನ್ನೂ ಮಾಡಿಲ್ಲ. ಯಜ್ಞದ ಹವಿಸ್ಸನ್ನು ನೆಕ್ಕಿಯೂ ಇಲ್ಲ ; ನೋಡಿಯೂ ಇಲ್ಲ. ನಿರಪರಾಧಿಯಾದ ನನ್ನ ಮಗುವನ್ನು ಹೊಡೆದುದೇಕೆ?"

ಸರಮೆಯ ಪ್ರಶ್ನೆಗೆ ಜನಮೇಜಯನಾಗಲೀ, ಅವನ ಅನುಜರಾಗಲೀ ಯಾವುದೊಂದು ಉತ್ತರವನ್ನೂ ಕೊಡಲಿಲ್ಲ. ಅದರಿಂದ ಮತ್ತಷ್ಟು ಕೋಪ ಗೊಂಡ ಸರಮೆಯು ಜನಮೇಜಯನಿಗೆ ಶಾಪವನ್ನೇ ಕೊಟ್ಟುಬಿಟ್ಟಿತು.

"ನನ್ನ ಮಗುವು ನಿಶ್ಚಯವಾಗಿಯೂ ನಿರಪರಾಧಿಯು. ಯಜ್ಞ ಮಂಟಪದ ಸಮೀಪಕ್ಕೆ ಚಪಲತೆಯಿಂದ ಆಗಮಿಸಿದುದಕ್ಕಾಗಿ ನೀವದನ್ನು ಪ್ರಹರಿಸಿರುವಿರಿ. ಆದುದರಿಂದ ನಿಮ್ಮ ಊಹೆಗೂ ನಿಲುಕದಿರುವ ಆಕಸ್ಮಿಕ ವಾದ ಆಪತ್ತು ನಿಮಗೆ ಬಂದೊದಗಲಿ."

ಸರಮೆಯಿತ್ತ ಶಾಪವನ್ನು ಕೇಳಿ ಜನಮೇಜಯನು ಭ್ರಾಂತನೂ ಮತ್ತು ದುಃಖಿತನೂ ಆದನು.

ಆರಂಭಿಸಿದ್ದ ದೀರ್ಘಸತ್ರವು ಪರಿಸಮಾಪ್ತಿಯಾದನಂತರ ಜನಮೇ ಜಯನು ಹಸ್ತಿನಾಪುರಕ್ಕೆ ಹೋಗಿ, ಯೋಗ್ಯನಾದ ಮತ್ತು ಶಾಪನಿರಸನ ಸಮರ್ಥನಾದ ಪುರೋಹಿತನನ್ನು ಹುಡುಕಲು ಬಹುವಾಗಿ ಪ್ರಯತ್ನಿಸಿದನು.

ಅವನೊಮ್ಮೆ ಬೇಟೆಮಾಡುವ ಸಲುವಾಗಿ ಕಾಡಿಗೆ ಹೋಗಿದ್ದಾಗ ತನ್ನ ರಾಜ್ಯಕ್ಕೆ ಸೇರಿದ್ದ ಅರಣ್ಯಪ್ರದೇಶದಲ್ಲಿಯೇ ಸುಮನೋಹರವಾಗಿದ್ದ ಆಶ್ರಮ ವೊಂದನ್ನು ಕಂಡನು. ಆ ಆಶ್ರಮದಲ್ಲಿಯೇ ಸುಪ್ರಸಿದ್ಧನಾದ ಶ್ರುತಶ್ರವನೆಂಬ ಮಹರ್ಷಿಯೂ ವಾಸವಾಗಿದ್ದನು. ಅವನ ಪುತ್ರನ ಹೆಸರು ಸೋಮಶ್ರವ. ಅವನು ಯಾವಾಗಲೂ ತಪಸ್ಸುಮಾಡುವುದರಲ್ಲಿಯೇ ನಿರತನಾಗಿದ್ದನು.

ಪರೀಕ್ಷಿತನ ಮಗನಾದ ಜನಮೇಜಯನು ಶ್ರುತಶ್ರವನ ಮಗನಾದ ಸೋಮಶ್ರವನನ್ನು ಪೌರೋಹಿತ್ಯಕ್ಕಾಗಿ ಆಮಂತ್ರಿಸಲು ಆಶ್ರಮಕ್ಕೆ ತೆರಳಿ ಶ್ರುತಶ್ರವನನ್ನು ಪ್ರಾರ್ಥಿಸಿದನು :

"ಭಗವನ್! ತಮ್ಮ ಮಗನು ನನ್ನ ಪುರೋಹಿತನಾಗಲಿ."

ಜನಮೇಜಯನಿಂದ ಹೀಗೆ ಪ್ರಾರ್ಥಿತನಾದ ಶ್ರುತಶ್ರವನು ರಾಜನಿಗೆ ಹೇಳಿದನು :

"ಮಹಾರಾಜ! ಈ ನನ್ನ ಮಗನು ಸರ್ಪಿಯ ಹೊಟ್ಟೆಯಲ್ಲಿ ಹುಟ್ಟಿ ದವನು. ಮಹಾತಪಸ್ವಿಯಾಗಿರುವನು. ಸ್ವಾಧ್ಯಾಯಸಂಪನ್ನನಾಗಿರುವನು.

ನನ್ನ ತಪೋಬಲದಿಂದಲೇ ಈ ಬಾಲಕನ ಪೋಷಣೆಯನ್ನು ಮಾಡುತ್ತಿದ್ದೇನೆ. ನನ್ನ ರೇತಸ್ಸನ್ನು ಪ್ರಾಶನಮಾಡಿದ ಹೆಣ್ಣುಹಾವಿನ ಹೊಟ್ಟೆಯಲ್ಲಿವನು ಹುಟ್ಟಿರುವನು. ಇವನು ನಿನ್ನ ಶಾಪಜನಿತವಾದ ಉಪದ್ರವಗಳೆಲ್ಲವನ್ನೂ ಉಪಶಮನಗೊಳಿಸಲು ಸಮರ್ಥನಾಗಿರುವನು. ಆದರೆ ಶಂಕರನ ಸಂಬಂಧ ವಾದ ಉಪದ್ರವವನ್ನು ಮಾತ್ರ ನಿವಾರಿಸಲು ಇವನಿಗೆ ಸಾಧ್ಯವಿಲ್ಲ. ಇವನ ದೊಂದು ಗುಪ್ತನಿಯಮವಿದೆ. ಯಾವನಾದರೂ ಬ್ರಾಹ್ಮಣನು ಯಾವಾಗ ಲಾದರೂ ಬಂದು ಏನನ್ನಾದರೂ ಯಾಚಿಸಬಹುದು. ಅದನ್ನಿವನು ಹಿಂದೆ-ಮುಂದೆ ನೋಡದೇ ಕೊಟ್ಟುಬಿಡುತ್ತಾನೆ. ಆ ಸಮಯದಲ್ಲಿ ನೀನಿವನನ್ನು ತಡೆಹಿಡಿಯುವಂತಿಲ್ಲ. ಇದಕ್ಕೆ ನೀನು ಒಪ್ಪುವೆಯಾದರೆ ನೀನಿವನನ್ನು ಕರೆದುಕೊಂಡು ಹೋಗಬಹುದು."

ಹೀಗೆ ಹೇಳಿದ ಶ್ರುತಶ್ರವನಿಗೆ ಉತ್ತರವಾಗಿ ಜನಮೇಜಯನು "ಭಗವನ್! ಸೋಮಶ್ರವರ ಇಚ್ಛಾನುಸಾರವಾಗಿಯೇ ಎಲ್ಲವೂ ನಡೆಯು ವುದು"–ಎಂದು ಆಶ್ವಾಸನೆಕೊಟ್ಟನು.

ಅನಂತರದಲ್ಲಿ ಜನಮೇಜಯನು ಸೋಮಶ್ರವರನ್ನು ಕರೆದುಕೊಂಡು ಹಸ್ತಿನಾಪುರಕ್ಕೆ ಹೋಗಿ ತನ್ನ ಅನುಜರಿಗೆ ಅವರ ಪರಿಚಯಮಾಡಿಕೊಡುತ್ತಾ ಹೇಳಿದನು : "ನಾನು ಈ ಸೋಮಶ್ರವರನ್ನು ಪುರೋಹಿತರನ್ನಾಗಿ ಅಂಗೀಕರಿಸಿ ಕರೆತಂದಿರುತ್ತೇನೆ. ಇವರು ಏನು ಹೇಳಿದರೂ ಹಿಂದು- ಮುಂದುನೋಡದೇ ಕಾರ್ಯಾಕಾರ್ಯಗಳ ವಿಷಯವಾಗಿಯೂ ವಿವೇಚಿ ಸದೇ ಇವರು ಹೇಳುವುದನ್ನು ನಡೆಸಿಕೊಡಬೇಕು."

ಜನಮೇಜಯನ ಆಜ್ಞೆಯಂತೆ ಅವನ ಅನುಜರು ಸೋಮಶ್ರವರಲ್ಲಿ ವಿಧೇಯತೆಯಿಂದಲೇ ನಡೆದುಕೊಳ್ಳುತ್ತಿದ್ದರು.

ಜನಮೇಜಯನು ತನ್ನ ತಮ್ಮಂದಿರಿಗೆ ಈ ವಿಧವಾಗಿ ನಿರ್ದೇಶಿಸಿದ ನಂತರ ತಕ್ಷಶಿಲೆಯ ಕಡೆಗೆ ದಂಡೆತ್ತಿ ಹೋಗಿ ಆ ಪ್ರದೇಶವನ್ನೂ ತನ್ನ ವಶ ಪಡಿಸಿಕೊಂಡನು.

* ಜನಮೇಜಯನ ಕಾಲದಲ್ಲಿಯೇ ಆಯೋದಧೌಮ್ಯರೆಂಬ ಹೆಸರಿನ

---

* ಮಹಾಭಾರತದಲ್ಲಿ ಬರುವ ಕಥೆಗಳನ್ನೆಲ್ಲಾ ಸೌತಿಗಳು ನೈಮಿಷಾರಣ್ಯದಲ್ಲಿ ಯಜ್ಞ

ಮಹರ್ಷಿಗಳೊಬ್ಬರಿದ್ದರು. ಅವರಿಗೆ ಆರುಣಿ, ಉಪಮನ್ಯು ಮತ್ತು ವೇದ ಎಂಬ ಮೂವರು ಶಿಷ್ಯರಿದ್ದರು. ಒಮ್ಮೆ ಧೌಮ್ಯರು ಪಾಂಚಾಲದೇಶೀಯನಾದ ಆರುಣಿಯನ್ನು ಕರೆದು ಒಡೆದುಹೋಗಿದ್ದ ಗದ್ದೆಯ ಬದುವನ್ನು ಕಟ್ಟಿಬರುವಂತೆ ಹೇಳಿ ಕಳುಹಿಸಿದರು.

ಗುರುಗಳಿಂದ ನಿರ್ದೇಶಿತನಾದ ಆರುಣಿಯು ಗದ್ದೆಯ ಬಳಿಗೆ ಹೋಗಿ ಕೊಚ್ಚಿಹೋಗುತ್ತಿದ್ದ ಬದುವನ್ನು ಸರಿಪಡಿಸಲು ಬಹುವಾಗಿ ಪ್ರಯತ್ನಿಸಿದನು. ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾಗಿಹೋದುವು. ಹೀಗೆಯೇ ಪ್ರಯತ್ನವನ್ನು ಬಹುಕಷ್ಟದಿಂದ ಮುಂದುವರಿಸುತ್ತಿದ್ದಾಗ ಅವನಿಗೊಂದು ಉಪಾಯವು ಹೊಳೆಯಿತು. 'ಸರಿ! ಹಾಗೆಯೇ ಮಾಡುತ್ತೇನೆ'–ಎಂದೆನ್ನುತ್ತಾ ನೀರು ಹರಿಯುತ್ತಿದ್ದ ಕಡೆ ಅಡ್ಡಲಾಗಿ ಮಲಗಿಬಿಟ್ಟನು. ಒಡನೆಯೇ ಹೊರಗೆ ಹೋಗುತ್ತಿದ್ದ ನೀರು ನಿಂತುಹೋಯಿತು.

ಸ್ವಲ್ಪ ಹೊತ್ತಾದನಂತರದಲ್ಲಿ ಆಯೋದಧೌಮ್ಯರು ಶಿಷ್ಯರನ್ನು ಕೇಳಿದರು: "ಆರುಣಿಯು ಎಲ್ಲಿ ಹೋಗಿದ್ದಾನೆ?"

"ಭಗವನ್! ತಾವೇ ಆರುಣಿಯನ್ನು ಕೊಚ್ಚಿಹೋಗುತ್ತಿದ್ದ ಗದ್ದೆಯ ಬದುವನ್ನು ಸರಿಪಡಿಸಿಬರುವಂತೆ ಆಜ್ಞೆಮಾಡಿ ಕಳುಹಿಸಿಕೊಟ್ಟಿರಿ."

ಶಿಷ್ಯರು ಹೀಗೆ ಹೇಳಿದೊಡನೆಯೇ ಆಯೋದಧೌಮ್ಯರು ಆರುಣಿಯಿರುವೆಡೆಗೆ ಎಲ್ಲರೂ ಹೋಗೋಣವೆಂದು ಹೇಳಿ ಶಿಷ್ಯಸಮೇತರಾಗಿ ಗದ್ದೆಯ ಬಳಿಗೇ ಹೊರಟುಬಿಟ್ಟರು. ಗದ್ದೆಯ ಹತ್ತಿರ ಬಂದು ಚಪ್ಪಾಳೆಯನ್ನು ತಟ್ಟಿ ಗಟ್ಟಿಯಾಗಿ ಹೇಳಿದರು :

"ಆರುಣಿಯೇ! ಪಾಂಚಾಲ್ಯನೇ! ಎಲ್ಲಿರುವೆ? ಮಗುವೇ! ಬೇಗ ಬಾ"

ಉಪಾಧ್ಯಾಯರು ಕೂಗಿದುದನ್ನು ಕೇಳಿದೊಡನೆಯೇ ಆರುಣಿಯು

---

ಕರ್ಮಗಳು ಮುಗಿದು ಯಜ್ಞದ ವಿರಾಮಕಾಲದಲ್ಲಿ ಅಲ್ಲಿ ನೆರೆದಿದ್ದವರನ್ನು ಉದ್ದೇಶಿಸಿ ಹೇಳುತ್ತಿರುವರೆಂಬುದನ್ನು ವಾಚಕರು ಮರೆಯಬಾರದು. ಈಗ ಹೇಳುತ್ತಿರುವುದು ಪೌಷ್ಯಪರ್ವದ ಕಥಾಭಾಗ. ಇದರಲ್ಲಿ ಪ್ರಾಸಂಗಿಕವಾದ ಆರುಣಿ, ಉಪಮನ್ಯು ಮತ್ತು ವೇದ-ಇವರ ಕಥೆಗಳು ಹಿಂದಿನ ಕಾಲದ ವಿದ್ಯಾಭ್ಯಾಸದ ರೀತಿಯನ್ನು ಹೇಳತಕ್ಕುವುಗಳಾಗಿಯೂ, ಉತ್ತಂಕನ ಕಥೆಯು ಜನಮೇಜಯನ ಸರ್ಪಯಾಗಕ್ಕೆ ಕಾರಣವನ್ನು ಸೂಚಿಸುವುದಾಗಿಯೂ ಇವೆ.

ಗದ್ದೆಯ ಬದುವಿನಿಂದ ಮೇಲೆದ್ದು ಗುರುಗಳ ಸಮ್ಮುಖದಲ್ಲಿ ಬದ್ಧಾಂಜಲಿಯಾಗಿ ನಿಂತು ವಿನಯಪೂರ್ವಕವಾಗಿ ಹೇಳಿದನು :

"ಪೂಜ್ಯರೇ! ಬದುವು ಕೊಚ್ಚಿಹೋಗಿ ಗದ್ದೆಯಿಂದ ಹರಿದುಹೋಗು ತ್ತಿದ್ದ ನೀರನ್ನು ತಡೆಯಬೇಕೆಂದು ತಮ್ಮಿಂದ ಆಜ್ಞಪ್ತನಾದ ನಾನು ಇದುವರೆಗೂ ಹರಿದುಹೋಗುತ್ತಿದ್ದ ನೀರಿಗೆ ಅಡ್ಡಲಾಗಿ ಮಲಗಿದ್ದೆನು. ತಮ್ಮ ಕೂಗನ್ನು ಕೇಳುತ್ತಲೇ ಗದ್ದೆಯ ಬದುವನ್ನು ಬಿಟ್ಟು ಬಂದೆನು. ತಮ್ಮನ್ನು ಅಭಿವಾದನಮಾಡಿ ಕೇಳಿಕೊಳ್ಳುತ್ತೇನೆ. ನಾನು ತಮಗಾಗಿ ಮತ್ತಾವ ಕಾರ್ಯವನ್ನು ಮಾಡಲಿ?"



ಆಯೋದಧೌಮ್ಯರು ಆರುಣಿಯ ಮಾತುಗಳನ್ನು ಕೇಳಿ–"ನನ್ನ ಕೂಗನ್ನು ಕೇಳಿದೊಡನೆಯೇ ನೀನು ಗದ್ದೆಯ ಬದುವನ್ನು ಭೇದಿಸಿಕೊಂಡು ಬಂದೆಯಾದ ಕಾರಣ ನೀನು ಅದೇ ಹೆಸರಿನಿಂದ ಪ್ರಸಿದ್ಧನಾಗುವೆ.

ಬದುವನ್ನೊಮ್ಮೆ ಕಟ್ಟಿ ಪುನಃ ಬದುವನ್ನು ಭೇದಿಸಿಕೊಂಡು ಬಂದೆಯಾದಕಾರಣ ನೀನು ಉದ್ದಾಲಕನೆಂಬ ಹೆಸರನ್ನೇ ಪಡೆಯುವೆ"–ಎಂದು ಅವನನ್ನು ಅನುಗ್ರಹಿಸಿ ಪುನಃ ಹೇಳಿದರು : "ನೀನು ನನ್ನ ಆಜ್ಞೆಯನ್ನು ಯಥಾವತ್ತಾಗಿ ಪಾಲಿಸಿದೆಯಾದ ಕಾರಣ ನೀನು ಶ್ರೇಯೋವಂತನಾಗುವೆ. ಎಲ್ಲ ವೇದಗಳೂ, ಸಮಸ್ತಧರ್ಮಶಾಸ್ತ್ರಗಳೂ ನಿನ್ನ ಬುದ್ಧಿಗೆ ಗೋಚರವಾಗುತ್ತವೆ."

ಹೀಗೆ ಗುರುಗಳಿಂದ ಅನುಗೃಹೀತನಾದ ಉದ್ದಾಲಕನು ಕೃತಕೃತ್ಯನಾಗಿ ಪ್ರಯಾಣಮಾಡಿದನು.

ಹಿಂದೆಯೇ ಹೇಳಿದ್ದಂತೆ ಆಯೋದಧೌಮ್ಯರ ಮತ್ತೊಬ್ಬ ಶಿಷ್ಯ ಉಪ ಮನ್ಯು. ಗುರುಗಳು ಅವನನ್ನು ಕರೆದು ದನಗಳನ್ನು ಕಾಯುತ್ತಾ ಇರಬೇಕೆಂದು ಆಜ್ಞಾಪಿಸಿದರು.

ಗುರುಗಳ ಮಾತಿನಂತೆ ಉಪಮನ್ಯುವು ಹಗಲಿನಲ್ಲಿ ದನಗಳನ್ನು ಕಾಯುತ್ತಲಿದ್ದು ರಾತ್ರಿಯಾಗುತ್ತಲೇ ಗುರುಗಳ ಆಶ್ರಮಕ್ಕಾಗಮಿಸಿ ಗುರುಗಳಿಗೆ ನಮಸ್ಕಾರಮಾಡಿ ಅವರ ಆಜ್ಞೆಯೇನೆಂಬುದನ್ನು ನಿರೀಕ್ಷಿಸುತ್ತಾ ನಿಲ್ಲುವನು.

ಹೀಗೆಯೇ ಇರುತ್ತಿರಲಾಗಿ ಒಂದು ದಿನ ಆಯೋದಧೌಮ್ಯರು ಉಪ ಮನ್ಯುವನ್ನು ದಿಟ್ಟಿಸಿ ನೋಡುತ್ತಾ ಅವನು ಇತ್ತೀಚೆಗೆ ಪುಷ್ಟನಾಗುತ್ತಿರುವುದನ್ನು ಲಕ್ಷಿಸಿ ಪ್ರಶ್ನಿಸಿದರು :

"ಉಪಮನ್ಯು! ನೀನು ನಿನ್ನ ಜೀವನವನ್ನು ಹೇಗೆ ಸಾಗಿಸುತ್ತಿರುವೆ? ಇತ್ತೀಚೆಗೆ ನೀನು ಪುಷ್ಟನಾಗಿರುವಂತೆ ಕಾಣುತ್ತಿರುವೆಯಲ್ಲಾ!"

"ಭಿಕ್ಷೆಯೆತ್ತಿ ಅನ್ನ ತಂದು ಊಟಮಾಡುವೆನು, ಗುರುದೇವ!"

"ಮಗು! ಭಿಕ್ಷೆಮಾಡಿ ತಂದ ಅನ್ನವನ್ನು ಮೊದಲು ನನಗರ್ಪಿಸ ಬೇಕು. ಇದು ಸನಾತನಧರ್ಮ."

ಉಪಮನ್ಯುವು ಸಂಜ್ಞೆಯಿಂದಲೇ ಗುರುಗಳು ಹೇಳಿದಂತೆ ಮಾಡಲು ಒಪ್ಪಿ, ಧೌಮ್ಯರ ಅಪ್ಪಣೆಪಡೆದು ಹೊರಟುಹೋದನು.

ಪ್ರತಿದಿನವೂ ಉಪಮನ್ಯುವು ಭಿಕ್ಷಾನ್ನವನ್ನು ತಂದು ಭಯ-ಭಕ್ತಿ ಪುರಸ್ಸರವಾಗಿ ಗುರುಗಳ ಮುಂದಿಡುವನು. ಗುರುಗಳ ಆಜ್ಞೆಯನ್ನು ಎದುರು

ನೋಡುತ್ತಾ, ತಲೆಬಗ್ಗಿಸಿ ಗುರುಗಳ ಸಮೀಪದಲ್ಲಿ ಒಂದೆರಡು ನಿಮಿಷಗಳು ನಿಲ್ಲುವನು. ಭಿಕ್ಷೆಯನ್ನೆತ್ತಿ ತಂದ ಅನ್ನದಲ್ಲಿ ಗುರುಗಳು ಸ್ವಲ್ಪವನ್ನೂ ಶಿಷ್ಯನಿಗೆ ಕೊಡುತ್ತಿರಲಿಲ್ಲ. ಶಿಷ್ಯನೂ ಕೇಳುತ್ತಿರಲಿಲ್ಲ. ಹತ್ತಾರು ದಿನಗಳು ಹೀಗೆಯೇ ಉರುಳಿದುವು. ಉಪಮನ್ಯುವು ಎಂದಿನಂತೆಯೇ ದನಕಾಯುವ ಕಾರ್ಯವನ್ನು ಉತ್ಸಾಹದಿಂದಲೇ ಮಾಡುತ್ತಿದ್ದನು. ಸಾಯಂಕಾಲದವರೆಗೂ ದನಗಳನ್ನು ಕಾಯುತ್ತಿದ್ದು ಸಾಯಂಕಾಲವಾಗುತ್ತಲೇ ಆಶ್ರಮಕ್ಕೆ ಹಿಂದಿರುಗಿ ಧೌಮ್ಯರ ಸಮ್ಮುಖದಲ್ಲಿ ವಿನೀತನಾಗಿ ನಿಲ್ಲುತ್ತಿದ್ದನು. ಅವನ ದೇಹವು ಕೃಶವಾದಂತೆ ಕಾಣಲಿಲ್ಲ.

ಧೌಮ್ಯರು ಮತ್ತೊಮ್ಮೆ ಕರೆದು ಕೇಳಿದರು : "ತಂದ ಭಿಕ್ಷೆಯನ್ನೆಲ್ಲಾ ನನಗೆ ಕೊಟ್ಟರೂ ನೀನು ಎಂದಿನಂತೆಯೇ ಇರುವೆಯಲ್ಲಾ?"

"ನಾನು ಮೊದಲನೆಯ ಬಾರಿ ತಂದ ಭಿಕ್ಷೆಯನ್ನು ತಮಗರ್ಪಿಸಿ, ಪುನಃ ಎರಡನೆಯ ಸಲ ಭಿಕ್ಷೆಮಾಡಿ ಊಟಮಾಡುವೆನು"–ಎಂಬ ಸರಳವಾದ ಉತ್ತರ ಶಿಷ್ಯನಿಂದ ಬಂದಿತು.

ಧೌಮ್ಯರು ಹೇಳಿದರು :

**ನೈಷಾ ನ್ಯಾಯ್ಯಾ ಗುರುವೃತ್ತಿರನ್ಯೇಷಾಮಪಿ**
**ಭೈಕ್ಷ್ಯೋಽಪಜೀವಿನಾಂ ವೃತ್ತ್ಯುಪರೋಧಂ ಕರೋಷಿ ।**
**ಇತ್ಯೇವಂ ವರ್ತಮಾನೋ ಲುಬ್ಧೋಽಸಿ ।**

"ನೀನು ಎರಡನೆಯ ಸಲ ಭಿಕ್ಷೆಮಾಡುವುದರಿಂದ ಬೇರೊಬ್ಬ ವಿದ್ಯಾರ್ಥಿಯ ಆಹಾರವನ್ನು ಅಪಹರಿಸಿದಂತಾಗಲಿಲ್ಲವೇ? ಹೀಗೆ ಮಾಡುವುದು ಅಧರ್ಮ, ಉಪಮನ್ಯೋ! ಇದರಿಂದ ನೀನು ಲುಬ್ಧನಾಗುವೆ"–ಎಂದು ಹೇಳಿ ಧೌಮ್ಯರು ಹೊರಟುಹೋದರು.

ಆದರೆ–'ಊಟವನ್ನು ಎಲ್ಲಿ, ಹೇಗೆ ಮಾಡಬೇಕು?'–ಎಂಬುದನ್ನು ಗುರುಗಳೂ ಹೇಳಲಿಲ್ಲ. ಶಿಷ್ಯನೂ ಕೇಳಲಿಲ್ಲ. ಉಪಮನ್ಯುವಿಗೆ ಗುರುವಿನ ಆಜ್ಞಾನುಸಾರವಾಗಿ ವಿಧೇಯತೆಯಿಂದಿರುವುದೊಂದು ಮಾತ್ರ ತಿಳಿದಿತ್ತು.

ಎಂದಿನಂತೆಯೇ ಉಪಮನ್ಯುವು ಸಾಯಂಕಾಲದವರೆಗೂ ದನಗಳನ್ನು ಕಾಯುತ್ತಲಿದ್ದು ಸಾಯಂಕಾಲವಾಗುತ್ತಲೇ ಆಶ್ರಮಕ್ಕೆ ಹಿಂದಿರುಗಿ ಗುರು

ಗಳಿಗೆ ನಮಸ್ಕರಿಸಿ ಅವರ ಸಮ್ಮುಖದಲ್ಲಿ ನಿಲ್ಲುವನು. ಹತ್ತಾರು ದಿನಗಳು ಕಳೆದರೂ ಉಪಮನ್ಯುವು ಪುಷ್ಟನಾಗಿಯೇ ಇದ್ದುದನ್ನು ಕಂಡು ಆಶ್ಚರ್ಯ ಚಕಿತರಾದ ಧೌಮ್ಯರೊಮ್ಮೆ ವಿನೀತನಾಗಿ ನಿಂತಿದ್ದ ಉಪಮನ್ಯುವನ್ನು ಪ್ರಶ್ನಿಸಿದರು :

"ಉಪಮನ್ಯೋ! ನೀನು ತಂದ ಭಿಕ್ಷೆಯೆಲ್ಲವನ್ನೂ ನಾನೇ ತೆಗೆದು ಕೊಂಡುಬಿಡುತ್ತಿದ್ದೇನೆ. ನಿನಗಾಗಿ ಸ್ವಲ್ಪವನ್ನೂ ಕೊಡುವುದಿಲ್ಲ. ಎರಡನೆಯ ಬಾರಿ ಭಿಕ್ಷೆಮಾಡುವುದನ್ನೂ ನೀನು ನನ್ನ ಆಜ್ಞಾನುಸಾರವಾಗಿ ನಿಲ್ಲಿಸಿರುವೆ. ಆದರೂ ನೀನು ಎಂದಿನಂತೆ ಪುಷ್ಟನಾಗಿಯೇ ಇರುವೆ. ಈಗ ಜೀವಿಕೆಗಾಗಿ ಯಾವ ವೃತ್ತಿಯನ್ನವಲಂಬಿಸುತ್ತಿರುವೆ?"

"ಈ ಹಸುಗಳ ಹಾಲನ್ನು ಕುಡಿಯುತ್ತಿದ್ದೇನೆ, ಗುರುದೇವ!"

"ನನ್ನ ಅನುಮತಿಯಿಲ್ಲದೇ ಆಶ್ರಮದ ಹಸುಗಳ ಹಾಲನ್ನು ಕುಡಿಯ ಬಾರದು."

ಧೌಮ್ಯರು ತಮ್ಮ ಕೆಲಸಕ್ಕೆ ಹೊರಟುಹೋದರು.

ಪುನಃ ಹತ್ತಾರು ದಿನಗಳು ಕಳೆದುವು. ಧೌಮ್ಯರ ನಿರೀಕ್ಷೆಯಂತೆ ಶಿಷ್ಯನಲ್ಲಿ ಯಾವ ವಿಧವಾದ ಮಾರ್ಪಾಡುಗಳೂ ಉಂಟಾಗಲಿಲ್ಲ. ಉಪಮನ್ಯುವು ಮಾಡುತ್ತಿದ್ದ ಕೆಲಸಗಳಲ್ಲಿಯೂ ಯಾವ ನ್ಯೂನತೆಯೂ ಇರಲಿಲ್ಲ. ಅವನ ಮುಖವೂ ಬಾಡಿರಲಿಲ್ಲ. ಶರೀರವೂ ಕುಗ್ಗಿರಲಿಲ್ಲ. ಧೌಮ್ಯರಿಗೆ ಆಶ್ಚರ್ಯವೂ ಮತ್ತು ಸಂಶಯವೂ ಉಂಟಾದುವು. ಆದರೆ ಸಂಶಯಕ್ಕೆ ಎಡೆಯಿಲ್ಲ. ಉಪಮನ್ಯುವು ಬಹಳ ವಿಧೇಯನೆಂಬುದು ಗುರುಗಳಿಗೆ ತಿಳಿದಿದೆ. ಯಥಾಪೂರ್ವ ಸಾಯಂಕಾಲವಾಗುತ್ತಲೇ ಗುರುಗಳ ಸಮೀಪಕ್ಕೆ ಬಂದು ಅಭಿವಾದನಪೂರ್ವಕವಾಗಿ ನಮಸ್ಕರಿಸಿ ನಿಂತ ಉಪಮನ್ಯುವನ್ನು ಕೇಳಿದರು : "ಭಿಕ್ಷೆಯನ್ನೆಲ್ಲಾ ನನಗೇ ಸಮರ್ಪಿಸುವೆ. ಎರಡನೆಯ ಸಲ ಭಿಕ್ಷೆಮಾಡುವುದಿಲ್ಲ. ಹಾಲನ್ನೂ ಕುಡಿಯುತ್ತಿಲ್ಲ. ಹೀಗಿದ್ದರೂ ನೀನಿನ್ನೂ ಪುಷ್ಟನಾಗಿಯೇ ಇರುವೆಯಲ್ಲಾ! ಈಗ ಜೀವಿಕೆಗಾಗಿ ಯಾವ ವೃತ್ತಿಯನ್ನು ಅವಲಂಬಿಸಿರುವೆ? ಉಪಮನ್ಯೋ!"

"ಕರುಗಳು ಹಾಲು ಕುಡಿಯುವಾಗ ಅವುಗಳ ಕಟವಾಯಿಗಳಿಂದ ಹೊರಗೆ ಬರುವ ನೊರೆಯನ್ನು ತಿನ್ನುವೆನು, ಗುರುದೇವ!"

"ಪಾಪ! ಕರುಣೆಯುಳ್ಳ ಕರುಗಳು ಅವುಗಳು ಕುಡಿಯುವ ಹಾಲನ್ನೆಲ್ಲಾ ನೊರೆಯ ರೂಪವಾಗಿ ನಿನಗೇ ಕೊಟ್ಟುಬಿಡುತ್ತವೆ. ಇದರಿಂದ ನೀನು ಅವುಗಳ ಆಹಾರವನ್ನು ಕಸಿದುಕೊಂಡಂತಾಗಲಿಲ್ಲವೇ? ಹೀಗೆ ಮಾಡುವುದು ಸರ್ವಥಾ ಧರ್ಮವಲ್ಲ, ಮಗು!"–ಎಂದು ಅವನನ್ನು ನಿಷೇಧಿಸಿದರು.

ಈ ವಿಧವಾಗಿ ಗುರುಗಳು ಉಪಮನ್ಯುವಿನ ಎಲ್ಲ ವಿಧವಾದ ಆಹಾರ ವನ್ನೂ ಪ್ರತಿಷೇಧಿಸಿಬಿಟ್ಟರು. ಅದರಿಂದಾಗಿ ಅವನು ತಂದ ಭಿಕ್ಷಾನ್ನವನ್ನು ಗುರುಗಳಿಗೇ ಅರ್ಪಿಸುತ್ತಿದ್ದನು. ಎರಡನೆಯ ಬಾರಿ ಭಿಕ್ಷೆಗೂ ಹೋಗುತ್ತಿರ ಲಿಲ್ಲ. ಹಸುಗಳ ಹಾಲನ್ನೂ ಕುಡಿಯುತ್ತಿರಲಿಲ್ಲ. ಕರುಗಳ ಕಟವಾಯಿಗಳಿಂದ ಬರುವ ನೊರೆಯನ್ನೂ ಸೇವಿಸುತ್ತಿರಲಿಲ್ಲ. ಹೀಗೆಯೇ ಇರುತ್ತಿರುವಾಗ ಅವನೊಮ್ಮೆ ಹಸಿವಿನಿಂದ ಬಹಳ ಬಳಲಿದವನಾಗಿ ಅರಣ್ಯದಲ್ಲಿ ಸಿಕ್ಕಿದ ಎಕ್ಕದೆಲೆಗಳನ್ನೇ ತಿಂದುಬಿಟ್ಟನು. ಎಕ್ಕದೆಲೆಗಳು ಸ್ವಾಭಾವಿಕವಾಗಿಯೇ ಕ್ಷಾರ ವಾಗಿಯೂ, ಕಟುವಾಗಿಯೂ, ಕಹಿಯಾಗಿಯೂ, ಒಗಚಾಗಿಯೂ, ತೀಕ್ಷ್ಣ ವಾಗಿಯೂ ಇದ್ದ ಕಾರಣ ಬಹುದಾರುಣವಾದ ಪರಿಣಾಮವನ್ನೇ ಉಂಟು ಮಾಡಿದುವು. ಎಕ್ಕದೆಲೆಗಳ ತೀಕ್ಷ್ಣತೆಯಿಂದಾಗಿ ಉಪಮನ್ಯುವು ಅಂಧನಾಗಿ ಬಿಟ್ಟನು. ಕಣ್ಣುಕಾಣದ ಕಾರಣದಿಂದ ಅತ್ತಿತ್ತ ಅಲೆದಾಡುತ್ತಿದ್ದಾಗ ಬಾವಿ ಯೊಂದರಲ್ಲಿ ಬಿದ್ದುಬಿಟ್ಟನು.

ಸೂರ್ಯನು ಅಸ್ತಮಿಸಿದರೂ ಸಹ ಉಪಮನ್ಯುವು ನಿತ್ಯದಂತೆ ಆಶ್ರಮಕ್ಕೆ ಬಾರದಿದ್ದುದನ್ನು ಕಂಡು ಧೌಮ್ಯರು ಶಿಷ್ಯರನ್ನು ಪ್ರಶ್ನಿಸಿದರು :

"ಉಪಮನ್ಯುವು ಬರಲಿಲ್ಲವೇ?"

ಶಿಷ್ಯರು, ಅವನು ಹಸುಗಳನ್ನು ಕಾಯಲು ಹೋಗಿರುವನೆಂದರು.

"ಉಪಮನ್ಯುವೇಕೆ ಬರಲಿಲ್ಲ? ದನಗಳನ್ನು ಕಾಯಲು ಹೋಗಿ ದ್ದರೂ, ಸಾಯಂಕಾಲವಾಗುತ್ತಲೇ ಅವನಿಲ್ಲಿಗೆ ಬಂದುಬಿಡುತ್ತಿದ್ದನು. ಆದರೆ ನಾನು ಅವನ ಆಹಾರವೆಲ್ಲವನ್ನೂ ಪ್ರತಿಷೇಧಿಸಿಬಿಟ್ಟಿದ್ದೇನು. ಪ್ರಾಯಶಃ ಇದ ರಿಂದಲೇ ಅವನು ಕುಪಿತನಾಗಿ ಆಶ್ರಮಕ್ಕೆ ಬಾರದಿರಬಹುದು. ಆದುದರಿಂದ ನಾವೀಗಲೇ ಹೋಗಿ ಅವನನ್ನು ಹುಡುಕಿ ಕರೆತರಬೇಕು."

ಧೌಮ್ಯರು ಹೀಗೆ ಹೇಳಿ ಶಿಷ್ಯರೊಡನೆ ಅರಣ್ಯಕ್ಕೆ ಹೋಗಿ ಚಪ್ಪಾಳೆ ತಟ್ಟುತ್ತಾ ಕೂಗಿ ಹೇಳಿದರು :

"ಉಪಮನ್ಯೋ! ಎಲ್ಲಿರುವೆ? ಮಗು! ನಿನ್ನನ್ನು ಹುಡುಕುವ ಸಲುವಾಗಿಯೇ ನಾವಿಲ್ಲಿ ಬಂದಿರುವೆವು. ಬೇಗ ಬಾ."

ಗುರುಗಳ ಮಾತನ್ನು ಕೇಳುತ್ತಲೇ ಬಾವಿಯಲ್ಲಿದ್ದ ಉಪಮನ್ಯುವು ಗಟ್ಟಿಯಾಗಿ ಹೇಳಿದನು :

"ಗುರುದೇವ! ನಾನೀ ಕೂಪದಲ್ಲಿ ಬಿದ್ದುಬಿಟ್ಟಿದ್ದೇನೆ."

"ಬಾವಿಯೊಳಗೆ ಏಕೆ ಬಿದ್ದೆ?"

"ಹಸಿವಿನಿಂದಾಗಿ ಎಕ್ಕದೆಲೆಗಳನ್ನೇ ತಿಂದುಬಿಟ್ಟೆನು. ಅದರ ಪರಿಣಾಮವಾಗಿ ಕುರುಡನೂ ಆಗಿಬಿಟ್ಟೆನು. ಅಲ್ಲಲ್ಲಿ ಅಲೆದಾಡುತ್ತಿದ್ದಾಗ ಈ ಬಾವಿಯೊಳಕ್ಕೆ ಬಿದ್ದೆನು, ಗುರುದೇವ!"

"ಉಪಮನ್ಯೋ! ಅಶ್ವಿನೀದೇವತೆಗಳನ್ನು ಸ್ತೋತ್ರಮಾಡು. ದೇವವೈದ್ಯರಾದ ಅವರು ನಿನಗೆ ಕಣ್ಣುಗಳನ್ನು ಪುನಃ ಅನುಗ್ರಹಿಸುತ್ತಾರೆ."

ಗುರುಗಳಿಂದ ಹೀಗೆ ನಿರ್ದೇಶಿತನಾದ ಉಪಮನ್ಯುವು ಅಶ್ವಿನೀದೇವತೆಗಳನ್ನು ಋಙ್ಮಂತ್ರಗಳಿಂದ ಸ್ತೋತ್ರಮಾಡಲು ಉಪಕ್ರಮಿಸಿದನು :

**ಪ್ರಪೂರ್ವಗೌ ಪೂರ್ವಜೌ ಚಿತ್ರಭಾನೂ**
**ಗಿರಾವಾಶಂಸಾಮಿ ತಪಸಾ ಹ್ಯನನ್ತೌ।**
**ದಿವ್ಯೌ ಸುಪರ್ಣೌ ವಿರಜೌ ವಿಮಾನಾ-**
**ವಧಿಕ್ಷಿಪನ್ತೌ ಭುವನಾನಿ ವಿಶ್ವಾ ॥೫೭॥**

"ಎಲೈ ಅಶ್ವಿನೀದೇವತೆಗಳೇ! ನೀವು ಎಲ್ಲರಿಗಿಂತಲೂ ಮೊದಲು ಯಜ್ಞಕ್ಕೆ ಹೋಗುವವರು. ಅಶ್ವಜಾತಿಯ ಸ್ವಭಾವವನ್ನು ಅನುಸರಿಸಿ ಹುಟ್ಟಿದವರು. ನಿಮ್ಮ ಪ್ರಕಾಶವು ಅಗ್ನಿಗೆ ಸಮಾನವಾಗಿದೆ. ನೀವು ಸ್ವಸಾಮರ್ಥ್ಯದಿಂದ ಅನೇಕರೂಪಗಳನ್ನು ಧರಿಸುತ್ತೀರಿ. ನಿಮ್ಮ ಗಮನವು ಮನೋಹರವಾದುದು. ನೀವು ರಜೋಗುಣರಹಿತರೂ, ಎಲ್ಲ ಲೋಕಗಳಲ್ಲಿಯೂ ನಿಮ್ಮ ವಿಮಾನವನ್ನು ನಡೆಸುವವರೂ ಆಗಿದ್ದೀರಿ. ನಿಮ್ಮನ್ನು ನಾನು ಈ ವಾಕ್ಕುಗಳಿಂದ ಸ್ತೋತ್ರಮಾಡುತ್ತೇನೆ.

ಹಿರಣ್ಮಯೌ ಶಕುನೀ ಸಾಮ್ಪರಾಯೌ
ನಾಸತ್ಯದಸ್ರೌ ಸುನಸೌ ವೈ ಜಯನ್ತೌ ।
ಶುಕ್ಲಂ ವಯನ್ತೌ ತರಸಾ ಸುವೇಮಾ-
ವಧಿವ್ಯಯನ್ತಾವಸಿತಂ ವಿವಸ್ವತಃ ॥೫೮॥

ಅಶ್ವಿನೀದೇವತೆಗಳು ಪಕ್ಷಿಗಳಂತೆ ವೇಗವಾಗಿ ಹೋಗುವ ಸುವರ್ಣ ಮಯವಾದ ವಿಮಾನಗಳಲ್ಲಿ ಕುಳಿತು ಹೋಗುತ್ತಾರೆ. ಅವರು ಚಿನ್ನದ ಮೈ



ಬಣ್ಣವುಳ್ಳವರೂ, ಆರೋಗ್ಯಶಕ್ತಿಯನ್ನು ಕೊಡುವವರೂ ಆಗಿರುತ್ತಾರೆ. ಪರಲೋಕಬಂಧುಗಳೂ, ಭಕ್ತರನ್ನು ಆಪತ್ತುಗಳಿಂದ ಉದ್ಧರಿಸುವವರೂ ಆಗಿರುತ್ತಾರೆ. ಸುಳ್ಳಾಡುವವರಲ್ಲ. ( ಸೂರ್ಯದೇವನು ಅಶ್ವರೂಪದಿಂದ ಇರುವಾಗ ) ಅವನ ಮೂಗಿನ ಹೊಳ್ಳೆಯಿಂದ ಹುಟ್ಟಿದವರು. ಸುಂದರವಾದ

ಮೂಗುಳ್ಳವರು. ಸೂರ್ಯನ ಮಕ್ಕಳಾದುದರಿಂದ ತಂದೆಯ ಸಾಮರ್ಥ್ಯ ದಿಂದ ಕೃಷ್ಣಕುಷ್ಠರೋಗವನ್ನು ಹೋಗಲಾಡಿಸುವ ವಿಜಯಶಾಲಿಗಳಾದ ವೈದ್ಯರಾಗಿದ್ದಾರೆ. ಒಳ್ಳೆಯ ಮೈಬಣ್ಣವನ್ನೂ ಮತ್ತು ನೇತ್ರಶಕ್ತಿಯನ್ನೂ ಕೊಡುತ್ತಾರೆ. ಹೇಗೆ ನೇಕಾರರು ದಾರದ ಜೊತೆಗೆ ಸೇರಿರುವ ಕಪ್ಪಾದ ಕೂದಲು ಮುಂತಾದುವನ್ನು ತೆಗೆದುಹಾಕಿ ಬಿಳಿಯ ದಾರದಿಂದ ನೇಯು ತ್ತಾರೆಯೋ–ಹಾಗೆಯೇ ಇವರು ಶ್ಯಾಮಕುಷ್ಠವನ್ನು ತೊಡೆದುಹಾಕಿ ಒಳ್ಳೆಯ ಶುಕ್ಲಕಾಂತಿಯನ್ನು ಭಕ್ತರಿಗೆ ಉಂಟುಮಾಡುತ್ತಾರೆ.

**ಗ್ರಸ್ತಾಂ ಸುಪರ್ಣಸ್ಯ ಬಲೇನ ವರ್ತಿಕಾ–**
**ಮಮುಞ್ಚತಾಮಶ್ವಿನೌ ಸೌಭಗಾಯ ।**
**ತಾವತ್ಸುವೃತ್ತಾವನಮನ್ತ ಮಾಯಯಾ**
**ವಸತ್ತಯಾ ಗಾ ಅರುಣಾ ಉದಾವಹನ್ * ॥೫॥**

ಎಲೈ ಅಶ್ವಿನೀದೇವತೆಗಳೇ! ಗರುಡನಂತಹ ಪರಾಕ್ರಮ ಮತ್ತು ವೇಗ ಗಳುಳ್ಳ ಒಂದು ನಾಯಿಯು ಗುಬ್ಬಚ್ಚಿಯ ಜಾತಿಯ ಒಂದು ಹೆಣ್ಣು ಪಕ್ಷಿಯನ್ನು ಬಾಯಲ್ಲಿ ಕಚ್ಚಿಕೊಂಡಿದ್ದಾಗ ನೀವು ಅದನ್ನು ಬಿಡಿಸಿ ಅದಕ್ಕೆ ಪುನಃ ಜೀವನದ ಸೌಖ್ಯವು ಸಿಗುವಂತೆ ಮಾಡಿದ್ದೀರಿ. ಸೋಮಯಾಗದಲ್ಲಿ ಇಂದ್ರನೇ ಮೊದಲಾದ ದೇವತೆಗಳು ಇದ್ದರೂ–ತುಂಟಹಸುಗಳು ಮೇಯಿಸುವವರಿಗೆ ಬಹಳ ಶ್ರಮಕೊಡುವುದರಿಂದ ಯಜಮಾನನು, ಅಂತಹ ಹಸುಗಳನ್ನು ಕಾಪಾಡುವ ಕೆಲಸವು ನಿಮ್ಮಿಬ್ಬರ ಹೊರತು ಬೇರೆ ಯಾರಿಗೂ ಸಾಧ್ಯವಿಲ್ಲವೆಂದು ತಿಳಿದು, ಆ ಹಸುಗಳನ್ನು ಕಾಪಾಡುವುದಕ್ಕೆ ನಿಮ್ಮಿಬ್ಬರನ್ನೇ

---

* ಋಗ್ವೇದ ಸಂಹಿತಾ–ಮಂಡಲ ೧, ಅಧ್ಯಾಯ ೧೭, ಸೂಕ್ತ ೧೧೬ರಲ್ಲಿ ಒಂದು ಮಂತ್ರವು ಬರುತ್ತದೆ.

**ಆಸ್ನೋವೃಕಸ್ಯ ವರ್ತಿಕಾಮಭೀಕೇ ಯುವಂ ಹ ನಾಸತ್ಯಾ ಮುಮುಕ್ತಮ್ ।**
**ಉತೋಕವಿಂ ಪುರುಭುಜಾ ಯುವಂ ಹ ಕೃಪಮಾಣಮಕೃತಂ ವಿಚಕ್ಷೇ ॥**

ಎಂಬುದು ಆ ಮಂತ್ರ. ಒಂದು ಅರಣ್ಯದಲ್ಲಿ ಒಂದು ನಾಯಿಗೂ, ಗುಬ್ಬಚ್ಚಿಗೂ ಜಗಳವಾಗಿ ಗುಬ್ಬಚ್ಚಿಯನ್ನು ನಾಯಿಯು ಕಚ್ಚಿಕೊಂಡಾಗ ಅಶ್ವಿನೀದೇವತೆಗಳು ನಾಯಿಯ ಬಾಯಿಯಲ್ಲಿ ಸಿಕ್ಕಿಬಿದ್ದಿದ್ದ ಗುಬ್ಬಚ್ಚಿಯನ್ನು ರಕ್ಷಿಸಿದರು–ಎಂಬ ಕಥೆಯು ಅಲ್ಲಿ ಬಂದಿದೆ. ಅದನ್ನೇ ಇಲ್ಲಿಯೂ ಉಲ್ಲೇಖಿಸಿದ್ದಾರೆ.

ಪ್ರಾರ್ಥಿಸಿದ್ದಾನೆ. ಹೀಗೆ ದಯಾವಂತರೂ, ದಕ್ಷರೂ ಆದ ನಿಮ್ಮಿಬ್ಬರಿಗೂ ನಾನು ನಮಸ್ಕರಿಸುತ್ತೇನೆ.

**ಷಷ್ಟಿಶ್ಚ ಗಾವಸ್ತ್ರಿಶತಾಶ್ಚ ಧೇನವ**
**ಏಕಂ ವತ್ಸಂ ಸುವತೇ ತಂ ದುಹನ್ತಿ ।**
**ನಾನಾಗೋಷ್ಠಾ ವಿಹಿತಾ ಏಕದೋಹನಾ-**
**ಸ್ತಾವಶ್ವಿನೌ ದುಹತೋ ಧರ್ಮಮುಕ್ಥ್ಯಮ್ ॥೬೦॥**

೩೬೦ ಹಸುಗಳು ಒಂದು ವರ್ಷಪರ್ಯಂತವೂ ತಮ್ಮ ಸರದಿಯ ಪ್ರಕಾರ ಹಾಲು ಕರೆದು 'ಘರ್ಮ'ವನ್ನು ಸಿದ್ಧಪಡಿಸಿಕೊಡುತ್ತವೆ. ಅವುಗಳು ಒಂದೊಂದು ದಿವಸದಲ್ಲಿ ಮಾತ್ರವೇ ತಮ್ಮ ಹಾಲನ್ನು 'ಘರ್ಮ' ದ ಉಪಯೋಗಕ್ಕೆ ಕೊಡುವುದರಿಂದ ಪ್ರತ್ಯೇಕವಾದ ಕೊಟ್ಟಿಗೆಗಳಲ್ಲಿರುವ ಹಸು ಗಳಂತೆಯೇ ಕಾಣಿಸುತ್ತವೆ. ಅವುಗಳನ್ನು 'ಅಧ್ವರ್ಯು' ಎಂಬ ಒಬ್ಬನೇ ಋತ್ವಿಜನು ಕರೆಯುತ್ತಾನೆ. ಎಲೈ ಅಶ್ವಿನೀದೇವತೆಗಳಿರಾ! ಹೀಗೆ ಸಿದ್ಧಪಡಿಸಿದ ಉತ್ತಮವಾದ 'ಘರ್ಮ'ವನ್ನು ನಿಮಗೆ ಯಾಜ್ಞಿಕರು ಸಮರ್ಪಿಸುತ್ತಾರೆ. ಅಂತಹ ನಿಮಗೆ–ನಾನು ನಮಸ್ಕಾರಮಾಡುತ್ತಿದ್ದೇನೆ.*

**ಏಕಾಂ ನಾಭಿಂ ಸಪ್ತಶತಾ ಅರಾಃ ಶ್ರಿತಾಃ**
**ಪ್ರಧಿಷ್ವನ್ಯಾ ವಿಂಶತಿರರ್ಪಿತಾ ಅರಾಃ ।**
**ಅ (ಸು) ನೇಮಿ ಚಕ್ರಂ ಪರಿವರ್ತತೇಽಜರಂ**
**ಮಾಯಾಶ್ವಿನೌ ಸಮನಕ್ತಿ ಚರ್ಷಣೀ ॥೬೧॥**

ಜಗತ್ಪಾಲಕನಾದ ಸೂರ್ಯದೇವನ ರಥಕ್ಕೆ ಕಾಲವೇ ಚಕ್ರವು. ಆ ಕಾಲಚಕ್ರಕ್ಕೆ ಸಂವತ್ಸರವೇ ಒಂದು ಸ್ಥೂಲವಾದ ನಾಭಿ. ( ನಾಭಿಯೆಂದರೆ

---

* ಜ್ಯೋತಿಷ್ಟೋಮವೆಂಬುದು ಒಂದು ಪ್ರಸಿದ್ಧವಾದ ಯಾಗ. ಅದರಲ್ಲಿ ಮೂರು ಇಷ್ಟಿಗಳಿವೆ. ಅವಕ್ಕೆ 'ಉಪಸತ್' ಎಂದು ಹೆಸರು. ಅನೇಕ ಯಜಮಾನರುಳ್ಳ ಜ್ಯೋತಿಷ್ಟೋಮಯಾಗಕ್ಕೆ ಸತ್ರವೆಂದು ಹೆಸರು. ಸತ್ರಯಾಗದಲ್ಲಿ ಉಪಸದ್-ಇಷ್ಟಿಗಳು ಹೆಚ್ಚಾಗಿರುತ್ತವೆ. ಏಕೆಂದರೆ : ಸತ್ರಯಾಗವನ್ನು ಅನೇಕದಿನಗಳಲ್ಲಿ ಮಾಡಬೇಕಾಗುತ್ತದೆ. ಉಪಸದ್-ಇಷ್ಟಿಗಳಲ್ಲಿ ಪ್ರವರ್ಗ್ಯವೆಂಬ ಹೋಮವಿದೆ. ಆ ಹೋಮಕ್ಕೆ 'ಘರ್ಮ' ಅಂದರೆ ಬಿಸಿಯಾದ ತುಪ್ಪಕ್ಕೆ ಹಾಲನ್ನು ಸೇರಿಸಿದ ಒಂದು ದ್ರವ್ಯವಿಶೇಷವನ್ನು ಉಪಯೋಗಿಸಬೇಕು. ಆ ಘರ್ಮವನ್ನು

ಕಾಲಚಕ್ರದ ನಡುಭಾಗ ಅಥವಾ ಅಚ್ಚುಮರದ ಕೊನೆಯು ಸೇರುವ ತೂಬು.) ಚಕ್ರದಲ್ಲಿ ಗೂಟಗಳಿರುವಂತೆ ಕಾಲಚಕ್ರದಲ್ಲಿ ೩೫೦ ಹಗಲುಗಳು ಮತ್ತು ೩೫೦ ರಾತ್ರಿಗಳೆಂಬ ೭೦೦ ಗೂಟಗಳಿವೆ. ಆ ನಾಭಿಯಲ್ಲಿಯೇ ನೇಮಿಯಲ್ಲಿ ( ಚಕ್ರದ ಹೊರಭಾಗ-ಹಳಿ ) ಸಾವನಸಂವತ್ಸರದ ೩೬೦ ದಿವಸಗಳಲ್ಲಿ ಉಳಿದ ಹತ್ತು ಹಗಲುಗಳು ಮತ್ತು ಹತ್ತು ರಾತ್ರಿಗಳು ಉದ್ದವಾದ ಗೂಟಗಳಂತೆ ಸೇರಿಕೊಂಡಿವೆ.[1] ದೃಢವಾದ ನೇಮಿಯುಳ್ಳ ಮತ್ತು ಜೀರ್ಣವಾಗದಿರುವ ಒಂದು ಚಕ್ರವು ಹೀಗಿದೆ.

**ಏಕಂ ಚಕ್ರಂ ವರ್ತತೇ ದ್ವಾದಶಾರಂ**
**ಷಣ್ಣಾಭಿಮೇಕಾಕ್ಷಮೃತಸ್ಯ ಧಾರಣಮ್ ।**
**ಯಸ್ಮಿನ್ದೇವಾ ಅಧಿ ವಿಶ್ವೇ ವಿಷಕ್ತಾ-**
**ಸ್ತಾವಶ್ವಿನೌ ಮುಞ್ಚತಂ ಮಾ ವಿಷೀದತಮ್ ॥೬೨॥**

ಒಂದು ಚಕ್ರದಿಂದ ರಥದ ಗಮನವು ಆಗುವುದಿಲ್ಲ. ಆದುದರಿಂದ ಮಂತ್ರದಲ್ಲಿ ಹಿಂದಿನಂತೆಯೇ ಚಮತ್ಕಾರವಾಗಿ ಇನ್ನೊಂದು ಚಕ್ರದ ಕಲ್ಪನೆ ಯನ್ನೂ ಮಾಡಿದ್ದಾರೆ. ಕಾಲಚಕ್ರದ ಸಂವತ್ಸರವೆಂಬ ಸ್ಥೂಲವಾದ ನಾಭಿಯಲ್ಲಿ ಹನ್ನೆರಡು ಮಾಸಗಳು ಹನ್ನೆರಡು ಗೂಟಗಳಂತಿವೆ. ಆರು ಋತುಗಳು ಆ ಚಕ್ರದ ಆರು ನಾಭಿಗಳಂತಿವೆ.[2]

---

ಕಂಠದ ಎರಡು ಪಾರ್ಶ್ವಗಳಲ್ಲಿಯೂ ಬಿದಿರಿನ ಗಳುಗಳನ್ನು ಕಟ್ಟಿರುವ 'ಮಹಾವೀರ' ಎಂಬ ಪಾತ್ರೆಯಲ್ಲಿ ಇಡುತ್ತಾರೆ. ಹಾಲು ಮತ್ತು ತುಪ್ಪವನ್ನು ಸಂಗ್ರಹಿಸುವುದಕ್ಕೆ ಪ್ರತ್ಯೇಕವಾದ ಹಸುಗಳು ಬೇಕು. ಹಾಗೆ ಸಂಪಾದಿಸಿದ 'ಘರ್ಮ'ವನ್ನು ಅಶ್ವಿನೀದೇವತೆಗಳನ್ನು ಉದ್ದೇಶಿಸಿ ಹೋಮಮಾಡುತ್ತಾರೆ. 'ಗವಾಮಯನ' ಎಂಬ ಒಂದು ವರ್ಷದಲ್ಲಿ ಮುಗಿಯುವ ಸತ್ರಯಾಗದಲ್ಲಿ ೩೬೦ ದಿವಸಗಳಲ್ಲಿಯೂ ಅಶ್ವಿನೀದೇವತೆಗಳನ್ನು ಉದ್ದೇಶಿಸಿ 'ಘರ್ಮ'ವನ್ನು ಹೋಮ ಮಾಡುತ್ತಾರೆ. ಅಂತಹ ಅಶ್ವಿನೀದೇವತೆಗಳ ಸ್ತುತಿಯನ್ನು ಉಪಮನ್ಯುವು ಇಲ್ಲಿ ಮಾಡುತ್ತಿದ್ದಾನೆ.

1 ದಕ್ಷಿಣಾಯನದ ಬಹಳ ದೀರ್ಘವಾದ ಐದು ದಿನಗಳನ್ನೂ, ಉತ್ತರಾಯಣದ ಬಹಳ ದೀರ್ಘವಾದ ಐದು ದಿನಗಳನ್ನೂ ಇಲ್ಲಿ ಉದ್ದವಾದ ಗೂಟಗಳೆಂದು ವರ್ಣಿಸಿರುವಂತೆ ಕಾಣುತ್ತದೆ.

2 ಆರು ಕಬ್ಬಿಣದ ಅಥವಾ ಮರದ ಬಳೆಗಳನ್ನು ಕ್ರಮವಾಗಿ ಜೋಡಿಸಿ ಒಂದೊಂದು

ಆ ಚಕ್ರಕ್ಕೆ ಒಂದೇ ಒಂದು ದೃಢವಾದ ಅಚ್ಚುಮರವಿದೆ. ಸ್ವರ್ಗಕ್ಕೆ ರಕ್ಷಕನಾಗಿ ಎಲ್ಲ ದೇವತೆಗಳಿಗೂ ಆಧಾರವಾಗಿರುವ ಇಂತಹ ಚಕ್ರವನ್ನು ಅಶ್ವಿನೀದೇವತೆಗಳು ನಡೆಸುತ್ತಾರೆ. ಹೀಗೆ ಜಗತ್ತಿಗೆ ಆಧಾರವಾಗಿರುವ ಸೂರ್ಯದೇವನ ರಥದ ಚಕ್ರಗಳನ್ನು ನಡೆಸುವ ಅಶ್ವಿನೀದೇವತೆಗಳು ಸಂಕಟದಲ್ಲಿ ಸಿಕ್ಕಿಬಿದ್ದಿರುವ ನನ್ನನ್ನು ಪಾರುಮಾಡಲಿ.[1]

**ಅಶ್ವಿನಾವಿನ್ದುಮಮೃತಂ ವೃತ್ತಭೂಯೌ**
**ತಿರೋಧತ್ತಾಮಶ್ವಿನೌ ದಾಸಪತ್ನೀ ।**
**ಹಿತ್ವಾ ಗಿರಿಮಶ್ವಿನೌ ಗಾ ಮುದಾ ಚರನ್ತೌ**
**ತದ್ವೃಷ್ಟಿಮಹ್ನಾ ಪ್ರಸ್ಥಿತೌ ಬಲಸ್ಯ ॥೬೩॥**

ಎಲೈ ಅಶ್ವಿನೀದೇವತೆಗಳೇ! ಮನುಷ್ಯರಿಗೆ ಬಹಳ ಉಪಕಾರಿಯಾಗಿರುವ ನೀರಿನಲ್ಲಿ ಚಂದ್ರನ ಶಕ್ತಿಯು ಇರುವುದರಿಂದ ನೀವು ನೀರಿನಿಂದ ಚಿಕಿತ್ಸೆಮಾಡುತ್ತೀರಿ. ನೀವು ಮೇರುಪರ್ವತದಿಂದ ಹೊರಟು ಬಂದು ಅನ್ನವನ್ನು ಕೊಡತಕ್ಕ ಮಳೆಗಳನ್ನೂ ಕೂಡ ಬೇಗನೆ ಉಂಟುಮಾಡುತ್ತೀರಿ.[2]

**ಯುವಾಂ ದಿಶೋ ಜನಯಥೋ ದಶಾಗ್ರೇ**
**ಸಮಾನಂ ಮೂರ್ಧ್ನಿ ರಥಯಾನಂ ವಿಯನ್ತಿ ।**
**ತಾಸಾಂ ಯಾತಮೃಷಯೋಽನುಪ್ರಯಾನ್ತಿ**
**ದೇವಾ ಮನುಷ್ಯಾಃ ಕ್ಷಿತಿಮಾಚರನ್ತಿ ॥೬೪॥**

ಅಶ್ವಿನೀದೇವತೆಗಳು ಇತರ ದೇವತೆಗಳಿಗಿಂತಲೂ ಮೊದಲು ಸೋಮಯಾಗಕ್ಕೆ ಹೋಗುತ್ತಾರೆ. ಆದುದರಿಂದ ಅವರು ಇತರದೇವತೆಗಳ ಪ್ರಾದುರ್ಭಾವಕ್ಕೆ ಸೂಚಕರಾಗಿರುತ್ತಾರೆ. ಋಷಿಗಳು ಮತ್ತು ಮನುಷ್ಯರು ಈ

---

ಬಳೆಯಲ್ಲಿ ಎರಡೆರಡು ಮಾಸಗಳೆಂಬ ಗೂಟಗಳನ್ನು ಜೋಡಿಸಿದಂತಿದೆ–ಎಂಬ ಕಲ್ಪನೆಯು ಇಲ್ಲಿ ಕಂಡುಬರುತ್ತಿದೆ.

1 ಹಿಂದೆ ವರ್ಣಿಸಿರುವುದು ೩೬೦ ದಿವಸಗಳ ಸಾವನವರ್ಷ. ಇಲ್ಲಿ ಚಾಂದ್ರ-ಸೌರ ಸಂವತ್ಸರಗಳನ್ನು ಚಕ್ರವೆಂದು ವರ್ಣಿಸಿದ್ದಾರೆ–ಎಂದೂ ಹೇಳಬಹುದು.

2 ನೀರು ಉತ್ತಮವಾದ ಪ್ರಕೃತಿಚಿಕಿತ್ಸೆಯ ಔಷಧವೆಂದು ವೈದ್ಯಶಾಸ್ತ್ರಜ್ಞರೂ ಹೇಳುತ್ತಾರೆ ; ವೇದವೂ ಹೇಳುತ್ತದೆ. ಅಶ್ವಿನೀದೇವತೆಗಳು ನೀರಿನಿಂದಲೇ ಚಿಕಿತ್ಸೆ ಮಾಡುತ್ತಾರೆ ಎಂಬ ಅಭಿಪ್ರಾಯದಿಂದ ಸ್ತೋತ್ರಮಾಡುತ್ತಾನೆ.

ದೇವತೆಗಳನ್ನು ಕ್ರಮವರಿತು ಪೂಜಿಸುತ್ತಾರೆ. ಎಲೈ ಅಶ್ವಿನೀದೇವತೆಗಳೇ! ದೇವತೆಗಳೂ ಮತ್ತು ಮನುಷ್ಯರೂ ನಿಮ್ಮ ಐಶ್ವರ್ಯಪ್ರತಿಪಾದಕವಾದ ಸ್ತೋತ್ರವನ್ನು ಮಾಡುತ್ತಾರೆ.

**ಯುವಾಂ ವರ್ಣಾನ್ವಿಕುರುಥೋ ವಿಶ್ವರೂಪಾಂ-**
**ಸ್ತೇಽಧಿಕ್ಷಿಯನ್ತೇ ಭುವನಾನಿ ವಿಶ್ವಾ ।**
**ತೇ ಭಾನವೋಽಪ್ಯನುಸೃತಾಶ್ಚರನ್ತಿ**
**ದೇವಾ ಮನುಷ್ಯಾಃ ಕ್ಷಿತಿಮಾಚರನ್ತಿ ॥೬೫॥**

ಸೂರ್ಯಕಿರಣಗಳಲ್ಲಿ ಏಳು ಬಣ್ಣಗಳಿವೆ. ಆ ಏಳು ಬಣ್ಣಗಳನ್ನೂ ಆಯಾ ಸಮಯಗಳಲ್ಲಿ ಪ್ರಕಟಪಡಿಸಿ, ಕಿರಣಗಳನ್ನು ಭೂಮಂಡಲದಲ್ಲಿ ಆವರಿಸುವಂತೆ ಮಾಡುವ ಕೆಲಸವು ಅಶ್ವಿನೀದೇವತೆಗಳದು. ಅಲ್ಲದೇ ಆ ಕಿರಣಗಳು ಅಶ್ವಿನೀದೇವತೆಗಳ ಇಚ್ಛೆಯಂತೆ ಜನರಿಗೆ ರೋಗಪರಿಹಾರಕಗಳಾಗಿಯೂ, ಆರೋಗ್ಯಪ್ರದಗಳಾಗಿಯೂ ಇರುತ್ತವೆ. ಹೀಗೆ ಹೆಚ್ಚು ಮಹಿಮೆಯಿಂದ ಕೂಡಿರುವುದರಿಂದಲೇ ದೇವತೆಗಳೂ ಮತ್ತು ಮನುಷ್ಯರೂ ನಿಮ್ಮನ್ನು ಸ್ತುತಿಸುತ್ತಾರೆ.

**ತೌ ನಾಸತ್ಯಾವಶ್ವಿನೌ ವಾಂ ಮಹೇಽಹಂ**
**ಸ್ರಜಂ ಚ ಯಾಂ ಬಿಭೃಥಃ ಪುಷ್ಕರಸ್ಯ ।**
**ತೌ ನಾಸತ್ಯಾವಮೃತಾವೃತಾವೃಧಾ-**
**ವೃತೇ ದೇವಾಸ್ತತ್ಪ್ರಪದೇ ನ ಸೂತೇ ॥೬೬॥**

ಅಶ್ವಿನೀದೇವತೆಗಳು ಕಮಲಮಾಲಿಕೆಗಳನ್ನು ಧರಿಸಿ ಸುಂದರರಾಗಿರುತ್ತಾರೆ. ಸೋಮಯಾಗದ ಸ್ಥಳಕ್ಕೆ ಅವರು ಮೊದಲು ಹೋಗುವವರಾದುದರಿಂದ ಅವರನ್ನು ಬಿಟ್ಟು ಇತರ ದೇವತೆಗಳು ತಮ್ಮ ಅಂಶವನ್ನು ಸ್ವೀಕರಿಸುವುದಿಲ್ಲ. ಮರಣರಹಿತರೂ, ಯಜ್ಞವರ್ಧಕರೂ ಆದ ಅಂತಹ ಅಶ್ವಿನೀದೇವತೆಗಳನ್ನು ನಾನು ಕಣ್ಣು ಇಲ್ಲದುದರಿಂದಲೂ, ಸಾಧನಹೀನನಾಗಿರುವುದರಿಂದಲೂ ಮನಸ್ಸಿನಲ್ಲಿಯೇ ಪೂಜಿಸುತ್ತೇನೆ.

***ಮುಖೇನ ಗರ್ಭಂ ಲಭೇತಾಂ ಯುವಾನೌ**
**ಗತಾಸುರೇತತ್ಪ್ರಪದೇನ ಸೂತೇ ।**

---

* ವ್ಯಾಸರಹಸ್ಯಗಳೆಂದು ಹೇಳಲ್ಪಟ್ಟಿರುವ ಶ್ಲೋಕಗಳಲ್ಲಿ ಇದೂ ಒಂದು ಶ್ಲೋಕ

**ಸದ್ಯೋ ಜಾತೋ ಮಾತರಮತ್ತಿ ಗರ್ಭ-**
**ಸ್ತಾವಶ್ವಿನೌ ಮುಞ್ಚಥೋ ಜೀವಸೇ ಗಾಃ ॥೬೭॥**

ಅಶ್ವಿನೀದೇವತೆಗಳು ನವಮಾಸಗಳ ಕಾಲ ಗರ್ಭವಾಸಮಾಡಿ ಅನಂತರ ಹುಟ್ಟಿದವರಲ್ಲ. ಅಶ್ವರೂಪನಾದ ಸೂರ್ಯನಿಂದ ವಡವಾ (ಹೆಣ್ಣು ಕುದುರೆ ) ರೂಪಳಾದ ಸಂಜ್ಞಾದೇವಿಯಲ್ಲಿ ಮುಖಸಂಬಂಧಮಾತ್ರದಿಂದ ತರುಣರಾಗಿಯೇ ಹುಟ್ಟಿದವರು. ಅಲ್ಪವಾದ ಪ್ರಾಣಶಕ್ತಿ ಮತ್ತು ಆಯುಷ್ಯವುಳ್ಳ ಮನುಷ್ಯಶಿಶುಗಳಿಗೆ ಮಾತ್ರವೇ ಒಂಬತ್ತು ತಿಂಗಳು ತಾಯಿಯ ಗರ್ಭ ವಾಸವೂ, ಹುಟ್ಟಿದ ನಂತರ ತಮ್ಮ ಜೀವನಕ್ಕೆ ತಾಯಿಯ ಎದೆಹಾಲಿನ ಅಪೇಕ್ಷೆಯೂ ಇರುತ್ತದೆ. ದೇವತೆಗಳಿಗೆ ಹೀಗಿಲ್ಲ. ಆದುದರಿಂದ ನಿತ್ಯತರುಣ ರಾಗಿರುವ ಅಶ್ವಿನೀದೇವತೆಗಳೇ! ಸಾಮರ್ಥ್ಯಶಾಲಿಗಳಾದ ನೀವು ಸುಖ ಜೀವನವನ್ನು ಮಾಡುವುದಕ್ಕಾಗಿ ನನಗೆ ನೇತ್ರಶಕ್ತಿಯನ್ನು ದಾನಮಾಡಿರಿ.

**ಸ್ತೋತುಂ ನ ಶಕ್ನೋಮಿ ಗುಣೈರ್ಭವನ್ತೌ**
**ಚಕ್ಷುರ್ವಿಹೀನಃ ಪಥಿ ಸಮ್ಪ್ರಮೋಹಃ ।**
**ದುರ್ಗೇಽಹಮಸ್ಮಿನ್ಪತಿತೋಽಸ್ಮಿ ಕೂಪೇ**
**ಯುವಾಂ ಶರಣ್ಯೌ ಶರಣಂ ಪ್ರಪದ್ಯೇ ॥೬೮॥**

---

ವೆಂದು ವಿದ್ವಾಂಸರು ಅಭಿಪ್ರಾಯಪಟ್ಟು ಇದಕ್ಕೆ ಅರ್ಥವಿವರಣೆಯನ್ನು ಹೀಗೆ ಮಾಡಿದ್ದಾರೆ: ಇದರ ಅರ್ಥವು ಯಥಾಶ್ರುತವಾಗಿ ಹೀಗಾಗಬಹುದು–

"ಇಬ್ಬರು ಯುವಕರು ಮುಖದಿಂದ ಗರ್ಭವನ್ನು ಧರಿಸಿದರು. ಮೃತನು ಇದನ್ನು ಪಾದತಲದಿಂದ ಹಡೆಯುತ್ತಾನೆ. ಹುಟ್ಟಿದ ಕೂಡಲೇ ಗರ್ಭವು ತಾಯಿಯನ್ನು ತಿಂದುಬಿಡುತ್ತದೆ. ಅಶ್ವಿನೀದೇವತೆಗಳೇ! ನೀವು ಜೀವನಕ್ಕಾಗಿ ಹಸುಗಳನ್ನು ಬಿಡುತ್ತೀರಿ!"

ಈ ಅರ್ಥವು ಅನನ್ವಿತವೂ ವಿಚಿತ್ರವೂ ಆಗಿ ತೋರುತ್ತದೆ. ಸ್ತೋತ್ರದ ವಾಸ್ತ ವಾರ್ಥವೇನೆಂದರೆ:

**ಯುವಾನೌ** = ಯುವಕ-ಯುವತಿಯರು **ಮುಖೇನ** = ಬಾಯಿಂದ **ಗರ್ಭಂ** = ಗರ್ಭಕ್ಕೆ ಕಾರಣವಾದ ಅನ್ನವನ್ನು **ಲಭೇತಾಂ** = ಪಡೆಯುತ್ತಾರೆ. ಅನಂತರ **ಗತಾಸುಃ** = ಅಚೇತನವಾದ ದೇಹವು, **ಏತತ್** = ಈ ಗರ್ಭವನ್ನು, **ಪ್ರಪದೇನ** = ಯೋನಿಯ ಮೂಲಕ

ದೇವವೈದ್ಯರೇ! ನೀವು ಉತ್ತಮವಾದ ಅನೇಕಗುಣಗಳಿಂದ ಕೂಡಿರುವಿರಿ. ಅಲ್ಪಜ್ಞನಾದ ನಾನು ಅವುಗಳೆಲ್ಲವನ್ನೂ ಸ್ತೋತ್ರಮಾಡುವುದಕ್ಕೆ ಸಮರ್ಥನಲ್ಲ. ಕಣ್ಣುಗಳನ್ನು ಕಳೆದುಕೊಂಡು ದಾರಿತಪ್ಪಿ ನಾನು ಈ ಆಳವಾದ ಬಾವಿಯಲ್ಲಿ ಬಿದ್ದಿದ್ದೇನೆ. ನಿಮ್ಮ ಸಹಾಯವಿಲ್ಲದೇ ನಾನು ಮೊದಲಿನಂತೆ ಆಗಲು ಸಾಧ್ಯವಿಲ್ಲ. ಆದುದರಿಂದ ಶರಣಾಗತವತ್ಸಲರಾದ ನಿಮ್ಮನ್ನು ನಾನು ಮರೆಹೊಕ್ಕಿದ್ದೇನೆ. ನನ್ನನ್ನು ಕಾಪಾಡಿರಿ."

ಉಪಮನ್ಯುವಿನ ಸ್ತೋತ್ರದಿಂದ ಒಲಿದುಬಂದ ಅಶ್ವಿನೀದೇವತೆಗಳು ಉಪಮನ್ಯುವಿನ ತಲೆಯನ್ನು ಸವರುತ್ತಾ–"ಮಗು! ನಿನ್ನ ಭಕ್ತಿಗೂ, ಸ್ತೋತ್ರಕ್ಕೂ ಮೆಚ್ಚಿದ್ದೇವೆ. ಇದೋ ಈ ಭಕ್ಷ್ಯವನ್ನು ತಿನ್ನು. ನಿನಗೆ ಕಣ್ಣುಗಳು ಬಂದುಬಿಡುವುವು"–ಎಂದು ಹೇಳಿ ದೇವನಿರ್ಮಿತವಾದ ಭಕ್ಷ್ಯವೊಂದನ್ನು ಉಪಮನ್ಯುವಿನ ಕೈಯ್ಯಲ್ಲಿಟ್ಟರು.

"ದೇವತೆಗಳೇ! ನೀವು ನಿಜವನ್ನೇ ಹೇಳುತ್ತೀರಿ. ಈ ಅಪೂಪವನ್ನು ತಿಂದರೆ ನನಗೆ ಕಣ್ಣುಗಳು ಬರುವುವೆಂಬುದರಲ್ಲಿ ಸಂಶಯವಿಲ್ಲ. ಆದರೆ ಗುರುದೇವನಿಗಿದನ್ನು ನಿವೇದನಮಾಡದೇ ನಾನೇ ತಿಂದುಬಿಡಲು ನನಗೆ ಉತ್ಸಾಹವಿಲ್ಲ."

ಅಶ್ವಿನೀದೇವತೆಗಳಿಗೆ ಉಪಮನ್ಯುವಿನ ಉತ್ತರವನ್ನು ಕೇಳಿ ಸಂತೋಷ

---

**ಸೂತೇ** = ಪ್ರಸವಿಸುತ್ತದೆ. **ಸದ್ಯೋಜಾತಃ**= ಆಗತಾನೇ ಹುಟ್ಟಿದ, **ಗರ್ಭಃ** = ಶಿಶುವು, **ಮಾತರಂ** = ತಾಯಿಯ ಸ್ತನ್ಯವನ್ನು, **ಅತ್ತಿ** = ಪಾನಮಾಡುತ್ತದೆ. **ತೌ** = ಚೇತನಾರೂಪವಾದ ಬ್ರಹ್ಮವಸ್ತುವೇ, **ಅಶ್ವಿನೌ** = ಅಶ್ವಿನೀದೇವತೆಗಳಾಗಿ (ಸ್ಥಃ=ಇದ್ದೀರಿ). **ಜೀವಸೇ** = ನನ್ನ ಜೀವನದ ನಿರ್ವಾಹಕ್ಕಾಗಿ, **ಗಾಃ** = ಕಣ್ಣುಗಳನ್ನು **ಮುಂಚಥಃ** = ದಯಪಾಲಿಸಿರಿ.

ಟಿಪ್ಪಣಿ :– ಅನ್ನವು ಶುಕ್ಲ-ಶೋಣಿತರೂಪಗಳನ್ನು ಹೊಂದಿ ಗರ್ಭವಾಗಿ ಪರಿಣಮಿಸುತ್ತದೆ. ಆದುದರಿಂದ ಅನ್ನವನ್ನು ಗರ್ಭವೆಂದು ಕರೆದಿದ್ದಾರೆ. ಶಿಶುವಿಗೆ ಸ್ತನ್ಯಪಾನವನ್ನು ಮಾಡಬೇಕೆಂದು ಯಾರು ಹೇಳಿಕೊಡುತ್ತಾರೆ? ಅದಕ್ಕೆ ಜನ್ಮಾಂತರಸಂಸ್ಕಾರವೇ ಕಾರಣವೆಂದು ಒಪ್ಪಬೇಕಾಗುತ್ತದೆ. ಆ ಸಂಸ್ಕಾರವು ಈ ಶರೀರಕ್ಕಲ್ಲ. ಆದುದರಿಂದ ಈ ಶರೀರಗಳಲ್ಲಿ ಅನುಸ್ಯೂತವಾದ ಆತ್ಮನಿರುವನೆಂದು ಸಿದ್ಧವಾಗುತ್ತದೆ. ಆತ್ಮನು ಶರೀರವನ್ನು ಸ್ತನ್ಯಪಾನಮಾಡುವಂತೆ ಪ್ರೇರಿಸುತ್ತಾನೆ.

ವಾಯಿತು. ಆದರೂ ಅವರು ತಮ್ಮ ಪರೀಕ್ಷೆಯನ್ನು ಅಷ್ಟಕ್ಕೇ ನಿಲ್ಲಿಸಲಿಲ್ಲ. ಮತ್ತೊಮ್ಮೆ ಹೇಳಿದರು : "ಹಿಂದೆ ನಿನ್ನ ಗುರುಗಳು ನಮ್ಮನ್ನು ಪ್ರಾರ್ಥಿಸಿದಾಗ ಅವರಿಗೂ ಅಪೂಪವನ್ನು ಕೊಟ್ಟೆವು. ಆದರೆ ಅವರು ತಮ್ಮ ಗುರುಗಳಿಗೆ ಸಮರ್ಪಿಸದೆಯೇ ತಿಂದರು. ಅದರಂತೆಯೇ ನೀನೂ ಮಾಡಬಹುದಲ್ಲವೇ?"

ಅಶ್ವಿನೀದೇವತೆಗಳ ಆ ಮಾತುಗಳನ್ನು ಕೇಳಿದನಂತರವೂ ಉಪಮನ್ಯುವು ಭಕ್ಷ್ಯವನ್ನು ತಿನ್ನದೇ ಅವರನ್ನು ಕುರಿತು ಹೇಳಿದನು : "ಯಮಳರೇ! ನಾನು ನಿಮ್ಮ ವಿಷಯದಲ್ಲಿ ಬಹಳ ವಿನೀತನಾಗಿದ್ದೇನೆ. ನಮ್ಮ ಗುರುಗಳಿಗಿದನ್ನು ಮೊದಲರ್ಪಿಸದೇ ಭಕ್ಷಣೆಮಾಡಲು ಖಂಡಿತವಾಗಿಯೂ ನಾನು ಇಷ್ಟಪಡುವುದಿಲ್ಲ."

ಉಪಮನ್ಯುವಿನ ಆ ಉತ್ತರದಿಂದ ಪರಮಪ್ರೀತರಾದ ಯಮಳರು ಉಪಮನ್ಯುವಿಗೆ ಹೇಳಿದರು :

"ಉಪಮನ್ಯೋ! ನಿನ್ನ ಗುರುಭಕ್ತಿಗೆ ನಾವು ಮೆಚ್ಚಿದ್ದೇವೆ. ನಿನ್ನ ಗುರುವಿನ ಹಲ್ಲುಗಳು ಕಪ್ಪಾದ ಲೋಹದ ( ಕಬ್ಬಿಣದ ) ರೂಪವಾಗಿವೆ. ಆದರೆ ನಿನ್ನ ಹಲ್ಲುಗಳು ಸುವರ್ಣಮಯವಾಗುತ್ತವೆ. ನೀನು ಚಕ್ಷುಷ್ಮಂತನೂ ( ಪ್ರಶಸ್ತವಾದ ಕಣ್ಣುಳ್ಳವನು ) ಶ್ರೇಯೋವಂತನೂ ಆಗುವೆ"–ಹೀಗೆ ಹೇಳಿ ಅಂತರ್ಧಾನಹೊಂದಿದರು. ಒಡನೆಯೇ ಉಪಮನ್ಯುವು ಕಣ್ಣುಗಳನ್ನು ಪಡೆದುಕೊಂಡು ಬಾವಿಯಿಂದ ಮೇಲಕ್ಕೆ ಬಂದು ಧೌಮ್ಯರಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಆನಂದದಿಂದ ಧೌಮ್ಯರ ಹೃದಯವು ಉಬ್ಬಿತು. ಅವರು ಉಪಮನ್ಯುವಿಗೆ ಹೇಳಿದರು : "ಮಗು! ಅಶ್ವಿನೀದೇವತೆಗಳ ಅನುಗ್ರಹದಂತೆಯೇ ನೀನು ಉತ್ತಮವಾದ ಶ್ರೇಯಸ್ಸನ್ನು ಪಡೆಯುವೆ. ಎಲ್ಲ ವೇದಗಳೂ, ಎಲ್ಲ ಧರ್ಮಶಾಸ್ತ್ರಗಳೂ ನಿನ್ನ ಸ್ಮೃತಿಪಥದಲ್ಲಿ ಶಾಶ್ವತವಾಗಿರುವುವು."

ಶೌನಕರೇ! ಈ ರೀತಿಯಲ್ಲಿ ಉಪಮನ್ಯುವಿನ ಪರೀಕ್ಷೆಯೂ ನಡೆದು ಅವನೂ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಶ್ರೇಯಃ-ಪ್ರೇಯಗಳನ್ನು ಪಡೆದನು.

ಹಿಂದೆಯೇ ಹೇಳಿದಂತೆ ಆಯೋದಧೌಮ್ಯರ ಮೂರನೆಯ ಶಿಷ್ಯನ ಹೆಸರು ವೇದ. ಒಮ್ಮೆ ವೇದನಿಗೆ ಉಪಾಧ್ಯಾಯರು ಹೇಳಿದರು :

"ವೇದ! ನೀನು ಸ್ವಲ್ಪಕಾಲ ನನ್ನ ಮನೆಯಲ್ಲಿಯೇ ಇರು. ಸರ್ವಕಾಲ ದಲ್ಲಿಯೂ ನನ್ನ ಶುಶ್ರೂಷೆಮಾಡುತ್ತಿರುವುದೇ ನಿನ್ನ ಅಭ್ಯುದಯಕ್ಕೆ ಕಾರಣ ವಾಗುತ್ತದೆ."

ವೇದನು ಹಾಗೆಯೇ ಆಗಲೆಂದು ಹೇಳಿ ಯಾವಾಗಲೂ ಗುರು ಶುಶ್ರೂಷೆಯಲ್ಲಿಯೇ ನಿರತನಾಗಿರುತ್ತಿದ್ದನು. ಗುರುಬಂಧುಗಳು ಎತ್ತುಗಳಿಗೆ ಬದಲಾಗಿ ಅವನನ್ನೇ ನೇಗಿಲಿಗೆ ಹೂಡಿ ಉಳುತ್ತಿದ್ದರು. ಚಳಿ, ಗಾಳಿ, ಬಿಸಿಲು, ಹಸಿವು, ಬಾಯಾರಿಕೆ ಮುಂತಾದ ಅನೇಕ ದುಃಖಗಳನ್ನು ಸಹಿಸಿಕೊಂಡು ವೇದನು ಗುರುಗಳಿಗೆ ಸರ್ವಕಾಲದಲ್ಲಿಯೂ ಅನುಕೂಲನಾಗಿಯೇ ಇದ್ದನು. ತನ್ನ ಶಾರೀರಕವೇದನೆಯನ್ನವನು ಒಮ್ಮೆಯಾದರೂ ಲಕ್ಷಿಸುತ್ತಿರಲಿಲ್ಲ. ಗುರುಶುಶ್ರೂಷೆಯೆಂಬುದೇ ಅವನಿಗೆ ಏಕೈಕಧ್ಯೇಯವಾಗಿತ್ತು. ಹೀಗೆಯೇ ಬಹುಕಾಲದವರೆಗೆ ವೇದನು ಆಯೋದಧೌಮ್ಯರ ಶುಶ್ರೂಷೆಮಾಡಿದನಂತರ ಗುರುಗಳು ಸುಪ್ರೀತರಾದರು. ಅವರ ಅನುಗ್ರಹಕ್ಕೆ ಪಾತ್ರನಾದ ವೇದನು ಸರ್ವಜ್ಞತ್ವವನ್ನು ಪಡೆದನು. ವೇದನಿಗೆ ಈ ವಿಧವಾದ ಪರೀಕ್ಷೆಯು ನಡೆಯಿತು.

ಮುಂದೆ ವೇದನು ಉಪಾಧ್ಯಾಯರ ಅನುಮತಿಯನ್ನು ಪಡೆದು ಸಮಾವರ್ತನವನ್ನು ಮುಗಿಸಿ ಗುರುಕುಲವಾಸದಿಂದ ( ಬ್ರಹ್ಮಚರ್ಯಾಶ್ರಮ ದಿಂದ ) ಗೃಹಸ್ಥಾಶ್ರಮಕ್ಕೆ ಪ್ರವೇಶಿಸಿದನು. ವೇದನಿಗೂ ಮೂವರು ಶಿಷ್ಯರು ಲಭಿಸಿದರು. ಆದರೆ ವೇದನು ತನ್ನ ಶಿಷ್ಯರಿಗೆ ಯಾವುದೊಂದು ಕಾರ್ಯವನ್ನೂ ಹೇಳುತ್ತಿರಲಿಲ್ಲ. ಗುರುಶುಶ್ರೂಷೆಯನ್ನು ಮಾಡಬೇಕೆಂದೂ ಹೇಳುತ್ತಿರಲಿಲ್ಲ. ತಾನು ಗುರುಗಳ ಮನೆಯಲ್ಲಿದ್ದಾಗ ಅನೇಕವಿಧವಾದ ಕಷ್ಟಗಳನ್ನನುಭವಿಸಿದ ನೆನಪುಗಳು ಅವನಿಗಿದ್ದುದರಿಂದ ತನ್ನ ಶಿಷ್ಯರಿಗೂ ಅದೇ ವಿಧವಾದ ಕಷ್ಟಗಳನ್ನು ಕೊಡುವುದು ವೇದನಿಗೆ ಸಹ್ಯವಾಗಲಿಲ್ಲ. ಆದುದರಿಂದ ವೇದನು ಶಿಷ್ಯರಿಗೆ ಯಾವುದೊಂದು ಕಾರ್ಯವನ್ನೂ ಹೇಳದೇ ಅವರಿಗೆ ಪಾಠವನ್ನು ಹೇಳಿಕೊಡುತ್ತಿದ್ದನು.

ಹೀಗೆಯೇ ಇರುತ್ತಿರಲಾಗಿ ಒಮ್ಮೆ ಜನಮೇಜಯನೂ ಮತ್ತು

ಪೌಷ್ಯರೂ ವೇದನ ಆಶ್ರಮಕ್ಕೆ ಬಂದು ಅವನನ್ನು ಪೌರೋಹಿತ್ಯಕ್ಕಾಗಿ ವರಣ ಮಾಡಿದರು. ವೇದನು ಜನಮೇಜಯನಿಗೆ ಪುರೋಹಿತನಾಗಿರಲು ಒಪ್ಪಿ ಕೊಂಡನು.

ಒಮ್ಮೆ ವೇದನು ಜನಮೇಜಯನು ಮಾಡಬೇಕಾಗಿದ್ದ ಯಜ್ಞನಿರ್ವ ಹಣೆಗಾಗಿ ಸ್ವಲ್ಪಕಾಲ ಆಶ್ರಮವನ್ನು ಬಿಟ್ಟು ಹೋಗಬೇಕಾಯಿತು. ಶಿಷ್ಯರಿಗೆ ಯಾವ ಕೆಲಸವನ್ನೂ ಹೇಳಲು ಇಚ್ಛೆಯಿರದಿದ್ದರೂ ಬೇರೆ ಮಾರ್ಗವಿಲ್ಲದೇ ಗೃಹಕೃತ್ಯದ ಸಕಲಕಾರ್ಯಗಳನ್ನೂ ತನ್ನ ಶಿಷ್ಯರಲ್ಲೊಬ್ಬನಾದ ಉತ್ತಂಕನಿಗೆ ವಹಿಸಿ–"ಮನೆಯಲ್ಲಿ ಯಾವ ಕೆಲಸವನ್ನು ಮಾಡಬೇಕಾಗಿದ್ದರೂ ಉದಾ ಸೀನವಿಲ್ಲದೇ ಮಾಡು"–ಎಂದು ಹೇಳಿ ಹೊರಟುಹೋದನು.

ಉತ್ತಂಕನು ಗುರುಗಳ ಮನೆಯ ಕೆಲಸವನ್ನು ಬಹಳ ವಿಚಕ್ಷಣೆಯಿಂದ ಮಾಡುತ್ತಿದ್ದನು. ಅದರಿಂದ ಉತ್ತಂಕನಿಗೆ ಬಹಳ ಆನಂದವೆನಿಸುತ್ತಿತ್ತು.*

ಕೆಲವು ದಿನಗಳು ಕಳೆದುವು. ಒಂದು ದಿನ ಗುರುಗಳ ಆಶ್ರಮದಲ್ಲಿದ್ದ ಸ್ತ್ರೀಯರು ಉತ್ತಂಕನನ್ನು ಕೂಗಿ ಹೇಳಿದರು :

"ಬಹಿಷ್ಠೆಯಾಗಿದ್ದ ನಿನ್ನ ಗುರುಪತ್ನಿಯು ಇಂದು ಋತುಸ್ನಾನಮಾಡಿ ರುವಳು. ನಿನ್ನ ಗುರುಗಳಾದರೋ ಪರಸ್ಥಳಕ್ಕೆ ಹೊರಟುಹೋಗಿದ್ದಾರೆ. ತನ್ನ ಋತುಕಾಲವು ನಿಷ್ಫಲವಾಗಿ ಹೋಗಿಬಿಡುವುದೆಂದು ಗುರುಗಳ ಪತ್ನಿಯು ರೋದನಮಾಡುತ್ತಿರುವರು. ಈ ಸಮಯದಲ್ಲಿ ಮನೆಯಲ್ಲಿ ನಡೆಯಬೇಕಾದ ಸರ್ವಕಾರ್ಯಗಳನ್ನೂ ಮಾಡಲು ಗುರುಗಳ ಆಜ್ಞೆಯನ್ನು ಪಡೆದಿರುವ ನೀನು ಗುರುಪತ್ನಿಯ ಋತುಕಾಲವು ವ್ಯರ್ಥವಾಗದ ರೀತಿಯಲ್ಲಿ ವರ್ತಿಸುವುದು ಸಾಧುವಾಗಿದೆ."

ಅದಕ್ಕುತ್ತರವಾಗಿ ಉತ್ತಂಕನು ಹೇಳಿದನು :

"ಮಾತೆಯರೇ! ಸ್ತ್ರೀಯರ ಮಾತಿನಂತೆ ಈ ಅಕಾರ್ಯವನ್ನೆಂದಿಗೂ

---

* ತಾನು ಆಶ್ರಮಕ್ಕೆ ವಿದ್ಯಾಭ್ಯಾಸಕ್ಕೆಂದು ಬಂದಾಗಿನಿಂದ ಒಂದು ಕೆಲಸವನ್ನೂ ಯಾವ ಶಿಷ್ಯರಿಂದಲೂ ಗುರುಗಳು ಮಾಡಿಸಿರಲಿಲ್ಲ. ಇಂದು ಆಕಸ್ಮಿಕವಾಗಿ ಉಂಟಾದ ಪರಿಸ್ಥಿತಿಯಿಂದ ಮನೆಯ ಕೆಲಸಮಾಡಲು ಗುರುಗಳು ತನ್ನನ್ನೇ ಆರಿಸಿಕೊಂಡಿದ್ದಕ್ಕಾಗಿ ತಾನು ಧನ್ಯನಾದೆನೆಂದು ಉತ್ತಂಕನು ಭಾವಿಸಿದನು. ಮನೆಯ ಕೆಲಸಗಳ ಜೊತೆಯಲ್ಲಿಯೇ ತನ್ನ ಮನೋನಿಗ್ರಹದ ಪರೀಕ್ಷೆಯೂ ನಡೆಯುವುದೆಂಬ ಅರಿವು ಉತ್ತಂಕನಿಗಿರಲಿಲ್ಲ.

ನಾನು ಮಾಡುವುದಿಲ್ಲ. ನಿಮ್ಮ ಯುಕ್ತಿಯುಕ್ತವಾದ ಮಾತಿಗೆ ಮರುಳಾಗಿ ಅಂತಹ ಹೇಯಕಾರ್ಯವನ್ನೆಂದಿಗೂ ನಾನು ಮಾಡಲಾರೆನು. ಗುರುಗಳಿಂದ ನಾನು ಅಧರ್ಮಕಾರ್ಯವನ್ನೆಸಗಲು ಆಜ್ಞಪ್ತನಾಗಿಲ್ಲ."

ಹೀಗೆ ಹೇಳಿದ ಉತ್ತಂಕನು ತನ್ನ ಅನುದಿನದ ಕಾರ್ಯಗಳಲ್ಲಿ ತೊಡಗಿದನು.

ವೇದನು ಕೆಲವು ದಿನಗಳು ಕಳೆದು ಆಶ್ರಮಕ್ಕೆ ಹಿಂದಿರುಗಿದನು. ಅವನು ಆಶ್ರಮಕ್ಕೆ ಬಂದನಂತರ ಉತ್ತಂಕನ ವ್ಯವಹಾರವೆಲ್ಲವೂ ಸುವಿದಿತವಾಯಿತು. ಶಿಷ್ಯನ ಜಿತೇಂದ್ರಿಯತೆ ಮತ್ತು ಧರ್ಮಾಧರ್ಮವಿವೇಚನೆಗಳಿಗೆ ಗುರುಗಳು ಸುಪ್ರೀತರಾದರು.

ಪರಮಪ್ರೀತನಾದ ವೇದನು ಉತ್ತಂಕನಿಗೆ ಹೇಳಿದನು :

"ವತ್ಸ, ಉತ್ತಂಕ! ನಿನಗೆ ಪ್ರಿಯವಾದ ಯಾವ ಕಾರ್ಯವನ್ನು ಮಾಡಿಕೊಡಲಿ? ನಿನ್ನ ಆಶ್ರಮಧರ್ಮಾನುಸಾರವಾಗಿ ನೀನು ನನ್ನ ಮನ ಮೆಚ್ಚುವಂತೆ ಶುಶ್ರೂಷೆಮಾಡಿರುವೆ. ಇದರಿಂದಾಗಿ ನಮ್ಮಿಬ್ಬರಲ್ಲಿ ಪರಸ್ಪರ ಪ್ರೀತಿಯು ಆವಿರ್ಭವಿಸಿದೆ. ನೀನು ನನ್ನ ಅನುಗ್ರಹದಿಂದಾಗಿ ಸಕಲಾಭೀಷ್ಟಗಳನ್ನೂ ಪಡೆದುಕೊಳ್ಳುವೆ. ನಿನಗೆ ಅನುಮತಿಯನ್ನಿತ್ತಿದ್ದೇನೆ. ನೀನಿನ್ನು ನಿನ್ನ ಇಚ್ಛೆಯಿದ್ದೆಡೆಗೆ ಹೋಗಬಹುದು."

ಹೀಗೆ ಹೇಳಿದ ವೇದನಿಗೆ ಉತ್ತಂಕನು ವಿನೀತನಾಗಿ ಹೇಳಿದನು :

"ಆಚಾರ್ಯರಿಗೆ ಪ್ರಿಯಧನವು ಯಾವುದೆಂಬುದನ್ನು ದಯೆಯಿಟ್ಟು ತಿಳಿಸೋಣವಾಗಲಿ. ವಿದ್ಯಾಭ್ಯಾಸವು ಮುಗಿದನಂತರ ಗುರುದಕ್ಷಿಣೆ ಯನ್ನು ಕೊಡುವುದು ಪರಂಪರೆಯಿಂದ ಬಂದಿರುವ ಸಂಪ್ರದಾಯವೂ ಆಗಿದೆ.

**ಯಶ್ಚಾಧರ್ಮೇಣ ವೈ ಬ್ರೂಯಾದ್ಯಶ್ಚಾಧರ್ಮೇಣ ಪೃಚ್ಛತಿ ।**
**ತಯೋರನ್ಯತರಃ ಪ್ರೈತಿ ವಿದ್ವೇಷಂ ಚಾಧಿಗಚ್ಛತಿ ॥೯೧॥**

ಯಾರು ಸಂಪ್ರದಾಯಕ್ಕೆ ವಿರುದ್ಧವಾಗಿ ವಿದ್ಯೆಯನ್ನು ಕಲಿಸುವರೋ, ಯಾರು ಸಂಪ್ರದಾಯಕ್ಕೆ ವಿರುದ್ಧವಾಗಿ ವಿದ್ಯೆಯನ್ನು ಕಲಿಯುವರೋ–ಆ

ಗುರು-ಶಿಷ್ಯರಲ್ಲಿ ಯಾರಾದರೊಬ್ಬರು ಸಾಯುವರು ಅಥವಾ ಅವರಿಬ್ಬರಲ್ಲಿ ಪರಸ್ಪರದ್ವೇಷವಾದರೂ ಬೆಳೆಯುತ್ತದೆ.

ಈ ಕಾರಣದಿಂದಾಗಿ ಇಲ್ಲಿಂದ ಹೊರಡಲು ತಮ್ಮಿಂದ ಅನುಜ್ಞಾತನಾದ ನಾನು-ಗುರುಗಳಿಗೆ ಇಷ್ಟವಾದ ಪದಾರ್ಥವನ್ನು ಗುರುದಕ್ಷಿಣಾರೂಪವಾಗಿ ತಂದುಕೊಡಲಿಚ್ಛಿಸಿದ್ದೇನೆ. ದಯಮಾಡಿ ತಮಗಿಷ್ಟವಾದ ವಸ್ತುವು ಯಾವುದೆಂಬುದನ್ನು ಹೇಳಿರಿ."

ವೇದನು ಉತ್ತಂಕನನ್ನು ನೋಡಿ ಒಮ್ಮೆ ಮುಗುಳ್ನಗೆಯನ್ನು ಬೀರಿ "ಇನ್ನೂ ಕೆಲವು ಕಾಲ ಇಲ್ಲಿಯೇ ಇರಪ್ಪಾ"–ಎಂದು ಹೇಳಿ ಹೊರಟು ಹೋದನು.

ಕೆಲವು ದಿನಗಳು ಕಳೆದನಂತರ ಪುನಃ ಉತ್ತಂಕನು ಗುರುಗಳನ್ನು ಪ್ರಾರ್ಥಿಸಿದನು :

"ಪೂಜ್ಯರೇ! ಆಜ್ಞಾಪಿಸಿರಿ. ನಿಮಗೆ ಪ್ರಿಯವಾದ ಯಾವ ವಸ್ತುವನ್ನು ಗುರುದಕ್ಷಿಣಾರೂಪವಾಗಿ ತಂದುಕೊಡಲಿ?"

ಶಿಷ್ಯನ ಮನಸ್ಸನ್ನು ಬದಲಾಯಿಸಲು ಸಾಧ್ಯವಿಲ್ಲವೆಂಬುದು ವೇದ ನಿಗೂ ನಿಶ್ಚಯವಾಯಿತು. ಕಟ್ಟಕಡೆಗೆ ಉತ್ತಂಕನನ್ನು ಕುರಿತು–"ಮಗು! ಆಚಾರ್ಯರ ಗುರುದಕ್ಷಿಣೆಯು ಯಾವ ರೂಪದಲ್ಲಿರಬೇಕೆಂಬುದನ್ನು ನಿನ್ನ ಮಾತೆಯನ್ನೇ ( ಗುರುಪತ್ನಿಯನ್ನೇ ) ಕೇಳು"–ಎಂದು ಹೇಳಿಕಳುಹಿಸಿದನು.

ಉತ್ತಂಕನು ಸಂತೋಷದಿಂದ ಮಾತೆಯ ಬಳಿಗೆ ಹೋಗಿ ಅಭಿವಾದನ ಮಾಡಿ–"ಮಾತೆಯೇ! ಗುರುಗಳ ಪರಮಾನುಗ್ರಹದಿಂದ ನನ್ನ ವಿದ್ಯಾ ಭ್ಯಾಸವು ಪೂರೈಸಿತು. ಸಂಪ್ರದಾಯದಂತೆ ಗುರುದಕ್ಷಿಣೆಯನ್ನು ಕೊಡಬೇಕಾದ ಕರ್ತವ್ಯವೊಂದುಳಿದಿದೆ. ಗುರುದಕ್ಷಿಣೆಯು ಯಾವ ರೂಪದಲ್ಲಿರ ಬೇಕೆಂಬುದನ್ನು ದಯೆಯಿಟ್ಟು ತಿಳಿಸಮ್ಮಾ!"–ಎಂದು ಹೇಳಿ ಗುರುಪತ್ನಿಯ ಅನುಜ್ಞೆಯನ್ನು ನಿರೀಕ್ಷಿಸುತ್ತಾ ನಿಂತುಕೊಂಡನು.

ಅವಳು ಉತ್ತಂಕನಿಗೆ–"ಮಗು! ಪೌಷ್ಯರಾಜನಲ್ಲಿಗೆ ಹೋಗಿ ಆತನ ಹೆಂಡತಿಯ ಕರ್ಣಾಭರಣಗಳನ್ನು ಯಾಚಿಸಿ ತರಬೇಕು. ಇಂದಿಗೆ ನಾಲ್ಕು

ದಿನಗಳಿಗೆ ಸರಿಯಾಗಿ ಮಂಗಳದಿನವೊಂದಿರುವುದು. ಅಂದು ನಾನು ಆ ಕರ್ಣಾಭರಣಗಳನ್ನು ಧರಿಸಿ ಬ್ರಾಹ್ಮಣರನ್ನು ಸತ್ಕರಿಸಲು ಇಚ್ಛೆಸಿರುವೆನು. ನನ್ನ ಇಚ್ಛೆಯನ್ನು ನೀನು ಪೂರೈಸಿದರೆ ನಿನಗೆ ಸನ್ಮಂಗಳವುಂಟಾಗುವುದು"– ಎಂದಳು.

ಹಾಗೆಯೇ ಆಗಲೆಂದು ಹೇಳಿ ಉತ್ತಂಕನು ಪೌಷ್ಯನ ಪಟ್ಟಣಕ್ಕೆ ಪ್ರಯಾಣಮಾಡಿದನು.

ಹೋಗುವ ಹಾದಿಯಲ್ಲಿ ಉತ್ತಂಕನಿಗೆ ಎತ್ತರವಾದ ಎತ್ತಿನ ಮೇಲೆ ಕುಳಿತಿದ್ದ ಬೃಹದಾಕಾರದ ಪುರುಷನೊಬ್ಬನು ಸಿಕ್ಕಿದನು.

"ನಿನ್ನ ಕಾರ್ಯಸಿದ್ಧಿಯಾಗಬೇಕಾಗಿದ್ದರೆ ಈ ಎತ್ತಿನ ಸಗಣಿ-ಗಂಜಲ ಗಳನ್ನು ಭಕ್ಷಣಮಾಡಿ ಮುಂದೆ ಹೋಗು"–ಎಂದು ವೃಷಭಾರೋಹಿಯು ಹೇಳಿದನು. ಆದರೆ ಸಗಣಿಯನ್ನು ತಿನ್ನಲು ಉತ್ತಂಕನು ಇಚ್ಛೆಸಲಿಲ್ಲ. ಅವನು ಅನಿಚ್ಛೆಯನ್ನು ವ್ಯಕ್ತಪಡಿಸಿದರೂ ವೃಷಭಾರೋಹಿಯು ಸುಮ್ಮನಾಗಲಿಲ್ಲ. ಪುನಃ ಹೇಳಿದನು : "ಹಿಂದೆ ನಿನ್ನ ಗುರುಗಳೂ ನನ್ನ ಮಾತಿಗೆ ಮನ್ನಣೆಯನ್ನಿತ್ತು ಇದೇ ಎತ್ತಿನ ಸಗಣಿ-ಗಂಜಲಗಳನ್ನು ಪ್ರಾಶನಮಾಡಿದ್ದರು. ನೀನೂ ಕೂಡ ಅದರಂತೆಯೇ ಮಾಡು. ನಿನಗೆ ಮಂಗಳವುಂಟಾಗುವುದು."

ಗುರುಗಳ ಆಚರಣೆಯನ್ನು ವೃಷಭಾರೋಹಿಯು ತಿಳಿಸಿದೊಡನೆಯೇ ಉತ್ತಂಕನಿಗೆ ಹೆಚ್ಚು ಚರ್ಚಿಸುವ ಇಚ್ಛೆಯುಂಟಾಗಲಿಲ್ಲ. ಅವನ ಮಾತಿನಂತೆ ಸಗಣಿ-ಗಂಜಲಗಳನ್ನು ಪ್ರಾಶನಮಾಡಿ ಅವಸರದಿಂದ ನಿಂತುಕೊಂಡೇ ಶುದ್ಧಾಚಮನಮಾಡಿ ಮುಂದೆ ಪೌಷ್ಯನ ಅರಮನೆಗೆ ಪ್ರಯಾಣಮಾಡಿದನು.

ಕ್ಷತ್ರಿಯಕುಲಾವತಂಸನಾದ ಪೌಷ್ಯರಾಜನು ಕುಳಿತಿದ್ದಲ್ಲಿಗೇ ನೇರವಾಗಿ ಉತ್ತಂಕನು ಹೋಗಿ, ಆಶೀರ್ವಾದಪೂರ್ವಕವಾಗಿ ರಾಜನನ್ನು ಅಭಿನಂದಿಸಿ ಹೇಳಿದನು :

"ಮಹಾರಾಜ! ನಾನಿಂದು ನಿನ್ನ ಬಳಿಗೆ ಯಾಚಕನಾಗಿ ಬಂದಿರು ವೆನು."

ಪೌಷ್ಯನೂ ಸಹ ಅತಿಥಿಯನ್ನು ಯಥೋಕ್ತವಾಗಿ ಸತ್ಕರಿಸಿ ಪ್ರಶ್ನಿಸಿದನು:

"ಭಗವನ್! ನಾನು ತಮ್ಮ ಸೇವಕನಾದ ಪೌಷ್ಯನಾಗಿರುತ್ತೇನೆ. ನಾನು ತಮಗಾಗಿ ಏನು ಮಾಡಲಿ? ಆಜ್ಞಾಪಿಸಿರಿ."

"ಮಹಾರಾಜ! ಗುರುದಕ್ಷಿಣಾರ್ಥವಾಗಿ ಎರಡು ಕರ್ಣಕುಂಡಲಗಳನ್ನು ಪಡೆದುಕೊಳ್ಳುವ ಸಲುವಾಗಿ ನಾನು ನಿನ್ನ ಅರಮನೆಗೆ ಬಂದಿರುತ್ತೇನೆ. ನಿನ್ನ ಪತ್ನಿಯ ಕಿವಿಗಳಲ್ಲಿರುವ ಕುಂಡಲಗಳನ್ನು ನನಗೆ ಕೊಡು."

ಉತ್ತಂಕನ ಮಾತುಗಳನ್ನು ಕೇಳಿ ರಾಜನು–"ಅಂತಃಪುರಕ್ಕೆ ಹೋಗಿ ರಾಣಿಯನ್ನು ಕೇಳಿ ಕರ್ಣಾಭರಣಗಳನ್ನು ತೆಗೆದುಕೊಳ್ಳಿರಿ"–ಎಂದು ವಿನೀತ ನಾಗಿ ಹೇಳಿದನು.

ಆದರೆ ಉತ್ತಂಕನು ಅಂತಃಪುರದಲ್ಲಿ ರಾಣಿಯನ್ನು ಕಾಣಲಿಲ್ಲ. ಒಡ ನೆಯೇ ರಾಜಾಸ್ಥಾನಕ್ಕೆ ಹಿಂದಿರುಗಿ ಪೌಷ್ಯನಿಗೆ ಹೇಳಿದನು :

"ಮಹಾರಾಜ! ನನಗೆ ಸುಳ್ಳುಹೇಳಿ ನನ್ನನ್ನು ಸಂತೋಷಗೊಳಿಸಲು ಯತ್ನಿಸುವುದು ನಿನಗೆ ಖಂಡಿತವಾಗಿಯೂ ಯೋಗ್ಯವಲ್ಲ. ಅಂತಃಪುರದಲ್ಲಿ ನಿನ್ನ ಪತ್ನಿಯನ್ನು ಕಾಣಲಿಲ್ಲ."

ಪೌಷ್ಯನು ಅವಾಕ್ಕಾದನು. ರಾಣಿಯು ಅಂತಃಪುರದಲ್ಲೇ ಇರುವಳೆಂದು ರಾಜನಿಗೆ ಚೆನ್ನಾಗಿ ತಿಳಿದಿತ್ತು. ರಾಜನು ಕ್ಷಣಕಾಲ ಯೋಚಿಸಿದನು. ರಾಣಿಯು ಉತ್ತಂಕನಿಗೆ ಕಾಣದಿರುವ ಕಾರಣವೂ ಮನಸ್ಸಿಗೆ ಹೊಳೆಯಿತು. ಒಡನೆಯೇ ಹೇಳಿದನು :

"ಋಷಿಕುಮಾರರೇ! ನನ್ನ ರಾಣಿಯು ಪತಿವ್ರತೆ. ಅಪವಿತ್ರರಿಗೆ ಅವಳ ದರ್ಶನವಾಗಲಾರದು. ನಿಮ್ಮ ಕರ್ಮಾನುಷ್ಠಾನದ ವೈಪರೀತ್ಯದಿಂದ ಅಪವಿತ್ರತೆಯು ನಿಮಗೆ ಉಂಟಾಗಿ ನೀವು ರಾಣಿಯನ್ನು ಕಾಣದಿರುವುದಕ್ಕೆ ಕಾರಣವಾಗಿರಬಹುದು."

( ಉತ್ತಂಕನು ಕ್ಷಣಕಾಲ ಯೋಚಿಸಿ ) "ನಿಜ! ನಿನ್ನೆಯ ದಿನ ಅವಸರ ದಲ್ಲಿ ನಾನು ನಿಂತುಕೊಂಡೇ ಆಚಮನಕ್ರಿಯೆಯನ್ನು ಮುಗಿಸಿಬಿಟ್ಟೆನು."

"ಇದೇ ನಿಮ್ಮ ಅಪವಿತ್ರತೆಗೆ ಕಾರಣ. ನಿಂತುಕೊಂಡು ಅಥವಾ

ಪ್ರಯಾಣಮಾಡುತ್ತಿರುವಾಗ ಮಾಡುವ ಆಚಮನವು ಕರ್ತನನ್ನು ಅಪವಿತ್ರ ಗೊಳಿಸುತ್ತದೆ.”

**ಅಥೋತ್ತಙ್ಕಸ್ತಂ ತಥೇತ್ಯುಕ್ತ್ವಾ ಪ್ರಾಙ್ಮುಖ ಉಪವಿಶ್ಯ ಸುಪ್ರಕ್ಷಾಲಿತಪಾಣಿಪಾದವದನೋ ನಿಃಶಬ್ದಾಭಿರಫೇನಾಭಿರನುಷ್ಣಾಭಿ ರ್ಹೃದ್ಗತಾಭಿರದ್ಭಿಸ್ತ್ರಿಃ ಪೀತ್ವಾ ದ್ವಿಃ ಪರಿಮೃಜ್ಯ ಖ್ವಾನ್ಯದ್ಭಿರುಪಸ್ಪೃಶ್ಯ ಚಾನ್ತಃಪುರಂ ಪ್ರವಿವೇಶ ॥೧೦೯॥**

ಉತ್ತಂಕನು–‘ನಿನ್ನ ಮಾತು ನ್ಯಾಯವಾಗಿದೆ’–ಎಂದು ಹೇಳಿ ತನ್ನ ಮುಖ-ಪಾದ-ಪಾಣಿಗಳನ್ನು ಚೆನ್ನಾಗಿ ತೊಳೆದುಕೊಂಡು, ಪೂರ್ವಾಭಿಮುಖ ವಾಗಿ ಕುಳಿತು ಶಬ್ದರಹಿತವಾಗಿ, ಗುಳ್ಳೆಗಳಿಲ್ಲದ, ತಣ್ಣಗಿರುವ ನೀರಿನಿಂದ ಹೃದಯಕ್ಕೆ ನೇರವಾಗಿ ಸೇರುವ ರೀತಿಯಲ್ಲಿ ಮೂರುಬಾರಿ ಆಚಮನಮಾಡಿ, ಎರಡುಬಾರಿ ಅಂಗುಷ್ಠದ ಮೂಲಭಾಗದಿಂದ ಮುಖ, ತುಟಿ, ಕಣ್ಣುಗಳು, ಮೂಗು–ಮೊದಲಾದ ಇಂದ್ರಿಯಗೋಳಕಗಳನ್ನು ಪರಿಮಾರ್ಜಿಸಿ (ಸ್ಪರ್ಶಿಸಿ) ಶುದ್ಧಾಚಮನವನ್ನು ಪೂರೈಸಿ ಅಂತಃಪುರವನ್ನು ಪ್ರವೇಶಿಸಿದನು.

ರಾಜನ ಮಾತು ನಿಜವಾಯಿತು. ಉತ್ತಂಕನು ಒಳಗೆ ಪ್ರವೇಶಿಸುತ್ತಲೇ ಪೌಷ್ಯಪತ್ನಿಯು ಪ್ರತ್ಯುತ್ಥಾನಮಾಡಿ ಹೇಳಿದಳು :

“ಪೂಜ್ಯರೇ! ತಮ್ಮನ್ನು ಆದರಪೂರ್ವಕವಾಗಿ ಸ್ವಾಗತಿಸುತ್ತೇನೆ. ಈ ಕಿಂಕರಿಯು ತಮಗಾಗಿ ಏನು ಮಾಡಬೇಕಾಗಿದೆಯೆಂಬುದನ್ನು ಆಜ್ಞಾಪಿಸಿರಿ.”

“ಮಹಾರಾಣಿ! ನೀನು ಧರಿಸಿರುವ ಎರಡು ಕರ್ಣಕುಂಡಲಗಳನ್ನು ಗುರುದಕ್ಷಿಣಾರೂಪವಾಗಿ ನಮ್ಮ ಗುರುಗಳಿಗರ್ಪಿಸಬೇಕಾಗಿದೆ. ಅವುಗಳನ್ನೇ ನಿನ್ನಿಂದ ಯಾಚಿಸಿ ಪಡೆಯಲು ಬಂದಿರುವೆನು. ನೀನು ಅದನ್ನು ನನಗೆ ಕೊಡುವುದೂ ಸಾಧುವಾಗಿದೆ.”

ಮಹಾರಾಣಿಯು ಉತ್ತಂಕನ ಗುರುಭಕ್ತಿಯನ್ನು ಕಂಡು ಬಹುಪ್ರೀತ ಳಾದಳು. ದಾನಕೊಡಲು ಸತ್ಪಾತ್ರನು ಸಿಕ್ಕುವುದೇ ದುರ್ಲಭವಾದುದರಿಂದ ಸತ್ಪಾತ್ರನೇ ತನ್ನಲ್ಲಿಗೆ ಬಂದಿರುವ ವೇಳೆಯಲ್ಲಿ ಈ ಸದವಕಾಶವನ್ನು ಕಳೆದು

ಕೊಳ್ಳುವುದು ಅನುಚಿತವೆಂದು ಭಾವಿಸಿದ ಸಾಧ್ವೀಮಣಿಯು ತನ್ನ ಎರಡು ಕುಂಡಲಗಳನ್ನು ಕಿವಿಗಳಿಂದ ಕಳಚಿ ಉತ್ತಂಕನಿಗೆ ಕೊಟ್ಟು ಹೇಳಿದಳು :

"ಬ್ರಾಹ್ಮಣೋತ್ತಮರೇ! ನಾಗರಾಜನಾದ ತಕ್ಷಕನು ಈ ಕರ್ಣ ಕುಂಡಲಗಳನ್ನು ಅಪಹರಿಸಲು ಸತತವಾಗಿ ಪ್ರಯತ್ನಿಸುತ್ತಿದ್ದಾನೆ. ಆದುದ ರಿಂದ ಇವುಗಳನ್ನು ನೀವು ಅಪ್ರಮತ್ತರಾಗಿ ಒಯ್ಯಬೇಕಾಗಿದೆ."

"ದೇವಿ! ನೀನೀ ವಿಷಯದಲ್ಲಿ ನಿಶ್ಚಿಂತಳಾಗಿರು. ನನ್ನನ್ನು ಭಯ ಪಡಿಸಲು ನಾಗರಾಜನು ಖಂಡಿತವಾಗಿಯೂ ಸಮರ್ಥನಲ್ಲ."

ಹೀಗೆ ಪೌಷ್ಯಪತ್ನಿಗೆ ಆಶ್ವಾಸನೆ ನೀಡಿ ಅವಳ ಅನುಮತಿಯನ್ನು ಪಡೆದು ಉತ್ತಂಕನು ಪೌಷ್ಯರಾಜನ ಬಳಿಗೆ ಹೋಗಿ ಹೇಳಿದನು : "ರಾಜನ್! ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ. ಪ್ರಯಾಣಮಾಡಲು ನಿನ್ನ ಅನುಮತಿಯನ್ನು ಪಡೆಯುವ ಸಲುವಾಗಿ ನಿನ್ನ ಬಳಿಗೆ ಬಂದಿರುವೆನು."

ಹೀಗೆ ಹೇಳಿದ ಉತ್ತಂಕನಿಗೆ ಪೌಷ್ಯನು ಹೇಳಿದನು :

"ಹತ್ತಾರು ವರ್ಷಗಳ ಅಂತರದಲ್ಲಿ ತಮ್ಮಂತಹ ಅತಿಥಿಗಳ ದರ್ಶನ ಲಾಭವು ಸಿಕ್ಕುವುದು. ಸತ್ಪಾತ್ರರು ಸಿಕ್ಕಿದಾಗಲೇ ಶ್ರಾದ್ಧಾದಿಕ್ರಿಯೆಗಳನ್ನು ಮಾಡಬೇಕೆಂದು ಧರ್ಮಶಾಸ್ತ್ರಗಳು ಸಾರುತ್ತವೆ. ಆದುದರಿಂದ ನಾನಿಂದು ಮಾಡುವ ಶ್ರಾದ್ಧಕ್ಕಾಗಿ ತಾವು ಸ್ವಲ್ಪ ಅವಕಾಶವನ್ನು ಕಲ್ಪಿಸಿಕೊಂಡು ನನ್ನ ಸತ್ಕಾರವನ್ನು ಸ್ವೀಕರಿಸಿ ಪ್ರಯಾಣಮಾಡಿರಿ."

"ಹಾಗೆಯೇ ಆಗಲಿ. ಸ್ವಲ್ಪಕಾಲ ಮಾತ್ರವಿರುತ್ತೇನೆ. ಈಗ ಸಿದ್ಧ ವಾಗಿರುವ ಸುಸಂಸ್ಕೃತವಾದ ಅನ್ನವನ್ನು ಈ ಕೂಡಲೇ ಅಪೇಕ್ಷಿಸುತ್ತೇನೆ."

ರಾಜನು ಹಾಗೆಯೇ ಆಗಲೆಂದು ಹೇಳಿ ಆ ವೇಳೆಗೆ ಪಾಕಶಾಲೆಯಲ್ಲಿ ಸಿದ್ಧವಾಗಿದ್ದ ಅನ್ನದಿಂದಲೇ ಉತ್ತಂಕನಿಗೆ ಭೋಜನಮಾಡಿಸಿದನು. (ಊಟಕ್ಕೆ ಬಡಿಸಿದನು.)

ಉತ್ತಂಕನು ಭೋಜನಕ್ಕೆಂದು ಕುಳಿತನು. ಆರಿ ತಣ್ಣಗಾದ ಅನ್ನದಲ್ಲಿ

ಕೂದಲಿದ್ದುದನ್ನು ಕಂಡೊಡನೆಯೇ ಕೋಪಗೊಂಡವನಾಗಿ–"ಪರಿಶುದ್ಧ ವಾದ ಅನ್ನವನ್ನು ನಾನಾಗಿಯೇ ಯಾಚಿಸಿದ್ದರೂ ಅಪರಿಶುದ್ಧವಾದ ಅನ್ನವು ಬಡಿಸಲ್ಪಟ್ಟಿದೆ. ಇದಕ್ಕೆ ನಿನ್ನ ಔದಾಸೀನ್ಯವೇ ಕಾರಣ. ಇದಕ್ಕೆ ತಕ್ಕ ಶಿಕ್ಷೆಯನ್ನು ನೀನು ಅನುಭವಿಸಲೇಬೇಕು. ನಿನ್ನ ಕಣ್ಣುಗಳು ಇಂಗಿಹೋಗಲಿ." ಎಂದು ಶಪಿಸಿದನು.

ರಾಜನಿಗದು ಸಹಿಸದಾಯಿತು. ತನ್ನ ಅರಮನೆಯಲ್ಲಿ ಇಂತಹ ಪ್ರಮಾದವು ನಡೆದಿದೆಯೆಂಬುದನ್ನು ರಾಜನು ನಂಬಲೇ ಇಲ್ಲ. "ಪರಿಶುದ್ಧ ವಾದ ಆಹಾರವನ್ನು ಅಪರಿಶುದ್ಧವಾಗಿದೆಯೆಂದು ಹೇಳುವೆಯಾದ್ದರಿಂದ ನಿನಗೆ ಮುಂದೆ ಮಕ್ಕಳಾಗದಿರಲಿ"–ಎಂದು ರಾಜನೂ ಉತ್ತಂಕನನ್ನು ಶಪಿಸಿಬಿಟ್ಟನು.

ಪರಸ್ಪರ ಶಾಪಪ್ರದಾನಗಳಿಂದ ಪೌಷ್ಯ-ಉತ್ತಂಕರಿಬ್ಬರ ಹೃದಯಗಳಲ್ಲಿ ಕಂಪನವಾಯಿತು. ಕ್ಷಣಕೋಪಿಯಾದ ಉತ್ತಂಕನು ರಾಜನಿಗೆ ಹೇಳಿದನು : "ಅಪರಿಶುದ್ಧವಾದ ಆಹಾರವೆಂಬುದು ಪ್ರತ್ಯಕ್ಷಪ್ರಮಾಣದಲ್ಲಿದ್ದರೂ ಅದನ್ನು ಪರಿಶೀಲಿಸದೇ ನನ್ನನ್ನು ಶಪಿಸಿದುದು ಸರ್ವಥಾ ನ್ಯಾಯವಲ್ಲ. ಈಗಲಾದರೂ ನನ್ನ ಮುಂದಿರುವ ಅನ್ನವನ್ನು ಪರೀಕ್ಷಿಸಿ ನೋಡು."

ರಾಜನು ಉತ್ತಂಕನ ಮಾತಿನಂತೆ ಅನ್ನವನ್ನು ಪರೀಕ್ಷಿಸಿದನು. ಅನ್ನದಲ್ಲಿ ಕೂದಲಿದ್ದುದು ನಿಜವಾಯಿತು. ಅದರಿಂದ ರಾಜನಿಗೆ ಪಶ್ಚಾತ್ತಾಪ ವುಂಟಾಯಿತು. ಅಡಿಗೆಮಾಡಿದ ಹೆಂಗಸು ಮುಡಿಯನ್ನು ಬಿಗಿದುಕೊಳ್ಳದೇ ಆಹಾರವನ್ನು ಸಿದ್ಧಮಾಡಿದ ಪರಿಣಾಮವಾಗಿ ಆ ಅಕಾರ್ಯವು ನಡೆಯಿ ತೆಂದು ವಿಚಾರಣೆಯಾದನಂತರ ರಾಜನಿಗೆ ತಿಳಿಯಿತು. ಅವನು ಋಷಿ ಕುಮಾರನನ್ನು ಅಂಗಲಾಚಿ ಬೇಡಿದನು : "ಭಗವನ್! ಕೇವಲ ಅಜ್ಞಾನದ ಕಾರಣದಿಂದ ಕೂದಲಿನಿಂದ ಕೂಡಿದ ಮತ್ತು ತಣ್ಣಗಾಗಿದ್ದ ಅನ್ನವು ನಿನ್ನ ಭೋಜನಕ್ಕಾಗಿ ತರಲ್ಪಟ್ಟಿತು. ನಾನು ಪರಿಶೀಲಿಸದೇ ಹೀಗೆ ಮಾಡಿದ್ದು ಮಹಾಪರಾಧವಾಯಿತು. ನನ್ನನ್ನು ದಯೆಯಿಟ್ಟು ಕ್ಷಮಿಸಿರಿ. ಕುರುಡನಾಗ ದಂತೆ ಮಾಡಿರಿ."

ಉತ್ತಂಕನ ಮನಸ್ಸು ಕೂಡಲೇ ಕರಗಿತು. "ಮಹಾರಾಜ! ನನ್ನ

ಮಾತೆಂದಿಗೂ ಸುಳ್ಳಾಗಲಾರದು. ಆದರೆ ನಿನ್ನ ಅಂಧತ್ವವು ಚಿರಕಾಲ ಇರುವುದಿಲ್ಲ. ನೀನು ನಿಷ್ಕಾರಣವಾಗಿ ಕೊಟ್ಟ ಶಾಪವನ್ನು ಈಗಲಾದರೂ ಹಿಂತೆಗೆದುಕೊ."

"ಬ್ರಾಹ್ಮಣೋತ್ತಮರೇ! ನಾನು ಮಾತ್ರ ಕೊಟ್ಟ ಶಾಪವನ್ನು ಹಿಂತೆಗೆದುಕೊಳ್ಳಲು ಸಾಧ್ಯವಿಲ್ಲ. ನಾನು ಮಾಡಿದುದು ತಪ್ಪಾಗಿದ್ದರೂ ನಿಮ್ಮ ವಿಷಯದಲ್ಲಿ ನನಗುಂಟಾದ ಕೋಪದ ಉಪಶಮನವಿನ್ನೂ ಆಗಿರುವುದಿಲ್ಲ. ಇದು ನಿಮಗೆ ತಿಳಿಯದ ವಿಷಯವೇ?

**ನವನೀತಂ ಹೃದಯಂ ಬ್ರಾಹ್ಮಣಸ್ಯ**
**ವಾಚಿ ಕ್ಷುರೋ ನಿಹಿತಸ್ತೀಕ್ಷ್ಣಧಾರಃ ।**
**ತದುಭಯಮೇತದ್ವಿಪರೀತಂ ಕ್ಷತ್ರಿಯಸ್ಯ**
**ವಾಙ್ನವನೀತಂ ಹೃದಯಂ ತೀಕ್ಷ್ಣಧಾರಮ್ ॥೧೬೩॥**

ಉತ್ತಂಕರೇ! ಬ್ರಾಹ್ಮಣನ ಹೃದಯವು ಬೆಣ್ಣೆಯಂತೆ ಮೃದು. ಆದರೆ ಮಾತು ಮಾತ್ರ ಕಠಿನ. ಇದಕ್ಕೆ ವಿರುದ್ಧವಾಗಿ ಕ್ಷತ್ರಿಯನ ಮಾತುಗಳು ಬೆಣ್ಣೆ ಯಂತೆ ; ಹೃದಯವು ಮಾತ್ರ ಹರಿತವಾದ ಆಯುಧಕ್ಕೆ ಸಮಾನವೆಂಬುದು ನಿಮಗೆ ತಿಳಿಯದೇ? ನನ್ನದೇ ತಪ್ಪಾಗಿ ನಿಮ್ಮನ್ನು ನಿಷ್ಕಾರಣವಾಗಿ ಶಪಿಸಿರುವೆನೆಂದು ತಿಳಿದಿರುವೆನಾದರೂ ನಿಮ್ಮ ಮೇಲೆ ನನಗುಂಟಾಗಿರುವ ಕೋಪದ ಶಾಂತಿಯಿನ್ನೂ ಆಗಿಲ್ಲ. ಆದುದರಿಂದ ಶಾಪವನ್ನು ಹಿಂತೆಗೆದು ಕೊಳ್ಳಲಾರೆನು."

ಉತ್ತಂಕನು ಹೇಳಿದನು :

"ಮಹಾರಾಜ! ನೀನು ಶಾಪವನ್ನು ಹಿಂತೆಗೆದುಕೊಳ್ಳದಿದ್ದರೂ ಶಾಪದ ಪರಿಣಾಮವು ನನ್ನ ಮೇಲೆ ಉಂಟಾಗುವುದಿಲ್ಲ. ಏಕೆಂದರೆ : ಪರಿಶುದ್ಧವಾದ ಅನ್ನವನ್ನು ಅಪರಿಶುದ್ಧವೆಂದು ಹೇಳಿದ್ದರೆ ಮಾತ್ರ ನಿನ್ನ ಶಾಪವು ಪರಿಣಾಮಕಾರಿಯಾಗುತ್ತಿತ್ತು. ಅನ್ನವು ಅಪರಿಶುದ್ಧವಾಗಿದೆಯೆಂದು ನೀನೇ ಒಪ್ಪಿರುವೆ. ಆದುದರಿಂದ ಶಾಪದ ಭೀತಿಯು ನನಗೆ ಲೇಶಮಾತ್ರವೂ ಇಲ್ಲ. ನಾನಿನ್ನು ಹೋಗಿಬರುವೆನು"–ಎಂದು ಹೇಳಿ ಓಲೆಗಳೊಡನೆ ಗುರುಗಳ ಆಶ್ರಮಕ್ಕೆ ಹೊರಟನು.

'ನಾವು ನಮ್ಮ ಕರ್ತವ್ಯಗಳನ್ನು ಮಾಡುತ್ತಿರೋಣ' '**ಸಾಧಯಾಮಸ್ತಾವತ್**'–ಎಂಬುದಾಗಿ ರಾಜನೊಡನೆ ಹೇಳಿ ಕುಂಡಲಗಳನ್ನು ತೆಗೆದುಕೊಂಡು ಉತ್ತಂಕನು ಅಲ್ಲಿಂದ ಪ್ರಯಾಣಮಾಡಿದನು. ಹೋಗುತ್ತಿದ್ದ ದಾರಿಯಲ್ಲಿ ನಗ್ನನಾಗಿದ್ದ ಕ್ಷಪಣಕನೊಬ್ಬನನ್ನು ಉತ್ತಂಕನು ನೋಡಿದನು. ಅವನು ಉತ್ತಂಕನ ಹಿಂದೆಯೇ ನಡೆದುಬರುತ್ತಿದ್ದನು. ಉತ್ತಂಕನು ಕ್ಷಣ-ಕ್ಷಣಕ್ಕೂ ಅವನನ್ನು ಹಿಂದಿರುಗಿ ನೋಡುತ್ತಿದ್ದನು. ಕೆಲವು ಬಾರಿ ಅವನು ಅದೃಶ್ಯನಾಗುತ್ತಿದ್ದನು. ಕರ್ಣಾಭರಣಗಳನ್ನು ನೆಲದ ಮೇಲಿಟ್ಟು ಉತ್ತಂಕನು ಕರ್ಮಾನುಷ್ಠಾನಕ್ಕೆಂದು ಹತ್ತಿರದಲ್ಲಿದ್ದ ನದಿಗೆ ತೆರಳಿದನು. ಆ ಸಮಯವನ್ನೇ ಸಾಧಿಸುತ್ತಿದ್ದ ಕ್ಷಪಣಕನು-ಉತ್ತಂಕನು ಮರಳಿ ಬರುವುದರೊಳಗಾಗಿ ಓಲೆಗಳನ್ನೆತ್ತಿಕೊಂಡು ಓಡಲು ಮೊದಲಿಟ್ಟನು. ಉತ್ತಂಕನು ಸ್ನಾನ-ಜಪಾದಿಗಳನ್ನು ಯಥಾವತ್ತಾಗಿ ಮುಗಿಸಿ ಪರಿಶುದ್ಧನಾಗಿ, ದೇವತೆಗಳಿಗೂ ಗುರುಗಳಿಗೂ ನಮಸ್ಕರಿಸಿದನಂತರದಲ್ಲಿ ತಾನಿಟ್ಟಿದ್ದ ಸ್ಥಳದಲ್ಲಿ ಓಲೆಗಳನ್ನು ಕಾಣದೇ, ಓಡಿಯೋಡಿ ಹೋಗುತ್ತಿದ್ದ ಕ್ಷಪಣಕನ ಬೆನ್ನಟ್ಟಿ ಕೆಲವು ನಿಮಿಷಗಳಲ್ಲಿಯೇ ಅವನನ್ನು ಹಿಡಿದು ನಿಲ್ಲಿಸಿದನು. ಒಡನೆಯೇ ಕ್ಷಪಣಕನ ರೂಪದಲ್ಲಿದ್ದ ತಕ್ಷಕನು ಹಾವಿನ ರೂಪವನ್ನು ತಾಳಿ ಹತ್ತಿರದಲ್ಲಿದ್ದ ಬಿಲದೊಳಕ್ಕೆ ನುಸುಳಿ ಹೊರಟುಹೋದನು. ಕೆಲವು ಕ್ಷಣಗಳಲ್ಲಿಯೇ ತಕ್ಷಕನು ಕುಂಡಲಗಳೊಡನೆ ನಾಗಲೋಕವನ್ನು ಪ್ರವೇಶಿಸಿ ತನ್ನ ಅರಮನೆಯೊಳಗೆ ಸೇರಿಕೊಂಡನು.

ವೇಷಧಾರಿಯು ದುಷ್ಟತಕ್ಷಕನೆಂಬುದನ್ನು ತಿಳಿಯಲು ಉತ್ತಂಕನಿಗೆ ಹೆಚ್ಚುಕಾಲ ಬೇಕಾಗಲಿಲ್ಲ. ರಾಣಿಯು ಹೇಳಿದ್ದ ಮಾತು ಸ್ಮರಣೆಗೆ ಬಂದಿತು. ಉತ್ತಂಕನು ತಕ್ಷಕನ ಬೆನ್ನಟ್ಟಿ ಹೋಗಲು ಕೈಯಲ್ಲಿದ್ದ ಪಲಾಶದಂಡದಿಂದ ತಕ್ಷಕನು ನುಸುಳಿದ ಬಿಲವನ್ನು ಅಗೆಯಲು ಮೊದಲಿಟ್ಟನು. ಆದರೆ ದುರ್ಬಲವಾದ ಪಲಾಶದಂಡದಿಂದ ಎಷ್ಟು ತಾನೇ ಅಗೆಯಲು ಸಾಧ್ಯವಾದೀತು? ಹೆಚ್ಚು ಅಗೆಯಲು ಅಸಾಧ್ಯವೆಂದು ತೋರಿದರೂ ಉತ್ತಂಕನು ತನ್ನ ಕಾರ್ಯವನ್ನು ನಿಲ್ಲಿಸುವ ಯೋಚನೆಯನ್ನೇ ಮಾಡಲಿಲ್ಲ. ತ್ರಿಲೋಕಾಧಿಪತಿಯಾದ ಇಂದ್ರನಿಗೆ ಉತ್ತಂಕನ ಸಾಹಸವನ್ನು ನೋಡಿ ಕರುಣೆಯುಂಟಾಯಿತು. ಒಡನೆಯೇ ತನ್ನ ವಜ್ರಾಯುಧಕ್ಕೆ–ದಂಡದೊಳಗೆ ಪ್ರವೇಶಿಸುವಂತೆಯೂ,

ಬ್ರಾಹ್ಮಣನಿಗೆ ಸಹಾಯಮಾಡುವಂತೆಯೂ–ನಿಯಮಿಸಿದನು. ವಜ್ರಾಯುಧವು ಪ್ರವೇಶಿಸಿದನಂತರ ದುರ್ಬಲವಾಗಿದ್ದ ಪಲಾಶದಂಡವು ಉಕ್ಕಿನ ದಂಡವಾಯಿತು. ಕೆಲವು ಕ್ಷಣಗಳಲ್ಲಿಯೇ ವಜ್ರಾಯುಧದ ಪ್ರಯೋಗದಿಂದ ದೊಡ್ಡ ಸುರಂಗವೇರ್ಪಟ್ಟಿತು. ಉತ್ತಂಕನು ಕಷ್ಟವೇ ಇಲ್ಲದೇ ಸುರಂಗವನ್ನು ಪ್ರವೇಶಿಸಿ ನಾಗಲೋಕಕ್ಕೆ ಹೋದನು.

ನಾಗಲೋಕವು ಬಹುದೂರದವರೆಗೂ ಪ್ರಸರಿಸಿದ್ದಿತು. ಅದರ ಅಂತ್ಯವೇ ಕಾಣುತ್ತಿರಲಿಲ್ಲ. ಅನೇಕವಿಧವಾದ ಪ್ರಾಸಾದಗಳಿಂದಲೂ, ಮಂದಿರಗಳಿಂದಲೂ, ಭವನಗಳಿಂದಲೂ, ಎತ್ತರವಾದ ಮಂಟಪಗಳಿಂದಲೂ, ನೂರಾರು ಮಹಾದ್ವಾರಗಳಿಂದಲೂ, ಉದ್ಯಾನವನಗಳಿಂದಲೂ, ಸಣ್ಣದಾದ ಮತ್ತು ದೊಡ್ಡದಾದ ಪರಮಾದ್ಭುತವಾದ ವಿಹಾರಕ್ಕೆ ಯೋಗ್ಯವಾದ ಬಯಲುಪ್ರದೇಶಗಳಿಂದಲೂ ಶೋಭಿಸುತ್ತಿದ್ದ ನಾಗಲೋಕವನ್ನು ಉತ್ತಂಕನು ಸಂದರ್ಶಿಸಿದನು. ಮಹಾದ್ವಾರದ ಮುಂದೆ ನಿಂತು ಸರ್ಪಗಳನ್ನು ನಾನಾಪ್ರಕಾರವಾಗಿ ಸ್ತೋತ್ರಮಾಡತೊಡಗಿದನು :

**ಯ ಐರಾವತರಾಜಾನಃ ಸರ್ಪಾಃ ಸಮಿತಿಶೋಭನಾಃ ।**
**ಕ್ಷರನ್ತ ಇವ ಜೀಮೂತಾಃ ಸವಿದ್ಯುತ್ಪವನೇರಿತಾಃ ॥೧೩೪॥**

**ಸುರೂಪಾ ಬಹುರೂಪಾಶ್ಚ ತಥಾ ಕಲ್ಮಾಷಕುಣ್ಡಲಾಃ ।**
**ಆದಿತ್ಯವನ್ನಾಕಪೃಷ್ಠೇ ರೇಜುರೈರಾವತೋದ್ಭವಾಃ ॥೧೩೫॥**

**ಬಹೂನಿ ನಾಗವೇಶ್ಮಾನಿ ಗಙ್ಗಾಯಾಸ್ತೀರ ಉತ್ತರೇ ।**
**ತತ್ರಸ್ಥಾನಪಿ ಸಂಸ್ತೌಮಿ ಮಹತಃ ಪನ್ನಗಾನಹಮ್ ॥೧೩೬॥**

“ಐರಾವತವೆಂಬ ಸರ್ಪವೇ ಸರ್ಪಗಳಿಗೆ ರಾಜನು. ಸರ್ಪಗಳಾದರೋ ಯುದ್ಧದಲ್ಲಿ ಶೌರ್ಯವುಳ್ಳವುಗಳು. ವಾಯುವಿನಿಂದ ಪ್ರೇರಿತವಾದ ಮಿಂಚಿನಿಂದ ಕೂಡಿದ ಮಳೆಸುರಿಸುವ ಮೋಡಗಳಂತೆ–ಸರ್ಪಗಳು ಯುದ್ಧದಲ್ಲಿ ಅಸ್ತ್ರ-ಶಸ್ತ್ರಗಳ ಮಳೆಗರೆಯುತ್ತಾ ಕಾದಾಡುವ ಸಾಮರ್ಥ್ಯಶಾಲಿಗಳು. ಆ ಸರ್ಪಗಳು ಬಹಳ ಸುಂದರವಾಗಿಯೂ, ಕಾಮರೂಪವುಳ್ಳವುಗಳಾಗಿಯೂ, ವಿಚಿತ್ರವೃತ್ತಾಕಾರವುಳ್ಳವುಗಳಾಗಿಯೂ ಇವೆ. ಐರಾವತವೆಂಬ ನಾಗನ ಕುಲದಲ್ಲಿ ಹುಟ್ಟಿರುವ ಅನೇಕಸರ್ಪಗಳು ಸ್ವರ್ಗಲೋಕದ ಮೇಲ್ಭಾಗದಲ್ಲಿ

ಸೂರ್ಯನಂತೆ ಶೋಭಿಸುವುವು. ಗಂಗಾನದಿಯ ಉತ್ತರತೀರದಲ್ಲಿ ಅನೇಕ ನಾಗಗಳ ಮನೆಗಳಿವೆ. ಅಲ್ಲಿರತಕ್ಕ ಮಹಿಮಾನ್ವಿತವಾದ ಸರ್ಪಗಳನ್ನೂ ಹಿಂದೆ ಹೇಳಿದ ಎಲ್ಲ ಸರ್ಪಗಳನ್ನೂ ನಾನು ಭಕ್ತಿಯಿಂದ ಸ್ತುತಿಸುತ್ತೇನೆ."

ಆದರೆ ಅವನ ಪ್ರಾರ್ಥನೆಯು ಅರಣ್ಯರೋದನವೇ ಆಯಿತು. ಆದರೂ ಋಷಿಕುಮಾರನು ಕೋಪಾವಿಷ್ಟನಾಗಲಿಲ್ಲ. ತನ್ನ ಮನಸ್ಸನ್ನು ಶಾಂತಿ ಯೆಂಬ ಕಡಿವಾಣದಿಂದ ಹಿಡಿದು ನಿಲ್ಲಿಸಿದನು. ತನಗೆ ಅಪಕಾರವನ್ನೆಸಗಿದ ತಕ್ಷಕನನ್ನೇ ಪರಿ-ಪರಿಯಾಗಿ ಸ್ತುತಿಸಲು ಪ್ರಾರಂಭಿಸಿದನು :

**ಇಚ್ಛೇತ್ಕೋऽರ್ಕಾಂಶುಸೇನಾಯಾಂ ಚರ್ತುಮೈರಾವತಂ ವಿನಾ ।**
**ಶತಾನ್ಯಶೀತಿರಷ್ಟೌ ಚ ಸಹಸ್ರಾಣಿ ಚ ವಿಂಶತಿಃ ॥೧೩೭॥**

**ಸರ್ಪಾಣಾಂ ಪ್ರಗ್ರಹಾ ಯಾನ್ತಿ ಧೃತರಾಷ್ಟ್ರೋ ಯದೈಜತಿ ।**
**ಯೇ ಚೈನಮುಪಸರ್ಪನ್ತಿ ಯೇ ಚ ದೂರಪಥಂ ಗತಾಃ ॥೧೩೮॥**

**ಅಹಮೈರಾವತಜ್ಯೇಷ್ಠಭ್ರಾತೃಭ್ಯೋऽಕರವಂ ನಮಃ ।**
**ಯಸ್ಯ ವಾಸಃ ಕುರುಕ್ಷೇತ್ರೇ ಖಾಣ್ಡವೇ ಚಾಭವತ್ಪುರಾ ॥೧೩೯॥**

**ತಂ ನಾಗರಾಜಮಸ್ತೌಷಂ ಕುಣ್ಡಲಾರ್ಥಾಯ ತಕ್ಷಕಮ್ ।**
**ತಕ್ಷಕಶ್ಚಾಶ್ವಸೇನಶ್ಚ ನಿತ್ಯಂ ಸಹಚರಾವುಭೌ ॥೧೪೦॥**

**ಕುರುಕ್ಷೇತ್ರಂ ಚ ವಸತಾಂ ನದೀಮಿಕ್ಷುಮತೀಮನು ।**
**ಜಘನ್ಯಜಸ್ತಕ್ಷಕಸ್ಯ ಶ್ರುತಸೇನೇತಿ ಯಃ ಶ್ರುತಃ ॥೧೪೧॥**

**ಅವಸದ್ಯೋ ಮಹದ್ಯುಮ್ನಿ ಪ್ರಾರ್ಥಯನ್ನಾಗಮುಖ್ಯತಾಮ್ ।**
**ಕರವಾಣಿ ಸದಾ ಚಾಹಂ ನಮಸ್ತಸ್ಮೈ ಮಹಾತ್ಮನೇ ॥೧೪೨॥**

"ಧೃತರಾಷ್ಟ್ರನೆಂಬ ನಾಗರಾಜನ ಸಹೋದರನಾದ ಐರಾವತನ ಹೊರತು ಇನ್ನು ಯಾರಿಗೆ ತಾನೇ ಸೂರ್ಯನ ಕಿರಣಗಳೆಂಬ ಸೇನೆಯಲ್ಲಿ ಸಂಚರಿಸುವ ಇಚ್ಛೆಯುಂಟಾದೀತು? ಧೃತರಾಷ್ಟ್ರನೆಂಬ ನಾಗರಾಜನು ಯಾವಾಗ ದೀಪ್ತನಾಗಿ ಮುಂದುವರಿಯುತ್ತಾನೋ ಆಗ-೮೦ ನೂರು ೮ ಸಾವಿರ ಮತ್ತು ೨೦ ಸಾವಿರ (೩೬ ಸಾವಿರ ) ಸೂರ್ಯನ ಕುದುರೆಗಳ ಹಗ್ಗ ವಾಗಿರುವ ನಾಗಗಳು ಅವನನ್ನು ಅನುಸರಿಸಿ ಹೋಗುತ್ತವೆ. ಹೀಗೆ ಸೂರ್ಯನ ತೇಜಸ್ಸೂ ಕೂಡ ಧೃತರಾಷ್ಟ್ರನೆಂಬ ಸರ್ಪರಾಜನ ತೇಜಸ್ಸಿನಿಂದ ತಡೆಯಲ್ಪಟ್ಟು

ಸರ್ಪಗಳನ್ನು ಸುಡಲು ಸಮರ್ಥವಾಗುವುದಿಲ್ಲ. ಧೃತರಾಷ್ಟ್ರನೆಂಬ ನಾಗರಾಜನನ್ನು ಸೇವಿಸುವ, ಯಾವಾಗಲೂ ಅವನ ಹತ್ತಿರದಲ್ಲಿಯೇ ಇರುವ ಅನೇಕಸರ್ಪಗಳಿವೆ. ಅನೇಕಸರ್ಪಗಳು ದೂರದೇಶಗಳಿಗೆ ಪ್ರವಾಸಕ್ಕೆ ಹೋಗಿವೆ. ನಾನು ( ಉತ್ತಂಕನು ) ಐರಾವತವೆಂಬ ಸರ್ಪವೇ ಹಿರಿಯಣ್ಣನಾಗಿರುವ ಆ ಎಲ್ಲ ಸರ್ಪಗಳಿಗೂ ನಮಸ್ಕಾರಮಾಡುತ್ತೇನೆ. ಯಾವ ತಕ್ಷಕನು ಹಿಂದೆ ಕುರುಕ್ಷೇತ್ರ ಮತ್ತು ಖಾಂಡವಪ್ರಸ್ಥಗಳಲ್ಲಿ ವಾಸಮಾಡುತ್ತಿದ್ದನೋ ಅಂತಹ ನಾಗರಾಜನಾದ ತಕ್ಷಕನನ್ನು ನಾನು ಕುಂಡಲಗಳಿಗೋಸ್ಕರ ಸ್ತೋತ್ರಮಾಡುತ್ತಿದ್ದೇನೆ. ಮಹಾತ್ಮನಾದ ಆ ತಕ್ಷಕನೂ ಮತ್ತು ಅಶ್ವಸೇನನೂ ಯಾವಾಗಲೂ ಜೊತೆಯಲ್ಲಿಯೇ ಸಂಚಾರಮಾಡುವವರಾಗಿದ್ದಾರೆ. ಅವರಿಬ್ಬರೂ ಇಕ್ಷುಮತೀನದಿಯನ್ನು ಅನುಸರಿಸಿ ಇರುವ ಕುರುಕ್ಷೇತ್ರದಲ್ಲಿ ವಾಸಮಾಡುತ್ತಿದ್ದರು. ತಕ್ಷಕನಿಗೆ ಶ್ರುತಸೇನನೆಂಬ ಒಬ್ಬ ತಮ್ಮನಿದ್ದಾನೆ. ಅವನು ನಾಗಗಳಲ್ಲಿ ತಾನು ಮುಖ್ಯನಾಗಬೇಕೆಂದು ಬಯಸಿ ಮಹದ್ಯುಮ್ನವೆಂಬ ತೀರ್ಥದಲ್ಲಿ ತಪಸ್ಸುಮಾಡುತ್ತಾ ವಾಸಮಾಡುತ್ತಿದ್ದಾನೆ. ನಾನು ಮಹಾತ್ಮನಾದ ಆ ಶ್ರುತಸೇನನನ್ನೂ ಯಾವಾಗಲೂ ನಮಸ್ಕರಿಸುತ್ತೇನೆ.''

ಈ ರೀತಿಯಾಗಿ ಉತ್ತಂಕನು ಮೇಲೆ ಹೇಳಿದ ಶ್ಲೋಕಗಳಿಂದ ನಾಗಗಳನ್ನು ಸ್ತೋತ್ರಮಾಡಿದನು. ಆದರೆ ಅವನಿಗೆ ಕುಂಡಲಗಳು ಸಿಗ ದಿದ್ದರೂ ಸರ್ಪಗಳಿಂದ ಅಪಾಯವುಂಟಾಗಲಿಲ್ಲ. ಆ ಸ್ತೋತ್ರದ ಪಠನದಿಂದ ಇಷ್ಟಪ್ರಾಪ್ತಿಯಾಗದಿದ್ದರೂ ಅನಿಷ್ಟ ( ವಿಷವ್ಯಾಪನೆಯ ) ನಿವಾರಣೆಯಾಯಿತು.

ಸರ್ಪಗಳನ್ನು ಸ್ತೋತ್ರಮಾಡಿದರೂ ಉತ್ತಂಕನಿಗೆ ಕಳೆದುಹೋದ ಕುಂಡಲಗಳು ಸಿಗಲಿಲ್ಲ. ಆಗ ಅವನು ಮುಂದೇನು ಮಾಡಬೇಕೆಂದು ಚಿಂತಾಗ್ರಸ್ತನಾಗಿ ಆಲೋಚಿಸುತ್ತಿರುವಾಗ ಹಾಸು-ಹೊಕ್ಕಾಗಿರುವ ಅನೇಕ ದಾರಗಳ ಸಮೂಹವನ್ನಿಟ್ಟುಕೊಂಡು ನೇಯ್ಗೋಲಿನಿಂದ (ವಯನದಂಡದಿಂದ) ಇಬ್ಬರು ಸ್ತ್ರೀಯರು ಬಟ್ಟೆಯನ್ನು ನೇಯುತ್ತಿರುವುದನ್ನು ನೋಡಿದನು. ಆ ದಾರಗಳು ಅರ್ಧಭಾಗ ಬಿಳುಪಾಗಿಯೂ ಉಳಿದ ಅರ್ಧಭಾಗ ಕಪ್ಪಾಗಿಯೂ ಇದ್ದುವು.

ಅಲ್ಲಿ ೬ ಮಕ್ಕಳು ೧೨ ಗೂಟಗಳುಳ್ಳ ಒಂದು ಚಕ್ರವನ್ನು ತಿರುಗಿಸುತ್ತಿದ್ದರು. ಸಮೀಪದಲ್ಲಿಯೇ ಸುಂದರವಾದ ಕುದುರೆಯನ್ನೂ, ಒಬ್ಬ ಮನುಷ್ಯನನ್ನೂ ಉತ್ತಂಕನು ನೋಡಿದನು. ತಾನು ಕಂಡ ವಸ್ತುಗಳನ್ನು ಮಂತ್ರಸ್ವರೂಪವಾದ ಈ ಕೆಳಗಿನ ಶ್ಲೋಕಗಳಿಂದ ಸ್ತುತಿಸಿದನು :

**ತ್ರೀಣ್ಯರ್ಪಿತಾನ್ಯತ್ರ ಶತಾನಿ ಮಧ್ಯೇ**
**ಷಷ್ಟಿಶ್ಚ ನಿತ್ಯಂ ಚರತಿ ಧ್ರುವೇಽಸ್ಮಿನ್ ।**
**ಚಕ್ರೇ ಚತುರ್ವಿಂಶತಿಪರ್ವಯೋಗೇ**
**ಷಡ್ವೈ ಕುಮಾರಾಃ ಪರಿವರ್ತಯನ್ತಿ ॥೧೪೬॥**

ಸಂವತ್ಸರವು ಚಕ್ರಾಕಾರವಾಗಿದೆ. ನದಿಯ ಪ್ರವಾಹದಂತೆ ಅನವರತ ವಾಗಿ ಸಾಗುತ್ತಿರುವ ಈ ಕಾಲಚಕ್ರದ ಮಧ್ಯದಲ್ಲಿ ೩೬೦ ಗೂಟಗಳಂತೆ ದಿನ ಗಳು ಸ್ಥಿರವಾದ ಚಕ್ರದ ಮಧ್ಯಭಾಗದಲ್ಲಿ ಸುತ್ತಲೂ ತಿರುಗುತ್ತಿವೆ. ಈ ಸಂವತ್ಸರವೆಂಬ ಚಕ್ರವು ಶುಕ್ಲ-ಕೃಷ್ಣಪಕ್ಷಗಳೆಂಬ ಇಪ್ಪತ್ನಾಲ್ಕು ಗಿಣ್ಣುಗಳಿಂದ ಕೂಡಿಕೊಂಡಿದೆ. ಈ ಚಕ್ರವನ್ನು ವಸಂತಾದಿ ಆರು ಋತುಗಳೆಂಬ ಆರು ಬಾಲಕರು ತಿರುಗಿಸುತ್ತಾರೆ. ಹೀಗೆ ಹುಡುಗರು ಆಟಕ್ಕೋಸ್ಕರ ತಿರುಗಿಸುವ ಚಕ್ರದಂತೆ ಸಂವತ್ಸರಚಕ್ರವಿದೆ. ಈ ಚಕ್ರದ ೩೬೦ ದಿನಗಳೆಂಬ ಗೂಟಗಳು ೧೫-೧೫ರಂತೆ ೨೪ ಪಕ್ಷಗಳೆಂಬ ಗಿಣ್ಣುಗಳಲ್ಲಿ ಸೇರಿಕೊಂಡಿವೆ. ಆರು ಋತು ಗಳು ಆರು ಮಕ್ಕಳಂತೆ ಸಂವತ್ಸರಚಕ್ರವನ್ನು ತಿರುಗಿಸುತ್ತವೆ.

**ತನ್ತ್ರಂ ಚೇದಂ ವಿಶ್ವರೂಪೇ ಯುವತ್ಯೌ**
**ವಯತಸ್ತನ್ತೂನ್ಸತತಂ ವರ್ತಯನ್ತ್ಯೌ ।**
**ಕೃಷ್ಣಾನ್ಸಿತಾಂಶ್ಚೈವ ವಿವರ್ತಯನ್ತ್ಯೌ**
**ಭೂತಾನ್ಯಜಸ್ರಂ ಭುವನಾನಿ ಚೈವ ॥೧೪೭॥**

ಬೇರೆ-ಬೇರೆಯ ಸಮಯಗಳಲ್ಲಿ ಸ್ತ್ರೀ-ಪುರುಷಾದಿ ಅನೇಕರೂಪಗಳನ್ನು ಸ್ವೀಕರಿಸುವ ಯುವತಿಯರಿಬ್ಬರೂ ಕಪ್ಪು ಮತ್ತು ಬಿಳುಪಾದ ದಾರಗಳು ಪರಸ್ಪರ ಸೇರಿಕೊಳ್ಳುವಂತೆ ಮಾಡುತ್ತಾ–ಹಾಸುಹೊಕ್ಕಾಗಿರುವ ಈ ದಾರಗಳ

ಸಮುದಾಯದಿಂದ ಪ್ರಪಂಚದಲ್ಲಿರುವ ಪ್ರಾಣಿಗಳನ್ನೂ, ಎಲ್ಲ ಲೋಕ ಗಳನ್ನೂ ಪರಿಣಾಮಗೊಳಿಸುತ್ತಾ[1] ಸಂವತ್ಸರವೆಂಬ ಬಟ್ಟೆಯನ್ನು ನೇಯು ತ್ತಾರೆ.

**ವಜ್ರಸ್ಯ ಭರ್ತಾ ಭುವನಸ್ಯ ಗೋಪ್ತಾ**
**ವೃತ್ರಸ್ಯ ಹನ್ತಾ ನಮುಚೇರ್ನಿಹನ್ತಾ ।**
**ಕೃಷ್ಣೇ ವಸಾನೋ ವಸನೇ ಮಹಾತ್ಮಾ**
**ಸತ್ಯಾನೃತೇ ಯೋ ವಿವಿನಕ್ತಿ ಲೋಕೇ ॥೧೩೮॥**

**ಯೋ ವಾಜಿನಂ ಗರ್ಭಮಪಾಂ ಪುರಾಣಂ**
**ವೈಶ್ವಾನರಂ ವಾಹನಮಭ್ಯುಪೈತಿ ।**
**ನಮೋऽಸ್ತು ತಸ್ಮೈ ಜಗದೀಶ್ವರಾಯ**
**ಲೋಕತ್ರಯೇಶಾಯ ಪುರನ್ದರಾಯ ॥೧೩೯॥**

ಸೃಷ್ಟ್ಯಾದಿಯಲ್ಲಿಯೇ ನೀರಿನಿಂದ ಹುಟ್ಟಿದ ಅಗ್ನಿಯೆಂಬ ಅಶ್ವವನ್ನು ಹಿಂದೆ ವರ್ಣಿತನಾದ ಮಹೇಂದ್ರಪರ್ಜನ್ಯನು ವಾಹನವೆಂದು ಅಂಗೀಕರಿಸಿದ್ದಾನೆ. ಮೂರು ಲೋಕಗಳಿಗೂ ಮತ್ತು ಸಮಸ್ತಪ್ರಪಂಚಕ್ಕೂ ಅಧಿಪತಿಯಾದ ಪರ್ಜನ್ಯರೂಪಿಯಾದ ಇಂದ್ರನಿಗೆ ನಮಸ್ಕಾರಗಳು. ವಜ್ರಧರನೂ, ವೃತ್ರ-ನಮುಚಿಗಳ ಸಂಹಾರಕನೂ ಆದ ಇಂದ್ರನಿಗೆ[2] ನಮಸ್ಕಾರಗಳು."

ಸಕಲರನ್ನೂ ಸ್ತುತಿಗೈದು ಬಳಲಿದ್ದ ಉತ್ತಂಕನನ್ನು ಮಹಾಪುರುಷನು

---

1 ಸಂವತ್ಸರವನ್ನು ಬಟ್ಟೆಯೆಂದು ವರ್ಣಿಸಿ ರಾತ್ರಿಗಳನ್ನು ಕಪ್ಪುದಾರಗಳೆಂದೂ, ಹಗಲುಗಳನ್ನು ಬಿಳಿಯ ದಾರಗಳೆಂದೂ, ಅವುಗಳಿಂದ ಉತ್ತರಾಯಣ-ದಕ್ಷಿಣಾಯನಾಭಿಮಾನಿ ದೇವತೆಗಳು ಬಟ್ಟೆಯನ್ನು ನೇಯುತ್ತಾರೆಂದೂ ಇಲ್ಲಿಯ ಕಲ್ಪನೆಯಿದೆ. ಈ ಬಟ್ಟೆಯನ್ನು ನೇಯುವಾಗ ಬಟ್ಟೆಯ ಮೇಲ್ಭಾಗದ ಹತ್ತಿಯ ದಾರದ ತುಂಡುಗಳಂತೆ ಪ್ರಪಂಚವೂ ಮತ್ತು ಪ್ರಾಣಿಗಳೂ ಪರಿಣಾಮಗೊಳ್ಳುತ್ತವೆ.

2 ಮೇಘಮಂಡಲಾಭಿಮಾನಿಯಾಗಿ ಮಳೆಯನ್ನು ಸುರಿಸುವ ಪರ್ಜನ್ಯನನ್ನೇ ಇಲ್ಲಿ ಇಂದ್ರನೆಂದು ವರ್ಣಿಸಿದ್ದಾರೆ. ಆ ಇಂದ್ರನಿಗೆ ಸಿಡಿಲೇ ವಜ್ರಾಯುಧವು. ಹಾವಿನ ಆಕಾರದ (ವೃತ್ರಾಸುರನಂತೆ) ಕಪ್ಪಾದ, ಮೊದಲು ಮಳೆಯನ್ನು ಕೊಡದಿರುವ ( ನ ಮುಂಚತಿ ಇತಿ ನಮುಚಿಃ) ಆ ಮೋಡಗಳನ್ನು ಒಡೆಯುವುದೇ ವೃತ್ರ-ನಮುಚಿಗಳ ಸಂಹಾರವು. ಮುಂದೆ ಮಳೆಯಿಂದ ಆ ಪರ್ಜನ್ಯೇಂದ್ರನು ಲೋಕಗಳನ್ನು ಕಾಪಾಡುತ್ತಾನೆ. ಮೋಡಗಳೇ

ಹತ್ತಿರ ಕರೆದು–“ಉತ್ತಂಕನೇ! ನಿನ್ನ ಸ್ತೋತ್ರಗಳಿಗೆ ಮೆಚ್ಚಿರುವೆನು. ನನ್ನಿಂದ ನಿನಗೇನು ಬೇಕಾಗಿದೆ? ಮರೆಮಾಚದೆ ಹೇಳು” ಎಂದನು.

“ಪೂಜ್ಯನೇ! ನನ್ನ ಸ್ತೋತ್ರಕ್ಕೆ ಪ್ರಸನ್ನನಾಗಿರುವುದಾದರೆ ಈ ಪಾತಾಳ ದಲ್ಲಿರುವ ಸರ್ಪಗಳೆಲ್ಲವೂ ನನ್ನ ಅಧೀನದಲ್ಲಿರುವಂತೆ ಮಾಡು.”

“ಹಾಗೆಯೇ ಆಗಲಿ. ಈ ಅಶ್ವದ ಗುದದ್ವಾರವನ್ನು ಊದಿ ಪ್ರಜ್ವಲಿಸು ವಂತೆ ಮಾಡು.”

ಉತ್ತಂಕನು ಮಹಾಪುರುಷನ ಆದೇಶದಂತೆ ಅಶ್ವದ ಗುದದ್ವಾರವನ್ನು ಊದಲು ಕುದುರೆಯ ನವದ್ವಾರಗಳಿಂದಲೂ ಹೊಗೆಯಿಂದ ಕೂಡಿರುವ ಅಗ್ನಿಯ ಜ್ವಾಲೆಗಳು ಹೊರಬಂದು ಪಾತಾಳಲೋಕವನ್ನೇ ದಹಿಸಲು ಪ್ರಾರಂಭಿಸಿದುವು. ತಕ್ಷಕನು ಆಶ್ಚರ್ಯ ಮತ್ತು ಭಯಗಳಿಂದ ಕೂಡಿದವನಾಗಿ ಪಾತಾಳಲೋಕದ ವಿನಾಶವನ್ನು ತಪ್ಪಿಸಲು ಉತ್ತಂಕನ ಸಮೀಪಕ್ಕೆ ಬಂದು–‘ನಿನಗೆ ಬೇಕಾಗಿರುವ ಕುಂಡಲಗಳು ಇಲ್ಲಿವೆ. ಇವುಗಳನ್ನು ನೀನು ಸ್ವೀಕರಿಸು’–ಎಂದು ಹೇಳಿ ಓಲೆಗಳನ್ನೊಪ್ಪಿಸಿ ಹೊರಟುಹೋದನು. ಉತ್ತಂಕ ನಿಗೆ ಬಹಳ ಆನಂದವಾಯಿತು. ಆದರೆ ಆ ಆನಂದವು ಮರುಕ್ಷಣದಲ್ಲಿಯೇ ಉಳಿಯಲಿಲ್ಲ. ‘ಇಷ್ಟು ಕಷ್ಟಪಟ್ಟರೂ ಪ್ರಯೋಜನವೇನು? ಆಶ್ರಮದಿಂದ ಹೊರಟು ಇಂದಿಗೆ ಮೂರು ದಿನಗಳಾಗಿವೆ. ಮಾತೆಯವರು ನಾಲ್ಕನೆಯ ದಿನವೇ ಬರಬೇಕೆಂದು ಆಜ್ಞೆಯಿತ್ತಿರುವರು. ಹತ್ತಾರು ಗಾವುದಗಳ ದೂರ ವಿರುವ ಆಶ್ರಮಕ್ಕೆ ನಡೆದು ಹೋಗಿ ಇಂದೇ ತಲುಪಲು ಸಾಧ್ಯವೇ ಇಲ್ಲ. ಇಷ್ಟು ಶ್ರಮವೂ ನಿರರ್ಥಕವಾಗಿ ಹೋಗುವುದಲ್ಲದೇ ಮಾತೆಯವರ ಶಾಪಕ್ಕೂ ಗುರಿಯಾಗಬೇಕಾಗುವುದು’–ಎಂದು ಉತ್ತಂಕನು ಪರಿತಪಿಸತೊಡಗಿದನು.

ಅಶ್ವಾರೋಹಿಯು ಉತ್ತಂಕನ ಮುಖದ ಮಾಲಿನ್ಯವನ್ನು ಕಂಡು ಮನೋಗತವಾದ ಚಿಂತೆಯೇನೆಂಬುದನ್ನೂ ಅರಿತವನಾಗಿ ತನ್ನ ಕುದುರೆ

---

ಇಂದ್ರನುಟ್ಟಿರುವ ಕಪ್ಪಾದ ಬಟ್ಟೆಗಳು. ಅಗ್ನಿಯು ನೀರಿನಿಂದ ಹುಟ್ಟಿ ಮುಂದೆ ಯಾಗಗಳಲ್ಲಿ ಕೊಟ್ಟ ಆಹುತಿಗಳ ಮೂಲಕವಾಗಿಯೂ ಮೇಘಮಂಡಲಾಭಿಮಾನಿಯಾದ ಪರ್ಜನ್ಯನಿಗೆ ವಾಹನವಾಗುತ್ತಾನೆ. ಹೀಗೆ ಲೋಕವನ್ನು ಕಾಪಾಡುವ ಪರ್ಜನ್ಯನು ಜನರ ಸತ್ಯಾನೃತಗಳಿಗೆ ಸಾಕ್ಷಿಸ್ವರೂಪನೂ ಆಗಿದ್ದಾನೆ.

ಯನ್ನೇ ಹತ್ತುವಂತೆ ಹೇಳಿದನು. ಋಷಿಕುಮಾರನು ಕುದುರೆಯನ್ನೇರಿ ಮನೋವೇಗದಲ್ಲಿ ಪ್ರಯಾಣಮಾಡಿ ಆಶ್ರಮವನ್ನು ಸೇರಿದನು. ಕುದುರೆಯೂ ಸವಾರನೂ ಅದೃಶ್ಯರಾಗಿ ಹೊರಟುಹೋದರು.

ಗುರುಪತ್ನಿಯು ಸ್ನಾನಮಾಡಿ ತಲೆಯನ್ನು ಬಾಚಿಕೊಳ್ಳುತ್ತಾ ಉತ್ತಂಕನ ಆಗಮನವನ್ನೇ ನಿರೀಕ್ಷಿಸುತ್ತಾ ಕುಳಿತಿದ್ದಳು. ವೇಳೆ ಮೀರುತ್ತಿದ್ದುದರಿಂದ



ಗುರುಪತ್ನಿಯ ಸಹನೆಯೂ ಮಿತಿಮೀರಿ ಉತ್ತಂಕನಿಗೆ ಶಾಪಕೊಡಬೇಕೆನ್ನುವ ವೇಳೆಗೆ ಸರಿಯಾಗಿ ಋಷಿಕುಮಾರನು ಕರ್ಣಾಭರಣಗಳನ್ನು ಮಾತೆಯ ಮುಂದಿಟ್ಟು ಸಾಷ್ಟಾಂಗವೆರಗಿದನು. ಗುರುಪತ್ನಿಯ ಆನಂದಕ್ಕೆ ಪಾರವುಂಟೆ? ಉತ್ತಂಕನನ್ನು ಮನಸಾರ ಹರಸಿದಳು :

"ಉತ್ತಂಕನೇ! ಸರಿಯಾದ ಹೊತ್ತಿಗೆ, ಸರಿಯಾದ ಸ್ಥಳಕ್ಕೆ ಆಗಮಿ

ಸಿರುವೆ. ವತ್ಸ! ನಿನಗೆ ಆದರಪೂರ್ವಕವಾಗಿ ಸ್ವಾಗತವನ್ನು ಬಯಸುತ್ತೇನೆ. ನೀನು ನಿರಪರಾಧಿಯಾದುದರಿಂದ ನಾನು ನಿನಗೆ ಶಾಪಕೊಡಲಿಲ್ಲ. ನೀನು ಶ್ರೇಯೋವಂತನಾಗಿ ಬಾಳುವೆ. ನಿನಗೆ ಸರ್ವಸಿದ್ಧಿಗಳೂ ಉಂಟಾಗುವುವು."

ಗುರುಪತ್ನಿಯಿಂದ ಆಶೀರ್ವಾದಗಳನ್ನು ಪಡೆದನಂತರ ಉತ್ತಂಕನು ಗುರುಗಳ ಸಮೀಪಕ್ಕೆ ಹೋಗಿ ಅಭಿವಾದನಮಾಡಿ ನಿಲ್ಲಲು, ವೇದರು ಇಷ್ಟು ಕಾಲ ವಿಳಂಬಕ್ಕೆ ಕಾರಣವೇನೆಂದು ಉತ್ತಂಕನನ್ನು ಪ್ರಶ್ನಿಸಿದರು. ಉತ್ತಂಕನು ತಕ್ಷಕನು ಕೊಟ್ಟ ತೊಂದರೆಗಳನ್ನೆಲ್ಲಾ ವಿವರಿಸಿದನು.

"ಗುರುದೇವ! ಕುಂಡಲಾಹರಣಕಾರ್ಯದಲ್ಲಿ ನಾಗರಾಜನಾದ ತಕ್ಷಕನು ನನಗೆ ವಿಘ್ನವನ್ನುಂಟುಮಾಡಿದನು. ಆ ಕಾರಣದಿಂದಲೇ ನಾನು ನಾಗಲೋಕಕ್ಕೆ ಹೋಗಬೇಕಾಯಿತು. ಅಲ್ಲಿ ಇಬ್ಬರು ಸ್ತ್ರೀಯರು ಬಟ್ಟೆಯನ್ನು ನೇಯುತ್ತಿದ್ದುದನ್ನು ಕಂಡೆನು. ಅವರು ನೇಯ್ಗೆಗೆ ಉಪಯೋಗಿಸುತ್ತಿದ್ದ ದಾರಗಳು ಕಪ್ಪಾಗಿಯೂ-ಬಿಳುಪಾಗಿಯೂ ಇದ್ದುವು. ಆ ಎಲ್ಲದರ ಗೂಢಾರ್ಥವೇನು? ಆಚಾರ್ಯ!

ಅಲ್ಲಿಯೇ ನಾನು ಹನ್ನೆರಡು ಅರೆಕಾಲುಗಳಿಂದ ಕೂಡಿದ್ದ ಚಕ್ರವನ್ನೂ ಕಂಡೆನು. ಆ ಚಕ್ರವನ್ನು ಆರು ಬಾಲಕರು ತಿರುಗಿಸುತ್ತಿದ್ದರು. ಅದರ ರಹಸ್ಯವೇನು? ಅವರಾರು? ದಯಮಾಡಿ ತಿಳಿಸಿರಿ.

ಅದಕ್ಕೆ ಮೊದಲು ನಾನು ಪೌಷ್ಯನ ಪುರಾಭಿಮುಖವಾಗಿ ಹೋಗು ತ್ತಿದ್ದಾಗ ಹಾದಿಯಲ್ಲಿ ಒಂದು ದೊಡ್ಡ ಎತ್ತನ್ನು ಕಂಡೆನು. ಆ ಎತ್ತಿನ ಮೇಲೆ ಮಹಾಪುರುಷನೊಬ್ಬನು ಕುಳಿತಿದ್ದನು. ಅವನು ನನ್ನನ್ನು ಕಂಡು ಆದರ ಪೂರ್ವಕವಾಗಿ–'ಉತ್ತಂಕ! ಈ ಎತ್ತಿನ ಸಗಣಿಯನ್ನು ಭಕ್ಷಿಸು. ನಿನ್ನ ಗುರುಗಳೂ ಸಹ ಇದನ್ನು ಭಕ್ಷಿಸಿರುವರು'–ಎಂದು ಹೇಳಿದನು. ಆ ಮಹಾ ಪುರುಷನ ಮಾತಿನಂತೆ ನಾನು ಎತ್ತಿನ ಸಗಣಿಯನ್ನು ಭಕ್ಷಿಸಿದೆನು. ಆ ಮಹಾ ಪುರುಷನಾರು? ಆ ಎತ್ತು ಯಾವುದು?–ಅವುಗಳೆಲ್ಲದರ ರಹಸ್ಯವನ್ನೂ ತಮ್ಮ ಮುಖಾರವಿಂದದಿಂದ ತಿಳಿಯಲಿಚ್ಛಿಸಿದ್ದೇನೆ. ದಯಮಾಡಿ ಹೇಳಿರಿ."

ಉತ್ತಂಕನಿಂದ ಹೀಗೆಂದು ಪ್ರಾರ್ಥಿತರಾದ ವೇದರು ಪ್ರಕೃತಿಯ ರಹಸ್ಯವನ್ನು ಹೊರಗೆಡಹುತ್ತಾ ಹೇಳಿದರು :

**ಯೇ ತೇ ಸ್ತ್ರಿಯೌ ಧಾತಾ ವಿಧಾತಾ ಚ ಯೇ ಚ ತೇ ಕೃಷ್ಣಾಃ ಸಿತಾಸ್ತನ್ತವಸ್ತೇ ರಾತ್ರ್ಯಹನೀ। ತದಪಿ ತಚ್ಚಕ್ರಂ ದ್ವಾದಶಾರಂ ।**
**ಷಡ್ವೈ ಕುಮಾರಾಃ ಪರಿವರ್ತಯನ್ತಿ ತೇಽಪಿ ಷಡ್ ಋತವಃ**
**ದ್ವಾದಶಾರಾ ದ್ವಾದಶ ಮಾಸಾಃ ಸಂವತ್ಸರಶ್ಚಕ್ರಮ್ ॥೧೬೬॥**

"ಆ ಇಬ್ಬರು ಹೆಂಗಸರು ಧಾತ್ರೀ ಮತ್ತು ವಿಧಾತ್ರಿಯರು. ಕಪ್ಪು ಮತ್ತು ಬಿಳಿಯ ದಾರಗಳು ಹಗಲು ಮತ್ತು ರಾತ್ರಿಗಳನ್ನು ನಿರ್ದೇಶಿಸುತ್ತವೆ. ಹನ್ನೆರಡು ಅರೆಕಾಲುಗಳ ಚಕ್ರವೇ ಹನ್ನೆರಡು ಮಾಸಗಳುಳ್ಳ ಒಂದು ವರ್ಷ. ಅದನ್ನು ತಿರುಗಿಸುತ್ತಿದ್ದ ಆರು ಬಾಲಕರು ವಸಂತಾದಿ ಆರು ಋತುಗಳು.

**ಯಃ ಪುರುಷಃ ಸ ಪರ್ಜನ್ಯೋ ಯೋಽಶ್ವಃ ಸೋಽಗ್ನಿರ್ಯ ಋಷಭಸ್ತ್ವಯಾ ।**
**ಪಥಿ ಗಚ್ಛತಾ ದೃಷ್ಟಃ ಸ ಐರಾವತೋ ನಾಗರಾಟ್ ॥೧೬೭॥**

ಅಲ್ಲಿ ನಿಂತಿದ್ದ ಅಶ್ವಾರೋಹಿಯುವಕನು ಪರ್ಜನ್ಯದೇವನು. ಅಶ್ವವೇ ಅಗ್ನಿಯು. ನೀನು ಆಶ್ರಮದಿಂದ ಹೊರಟಾಗ ದಾರಿಯಲ್ಲಿ ನೋಡಿದ ಎತ್ತು ಆನೆಗಳ ರಾಜನಾದ ಐರಾವತವು.

**ಯಶ್ಚೈನಮಧಿರೂಢಃ ಪುರುಷಃ ಸ ಚೇನ್ದ್ರೋ ಯದಪಿ ತೇ ಭಕ್ಷಿತಂ ತಸ್ಯ ಋಷಭಸ್ಯ ಪುರೀಷಂ ತದಮೃತಂ ತೇನ ಖಲ್ವಸಿ ತಸ್ಮಿನ್ ನಾಗಭವನೇ ನ ವ್ಯಾಪನ್ನಸ್ತ್ವಮ್ ॥೧೬೮॥**

ವೃಷಭಾರೋಹಿಯು ನನ್ನ ಮಿತ್ರನಾದ ಇಂದ್ರನು. ನೀನು ಪ್ರಾಶನ ಮಾಡಿದ ಸಗಣಿ-ಗಂಜಲಗಳೇ ಅಮೃತವು. ಅಮೃತವನ್ನು ಪಾನಮಾಡಿ ದುದರಿಂದ ನಾಗಲೋಕದಲ್ಲಿ ನಿನಗೆ ಅಪಾಯವುಂಟಾಗಲಿಲ್ಲ.

**ಸ ಹಿ ಭಗವಾನಿನ್ದ್ರೋ ಮಮ ಸಖಾ ತ್ವದನುಕ್ರೋಶಾತ್ ಇಮಂ ಅನುಗ್ರಹಂ ಕೃತವಾನ್ ।**
**ತಸ್ಮಾತ್ಕುಣ್ಡಲೇ ಗೃಹೀತ್ವಾ ಪುನರಾಗತೋಽಸಿ ॥೧೬೯॥**

ಭಗವಾನ್ ಇಂದ್ರದೇವನು ನನ್ನ ಮಿತ್ರನು. ನಿನ್ನ ಮೇಲಿನ ಕರುಣೆ ಯಿಂದಾಗಿ ಅವನು ಈ ವಿಧವಾಗಿ ನಿನ್ನನ್ನು ಅನುಗ್ರಹಿಸಿದ್ದಾನೆ. ಅವನ

ಅನುಗ್ರಹದಿಂದಲೇ ನೀನು ಕುಂಡಲಗಳನ್ನು ಪಡೆದುಕೊಂಡು ಸುಖವಾಗಿ ಇಲ್ಲಿಗೆ ಬಂದುಸೇರಲು ಸಾಧ್ಯವಾಯಿತು.

ಸೌಮ್ಯನೇ! ಈಗ ನೀನು ನಿನ್ನಿಚ್ಛೆಬಂದೆಡೆಗೆ ಪ್ರಯಾಣಮಾಡಲು ಅನುಮತಿಯನ್ನಿತ್ತಿದ್ದೇನೆ. ನೀನು ಶ್ರೇಯೋವಂತನಾಗಿ ಬಾಳುವೆ."

ಗುರುಗಳಿಂದ ಅನುಮತಿಯನ್ನು ಪಡೆದ ಉತ್ತಂಕನು ತಕ್ಷಕನ ವಿಷಯದಲ್ಲಿ ಬಹುಕ್ರುದ್ಧನಾಗಿ, ತನಗೆ ಅಪಕಾರವನ್ನೆಸಗಿದ ಅವನಿಗೆ ಪ್ರತೀಕಾರ ಮಾಡುವ ಸಲುವಾಗಿ ಹಾಸ್ತಿನಪುರಾಭಿಮುಖವಾಗಿ ಪ್ರಯಾಣಮಾಡಿದನು.

ಉತ್ತಂಕನು ಹಾಸ್ತಿನಪುರವನ್ನು ಸೇರಿದ ಸ್ವಲ್ಪಕಾಲದಲ್ಲಿಯೇ ಜನಮೇಜಯನನ್ನು ಸಂಧಿಸಿದನು. ಆ ಹಿಂದೆ ತಕ್ಷಶಿಲೆಗೆ ದಂಡೆತ್ತಿಹೋಗಿದ್ದ ಜನಮೇಜಯನು ವಿಜಯಿಯಾಗಿ ಆಗ ತಾನೇ ಹಾಸ್ತಿನಪುರಕ್ಕೆ ಹಿಂದಿರುಗಿದ್ದನು. ಅಮಾತ್ಯ-ಪುರೋಹಿತ-ಸೇನಾಪತಿಗಳಿಂದ ಪರಿವೃತನಾಗಿ ರತ್ನ ಸಿಂಹಾಸನದಲ್ಲಿ ಕುಳಿತಿದ್ದ ಜನಮೇಜಯನನ್ನು ಉತ್ತಂಕನು ಯಥಾವಿಧಿ ಯಾಗಿ ಜಯಪೂರ್ವಕವಾಗಿ ಆಶೀರ್ವಾದಗಳಿಂದ ಹರಸಿ, ಸುಶಬ್ದಗಳಿಂದ ವಿಭೂಷಿತವಾದ ವಾಣಿಯಿಂದ ಯಥೋಚಿತರೀತಿಯಲ್ಲಿ ಹೇಳಿದನು : "ಮಹಾರಾಜ! ಮಹಾಕಾರ್ಯವೊಂದನ್ನು ಮಾಡಬೇಕಾಗಿರುವಾಗ–ಅದರ ವಿಷಯವಾಗಿ ಯೋಚಿಸದೆಯೇ ಅಜ್ಞಾನಪರವಶನಾಗಿರುವಂತೆ ಯಾವುದೋ ಬೇರೆಯ ಕಾರ್ಯದಲ್ಲಿ ತೊಡಗಿರುವೆ."

ಜನಮೇಜಯನಿಗೆ ಉತ್ತಂಕನ ಅಸ್ಖಲಿತವಾಣಿಯನ್ನು ಕೇಳಿ ಆಶ್ಚರ್ಯವುಂಟಾಯಿತು. ಒಡನೆಯೇ ಸಿಂಹಾಸನದಿಂದೆದ್ದು ಋಷಿಕುಮಾರನನ್ನು ಯಥೋಚಿತವಾದ ಆಸನವೊಂದರಲ್ಲಿ ಕುಳ್ಳಿರಿಸಿ ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿ ಹೇಳಿದನು :

"ಋಷಿಪುಂಗವನೇ! ಈ ನನ್ನ ಪ್ರಜೆಗಳ ಸಂರಕ್ಷಣೆಯಿಂದ ಕ್ಷತ್ರಧರ್ಮವನ್ನು ಪರಿಪಾಲಿಸುತ್ತಿದ್ದೇನೆ. ಪ್ರಜೆಗಳ ರಕ್ಷಣೆಯಲ್ಲಿ ಯಾವ ವಿಧವಾದ ನ್ಯೂನತೆಯೂ ಇಲ್ಲವೆಂದು ಭಾವಿಸಿದ್ದೇನೆ. ಆದರೆ ನೀನಾದರೂ ಕಾರಣವಿಲ್ಲದೇ ಈ ಮಾತನ್ನು ಹೇಳಿರುವುದಿಲ್ಲ. ಈಗ ನಾನೇನು ಮಾಡ

ಬೇಕಾಗಿದೆಯೆಂಬುದನ್ನು ಹೇಳು. ಯಾವ ಕಾರ್ಯವನ್ನು ನನ್ನಿಂದ ಮಾಡಿ ಸುವ ಸಲುವಾಗಿ ನೀನಿಲ್ಲಿಗೆ ಬಂದಿರುವೆ?"

ಶೌನಕರೇ! ನೃಪೋತ್ತಮನಾದ ಜನಮೇಜಯನು ಹೀಗೆ ಹೇಳಲು ಪುಣ್ಯಕಾರ್ಯಗಳನ್ನು ಮಾಡುವುದರಲ್ಲಿ ಶ್ರೇಷ್ಠನಾದ, ದ್ವಿಜಸತ್ತಮನಾದ ಉತ್ತಂಕನು ಉದಾರಹೃದಯನಾದ ರಾಜನಿಗೆ ಹೇಳಿದನು :

"ಮಹಾರಾಜ! ಪ್ರಜೆಗಳ ವಿಷಯದಲ್ಲಿ ನಿನ್ನ ರಾಜ್ಯಭಾರಕ್ರಮವು ದೋಷರಹಿತವಾಗಿದೆ. ಇದರಲ್ಲಿ ಸಂಶಯವಿಲ್ಲ. ಆದರೆ ನೀನು ಈಗ ಕೈಗೊಳ್ಳಬೇಕಾಗಿರುವ ಕಾರ್ಯವು ನಿನ್ನ ಆತ್ಮೀಯವಾದುದು.

ಜನಮೇಜಯ! ದುಷ್ಟತಕ್ಷಕನು ನಿನ್ನ ತಂದೆಯನ್ನು ಕೊಲೆ ಮಾಡಿರುವನು. ಅಂತಹ ದುರಾತ್ಮನಾದ ತಕ್ಷಕನಿಗೆ ನೀನು ಪ್ರತೀಕಾರ ಮಾಡಲೇಬೇಕು. ಶತ್ರುವಿನಾಶದ ಸಿದ್ಧಿಗಾಗಿ ಸರ್ಪಯಜ್ಞರೂಪವಾದ ಕರ್ಮವು ಶಾಸ್ತ್ರದಲ್ಲಿರುವುದನ್ನು ನಾನೇ ನೋಡಿದ್ದೇನೆ. ಸರ್ಪಯಾಗದ ಕರ್ಮಾನುಷ್ಠಾನಕ್ಕೆ ಇದು ಉಚಿತವಾದ ಕಾಲವಾಗಿದೆ. ಆದುದರಿಂದ ಮಹಾತ್ಮನಾದ ನಿನ್ನ ತಂದೆಯನ್ನು ಮೃತ್ಯುವಶನನ್ನಾಗಿ ಮಾಡಿದವನಿಗೆ ಪ್ರತೀಕಾರವನ್ನು ನೀನು ಈ ಸಮಯದಲ್ಲಿ ಅವಶ್ಯವಾಗಿ ಮಾಡಬೇಕಾಗಿದೆ.

ಧರ್ಮಾತ್ಮನಾದ ನಿನ್ನ ತಂದೆಯು ತಕ್ಷಕನಿಗೆ ಯಾವುದೇ ಅಪರಾಧ ವನ್ನು ಮಾಡದಿದ್ದರೂ ದುಷ್ಟಾಂತರಾತ್ಮನಾದ ತಕ್ಷಕನು ಅವನನ್ನು ಕಚ್ಚಿಬಿಟ್ಟನು. ಸಿಡಿಲಿನಿಂದ ದಗ್ಧವಾದ ವೃಕ್ಷದಂತೆ–ತಕ್ಷಕನ ದಂಶನದಿಂದ ನಿನ್ನ ತಂದೆಯು ಅಸುವನ್ನು ನೀಗಿದನು. ಪನ್ನಗಾಧಮನಾದ ಆ ತಕ್ಷಕನು ತನ್ನ ಬಲದ ವಿಷಯದಲ್ಲಿ ಬಹಳ ಗರ್ವಿಷ್ಠನಾಗಿದ್ದಾನೆ. ಈ ಕಾರಣದಿಂದಲೇ ಆ ಪಾಪಿಷ್ಠನು ನಿನ್ನ ತಂದೆಯನ್ನು ಕಚ್ಚಿ ಸಾಯಿಸಿ ಅಕಾರ್ಯವನ್ನು ಮಾಡಿರುವನು. ನಿನ್ನ ತಂದೆಯು ರಾಜರ್ಷಿಗಳ ವಂಶಕ್ಕೆ ಸಂರಕ್ಷಕನಾಗಿದ್ದನು. ಅಮರೋಪಮ ನಾಗಿದ್ದನು. ಅಂತಹ ಮಹಾನುಭಾವನನ್ನು ತಕ್ಷಕನು ಕಚ್ಚಿಬಿಡುವನೆಂದು ತಿಳಿದೊಡನೆಯೇ ರಾಜನಿಗೆ ಚಿಕಿತ್ಸೆಮಾಡಬೇಕೆಂದು ಅತ್ಯಾತುರದಿಂದ ಬರುತ್ತಿದ್ದ ಕಾಶ್ಯಪನೆಂಬ ಬ್ರಾಹ್ಮಣನನ್ನೂ ಪಾಪಾತ್ಮನಾದ ತಕ್ಷಕನು ಹಿಂದಕ್ಕಟ್ಟಿಬಿಟ್ಟನು. ಅಂತಹ ಪರಮಪಾಪಿಯಾದ ತಕ್ಷಕನನ್ನು ಸರ್ಪಯಾಗ

ದಲ್ಲಿ ಧಗ-ಧಗನೆ ಪ್ರಜ್ವಲಿಸುವ ಯಜ್ಞೇಶ್ವರನಲ್ಲಿ ಹೋಮಮಾಡಿಬಿಡು. ಹಾಗೆ ಮಾಡುವುದು ನಿನ್ನ ಮುಖ್ಯಕರ್ತವ್ಯವಾಗಿದೆ. ಸರ್ಪಯಾಗಮಾಡಲು ನೀನು ಅರ್ಹತೆಯನ್ನೂ ಪಡೆದಿರುವೆ. ಸಾವಕಾಶ ಮಾಡಬೇಡ. ಸಾಧ್ಯವಾದಷ್ಟು ಬೇಗ ಇದನ್ನು ಮಾಡಿ ಮುಗಿಸಿಬಿಡು. ನೀನು ಹೀಗೆ ಮಾಡುವುದರಿಂದ ಪಿತೃಹಂತಕನಿಗೆ ಪ್ರತೀಕಾರವನ್ನೂ ಮಾಡಿದಂತಾಗುತ್ತದೆ. ನನಗೂ ಸಹ ಬಹುಪ್ರಿಯವಾದ ಕಾರ್ಯವೊಂದನ್ನು ಮಾಡಿಕೊಟ್ಟಂತಾಗುತ್ತದೆ.

ಆ ದುರಾತ್ಮನು ನನ್ನ ವಿಷಯದಲ್ಲಿಯೂ ಕಾರಣವಿಲ್ಲದೇ ಅಪರಾಧ ವನ್ನೆಸಗಿದ್ದಾನೆ. ಗುರ್ವರ್ಥನಾಗಿ ( ಗುರುದಕ್ಷಿಣೆಯ ಆಹರಣಕ್ಕಾಗಿ ) ನಾನು ಪ್ರಯತ್ನಿಸುತ್ತಿದ್ದಾಗ ಆ ದುಷ್ಟನು ಕಾರಣವೇ ಇಲ್ಲದೇ ನನ್ನ ಕಾರ್ಯಕ್ಕೆ ವಿಘ್ನವನ್ನು ತಂದೊಡ್ಡಿದನು."

ಶೌನಕರೇ! ಉತ್ತಂಕನ ಘೃತಧಾರಾಸಮಾನವಾದ ವಾಕ್ಪ್ರವಾಹವನ್ನು ಕೇಳುತ್ತಿದ್ದಂತೆಯೇ ತಕ್ಷಕನ ವಿಷಯದಲ್ಲಿ ರಾಜನು ಕುಪಿತನಾದನು. ಹವಿಸ್ಸಿ ನಿಂದ ಯಜ್ಞೇಶ್ವರನು ದೇದೀಪ್ಯಮಾನನಾಗಿ ಪ್ರಜ್ವಲಿಸುವಂತೆ–ಉತ್ತಂಕನ ವಾಕ್ಯಗಳೆಂಬ ಹವಿಸ್ಸಿನಿಂದ ಜನಮೇಜಯನ ಕೋಪಾಗ್ನಿಯು ಪ್ರಜ್ವಲಿಸಿತು.

ಬಹುದುಃಖಿತನಾದ ಜನಮೇಜಯನು ಉತ್ತಂಕನ ಸಾನ್ನಿಧ್ಯ ದಲ್ಲಿಯೇ–ಮಂತ್ರಿಗಳನ್ನು ಕುರಿತು ತನ್ನ ತಂದೆಯು ಸ್ವರ್ಗವನ್ನೈದಿದುದಕ್ಕೆ ಕಾರಣವನ್ನು ಕೇಳಿದನು. ರಾಜನು ಉತ್ತಂಕನ ಮುಖಾರವಿಂದದಿಂದ ತನ್ನ ತಂದೆಯ ಮರಣದ ಕಾರಣವನ್ನು ಕೇಳಿದೊಡನೆಯೇ ದುಃಖ ಮತ್ತು ಶೋಕಗಳಿಂದ ಬಹಳ ಖಿನ್ನನಾಗಿ ಹೋದನು."

ಇನೆಯ ಅಧ್ಯಾಯವು ಮುಗಿಯಿತು.

## ಕಥಾಪ್ರವೇಶ

**ಲೋಮಹರ್ಷಣಪುತ್ರ ಉಗ್ರಶ್ರವಾಃ ಸೌತಿಃ ಪೌರಾಣಿಕೋ ನೈಮಿ ಷಾರಣ್ಯೇ ಶೌನಕಸ್ಯ ಕುಲಪತೇರ್ದ್ವಾದಶವಾರ್ಷಿಕೇ ಸತ್ರೇ ಋಷೀನಭ್ಯಾಗತಾನುಪತಸ್ಥೇ ॥**

ನೈಮಿಷಾರಣ್ಯದಲ್ಲಿ ಕುಲಪತಿಗಳಾದ ಶೌನಕರು ಆರಂಭಿಸಿದ್ದ ಹನ್ನೆರಡು ವರ್ಷಗಳ ಸತ್ರದಲ್ಲಿ ಭಾಗವಹಿಸಲು ಆಗಮಿಸಿದ್ದ ಋಷಿಗಳ ಸಮೀಪಕ್ಕೆ ಒಮ್ಮೆ ಪೌರಾಣಿಕರಾದ, ಲೋಮಹರ್ಷಣರ ಮಕ್ಕಳಾದ ಉಗ್ರಶ್ರವಸೌತಿಗಳು ಆಗಮಿಸಿದರು. ಪೌರಾಣಿಕರಾದ ಮತ್ತು ಪುರಾಣಗಳ ಅಧ್ಯಯನದಲ್ಲಿ ಬಹು ಶ್ರಮಪಟ್ಟಿದ್ದ ಸೌತಿಗಳು ಬದ್ಧಾಂಜಲಿಗಳಾಗಿ, ಅಲ್ಲಿ ನೆರೆದಿದ್ದ ಋಷಿಗಳನ್ನು ಉದ್ದೇಶಿಸಿ ಹೇಳಿದರು :

"ತಾವುಗಳು ಯಾವ ಪುರಾಣವನ್ನು ಕೇಳಲಿಚ್ಛಿಸಿರುವಿರಿ? ನಾನು ಯಾವ ಪ್ರಸಂಗವನ್ನು ತಮ್ಮ ಸಮ್ಮುಖದಲ್ಲಿ ಹೇಳಲಿ?"

ಸೌತಿಗಳ ಮಾತನ್ನು ಕೇಳಿ ಋಷಿಗಳು ಹೇಳಿದರು :

"ಸೌತಿಗಳೇ! ನಾವು ತಮಗೆ ಉತ್ತಮಕಥಾವಸ್ತುವನ್ನೇ ಹೇಳುವಂತೆ ಕೇಳುತ್ತೇವೆ. ಕಥೆಯು ಪ್ರಾರಂಭವಾದನಂತರದಲ್ಲಿ ಅವಿಚ್ಛಿನ್ನವಾಗಿ ಕಥೆಯನ್ನು ಕೇಳಬೇಕೆಂದು ಆಶಿಸಿರುವ ನಮ್ಮ ಸಮಕ್ಷದಲ್ಲಿ ತಾವೂ ಉತ್ತಮೋತ್ತಮವಾದ ಕಥೆಗಳನ್ನೇ ಹೇಳುವಿರಿ. ಆದರೆ ಕುಲಪತಿಗಳಾದ ಶೌನಕರು ಇನ್ನೂ ಅಗ್ನಿಯ ಉಪಾಸನೆಯಲ್ಲಿಯೇ ಇದ್ದಾರೆ. ಕುಲಪತಿಗಳೂ ದೇವಸಂಬಂಧವಾದ, ಅಸುರಸಂಬಂಧವಾದ ಅನೇಕದಿವ್ಯಕಥೆಗಳನ್ನು ತಿಳಿದವರಾಗಿದ್ದಾರೆ. ಇಷ್ಟುಮಾತ್ರವಲ್ಲದೇ ಮನುಷ್ಯ, ಉರಗ, ಗಂಧರ್ವ ಮುಂತಾದವರಿಗೆ ಸಂಬಂಧಿಸಿದ ಕಥೆಗಳನ್ನೂ ತಿಳಿದವರಾಗಿದ್ದಾರೆ. ವ್ರತನಿಷ್ಠರಾದ, ದಕ್ಷರಾದ, ಧೀಮಂತರಾದ, ಶ್ರುತಿ-ಸ್ಮೃತಿ-ಇತಿಹಾಸ-ಪುರಾಣಾದಿಗಳಲ್ಲಿಯೂ, ಬೃಹದಾರಣ್ಯಕವೇ ಮೊದಲಾದ ಉಪನಿಷತ್ ಶಾಸ್ತ್ರಗಳಲ್ಲಿಯೂ ವಿಶೇಷ ಪ್ರಾವೀಣ್ಯವನ್ನು ಹೊಂದಿ ಆಚಾರ್ಯರೆನಿಸಿರುವ, ವಿದ್ವಾಂಸರಾದ ಮತ್ತು

ಕುಲಪತಿಗಳಾದ ಶೌನಕರೂ ಈ ಸತ್ರಯಾಗದಲ್ಲಿ ಭಾಗವಹಿಸಿದ್ದಾರೆ. ಸತ್ಯವಾದಿಗಳಾದ, ಜಿತೇಂದ್ರಿಯರಾದ, ತಪಸ್ವಿಗಳಾದ, ನಿಯತವ್ರತರಾದ ಅವರು ನಮ್ಮೆಲ್ಲರಿಗೂ ಮಾನ್ಯರಾಗಿರುತ್ತಾರೆ. ಆದುದರಿಂದ ಅವರನ್ನು ಪ್ರತೀಕ್ಷಿಸುತ್ತಿರಬೇಕಾಗಿ ತಮ್ಮನ್ನು ಪ್ರಾರ್ಥಿಸುತ್ತೇವೆ. ಗುರುಗಳಾದ ಶೌನಕರು ಸರ್ವರಿಂದಲೂ ಪೂಜಿಸಲ್ಪಡುವ ಈ ಪೀಠದಲ್ಲಿ ಕುಳಿತುಕೊಂಡನಂತರ ತಾವು ಅವರು ಸೂಚಿಸುವ ಕಥಾಪ್ರಸಂಗವನ್ನು ಹೇಳಬಹುದಾಗಿದೆ."

ಋಷಿಗಳ ಮಾತುಗಳನ್ನು ಕೇಳಿ ಸೌತಿಗಳು ಹೇಳಿದರು :

" ' ಏವಮಸ್ತು '—ಹಾಗೆಯೇ ಆಗಲಿ. ಮಹಾತ್ಮರಾದ ಗುರುವರೇಣ್ಯರಾದ ಶೌನಕರು ಪೀಠವನ್ನಲಂಕರಿಸಿದನಂತರವೇ ನಾನು ಅವರು ಸೂಚಿಸುವ ನಾನಾವಿಧವಾದ ಪುಣ್ಯದಾಯಕಗಳಾದ ಕಥೆಗಳನ್ನು ಹೇಳುತ್ತೇನೆ."

ವಿಪ್ರರ್ಷಭರಾದ ಶೌನಕರು ಎಲ್ಲ ಕರ್ಮಗಳನ್ನೂ ಯಥಾವಿಧಿಯಾಗಿ ಮುಗಿಸಿ, ದೇವತೆಗಳನ್ನೂ ಮತ್ತು ಪಿತೃಗಳನ್ನೂ ಜಪ-ತರ್ಪಣ-ಸ್ತೋತ್ರಗಳಿಂದ ತೃಪ್ತಿಗೊಳಿಸಿದನಂತರ ವ್ರತನಿಷ್ಠರಾದ ಬ್ರಹ್ಮರ್ಷಿಗಳೂ, ಸಿದ್ಧರೂ ಸೂತಪುತ್ರಪುರಸ್ಸರರಾಗಿ ಕುಳಿತಿದ್ದ ಯಜ್ಞಮಂಟಪಕ್ಕೆ ಆಗಮಿಸಿದರು.

ಕುಲಪತಿಗಳು ಯಜ್ಞಮಂಟಪಕ್ಕೆ ಆಗಮಿಸಿದೊಡನೆಯೇ ಸದಸ್ಯರೆಲ್ಲರೂ ಪ್ರತ್ಯುತ್ಥಾನಮಾಡಿ ಶೌನಕರನ್ನು ಗೌರವಿಸಿದರು. ಕುಲಪತಿಗಳು ಎಲ್ಲರನ್ನೂ ಕುಳಿತುಕೊಳ್ಳಲು ಹೇಳಿ, ಋಷಿಸತ್ತಮರೆಲ್ಲರೂ ಉಪವಿಷ್ಟರಾದ ಬಳಿಕ ತಾವೂ ತಮ್ಮ ಆಸನದಲ್ಲಿ ಕುಳಿತು ಉಗ್ರಶ್ರವಸೌತಿಗಳನ್ನು ಪ್ರಶ್ನಿಸಿದರು."

ಆನೆಯ ಅಧ್ಯಾಯವು ಮುಗಿಯಿತು.

## ಭೃಗುಮಹರ್ಷಿಗಳ ಆಶ್ರಮಕ್ಕೆ ಪುಲೋಮರಾಕ್ಷಸನ ಆಗಮನ ಮತ್ತು ಅಗ್ನಿಯೊಡನೆ ಸಂಭಾಷಣೆ

ಶೌನಕರು ಹೇಳುತ್ತಾರೆ :

**ಪುರಾಣಮಖಿಲಂ ತಾತ ಪಿತಾ ತೇಽಧೀತವಾನ್ಪುರಾ ।**
**ಕಚ್ಚಿತ್ತ್ವಮಪಿ ತತ್ಸರ್ವಮಧೀಷೇ ಲೌಮಹರ್ಷಣೇ ॥೧॥**

"ಲೋಮಹರ್ಷಣರ ಕುಮಾರನೇ! ನಿಮ್ಮ ತಂದೆಯವರು ಸಕಲ ಪುರಾಣಗಳನ್ನೂ ಅಭ್ಯಾಸಮಾಡಿದ್ದರು. ನೀನೂ ಅವೆಲ್ಲವನ್ನೂ ಅಧ್ಯಯನ ಮಾಡಿರುವೆಯಾ?

ಪುರಾಣಗಳಲ್ಲಿ ದಿವ್ಯವಾದ ಅನೇಕಕಥೆಗಳಿವೆ. ಬುದ್ಧಿವಂತರಾದ ರಾಜರ್ಷಿಗಳ ಮತ್ತು ಬ್ರಹ್ಮರ್ಷಿಗಳ ಆದಿವಂಶಗಳು ಕಥಿತವಾಗಿವೆ. ಆ ಎಲ್ಲ ಕಥೆಗಳನ್ನೂ ನಾವು ನಿನ್ನ ತಂದೆಯವರಿಂದ ಕೇಳಿದ್ದೆವು. ಈಗ ನಾನು ನನ್ನದೇ ಆದ ಭಾರ್ಗವವಂಶದ ಕಥೆಯನ್ನು ಮೊದಲು ಕೇಳಲಿಚ್ಛಿಸಿದ್ದೇನೆ. ಭೃಗುವಂಶದ ಕಥೆಯನ್ನು ನೀನು ಹೇಳುವವನಾಗು. ದೀರ್ಘಸತ್ರದಲ್ಲಿ ನಿಯುಕ್ತರಾಗಿರುವ ನಾವು ನೀನು ಹೇಳಲಿರುವ ಕಥೆಯನ್ನು ಕೇಳಲು ಸಿದ್ಧರಾಗಿದ್ದೇವೆ."

ಶೌನಕರು ಹೇಳಿದ ಮಾತುಗಳನ್ನು ಕೇಳಿ ಉಗ್ರಶ್ರವಸೌತಿಗಳು ವಿನೀತರಾಗಿ ಹೇಳಿದರು :

"ಭೃಗುನಂದನರೇ! ವೈಶಂಪಾಯನರೇ ಮೊದಲಾದ ದ್ವಿಜಶ್ರೇಷ್ಠರಿಂದಲೂ ಮತ್ತು ಮಹಾತ್ಮರಿಂದಲೂ ಪೂರ್ವಕಾಲದಲ್ಲಿ ಯಾವ ಪುರಾಣೇತಿಹಾಸಗಳು ಅಧ್ಯಯನಮಾಡಲ್ಪಟ್ಟುವೋ ಮತ್ತು ಅವರಿಂದಲೇ ಯಾವ ಪುರಾಣೇತಿಹಾಸಗಳು ಹೇಳಲ್ಪಟ್ಟುವೋ–ಅವುಗಳೆಲ್ಲವನ್ನೂ ನಾನು ತಿಳಿದುಕೊಂಡಿರುತ್ತೇನೆ. ನನ್ನ ತಂದೆಯವರು ಯಾವ ಪುರಾಣಗಳನ್ನು ಅಧ್ಯಯನಮಾಡಿದ್ದರೋ–ಅವುಗಳೆಲ್ಲವನ್ನೂ ನಾನೂ ಅಧ್ಯಯನಮಾಡಿರುತ್ತೇನೆ.

ಪರಮಶ್ರೇಷ್ಠವಾದ ಯಾವ ಭೃಗುವಂಶವು ಇಂದ್ರಪ್ರಮುಖರಾದ ದೇವತೆಗಳಿಂದಲೂ, ಋಷಿಗಳಿಂದಲೂ ಮತ್ತು ಮರುತ್ತರಿಂದಲೂ ಗೌರವಿಸಲ್ಪಡುತ್ತದೆಯೋ–ಅಂತಹ ಭೃಗುವಂಶದ ಕಥೆಯನ್ನು ಹೇಳುವೆನು, ಕೇಳಿರಿ :

ಮಹಾಮುನಿಗಳೇ! ಪುರಾಣಗಳಲ್ಲಿ ಉಕ್ತವಾಗಿರುವ ಭೃಗುವಂಶದ ಕಥೆಯನ್ನೇ ಮೊದಲು ನಾನು ತಮ್ಮ ಇಚ್ಛೆಯಂತೆ ಹೇಳುತ್ತೇನೆ.

ಮಹಾತ್ಮರೇ! ಭೃಗುಮಹರ್ಷಿಗಳು ಸಾಕ್ಷಾತ್ ಬ್ರಹ್ಮನು ಮಾಡಿದ ವಾರುಣಯಜ್ಞದ ಅಗ್ನಿಕುಂಡದಿಂದ ಉತ್ಪನ್ನರಾದರೆಂದು ನಾನು ಕೇಳಿದ್ದೇನೆ. ಅಮಿತತೇಜಸ್ವಿಗಳಾದ ಚ್ಯವನರು ಭೃಗುಋಷಿಗಳ ಪುತ್ರರು. ಚ್ಯವನರ ಪುತ್ರನೇ ಪ್ರಮತಿಯು. ಪ್ರಮತಿಗೆ ಘೃತಾಚಿಯಲ್ಲಿ ರುರುವು ಹುಟ್ಟಿದನು. ಪ್ರಮದ್ವರಾ-ರುರುಗಳ ಪುತ್ರರೇ ವೇದಪಾರಂಗತರಾದ ಶುನಕರು. ಅವರೇ ನಿಮ್ಮ (ಶೌನಕರ) ಪ್ರಪಿತಾಮಹರು.

ಶುನಕರು ತಪಸ್ವಿಗಳಾಗಿಯೂ, ಯಶೋವಂತರಾಗಿಯೂ, ಬಹುಶ್ರುತರಾಗಿಯೂ, ಬ್ರಹ್ಮವಿದರಾಗಿಯೂ, ಧಾರ್ಮಿಕರಾಗಿಯೂ, ಸತ್ಯವಾದಿಗಳಾಗಿಯೂ, ನಿಯತವಾದ ಕ್ರಿಯೆಯುಳ್ಳವರಾಗಿಯೂ, ನಿಯತಾಹಾರಿಗಳಾಗಿಯೂ ಇದ್ದರು.”

ಶೌನಕರು ಮಧ್ಯದಲ್ಲಿಯೇ ಹೇಳಿದರು :

“ಸೂತಪುತ್ರ! ಸ್ವಲ್ಪ ತಾಳು. ಮಹಾತ್ಮನಾದ ಭಾರ್ಗವನಿಗೆ ಚ್ಯವನತ್ವವು (ಜಾರುವಿಕೆಯು) ಹೇಗುಂಟಾಯಿತು? ಅವನು ಚ್ಯವನನೆಂದು ಹೇಗೆ ಪ್ರಸಿದ್ಧನಾದನು? ಆ ವಿಷಯವನ್ನು ಮೊದಲು ಹೇಳಿ ಅನಂತರ ಕಥೆಯನ್ನು ಮುಂದುವರಿಸು.”

ಶೌನಕರ ಮಾತನ್ನು ಕೇಳಿ ಸೌತಿಗಳು ಚ್ಯವನನ ಕಥೆಯನ್ನು ಹೇಳತೊಡಗಿದರು :

“ಭೃಗುಮಹರ್ಷಿಗಳಿಗೆ ಪುಲೋಮಳೆಂದು ವಿಖ್ಯಾತಳಾದ ಪತ್ನಿಯಿದ್ದಳು. ಅವಳು ಮಹರ್ಷಿಗೆ ಬಹುಪ್ರಿಯಳಾಗಿದ್ದಳು. ಭೃಗುಋಷಿಗಳ ಸಮಾಗಮದಿಂದಾಗಿ ಪುಲೋಮೆಯು ಗರ್ಭವತಿಯಾದಳು. ಯಶೋವಂತ

ರಾದ ಭೃಗುಮಹರ್ಷಿಗಳಿಗೆ ಗುಣ, ಶೀಲ ಮತ್ತು ಸ್ವಭಾವಗಳಲ್ಲಿ ಅನುರೂಪ ಳಾಗಿದ್ದ ಧರ್ಮಪತ್ನಿಯು ಗರ್ಭವತಿಯಾಗಿದ್ದಾಗ–ಧರ್ಮಾತ್ಮರಲ್ಲಿ ಶ್ರೇಷ್ಠ ರಾದ ಮಹರ್ಷಿಗಳು ಒಮ್ಮೆ ಸ್ನಾನಾರ್ಥವಾಗಿ ಆಶ್ರಮಕ್ಕೆ ಸ್ವಲ್ಪದೂರದಲ್ಲಿದ್ದ ಸರೋವರಕ್ಕೆ ಹೋಗಿರುವಾಗ–ಪುಲೋಮನೆಂಬ ಹೆಸರಿನ ರಾಕ್ಷಸನೊಬ್ಬನು ಮಹರ್ಷಿಗಳ ಆಶ್ರಮದೊಳಕ್ಕೆ ನುಸುಳಿದನು. ಆಶ್ರಮಕ್ಕೆ ಪ್ರವೇಶಿಸಿದೊಡ ನೆಯೇ ರಾಕ್ಷಸನ ದೃಷ್ಟಿಯು ಅನಿಂದಿತೆಯಾದ ಭೃಗುಪತ್ನಿಯ ಮೇಲೆ ಬಿದ್ದಿತು. ಒಡನೆಯೇ ಅವನು–ಹೃದಯದಲ್ಲಿ ಸುಪ್ತನಾಗಿದ್ದ ಕಾಮದೇವನಿಂದ ಚೋದಿತನಾಗಿ ಬುದ್ಧಿಗೆಟ್ಟವನಾದನು. ಸುಂದರಾಂಗಿಯಾದ ಪುಲೋಮೆಯು ಆಶ್ರಮಕ್ಕೆ ಆಗಮಿಸಿದ ರಾಕ್ಷಸನನ್ನು ಅತಿಥಿಯೆಂದೇ ಭಾವಿಸಿ ಕಾಡಿನಲ್ಲಿ ಸಿಕ್ಕುವ ಕಂದ-ಮೂಲ-ಫಲಾದಿಗಳಿಂದ ಸತ್ಕರಿಸಲು ಅನುವಾದಳು. ಕಾಮಾಭಿಭೂತನಾಗಿದ್ದ ರಾಕ್ಷಸನು ಏಕಾಕಿನಿಯಾದ ಪುಲೋಮೆಯನ್ನು ಕಂಡೊಡನೆಯೇ ಆನಂದಪರವಶನಾದನು. ಅನಿಂದಿತೆಯಾಗಿದ್ದ ಅವಳನ್ನು ಕೂಡಲೇ ಅಪಹರಿಸಿಕೊಂಡು ಹೋಗಬೇಕೆಂದೂ ಅವನು ನಿಶ್ಚಯಿಸಿದನು. 'ಬಹಳ ದಿವಸಗಳಿಂದಿದ್ದ ನನ್ನ ಇಚ್ಛೆಯಿಂದು ಪೂರ್ಣವಾಯಿತು'–ಎಂದು ಪರಮಹರ್ಷಿತನಾಗಿದ್ದ ಮತ್ತು ಶುಭಾಂಗನೆಯನ್ನು ಅಪಹರಿಸಲು ನಿಶ್ಚಯಿಸಿದ್ದ ರಾಕ್ಷಸನು ತನಗೆ ತಾನೇ ಹೇಳಿಕೊಂಡನು.

ಹೀಗವನು ನಿಶ್ಚಯಿಸಲು ಕಾರಣವಿಲ್ಲದಿರಲಿಲ್ಲ. ಶುಚಿಸ್ಮಿತೆಯಾದ ಪುಲೋಮೆಯು ಹಿಂದೆ ಆ ಪುಲೋಮರಾಕ್ಷಸನಿಂದಲೇ ವರಿಸಲ್ಪಟ್ಟಿದ್ದಳು. ಮೊದಲು ರಾಕ್ಷಸನಿಂದ ವರಿಸಲ್ಪಟ್ಟಿದ್ದ ಪುಲೋಮೆಯನ್ನೇ ಅವಳ ತಂದೆಯು ಅನಂತರದಲ್ಲಿ ಶಾಸ್ತ್ರವಿಧಿಗೆ ಅನುಸಾರವಾಗಿ ಭೃಗುಮಹರ್ಷಿಗೆ ಮದುವೆ ಮಾಡಿಕೊಟ್ಟನು. ಪುಲೋಮೆಯ ತಂದೆಯು ಮಾಡಿದ ಆ ಅಪರಾಧವು ರಾಕ್ಷಸನ ಹೃದಯದಲ್ಲಿ ನೆಟ್ಟುಹೋಗಿದ್ದಿತು. ಅವಳನ್ನು ಅಪಹರಿಸಿಕೊಂಡು ಹೋಗಲು ಇದೇ ಒಳ್ಳೆಯ ಸಮಯವೆಂದು ಭಾವಿಸಿ, ಅಂತೆಯೇ ನಿಶ್ಚಯಿ ಸಿಯೂ ಬಿಟ್ಟನು. ಆ ವೇಳೆಯಲ್ಲಿ ರಾಕ್ಷಸನು ಅಗ್ನ್ಯಗಾರದಲ್ಲಿ ದೇದೀಪ್ಯ ಮಾನನಾಗಿ ಪ್ರಜ್ವಲಿಸುತ್ತಿದ್ದ ಅಗ್ನಿದೇವನನ್ನು ಕಂಡನು.

ಪ್ರಜ್ವಲಿಸುತ್ತಿದ್ದ ಅಗ್ನಿದೇವನನ್ನು ಕಂಡು ರಾಕ್ಷಸನು ಅವನನ್ನೇ

ಪ್ರಶ್ನಿಸಿದನು : "ಅಗ್ನಿದೇವನೇ! ಸತ್ಯದ ಮೇಲೆ ಆಣೆಯಿಟ್ಟು ಕೇಳುತ್ತೇನೆ. ಇವಳು ಯಾರ ಭಾರ್ಯೆ ಎಂಬುದನ್ನು ಹೇಳು. ದೇವತೆಗಳಿಗೆ ನೀನು ಮುಖಪ್ರಾಯನಾಗಿರುವೆ. ಪ್ರಶ್ನಿಸುತ್ತಿರುವ ನನಗೆ ಉತ್ತರನೀಡು. ಶ್ರೇಷ್ಠವಾದ ಕಾಂತಿಯುಳ್ಳ ಇವಳನ್ನು ಪತ್ನಿಯನ್ನಾಗಿ ಮಾಡಿಕೊಳ್ಳಲು ನಾನು ಮೊದಲು ಇವಳನ್ನು ಆರಿಸಿಕೊಂಡೆನು. ಆದರೆ ಅಸತ್ಯವಾದಿಯಾದ ಇವಳ ತಂದೆಯು ನಾನಿವಳನ್ನು ವರಣಮಾಡಿದನಂತರ ಭೃಗುಮಹರ್ಷಿಗೆ ಯಥಾವಿಧಿಯಾಗಿ ಮದುವೆಮಾಡಿಕೊಟ್ಟನು. ನನಗಿಂದು ಏಕಾಂತದಲ್ಲಿ ಸಿಕ್ಕಿರುವ ಇವಳು ನಿಶ್ಚಯವಾಗಿಯೂ ಭೃಗುಋಷಿಯ ಪತ್ನಿಯೇ?–ಎಂಬುದನ್ನು ತಿಳಿಸು. ಈ ವಿಷಯದಲ್ಲಿ ನೀನು ಸತ್ಯವನ್ನಾಡಬೇಕು. ಈಗಲೇ ನಾನಿವಳನ್ನು ಈ ಆಶ್ರಮದಿಂದ ಅಪಹರಿಸಿಕೊಂಡು ಹೋಗುತ್ತೇನೆ. ಇವಳ ತಂದೆಯು ಮಾಡಿದ ಅಪರಾಧದಿಂದ ನನ್ನ ಹೃದಯದಲ್ಲಿ ಉದ್ಭವಿಸಿರುವ ಕೋಪಾಗ್ನಿಯು ನನ್ನನ್ನೇ ದಹಿಸಿಬಿಡುವ ಸ್ಥಿತಿಯಲ್ಲಿದೆ. ಮೊದಲು ನನ್ನಿಂದ ವರಿಸಲ್ಪಟ್ಟ ಇವಳನ್ನು ಭೃಗುಮಹರ್ಷಿಯು ಅನ್ಯಾಯದಿಂದ ಪಡೆದುಕೊಳ್ಳಲಿಲ್ಲವೇ? ನಿಜ ಹೇಳು. ಅಗ್ನಿದೇವ! ಯಜ್ಞೇಶ್ವರ! ಪುಲೋಮೆಯು ಯಾರ ಭಾರ್ಯೆ? ನಿಶ್ಚಯವಾಗಿ ಹೇಳು. ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ. ನೀನು ಎಲ್ಲ ಪ್ರಾಣಿಗಳ ಹೃದಯಗಳಲ್ಲಿಯೂ ಉಪಸ್ಥಿತನಾಗಿರುವೆ. ಪ್ರಾಣಿಗಳು ಮಾಡುವ ಪುಣ್ಯ-ಪಾಪಗಳಿಗೆ ನೀನು ಸಾಕ್ಷಿಯಾಗಿರುವೆ. ಸರ್ವಜ್ಞನೇ! ಸತ್ಯವಾದ ಮಾತನ್ನು ಹೇಳು. ಸತ್ಯವನ್ನು ಅನೃತವನ್ನಾಗಿ ಮಾಡುವ ಸ್ವಭಾವವುಳ್ಳ (ಮೊದಲು ನನ್ನ ಭಾರ್ಯೆಯಾಗಿದ್ದವಳನ್ನು ಭಾರ್ಯೆಯಲ್ಲವೆಂದು ಮಾಡಿದ) ಭೃಗುಮಹರ್ಷಿಯು ನನ್ನಿಂದ ಮೊದಲು ವೃತಳಾಗಿದ್ದ ಈ ಪುಲೋಮೆಯನ್ನು ಅಪಹರಿಸಿ ತನ್ನ ಭಾರ್ಯೆಯನ್ನಾಗಿ ಮಾಡಿಕೊಂಡಂತಾಗಲಿಲ್ಲವೇ? ಈ ಕಾರಣದಿಂದಾಗಿ ಈ ಪುಲೋಮೆಯು ಭೃಗುವಿನ ಭಾರ್ಯೆಯಾಗಿರುವಂತೆ ನನ್ನ ಭಾರ್ಯೆಯೂ ಅಲ್ಲವೇ? ಸತ್ಯವಾಗಿ ಹೇಳು. ನಿನ್ನಿಂದ ನಿರ್ಣಾಯಕವಾದ ಸತ್ಯವನ್ನು ಕೇಳಿದನಂತರ ಭೃಗುವಿನ ಪತ್ನಿಯೆಂದು ಪರಿಗಣಿತಳಾಗಿರುವ ಇವಳನ್ನು ಈ ಆಶ್ರಮದಿಂದ ನೀನು ನೋಡುತ್ತಿರುವಂತೆಯೇ ಅಪಹರಿಸಿಕೊಂಡು ಹೋಗುತ್ತೇನೆ."

ಪುಲೋಮನ ಮಾತನ್ನು ಕೇಳಿ ಯಜ್ಞೇಶ್ವರನಿಗೆ ಉಭಯಸಂಕಟ

ವುಂಟಾಯಿತು. ಸುಳ್ಳುಹೇಳುವುದು ಅಧರ್ಮ. ನಿಜವನ್ನು ಹೇಳಿದರೆ ಭೃಗು ಋಷಿಗಳ ಶಾಪಕ್ಕೆ ಪಾತ್ರನಾಗಬೇಕಾಗುತ್ತದೆ. ಏನೂ ಹೇಳದೇ ಸುಮ್ಮನಿದ್ದರೆ ರಾಕ್ಷಸನು ಬಿಡುವಂತೆಯೂ ಇಲ್ಲ. ಎಲ್ಲವನ್ನೂ ಪರ್ಯಾಲೋಚಿಸಿ ಹೇಳಿದನು:

"ನಿಶ್ಚಯವಾಗಿಯೂ ಪುಲೋಮೆಯು ಮೊಟ್ಟಮೊದಲು ನಿನ್ನಿಂದ ಪತ್ನಿಯಾಗಿ ವರಿಸಲ್ಪಟ್ಟವಳು. ಆದರೆ ನೀನು ಇವಳನ್ನು ಮಂತ್ರಪೂರ್ವಕವಾಗಿ ವಿವಾಹವಾಗಲಿಲ್ಲ. ಇವಳ ತಂದೆಯು ವರಲೋಭದಿಂದ ಇವಳನ್ನು ಭೃಗುಋಷಿಗಳಿಗೆ ಕೊಟ್ಟನು. ಅನಂತರ ಮಹರ್ಷಿಗಳು ಪುಲೋಮೆಯನ್ನು ಮಂತ್ರಪುರಸ್ಸರವಾಗಿ ನನ್ನ ಸಮಕ್ಷದಲ್ಲಿ ವಿವಾಹವಾದರು. ಇವಳ ವಿವಾಹವು ಹೀಗೆ ನಡೆಯಿತೆಂದು ನಾನು ತಿಳಿದಿದ್ದೇನೆ. ಎಲೈ ರಾಕ್ಷಸನೇ! ನಾನು ಸುಳ್ಳನ್ನೆಂದಿಗೂ ಆಡೆನು.

**ನಾನೃತಂ ಹಿ ಸದಾ ಲೋಕೇ ಪೂಜ್ಯತೇ ದಾನವೋತ್ತಮ ॥೩೪॥**

ದಾನವಶ್ರೇಷ್ಠನೇ! ಲೋಕದಲ್ಲಿ ಅನೃತಭಾಷಣಕ್ಕೆ ಪುರಸ್ಕಾರವೆಂದಿಗೂ ಇರದು."

ಐನೆಯ ಅಧ್ಯಾಯವು ಮುಗಿಯಿತು.

೬ನೆಯ ಅಧ್ಯಾಯ ಪೌಲೋಮಪರ್ವ (ಮುಂದುವರಿದಿದೆ.)

## ಚ್ಯವನನ ಜನ್ಮ : ಅವನ ತೇಜಸ್ಸಿನಿಂದ ರಾಕ್ಷಸನು ಭಸ್ಮವಾದುದು : ಭೃಗುಮಹರ್ಷಿಯು ಅಗ್ನಿದೇವನಿಗೆ ಶಾಪವನ್ನಿತ್ತುದು

ಸೌತಿಗಳು ಹೇಳುತ್ತಾರೆ :

**ಅಗ್ನೇರಥ ವಚಃ ಶ್ರುತ್ವಾ ತದ್ರಕ್ಷಃ ಪ್ರಜಹಾರ ತಾಮ್ ।**
**ಬ್ರಹ್ಮನ್ವರಾಹರೂಪೇಣ ಮನೋಮಾರುತರಂಹಸಾ ॥೧॥**

"ಅಗ್ನಿದೇವನ ಮಾತನ್ನು ಕೇಳಿ ರಾಕ್ಷಸನು ಒಡನೆಯೇ ಹಂದಿಯ ರೂಪವನ್ನು ತಾಳಿ ಪೂರ್ಣಗರ್ಭಿಣಿಯಾಗಿದ್ದ ಪುಲೋಮೆಯನ್ನು ಎತ್ತಿ ಕೊಂಡು ಗಾಳಿಗಿಂತಲೂ ಮತ್ತು ಮನಸ್ಸಿಗಿಂತಲೂ ವೇಗವಾಗಿ ಓಡಲು ಪ್ರಾರಂಭಿಸಿದನು.

ತಾಯಿಯ ಗರ್ಭದಲ್ಲಿದ್ದ ಶಿಶುವು ರಾಕ್ಷಸನ ಆ ಅಕಾರ್ಯದಿಂದ ಬಹಳ ಕೋಪಗೊಂಡು ಯೋಗಬಲದಿಂದ ತಾಯಿಯ ಗರ್ಭವನ್ನು ಬಿಟ್ಟು ಹೊರಬಂದಿತು. ಅದರಿಂದಲೇ ಆ ಮಗುವಿಗೆ 'ಚ್ಯವನ' ( ಗರ್ಭದಿಂದ ಜಾರಿದವನು ) ಎಂದು ಹೆಸರಾಯಿತು.

ಸೂರ್ಯನಿಗೆ ಸಮನಾದ ತೇಜಸ್ಸುಳ್ಳ ಶಿಶುವನ್ನು ನೋಡುತ್ತಲೇ ರಾಕ್ಷಸನು ಪುಲೋಮೆಯನ್ನು ಕೈಬಿಟ್ಟನು. ಶಿಶುವಿನ ಕಣ್ಣುಗಳಿಂದ ಅಗ್ನಿಯು ಹೊರಬಂದು ಕೆಲವು ಕ್ಷಣಗಳಲ್ಲಿಯೇ ರಾಕ್ಷಸನು ಸುಟ್ಟುಹೋಗಿ ನಿಶ್ಚೇತನ ನಾಗಿ ಕೆಳಗೆ ಬಿದ್ದನು.

ಸುಶ್ರೋಣಿಯಾದ ಪುಲೋಮೆಯು ಬಹುದುಃಖಿತೆಯಾಗಿ ಭೃಗು ನಂದನನಾದ ಚ್ಯವನನನ್ನು ಎತ್ತಿಕೊಂಡು ಬಹಳ ಕಷ್ಟದಿಂದ ಆಶ್ರಮದ ಕಡೆಗೆ ಹೋಗುತ್ತಿದ್ದಳು.

ತ್ರಿಕಾಲಜ್ಞನಾದ ಬ್ರಹ್ಮನು ತನ್ನ ಸೊಸೆಯ ದುಃಸ್ಥಿತಿಯನ್ನು ನೋಡಿ ಪುಲೋಮೆಯಿದ್ದೆಡೆಗೆ ಬಂದು ಅವಳನ್ನು ಸಂತೈಸಿದನು.

ಪುಲೋಮೆಯ ಕಣ್ಣೀರಿನಿಂದ ಒಂದು ನದಿಯೇ ಪ್ರವಹಿಸತೊಡಗಿತು. ಅವಳು ಮುಂದೆ ನಡೆದುಹೋಗುತ್ತಿದ್ದಂತೆ ಕಣ್ಣೀರಿನ ನದಿಯೂ ಅವಳನ್ನೇ ಅನುಸರಿಸಿ ಹೋಗುತ್ತಿದ್ದಿತು. ಅದನ್ನು ನೋಡಿದ ಬ್ರಹ್ಮನು ಆ ನದಿಗೆ ವಧೂಸರವೆಂದೇ ಹೆಸರಿಟ್ಟು ಅಂತರ್ಧಾನನಾದನು. ಆ ನದಿಯು ಭೃಗುಮಹರ್ಷಿಗಳ ಆಶ್ರಮದ ಸುತ್ತಲೂ ಹರಿಯತೊಡಗಿತು.

ಶೌನಕರೇ! ಈ ರೀತಿಯಲ್ಲಿ ಭೃಗುಮಹರ್ಷಿಯ ಪುತ್ರನಾದ ಮಹಾ ಪ್ರತಾಪಶಾಲಿಯಾದ ಚ್ಯವನನು ಜನಿಸಿದನು.

ಪುಲೋಮೆಯು ಆಶ್ರಮಕ್ಕೆ ಬಂದೊಡನೆಯೇ ಕೋಪಗೊಂಡಿದ್ದ ಮಹರ್ಷಿಗಳು ಕೇಳಿದರು : "ನೀನು ನನ್ನ ಪತ್ನಿಯೆಂಬುದನ್ನು ರಾಕ್ಷಸನಿಗೆ ಹೇಳಿದವರಾರು? ನೀನು ನನ್ನ ಪತ್ನಿಯೆಂಬ ವಿಷಯವು ಪುಲೋಮನಿಗೆ ತಿಳಿಯಲು ಸಾಧ್ಯವೇ ಇಲ್ಲ. ಇದನ್ನು ಯಾರಾದರೂ ಹೇಳಿಯೇ ಇರಬೇಕು. ಯಾರೆಂದು ಒಡನೆಯೇ ಹೇಳು, ಪುಲೋಮೆ! ಈಗಲೇ ಶಪಿಸಿಬಿಡುವೆನು.

ನನ್ನ ಶಾಪಕ್ಕೆ ಭಯಪಡದೇ ಈ ವ್ಯತಿಕ್ರಮವನ್ನು ಯಾವನು ಮಾಡಿದನು? ಬೇಗ ಹೇಳು."

"ಅಗ್ನಿದೇವನು ನನ್ನನ್ನು ರಾಕ್ಷಸನಿಗೆ ತೋರಿಸಿದನು. ಅನಂತರ ಕುರರಿಯಂತೆ (ಹೆಣ್ಣುಜಿಂಕೆ) ಕಿರುಚಿಕೊಳ್ಳುತ್ತಿದ್ದ ನನ್ನನ್ನು ರಾಕ್ಷಸನು ಎತ್ತಿ ಕೊಂಡು ಹೊರಟುಹೋದನು.

ರಾಕ್ಷಸನಿಂದ ಅಪಹೃತಳಾದ ನಾನು ಈ ನಿನ್ನ ಮಗನ ತೇಜಃಪ್ರಭಾವ ದಿಂದ ವಿಮೋಚಿತಳಾದೆನು. ಆ ರಾಕ್ಷಸನು ಈ ಶಿಶುವಿನ ಅಗ್ನಿಗೆ ಸಮಾನ ವಾದ ದೃಷ್ಟಿಗೆ ಲಕ್ಷ್ಯನಾದೊಡನೆಯೇ ನನ್ನನ್ನು ಬಿಟ್ಟು ಕೆಳಗೆ ಬಿದ್ದು ಭಸ್ಮೀ ಭೂತನಾದನು."

ಮಹಾಕೋಪಿಷ್ಠನಾದ ಭೃಗುಮಹರ್ಷಿಯು ತನ್ನ ಪತ್ನಿಯಾದ ಪುಲೋಮೆಯು ಹೇಳಿದುದನ್ನು ಕೇಳಿ, ಮಿತಿಮೀರಿದ ಕೋಪದಿಂದ ಸಾಕ್ಷಾತ್ ಯಜ್ಞೇಶ್ವರನಂತೆಯೇ ಪ್ರಜ್ವಲಿಸುತ್ತಾ, ಅಗ್ನಿದೇವನನ್ನು ಸರ್ವಭಕ್ಷಕ ನಾಗುವಂತೆ ಶಪಿಸಿಬಿಟ್ಟನು."

ಆರನೆಯ ಅಧ್ಯಾಯವು ಮುಗಿಯಿತು.

೭ನೆಯ ಅಧ್ಯಾಯ ಪೌಲೋಮಪರ್ವ (ಮುಂದುವರಿದಿದೆ.)

## ಭೃಗುಮಹರ್ಷಿಯ ಶಾಪದಿಂದ ಕುಪಿತನಾದ ಅಗ್ನಿಯು ಅದೃಶ್ಯನಾದುದು : ಬ್ರಹ್ಮನು ಅಗ್ನಿಯ ಶಾಪವನ್ನು ಸಂಕೋಚಗೊಳಿಸಿ ಸಮಾಧಾನಪಡಿಸಿದುದು

ಸೌತಿಗಳು ಹೇಳುತ್ತಾರೆ :

**ಶಪ್ತಸ್ತು ಭೃಗುಣಾ ವಹ್ನಿಃ ಕ್ರುದ್ಧೋ ವಾಕ್ಯಮಥಾಬ್ರವೀತ್ ।**
**ಕಿಮಿದಂ ಸಾಹಸಂ ಬ್ರಹ್ಮನ್ಕೃತವಾನಸಿ ಮಾಂ ಪ್ರತಿ ॥೧॥**

"ಮಹರ್ಷಿಗಳ ಶಾಪವನ್ನು ಕೇಳಿ ಯಜ್ಞೇಶ್ವರನಿಗೂ ಕೋಪವುಂಟಾ ಯಿತು. ಆದರೂ ತಾಳ್ಮೆಯಿಂದಲೇ ಪ್ರಶ್ನಿಸಿದನು : "ಋಷಿಸತ್ತಮರೇ! ಇಷ್ಟೊಂದು ಕೋಪವೇಕೆ? ನನ್ನ ವಿಷಯದಲ್ಲಿ ದುಃಸಾಹಸಪೂರ್ಣವಾದ ಈ

ಕಾರ್ಯವನ್ನೇಕೆ ಮಾಡಿದಿರಿ? ಪಕ್ಷಪಾತವಿಲ್ಲದೇ ಧಾರ್ಮಿಕನಾಗಿ ಸತ್ಯವ್ರತ ನಾಗಿ ಬಾಳಬೇಕೆಂಬುದೇ ನನ್ನ ಜೀವಿತದ ಧ್ಯೇಯ. ಪುಲೋಮನು ಕೇಳಿದ ಪ್ರಶ್ನೆಗಳಿಗೆ ನಿಜಸಂಗತಿಯನ್ನು ತಿಳಿಸಿರುವೆನು. ಇದರಲ್ಲಿ ನನ್ನ ಅಪರಾಧ ವಾದರೂ ಏನಿದೆ? ನನಗೆ ಶಾಪವನ್ನೇಕೆ ಕೊಟ್ಟಿರಿ?

**ಪೃಷ್ಟೋ ಹಿ ಸಾಕ್ಷೀ ಯಃ ಸಾಕ್ಷ್ಯಂ**
**ಜಾನಾನೋऽಪ್ಯನ್ಯಥಾ ವದೇತ್ ।**
**ಸ ಪೂರ್ವಾನಾತ್ಮನಃ ಸಪ್ತ**
**ಕುಲೇ ಹನ್ಯಾತ್ತಥಾ ಪರಾನ್ ॥೩॥**

**ಯಶ್ಚ ಕಾರ್ಯಾರ್ಥತತ್ತ್ವಜ್ಞೋ**
**ಜಾನಾನೋऽಪಿ ನ ಭಾಷತೇ ।**
**ಸೋऽಪಿ ತೇನೈವ ಪಾಪೇನ**
**ಲಿಪ್ಯತೇ ನಾತ್ರ ಸಂಶಯಃ ॥೪॥**

'ಸಾಕ್ಷೀ' ಎನಿಸುವವನ ಧರ್ಮವೇನೆಂಬುದು ತಮಗೆ ತಿಳಿಯದೇ? ಸಾಕ್ಷಿಯು ಬೇರೊಬ್ಬರು ಪ್ರಶ್ನಿಸಿದಾಗ ತನಗೆ ತಿಳಿದಿರುವ ವಿಷಯವಾಗಿ ನಿಜವನ್ನು ಹೇಳದೇ ಸುಳ್ಳನ್ನು ಹೇಳಿದ್ದೇ ಆದರೆ ಅಂತಹವನು ತನ್ನ ಹಿಂದಿನ ಏಳು ತಲೆಮಾರಿನವರನ್ನೂ–ಮುಂದಿನ ಏಳು ತಲೆಮಾರಿನವರನ್ನೂ ಕೊಲ್ಲು ತ್ತಾನೆ. ( ಅಧೋಗತಿಗೆ ಬೀಳಿಸುತ್ತಾನೆ. )

ಕಾಲ-ದೇಶಗಳ ಸ್ಮರಣೆಯನ್ನುಂಟುಮಾಡಿ, ಅಲ್ಲಿ ಏನು ನಡೆಯಿತೆಂದು ಕೇಳಿದಾಗಲೂ ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಮರೆಮಾಚುವವನೂ ಅದೇ ವಿಧವಾದ ಪಾಪಕ್ಕೆ ಗುರಿಯಾಗುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ.

ಈ ಸ್ಮೃತಿವಾಕ್ಯಗಳ ನಿರ್ದೇಶನದಂತೆ ನಾನು ಪುಲೋಮನಿಗೆ ನಿಜ ಸಂಗತಿಯನ್ನು ಹೇಳಿರುವೆನೇ ಹೊರತು ಅಧರ್ಮವೆನಿಸುವ ಒಂದು ಪದ ವನ್ನೂ ಹೇಳಿಲ್ಲ. ಸರ್ವಜ್ಞರಾದ ನೀವು ಇವೆಲ್ಲವನ್ನೂ ಪರ್ಯಾಲೋಚಿಸದೇ ನನ್ನನ್ನು ಶಪಿಸಿರುವಿರಿ. ಇದಕ್ಕೆ ಪ್ರತಿಯಾಗಿ ನಾನೂ ತಮ್ಮನ್ನು ಶಪಿಸಲು ಸಮರ್ಥನಾಗಿದ್ದೇನೆ. ಆದರೆ ಬ್ರಾಹ್ಮಣರು ನನಗೆ ಮಾನ್ಯರು. ಮೇಲಾಗಿ

ತಾವು ನನ್ನನ್ನು ಇಲ್ಲಿಯವರೆಗೂ ಯಜ್ಞ-ಯಾಗಾದಿಗಳಿಂದ ಪುರಸ್ಕರಿಸಿರು ತ್ತೀರಿ. ಆದುದರಿಂದ ನಾನು ನಿಮ್ಮನ್ನು ಶಪಿಸಲು ಇಚ್ಛಿಸುವುದಿಲ್ಲ. ತಾವು ಎಲ್ಲವನ್ನೂ ತಿಳಿದವರಾಗಿದ್ದೀರಿ. ಆದರೂ ನಾನು ಹೇಳುವ ವಿಷಯಗಳನ್ನು ಸಮಾಧಾನಚಿತ್ತರಾಗಿ ಕೇಳಿರಿ. ಯೋಗಬಲದಿಂದ ನನ್ನ ಶರೀರವನ್ನು ಅನೇಕ ಪ್ರಕಾರವಾಗಿ ವಿಂಗಡಿಸಿಕೊಂಡು ನಾನು ನನ್ನ ಸಕಲ ಯಜ್ಞ-ಯಾಗಾದಿ ಗಳಲ್ಲಿಯೂ, ಅಗ್ನಿಹೋತ್ರಗಳಲ್ಲಿಯೂ, ಸತ್ರಗಳಲ್ಲಿಯೂ– ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಅಭಿಧಾನಗಳಿಂದ ಆವಿರ್ಭೂತ ನಾಗಿರುವೆನು. ವಿವಾಹವೇ ಮುಂತಾದ ವೇದೋಕ್ತಕರ್ಮಗಳಲ್ಲಿ ಪ್ರತಿಷ್ಠಿತ ನಾಗುವ ಅಗ್ನಿಯೂ ನಾನೇ ಆಗಿರುತ್ತೇನೆ. ನನ್ನಲ್ಲಿ ತುಪ್ಪವನ್ನು ಹೋಮ ಮಾಡುವಾಗ ಹೇಳುವ ಮಂತ್ರಗಳನ್ನು ಅನುಸರಿಸಿ ದೇವತೆಗಳೂ ಮತ್ತು ಪಿತೃಗಳೂ ತಮ್ಮ ಹವಿರ್ಭಾಗಗಳನ್ನು ತೆಗೆದುಕೊಳ್ಳುತ್ತಾರೆ ಮತ್ತು ಅದರಿಂದ ವರು ತೃಪ್ತರಾಗುತ್ತಾರೆ. ದೇವತೆಗಳೂ, ಪಿತೃಗಳೂ ಜಲಸ್ವರೂಪರು. ಆದುದರಿಂದ ದೇವತೆಗಳೂ ಪಿತೃಗಳೂ ಒಂದೇ. ದರ್ಶ ಮತ್ತು ಪೌರ್ಣಮಾಸ ಯಾಗಗಳು ದೇವತೆಗಳ ಮತ್ತು ಪಿತೃಗಳ ತೃಪ್ತಿಗಾಗಿಯೇ ಮಾಡಲ್ಪಡುತ್ತವೆ.

ಹುಣ್ಣಿಮೆಗಳಲ್ಲಿ ದೇವಸ್ವರೂಪರಾಗಿಯೂ, ಅಮಾವಾಸ್ಯೆಗಳಲ್ಲಿ ಪಿತೃ ಸ್ವರೂಪರಾಗಿಯೂ, ಕೆಲವೊಮ್ಮೆ ಏಕೀಭೂತರಾಗಿಯೂ ಇವರು ಅರ್ಚಿಸ ಲ್ಪಡುತ್ತಾರೆ. ದೇವತೆಗಳೂ ಮತ್ತು ಪಿತೃಗಳೂ ನನ್ನಲ್ಲಿ ಅರ್ಪಿಸಿದ ಹವಿಸ್ಸನ್ನು ತೆಗೆದುಕೊಳ್ಳುತ್ತಾರೆ. ಈ ಕಾರಣದಿಂದಲೇ ನಾನು ದೇವಮುಖನೆಂದೂ, ಪಿತೃಮುಖನೆಂದೂ ಕರೆಯಲ್ಪಡುತ್ತೇನೆ.

ಅಮಾವಾಸ್ಯೆಗಳಲ್ಲಿ ಪಿತೃಗಳೂ, ಪೌರ್ಣಮಾಸ್ಯೆಗಳಲ್ಲಿ ದೇವತೆಗಳೂ ನನ್ನ ಮುಖದಿಂದಲೇ ಆಹುತಿಗಳನ್ನು ಪಡೆಯುತ್ತಾರೆ ಮತ್ತು ನನ್ನ ಮೂಲಕ ವಾಗಿ ಪಡೆದ ಹವಿಸ್ಸನ್ನು ದೇವ-ಪಿತೃಗಳಿಬ್ಬರೂ ಉಪಭುಂಜಿಸುತ್ತಾರೆ. ನಾನು ಸರ್ವಭಕ್ಷಕನಾದನಂತರ ದೇವ-ಪಿತೃಗಳ ಮುಖಸ್ವರೂಪನು ಹೇಗೆ ತಾನೇ ಆದೇನು?"

ಯಜ್ಞೇಶ್ವರನ ಪ್ರಶ್ನೆಗೆ ಮಹರ್ಷಿಗಳಿಂದ ಯಾವ ಉತ್ತರವೂ ಬರಲಿಲ್ಲ. ಅಗ್ನಿದೇವನು ಕ್ಷಣಕಾಲ ಯೋಚಿಸಿ ವಿಷಣ್ಣನಾಗಿ ಅಂತರ್ಧಾನಹೊಂದಿದನು. ಅದರಿಂದಾಗಿ ಹೋಮಕುಂಡಗಳಲ್ಲಿ ಅಗ್ನಿಯು ಲುಪ್ತವಾಗಿ ಹೋಯಿತು.

ಯಜ್ಞ-ಯಾಗಾದಿಗಳೇ ನಡೆಯದಂತಾಯಿತು. ಓಂಕಾರ-ವಷಟ್ಕಾರಗಳ ಸ್ವಾಹಾ-ಸ್ವಧಾಕಾರಗಳ ಘೋಷವೇ ಇಲ್ಲವಾಯಿತು. ಅಗ್ನಿಯಿಲ್ಲದೇ ಪ್ರಪಂಚವೇ ತಲ್ಲಣಿಸಿತು.

ಅಗ್ನಿಯನ್ನು ಕಾಣದೇ ಪ್ರಜೆಗಳೆಲ್ಲರೂ ದುಃಖಿತರಾದರು. ಅದರಿಂದ ಉದ್ವಿಗ್ನರಾದ ಋಷಿಗಳೆಲ್ಲರೂ ದೇವತೆಗಳ ಬಳಿಗೆ ಹೋಗಿ ಹೇಳಿದರು :

“ಪಾಪರಹಿತರಾದ ದೇವತೆಗಳೇ! ಅಗ್ನಿದೇವನು ಅದೃಶ್ಯನಾಗಲಾಗಿ ಅಗ್ನಿಹೋತ್ರಾದಿ ಸಕಲಕ್ರಿಯೆಗಳೂ ನಿಂತುಹೋಗಿವೆ. ಈ ಕಾರಣದಿಂದಾಗಿ ಮೂರು ಲೋಕಗಳ ಪ್ರಾಣಿಗಳೂ ಏನು ಮಾಡಬೇಕೆಂಬುದೇ ತಿಳಿಯದೇ ಭ್ರಾಂತರಾಗಿದ್ದಾರೆ. ಈಗೇನು ಮಾಡಬೇಕೆಂಬುದನ್ನು ಕೂಡಲೇ ಪರ್ಯಾಲೋಚಿಸಿ ಇದಕ್ಕೆ ಪರಿಹಾರಕಾರ್ಯವನ್ನು ಸಾವಕಾಶಕ್ಕೆ ಎಡೆಗೊಡದಂತೆ ಬಹುಶೀಘ್ರವಾಗಿ ಮಾಡಬೇಕಾಗಿದೆ.”

ಋಷಿಗಳು ಹೀಗೆಂದು ಹೇಳಿದನಂತರ ದೇವರ್ಷಿಗಳೆಲ್ಲರೂ ಬ್ರಹ್ಮನ ಬಳಿಗೆ ಹೋಗಿ ನಾನಾವಿಧವಾಗಿ ಸ್ತುತಿಗೈದು, ಭೃಗುಮಹರ್ಷಿಯು ಅಗ್ನಿದೇವನಿಗೆ ಶಾಪಕೊಟ್ಟುದನ್ನೂ ಮತ್ತು ಅದರ ಪರಿಣಾಮವಾಗಿ ಖಿನ್ನನಾದ ಅಗ್ನಿಯು ಅದೃಶ್ಯನಾಗಿರುವುದನ್ನೂ, ಅಗ್ನಿಯಿಲ್ಲದಿರುವಿಕೆಯಿಂದ ಯಜ್ಞ-ಯಾಗಾದಿಗಳೂ ಅಗ್ನಿಹೋತ್ರ-ವೈಶ್ವದೇವಾದಿಗಳೂ ನಿಂತುಹೋಗಿರುವುದನ್ನೂ ನಿವೇದಿಸಿದರು :

“ದೇವೇಶ! ನಿನ್ನ ಮಗನಾದ ಭೃಗುಋಷಿಯು ಕಾರಣಾಂತರದಿಂದ ಅಗ್ನಿದೇವನನ್ನು ಸರ್ವಭಕ್ಷಕನಾಗುವಂತೆ ಶಪಿಸಿಬಿಟ್ಟನು. ಆದರೆ ದೇವತೆಗಳಿಗೆ ಮುಖರೂಪನಾದ, ಯಜ್ಞ-ಯಾಗಾದಿಗಳ ಅಗ್ರಭೋಕ್ತೃವಾದ, ಹುತಭುಜನಾದ ಅಗ್ನಿಯು ಸರ್ವಭಕ್ಷಕನಾಗುವುದು ಹೇಗೆ ಸಾಧ್ಯವಾಗುತ್ತದೆ?”

ಬ್ರಹ್ಮನು ದೇವತೆಗಳ ಪ್ರಾರ್ಥನೆಯನ್ನು ಕೇಳಿ, ಅಗ್ನಿದೇವನನ್ನು ಕರೆಯಿಸಿ, ಅವನನ್ನು ಸಂತೈಸುತ್ತಾ, ಭೂತಭಾವನನಾದ, ಅವ್ಯಯನಾದ ಯಜ್ಞೇಶ್ವರನನ್ನು ಕುರಿತು ಹೇಳಿದನು :

**ಲೋಕಾನಾಮಿಹ ಸರ್ವೇಷಾಂ ತ್ವಂ ಕರ್ತಾ ಚಾನ್ತ ಏವ ಚ ।**

**ತ್ವಂ ಧಾರಯಸಿ ಲೋಕಾಂಸ್ತ್ರೀನ್ಕ್ರಿಯಾಣಾಂ ಚ ಪ್ರವರ್ತಕಃ ।**
**ಸ ತಥಾ ಕುರು ಲೋಕೇಶ ನೋಚ್ಛಿದ್ಯೇರನ್ಯಥಾ ಕ್ರಿಯಾಃ ॥೨೦॥**

**ಕಸ್ಮಾದೇವಂ ವಿಮೂಢಸ್ತ್ವಮೀಶ್ವರಃ ಸನ್ಹುತಾಶನ ।**
**ತ್ವಂ ಪವಿತ್ರಂ ಸದಾ ಲೋಕೇ ಸರ್ವಭೂತಗತಿಶ್ಚ ಹ ॥೨೧॥**

"ಯಜ್ಞೇಶ್ವರ! ನೀನು ಎಲ್ಲ ಲೋಕಗಳ ಸೃಷ್ಟಿ-ಸ್ಥಿತಿ-ಲಯಗಳಿಗೂ ಕಾರಣನು. ಯಜ್ಞ-ಯಾಗಾದಿಕ್ರಿಯೆಗಳಿಗೂ ಕಾರಣಭೂತನು. ಎಲ್ಲ ಲೋಕಗಳನ್ನೂ ನೀನೇ ಧರಿಸಿರುವೆ. ಸರ್ವಜ್ಞನಾಗಿಯೂ, ಸರ್ವೇಶ್ವರ ನಾಗಿಯೂ ಇರುವ ನೀನು ಸಾಮಾನ್ಯರಂತೆ ವರ್ತಿಸುವೆಯೇಕೆ? ಪ್ರಪಂಚ ದಲ್ಲಿ ಪವಿತ್ರತಮನೆಂದರೆ ನೀನೊಬ್ಬನೇ. ಸಮಸ್ತಪ್ರಾಣಿಗಳಿಗೂ ನೀನು ಆಶ್ರಯನು. ನಿನ್ನ ಸಪ್ತಜ್ವಾಲೆಗಳಲ್ಲಿ ಎಲ್ಲವೂ ವಿವೇಚನೆಯಿಲ್ಲದೇ ಆಹಾರ ವನ್ನು ತಿನ್ನುವುದಿಲ್ಲ. ಅಧೋಮುಖವಾದ ಜ್ವಾಲೆಗಳು ಮಾತ್ರ ಸರ್ವವನ್ನೂ ಭಕ್ಷಣಮಾಡುವುವು. ಸಕಲಜೀವಜಂತುಗಳಲ್ಲಿ ನಿನ್ನ ಒಂದು ಸ್ವರೂಪವಾದ ಕ್ರವ್ಯಾತ್ ಎಂಬ ಹೆಸರಿನ ಅಗ್ನಿಯೂ ( ಚಿತಾಗ್ನಿಯೂ ) ಕೂಡ ವಿವೇಚನೆ ಯಿಲ್ಲದೇ ಎಲ್ಲವನ್ನೂ ಭಕ್ಷಣಮಾಡುವುದು. ಇದೂ ಅಲ್ಲದೇ ಸೂರ್ಯ ಕಿರಣಗಳ ಸ್ಪರ್ಶದಿಂದ ಪದಾರ್ಥಗಳು ಪವಿತ್ರವಾಗುವಂತೆ–ನಿನ್ನ ಜ್ವಾಲೆ ಗಳಿಗೆ ಸಿಕ್ಕಿದನಂತರ ಪ್ರತಿಯೊಂದು ಪದಾರ್ಥವೂ ಪರಿಶುದ್ಧವಾಗುವುದು.

ನಿನ್ನ ಪ್ರಭಾವದಿಂದಲೇ ಹೊರಬಂದ ಉತ್ಕೃಷ್ಟವಾದ ತೇಜಸ್ಸೂ ನೀನೇ ಆಗಿರುತ್ತೀಯೆ. ನಿನ್ನ ಆ ಮಹಾತೇಜಸ್ಸಿನಿಂದಲೇ ಋಷಿಯು ನಿನಗಿತ್ತಿರುವ ಶಾಪವನ್ನು ಸತ್ಯವನ್ನಾಗಿ ಮಾಡು. ನಿನಗೆ ಅಪವಿತ್ರತೆಯೆಂಬುದೇ ಇಲ್ಲ. ಯಜ್ಞೇಶ್ವರ! ಮೊದಲಿನಂತೆಯೇ ನೀನು ಸಕಲಹೋಮಕುಂಡಗಳಲ್ಲಿಯೂ ಆವಿರ್ಭೂತನಾಗಿ ಅಗ್ನಿಮುಖವಾಗಿ ಕೊಡುವ ದೇವತೆಗಳ ಮತ್ತು ನಿನ್ನ ಹವಿರ್ಭಾಗಗಳನ್ನು ಪರಿಗ್ರಹಿಸು."

ಶೌನಕರೇ! ಬ್ರಹ್ಮನು ಹೇಳಿದ ಮಾತುಗಳನ್ನು ಕೇಳಿ ಯಜ್ಞೇಶ್ವರನು 'ಏವಮಸ್ತು' 'ನೀನು ಹೇಳಿದಂತೆಯೇ ಆಗಲಿ' ಎಂದು ಪ್ರತ್ಯುತ್ತರಿಸಿ ದೇವದೇವನಾದ ಪರಮೇಷ್ಠಿಯ ಶಾಸನದಂತೆ ನಡೆಯಲು ಹೊರಟು

ಹೋದನು. ದೇವರ್ಷಿಗಳೂ ಸಹ ಬಹಳ ಸಂತಸದಿಂದ ತಮ್ಮ-ತಮ್ಮ ಸ್ಥಾನಗಳಿಗೆ ತೆರಳಿದರು.

ಮಹರ್ಷಿಗಳು ಯಥಾಪೂರ್ವವಾಗಿ ಅಗ್ನಿಹೋತ್ರಾದಿ ಎಲ್ಲ ಕರ್ಮಗಳನ್ನೂ ಮಾಡಲು ಉಪಕ್ರಮಿಸಿದರು. ದೇವತೆಗಳಿಗೆ ಮೊದಲಿನಂತೆಯೇ ಅಗ್ನಿಯ ಮೂಲಕವಾಗಿ ಹವಿರ್ಭಾಗಗಳು ಲಭಿಸಿ ಅವರೂ ಆನಂದಭರಿತರಾದರು. ಹವಿರ್ಭಾಗಗಳನ್ನು ಪಡೆದ ದೇವತೆಗಳು ತಮ್ಮ ಕರ್ತವ್ಯದಂತೆ ಸಕಾಲದಲ್ಲಿ ಮಳೆಗರೆಯುತ್ತಿದ್ದುದರಿಂದ ಲೋಕಗಳಲ್ಲಿದ್ದ ಸಮಸ್ತಪ್ರಾಣಿಗಳೂ ಮುದಿತವಾದುವು. ಬ್ರಹ್ಮನ ಅನುಗ್ರಹದಿಂದಾಗಿ ಗತಕಲ್ಮಷನಾದ ಅಗ್ನಿದೇವನೂ ಸುಪ್ರೀತನಾದನು.

ಶೌನಕರೇ! ಈ ರೀತಿಯಾಗಿ ಅಗ್ನಿದೇವನು ಭೃಗುಮಹರ್ಷಿಗಳ ಶಾಪಕ್ಕೆ ಗುರಿಯಾಗಿದ್ದನು. ಇದು ಅಗ್ನಿಯ ಶಾಪಸಂಬಂಧವಾದ ಪ್ರಾಚೀನವಾದ ಇತಿಹಾಸವಾಗಿದೆ. ಇದೂ ಅಲ್ಲದೇ ಈ ಇತಿಹಾಸವು ಪುಲೋಮನ ವಿನಾಶಕ್ಕೆ ಕಾರಣವಾದ ಚ್ಯವನನ ಇತಿಹಾಸವೂ ಆಗಿದೆ.”

೭ನೆಯ ಅಧ್ಯಾಯವು ಮುಗಿಯಿತು.

೮ನೆಯ ಅಧ್ಯಾಯ ಪೌಲೋಮಪರ್ವ(ಮುಂದುವರಿದಿದೆ.)

## ಪ್ರಮದ್ವರೆಯ ಜನ್ಮ : ರುರುವಿನೊಡನೆ ಅವಳ ವಿವಾಹದ ಪ್ರಯತ್ನ: ವಿವಾಹಕ್ಕೆ ಮೊದಲೇ ಸರ್ಪದಂಶನದಿಂದ ಪ್ರಮದ್ವರೆಯ ಮರಣ

ಸೌತಿಗಳು ಮುಂದುವರಿದು ಹೇಳುತ್ತಾರೆ :

**ಸ ಚಾಪಿ ಚ್ಯವನೋ ಬ್ರಹ್ಮನ್ಭಾರ್ಗವೋಽಜನಯತ್ಸುತಮ್ ।**
**ಸುಕನ್ಯಾಯಾಂ ಮಹಾತ್ಮಾನಂ ಪ್ರಮತಿಂ ದೀಪ್ತತೇಜಸಮ್ ॥೧॥**

“ಭೃಗುಪುತ್ರನಾದ ಚ್ಯವನನಿಗೆ ಸುಕನ್ಯೆಯಲ್ಲಿ ಮಹಾತ್ಮನಾದ ಮಹಾತೇಜಸ್ವಿಯಾದ ‘ಪ್ರಮತಿ’ ಎಂಬ ಮಗನು ಹುಟ್ಟಿದನು. ಪ್ರಮತಿಯು ಅಪ್ಸರೆಯಾದ ಘೃತಾಚಿಯಲ್ಲಿ ರುರು ಎಂಬ ಪುತ್ರನನ್ನು ಪಡೆದನು. ರುರುವು ಪ್ರಮದ್ವರೆಯಲ್ಲಿ ಶುನಕನೆಂಬ ಹೆಸರಿನ ಮಗನನ್ನು ಪಡೆದನು. ಶುನಕನು

ಮಹಾಸತ್ತ್ವಗುಣಶಾಲಿಯಾಗಿದ್ದು ಸಂಪೂರ್ಣ ಭಾರ್ಗವವಂಶಕ್ಕೂ ಆನಂದ ದಾಯಕನಾಗಿದ್ದನು. ಹುಟ್ಟಿದೊಡನೆಯೇ ಅವನು ತೀವ್ರವಾದ ತಪಸ್ಸಿನಲ್ಲಿ ನಿರತನಾದನು. ಆ ಕಾರಣದಿಂದಲೇ ಅವನಿಗೆ ಶಾಶ್ವತವಾದ ಕೀರ್ತಿಯೂ ಲಭಿಸಿತು. ಪ್ರಮತಿಯ ಮಗನಾದ, ಮಹಾತೇಜಸ್ವಿಯಾದ ರುರುವಿನ ಕಥೆ ಯನ್ನು ಸವಿಸ್ತಾರವಾಗಿ ಹೇಳುತ್ತೇನೆ. ಸಾವಧಾನದಿಂದ ಕೇಳಿರಿ :

ಹಿಂದಿನ ಕಾಲದಲ್ಲಿ ತಪೋವಿದ್ಯಾಸಮನ್ವಿತರಾದ ಸ್ಥೂಲಕೇಶರೆಂಬ ಹೆಸರಿನಿಂದ ವಿಖ್ಯಾತರಾದ ಋಷಿಗಳೊಬ್ಬರಿದ್ದರು. ಅವರು ಎಲ್ಲ ಪ್ರಾಣಿಗಳ ಹಿತದಲ್ಲಿಯೇ ಸರ್ವದಾ ನಿರತರಾಗಿದ್ದರು. ಅದೇ ಕಾಲದಲ್ಲಿ ಮೇನಕಾ ಎಂಬ ಅಪ್ಸರೆಯು ವಿಶ್ವಾವಸುವೆಂಬ ಗಂಧರ್ವರಾಜನಿಂದ ಗರ್ಭವತಿಯಾದಳು.

ಮೇನಕೆಯು ಸ್ಥೂಲಕೇಶರ ಆಶ್ರಮದ ಸಮೀಪದಲ್ಲಿ ಹರಿಯುತ್ತಿದ್ದ ನದಿಯ ಪಕ್ಕದ ಪೊದರಿನಲ್ಲಿ ಪ್ರಸವಿಸಿ ಅಲ್ಲಿಯೇ ಮಗುವನ್ನು ಮಲಗಿಸಿ ಹೊರಟುಹೋದಳು. 'ಮಗುವನ್ನು ಬಿಟ್ಟು ಹೋಗುವೆನಲ್ಲಾ!' ಎಂಬ ಯೋಚನೆಯೂ ಅವಳಿಗಾಗಲಿಲ್ಲ. ಅವಳು ದಯಾರಹಿತಳೂ, ನಿರ್ಲಜ್ಜಳೂ ಆಗಿದ್ದಳು.

ಸ್ಥೂಲಕೇಶರು ಬ್ರಾಹ್ಮೀಮುಹೂರ್ತದಲ್ಲೆದ್ದು ತಮ್ಮ ಪ್ರಾತಃಕ್ರಿಯೆ ಗಳಿಗಾಗಿ ನದಿಯ ಕಡೆಗೆ ಹೊರಟರು. ನದಿಯನ್ನು ಸಮೀಪಿಸುತ್ತಿದ್ದಂತೆ ನಿರ್ಜನವಾದ ಪ್ರದೇಶದಲ್ಲಿ ಶಿಶುವಿನ ಅಳುವ ಶಬ್ದವು ಕೇಳಿಸತೊಡಗಿತು. ಅವರು ಕರುಣೆಯಿಂದ ಬಂಧುವರ್ಜಿತವಾದ ಆ ಮಗುವನ್ನು ಕೈಗೆತ್ತಿಕೊಂಡು ಆಶ್ರಮದ ಕಡೆಗೆ ಹೊರಟರು.

ದಯಾಮಯರಾದ ಸ್ಥೂಲಕೇಶರು ಆ ಹೆಣ್ಣುಮಗುವನ್ನು ಅಕ್ಕರೆ ಯಿಂದ ಪೋಷಿಸಿದರು. ಆ ಸುಂದರಶಿಶುವು ಅವರ ಆಶ್ರಮದಲ್ಲಿಯೇ ದಿನ- ದಿನಕ್ಕೂ ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಹೊಂದುತ್ತಿದ್ದಿತು.

ತಂದೆಯಾದವನು ಔರಸಪುತ್ರಿಗೆ ಮಾಡಬೇಕಾಗಿದ್ದ ಜಾತಕರ್ಮ- ನಾಮಕರಣಾದಿಗಳನ್ನು ಸ್ಥೂಲಕೇಶರೇ ಮಾಡಿದರು.

ಸೌಂದರ್ಯಾತಿಶಯದಲ್ಲಿ, ಉತ್ತಮಗುಣಗಳಲ್ಲಿ ಎಲ್ಲ ಸ್ತ್ರೀಯರನ್ನೂ

ಮೀರಿಸಿದ್ದ ಆ ಹೆಣ್ಣುಮಗುವಿಗೆ 'ಪ್ರಮದ್ವರಾ' (ಹೆಂಗಸರ'ಲ್ಲಿ ಶ್ರೇಷ್ಠಳು) ಎಂದೇ ಮಹರ್ಷಿಗಳು ನಾಮಕರಣಮಾಡಿದರು.

ಒಂದಾನೊಂದು ದಿನ ಸ್ಥೂಲಕೇಶರ ಆಶ್ರಮದ ಸಮೀಪದಲ್ಲಿ ಮಹಾತ್ಮನಾದ ರುರುವು ಪ್ರಮದ್ವರೆಯನ್ನು ಕಂಡು ಒಡನೆಯೇ ಕಾಮದೇವನ ಪೀಡೆಗೊಳಗಾದನು. ತನ್ನ ಮಿತ್ರರ ಮೂಲಕವಾಗಿ ರುರುವು ತನ್ನ ಮನಸ್ಸಿನ ಆಶಯವನ್ನು ತಂದೆಯಾದ ಪ್ರಮತಿಗೆ ತಿಳಿಯಪಡಿಸಿದನು. ಪ್ರಮತಿಯೂ ಮಗನು ಪ್ರಮದ್ವರೆಯನ್ನು ಪ್ರೇಮಿಸಿದುದಕ್ಕಾಗಿ ಕೋಪಗೊಳ್ಳದೇ ಯಶೋವಂತರಾದ ಸ್ಥೂಲಕೇಶರ ಬಳಿಗೆ ಹೋಗಿ ಪ್ರಮದ್ವರೆಯನ್ನು ತನ್ನ ಮಗನಿಗಾಗಿ ಯಾಚಿಸಿದನು. ಸ್ಥೂಲಕೇಶಮಹರ್ಷಿಗಳೂ ತಮ್ಮ ಸಾಕುಮಗಳನ್ನು ರುರುವಿಗೆ ಕೊಡುವುದಾಗಿ ಪ್ರಮತಿಗೆ ವಾಗ್ದಾನಮಾಡಿ, ಮುಂಬರುವ ಉತ್ತರಫಲ್ಗುನೀನಕ್ಷತ್ರದಲ್ಲಿ ವಿವಾಹವನ್ನು ವಿಧಿಪೂರ್ವಕವಾಗಿ ಮಾಡಿಕೊಡುವೆನೆಂದು ನಿಶ್ಚಿತಾರ್ಥವನ್ನೂ ಮಾಡಿಕೊಟ್ಟರು. ವಿವಾಹ ಮುಹೂರ್ತವು ಅಥವಾ ವಿವಾಹದ ದಿನವು ಸಮೀಪಿಸುತ್ತಿರಲಾಗಿ ಒಂದು ದಿನ ವರವರ್ಣಿನಿಯಾದ ಪ್ರಮದ್ವರೆಯು ತನ್ನ ಸಖಿಯರೊಡನೆ ಆಟವಾಡು ತ್ತಿರುವಾಗ, ಮರಣಹೊಂದುವ ಸಲುವಾಗಿ ವಿಧಿಯಿಂದ ಪ್ರೇರಿತಳಾದವ ಳಂತೆ-ನಿದ್ರಿಸುತ್ತಿದ್ದ ಸರ್ಪವೊಂದನ್ನು ಕಾಣದೇ ತುಳಿದುಬಿಟ್ಟಳು. ವಿಧಿಯಿಂದ ಚೋದಿತವಾದ ಆ ಸರ್ಪವು, ಪ್ರಮತ್ತಳಾಗಿ ಕ್ರೀಡಿಸುತ್ತಿದ್ದ ಪ್ರಮದ್ವರೆಯ ಶರೀರದಲ್ಲಿ ವಿಷದಿಂದ ಕೂಡಿದ ಹಲ್ಲುಗಳನ್ನು ನಾಟಿಸಿಬಿಟ್ಟಿತು. ಸರ್ಪದಿಂದ ಕಚ್ಚಲ್ಪಟ್ಟೊಡನೆಯೇ ಪ್ರಮದ್ವರೆಯು ಕೆಳಗೆಬಿದ್ದಳು. ನವಯೌವನದ ಸೌಂದರ್ಯದಿಂದ ತೇಜೋರಾಶಿಯಂತೆ ಕಾಣುತ್ತಿದ್ದ ಅವಳು ಕ್ಷಣಮಾತ್ರದಲ್ಲಿ ವಿವರ್ಣಳಾಗಿ ಹೋದಳು. ಕಾಂತಿಹೀನಳಾದಳು. ತೊಟ್ಟಿದ್ದ ಒಡವೆಗಳು ಚೆಲ್ಲಾಪಿಲ್ಲಿಯಾಗಿ ಕೆಳಗೆ ಬಿದ್ದುವು. ಪ್ರಜ್ಞೆತಪ್ಪಿದಳು. ತಲೆಗೂದಲು ಬಿಚ್ಚಿಹೋಯಿತು. ಕ್ಷಣಕಾಲದ ಹಿಂದೆ ಬಂಧುಗಳ ಆನಂದಕ್ಕೆ ಕಾರಣಳಾಗಿದ್ದ ಪ್ರಮದ್ವರೆಯು ಈಗ ಅವರ ಅಪಾರ ದುಃಖಕ್ಕೆ ಕಾರಣಳಾದಳು. ಕ್ಷಣಕಾಲದ ಹಿಂದೆ ಪ್ರೇಕ್ಷಣೀಯತಮಳಾಗಿದ್ದ ಪ್ರಮದ್ವರೆಯು ಪ್ರಾಣಶೂನ್ಯಳಾಗಿ ಇತರ ರಿಂದ ನೋಡಲೂ ಸಾಧ್ಯವಾಗದಷ್ಟು ವಿಕಾರವಾಗಿ ಕಾಣುತ್ತಿದ್ದಳು.

ಸರ್ಪದ ವಿಷವು ಅವಳ ಶರೀರವನ್ನೆಲ್ಲಾ ಆವರಿಸಿದನಂತರವೂ,

ನೋಡಿದವರಿಗೆ ಮಲಗಿ ನಿದ್ರಿಸುತ್ತಿರುವಂತೆಯೇ ಅವಳು ಕಾಣುತ್ತಿದ್ದಳು. ಕೃಶವಾದ ನಡುಭಾಗದಿಂದ ಕೂಡಿದ್ದ ಪ್ರಮದ್ವರೆಯು ಅಚೇತನಾವಸ್ಥೆಯಲ್ಲಿಯೂ ಹೆಚ್ಚು ರೂಪವತಿಯಂತೆಯೇ ಕಂಡಳು. ಕಮಲದಂತೆ ಕಾಂತಿಮಂತಳಾಗಿದ್ದ, ಭೂಮಿಯ ಮೇಲೆ ನಿಶ್ಚೇಷ್ಟಳಾಗಿ ಬಿದ್ದಿದ್ದ ಪ್ರಮದ್ವರೆಯನ್ನು ಸಾಕುತಂದೆಯಾದ ಸ್ಥೂಲಕೇಶರೂ ಮತ್ತು ಇತರ ತಪಸ್ವಿಗಳೂ ನೋಡಿ ಬಹುವಾಗಿ ದುಃಖಿಸಿದರು. ಪ್ರಮದ್ವರೆಯ ಮರಣವಾರ್ತೆಯು ಸರ್ವತ್ರ ಹರಡಿತು. ಕೃಪಾಳುಗಳಾದ ಎಲ್ಲ ಬ್ರಾಹ್ಮಣರೂ ಅಲ್ಲಿಗೆ ಬಂದರು. ಸ್ವಸ್ತ್ಯಾತ್ರೇಯ, ಮಹಾಜಾನು, ಕುಶಿಕ, ಶಂಖಮೇಖಲ, ಉದ್ದಾಲಕ, ಕಠ, ಶ್ವೇತ, ಮಹಾಯಶೋವಂತನಾದ ಭರದ್ವಾಜ, ಕೌಣಕುತ್ಸ್ಯ, ಆರ್ಷ್ಟಿಷೇಣ, ಗೌತಮ, ಪ್ರಮತಿ, ಪ್ರಮತಿಯ ಮಗನಾದ ಹಾಗು ಪ್ರಮದ್ವರೆಯನ್ನು ಬಹುವಾಗಿ ಮೋಹಿಸಿದ್ದ ರುರು ಮತ್ತು ಇನ್ನೂ ಅನೇಕ ವನವಾಸಿಗಳೂ ಅಲ್ಲಿಗೆ ಬಂದರು. ಸರ್ಪದ ವಿಷದಿಂದ ಆವೃತಳಾಗಿದ್ದ ಮತ್ತು ಗತಪ್ರಾಣಳಾಗಿದ್ದ ಆ ಕನ್ಯೆಯನ್ನು ನೋಡಿ ದಯಾರ್ದ್ರಹೃದಯರಾಗಿದ್ದ ಋಷಿಗಳು ಗೋಳಿಟ್ಟರು. ರುರುವಾದರೋ ಅಲ್ಲಿ ನಿಲ್ಲಲಾರದೇ, ಆ ಘೋರದೃಶ್ಯವನ್ನು ನೋಡಲಾರದೇ ಅಲ್ಲಿಂದ ಹೊರಟೇಹೋದನು. ಆ ಎಲ್ಲ ಬ್ರಾಹ್ಮಣಶ್ರೇಷ್ಠರೂ ಅಲ್ಲಿಯೇ ಕುಳಿತುಬಿಟ್ಟರು."

೮ನೆಯ ಅಧ್ಯಾಯವು ಮುಗಿಯಿತು.

೯ನೆಯ ಅಧ್ಯಾಯ ಪೌಲೋಮಪರ್ವ (ಮುಂದುವರಿದಿದೆ.)

## ರುರುವಿನ ಅರ್ಧಾಯುಷ್ಯದಿಂದ ಪ್ರಮದ್ವರೆಯು ಜೀವಿಸಿದುದು : ರುರುವಿನೊಡನೆ ಪ್ರಮದ್ವರೆಯ ವಿವಾಹ : ಸರ್ಪಗಳ ನಾಶಕ್ಕೆ ರುರುವಿನ ನಿಶ್ಚಯ : ರುರು-ಡುಂಡುಭರ ಸಂವಾದ

ಸೌತಿಗಳು ಹೇಳುತ್ತಾರೆ :

**ತೇಷು ತತ್ರೋಪವಿಷ್ಟೇಷು ಬ್ರಾಹ್ಮಣೇಷು ಮಹಾತ್ಮಸು ।**
**ರುರುಶ್ಚುಕ್ರೋಶ ಗಹನಂ ವನಂ ಗತ್ವಾತಿದುಃಖಿತಃ ॥೧॥**

ಮಹಾತ್ಮರಾದ ಬ್ರಾಹ್ಮಣರು ಪ್ರಮದ್ವರೆಯ ಸಮೀಪದಲ್ಲಿ ಕುಳಿತಿರ

ಲಾಗಿ, ರುರುವು ಆಶ್ರಮಕ್ಕೆ ಸಮೀಪದಲ್ಲಿದ್ದ ಗಹನವಾದ ಅರಣ್ಯದ ಮಧ್ಯ ಭಾಗವನ್ನು ಪ್ರವೇಶಿಸಿ ಗಟ್ಟಿಯಾಗಿ ಅಳತೊಡಗಿದನು.

ಶೋಕಾಭಿಭೂತನಾಗಿದ್ದ ಅವನು ಪ್ರಿಯತಮೆಯಾದ ಪ್ರಮದ್ವರೆಯನ್ನು ಬಾರಿ-ಬಾರಿಗೂ ಸ್ಮರಿಸಿಕೊಳ್ಳುತ್ತಾ ಬಿಕ್ಕಿ-ಬಿಕ್ಕಿ ಅಳುತ್ತಾ ಹೇಳಿದನು:

**ಶೇತೇ ಸಾ ಭುವಿ ತನ್ವಙ್ಗೀ ಮಮ ಶೋಕವಿವರ್ಧಿನೀ ।**
**ಬಾನ್ಧವಾನಾಂ ಚ ಸರ್ವೇಷಾಂ ಕಿಂ ನು ದುಃಖಮತಃಪರಮ್ ॥೩॥**

"ಅಯ್ಯೋ! ಕೃಶಾಂಗಿಯಾದ ನನ್ನ ಪ್ರಿಯತಮೆಯು ಗತಪ್ರಾಣಳಾಗಿ ಭೂಮಿಯ ಮೇಲೆ ಬಿದ್ದು ನನ್ನ ಮತ್ತು ಬಂಧುಗಳ ದುಃಖವನ್ನು ಹೆಚ್ಚಿಸುತ್ತಿರುವಳಲ್ಲಾ! ನಾನು ಹೇಗೆ ತಾನೇ ಈ ದುಃಖವನ್ನು ಸಹಿಸಿಕೊಳ್ಳಲಿ? ಇದಕ್ಕಿಂತಲೂ ಹೆಚ್ಚಿನ ದುಃಖವೇನಿದೆ?

**ಯದಿ ದತ್ತಂ ತಪಸ್ತಪ್ತಂ ಗುರವೋ ವಾ ಮಯಾ ಯದಿ ।**
**ಸಮ್ಯಗಾರಾಧಿತಾಸ್ತೇನ ಸಂಜೀವತು ಮಮ ಪ್ರಿಯಾ ॥೪॥**

**ಯಥಾ ಚ ಜನ್ಮಪ್ರಭೃತಿ ಯತಾತ್ಮಾಹಂ ಧೃತವ್ರತಃ ।**
**ಪ್ರಮದ್ವರಾ ತಥಾ ಹ್ಯೇಷಾ ಸಮುತ್ತಿಷ್ಠತು ಭಾಮಿನೀ ॥೫॥**

ನಾನೇನಾದರೂ ದಾನಮಾಡಿದ್ದರೆ, ತಪಸ್ಸು ಮಾಡಿದ್ದರೆ, ತಂದೆ-ತಾಯಿ-ಆಚಾರ್ಯರು–ಇವರೇ ಮೊದಲಾದ ಗುರುಜನರನ್ನು ಸೇವಿಸಿದ್ದರೆ ಅದರಿಂದ ಲಭ್ಯವಾದ ಫಲದಿಂದ ಈ ನನ್ನ ಪ್ರಿಯತಮೆಯಾದ ಪ್ರಮದ್ವರೆಯು ಬದುಕಲಿ. ನಾನು ನನ್ನ ಹುಟ್ಟಿದ ಮೊದಲ್ಗೊಂಡು ಇಂದಿನವರೆಗೆ ಬ್ರಹ್ಮಚರ್ಯದಿಂದಿದ್ದು ಕಾಮ-ಕ್ರೋಧಾದಿಗಳನ್ನು ಜಯಿಸಿದ್ದೇನಾದರೆ ಮತ್ತು ನನ್ನ ಪ್ರತಿಜ್ಞಾವಚನಗಳನ್ನು ಪಾಲಿಸಿದ್ದೇನಾದರೆ, ನನ್ನ ಪ್ರಮದ್ವರೆಯು ಕೂಡಲೇ ಸಚೇತನಳಾಗಿ ಮೇಲೇಳಲಿ."

ಹೀಗೆ ಪತ್ನಿಯ ಸಲುವಾಗಿ ರುರುವು ಬಹಳವಾಗಿ ವಿಲಪಿಸುತ್ತಿರಲಾಗಿ ದೇವತೆಗಳಿಂದ ಕಳುಹಿಸಲ್ಪಟ್ಟ ದೇವದೂತನು ರುರುವಿನ ಮುಂದೆ ಬಂದು ನಿಂತು ಈ ಮಾತನ್ನು ಹೇಳಿದನು :

**ಅಭಿಧತ್ಸೇಹ ಯದ್ವಾಚಾ ರುರೋ ದುಃಖೇನ ತನ್ಮೃಷಾ ।**
**ಯತೋ ಮರ್ತ್ಯಸ್ಯ ಧರ್ಮಾತ್ಮನ್ನಾಯುರಸ್ತಿ ಗತಾಯುಷಃ ॥೭॥**

**ಗತಾಯುರೇಷಾ ಕೃಪಣಾ ಗನ್ಧರ್ವಾಪ್ಸರಸೋಃ ಸುತಾ ।**
**ತಸ್ಮಾಚ್ಛೋಕೇ ಮನಸ್ತಾತ ಮಾಕೃಥಾಸ್ತ್ವಂ ಕಥಂಚನ ॥೮॥**

**ಉಪಾಯಶ್ಚಾತ್ರ ವಿಹಿತಃ ಪೂರ್ವಂ ದೇವೈರ್ಮಹಾತ್ಮಭಿಃ ।**
**ತಂ ಯದೀಚ್ಛಸಿ ಕರ್ತುಂ ತ್ವಂ ಪ್ರಾಪ್ಸ್ಯಸೀಹ ಪ್ರಮದ್ವರಾಮ್ ॥೯॥**

"ಋಷಿಪುತ್ರ! ನಿನ್ನೀ ಮಾತುಗಳಿಂದ ಪ್ರಯೋಜನವೇನೂ ಆಗಲಾರದು. ಏಕೆಂದರೆ : ಈ ಲೋಕದಲ್ಲಿ ಹುಟ್ಟಿದ ಮಾನವನು ತನ್ನ ಆಯುಷ್ಯವು ಕಳೆದುಹೋದೊಡನೆಯೇ ಪುನಃ ಬದುಕಲು ಸಾಧ್ಯವೇ ಇಲ್ಲ. ಗಂಧರ್ವಾಪ್ಸರೆಯರ ಪುತ್ರಿಯಾದ ದಯನೀಯಳಾದ ಪ್ರಮದ್ವರೆಗೂ ಆಯುಷ್ಯವು ತೀರಿಹೋಗಿದೆ. ಆದುದರಿಂದ ಮನಸ್ಸನ್ನು ದುಃಖದಲ್ಲಿ ತೊಡಗಿಸಬೇಡ.

ಆದರೆ, ಮಹರ್ಷಿಯೇ! ಹಿಂದೆ ಮಹಾತ್ಮರಾದ ದೇವತೆಗಳು ಇದಕ್ಕೊಂದು ಉಪಾಯವನ್ನು ಕಲ್ಪಿಸಿದ್ದಾರೆ. ನೀನು ಆ ಉಪಾಯವನ್ನು ಮಾಡಲು ಇಚ್ಛಿಸುವುದಾದರೆ ಪ್ರಮದ್ವರೆಯನ್ನು ಪುನಃ ಪಡೆದುಕೊಳ್ಳುವೆ."

ದೇವದೂತನ ಈ ಮಾತನ್ನು ಕೇಳಿ ರುರುವು ಅವಸರದಿಂದ ಪ್ರಶ್ನಿಸಿದನು :

"ದೇವದೂತ! ದೇವತೆಗಳು ಪ್ರಮದ್ವರೆಯನ್ನು ಬದುಕಿಸಲು ಯಾವ ಉಪಾಯವನ್ನು ಕಲ್ಪಿಸಿದ್ದಾರೆ? ಯಥಾವತ್ತಾಗಿ ಹೇಳು. ಅದನ್ನು ಕೇಳಿದ ನಂತರ ನಾನು ಹಾಗೆಯೇ ಮಾಡುತ್ತೇನೆ. ಈ ಸಮಯದಲ್ಲಿ ನೀನು ನನ್ನನ್ನು ರಕ್ಷಿಸುವುದು ಯೋಗ್ಯವಾಗಿದೆ."

"ಋಷಿಪುತ್ರ! ನಿನ್ನ ಜೀವಿತದ ಅರ್ಧಾಯುಷ್ಯವನ್ನು ಪ್ರಮದ್ವರೆಗಾಗಿ ಕೊಡಬೇಕು. ಇದು ದೈವಸಂಕಲ್ಪ. ಹಾಗೆ ಕೊಡುವುದಾದರೆ ಮಾತ್ರ ನಿನ್ನ ಭಾರ್ಯೆಯು ಬದುಕುವಳು."

ರುರುವು ಆತುರದಿಂದ ಹೇಳಿದನು :

**ಆಯುಷೋಽರ್ಧಂ ಪ್ರಯಚ್ಛಾಮಿ ಕನ್ಯಾಯೈ ಖೇಚರೋತ್ತಮ ।**
**ಶೃಙ್ಗಾರರೂಪಾಭರಣಾ ಸಮುತ್ತಿಷ್ಠತು ಮೇ ಪ್ರಿಯಾ ॥೧೨॥**

"ಖೇಚರೋತ್ತಮ! ಇಗೋ ನನ್ನ ಆಯುಷ್ಯದ ಅರ್ಧಭಾಗವನ್ನು ಈ ಕನ್ಯೆಗೆ ಈಗಲೇ ಕೊಟ್ಟುಬಿಡುತ್ತೇನೆ. ಶೃಂಗಾರ ಮತ್ತು ರೂಪಗಳೇ ಆಭರಣಗಳಾಗಿ ಉಳ್ಳ ನನ್ನ ಪ್ರಿಯೆಯು ಈಗಲೇ ಎದ್ದು ಕುಳಿತುಕೊಳ್ಳಲಿ."

ಶೌನಕರೇ! ಅನಂತರದಲ್ಲಿ ದೇವದೂತನೂ ಮತ್ತು ಪ್ರಮದ್ವರೆಯ ನಿಜಪಿತೃವಾದ ಗಂಧರ್ವರಾಜನಾದ ವಿಶ್ವಾವಸುವೂ ಯಮಧರ್ಮರಾಜನ ಸಮೀಪಕ್ಕೆ ಹೋಗಿ–"ಧರ್ಮರಾಜ! ನಮ್ಮ ಸಲಹೆಯನ್ನು ನೀನು ಸೂಕ್ತ ವೆಂದು ಪರಿಗಣಿಸುವುದಾದ ಪಕ್ಷದಲ್ಲಿ ರುರುವಿನ ಭಾರ್ಯೆಯಾದ ಪ್ರಮದ್ವರೆಯು ರುರುವಿನ ಆಯುಷ್ಯದ ಅರ್ಧಭಾಗವನ್ನು ಪಡೆದುಕೊಂಡು ಪುನಃ ಜೀವಂತಳಾಗಿ ಎದ್ದು ಕುಳಿತುಕೊಳ್ಳಲಿ"–ಎಂದು ಹೇಳಿದರು.

ಧರ್ಮರಾಜನು ಇದಕ್ಕೆ ಉತ್ತರವಾಗಿ :

"ದೇವದೂತ! ಗತಾಯುಷಳಾದ, ರುರುವಿನ ಭಾರ್ಯೆಯಾದ ಪ್ರಮದ್ವರೆಯು ಇನ್ನು ಮುಂದೆ ಭೂಮಿಯಲ್ಲಿ ಜೀವಿಸಿರಬೇಕೆಂದು ನೀನು ಇಚ್ಛಿಸುವೆಯಾದರೆ ನಿನ್ನ ಸೂಚನೆಯಂತೆ ಅವಳು ರುರುವಿನ ಅರ್ಧಾಯುಷ್ಯ ವನ್ನು ಪಡೆದುಕೊಂಡು ಸಪ್ರಾಣಳಾಗಿ ಎದ್ದು ಕುಳಿತುಕೊಳ್ಳಲಿ"–ಎಂದನು.

ಶೌನಕರೇ! ಯಮಧರ್ಮನು ಈ ರೀತಿಯಾಗಿ ತನ್ನ ಒಪ್ಪಿಗೆಯನ್ನಿತ್ತ ನಂತರ ಕನ್ಯೆಯಾದ ಪ್ರಮದ್ವರೆಯು ರುರುವಿನ ಅರ್ಧಾಯುಷ್ಯಪ್ರದಾನದಿಂದ ಮಲಗಿದ್ದವಳು ಎಚ್ಚರಗೊಳ್ಳುವಂತೆ ಮೇಲೆದ್ದು ಕುಳಿತಳು.

ರುರುವಿನ ಭವಿಷ್ಯದಲ್ಲಿ ಅವನು ಅರ್ಧಾಯುಷ್ಯವನ್ನು ತನ್ನ ಪತ್ನಿಗೆ ಕೊಟ್ಟುದು ನಿಜವಾಗಿ ಪರಿಣಮಿಸಿತು. ರುರುವು ಯದ್ಯಪಿ ದೀರ್ಘಾ ಯುಷ್ಮಂತನಾಗಿದ್ದರೂ ಅವನ ದೀರ್ಘಾಯುಷ್ಯದಲ್ಲಿ ಅರ್ಧಭಾಗವು ಪ್ರಮದ್ವರೆಗೆ ಹೊರಟುಹೋಯಿತು.

ವಧೂ-ವರರ ಪಿತೃಗಳಾದ ಸ್ಥೂಲಕೇಶ ಮತ್ತು ಪ್ರಮತಿಗಳು ಶುಭ ವಾದ ಒಂದು ದಿನದಲ್ಲಿ ರುರು-ಪ್ರಮದ್ವರೆಯರ ವಿವಾಹವನ್ನು ನೆರವೇರಿಸಿ ದರು.

ಪರಸ್ಪರ ಹಿತೈಷಿಗಳಾದ ನೂತನದಂಪತಿಗಳು ಮುಂದಿನ ದಿನಗಳನ್ನು

ಬಹಳ ಆನಂದದಿಂದ ಕಳೆದರು. ಪದ್ಮದ ಕೇಸರದಂತೆ ಕಾಂತಿಮಂತಳಾಗಿದ್ದ, ಬಹುಕಷ್ಟದಿಂದ ಪಡೆದುಕೊಳ್ಳಲು ಸಾಧ್ಯಳಾದ ಪ್ರಮದ್ವರೆಯನ್ನು ಭಾರ್ಯೆಯನ್ನಾಗಿ ಪಡೆದುಕೊಂಡನಂತರ ರುರುವು ತನ್ನ ಅಲ್ಪಕಾಲದ ವಿರಹವೇದನೆಗೆ ಕಾರಣವು ಸರ್ಪವೆಂದು ಮನಸ್ಸಿನಲ್ಲಿಟ್ಟುಕೊಂಡು ಸರ್ಪಗಳ ವಂಶವನ್ನೇ ನಾಶಮಾಡುವುದಾಗಿ ವ್ರತತೊಟ್ಟನು. ಸರ್ಪಗಳನ್ನು ನೋಡುತ್ತಿದ್ದಂತೆಯೇ ಯಾವುದೋ ಸರ್ಪವು ವಿಧಿಪ್ರಚೋದಿತವಾಗಿ ತನ್ನ ಭಾರ್ಯೆಯನ್ನು ಕಡಿದ ಕಹಿಯಾದ ಪ್ರಸಂಗವು ರುರುವಿನ ಸ್ಮರಣೆಗೆ ಬರುತ್ತಿದ್ದಿತು. ಒಡನೆಯೇ ಅವನ ಕೋಪವು ಉಲ್ಬಣಿಸುತ್ತಿತ್ತು. ಓಡಿಹೋಗಿ ಸರ್ಪಗಳ ಬಾಲವನ್ನು ಹಿಡಿದು ಯಥಾಶಕ್ತಿ ಗರ-ಗರನೆ ತಿರುಗಿಸಿ ನೆಲದ ಮೇಲೆ ಅಪ್ಪಳಿಸಿಬಿಡುತ್ತಿದ್ದನು.

ಹೀಗೆಯೇ ಇರುತ್ತಿರಲಾಗಿ ಬ್ರಾಹ್ಮಣನಾದ ರುರುವು ಒಮ್ಮೆ ಕಾರಣಾಂತರದಿಂದ ಒಂದು ವಿಶಾಲವಾದ ಅರಣ್ಯವನ್ನು ಪ್ರವೇಶಿಸಿದನು. ಹೋಗುತ್ತಿದ್ದ ಹಾದಿಯಲ್ಲಿ ತುಂಬಾ ವಯಸ್ಸಾಗಿದ್ದ ಡುಂಡುಭಜಾತಿಯ ಸರ್ಪವೊಂದು ಮಲಗಿದ್ದುದನ್ನು ರುರುವು ನೋಡಿದನು. ಹಾವುಗಳನ್ನು ಕಂಡೊಡನೆಯೇ ಕೊಲ್ಲುವುದೊಂದೇ ಅವನ ಪ್ರತಿಜ್ಞೆಯಾಗಿತ್ತಲ್ಲವೇ? ಸರ್ಪವನ್ನು ಕಂಡೊಡನೆಯೇ ಬಹುಕುಪಿತನಾದ ರುರುವು ಕಾಲದಂಡೋಪಮವಾಗಿದ್ದ ದಂಡವನ್ನು ಮೇಲೆತ್ತಿ, ಡುಂಡುಭದ ತಲೆಯ ಮೇಲೆ ಪ್ರಹರಿಸಲಿದ್ದಾಗ ಡುಂಡುಭವು ರುರುವನ್ನು ಪ್ರಶ್ನಿಸಿತು :

"ತಪೋಧನನೇ! ನಾನು ನಿನಗೆ ಯಾವ ವಿಧವಾದ ಅಪರಾಧವನ್ನೂ ಮಾಡಿರುವುದಿಲ್ಲ. ಕೋಪಾವೇಶಪೂರಿತನಾಗಿ ನೀನು ಯಾವ ಕಾರಣಕ್ಕಾಗಿ ನನ್ನನ್ನು ಕೊಲ್ಲಲು ಉದ್ಯುಕ್ತನಾಗಿರುವೆ?"

೯ನೆಯ ಅಧ್ಯಾಯವು ಮುಗಿಯಿತು.

## ರುರು-ಡುಂಡುಭರ ಸಂಭಾಷಣೆ

ರುರುವು ಹೇಳುತ್ತಾನೆ :

**ಮಮ ಪ್ರಾಣಸಮಾ ಭಾರ್ಯಾ ದಷ್ಟಾಸೀದ್ಭುಜಗೇನ ಹ ।**
**ತತ್ರ ಮೇ ಸಮಯೋ ಘೋರ ಆತ್ಮನೋರಗ ವೈ ಕೃತಃ ॥೧॥**

**ಭುಜಙ್ಗಂ ವೈ ಸದಾ ಹನ್ಯಾಂ ಯಂ ಯಂ ಪಶ್ಯೇಯಮಿತ್ಯುತ ।**
**ತತೋಽಹಂ ತ್ವಾಂ ಜಿಘಾಂಸಾಮಿ ಜೀವಿತೇನಾದ್ಯ ಮೋಕ್ಷ್ಯಸೇ ॥೨॥**

"ನಿರಪರಾಧಿನಿಯಾಗಿದ್ದ, ನನ್ನ ಪ್ರಾಣಸ್ವರೂಪಳಾಗಿದ್ದ ನನ್ನ ಪ್ರಿಯ ತಮೆಯನ್ನು ಸರ್ಪವೊಂದು ಕಚ್ಚಿತು. ಅಂದಿನಿಂದ ನಾನು ನನ್ನ ಕಣ್ಣಿಗೆ ಕಂಡ ಸರ್ಪಗಳನ್ನೆಲ್ಲಾ ಕೊಲ್ಲುವುದಾಗಿ ಘೋರವಾದ ಪ್ರತಿಜ್ಞೆಯನ್ನು ಮಾಡಿದ್ದೇನೆ. ಈ ಕಾರಣದಿಂದಲೇ ನಾನು ನಿನ್ನನ್ನೂ ಸಹ ಕೊಲ್ಲಲು ಉದ್ಯುಕ್ತನಾಗಿದ್ದೇನೆ. ಈ ಕ್ಷಣದಲ್ಲಿಯೇ ನೀನು ಜೀವಿತದಿಂದ ಬಿಡುಗಡೆಯನ್ನು ಹೊಂದುವೆ."

ಸರ್ಪವು ಹೇಳಿತು :

"ಇರಬಹುದು! ಆದರೆ ನಾನು ಆಕೃತಿಯಲ್ಲಿ ಮಾತ್ರ ಸರ್ಪವೇ ಹೊರತು ವಿಷಸರ್ಪವಲ್ಲ. ನನ್ನಿಂದ ಮತ್ತು ನನ್ನ ಜಾತಿಯವರಿಂದ ಯಾರಿಗೂ ಯಾವ ತೊಂದರೆಯೂ ಆಗಲಾರದು. ಈ ಕಾರಣದಿಂದ ವಿವೇಚನಾಪರನಾದ ನೀನು ನನ್ನನ್ನು ಕೊಲ್ಲುವುದು ಧರ್ಮವಲ್ಲ.

ಬ್ರಾಹ್ಮಣೋತ್ತಮ! ಇದೊಂದು ಆಶ್ಚರ್ಯಕರವಾದ ಸಂಗತಿಯಾಗಿದೆ. ಅನರ್ಥಗಳನ್ನು ಅನುಭವಿಸಬೇಕಾಗಿ ಬಂದಾಗ ಈ ಡುಂಡುಭಜಾತಿಯ ಸರ್ಪಗಳೂ ಇತರ ಸರ್ಪಗಳೊಡನೆ ಪರಿಗಣಿತವಾಗುತ್ತವೆ. ದುಃಖದಲ್ಲಿ ಮಾತ್ರ ಇವು ಇತರ ಸರ್ಪಗಳೊಡನೆ ಪಾಲುಗೊಳ್ಳುತ್ತವೆ. ಸುಖಸಮಯದಲ್ಲಿ ಮಾತ್ರ ಪ್ರತ್ಯೇಕವಾಗಿಯೇ ಉಳಿಯುತ್ತವೆ. ವಿಷಸರ್ಪಗಳಿಗೆ ಸಿಕ್ಕುವ ಸುಖವು ಈ ಡುಂಡುಭಸರ್ಪಗಳಿಗೆ ಸಿಕ್ಕುವುದಿಲ್ಲ. ಸರ್ವಜ್ಞನಾದ ನೀನು ಇವೆಲ್ಲವನ್ನೂ ಪರ್ಯಾಲೋಚಿಸಿ ಡುಂಡುಭಜಾತಿಯ ಸರ್ಪಗಳನ್ನು ಹಿಂಸಿಸದಿರುವುದು ಯೋಗ್ಯವಾಗಿದೆ."

ಶೌನಕರೇ! ಡುಂಡುಭಸರ್ಪವು ಹೇಳಿದುದನ್ನು ಕೇಳಿದ ರುರುವು-ಭಯದಿಂದ ಉದ್ವಿಗ್ನವಾಗಿದ್ದ ಆ ಡುಂಡುಭಸರ್ಪವನ್ನು ಯಾವನೋ ಒಬ್ಬ ಶಾಪಗ್ರಸ್ತನಾದ ಋಷಿಯಿರಬಹುದೆಂದು ಭಾವಿಸಿ ಕೊಲ್ಲಲಿಲ್ಲ. ಡುಂಡುಭ ಸರ್ಪವನ್ನು ಆಶ್ವಾಸನೆಯ ಮಾತುಗಳಿಂದ ಸಮಾಧಾನಪಡಿಸುತ್ತಾ ಪ್ರಶ್ನಿಸಿದನು:

"ಭುಜಂಗಮ! ಈ ವಿಧವಾದ ಸರ್ಪಯೋನಿಯಲ್ಲಿ ಜನ್ಮತಾಳಿರುವ ನೀನು ಯಾರು? ನಿನ್ನ ಮಾತನ್ನು ಕೇಳಿದರೆ ನೀನು ನಿಜಸರ್ಪವಲ್ಲವೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಆದುದರಿಂದ ಎಲ್ಲ ವಿಷಯಗಳನ್ನೂ ಮರೆ ಮಾಚದೇ ಹೇಳು."

"ಮಹಾಮುನಿಯೇ! ನಾನು ಹಿಂದೆ ಸಹಸ್ರಪಾದನೆಂಬ ಋಷಿಯಾಗಿದ್ದೆನು. ಬ್ರಾಹ್ಮಣನೊಬ್ಬನ ಶಾಪದಿಂದಾಗಿ ಸರ್ಪತ್ವವನ್ನು ಹೊಂದಿದ್ದೇನೆ."

"ಬ್ರಾಹ್ಮಣನು ನಿನ್ನ ವಿಷಯದಲ್ಲಿ ಕೋಪಗೊಂಡಿದ್ದೇಕೆ? ಮತ್ತು ಶಾಪಕೊಟ್ಟಿದ್ದೇಕೆ? ಇದೇ ಶರೀರದಲ್ಲಿ ನೀನು ಇನ್ನೂ ಎಷ್ಟು ದಿನಗಳು ಕಳೆಯಬೇಕಾಗಿದೆ?"

೧೦ನೆಯ ಅಧ್ಯಾಯವು ಮುಗಿಯಿತು.

೧೧ನೆಯ ಅಧ್ಯಾಯ ಪೌಲೋಮಪರ್ವ (ಮುಂದುವರಿದಿದೆ)

## ಡುಂಡುಭನ ಆತ್ಮಕಥೆ: ಡುಂಡುಭನಿಂದ ರುರುವಿಗೆ ಅಹಿಂಸೋಪದೇಶ

ಡುಂಡುಭಸರ್ಪರೂಪನಾದ ಸಹಸ್ರಪಾದನು ಹೇಳುತ್ತಾನೆ :

**ಸಖಾ ಬಭೂವ ಮೇ ಪೂರ್ವಂ ಖಗಮೋ ನಾಮ ವೈ ದ್ವಿಜಃ ।**
**ಭೃಶಂ ಸಂಶಿತವಾಕ್ತಾತ ತಪೋಬಲಸಮನ್ವಿತಃ ॥೧॥**

"ವಿಪ್ರೋತ್ತಮ! ಹಿಂದೆ ನನಗೆ ಖಗಮನೆಂಬ ಹೆಸರಿನ ಬ್ರಾಹ್ಮಣನು ಸ್ನೇಹಿತನಾಗಿದ್ದನು. ಅವನು ತಪೋಬಲದಿಂದ ಯುಕ್ತನಾಗಿದ್ದನು. ಆದರೆ ಅವನು ಗಡಸುಮಾತಿನವನಾಗಿದ್ದನು.

ನಾನು ಒಂದು ದಿನ ನನ್ನ ಪ್ರಿಯಮಿತ್ರನಾದ ಖಗಮನ ಮನೆಗೆ ಯಾವುದೋ ಒಂದು ಯಜ್ಞಕ್ಕೆ ಆಹ್ವಾನವನ್ನೀಯಲು ಹೋಗಿದ್ದೆನು. ಆ ವೇಳೆಗೆ ಸರಿಯಾಗಿ ಖಗಮನು ದೈನಂದಿನವಾದ ಅಗ್ನಿಹೋತ್ರಕಾರ್ಯದಲ್ಲಿ ನಿರತನಾಗಿದ್ದನು. ನಾನು ಅಲ್ಲಿಯೇ ಇದ್ದ ದರ್ಭೆಯಲ್ಲಿ ಒಂದು ಹಿಡಿಯನ್ನು ತೆಗೆದುಕೊಂಡು ಅದನ್ನು ಹಾವಿನ ಆಕಾರವಾಗಿ ಸುತ್ತಿ, ಆ ಕೃತಕಸರ್ಪವನ್ನು ಖಗಮನ ಹಿಂಬದಿಯಿಂದ ಎಸೆದೆನು.

ನನ್ನ ಕೃತಕಸರ್ಪದ ಪರಿಣಾಮವಾಗಿ ಖಗಮನು ಭಯಪಟ್ಟಿದ್ದು ಮಾತ್ರವಲ್ಲದೇ ಪ್ರಜ್ಞಾಹೀನನೂ ಆದನು.

ಕೆಲವು ಘಳಿಗೆಗಳು ಕಳೆದನಂತರ ಖಗಮನಿಗೆ ಪ್ರಜ್ಞೆಯುಂಟಾಯಿತು. ಸುತ್ತಲೂ ನೋಡಿದನು. ದರ್ಭೆಯಿಂದ ಮಾಡಿದ ಕೃತಕಸರ್ಪವು ಹತ್ತಿರ ದಲ್ಲಿಯೇ ಬಿದ್ದಿದ್ದಿತು. ನನ್ನನ್ನು ನೋಡುತ್ತಲೇ ಖಗಮನಿಗೆ ಬಹಳವಾದ ಕೋಪವುಂಟಾಯಿತು. "ನನ್ನನ್ನು ಕೃತಕಸರ್ಪದಿಂದ ಪ್ರಜ್ಞಾಹೀನನನ್ನಾಗಿ ಮಾಡಿದೆಯಾದ ಕಾರಣ ನೀನು ಕೂಡ ವಿಷರಹಿತವಾದ ಸರ್ಪವಾಗು"– ಎಂದು ಖಗಮನು ನನ್ನನ್ನು ಶಪಿಸಿಬಿಟ್ಟನು.

ಅವನ ತಪಃಶಕ್ತಿಯು ಎಷ್ಟೆಂಬುದು ನನಗೆ ತಿಳಿದಿತ್ತು. ಒಡನೆಯೇ ಉದ್ವಿಗ್ನಹೃದಯನಾದ ನಾನು ಬದ್ಧಾಂಜಲಿಯಾಗಿ ಮೃದುವಾದ ಮಾತಿನಿಂದ ವಿನೀತನಾಗಿ ಹೇಳಿದೆನು : "ಖಗಮ! ನಾನು ನಿನ್ನನ್ನು ಪ್ರಜ್ಞಾಹೀನನಾಗುವಂತೆ ಮಾಡಲು ಕೃತಕಸರ್ಪವನ್ನು ನಿನ್ನ ಮೇಲೆ ಬಿಡಲಿಲ್ಲ. ನೀನು ನನ್ನ ಆಪ್ತಮಿತ್ರನು. ನಾವಿಬ್ಬರೂ ಒಂದೆರಡು ನಿಮಿಷಗಳ ಕಾಲ ನಕ್ಕುನಲಿಯಬೇಕೆಂಬ ಅಪೇಕ್ಷೆಯಿಂದ ಪರಿಹಾಸಕ್ಕಾಗಿ ನಾನೀ ಕಾರ್ಯವನ್ನು ಮಾಡಿದೆನು. ನನ್ನನ್ನು ದಯಮಾಡಿ ಕ್ಷಮಿಸು. ಮಿತ್ರನ ಮೇಲೆ ಅಭಿಮಾನವಿಟ್ಟು ನೀನಿತ್ತಿರುವ ಶಾಪವನ್ನು ಹಿಂತೆಗೆದುಕೋ."

ಬಹಳ ಉದ್ವಿಗ್ನನಾಗಿದ್ದ ನನ್ನನ್ನು ಕಂಡು ಭ್ರಾಂತನಾಗಿದ್ದ ಆ ತಪಸ್ವಿಯು ಸುದೀರ್ಘವಾದ ಮತ್ತು ಉಷ್ಣವಾದ ನಿಟ್ಟುಸಿರುಬಿಡುತ್ತಾ ಹೇಳಿದನು :

"ಮಿತ್ರ! ನಿನಗೆ ತಿಳಿದಿರುವಂತೆಯೇ ನಾನು ಇದುವರೆಗೂ ಯಾವ

ಕಾರಣಕ್ಕಾಗಿಯೂ ಸುಳ್ಳನ್ನಾಡಿಲ್ಲ. ಆದುದರಿಂದ ಈಗ ನಾನು ಹೇಳಿರುವ ಮಾತೂ ಸುಳ್ಳಾಗದು. ನಾನು ಹೇಳಿದಂತೆ ನಡೆದೇ ತೀರುವುದು. ಆದರೂ ಶಾಪಪರಿಹಾರದ ವಿಷಯವಾಗಿ ನಿನ್ನೊಡನೆ ಕೆಲವು ಮಾತುಗಳನ್ನು ಹೇಳು ತ್ತೇನೆ. ಆ ಮಾತುಗಳನ್ನು ನೀನು ಕೇಳುವುದು ಮಾತ್ರವಲ್ಲದೇ ನಿನ್ನ ಹೃದಯ ದಲ್ಲೂ ಅವನ್ನು ಧಾರಣೆಮಾಡಿಕೊಂಡಿರು. ಪ್ರಮತಿಗೆ ರುರುವೆಂಬ ಹೆಸರಿನ ಶುದ್ಧಚರಿತನಾದ ಮಗನೊಬ್ಬನು ಹುಟ್ಟುತ್ತಾನೆ. ಅವನನ್ನು ನೋಡಿ ದೊಡನೆಯೇ ನೀನು ಈ ಶಾಪದಿಂದ ವಿಮೋಚನೆಯನ್ನು ಹೊಂದುವೆ."

ನನ್ನ ಮಿತ್ರನು ಹೇಳಿದ್ದಂತೆಯೇ ಪ್ರಮತಿಯ ಮಗನಾದ, ರುರುವೆಂದು ಪ್ರಸಿದ್ಧನಾಗಿರುವವನು ನೀನೇ ಎಂದು ನಾನು ತಿಳಿಯುತ್ತೇನೆ. ನಿನ್ನ ದರ್ಶನದಿಂದ ಶಾಪವಿಮೋಚನೆಯಾಗಿ ಸ್ವಸ್ವರೂಪವನ್ನು ಪಡೆದು ನಿನ್ನ ಹಿತಾರ್ಥವಾಗಿ ಕೆಲವು ಮಾತುಗಳನ್ನಾಡುತ್ತೇನೆ."

ಡುಂಡುಭನು ಈ ರೀತಿ ಹೇಳಿ ಹಾವಿನ ಶರೀರವನ್ನು ಬಿಟ್ಟು ತೇಜಸ್ವಿ ಯಾದ ಋಷಿಯಾಗಿ ರುರುವಿನ ಮುಂದೆ ನಿಂತು, ಅಪ್ರತಿಮತೇಜಸ್ಕನಾದ ರುರುವನ್ನು ಕುರಿತು ಹೀಗೆ ಹೇಳಿದನು :

"ರುರುಮಹರ್ಷಿಯೇ! ನೀನೇ ಪ್ರಮತಿಯ ಮಗನು. ನಿನ್ನ ದರ್ಶನ ದಿಂದ ನನಗಿಂದು ಶಾಪವಿಮೋಚನೆಯಾಯಿತು. ನಿನಗೆ ಶ್ರೇಯಸ್ಕರವಾದ ಒಂದೆರಡು ಮಾತುಗಳನ್ನಾಡಿ ನಾನು ನನ್ನ ಆಶ್ರಮಕ್ಕೆ ಹೋಗುವೆನು.

**ಅಹಿಂಸಾ ಪರಮೋ ಧರ್ಮಃ ಸರ್ವಪ್ರಾಣಭೃತಾಂ ವರ ।**
**ತಸ್ಮಾತ್ಪ್ರಾಣಭೃತಃ ಸರ್ವಾನ್ನ ಹಿಂಸ್ಯಾದ್ಬ್ರಾಹ್ಮಣಃ ಕ್ವಚಿತ್ ।**
**ಬ್ರಾಹ್ಮಣಃ ಸೌಮ್ಯ ಏವೇಹ ಭವತೀತಿ ಪುರಾ ಶ್ರುತಿಃ ॥೧೪॥**

**ವೇದವೇದಾಙ್ಗವಿನ್ನಾಮ ಸರ್ವಭೂತಾಭಯಪ್ರದಃ ।**
**ಅಹಿಂಸಾ ಸತ್ಯವಚನಂ ಕ್ಷಮಾ ಚೇತಿ ವಿನಿಶ್ಚಿತಮ್ ॥೧೫॥**

**ಬ್ರಾಹ್ಮಣಸ್ಯ ಪರೋ ಧರ್ಮೋ ವೇದಾನಾಂ ಧಾರಣಾಪಿ ಚ ।**
**ಕ್ಷತ್ರಿಯಸ್ಯ ಹಿ ಯೋ ಧರ್ಮಃ ಸ ಹಿ ನೇಷ್ಯೇತ ವೈ ತವ ॥೧೬॥**

**ದಣ್ಡಧಾರಣಮುಗ್ರತ್ವಂ ಪ್ರಜಾನಾಂ ಪರಿಪಾಲನಮ್ ।**
**ತದಿದಂ ಕ್ಷತ್ರಿಯಸ್ಯಾಸೀತ್ಕರ್ಮ ವೈ ಶೃಣು ಮೇ ರುರೋ ॥೧೭॥**

ಸಕಲಪ್ರಾಣಿಗಳಲ್ಲಿಯೂ ಶ್ರೇಷ್ಠನಾದವನೇ! ಅಹಿಂಸೆಯೆಂಬುದೇ ಎಲ್ಲ ಧರ್ಮಗಳಿಗಿಂತಲೂ ಪರಮಶ್ರೇಷ್ಠವಾದ ಧರ್ಮವಾಗಿದೆ. ಆದುದರಿಂದಲೇ ಬ್ರಾಹ್ಮಣನಾದವನು ಪ್ರಾಣಿಹಿಂಸೆಯನ್ನೆಂದಿಗೂ ಮಾಡಬಾರದು. ಬ್ರಾಹ್ಮಣನು ಸೌಮ್ಯಸ್ವಭಾವದವನೆಂಬುದು ಹಿಂದಿನಿಂದಲೂ ಪ್ರಖ್ಯಾತವಾಗಿದೆ. ವೇದ-ವೇದಾಂಗವಿದನಾಗಿರುವುದರಿಂದಲೇ ಅವನು ಸರ್ವಭೂತಗಳಿಗೂ ಅಭಯಪ್ರದನೆಂದೂ ಅಹಿಂಸೆ, ಸತ್ಯನಿಷ್ಠೆ ಮತ್ತು ಕ್ಷಮೆ–ಇವುಗಳೇ ಅವನ ಮುಖ್ಯಗುಣಗಳಾಗಿರುವುವೆಂದೂ ನಿಶ್ಚಯಮಾಡಬಹುದಾಗಿದೆ. ವೇದಾಭ್ಯಾಸ ಮಾಡುವುದು ಮತ್ತು ವೇದಾಂಗಗಳನ್ನು ತಿಳಿದುಕೊಳ್ಳುವುದು ಬ್ರಾಹ್ಮಣನಿಗೆ ಶ್ರೇಷ್ಠವಾದ ಧರ್ಮಗಳಾಗಿವೆ. ಕ್ಷತ್ರಿಯನಿಗೆ ಯಾವ ಧರ್ಮವಿರುವುದೋ ಆ ಧರ್ಮವು ನಿನಗೆ ಉಚಿತವಲ್ಲ. ದಂಡಧಾರಣೆ, ಉಗ್ರತೆ, ಪ್ರಜಾಪಾಲನೆ–ಇವುಗಳು ಕ್ಷತ್ರಿಯನ ಧರ್ಮಗಳು.

ದ್ವಿಜಶ್ರೇಷ್ಠನೇ! ಜನಮೇಜಯನ ಸರ್ಪಯಾಗದ ಸಮಯದಲ್ಲಿ ಅಸಂಖ್ಯಾತವಾದ ಸರ್ಪಗಳಿಗೆ ಹಿಂಸೆಯಾಯಿತು. ಅನೇಕಸರ್ಪಗಳು ಪ್ರಾಣ ತೊರೆದುವು. ಆ ಸಮಯದಲ್ಲಿ ಭೀತಿಹೊಂದಿದ್ದ ಸರ್ಪಗಳ ರಕ್ಷಣೆಯು ತಪಸ್ಸಿನ ಬಲವನ್ನು ಹೊಂದಿದ್ದ, ವೀರ್ಯಸಂಪನ್ನನಾಗಿದ್ದ, ವೇದ-ವೇದಾಂಗ ಪಾರಂಗತನಾಗಿದ್ದ ಆಸ್ತೀಕನೆಂಬ ಬ್ರಾಹ್ಮಣಶ್ರೇಷ್ಠನಿಂದಲೇ ಆಯಿತು.”

೧೧ನೆಯ ಅಧ್ಯಾಯವು ಮುಗಿಯಿತು.

## ಜನಮೇಜಯನ ಸರ್ಪಸತ್ರದ ವಿಷಯದಲ್ಲಿ ರುರುವಿನ ಜಿಜ್ಞಾಸೆ

ರುರುವು ಸಹಸ್ರಪಾದನನ್ನು ಪ್ರಶ್ನಿಸುತ್ತಾನೆ :

**ಕಥಂ ಹಿಂಸಿತವಾನ್ಸರ್ಪಾನ್ಸ ರಾಜಾ ಜನಮೇಜಯಃ ।**
**ಸರ್ಪಾ ವಾ ಹಿಂಸಿತಾಸ್ತತ್ರ ಕಿಮರ್ಥಂ ದ್ವಿಜಸತ್ತಮ ॥೧॥**

"ದ್ವಿಜಶ್ರೇಷ್ಠನೇ! ಜನಮೇಜಯರಾಜನು ಯಾವ ಕಾರಣದಿಂದ ಸರ್ಪಗಳನ್ನು ಹಿಂಸಿಸಿದನು? ಕೇವಲ ಸರ್ಪಗಳನ್ನೇ ರಾಜನು ಹಿಂಸಿಸಲು ಕಾರಣವಾದರೂ ಏನು? ಧೀಮಂತನಾದ ಆಸ್ತೀಕನೇಕೆ ಆ ಸರ್ಪಗಳನ್ನು ವಿಮೋಚನೆಮಾಡಿದನು? ಈ ಎಲ್ಲ ವಿಷಯಗಳನ್ನೂ ಸವಿಸ್ತಾರವಾಗಿ ಕೇಳಲಿಚ್ಛಿಸಿದ್ದೇನೆ."

"ಬ್ರಾಹ್ಮಣೋತ್ತಮ! ಆಸ್ತೀಕನ ಮಹಾಚರಿತ್ರೆಯನ್ನು ಹೇಳುವುದರಲ್ಲಿ ನಿಷ್ಣಾತರಾದ ಬ್ರಾಹ್ಮಣರಿಂದ ನೀನು ಆ ಕಥೆಯನ್ನು ಕೇಳಬಹುದು" ಎಂದು ಹೇಳಿ ಸಹಸ್ರಪಾದನು ಅಂತರ್ಧಾನಹೊಂದಿದನು.

ಸಹಸ್ರಪಾದನನ್ನು ಹುಡುಕಿ ಅವನಿಂದಲೇ ಆಸ್ತೀಕನ ಕಥೆಯನ್ನು ಕೇಳಬೇಕೆಂದು ರುರುವು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾಗಿ ಹೋಗಲಾಗಿ, ಬಹಳ ಆಯಾಸಗೊಂಡು ಭೂಮಿಯ ಮೇಲೆ ಬಿದ್ದುಬಿಟ್ಟನು. ಅಲೆದಲೆದು ಆಯಾಸಗೊಂಡಿದ್ದ ಅವನಿಗೆ ಕ್ಷಣಕಾಲ ಪ್ರಜ್ಞೆತಪ್ಪಿದಂತೆಯೂ ಆಗಿದ್ದಿತು. ಸಹಸ್ರಪಾದನು ಹೇಳಿದುದನ್ನು ರುರುವು ಪುನಃ ಪುನಃ ಚಿಂತಿಸುತ್ತಿದ್ದನು. ಮೂರ್ಛೆಯು ತಿಳಿದ ಮೇಲೆ ಕಡೆಗೊಮ್ಮೆ ಮನೆಗೆ ಬಂದು ತನ್ನ ತಂದೆಯಾದ ಪ್ರಮತಿಯನ್ನು ಆಸ್ತೀಕನ ಕಥೆಯನ್ನು ಹೇಳುವಂತೆ ಪ್ರಾರ್ಥಿಸಿದನು. ಧರ್ಮಬೋಧಕವೂ, ಪುಣ್ಯಪ್ರದವೂ ಆದ ಆಸ್ತೀಕನ ಕಥೆಯನ್ನು ಸಾಂಗೋಪಾಂಗವಾಗಿ ರುರುವು ತಂದೆಯಿಂದ ತಿಳಿದುಕೊಂಡನು."

೧೨ನೆಯ ಅಧ್ಯಾಯವು ಮುಗಿಯಿತು.

# ಜರತ್ಕಾರುವು ಪಿತೃದೇವತೆಗಳ ಅನುರೋಧದಂತೆ ವಿವಾಹವಾಗಲು ಒಪ್ಪಿದುದು

ಶೌನಕರು ಸೌತಿಗಳನ್ನು ಪ್ರಶ್ನಿಸುತ್ತಾರೆ :

**ಕಿಮರ್ಥಂ ರಾಜಶಾರ್ದೂಲಃ ಸ ರಾಜಾ ಜನಮೇಜಯಃ ।**
**ಸರ್ಪಸತ್ರೇಣ ಸರ್ಪಾಣಾಂ ಗತೋಽನ್ತಂ ತದ್ವದಸ್ವ ಮೇ ॥೧॥**

"ಮಹರ್ಷೇ! ರಾಜಾ ಜನಮೇಜಯನು ಯಾವ ಕಾರಣದಿಂದಾಗಿ ಸರ್ಪಯಾಗದ ಮೂಲಕ ಸರ್ಪಕೋಟಿಯನ್ನು ವಿನಾಶಗೊಳಿಸಲು ನಿಶ್ಚಯಿಸಿ ದನು? ಈ ವಿಷಯವನ್ನು ನಮಗೆ ಸವಿಸ್ತಾರವಾಗಿ ಹೇಳುವವನಾಗು. ದ್ವಿಜಶ್ರೇಷ್ಠನಾದ ಆಸ್ತೀಕನು ಸರ್ಪಯಾಗವನ್ನು ತಡೆಯಲು ಕಾರಣವೇನು? ಸರ್ಪಯಾಗವನ್ನು ಮಾಡಿದ ಜನಮೇಜಯನ ತಂದೆಯು ಯಾರು? ಮತ್ತು ಸರ್ಪಯಾಗವನ್ನು ನಿಲ್ಲಿಸಿದ ವಿಪ್ರಶ್ರೇಷ್ಠನ ಕುಲ-ಗೋತ್ರಗಳೇನು? ಎಲ್ಲವನ್ನೂ ವಿಶದವಾಗಿ ಹೇಳು."

"ಬ್ರಾಹ್ಮಣೋತ್ತಮರೇ! ಆಸ್ತೀಕನ ಕಥೆಯು ಬಹಳ ದೀರ್ಘವಾದು ದಾದರೂ ಯಥಾವತ್ತಾಗಿಯೇ ಆ ಮಹಾತ್ಮನ ಕಥೆಯನ್ನು ಹೇಳುವೆನು, ಕೇಳಿರಿ."

"ಸೌತಿಯೇ! ನಾನೂ ಮನೋಹರವಾದ ಪುರಾಣಮಹರ್ಷಿಯಾದ, ಯಶೋವಂತನಾದ, ಬ್ರಾಹ್ಮಣನಾದ ಆಸ್ತೀಕನ ಕಥೆಯನ್ನು ಕೇಳಲು ಹೆಚ್ಚಿನ ಆಸಕ್ತಿಯುಳ್ಳವನಾಗಿದ್ದೇನೆ."

ಸೌತಿಗಳು ಹೇಳುತ್ತಾರೆ :

"ನೈಮಿಷಾರಣ್ಯದಲ್ಲಿ ಕೃಷ್ಣದ್ವೈಪಾಯನರು ಹೇಳಿದ ಇತಿಹಾಸವನ್ನು ಪುರಾಣವೆಂದೇ ಹೇಳುತ್ತಾರೆ. ಮೊಟ್ಟಮೊದಲು ಈ ಕಥೆಯು ನೈಮಿಷಾ ರಣ್ಯದ ಋಷಿಗಳ ಆಶಯದಂತೆ ನನ್ನ ತಂದೆಯಾದ, ವ್ಯಾಸಶಿಷ್ಯರಾದ, ಮೇಧಾವಿಗಳಾದ ಲೋಮಹರ್ಷಣರಿಂದ ಹೇಳಲ್ಪಟ್ಟಿತು. ನಾನೂ ಸಹ ಆಗ ಅಲ್ಲಿಯೇ ಇದ್ದು ನಮ್ಮ ತಂದೆಯು ಆಗ ಹೇಳಿದ ಕಥೆಯನ್ನು ಸಂಪೂರ್ಣ

ವಾಗಿ ಕೇಳಿದ್ದೆನು. ಶೌನಕರೇ! ನೀವೀಗ ಅದೇ ಕಥೆಯನ್ನು ಕೇಳಲು ಉತ್ಸುಕರಾಗಿರುವುದರಿಂದ ನಾನು ಹೇಗೆ ಕೇಳಿದ್ದೆನೋ ಹಾಗೆಯೇ ಅದನ್ನು ನಿಮಗೂ ಹೇಳುವೆನು. ಸಕಲಪಾಪಹರವಾದ ಈ ಕಥೆಯನ್ನು ನೀವೂ ಸಹ ಏಕಾಗ್ರತೆಯಿಂದ ಕೇಳುವವರಾಗಿರಿ.

ಆಸ್ತೀಕನ ತಂದೆಯು ಪ್ರಜಾಪತಿಗೆ ಸಮವಾದ ಪ್ರಭಾವವುಳ್ಳವನು. ಬ್ರಹ್ಮಚಾರಿ. ನಿಯತವಾದ ಆಹಾರವುಳ್ಳವನಾಗಿದ್ದನು. ಯಾವಾಗಲೂ ಉಗ್ರವಾದ ತಪಸ್ಸಿನಲ್ಲಿಯೇ ನಿರತನಾಗಿರುತ್ತಿದ್ದನು. ಅವನ ಹೆಸರು ಜರತ್ಕಾರು. ಅವನು ಊರ್ಧ್ವರೇತಸ್ಕನು ; ಮಹಾತಪಸ್ವಿಯು. ಅವನುಯಾಯಾಯಾವರ* ವಂಶೀಯರಲ್ಲಿ ಶ್ರೇಷ್ಠನಾದವನು. ಬಹುಧಾರ್ಮಿಕನು. ಬಹಳ ಕಠೋರವಾದ ವ್ರತಾಚರಣೆಯುಳ್ಳವನು. ತಪೋಬಲಸಮನ್ವಿತನಾದ ಆ ಜರತ್ಕಾರುವು ಒಮ್ಮೆ ಪ್ರಪಂಚಪರ್ಯಟನಕ್ಕಾಗಿ ಹೊರಟನು. ಪುಣ್ಯಪ್ರದಗಳಾದ ತೀರ್ಥಗಳಿಗೆ ಹೋಗುವನು. ಯಥಾವಿಧಿಯಾಗಿ ಸ್ನಾನ-ಪಿತೃಪೂಜೆಗಳನ್ನು ಮುಗಿಸಿ ಮುಂದೆ ಪ್ರಯಾಣಮಾಡುವನು. ಸಾಯಂಕಾಲವಾಗುತ್ತಲೇ ಒಂದೆಡೆಯಲ್ಲಿ ತಂಗುವನು. ಇದು ಅವನ ನಿತ್ಯಚರ್ಯೆಯಾಗಿದ್ದಿತು. ಅವನಿಗೆ ಇಂತಹುದೇ ಆಹಾರವು ಬೇಕೆಂಬ ಆಕಾಂಕ್ಷೆಯಿರಲಿಲ್ಲ. ಗಾಳಿಯನ್ನೇ ಆಹಾರವನ್ನಾಗಿ ಸೇವಿಸುತ್ತಾ ನಿರಾಹಾರನಾಗಿರುತ್ತಿದ್ದನು. ಧಗ-ಧಗಿಸುವ ಯಜ್ಞೇಶ್ವರನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಅವನು ಅನೇಕದಿನಗಳವರೆಗೆ ನಿದ್ರೆ ಯನ್ನೂ ಮಾಡುತ್ತಿರಲಿಲ್ಲ.

ಸಾಕ್ಷಾತ್ ಯಜ್ಞೇಶ್ವರನಂತೆ ಜಾಜ್ವಲ್ಯಮಾನವಾದ ತೇಜಸ್ಸಿನಿಂದ ಕೂಡಿದ್ದ ಜರತ್ಕಾರುವು ಪೃಥ್ವಿಯಲ್ಲಿ ಸುತ್ತಾಡುತ್ತಿದ್ದಾಗ ಒಂದು ಹಳ್ಳದಲ್ಲಿ ತನ್ನ ಪಿತೃಗಳು ತಲೆಕೆಳಗಾಗಿ ನೇತಾಡುತ್ತಿರುವುದನ್ನು ಕಂಡನು. ಅವರನ್ನು ನೋಡುತ್ತಲೇ ಜರತ್ಕಾರುವು ಅವರನ್ನು ಪ್ರಶ್ನಿಸಿದನು.

"ನೀವು ಯಾರು? ಈ ಹಳ್ಳದಲ್ಲೇಕೆ ತಲೆಕೆಳಗಾಗಿ ತೂಗಾಡು

---

* ಯಾಯಾವರರು : ಯಾಯಾವರಾ ನಾಮ ಬ್ರಾಹ್ಮಣಾ ಆಸಂಸ್ತೇ ಅರ್ಧಮಾಸಾದಗ್ನಿಹೋತ್ರಮಜುಹ್ವನ್ ( ಭರದ್ವಾಜಃ )

ಒಂದೊಂದು ಹಳ್ಳಿಯಲ್ಲಿ ಒಂದೊಂದು ರಾತ್ರಿ ಕಳೆಯುತ್ತಾ ಪ್ರತಿಪಕ್ಷದಲ್ಲಿಯೂ ಅಗ್ನಿಹೋತ್ರಮಾಡಿಕೊಂಡು ಸಂಚರಿಸುವ ಬ್ರಾಹ್ಮಣರಿಗೆ ಯಾಯಾವರರೆಂದು ಹೆಸರು.

ತ್ತಿದ್ದೀರಿ? ನೀವು ಅವಲಂಬಿಸಿರುವ ವೀರಣಸ್ತಂಬವನ್ನೂ ಕೂಡ ಇಲ್ಲಿರುವ ಇಲಿಯು ಕಚ್ಚಿ, ಅದೂ ಸಹ ಕೆಲವು ದಿನಗಳಲ್ಲಿಯೇ ಬಿದ್ದುಹೋಗಬಹುದು. ಅನಂತರ ನಿಮ್ಮ ಪಾಡೇನು?"

"ಅಯ್ಯಾ! ನಾವು ಯಾಯಾವರವಂಶೀಯರು. ನಮ್ಮ ವಂಶವು ನಶಿಸಿಹೋಗುತ್ತಿರುವ ಕಾರಣದಿಂದಾಗಿ ನಾವು ಅಧಃಪತಿತರಾಗುತ್ತಿದ್ದೇವೆ. ನಮ್ಮ ವಂಶದಲ್ಲಿ ಜರತ್ಕಾರುವೆಂಬ ಒಬ್ಬನೇ ಒಬ್ಬ ತಪೋನಿಷ್ಠನಿದ್ದಾನೆ. ಅಲ್ಪಭಾಗ್ಯರಾದ ನಮ್ಮ ವಂಶದಲ್ಲಿ ಆ ಮಂದಭಾಗ್ಯನು ಹುಟ್ಟಿದ್ದಾನೆ. ಅವನು ಯಾವಾಗಲೂ ತಪಶ್ಚರಣೆಯಲ್ಲಿಯೇ ನಿರತನಾಗಿಬಿಟ್ಟಿದ್ದಾನೆ. ಅವನಿಗೆ ಪುತ್ರರನ್ನು ಪಡೆಯುವ ಇಚ್ಛೆಯೂ ಇಲ್ಲ. ಅದಕ್ಕಾಗಿ ಮದುವೆಯಾಗುವ ಆಕಾಂಕ್ಷೆಯೂ ಇಲ್ಲ. ನಮ್ಮ ಸಂತಾನವು ಕ್ಷಯಿಸುತ್ತಿರುವ ಕಾರಣದಿಂದಾಗಿ ನಾವು ಈ ಹಳ್ಳದಲ್ಲಿ ವೀರಣಸ್ತಂಬವನ್ನಾಶ್ರಯಿಸಿ ತೂಗಾಡುತ್ತಿದ್ದೇವೆ. ನಮ್ಮ ವಂಶೋದ್ಧಾರಕನಿದ್ದರೂ ನಾವು ದುಷ್ಕರ್ಮಿಗಳನ್ನು ಮಾಡಿದವರಂತೆ ಅನಾಥರಾಗಿದ್ದೇವೆ. ಈ ದುರ್ದೆಸೆಯಲ್ಲಿ ಬಂಧುವಿನಂತೆ ನಮ್ಮಗಳ ವಿಷಯದಲ್ಲಿ ಅನುಕಂಪವನ್ನು ತೋರಿಸುತ್ತಿರುವ ನೀನು ಯಾರು? ಯಾವ ಕಾರಣದಿಂದಾಗಿ ಬಹಳ ದುಃಖಿತರಾಗಿರುವ ನಮ್ಮನ್ನು ಸಂತೈಸಲು ಬಂದಿರುವೆ?"

"ಪೂಜ್ಯರೇ! ತಾವು ನಿರೂಪಿಸಿದ ಮಂದಭಾಗ್ಯನಾದ ಆ ಜರತ್ಕಾರುವು ನಾನೇ ಆಗಿರುತ್ತೇನೆ. ನೀವುಗಳು ನನ್ನ ಪಿತೃ-ಪಿತಾಮಹ-ಪ್ರಪಿತಾಮಹರು. ಈಗ ನಿಮಗಾಗಿ ನಾನೇನು ಮಾಡಬೇಕೆಂಬುದನ್ನು ದಯಮಾಡಿ ಹೇಳಿರಿ."

"ಮಗು! ನಮ್ಮ ವಂಶದ ಅಭಿವೃದ್ಧಿಯಾಗಲು ಪ್ರಯತ್ನಿಸು. ಪುತ್ರ ಪ್ರಾಪ್ತಿಯು ನಿನ್ನ ಉದ್ಧಾರಕ್ಕೂ ಮತ್ತು ನಮ್ಮಗಳ ಉದ್ಧಾರಕ್ಕೂ ಕಾರಣ ವಾಗುವುದು. ಇದೇ ಸನಾತನಧರ್ಮವಪ್ಪಾ!

**ನ ಹಿ ಧರ್ಮಫಲೈಸ್ತಾತ ನ ತಪೋಭಿಃ ಸುಸಂಚಿತೈಃ ।**
**ತಾಂ ಗತಿಂ ಪ್ರಾಪ್ನುವನ್ತೀಹ ಪುತ್ರಿಣೋ ಯಾಂ ವ್ರಜನ್ತಿ ವೈ ॥೨೫॥**

ಪುತ್ರವಂತರಾದವರು ಪಡೆಯುವ ಸದ್ಗತಿಯನ್ನು ಯಾವ ವಿಧವಾದ

ಧರ್ಮಕಾರ್ಯಗಳಿಂದಾಗಲೀ, ನಿಷ್ಠೆಯಿಂದ ಮಾಡಿದ ತಪಸ್ಸುಗಳಿಂದಾಗಲೀ ಪಡೆಯುವ ಸಾಧ್ಯತೆಯಿಲ್ಲ.

ಆದುದರಿಂದ ನೀನೀಗಲೇ ವಿವಾಹವಾಗಲು ಪ್ರಯತ್ನಿಸು. ತನ್ಮೂಲಕ ವಾಗಿ ಸಂತತಿಯನ್ನು ಪಡೆಯುವವನಾಗು. ನಮ್ಮ ನಿರ್ದೇಶದಂತೆ ನೀನು ನಮಗೆ ಹಿತಕರವಾದ ಈ ಕಾರ್ಯವನ್ನು ಮಾಡು, ಮಗು!"

ಜರತ್ಕಾರುವು ಹೇಳುತ್ತಾನೆ :

**ನ ದಾರಾನ್ವೈ ಕರಿಷ್ಯೇಽಹಂ ನ ಧನಂ ಜೀವಿತಾರ್ಥತಃ ।**
**ಭವತಾಂ ತು ಹಿತಾರ್ಥಾಯ ಕರಿಷ್ಯೇ ದಾರಸಂಗ್ರಹಮ್ ॥೨೮॥**

**ಸಮಯೇನ ಚ ಕರ್ತಾಹಮನೇನ ವಿಧಿಪೂರ್ವಕಮ್ ।**
**ತಥಾ ಯದ್ಯುಪಲಪ್ಸ್ಯಾಮಿ ಕರಿಷ್ಯೇ ನಾನ್ಯಥಾ ಹ್ಯಹಮ್ ॥೨೯॥**

"ಪಿತೃಗಳೇ! ನಾನು ನನಗಾಗಿ ಮದುವೆಯನ್ನೂ ಮಾಡಿಕೊಳ್ಳಲಾರೆನು. ಧನಸಂಚಯವನ್ನೂ ಮಾಡಲಾರೆನು. ಆದರೆ ನಿಮ್ಮ ಹಿತಾರ್ಥವಾಗಿ ಕನ್ಯಾನ್ವೇಷಣವನ್ನು ಮಾಡುತ್ತೇನೆ. ನನ್ನ ನಿಯಮಕ್ಕೆ ಅನುಸಾರವಾಗಿ ಕನ್ಯೆಯು ಸಿಕ್ಕಿದರೆ ಮಾತ್ರವೇ ವಿಧಿಪೂರ್ವಕವಾಗಿ ನಾನು ಮದುವೆಯಾಗುತ್ತೇನೆ. ಸಿಕ್ಕದಿದ್ದರೆ ನಾನು ಖಂಡಿತವಾಗಿಯೂ ಮದುವೆಯಾಗುವುದಿಲ್ಲ.

**ಸನಾಮ್ನೀ ಯಾ ಭವಿತ್ರೀ ಮೇ ದಿದಿತ್ಸಾ ಚೈವ ಬನ್ಧುಭಿಃ ।**
**ಭೈಕ್ಷವತ್ತಾಮಹಂ ಕನ್ಯಾಮುಪಯಂಸ್ಯೇ ವಿಧಾನತಃ ॥೨೯॥**

ನಾನು ಮದುವೆಯಾಗುವ ಕನ್ಯೆಯು ನನ್ನ ಹೆಸರನ್ನೇ ಹೊಂದಿದವ ಳಾಗಿರಬೇಕು. ಅವಳ ತಂದೆ-ತಾಯಿಗಳಿಗೆ ಅವಳನ್ನು ನನಗೆ ಕೊಟ್ಟು ಮದುವೆಮಾಡಿಕೊಡುವ ಅಭಿಲಾಷೆಯಿರಬೇಕು. ಮೇಲಾಗಿ ಅವರು ನನಗೆ ಆ ಕನ್ಯೆಯನ್ನು ಭಿಕ್ಷೆಯ ರೂಪದಲ್ಲಿ ಕೊಡಬೇಕು. ಆಗ ಮಾತ್ರ ನಾನವಳನ್ನು ಮದುವೆಯಾಗುವೆನು.

**ದರಿದ್ರಾಯ ಹಿ ಮೇ ಭಾರ್ಯಾಂ ಕೋ ದಾಸ್ಯತಿ ವಿಶೇಷತಃ ।**
**ಪ್ರತಿಗ್ರಹೀಷ್ಯೇ ಭಿಕ್ಷಾಂ ತು ಯದಿ ಕಶ್ಚಿತ್ಪ್ರದಾಸ್ಯತಿ ॥೩೦॥**

ದರಿದ್ರನಾದ ನನಗೆ ಯಾರು ತಾನೇ ಕನ್ಯಾಪ್ರದಾನಮಾಡಲು ಮುಂದೆ

ಬರುತ್ತಾರೆ? ಯಾರಾದರೂ ಅಪ್ಪಿ-ತಪ್ಪಿ ಕೊಡಲು ಬಂದರೆ ಕೇವಲ ಭಿಕ್ಷಾ ರೂಪವಾಗಿಯೇ ನಾನವಳನ್ನು ಪರಿಗ್ರಹಿಸುತ್ತೇನೆ.

ಈ ವಿಧವಾದ ನಿಯಮದಿಂದ ನಾನು ಮದುವೆಯಾಗಲು ಪ್ರಯತ್ನಿಸುತ್ತೇನೆ. ಒಂದು ವೇಳೆ ನನ್ನ ಹೆಸರಿನ ಕನ್ಯೆಯೇ ಸಿಕ್ಕಿ, ದರಿದ್ರನಾದ ನನಗೆ ಕನ್ಯೆಯ ಮಾತಾ-ಪಿತೃಗಳು ಭಿಕ್ಷಾರೂಪದಲ್ಲಿ ಕನ್ಯೆಯನ್ನೂ ಕೊಟ್ಟು, ನಾನವಳನ್ನು ಮದುವೆಯಾಗಿ, ನೀವು ಆಶಿಸಿರುವಂತೆ ನಿಮ್ಮ ಉದ್ಧಾರಕ್ಕಾಗಿ ಅವಳಿಂದೇನಾದರೂ ಪ್ರಾಣಿಯೊಂದು ( ಸಂತಾನವು ) ಹುಟ್ಟುವುದಾದರೆ, ಆಗಲಾದರೂ ನೀವು ಶಾಶ್ವತವಾದ ಸದ್ಗತಿಯನ್ನು ಹೊಂದಿ ಸಂತೋಷದಿಂದಿರಬಹುದು."

೧೩ನೆಯ ಅಧ್ಯಾಯವು ಮುಗಿಯಿತು.

೧೪ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ವಾಸುಕಿಯ ತಂಗಿಯಾದ ಜರತ್ಕಾರುವಿನೊಡನೆ ಮಹರ್ಷಿಯಾದ ಜರತ್ಕಾರುವಿನ ವಿವಾಹ

ಉಗ್ರಶ್ರವಸೌತಿಗಳು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

**ತತೋ ನಿವೇಶಾಯ ತದಾ ಸ ವಿಪ್ರಃ ಸಂಶಿತವ್ರತಃ ।**
**ಮಹೀಂ ಚಚಾರ ದಾರಾರ್ಥೀ ನ ಚ ದಾರಾನವಿನ್ದತ ॥೧॥**

"ಶೌನಕರೇ! ಕಠೋರವ್ರತನಿಷ್ಠನಾದ ಜರತ್ಕಾರುವು ತಾನೇ ಮಾಡಿಕೊಂಡಿದ್ದ ನಿಬಂಧನೆಗಳಿಗೆ ಅನುಸಾರವಾಗಿ ಕನ್ಯೆಯೊಬ್ಬಳನ್ನು ಹುಡುಕಲು ಪ್ರಪಂಚದಲ್ಲೆಲ್ಲಾ ಅಲೆದನು. ಆದರೆ ಅವನು ಮಾತ್ರ ಭಾರ್ಯೆಯನ್ನು ಹೊಂದಲಿಲ್ಲ. ಒಮ್ಮೆ ಅರಣ್ಯಕ್ಕೆ ಹೋಗಿ ಪ್ರಪಂಚಕ್ಕೆಲ್ಲಾ ಕೇಳಿಸಲೋ ಎಂಬಂತೆ ಗಟ್ಟಿಯಾಗಿ ಮೂರು ಬಾರಿ ಕೂಗಿ ಹೇಳಿದನು :

"ಕನ್ಯಾಭಿಕ್ಷೆಯನ್ನು ಬೇಡುತ್ತಿದ್ದೇನೆ. ಕನ್ಯಾಭಿಕ್ಷೆಯನ್ನು ನೀಡಿರಿ."

ಮಹರ್ಷಿಯ ಆ ಮಾತನ್ನು ಕೇಳಿದೊಡನೆಯೇ ವಾಸುಕಿಯು ತನ್ನ ತಂಗಿಯನ್ನು ಕರೆದುಕೊಂಡು ಜರತ್ಕಾರುವಿನ ಬಳಿಗೆ ಬಂದೇಬಿಟ್ಟನು.

ವಾಸುಕಿಯು ನೀಡಿದ ಕನ್ಯಾಭಿಕ್ಷೆಯನ್ನು ಒಡನೆಯೇ ಸ್ವೀಕರಿಸದೇ ಮಹರ್ಷಿಯು ವಾಸುಕಿಯನ್ನು ಪ್ರಶ್ನಿಸಿದನು :

**ಕಿಂ ನಾಮ್ನೀ ಭಗಿನೀಯಂ ತೇ ಬ್ರೂಹಿ ಸತ್ಯಂ ಭುಜಂಗಮ ॥೫॥**

"ಸರ್ಪಶ್ರೇಷ್ಠನೇ! ಈ ನಿನ್ನ ತಂಗಿಯ ಹೆಸರೇನೆಂಬುದನ್ನು ಸತ್ಯವಾಗಿ ಹೇಳು."

ವಾಸುಕಿಯು ಹೇಳುತ್ತಾನೆ :

**ಜರತ್ಕಾರೋ ಜರತ್ಕಾರುಃ ಸ್ವಸೇಯಮನುಜಾ ಮಮ ।**
**ಪ್ರತಿಗೃಹ್ಣೀಷ್ವ ಭಾರ್ಯಾರ್ಥೇ ಮಯಾ ದತ್ತಾಂ**
**ಸುಮಧ್ಯಮಾಮ್ ॥೬॥**

"ಜರತ್ಕಾರುಮಹರ್ಷಿಯೇ! ನನ್ನ ತಂಗಿಯ ಹೆಸರೂ ಕೂಡ 'ಜರತ್ಕಾರು' ಎಂದೇ ಆಗಿರುವುದು. ಇವಳನ್ನು ನಾನು ನಿನಗೆ ಭಿಕ್ಷಾರೂಪ ವಾಗಿಯೇ ನೀಡುತ್ತಿದ್ದೇನೆ. ಇವಳನ್ನು ನೀನು ಭಾರ್ಯೆಯನ್ನಾಗಿ ಸ್ವೀಕರಿಸು. ಬ್ರಾಹ್ಮಣೋತ್ತಮ! ನಿನಗೆ ಭಿಕ್ಷಾರೂಪವಾಗಿ ಕೊಡುವ ಸಲುವಾಗಿಯೇ ನಾನಿವಳನ್ನು ಇಲ್ಲಿಯವರೆಗೂ ಸಂರಕ್ಷಿಸಿಕೊಂಡಿದ್ದೇನೆ. ದಯಮಾಡಿ ಸ್ವೀಕರಿಸು."

ಭಾರ್ಯಾರ್ಥವಾಗಿ ವಾಸುಕಿಯು ಕೊಟ್ಟ ವರವರ್ಣಿನಿಯಾದ ಜರತ್ಕಾರುವನ್ನು ಮಹರ್ಷಿಯು ಸ್ವೀಕರಿಸಿ ವಿಧ್ಯುಕ್ತವಾಗಿ ವಿವಾಹಮಾಡಿ ಕೊಂಡನು."

ಗಳನೆಯ ಅಧ್ಯಾಯವು ಮುಗಿಯಿತು.

೧೫ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ)

## ಆಸ್ತೀಕನ ಜನ್ಮ ಮತ್ತು ಸರ್ಪಯಾಗದಲ್ಲಿ ಹತರಾಗುತ್ತಿದ್ದ ಸರ್ಪಗಳ ರಕ್ಷಣೆ

ಉಗ್ರಶ್ರವಸೌತಿಗಳು ಮುಂದುವರಿದು ಹೇಳಿದರು :

**ಮಾತ್ರಾ ಹಿ ಭುಜಗಾಃ ಶಪ್ತಾಃ ಪೂರ್ವಂ ಬ್ರಹ್ಮವಿದಾಂ ವರ ।**
**ಜನಮೇಜಯಸ್ಯ ವೋ ಯಜ್ಞೇ ಧಕ್ಷ್ಯತ್ಯನಿಲಸಾರಥಿಃ ॥೧॥**

"ಬ್ರಹ್ಮವಿದರಲ್ಲಿ ಶ್ರೇಷ್ಠರಾದ ಶೌನಕರೇ! ಜನಮೇಜಯನು ಸರ್ಪ ಯಾಗಮಾಡಲು ಕಾರಣವೇನೆಂದು ನೀವು ಕೇಳಿರುವಿರಲ್ಲವೇ? ಸರ್ಪಗಳ ತಾಯಿಯಾದ ಕದ್ರುವೇ ತನ್ನ ಮಕ್ಕಳಿಗೆ, ಜನಮೇಜಯನ ಯಜ್ಞದಲ್ಲಿ ನಿಮ್ಮೆಲ್ಲರನ್ನೂ ವಾಯುಸಾರಥಿಯಾದ ಅಗ್ನಿದೇವನು ಭಸ್ಮಮಾಡಲೆಂದು ಶಾಪವಿತ್ತಳು. ಆ ಶಾಪದ ಉಪಶಮನಕ್ಕಾಗಿಯೇ ಪನ್ನಗೋತ್ತಮನಾದ ವಾಸುಕಿಯು ತನ್ನ ತಂಗಿಯನ್ನು ಮಹಾತ್ಮನಾದ, ಸುವ್ರತನಾದ ಮಹರ್ಷಿಗೆ ಭಿಕ್ಷಾರೂಪವಾಗಿ ನೀಡಿದನು. ತನ್ನ ಪ್ರತಿಜ್ಞಾನುಸಾರವಾಗಿ ಸಿಕ್ಕಿದ ಕನ್ಯಾಮಣಿ ಯನ್ನು ಮಹರ್ಷಿಯು ಸ್ವೀಕರಿಸಿ ವಿಧ್ಯುಕ್ತವಾಗಿ ಮದುವೆಯಾದನು. ಜರ ತ್ಕಾರು-ಜರತ್ಕಾರುಗಳ ಸಮಾಗಮದಿಂದಾಗಿ ಆಸ್ತೀಕನೆಂಬ ಮಹಾತ್ಮನು ಹುಟ್ಟಿದನು.

**ತಪಸ್ವೀ ಚ ಮಹಾತ್ಮಾ ಚ ವೇದವೇದಾಙ್ಗಪಾರಗಃ।**
**ಸಮಃ ಸರ್ವಸ್ಯ ಲೋಕಸ್ಯ ಪಿತೃಮಾತೃಭಯಾಪಹಃ ॥೪॥**

ಆಸ್ತೀಕನು ಮಹಾತಪಸ್ವಿಯೂ, ವೇದ-ವೇದಾಂಗಪಾರಂಗತನೂ, ಸರ್ವಪ್ರಾಣಿಗಳಲ್ಲಿಯೂ ಸಮಾನವಾದ ಭಾವದಿಂದಿರುವವನೂ, ಪಿತೃ-ಮಾತೃವಂಶಗಳ ಭಯವನ್ನು ಹೋಗಲಾಡಿಸುವ ಸಾಮರ್ಥ್ಯವುಳ್ಳವನೂ ಆಗಿದ್ದನು.

ಆಸ್ತೀಕನು ಹುಟ್ಟಿದ ಅನೇಕವರ್ಷಗಳನಂತರ ಪಾಂಡುವಂಶೀಯನಾದ ಜನಮೇಜಯನು ಪ್ರಪಂಚದ ಸಕಲ ಸರ್ಪಗಳ ವಿನಾಶಕ್ಕಾಗಿ ಸರ್ಪಯಾಗ ವನ್ನು ಉಪಕ್ರಮಿಸಿದನು. ಸರ್ಪಗಳ ವಂಶವೇ ನಿರ್ಮೂಲವಾಗುವುದೆಂದು ಪ್ರಪಂಚವೆಲ್ಲವೂ ತಲ್ಲಣಿಸುತ್ತಿದ್ದ ಕಾಲದಲ್ಲಿ ಮಹಾತಪಸ್ವಿಯಾದ ಆಸ್ತೀಕನು ಸರ್ಪಯಾಗವನ್ನು ನಿಲ್ಲಿಸಿ, ಸರ್ಪಗಳ ಸಂಪೂರ್ಣವಿನಾಶವನ್ನು ತಡೆದನು. ಆಸ್ತೀಕನ ಮಾತುಲರೂ, ಭ್ರಾತೃವರ್ಗದವರೂ, ಇನ್ನೂ ಅನೇಕ ಬಂಧು-ಬಾಂಧವರೂ ಉಳಿದುಕೊಂಡರು. ಆಸ್ತೀಕನು ತಾನು ಸಂತತಿಯನ್ನು ಪಡೆದು ತನ್ನ ಪಿತೃಗಳನ್ನೂ ಸಹ ಉದ್ಧರಿಸಿದನು.

ಜರತ್ಕಾರುವು ಅನೇಕವಿಧವಾದ ವ್ರತೋಪಾಸನೆಗಳನ್ನು ಮಾಡು ತ್ತಿದ್ದನು. ಯಜ್ಞ-ಯಾಗಾದಿಗಳಿಂದ ದೇವತೆಗಳನ್ನೂ, ಬ್ರಹ್ಮಚರ್ಯ ಮತ್ತು

ಅಧ್ಯಯನಗಳಿಂದ ಋಷಿಗಳನ್ನೂ, ಸಂತಾನಪ್ರಾಪ್ತಿಯಿಂದ ಪಿತೃಗಳನ್ನೂ ತೃಪ್ತಿಗೊಳಿಸಿ, ಪಿತೃಗಳ ಋಣದಿಂದ ಮುಕ್ತನಾಗಿ ಅವರೆಲ್ಲರೂ ಸದ್ಗತಿಯನ್ನು ಪಡೆಯುವಂತೆ ಮಾಡಿದನು. ಧರ್ಮಾತ್ಮನಾದ ಆಸ್ತೀಕನನ್ನು ಮಗನನ್ನಾಗಿ ಪಡೆದ ಮಹರ್ಷಿಯು ಬಹಳಕಾಲಾನಂತರದಲ್ಲಿ ತಾನೂ ಸಹ ಸ್ವರ್ಗವನ್ನು ಸೇರಿದನು. ಇದೇ ಆಸ್ತೀಕನ ಆಖ್ಯಾನ. ಇದನ್ನು ನಾನು ಯಥಾವತ್ತಾಗಿ ಹೇಳಿರುತ್ತೇನೆ. ಇನ್ನೇನಾದರೂ ಕೇಳಬೇಕಾಗಿದ್ದರೆ ಪ್ರಶ್ನಿಸಿರಿ. ಯಥಾಮತಿ ಹೇಳುತ್ತೇನೆ."

ಇ೫ನೆಯ ಅಧ್ಯಾಯವು ಮುಗಿಯಿತು.

ಇ೬ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಕದ್ರು ಮತ್ತು ವಿನತೆಯರಿಗೆ ಕಶ್ಯಪರಿಂದ ವರದಾನ ಮತ್ತು ಅವರಿಂದ ಪುತ್ರಪ್ರಾಪ್ತಿಯಾದುದು

ಶೌನಕರು ಕೇಳಿದರು :

**ಸೌತೇ ತ್ವಂ ಕಥಯಸ್ವೇಮಾಂ ವಿಸ್ತರೇಣ ಕಥಾಂ ಪುನಃ ।**
**ಆಸ್ತೀಕಸ್ಯ ಕವೇಃ ಸಾಧೋಃ ಶುಶ್ರೂಷಾ ಪರಮಾ ಹಿ ನಃ ॥೧॥**

"ಸೌತಿಯೇ! ನೀನು ಜ್ಞಾನಿಯಾದ, ಮಹಾತ್ಮನಾದ, ಸಾಧುವಾದ ಆಸ್ತೀಕನ ಕಥೆಯನ್ನು ಬಹಳ ಸಂಕ್ಷೇಪವಾಗಿ ಹೇಳಿಬಿಟ್ಟಿರುವೆ. ಆ ಮಹಾನು ಭಾವನ ಕಥೆಯನ್ನು ವಿಸ್ತಾರವಾಗಿ ಹೇಳು. ವಿಶದವಾಗಿಯೇ ಕೇಳಬೇಕೆಂಬ ವಿಶೇಷವಾದ ಇಚ್ಛೆಯು ನಮಗುಂಟಾಗಿದೆ. ಆ ಮಹಾನುಭಾವನ ಕಥೆಯನ್ನು ಹೇಗೆ ನಡೆಯಿತೋ ಹಾಗೆಯೇ ಹೇಳು.

**ಮಧುರಂ ಕಥ್ಯತೇ ಸೌಮ್ಯ ಶ್ಲಕ್ಷ್ಣಾಕ್ಷರಪದಂ ತ್ವಯಾ ।**
**ಪ್ರೀಯಾಮಹೇ ಭೃಶಂ ತಾತ ಪಿತೇವೇದಂ ಪ್ರಭಾಷಸೇ ॥೨॥**

ನೀನು ಕಥೆಯನ್ನು ಬಹಳ ಮಾಧುರ್ಯದಿಂದ ಹೇಳುವೆ. ನಿನ್ನ ಮುಖಾರವಿಂದದಿಂದ ಬರುವ ಒಂದೊಂದು ಅಕ್ಷರವೂ, ಒಂದೊಂದು ಪದವೂ ಸಹ ಸ್ಪಷ್ಟವಾಗಿದ್ದು ಸುಮಧುರವಾಗಿರುತ್ತದೆ. ನಿನ್ನ ತಂದೆಯವರಾದ

ಲೋಮಹರ್ಷಣರು ಕಥಾಪ್ರವಚನಮಾಡುವಂತೆಯೇ ನೀನೂ ಸುಮಧುರ ವಾಗಿ  ಕಥಾಪ್ರವಚನವನ್ನು ಮಾಡುವೆ. ಇದರಿಂದ ನಾವು ಸುಪ್ರೀತ ರಾಗಿದ್ದೇವೆ.

ನಿನ್ನ ತಂದೆಯವರು ನಮಗೆ ಪ್ರವಚನ ಹೇಳುವುದರಲ್ಲಿಯೇ ಸರ್ವದಾ ನಿರತರಾಗಿರುತ್ತಿದ್ದರು. ಅವರು ನಿನಗೆ ಆಸ್ತೀಕನ ಆಖ್ಯಾನವನ್ನು ಹೇಗೆ ಹೇಳಿದ್ದಾರೆಯೋ ಹಾಗೆಯೇ ನಮಗೂ ಅದನ್ನು ಹೇಳು."

"ಆಯುಷ್ಮಂತರೇ! ನಿಮ್ಮ ಆಶಯದಂತೆ ಆಸ್ತೀಕನ ಉಪಾಖ್ಯಾನ ವನ್ನು ನಾನು ನನ್ನ ತಂದೆಯವರಿಂದ ಹೇಗೆ ಕೇಳಿದೆನೋ ಹಾಗೆಯೇ ಹೇಳುತ್ತೇನೆ.

ದೇವಯುಗದಲ್ಲಿ ( ಸತ್ಯಯುಗದಲ್ಲಿ ) ಪ್ರಜಾಪತಿಬ್ರಹ್ಮನಿಗೆ ಕದ್ರೂ ಮತ್ತು ವಿನತೆಯರೆಂಬ ಇಬ್ಬರು ಹೆಣ್ಣುಮಕ್ಕಳಿದ್ದರು. ಅವರು ಬಹಳ ಚೆಲುವೆಯರಾಗಿಯೂ, ಗುಣಸಂಪನ್ನೆಯರಾಗಿಯೂ ಇದ್ದರು. ಹೆಣ್ಣುಮಕ್ಕ ಳಿಬ್ಬರೂ ಪ್ರೌಢೆಯರಾದೊಡನೆಯೇ ಪ್ರಜಾಪತಿಬ್ರಹ್ಮನು ಕಶ್ಯಪರೆಂಬ ತಾಪಸೋತ್ತಮರಿಗೆ ಅವರನ್ನು ಕೊಟ್ಟು ಮದುವೆಮಾಡಿದನು.

ಪ್ರಜಾಪತಿಗೆ ಸಮರಾದ ಕಶ್ಯಪರು ಅವರಲ್ಲಿ ಪ್ರಸನ್ನರಾಗಿ–'ಯಾವು ದಾದರೂ ವರವನ್ನು ಕೇಳಿಕೊಳ್ಳಿ'–ಎಂದು ಅವರಿಗೆ ಹೇಳಿದರು.

ಕಶ್ಯಪರಿಂದ ಶ್ರೇಷ್ಠವಾದ ವರವು ಲಭಿಸುವುದೆಂಬುದನ್ನು ಅವ ರಿಂದಲೇ ಕೇಳಿದೊಡನೆಯೇ ಶ್ರೇಷ್ಠಸ್ತ್ರೀಯರಾದ ಕದ್ರೂ-ವಿನತೆಯರು ಅನಿರ್ವಾಚ್ಯವಾದ ಆನಂದವನ್ನು ಹೊಂದಿದರು.

ಕದ್ರುವು–"ಪ್ರಾಣೇಶ್ವರ! ಸಮಾನಬಲವುಳ್ಳ, ಅಪ್ರತಿಮಸಾಹಸಿ ಗಳಾದ ಒಂದು ಸಾವಿರ ನಾಗಗಳು ನನ್ನ ಮಕ್ಕಳಾಗಿ ಜನಿಸುವಂತೆ ಅನು ಗ್ರಹಿಸಿರಿ"–ಎಂದು ಪ್ರಾರ್ಥಿಸಿದಳು.

ಕಶ್ಯಪರು 'ತಥಾಸ್ತು' ಎಂದರು.

ವಿನತೆಯು–"ನನಗೆ ಇಬ್ಬರು ಪುತ್ರರು ಹುಟ್ಟಬೇಕು. ಅವರು ಕದ್ರು

ವಿನ ಒಂದು ಸಾವಿರ ಮಕ್ಕಳ ಪರಾಕ್ರಮವನ್ನೂ ಮೀರಿಸುವವರಾಗಬೇಕು" ಎಂದು ವರವನ್ನು ಬೇಡಿದಳು.

ಕಶ್ಯಪರು **'ತಥಾಸ್ತು'** ಎಂದರು. ವಿನತೆಯು ತನ್ನ ಪ್ರಾರ್ಥನೆಗೆ ಅನುಸಾರವಾಗಿ ಕಶ್ಯಪರಿಂದ ವರವನ್ನು ಪಡೆದು ಸಂತುಷ್ಟಳಾದಳು. ಅಧಿಕ ಬಲಿಷ್ಠರೂ ಪರಾಕ್ರಮಿಗಳೂ ಆದ ಪುತ್ರರನ್ನು ಪಡೆದು ಕೃತಕೃತ್ಯಳಾಗುವೆನೆಂದೂ ಭಾವಿಸಿದಳು. ಸಮಾನತೇಜಸ್ವಿಗಳಾದ ಸಾವಿರ ಪುತ್ರರನ್ನು ಪಡೆಯುವ ವರವನ್ನು ಪಡೆದುಕೊಂಡ ಕದ್ರುವೂ ಸಂತುಷ್ಟಳಾದಳು. ಹೀಗೆ ತಮ್ಮ-ತಮ್ಮ ಮನಸ್ಸಿನ ಅಭಿಲಾಷೆಗಳಿಗೆ ಅನುಸಾರವಾದ ವರಗಳನ್ನು ಪಡೆದ ಕದ್ರೂ-ವಿನತೆಯರ ಆನಂದಕ್ಕೆ ಪಾರವೇ ಇರಲಿಲ್ಲ. ಕಶ್ಯಪರು ಅರಣ್ಯಕ್ಕೆ ತೆರಳುವ ಮೊದಲು ಇಬ್ಬರನ್ನೂ ಕರೆದು ಗೃಹಕೃತ್ಯವಿಷಯದಲ್ಲಿ ಕೆಲವು ಉಪಯುಕ್ತ ಸಲಹೆಗಳನ್ನು ಕೊಟ್ಟರಲ್ಲದೇ–**'ಧಾರ್ಯೌ ಪ್ರಯತ್ನತೋ ಗರ್ಭಂ।**ನಿಮ್ಮ ಗರ್ಭವನ್ನು ಜೋಪಾನವಾಗಿ ಕಾಪಾಡಿಕೊಳ್ಳಿರಿ'–ಎಂದು ಹೇಳಿ ಹೊರಟುಹೋದರು.

ಅನೇಕ ವರ್ಷಗಳು ಕಳೆದನಂತರವೂ ಕದ್ರುವು ಸಾವಿರ ಮೊಟ್ಟೆಗಳನ್ನೂ ವಿನತೆಯು ಎರಡು ಮೊಟ್ಟೆಗಳನ್ನೂ ಪ್ರಸವಿಸಿದರು. ಆ ಮೊಟ್ಟೆಗಳನ್ನು ಪ್ರಹೃಷ್ಟರಾದ ದಾಸಿಯರು ಶಾಖವಾದ ಪಾತ್ರೆಗಳಲ್ಲಿಟ್ಟು ಜೋಪಾನವಾಗಿ ನೋಡಿಕೊಳ್ಳುತ್ತಿದ್ದರು.

ಐದುನೂರು ವರ್ಷಗಳು ಕಳೆದನಂತರ ಕದ್ರುವಿನ ಸಾವಿರ ಮೊಟ್ಟೆಗಳೂ ಒಡೆದು ಅವುಗಳಿಂದ ಥಳ-ಥಳಿಸುವ ಚಿಕ್ಕ-ಪುಟ್ಟ ಸರ್ಪಗಳು ಹೊರಗೆ ಬಂದುವು. ಆದರೆ ವಿನತೆಯ ಎರಡು ಮೊಟ್ಟೆಗಳಿಂದ ಶಿಶುಗಳು ಹೊರಬರಲೇ ಇಲ್ಲ.

ಕದ್ರುವಿಗೆ ಮಕ್ಕಳಾಗಿ ತನಗಿನ್ನೂ ಮಕ್ಕಳಾಗದೇ ಇದ್ದುದಕ್ಕೆ ನಾಚಿಕೆಗೊಂಡು ತಪಸ್ವಿನಿಯಾದ, ಪುತ್ರಾರ್ಥಿನಿಯಾದ ವಿನತೆಯು ತನ್ನ ಮೊಟ್ಟೆಗಳು ಒಡೆಯದೇ ಇರುವುದನ್ನು ನೋಡಿ ಇನ್ನೂ ಹೆಚ್ಚು ಕಾಲ ನಿರೀಕ್ಷಿಸಿ ಕುಳಿತಿರಲು ಸಾಧ್ಯವಾಗದೆ ಎರಡು ಮೊಟ್ಟೆಗಳಲ್ಲಿ ಒಂದನ್ನು ತಾನೇ ಒಡೆದುಬಿಟ್ಟಳು.

ವಿನತೆಯ ಮೊಟ್ಟೆಯಲ್ಲಿ ಕಂಡುದೇನು? ಅರ್ಧರಚನೆಯಾದ ಶರೀರ. ತಲೆಯಿಂದ ಸೊಂಟದವರೆಗೂ ಸುಂದರವಾದ ಆಕಾರವು ಬಂದಿತ್ತು. ಕೆಳ ಭಾಗವಿನ್ನೂ ಬೆಳೆಯುವುದರಲ್ಲಿತ್ತು. ಅಷ್ಟರೊಳಗೆ ಪ್ರಮಾದವು ಸಂಭವಿಸಿ ಬಿಟ್ಟಿತು. ಅದೃಷ್ಟವಶದಿಂದ ಆ ಶಿಶುವಿಗೆ ಚೈತನ್ಯವು ಬಂದಿತ್ತು. ಪ್ರಜ್ವಲಿಸುವ ಕಾಂತಿಯಿಂದ ಬೆಳಗುತ್ತಿದ್ದ ಶಿಶುವು ತಾಯಿಯ ಮುಖವನ್ನು ದುರ-ದುರನೆ ನೋಡಿತು. ತಾಯಿಯು ಶಿಶುವಿಗೆ ಮಹಾಪರಾಧಮಾಡಿದ್ದಳು. ಶಿಶುವು ಅಂಗಹೀನವಾಗಲು ತಾಯಿಯೇ ಕಾರಣ. ಶಿಶುವಿಗೆ ಬಹಳ ಕೋಪ ಬಂದಿತ್ತು. ಅಂತೆಯೇ ತಾಯಿಯನ್ನು ಶಪಿಸಿತು :

**ಯೋಽಹಮೇವಂ ಕೃತೋ ನಾತಸ್ತ್ವಯಾ ಲೋಭಪರೀತಯಾ ।**
**ಶರೀರೇಣಾಸಮಗ್ರೇಣ ತಸ್ಮಾದ್ದಾಸೀ ಭವಿಷ್ಯಸಿ ।**
**ಪಞ್ಚವರ್ಷಶತಾನ್ಯಸ್ಯಾ ಯಯಾ ವಿಸ್ಪರ್ಧಸೇ ಸಹ ॥೧೯॥**

“ಪೂಜ್ಯಳಾದ ಮಾತೆಯೇ! ನೀನು ಲೋಭಪರವಶಳಾಗಿ ನನ್ನನ್ನು ಹೀಗೆ ಅಂಗಹೀನನನ್ನಾಗಿ ಮಾಡಿದೆ. ನೀನು ಹೀಗೆ ಮಾಡಿದುದರಿಂದಲೇ ನಾನು ಪೂರ್ಣಶರೀರನಾಗಲಿಲ್ಲ. ಅಸಮಗ್ರವಾದ ಅಂಗದಿಂದ ಹುಟ್ಟಿದೆನು. ಇದರ ಫಲವಾಗಿ ನೀನು ಯಾವ ನಿನ್ನ ಸವತಿಯೊಡನೆ ಯಾವಾಗಲೂ ಸ್ಪರ್ಧಿಸುವೆಯೋ ಅವಳ ದಾಸಿಯಾಗಿ ಐದುನೂರು ವರ್ಷಗಳನ್ನು ಕಳೆಯ ಬೇಕು.

ಅಮ್ಮಾ! ಇನ್ನೊಂದು ಮೊಟ್ಟೆಯನ್ನು ಈಗಲೇ ಒಡೆದುಹಾಕಬೇಡ. ನಾನಿದ್ದ ಮೊಟ್ಟೆಯನ್ನು ಒಡೆದಂತೆಯೇ ಒಡೆದು ತಪಸ್ವಿಯಾದ ನನ್ನ ತಮ್ಮನನ್ನು ಅಂಗರಹಿತನನ್ನಾಗಿ ಅಥವಾ ವಿಕಾರವಾದ ಅಂಗವುಳ್ಳವನನ್ನಾಗಿ ಮಾಡಬೇಡ.

**ಏಷ ಚ ತ್ವಾಂ ಸುತೋ ಮಾತರ್ದಾಸೀತ್ವಾನ್ಮೋಚಯಿಷ್ಯತಿ ॥೨೦॥**

ಆ ಶಿಶುವು ನಿನ್ನ ದಾಸ್ಯಜೀವನವನ್ನು ವಿಮೋಚನೆಗೊಳಿಸುವುದು.

**ಪ್ರತಿಪಾಲಯಿತವ್ಯಸ್ತೇ ಜನ್ಮಕಾಲೋಽಸ್ಯ ಧೀರಯಾ ।**
**ವಿಶಿಷ್ಟಂ ಬಲಮೀಪ್ಸನ್ತ್ಯಾ ಪಞ್ಚವರ್ಷಶತಾತ್ಪರಃ ॥೨೧॥**

ಆದುದರಿಂದ ವಿಶಿಷ್ಟಬಲಸಂಪನ್ನನಾದ ಬಾಲಕನನ್ನು ನೀನು ಅಪೇಕ್ಷಿಸುವೆಯಾದರೆ ಧೈರ್ಯವನ್ನು ತಾಳಿಕೊಂಡು ಈ ಮೊಟ್ಟೆಯನ್ನು ಕಾಪಾಡುತ್ತಿರಬೇಕು. ಐದುನೂರು ವರ್ಷಗಳನಂತರ ಈ ಮೊಟ್ಟೆಯಿಂದ ಶಿಶುವನ್ನು ಪ್ರತೀಕ್ಷಿಸಬೇಕು."

ಶೌನಕರೇ! ಹೀಗೆ ವಿನತೆಯ ಮಗನು ತಾಯಿಗೆ ಶಾಪವನ್ನಿತ್ತು ಅಂತರಿಕ್ಷಕ್ಕೆ ಹೊರಟುಹೋದನು. ಅವನಿಗೆ ಅರುಣನೆಂದು ಹೆಸರಾಯಿತು. ಅವನು ಯಾವಾಗಲೂ ಮುಂಜಾನೆ ಕಾಣಿಸಿಕೊಳ್ಳುತ್ತಾನೆ. ಅನುದಿನವೂ ಸೂರ್ಯನ ರಥದಲ್ಲಿ ಕುಳಿತು ಸಾರಥ್ಯವನ್ನು ಮಾಡುತ್ತಿರುತ್ತಾನೆ.

**ಗರುಡೋಽಪಿ ಯಥಾಕಾಲಂ ಜಜ್ಞೇ ಪನ್ನಗಭೋಜನಃ ।**
**ಸ ಜಾತಮಾತ್ರೋ ವಿನತಾಂ ಪರಿತ್ಯಜ್ಯ ಖಮಾವಿಶತ್ ॥೨೪॥**

**ಆದಾಸ್ಯನ್ನಾತ್ಮನೋ ಭೋಜ್ಯಮನ್ನಂ ವಿಹಿತಮಸ್ಯ ಯತ್ ।**
**ವಿಧಾತ್ರಾ ಭೃಗುಶಾರ್ದೂಲ ಕ್ಷುಧಿತಃ ಪತಗೇಶ್ವರಃ ॥೨೫॥**

ಭೃಗುಶಾರ್ದೂಲ! ಐದುನೂರು ವರ್ಷಗಳು ಮುಗಿದನಂತರ ಸರ್ವಾಂಗಪರಿಪುಷ್ಟನಾದ, ಸರ್ಪಾಹಾರಿಯಾದ ಗರುಡನು ಮೊಟ್ಟೆಯಿಂದ ಹೊರಗೆ ಬಂದನು. ಹುಟ್ಟಿದೊಡನೆಯೇ ಬಹಳವಾಗಿ ಹಸಿದಿದ್ದ ಪಕ್ಷಿ ರಾಜನಾದ ಗರುಡನು ತಾಯಿಯನ್ನು ಪರಿತ್ಯಜಿಸಿ ವಿಧಿನಿಯತವಾದ ಆಹಾರ ವನ್ನು ಹುಡುಕಿಕೊಂಡು ಆಕಾಶಕ್ಕೆ ಹಾರಿದನು."

ಇನೆಯ ಅಧ್ಯಾಯವು ಮುಗಿಯಿತು.

## ಮೇರುಪರ್ವತದ ಮೇಲೆ ಅಮೃತಪ್ರಾಪ್ತಿಗಾಗಿ ಸಮಾಲೋಚಿಸುತ್ತಿದ್ದ ದೇವತೆಗಳಿಗೆ ಶ್ರೀಮನ್ನಾರಾಯಣನು *ಸಮುದ್ರಮಥನಮಾಡಲು ಸಲಹೆ ನೀಡಿದುದು

ಉಗ್ರಶ್ರವಸೌತಿಗಳು ಹೇಳುತ್ತಾರೆ :

**ಏತಸ್ಮಿನ್ನೇವ ಕಾಲೇ ತು ಭಗಿನ್ಯೌ ತೇ ತಪೋಧನ ।**
**ಅಪಶ್ಯತಾಂ ಸಮಾಯಾತೇ ಉಚ್ಚೈಃಶ್ರವಸಮನ್ತಿಕಾತ್ ॥೧॥**

"ಶೌನಕರೇ! ಅದೇ ಕಾಲಕ್ಕೆ ಸರಿಯಾಗಿ ಅಕ್ಕ-ತಂಗಿಯರಾದ ಕದ್ರೂ-ವಿನತೆಯರು ಬರುತ್ತಾ ಇರುವಾಗ ಸ್ವಲ್ಪದೂರದಲ್ಲಿ ಉಚ್ಚೈಃಶ್ರವಸ್ಸೆಂಬ ಕುದುರೆಯನ್ನು ಕಂಡರು. ಸಮುದ್ರಮಥನಕಾಲದಲ್ಲಿ ಸಮುದ್ರದಲ್ಲಿ ಹುಟ್ಟಿದ ಪರಮಶ್ರೇಷ್ಠವಾದ, ನಯನಾನಂದಕರವಾದ ರೂಪವನ್ನು ಧರಿಸಿದ್ದ ಆ ಅಶ್ವರತ್ನವನ್ನು ಎಲ್ಲ ದೇವತೆಗಳೂ ಪೂಜಿಸುತ್ತಿದ್ದರು. ಆ ಕುದುರೆಯು ಪ್ರಪಂಚದಲ್ಲಿರುವ ಕುದುರೆಗಳಲ್ಲೆಲ್ಲಾ ಶ್ರೇಷ್ಠವಾಗಿದ್ದಿತು. ಅಮೋಘವಾದ ಬಲದಿಂದ ಕೂಡಿದ್ದಿತು. ಕಾಂತಿಯುಕ್ತವಾಗಿಯೂ ಇದ್ದ ಆ ಕುದುರೆಯು ಸಕಲಶುಭಲಕ್ಷಣಗಳಿಂದಲೂ ಕೂಡಿದ್ದಿತು."*

ಕಥೆಯನ್ನು ಮುಂದುವರಿಸುತ್ತಿರುವಾಗ ಮಧ್ಯದಲ್ಲಿ ಶೌನಕರು ಪ್ರಶ್ನಿಸಿದರು :

"ಸೌತೇ! ದೇವತೆಗಳಿಂದ ಅಮೃತವು ಹೇಗೆ ಕಡೆಯಲ್ಪಟ್ಟಿತು? ಮತ್ತು ಅದನ್ನು ಎಲ್ಲಿ ಕಡೆದರು? ಮಹಾವೀರ್ಯದಿಂದಲೂ, ಮಹಾತೇಜಸ್ಸಿನಿಂದಲೂ ಕೂಡಿದ್ದ ಆ ಅಶ್ವರತ್ನವು ಅಮೃತಕ್ಕಾಗಿ ಸಮುದ್ರವನ್ನು ದೇವತೆಗಳು ಕಡೆಯುತ್ತಿರುವಾಗ ಹುಟ್ಟಿತಲ್ಲವೇ?"

ಸೌತಿಗಳು ಹೇಳುತ್ತಾರೆ :

**ಜ್ವಲನ್ತಮಚಲಂ ಮೇರುಂ ತೇಜೋರಾಶಿಮನುತ್ತಮಮ್ ।**
**ಆಕ್ಷಿಪನ್ತಂ ಪ್ರಭಾಂ ಭಾನೋಃ ಸ್ವಶೃಙ್ಗೈಃ ಕಾಞ್ಚನೋಜ್ಜ್ವಲೈಃ ॥೫॥**

---

* ಅಮೃತಮಂಥನದ ಕಥೆಯು ಭಾಗವತದಲ್ಲಿಯೂ, ಪದ್ಮಪುರಾಣದಲ್ಲಿಯೂ ವಿಸ್ತಾರ

**ಕನಕಾಭರಣಂ ಚಿತ್ರಂ ದೇವಗನ್ಧರ್ವಸೇವಿತಮ್ ।**
**ಅಪ್ರಮೇಯಮನಾಧೃಷ್ಯಮಧರ್ಮಬಹುಲೈರ್ಜನೈಃ ॥೬॥**

**ವ್ಯಾಲೈರಾವಾರಿತಂ ಘೋರೈರ್ದಿವ್ಯೌಷಧಿವಿದೀಪಿತಮ್ ।**
**ನಾಕಮಾವೃತ್ಯ ತಿಷ್ಠನ್ತಮುಚ್ಛ್ರಯೇಣ ಮಹಾಗಿರಿಮ್ ॥೭॥**

**ಅಗಮ್ಯಂ ಮನಸಾಪ್ಯನ್ಯೈರ್ನದೀವೃಕ್ಷಸಮನ್ವಿತಮ್ ।**
**ನಾನಾಪತಙ್ಗಸಙ್ಘೈಶ್ಚ ನಾದಿತಂ ಸುಮನೋಹರೈಃ ॥೮॥**

**ತಸ್ಯ ಶೃಙ್ಗಮುಪಾರುಹ್ಯ ಬಹುರತ್ನಾಚಿತಂ ಶುಭಮ್ ।**
**ಅನನ್ತಕಲ್ಪಮುದ್ವಿದ್ಧಂ ಸುರಾಃ ಸರ್ವೇ ಮಹೌಜಸಃ ॥೯॥**

**ತೇ ಮನ್ತ್ರಯಿತುಮಾರಬ್ಧಾಸ್ತತ್ರಾಸೀನಾ ದಿವೌಕಸಃ ।**

"ಶೌನಕರೇ! ಮೇರು ಎಂಬ ಹೆಸರಿನ ಸುಪ್ರಸಿದ್ಧವಾದ ಪರ್ವತವೊಂದಿದೆ. ಅದು ತನ್ನ ತೇಜಸ್ಸಿನಿಂದ ಪ್ರಜ್ವಲಿಸುತ್ತಿದೆಯೋ ಎಂಬಂತೆ ಕಾಣುತ್ತಿದೆ. ಅದನ್ನು ತೇಜಸ್ಸಿನ ರಾಶಿಯೆಂದೇ ಹೇಳಬಹುದು. ಅದು ಎಲ್ಲ ಪರ್ವತಗಳಿಗೂ ಉತ್ತಮೋತ್ತಮವಾದ ಪರ್ವತವಾಗಿದೆ. ತನ್ನ ಸುವರ್ಣ ಮಯವಾದ ಶಿಖರಗಳ ಉಜ್ವಲವಾದ ಕಿರಣಗಳಿಂದ ಸೂರ್ಯನ ಕಾಂತಿಯನ್ನೂ ತಿರಸ್ಕರಿಸುವಂತೆ ಕಾಣುತ್ತಿದೆ. ಸ್ವರ್ಣಭೂಷಿತವಾದ ಆ ಪರ್ವತದ ಪ್ರಮಾಣವು ಎಷ್ಟೆಂಬುದನ್ನು ಯಾರೂ ಅರಿಯರು. ಅಧರ್ಮಿಗಳಾದ ಮಾನವರು ಅದನ್ನು ಹತ್ತಲಾರರು. ಆ ಪರ್ವತದಲ್ಲಿ ಭಯಂಕರ ವಾದ ವಿಷಸರ್ಪಗಳು ಹೇರಳವಾಗಿವೆ. ಆ ಪರ್ವತವು ಸ್ವಯಂಪ್ರಕಾಶವನ್ನು ಹೊಂದಿರುವುದಲ್ಲದೆ ದಿವ್ಯೌಷಧಿಲತೆಗಳಿಂದಲೂ ಉದ್ದೀಪಿತವಾಗಿದೆ. ಆ ಪರ್ವತವು ಸ್ವರ್ಗದವರೆಗೂ ಎದ್ದುನಿಂತಿದೆ. ಅನೇಕನದಿಗಳಿಂದಲೂ, ವೃಕ್ಷ ಗಳಿಂದಲೂ ಸಮಾವೃತವಾಗಿರುವ ಆ ಪರ್ವತವನ್ನು ಸಾಮಾನ್ಯಮಾನವರು ಮನಸ್ಸಿನಿಂದಲೂ ಹತ್ತಲಾರರು. ಆ ಪರ್ವತದಲ್ಲಿ ಸುಮನೋಹರವಾದ ಅನೇಕಾನೇಕಪಕ್ಷಿಗಳ ಸಮೂಹಗಳಿದ್ದು ಅವುಗಳು ಯಾವಾಗಲೂ ಕಲ-ಕಲ

---

ವಾಗಿ ಹೇಳಲ್ಪಟ್ಟಿದೆ. ಮಹಾಭಾರತದಲ್ಲಿ ಈ ಕಥೆಯು ಕದ್ರೂ-ವಿನತೆಯರ ಪಣವೊಂದನ್ನು ತಿಳಿಸಲು ಪ್ರಾಸಂಗಿಕವಾಗಿದೆ.

ನಿನಾದವನ್ನು ಮಾಡುತ್ತಿರುತ್ತವೆ. ಆ ಪರ್ವತವು ಎಷ್ಟೋ ಕಲ್ಪಗಳ ಹಿಂದೆಯೇ ಹುಟ್ಟಿರುವುದು. ಬಹುರತ್ನಗಳಿಂದ ವ್ಯಾಪ್ತವಾಗಿದ್ದ ಅಂತಹ ಮೇರುಪರ್ವತದ ಸುವರ್ಣಶೃಂಗದ ಮೇಲೆ ಹತ್ತಿ ಕುಳಿತು ಮಹೌಜಸ್ಕರಾದ ದೇವತೆಗಳು ಮಂತ್ರಾಲೋಚನೆಯನ್ನು ಮಾಡತೊಡಗಿದರು.

ತಪೋನಿಯಮಸಂಪನ್ನರಾದ ಬ್ರಹ್ಮಾದಿದೇವತೆಗಳೂ ಅಲ್ಲಿ ಸೇರಿ ದ್ದರು. ಅಮೃತವನ್ನು ಹೇಗೆ ಪಡೆಯಬೇಕೆಂಬುದೇ ಅವರ ಸಮಾ ಲೋಚನೆಯ ಮುಖ್ಯವಿಷಯವಾಗಿದ್ದಿತು. ದೇವತೆಗಳೆಲ್ಲರೂ ಸೇರಿ ಅಮೃತಪ್ರಾಪ್ತಿಯ ವಿಷಯವನ್ನು ಕುರಿತು ಸಮಾಲೋಚಿಸುತ್ತಿದ್ದಾಗ ಶ್ರೀಮನ್ನಾರಾಯಣನು ಬ್ರಹ್ಮನನ್ನು ಕುರಿತು ಹೇಳಿದನು :

**ದೇವೈರಸುರಸಙ್ಘೈಶ್ಚ ಮಥ್ಯತಾಂ ಕಲಶೋದಧಿಃ ।**
**ಭವಿಷ್ಯತ್ಯಮೃತಂ ತತ್ರ ಮಥ್ಯಮಾನೇ ಮಹೋದಧೌ ॥೧೨॥**

**ಸರ್ವೌಷಧೀಃ ಸಮಾವಾಪ್ಯ ಸರ್ವರತ್ನಾನಿ ಚೈವ ಹ ।**
**ಮನ್ಥಧ್ವಮುದಧಿಂ ದೇವಾ ವೇತ್ಸ್ಯಧ್ವಮಮೃತಂ ತತಃ ॥೧೩॥**

"ದೇವ-ದಾನವರೆಲ್ಲರೂ ಸೇರಿ ಮಹಾಸಾಗರವನ್ನು ಅಮೃತಕ್ಕಾಗಿ ಮಥಿಸಲಿ. ಸಮುದ್ರವನ್ನು ಕಡೆಯುತ್ತಿರುವಾಗ ಅಮೃತವು ಉಪಲಬ್ಧವಾಗು ತ್ತದೆ. ಆದರೆ ಕಡೆಯುವುದನ್ನು ಪ್ರಾರಂಭಿಸಿದೊಡನೆಯೇ ಅಮೃತವು ಬಂದು ಬಿಡುವುದಿಲ್ಲ. ಮೊದಲು ಎಲ್ಲ ಓಷಧಿಗಳೂ ಅನಂತರ ಸಕಲವಿಧವಾದ ರತ್ನಗಳೂ ಹೊರಬರುತ್ತವೆ. ಅವುಗಳನ್ನು ನಾವು ಪಡೆದುಕೊಂಡು ಕಡೆಯುವುದನ್ನು ಮುಂದುವರಿಸಬೇಕು. ಕಡೆಯಲ್ಲಿ ನಮಗೆ ಅಮೃತವು ಸಿಕ್ಕಿಯೇ ಸಿಕ್ಕುತ್ತದೆ."

೧೭ನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ದೇವತೆಗಳು ಮತ್ತು ದೈತ್ಯರು ಸೇರಿ ಅಮೃತಕ್ಕಾಗಿ ಸಮುದ್ರವನ್ನು ಕಡೆದುದು : ಅನೇಕರತ್ನಗಳೊಡನೆ ಅಮೃತದ ಉತ್ಪತ್ತಿ : ಶ್ರೀಮಹಾವಿಷ್ಣುವು ಮೋಹಿನೀರೂಪವನ್ನು ಧರಿಸಿ ಅಮೃತವನ್ನು ಅಪಹರಿಸಿದುದು

ಸೌತಿಗಳು ಹೇಳುತ್ತಾರೆ :

"ಶ್ರೀಮಹಾವಿಷ್ಣುವು ಹೇಳಿದ ಮಾತುಗಳನ್ನು ದೇವತೆಗಳು ಬ್ರಹ್ಮನ ಮೂಲಕ ಕೇಳಿದವರಾಗಿ ಬಹಳ ಸಂತಸಗೊಂಡು ಒಡನೆಯೇ ಸಮುದ್ರವನ್ನು ಕಡೆಯಲು ಹೊರಟರು. ಅದಕ್ಕೆ ಮಂದರಪರ್ವತವನ್ನೇ ಕಡ ಗೋಲನ್ನಾಗಿಟ್ಟುಕೊಳ್ಳಬೇಕೆಂದು ಅವರು ನಿಶ್ಚಯಿಸಿ ಆ ಪರ್ವತದ ಸಮೀಪಕ್ಕೆ ತೆರಳಿದರು. ಮಂದರವು ಸಾಧಾರಣವಾದ ಪರ್ವತವಾಗಿರಲಿಲ್ಲ.

**ತತೋಽಭ್ರಶಿಖರಾಕಾರೈರ್ಗಿರಿಶೃಙ್ಗೈರಲಂಕೃತಮ್ ।**
**ಮನ್ದರಂ ಪರ್ವತವರಂ ಲತಾಜಾಲಸಮಾಕುಲಮ್ ॥೧॥**

**ನಾನಾವಿಹಗಸಂಘುಷ್ಟಂ ನಾನಾದಂಷ್ಟ್ರಿಸಮಾಕುಲಮ್ ।**
**ಕಿನ್ನರೈರಪ್ಸರೋಭಿಶ್ಚ ದೇವೈರಪಿ ಚ ಸೇವಿತಮ್ ॥೨॥**

**ಏಕಾದಶ ಸಹಸ್ರಾಣಿ ಯೋಜನಾನಾಂ ಸಮುಚ್ಛ್ರಿತಮ್ ।**
**ಅಧೋ ಭೂಮೇಃ ಸಹಸ್ರೇಷು ತಾವತ್ಸ್ವೇವ ಪ್ರತಿಷ್ಠಿತಮ್ ॥೩॥**

ಅದು ಬಿಳಿಯದಾದ ಮೇಘಮಂಡಲೋಪಾದಿಯಲ್ಲಿದ್ದ ಗಗನಚುಂಬಿ ಯಾದ ಶಿಖರಗಳಿಂದ ಸುಶೋಭಿಸುತ್ತಿದ್ದಿತು. ನಾನಾವಿಧವಾದ ಲತೆಗಳ ಸಮೂಹದಿಂದ ಆ ಮಂದರಪರ್ವತವು ಆವೃತವಾಗಿದ್ದಿತು. ನಾನಾವಿಧವಾದ ಪಕ್ಷಿಗಳು ಆ ಪರ್ವತದ ಸುತ್ತಲೂ ಇದ್ದ ವೃಕ್ಷಗಳಲ್ಲಿ ಗೂಡುಕಟ್ಟಿಕೊಂಡು ಕಲ-ಕಲ ನಿನಾದಗಳನ್ನು ಮಾಡುತ್ತಿದ್ದುವು. ಕೋರೆದಾಡೆಗಳನ್ನು ಹೊಂದಿದ್ದ ದೊಡ್ಡ-ದೊಡ್ಡ ಸಿಂಹ-ಶಾರ್ದೂಲಾದಿ ಹಿಂಸ್ರಮೃಗಗಳಿಂದ ಆ ಪರ್ವತವು ವ್ಯಾಪ್ತವಾಗಿದ್ದಿತು. ಕಿನ್ನರರೂ, ಅಪ್ಸರೆಯರೂ ಮತ್ತು ದೇವತೆಗಳೂ ಆ ಪರ್ವತವನ್ನು ಸೇವಿಸುತ್ತಿದ್ದರು. ಆ ಪರ್ವತದ ಎತ್ತರವು ಹನ್ನೊಂದು

ಸಾವಿರ ಯೋಜನದವರೆಗಿದ್ದಿತು. ಭೂಮಿಯ ಒಳಗೂ ಆ ಪರ್ವತವು ಹನ್ನೊಂದು ಸಾವಿರ ಯೋಜನಗಳವರೆಗೆ ವ್ಯಾಪಿಸಿದ್ದಿತು. ಅಂತಹ ಪರ್ವತ ವನ್ನು ಮಂಥನಕ್ಕೆ ಕಡೆಗೋಲನ್ನಾಗಿ ಮಾಡಿಕೊಳ್ಳಬೇಕೆಂಬ ಆಲೋಚನೆಯು ಯುಕ್ತವೇ ಸರಿ. ಆದರೆ ಅದನ್ನು ಕಿತ್ತು ಸಮುದ್ರದಲ್ಲಿಡುವ ಕಾರ್ಯವೊಂದಿದೆ. ಪರ್ವತವನ್ನೆತ್ತಿ ಸಮುದ್ರದಲ್ಲಿಡಲು ಅಸಮರ್ಥರಾದ ಇಂದ್ರಾದಿಗಳು ಪುನಃ ಬ್ರಹ್ಮ-ವಿಷ್ಣುಗಳು ಕುಳಿತಿರುವ ಸ್ಥಳಕ್ಕೇ ಹೋದರು. ಮಂದರಪರ್ವತವನ್ನು ಕಿತ್ತು ಸಮುದ್ರದಲ್ಲಿಡಲು ಉಪಾಯವೊಂದನ್ನು ಸೂಚಿಸಬೇಕೆಂದು ಪ್ರಾರ್ಥಿಸಿದರು.

“ನೀವಿಬ್ಬರೂ ಕಲ್ಯಾಣಮಯಿಯಾದ ನಿಮ್ಮ ಉತ್ತಮಬುದ್ಧಿಯನ್ನು ಈ ಕಾರ್ಯಕ್ಕೆ ನಿಯೋಜಿಸಿರಿ. ನಮ್ಮೆಲ್ಲರ ಹಿತಕ್ಕಾಗಿ ಮಂದರಪರ್ವತವನ್ನು ಎತ್ತಿ ಸಮುದ್ರದಲ್ಲಿಡಲು ನಿಮ್ಮ ಶ್ರೇಷ್ಠವಾದ ಬುದ್ಧಿಯ ಮೂಲಕವಾಗಿ ಪ್ರಯತ್ನಿಸಿರಿ.”

ದೇವತೆಗಳು ಹೀಗೆಂದು ಪ್ರಾರ್ಥಿಸಲು ಬ್ರಹ್ಮನೊಡನಿದ್ದ ಅಪ್ರಮೇಯ ಸ್ವಭಾವನೂ, ಸರ್ವಜ್ಞನೂ, ಪದ್ಮಾಕ್ಷನೂ ಆದ ಮಹಾವಿಷ್ಣುವು ಹಾಗೆಯೇ ಆಗಲೆಂದು ದೇವತೆಗಳಿಗೆ ಆಶ್ವಾಸನೆಯನ್ನಿತ್ತನು. ಮಂದರೋದ್ಧರಣ ಕಾರ್ಯಕ್ಕೆ ನಾಗರಾಜನಾದ ಅನಂತನನ್ನು ನಿಯಮಿಸಿದನು. ಬ್ರಹ್ಮನಿಂದ ಪ್ರೇರಿತನಾಗಿ ನಾರಾಯಣನಿಂದ ನಿರ್ದೇಶಿತನಾದ ಅನಂತನು ಒಡನೆಯೇ ಮೇಲೆದ್ದು ಮಂದರೋದ್ಧರಣಕಾರ್ಯದಲ್ಲಿ ತೊಡಗಿದನು. ಮಹಾಬಲಿಷ್ಠ ನಾದ ಅನಂತನು ತನ್ನ ಬಲವನ್ನೆಲ್ಲಾ ಪ್ರಯೋಗಿಸಿ ಅರಣ್ಯಗಳು ಮತ್ತು ಅರಣ್ಯಗಳಲ್ಲಿದ್ದ ಪ್ರಾಣಿಗಳ ಸಮೇತವಾಗಿ ಮಂದರಪರ್ವತವನ್ನು ಕಿತ್ತು ಬಿಟ್ಟನು. ಮಂದರ ಪರ್ವತವನ್ನು ಹೊತ್ತಿದ್ದ ಅನಂತನೊಡನೆ ದೇವತೆಗಳು ಸಮುದ್ರತೀರಕ್ಕೆ ಹೋಗಿ ಸಮುದ್ರದ ಅಧಿದೇವತೆಯಾದ ಸಮುದ್ರರಾಜನನ್ನು ಪ್ರಾರ್ಥಿಸಿದರು:

“ಸಮುದ್ರರಾಜ! ಅಮೃತಪ್ರಾಪ್ತಿಗಾಗಿ ನಾವು ನಿನ್ನಲ್ಲಡಗಿರುವ ನೀರನ್ನು ಕಡೆಯುತ್ತೇವೆ.”

ದೇವತೆಗಳ ಪ್ರಾರ್ಥನೆಯನ್ನು ಕೇಳಿ ಸಮುದ್ರರಾಜನು ಹೇಳಿದನು :

“ದೇವತೆಗಳೇ! ಮಂದರಪರ್ವತದ ನಿರಂತರಭ್ರಮಣದಿಂದ ಉಂಟಾ

ಗುವ ಮಹತ್ತರವಾದ ಮರ್ದನವನ್ನು ನಾನು ಸಹಿಸಿಕೊಳ್ಳುತ್ತೇನೆ. ಆದರೆ ನನ್ನನ್ನು ಮಥಿಸಿ ಪಡೆಯುವ ಅಮೃತದಲ್ಲಿ ನನಗೂ ಸಹ ಒಂದಂಶವನ್ನು ಕೊಡಬೇಕು. ಈ ಒಂದು ನಿಬಂಧನೆಯೊಡನೆ ನಾನು ಒಪ್ಪಿಕೊಳ್ಳುತ್ತೇನೆ."

ದೇವತೆಗಳು ಹಾಗೆಯೇ ಆಗಲೆಂದು ಹೇಳಿದರು. ಸಮುದ್ರರಾಜನ ಅನುಮತಿಯನ್ನು ಪಡೆದನಂತರ ಇಂದ್ರಾದಿಗಳು ಸಮುದ್ರದ ತಳದಲ್ಲಿದ್ದ ಆಮೆಗಳ ರಾಜನಲ್ಲಿಗೆ ಹೋಗಿ ಮಂದರಪರ್ವತವನ್ನು ಸಮುದ್ರದ ಮಧ್ಯ ಭಾಗದಲ್ಲಿ ಹೊತ್ತು ನಿಲ್ಲಲು ಪ್ರಾರ್ಥಿಸಿದರು. ವಿಷ್ಣುವಿನ ಅವತಾರವಾದ ಕೂರ್ಮರಾಜನು ಒಪ್ಪಿ ಮಂದರಪರ್ವತವನ್ನು ತನ್ನ ಅಭೇದ್ಯವಾದ ಬೆನ್ನಿನ ಮೇಲೆ ಇಡುವಂತೆ ಹೇಳಿದನು. ಇಂದ್ರಾದಿಗಳು ಅನಂತನು ಹೊತ್ತಿದ್ದ ಮಂದರಪರ್ವತವನ್ನು ಬಹಳ ಜಾಗರೂಕತೆಯಿಂದ ಕೂರ್ಮರಾಜನ ಬೆನ್ನಿನ ಮೇಲಿಟ್ಟರು.

ಇಂದ್ರನು ತನ್ನ ವಜ್ರಾಯುಧದಿಂದ ಕಡೆಯಲು ಅನುಕೂಲವಾಗು ವಂತೆ ಪರ್ವತಕ್ಕೆ ಕೋಲಿನ ಆಕಾರವು ಬರುವಂತೆ ಮಾಡಿದನು.

ದೇವತೆಗಳು ಸರ್ಪಶ್ರೇಷ್ಠನಾದ ವಾಸುಕಿಯನ್ನೇ ಕಡೆಯುವ ಹಗ್ಗ ವನ್ನಾಗಿ ಮಾಡಿಕೊಂಡರು. ಅಸುರರೂ ಕೂಡ ಅಮೃತಪ್ರಾಪ್ತಿಯ ಲೋಭ ದಿಂದ ದೇವತೆಗಳೊಡನೆ ಕಲೆತು ಸಮುದ್ರವನ್ನು ಕಡೆಯಲು ಒಪ್ಪಿದರು. ಅಸುರರು ವಾಸುಕಿಯ ಹೆಡೆಯ ಕಡೆಯನ್ನೂ ದೇವತೆಗಳು ಬಾಲದ ಕಡೆ ಯನ್ನೂ ಹಿಡಿದು ಕಡೆಯಲು ಪ್ರಾರಂಭಿಸಿದರು.

ಭಗವಾನ್ ಅನಂತನು ನಾರಾಯಣನಿರುವೆಡೆಯಲ್ಲಿಯೇ ಇದ್ದನು. ಅನಂತ ಮತ್ತು ನಾರಾಯಣರು ಒಮ್ಮೆ ವಾಸುಕಿಯ ಹೆಡೆಯನ್ನು ಮೇಲ ಕ್ಕೆತ್ತುತ್ತಲೂ ಮತ್ತೊಮ್ಮೆ ಕೆಳಕ್ಕೆ ಬಗ್ಗಿಸುತ್ತಲೂ ಇದ್ದರು.

ದೇವತೆಗಳಿಂದ ಅನವರತವಾಗಿ ಎಳೆದಾಡಲ್ಪಡುತ್ತಿದ್ದ ವಾಸುಕಿಯ ಮುಖದಿಂದ ಪದೇ-ಪದೇ ಅಗ್ನಿಕಣಗಳಿಂದ ಕೂಡಿದ ಹೊಗೆಯು ಹೊರ ಬರುತ್ತಿದ್ದಿತು. ಕಪ್ಪಾದ ಆ ಹೊಗೆಯೂ, ಅಗ್ನಿಜ್ವಾಲೆಗಳೂ ನಭೋ ಮಂಡಲವನ್ನು ವ್ಯಾಪಿಸಿ ವಿದ್ಯುತ್ತಿನಿಂದ ಕೂಡಿದ ಮೋಡವಾಗಿ ಮಾರ್ಪಟ್ಟು ಕಡೆದು ಕಡೆದು ಬಳಲಿದ್ದ ದೇವ-ದಾನವರ ಮೇಲೆ ತಂಪಾದ ಮಳೆಯನ್ನು

ಕರೆಯುತ್ತಿತ್ತು. ಮೊದಮೊದಲು ಮಂದರಪರ್ವತದ ಚಕ್ರಗತಿಯಿಂದ ಪರ್ವತದ ಮೇಲಿದ್ದ ಮರ-ಬಳ್ಳಿಗಳಿಂದ ಹೂಗಳು ದೇವ-ದಾನವರ ಮೇಲೆ ಸುರಿದು ಪುಷ್ಪವೃಷ್ಟಿಯಾಗುತ್ತಿರುವಂತೆ ಕಾಣುತ್ತಿದ್ದಿತು.

ದೇವಾಸುರರು ಮಂದರಪರ್ವತದಿಂದ ಸಮುದ್ರವನ್ನು ಕಡೆಯುತ್ತಿದ್ದಾಗ-ಮಹಾಮೇಘದ ಗಂಭೀರವಾದ ಗರ್ಜನೆಯೋಪಾದಿಯಲ್ಲಿ ಘೋರವಾದ ಶಬ್ದವಾಯಿತು. ಸಾವಿರಾರು ಜಲಚರಪ್ರಾಣಿಗಳು ಮಂದರಪರ್ವತದ ಕಡೆತಕ್ಕೆ ಸಿಕ್ಕಿ ನುಚ್ಚುನೂರಾಗಿ ನಾಶಹೊಂದಿದುವು. ಪಾತಾಳಲೋಕದಲ್ಲಿದ್ದ ಮತ್ತು ಸಮುದ್ರದಲ್ಲಿದ್ದ ನಾನಾವಿಧವಾದ ಅನೇಕಪ್ರಾಣಿಗಳನ್ನು ಮಂದರ ಪರ್ವತವು ನಾಶಗೊಳಿಸಿತು. ಪರ್ವತವು ಗರ-ಗರನೆ ತಿರುಗುತ್ತಿರಲಾಗಿ ಪರ್ವತದ ಮೇಲಿದ್ದ ಮಹಾವೃಕ್ಷಗಳು ಪರಸ್ಪರ ಸಂಘಟ್ಟಣೆಯಿಂದ ಬುಡ ಮೇಲಾಗಿ ಅವುಗಳಲ್ಲಿದ್ದ ಅಸಂಖ್ಯಾತ ಪಕ್ಷಿಗಳ ಸಮೇತವಾಗಿ ತೊಪ- ತೊಪನೆ ಸಮುದ್ರದಲ್ಲಿ ಬೀಳುತ್ತಿದ್ದುವು. ಮಹಾವೃಕ್ಷಗಳ ಪರಸ್ಪರ ಸಂಘರ್ಷಣೆಯಿಂದ, ಜ್ವಾಲೆಗಳಿಂದ ಕೂಡಿದ ಅಗ್ನಿಯು ಹುಟ್ಟಿ-ಕಾರ್ಮುಗಿಲನ್ನು ಮಿಂಚು ಆವರಿಸುವಂತೆ—ಮಂದರಪರ್ವತವನ್ನಾವರಿಸಿತು. ಹೀಗೆ ಹುಟ್ಟಿದ ಅಗ್ನಿಯು, ಪರ್ವತದ ಚಕ್ರಗತಿಯಿಂದ ಭಯಗೊಂಡು ಅಲೆದಾಡುತ್ತಿದ್ದ ಆನೆಗಳನ್ನೂ, ಸಿಂಹಗಳನ್ನೂ ಮತ್ತು ಅನೇಕ ಇತರ ಪ್ರಾಣಿಗಳನ್ನೂ ಸಹ ಭಸ್ಮಮಾಡಿಬಿಟ್ಟಿತು. ಪರ್ವತದ ಸುತ್ತಲೂ ಹತ್ತಿಕೊಂಡು ಧಗ-ಧಗನೆ ಉರಿಯುತ್ತಿದ್ದ, ಮಹಾಜ್ವಾಲೆಗಳಿಂದ ಕೂಡಿದ್ದ ಬೆಂಕಿಯನ್ನು ದೇವಾಧಿಪನಾದ ಇಂದ್ರನು ಮೇಘಗಳಿಂದ ಹೊರಹೊರಟ ಧಾರಾಕಾರವಾದ ಜಲಪ್ರವಾಹದಿಂದ ಉಪಶಮನಗೊಳಿಸಿದನು. ಅನಂತರದಲ್ಲಿ ಮಂದರಪರ್ವತದ ಮೇಲಿದ್ದ ವೃಕ್ಷಗಳಿಂದಲೂ ಮತ್ತು ಓಷಧಿಲತೆಗಳಿಂದಲೂ ರಸಗಳು ಸಮುದ್ರಕ್ಕೆ ತೊಟ್ಟಿಕ್ಕಿದುವು. ವೃಕ್ಷಗಳ ಮತ್ತು ಓಷಧಿಲತೆಗಳ ಅಮೃತಕ್ಕೆ ಸಮಾನವಾದ ರಸದಿಂದಲೂ, ಸ್ವರ್ಣಮಯವಾದ ಮಂದರಪರ್ವತದಿಂದ ಹರಿದು ಬರುತ್ತಿದ್ದ ರಸದಿಂದಲೂ ಕೂಡಿದ ಸಮುದ್ರದ ನೀರನ್ನು ದೇವತೆಗಳು ಪ್ರಾಶನ ಮಾಡಿ ಅಮರತ್ವವನ್ನು ಪಡೆದರು. ಅನಂತರದಲ್ಲಿ ಮಹಾವೃಕ್ಷಗಳ ಮತ್ತು ಓಷಧಿಲತೆಗಳ ರಸದ ಸಮ್ಮಿಶ್ರಣದಿಂದ ಸಮುದ್ರದ ನೀರೆಲ್ಲವೂ ಹಾಲಾಗಿ ಪರಿವರ್ತಿತವಾಯಿತು. ಕಡೆಯುವಿಕೆಯು ಮುಂದುವರಿದು ಆ ಹಾಲಿನಿಂದ

ತುಪ್ಪವು ಹೊರಬಂದಿತು. ಆದರೆ ಎಷ್ಟು ಕಡೆದರೂ ಅಮೃತವು ಮಾತ್ರ ಉತ್ಪನ್ನವಾಗಲಿಲ್ಲ. ಶ್ರಾಂತರಾದ ದೇವತೆಗಳು ಅಲ್ಲಿಯೇ ಕುಳಿತಿದ್ದ ವರದನಾದ ಬ್ರಹ್ಮನನ್ನು ಕೇಳಿದರು : "ಬ್ರಹ್ಮದೇವ! ನಾರಾಯಣನೊಬ್ಬನನ್ನುಳಿದು ಎಲ್ಲ ದೇವತೆಗಳೂ ಮತ್ತು ದಾನವರೂ ಈ ಸಮುದ್ರವನ್ನು ಬಹಳ ಕಾಲದಿಂದಲೂ ಕಡೆದು ಬಹಳ ಬಳಲಿದ್ದೇವೆ. ಇಷ್ಟು ಕಡೆದರೂ ಅಮೃತವು ಹುಟ್ಟುವ ಸೂಚನೆಯೇ ಕಂಡುಬರುತ್ತಿಲ್ಲ. ಮುಂದೇನು ಮಾಡಬೇಕೆಂಬುದನ್ನು ದಯಮಾಡಿ ಹೇಳು."

ದೇವತೆಗಳ ಮಾತನ್ನು ಕೇಳಿ ಬ್ರಹ್ಮನು ನಾರಾಯಣನಿಗೆ ಹೇಳಿದನು :

"ಮಹಾವಿಷ್ಣೋ! ದಯಮಾಡಿ ಇವರಿಗೆ ನಿನ್ನ ಬಲವನ್ನು ದಯ ಪಾಲಿಸು. ಈ ಸಮಯದಲ್ಲಿ ನೀನೊಬ್ಬನೇ ಎಲ್ಲರಿಗೂ ಆಶ್ರಯನು."

ಅದಕ್ಕೆ ನಾರಾಯಣನು–

"ಸಮುದ್ರಮಥನಕಾರ್ಯಕ್ಕೆ ಯಾರು ಯಾರು ಪ್ರಯತ್ನಿಸುತ್ತಿದ್ದಾರೆಯೋ ಅವರೆಲ್ಲರಿಗೂ ನಾನು ಬಲಪ್ರದಾನಮಾಡುತ್ತೇನೆ. ಈಗ ನೀವೆಲ್ಲರೂ ಸೇರಿ ನಿಮ್ಮ ಸಂಪೂರ್ಣಬಲವನ್ನೂ ನಿಯೋಜಿಸಿ ಮಂದರಪರ್ವತದಿಂದ ಸಮುದ್ರವನ್ನು ಕಡೆದು ಅದನ್ನು ಕಲಕಿಬಿಡಿರಿ"–ಎಂದು ಹೇಳಿದನು.

ಶೌನಕರೇ! ನಾರಾಯಣನ ಮಾತನ್ನು ಕೇಳಿ ಉತ್ಸಾಹಿತರಾದ ಮತ್ತು ನಾರಾಯಣನ ಅನುಗ್ರಹದಿಂದ ಬಲಿಷ್ಠರಾದ ದೇವಾಸುರರು ಪುನಃ ಸಮುದ್ರವನ್ನು ಮಂದರಪರ್ವತದಿಂದ ಕಡೆಯಲು ಪ್ರಾರಂಭಿಸಿದರು. ಸ್ವಲ್ಪ ಕಾಲ ಕಡೆದ ನಂತರದಲ್ಲಿ ಮಹಾಸಾಗರದಲ್ಲಿ ಅನಂತಾನಂತವಾದ ಶೀತಕಿರಣಗಳಿಂದ ಕೂಡಿದ್ದ, ಸೂರ್ಯನಿಗೆ ಸಮನಾದ ತೇಜಸ್ಸಿನಿಂದ ಬೆಳಗುತ್ತಿದ್ದ, ಪ್ರಸನ್ನಾತ್ಮನಾದ ಚಂದ್ರನು ಉದಯಿಸಿದನು. ಅನಂತರ ತುಪ್ಪದ ರೂಪವಾಗಿದ್ದ ಆ ಸಮುದ್ರದ ಜಲದಿಂದ ಶ್ವೇತವಸ್ತ್ರವನ್ನು ಧರಿಸಿದ್ದ ಲಕ್ಷ್ಮಿಯು ಹೊರಬಂದಳು. ಅವಳನ್ನೇ ಅನುಸರಿಸಿ ಸುರಾದೇವಿಯೂ, ಶ್ವೇತಾಶ್ವವೂ ಹುಟ್ಟಿದುವು. ಅನಂತರ ಸಮುದ್ರದ ಘೃತರೂಪವಾದ ಜಲದಿಂದ, ಅನಂತ ಕಿರಣಗಳಿಂದ ಪ್ರಕಾಶಿಸುತ್ತಿದ್ದ ಕೌಸ್ತುಭಮಣಿಯು ಹುಟ್ಟಿ ಶ್ರೀಮನ್ನಾರಾಯಣನ ವಕ್ಷಃಸ್ಥಳವನ್ನು ಅಲಂಕರಿಸಿತು. ಲಕ್ಷ್ಮೀ, ಸುರಾದೇವಿ, ಸೋಮ

ಮತ್ತು ಮನಸ್ಸಿನ ವೇಗಕ್ಕೆ ಸಮಾನವಾದ ವೇಗವುಳ್ಳ ಉಚ್ಚೈಃಶ್ರವಸ್ಸೆಂಬಬಿಳಿಯ ಕುದುರೆ–ಇವುಗಳು ಸೂರ್ಯನ ಮಾರ್ಗವನ್ನೇ ಆಶ್ರಯಿಸಿ ದೇವ ಲೋಕಕ್ಕೆ ಹೋದುವು. ಅನಂತರ ದಿವ್ಯಶರೀರವನ್ನು ಧರಿಸಿದ್ದ ಧನ್ವಂತರಿಯು ಹುಟ್ಟಿದನು. ಅವನು ಅಮೃತದಿಂದ ಪೂರ್ಣವಾಗಿದ್ದ ಶ್ವೇತಕಮಂಡಲುವನ್ನು ಕೈಯಲ್ಲಿ ಹಿಡಿದಿದ್ದನು. ಪರಮಾದ್ಭುತವಾದ ಆ ದೃಶ್ಯವನ್ನು ನೋಡಿ ದಾನವರ ಸಮೂಹದಲ್ಲಿ ಅಮೃತಕ್ಕಾಗಿ ಕೋಲಾಹಲವೆದ್ದಿತು. 'ಅಮೃತವು ನನ್ನದು'–ಎಂದು ಒಬ್ಬೊಬ್ಬರೂ ಕೂಗಿಕೊಳ್ಳುತ್ತಿದ್ದರು. ಅನಂತರ ನಾಲ್ಕು ಬಿಳಿಯ ದಂತಗಳನ್ನು ಹೊಂದಿದ್ದ, ಮಹಾಕಾಯದಿಂದ ಯುಕ್ತವಾಗಿದ್ದ, ಶ್ರೇಷ್ಠವಾದ ಐರಾವತವೆಂಬ ಆನೆಯು ಸಮುದ್ರದಿಂದ ಹುಟ್ಟಿತು. ಅದನ್ನು ವಜ್ರಪಾಣಿಯಾದ ಇಂದ್ರನು ಪಡೆದುಕೊಂಡನು. ದೇವ-ದಾನವರು ಪುನಃ ಪುನಃ ಅತಿವೇಗದಿಂದ ಕಡೆಯುತ್ತಲೇ ಇದ್ದುದರಿಂದ ಕಾಲಕೂಟವೆಂಬ ವಿಷವು ಹುಟ್ಟಿತು. ಅದು ಹುಟ್ಟಿದೊಡನೆಯೇ ಹೊಗೆಯಿಂದ ಕೂಡಿದ ಅಗ್ನಿಯೋಪಾದಿಯಲ್ಲಿ ಪ್ರಜ್ವಲಿಸುತ್ತಾ ಸರ್ವಜಗತ್ತನ್ನೂ ಕ್ಷಣಮಾತ್ರದಲ್ಲಿ ಆವರಿಸಿಬಿಟ್ಟಿತು. ಅದರ ವಾಸನೆಯನ್ನು ಆಘ್ರಾಣಿಸಿದುದರಿಂದಲೇ ಪ್ರಪಂಚದ ಎಲ್ಲ ಪ್ರಾಣಿಗಳೂ ಮೂರ್ಛೆಗೊಂಡುವು. ಒಡನೆಯೇ ಬ್ರಹ್ಮನು ಲೋಕ ಕಲ್ಯಾಣಾರ್ಥವಾಗಿ ಕಾಲಕೂಟ ವಿಷವನ್ನು ಪ್ರಾಶನಮಾಡುವಂತೆ ಪರಶಿವನನ್ನು ಪ್ರಾರ್ಥಿಸಿದನು. ಬ್ರಹ್ಮನ ಪ್ರಾರ್ಥನೆಯಂತೆ ಶಿವನು ವಿಷವನ್ನು ನುಂಗಿಬಿಟ್ಟನು. ಮಂತ್ರಮೂರ್ತಿಯಾದ ಭಗವಾನ್ ಮಹೇಶ್ವರನು ಕಾಲಕೂಟ ವಿಷವನ್ನು ತನ್ನ ಕಂಠದಲ್ಲಿ ಧರಿಸಿಕೊಂಡನು. ಅಂದಿನಿಂದಲೇ ಪರಶಿವನು ನೀಲಕಂಠನೆಂಬ ಮತ್ತೊಂದು ಹೆಸರಿನಿಂದಲೂ ಪ್ರಸಿದ್ಧನಾದನು. ಆ ಪರಮಾದ್ಭುತವನ್ನು ನೋಡಿ ದಾನವರು ನಿರಾಶೆಹೊಂದಿದರು. ಅಮೃತವನ್ನೂ ಮತ್ತು ಲಕ್ಷ್ಮಿಯನ್ನೂ ಪಡೆದುಕೊಳ್ಳಬೇಕೆಂದು ಅವರು ಬಹುವಾಗಿ ಆಶಿಸಿದ್ದರು. ಅವೆರಡೂ ತಮಗೆ ಸಿಕ್ಕದೇ ಇದ್ದುದರಿಂದ ದೇವತೆಗಳನ್ನು ದ್ವೇಷಿಸತೊಡಗಿದರು. ದೇವ-ದಾನವರಲ್ಲಿ ಅಮೃತಕ್ಕಾಗಿಯೂ ಮತ್ತು ಲಕ್ಷ್ಮಿಗಾಗಿಯೂ ಕಲಹವಾಗುವುದರಲ್ಲಿದ್ದಾಗ ನಾರಾಯಣನು ತನ್ನ ಮಾಯೆಯಿಂದ ಮೋಹಿನಿಯಾಗಿ ಪರಿವರ್ತಿತನಾದನು. ಪರಮಾದ್ಭುತವಾದ ಸ್ತ್ರೀರೂಪವನ್ನು ಧರಿಸಿ ದಾನವರ

ಬಳಿಗೆ ಹೋದನು. ಯೋಗಿಗಳನ್ನೂ ಭ್ರಮೆಗೊಳಿಸುವ ರೂಪ, ಪದ್ಮದಳಾಕಾರದ ಕಣ್ಣುಗಳು, ತೊಂಡೇಹಣ್ಣಿನಂತಿರುವ ಚೆಂದುಟಿಗಳು, ಸೂರ್ಯ-ಚಂದ್ರರಂತೆ ಥಳ-ಥಳಿಸುತ್ತಿರುವ ಕರ್ಣಾಭರಣಗಳಿಂದ ಕೂಡಿದ ಕಿವಿಗಳು, ಮುಖಚಂದ್ರನಿಗೆ ಲಾಂಛನದಂತಿರುವ ಎರಡು ಕಪ್ಪಾದ ಹುಬ್ಬುಗಳು, ಸೌಂದರ್ಯವಸ್ತುಗಳನ್ನು ತುಂಬಿದ ಸಂಪುಟಗಳಂತಿರುವ ಸ್ತನದ್ವಯಗಳು, ಸಿಂಹದ ಸೊಂಟಕ್ಕೆ ಸಮನಾದ ನಡುವು, ಸುವರ್ಣಮಯವಾದ ಗೆಜ್ಜೆಗಳಿಂದ ಶೋಭಿಸುತ್ತಿರುವ ಪಾದದ್ವಯಗಳು–ಇಂತಹ ಲಾವಣ್ಯಾತಿಶಯದಿಂದ ಕೂಡಿದ್ದ ಮೋಹಿನಿಯು ಬಂದೊಡನೆಯೇ ದೈತ್ಯ-ದಾನವರಿಗೆ ತಾವೇನು ಮಾಡುತ್ತಿರುವೆವೆಂಬ ಅರಿವೇ ಇಲ್ಲವಾಯಿತು. ಮೋಹಿನಿಯನ್ನು ಎವೆಯಿಕ್ಕದೇ ನೋಡಲು ಪ್ರಾರಂಭಿಸಿದರು. ಮೋಹಿನಿಯ ಕಡೆಗಣ್ಣಿನ ನೋಟವು ಬಿದ್ದೊಡನೆಯೇ ಪ್ರತಿಯೊಬ್ಬ ದಾನವನೂ, ಅಸುರನೂ ಮಂತ್ರದಂಡದಿಂದ ಆಕರ್ಷಿತನಾದವನಂತೆ–'ತಾನಾರು? ತನ್ನ ಕರ್ತವ್ಯವೇನು? ತಾನು ಏನು ಮಾಡುತ್ತಿರುವೆನು?'–ಎಂಬುದೆಲ್ಲವನ್ನೂ ಮರೆತು ತಾನು ಕುಳಿತಲ್ಲಿಂದ ಮೆಲ್ಲನೆ ಮೇಲೆದ್ದು ಮೋಹಿನಿಯನ್ನು ಹಿಂಬಾಲಿಸುತ್ತಿದ್ದನು. ಅವರ ಭ್ರಾಂತಿಯ ಕಾರಣದಿಂದ ಬಹಳ ಕಷ್ಟಪಟ್ಟು ಸಂಪಾದಿಸಿದ ಅಮೃತಕಲಶವೂ ಮೋಹಿನಿಯ ಕೈಸೇರಿತು. ಅವಳ ಮೇಲೆಯೇ ನೆಟ್ಟಮನಸ್ಸುಳ್ಳವರಾಗಿದ್ದ ಮೂಢರಾದ ದೈತ್ಯ-ದಾನವರು ಆ ಅಮೃತಕಲಶವನ್ನು ಅವಳ ಕೈಗೇ ಕೊಟ್ಟುಬಿಟ್ಟರು."

೧೮ನೆಯ ಅಧ್ಯಾಯವು ಮುಗಿಯಿತು.

೧೯ನೆಯ ಅಧ್ಯಾಯ — ಆಸ್ತೀಕಪರ್ವ (ಮುಂದುವರಿದಿದೆ.)

## ದೇವತೆಗಳು ಅಮೃತಪಾನಮಾಡಿದುದು : ದೇವಾಸುರರ ಯುದ್ಧ: ದೇವತೆಗಳ ವಿಜಯ

ಸೌತಿಗಳು ಮುಂದುವರಿದು ಹೇಳುತ್ತಾರೆ :

**ಅಥಾವರಣಮುಖ್ಯಾನಿ ನಾನಾಪ್ರಹರಣಾನಿ ಚ ।**
**ಪ್ರಗೃಹ್ಯಾಭ್ಯದ್ರವನ್ದೇವಾನ್ಸಹಿತಾ ದೈತ್ಯದಾನವಾಃ ॥೧॥**

"ಅಮೃತಕಲಶವು ತಮ್ಮ ಕೈಬಿಟ್ಟುಹೋಗಲಾಗಿ ದೈತ್ಯ-ದಾನವರು

ಸಂಘಟಿತರಾಗಿ ಉತ್ತಮೋತ್ತಮವಾದ ಕವಚಗಳನ್ನು ಧರಿಸಿ ಆಯುಧಗಳನ್ನು ತೆಗೆದುಕೊಂಡು ದೇವತೆಗಳಿದ್ದ ಕಡೆಗೆ ಧಾವಿಸಿದರು.

ಅನಂತರದಲ್ಲಿ ವೀರ್ಯವಂತನಾದ, ದೇವದೇವನಾದ, ನರಸಹಿತ ನಾದ, ಪ್ರಭುವಾದ ಶ್ರೀಮಹಾವಿಷ್ಣುವು ಮೋಹಿನೀರೂಪವನ್ನು ಧರಿಸಿ ದಾನವರಿಂದ ಅಮೃತವನ್ನು ಅಪಹರಿಸಿಕೊಂಡು ಬಂದನು. ಆಗ ದೇವತೆ ಗಳೆಲ್ಲರೂ ಅಮೃತವನ್ನು ವಿಷ್ಣುವಿನಿಂದ ಪಡೆದುಕೊಂಡು ಪ್ರಾಶನಮಾಡಿ ದರು. ಎಲ್ಲೆಡೆಗಳಲ್ಲಿಯೂ ಯುದ್ಧದ ವಾತಾವರಣವಿದ್ದಿತು. ದೇವತೆಗಳು ಬಹಳ ದಿನಗಳಿಂದಲೂ ಅಭಿಲಷಿಸಿದ್ದ ಅಮೃತವನ್ನು ಕುಡಿಯುತ್ತಿರಲಾಗಿ, ರಾಹುವೆಂಬ ದಾನವನು ದೇವತೆಯ ರೂಪವನ್ನು ಧರಿಸಿ ಅಮೃತವನ್ನು ಪಡೆದುಕೊಂಡು ಕುಡಿಯಲಾರಂಭಿಸಿದನು. ಅಮೃತವು ಆ ದಾನವನ ಕಂಠಗತವಾಗಿದ್ದ ಸಮಯಕ್ಕೆ ಸರಿಯಾಗಿ ದೇವತೆಗಳಿಗೆ ಹಿತವನ್ನುಂಟು ಮಾಡುವ ಆಶಯದಿಂದ ಸೂರ್ಯ-ಚಂದ್ರರು ದೇವತಾರೂಪವನ್ನು ಧರಿಸಿರುವವನು ದೈತ್ಯನೆಂಬುದನ್ನು ಹೊರಗೆಡಹಿದರು. ಒಡನೆಯೇ ಚಕ್ರಧಾರಿಯಾದ ಮಹಾವಿಷ್ಣುವು ಅಮೃತವನ್ನು ಕುಡಿಯುತ್ತಿದ್ದ ಆ ದಾನವನ ಮಕುಟಮಂಡಿತವಾಗಿದ್ದ ಮಸ್ತಕವನ್ನು ಕತ್ತರಿಸಿಬಿಟ್ಟನು.

ಚಕ್ರಾಯುಧದಿಂದ ಕತ್ತರಿಸಲ್ಪಟ್ಟು ಪರ್ವತದ ಶಿಖರಕ್ಕೆ ಸಮಾನವಾಗಿದ್ದ ದಾನವನ ಆ ಮಹಾಶಿರವು ಆಕಾಶಕ್ಕೆ ಹಾರಿ ಬಹುಭಯಂಕರವಾಗಿ ಧ್ವನಿಮಾಡಿತು. ಶಿರವು ಆಕಾಶಕ್ಕೆ ಹಾರಿದನಂತರ ಮುಂಡವು ಭೂಮಿಯ ಮೇಲೆ ಬಿದ್ದಿತು. ಮುಂಡವು ಬಿದ್ದೊಡನೆಯೇ ಪರ್ವತ-ವನ-ದ್ವೀಪಗಳಿಂದ ಸಹಿತವಾದ ಭೂಮಿಯೇ ಪ್ರಕಂಪಿಸಿತು. ಅಮೃತವು ರುಂಡ ಮತ್ತು ಮುಂಡ ಎರಡರಲ್ಲಿಯೂ ವ್ಯಾಪಿಸಿದ್ದುದರಿಂದ ಎರಡು ಭಾಗಗಳೂ ಜೀವಂತ ವಾಗಿಯೇ ಉಳಿದುಕೊಂಡವು. ದೇವತಾರೂಪವನ್ನು ಧರಿಸಿ ಅಮೃತಪ್ರಾಶನ ಮಾಡುತ್ತಿದ್ದ ರಾಹುವನ್ನು ಸೂರ್ಯ-ಚಂದ್ರರು ತೋರಿಸಿಕೊಟ್ಟಿದ್ದಕ್ಕಾಗಿ ಅವರ ಮೇಲೆ ರಾಹುವಿಗೆ ಶಾಶ್ವತವಾದ ವೈರವುಂಟಾಯಿತು. ಆ ಕಾರಣದಿಂದಲೇ ಈಗಲೂ ಸಹ ರಾಹುವು ಕೆಲವು ಅಮಾವಾಸ್ಯೆ ಮತ್ತು ಹುಣ್ಣಿಮೆಗಳಲ್ಲಿ ಸೂರ್ಯ-ಚಂದ್ರರನ್ನು ನುಂಗುತ್ತಾನೆ. (ಚಂದ್ರ-ಸೂರ್ಯರ ಗ್ರಹಣ ವಾಗುತ್ತದೆ.)

ಶ್ರೀಹರಿಯೂ ಅನುಪಮವಾದ ಮನೋಹರವಾದ ಸ್ತ್ರೀರೂಪವನ್ನು ತ್ಯಜಿಸಿ ನಾನಾವಿಧವಾದ ಆಯುಧಗಳ ಪ್ರಹಾರದಿಂದ ದಾನವರನ್ನು ನಡುಗಿಸಿದನು.

ರಾಹುವಿನ ಮೇಲೆ ಚಕ್ರಾಯುಧಪ್ರಹಾರದೊಂದಿಗೆ ಅಮೃತದ ಹಂಚಿಕೆಯೂ ನಿಂತಿತು. ಸಮುದ್ರದ ತೀರದಲ್ಲಿ ದೇವ-ದಾನವರಿಗೆ ಘೋರವಾದ ಕಾಳಗವು ಪ್ರಾರಂಭವಾಯಿತು. ಕತ್ತಿ, ಗುರಾಣಿ, ಈಟಿ, ಭರ್ಜಿ, ಮುಸಲ, ಚಕ್ರಾಯುಧ, ಧನುಸ್ಸು–ಇವುಗಳೆಲ್ಲವೂ ಯುದ್ಧದ ಶಸ್ತ್ರಾಸ್ತ್ರಗಳಾಗಿ ಉಪಯೋಗಿಸಲ್ಪಟ್ಟುವು. 'ಹೊಡೆ! ಬಡಿ! ಬಡಿ!'–ಎಂಬ ಸಮರಘೋಷಗಳು ನಭೋಮಂಡಲವನ್ನು ಭೇದಿಸುವಂತಿತ್ತು.

ಅನಂತರದಲ್ಲಿ ಅಸುರರು ವಿಷ್ಣುವಿನ ಚಕ್ರದಿಂದ ಭೇದಿಸಲ್ಪಟ್ಟವರಾಗಿ ರಕ್ತವನ್ನು ಕಕ್ಕುತ್ತಾ ಭೂಮಿಯ ಮೇಲೆ ಬಿದ್ದರು. ಮತ್ತೆ ಕೆಲವರು ದೇವತೆಗಳು ಪ್ರಯೋಗಿಸುತ್ತಿದ್ದ ಕತ್ತಿ, ಶಕ್ತ್ಯಾಯುಧ, ಗದೆ–ಇವುಗಳಿಂದ ಪ್ರಹರಿತರಾಗಿ ಗಾಯಗೊಂಡು ಭೂಮಿಯ ಮೇಲೆ ಬಿದ್ದರು.

ತಪ್ತಸುವರ್ಣಮಾಲೆಗಳಿಂದ ವಿಭೂಷಿತವಾಗಿದ್ದ ದಾನವರ ಶಿರಸ್ಸುಗಳು ದಾರುಣವಾದ ಪಟ್ಟಿಶಗಳೆಂಬ ಆಯುಧಗಳಿಂದ ಕತ್ತರಿಸಲ್ಪಟ್ಟು ಕೆಳಗೆ ಬಿದ್ದುವು. ಸತ್ತುಬಿದ್ದ ರಾಕ್ಷಸರು ರಕ್ತದಿಂದ ತೋಯ್ದುಹೋಗಿದ್ದ ಶರೀರಗಳಿಂದ ಕೂಡಿ-ಗೈರಿಕಾದಿ ಧಾತುಗಳಿಂದ ಕೆಂಪಾಗಿರುವ ಪರ್ವತದ ಶಿಖರಗಳಂತೆ ಕಾಣುತ್ತಿದ್ದರು. ಸೂರ್ಯದೇವನು ಅಸ್ತಮಿಸುತ್ತಿರಲಾಗಿ ಪರಸ್ಪರ ಹನನಕ್ರಿಯೆಯಲ್ಲಿ ಉದ್ಯುಕ್ತರಾಗಿದ್ದ ದೇವ-ದಾನವರ ಸಮೂಹದಲ್ಲಿ ಸಾವಿರಾರು ಬಾರಿ ಹಾಹಾಕಾರಗಳು ಕೇಳಿಬಂದುವು. ಆ ಸಮರಾಂಗಣದಲ್ಲಿ ದೇವ-ದಾನವರು ಪರಿಘಾಯುಧಗಳಿಂದಲೂ, ತೀಕ್ಷ್ಣವಾದ ಭರ್ಜಿಗಳಿಂದಲೂ ಯುದ್ಧಮಾಡುತ್ತಿದ್ದರು. ಆಯುಧಗಳೆಲ್ಲವೂ ಮುಗಿದನಂತರ ಮುಷ್ಟಿಯುದ್ಧವನ್ನೂ ಮಾಡುತ್ತಿದ್ದರು. ಈ ವಿಧವಾಗಿ ಯುದ್ಧಮಾಡುತ್ತಿದ್ದಾಗ ಉದ್ಭೂತವಾದ ಮಹಾಶಬ್ದವು ಆಕಾಶವನ್ನೇ ಮುಟ್ಟಿತು. 'ಛಿನ್ದಿ'–'ಕತ್ತರಿಸಿಬಿಡು', 'ಭಿನ್ದಿ'–'ಒಡೆದುಹಾಕು', 'ಓಡು ಹಿಡಿ', 'ಕತ್ತರಿಸಿ ಕೆಳಕ್ಕೆ ಹಾಕು' 'ಅವನನ್ನು ಬೆನ್ನಟ್ಟಿಹೋಗು'–ಇವೇ ಮುಂತಾದ ವೀರಗರ್ಜನೆಗಳು ರಣಾಂಗಣದ

ಸುತ್ತಲೂ ಅನವರತವಾಗಿ ಕೇಳಿಬರುತ್ತಿದ್ದುವು. ಈ ರೀತಿಯಾಗಿ ದೇವ-ದಾನವರಿಗೆ ಭಯಂಕರವಾದ ಯುದ್ಧವು ನಡೆಯುತ್ತಿರಲಾಗಿ, ನರ-ನಾರಾಯಣರು ದೇವತೆಗಳ ಪರವಾಗಿ ಯುದ್ಧಕ್ಕಾಗಮಿಸಿದರು. ಭಗವಾನ್ ನಾರಾಯಣನು ನರನ ಕೈಯಲ್ಲಿ ದಿವ್ಯವಾದ ಧನುಸ್ಸಿರುವುದನ್ನು ಕಂಡು ದಾನವರ ದರ್ಪಹಂತಕವಾದ ಮಹಾಚಕ್ರವನ್ನು ಸ್ಮರಿಸಿದನು. ನಾರಾಯಣನು ಚಕ್ರವನ್ನು ಸ್ಮರಿಸಿದೊಡನೆಯೇ ಶತ್ರುಗಳಿಗೆ ಸಂತಾಪಕರವಾದ ಮಹಾ ತೇಜಸ್ಸಿನಿಂದ ಕೂಡಿದ್ದ ಆ ಚಕ್ರವು ಆಕಾಶಮಾರ್ಗದ ಮೂಲಕವಾಗಿ ಬಂದು ನಾರಾಯಣನ ಕೈಸೇರಿತು. ಅದು ಸೂರ್ಯಾಗ್ನಿಗಳ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದಿತು. ಮಂಡಲಾಕಾರವಾಗಿದ್ದ ಆ ಚಕ್ರಕ್ಕೆ ಎಲ್ಲಿಯೂ ತಡೆಯೆಂಬುದೇ ಇರಲಿಲ್ಲ. ನೋಡಲು ಬಹುಸುಂದರವಾಗಿಯೂ ಇದ್ದಿತು.

ಅದರ ನಾಮಧೇಯವೂ ಸುದರ್ಶನವೆಂದೇ ಇದ್ದಿತು. ಆದರೆ ಯುದ್ಧದ ಸಮಯದಲ್ಲಿ ಮಾತ್ರ ಶತ್ರುಗಳಿಗದು ಬಹುಭಯಂಕರವಾಗಿ ಕಾಣುತ್ತಿದ್ದಿತು. ಸ್ಮರಿಸಿದೊಡನೆಯೇ ಆಗಮಿಸಿದ, ಪ್ರಜ್ವಲಿಸುವ ಯಜ್ಞೇಶ್ವರನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಶತ್ರುಗಳ ನಗರವನ್ನು ಕ್ಷಣಮಾತ್ರದಲ್ಲಿ ಧ್ವಂಸಮಾಡುವ ಸಾಮರ್ಥ್ಯವನ್ನು ಹೊಂದಿದ್ದ ಚಕ್ರವನ್ನು–ಆನೆಯ ಸೊಂಡಿಲಿನಂತೆ ಸುದೀರ್ಘವಾದ ಬಾಹುಗಳನ್ನು ಹೊಂದಿದ್ದ, ಅತ್ಯಂತವೇಗವಂತನಾದ ನಾರಾಯಣನು ರಭಸದಿಂದ ಶತ್ರುಗಳ ಮೇಲೆ ಪ್ರಯೋಗಿಸಿದನು. ದೇವ-ದಾನವರ ಆ ಮಹಾಯುದ್ಧದಲ್ಲಿ ಪುರು ಷೋತ್ತಮನಾದ ನಾರಾಯಣನ ಕೈಯಿಂದ ಪ್ರಚ್ಯುತವಾದ , ಪ್ರಳಯಕಾಲದ ಅಗ್ನಿಯ ಜ್ವಾಲೆಗಳಿಗೆ ಸಮಾನವಾದ ಜ್ವಾಲೆಗಳಿಂದ ಕೂಡಿದ್ದ ಆ ಮಹಾಚಕ್ರವು ಸಾವಿರಾರು ದೈತ್ಯ-ದಾನವರನ್ನು ತುಂಡರಿಸಿ ಪುನಃ ಪುನಃ ಬಹುವೇಗವಾಗಿ ನಾರಾಯಣನ ಕೈಗೇ ಬಂದು ಸೇರುತ್ತಿದ್ದಿತು.

ನಾರಾಯಣನಿಂದ ಪ್ರಚೋದಿತವಾದ ಆ ಮಹಾಚಕ್ರವು ಕೆಲವು ಸಮಯಗಳಲ್ಲಿ ಅಗ್ನಿಯಂತೆ ಪ್ರಜ್ವಲಿಸುತ್ತಾ ಅಸುರರ ಸೈನ್ಯವನ್ನು ಭಸ್ಮ ಮಾಡಿಬಿಡುತ್ತಿದ್ದಿತು. ಮತ್ತೆ ಕೆಲವು ಸಮಯಗಳಲ್ಲಿ ಚೂರು-ಚೂರಾಗಿ ಕತ್ತರಿಸುತ್ತಿದ್ದಿತು. ಇದೇ ರೀತಿಯಲ್ಲಿ ಆಕಾಶದಲ್ಲಿಯೂ ಮತ್ತು ಪೃಥ್ವಿ

ಯಲ್ಲಿಯೂ ಗರ-ಗರನೆ ತಿರುಗುತ್ತಾ ಆ ಮಹಾಚಕ್ರವು ಸಾಕ್ಷಾತ್ ಪಿಶಾಚಿ ಯಂತೆ ದೈತ್ಯಯೋಧರ ರಕ್ತವನ್ನು ಕುಡಿಯುತ್ತಿದ್ದಿತು. ಮಹಾಸತ್ತ್ವರಾದ, ಮಹಾಬಲರಾದ ಅಸುರರೆಲ್ಲರೂ ಚಕ್ರಾಯುಧದಿಂದ ಪೀಡಿತರಾಗಿ, ಬಿಳಿಯ ಮೋಡಗಳಂತೆ ಹೀನತೇಜಸ್ಕರಾಗಿ, ಮುಂದೇನು ಮಾಡಬೇಕೆಂಬುದನ್ನು ತಿಳಿಯದೇ ಆಕಾಶಕ್ಕೆ ಹಾರಿ ಪರ್ವತದ ಮೇಲಿದ್ದ ಕಲ್ಲುಬಂಡೆಗಳನ್ನೇ ರಭಸ ದಿಂದ ಪ್ರಯೋಗಿಸುತ್ತಾ ದೇವತೆಗಳ ಸಮೂಹವನ್ನು ಪೀಡಿಸುತ್ತಿದ್ದರು.

ಅನಂತರದಲ್ಲಿ ಬಹುಭಯಂಕರಗಳಾದ ನಾನಾವರ್ಣಗಳ ಮೇಘ ಗಳೋಪಾದಿಯಲ್ಲಿದ್ದ, ದೊಡ್ಡ-ದೊಡ್ಡ ವೃಕ್ಷಗಳಿಂದ ಆವೃತವಾಗಿದ್ದ, ಭಯ ವನ್ನುಂಟುಮಾಡುವ ಮಹಾಪರ್ವತಗಳು ಶಿಖರಗಳಿಂದ ಪ್ರತ್ಯೇಕಿಸಲ್ಪಟ್ಟು ಕೆಳಕ್ಕೆ ರಭಸದಿಂದ ಬೀಳುತ್ತಿದ್ದುವು. ಕೆಳಕ್ಕೆ ಬೀಳುತ್ತಿದ್ದ ಅನೇಕ ಪರ್ವತ ಶಿಖರಗಳು ಪರಸ್ಪರ ಸಂಘರ್ಷಿಸಿ ಘೋರಧ್ವನಿಯನ್ನುಂಟುಮಾಡುತ್ತಿದ್ದುವು. (ಆಕಾಶದಲ್ಲಿದ್ದ ದೈತ್ಯರು ಪರ್ವತಗಳನ್ನೇ ಕಿತ್ತು ದೇವತೆಗಳ ಮೇಲೆ ಪ್ರಯೋಗಿಸುತ್ತಿದ್ದರು. ಆ ಸಮಯದಲ್ಲಿ ಪರ್ವತದ ಶಿಖರಗಳು ಕಳಚಿ ಬೀಳುತ್ತಿದ್ದುವು. ಕಳಚಿ ಬೀಳುತ್ತಿದ್ದಾಗ ಒಂದು ಪರ್ವತದ ಶಿಖರಕ್ಕೂ ಮತ್ತೊಂದು ಪರ್ವತದ ಶಿಖರಕ್ಕೂ ಘರ್ಷಣೆಯಾಗುತ್ತಿದ್ದಿತು. ಅದರಿಂದಾಗಿ ಮಹಾಶಬ್ದವುಂಟಾಗುತ್ತಿದ್ದಿತು.) ಆ ಸಮಯದಲ್ಲಿ ದೇವ-ದಾನವರು ಪರಸ್ಪರ ಗರ್ಜನೆಮಾಡುತ್ತಿದ್ದರು. ರಣಾಂಗಣದ ಸುತ್ತಲೂ ಬಾರಿ-ಬಾರಿಗೂ ಬೀಳುತ್ತಿದ್ದ ಮಹಾಪರ್ವತಗಳ ಆಘಾತದಿಂದಾಗಿ ಅರಣ್ಯಸಹಿತಳಾದ ಭೂದೇವಿಯು ಪ್ರಕಂಪಿಸಿದಳು. ಆ ದೇವಾಸುರಯುದ್ಧದಲ್ಲಿ ಭಗವಾನ್ ನರನು ಸುವರ್ಣಮಯವಾದ ಅಗ್ರಭಾಗಗಳನ್ನು ಹೊಂದಿದ್ದ ಮತ್ತು ಸುವರ್ಣ ಮಯವಾದ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದ ಅವ್ಯಾಹತವಾಗಿ ರಭಸ ದಿಂದ ಬರುತ್ತಿದ್ದ ಪರ್ವತಗಳನ್ನೂ, ಪರ್ವತಶಿಖರಗಳನ್ನೂ ತಡೆದು ನಿಲ್ಲಿಸಿ, ಅವುಗಳನ್ನು ಬಹುದೂರದಲ್ಲಿಯೇ ಚೂರ್ಣೀಕರಿಸಿ, ಸಮಸ್ತವಾದ ಆಕಾಶ ಮಾರ್ಗವನ್ನು ತನ್ನ ಬಾಣಗಳ ಜಾಲದಿಂದಲೇ ಮುಚ್ಚಿಬಿಟ್ಟನು.

ಪ್ರಜ್ವಲಿಸುವ ಯಜ್ಞೇಶ್ವರನಿಗೆ ಸಮಾನವಾದ ಪ್ರಭೆಯುಳ್ಳ ಸುದರ್ಶನ ಮಹಾಚಕ್ರವು ಕುಪಿತವಾಗಿ ತಾವು ನಿಂತು ಯುದ್ಧಮಾಡುತ್ತಿರುವ ಆಕಾಶ ಪ್ರದೇಶಕ್ಕೂ ಆಗಮಿಸುತ್ತಿರುವುದೆಂಬ ವಾರ್ತೆಯನ್ನು ಕೇಳಿ ದೇವತೆಗಳಿಂದ

ಬಹುಪೀಡಿತರಾದ ದೈತ್ಯ-ದಾನವರು ಭೂಮಿಯ ಕೆಳಭಾಗದಲ್ಲಿರುವ ಪಾತಾಳಲೋಕವನ್ನೂ ಮತ್ತು ಲವಣಸಮುದ್ರವನ್ನೂ ಹೊಕ್ಕು ತಮ್ಮ ಪ್ರಾಣಗಳನ್ನುಳಿಸಿಕೊಂಡರು.

ದೇವತೆಗಳು ವಿಜಯವನ್ನು ಪಡೆದನಂತರ ಮಂದರಪರ್ವತವು ದೇವತೆಗಳಿಂದ ಯಥಾಯೋಗ್ಯವಾಗಿ ಸಮ್ಮಾನಿಸಲ್ಪಟ್ಟು ತನ್ನ ಸ್ವಸ್ಥಾನವನ್ನು ಸೇರಿತು. ಅನಂತರ ಅಮೃತವನ್ನು ಪಡೆದ ದೇವತೆಗಳು ಅಂತರಿಕ್ಷದಲ್ಲಿಯೂ ಮತ್ತು ಸ್ವರ್ಗದಲ್ಲಿಯೂ ಪ್ರತಿಧ್ವನಿಸುವಂತೆ ಸಿಂಹನಾದಗಳನ್ನು ಮಾಡುತ್ತಾ ಸಂತೋಷಭರಿತರಾಗಿ ತಮ್ಮ ತಮ್ಮ ಸ್ಥಾನಗಳನ್ನು ಸೇರಿದರು. ದೇವತೆಗಳು ತಮಗೆ ಲಭಿಸಿದ ಆ ವಿಜಯದಿಂದಲೂ ಮತ್ತು ಅಮೃತಲಾಭದಿಂದಲೂ ಬಹುಸಂತುಷ್ಟರಾದರು. ಬಹುಕಷ್ಟದಿಂದ ಪಡೆದ ಅಮೃತವನ್ನು ದೇವತೆಗಳು ಸುವ್ಯವಸ್ಥಿತವಾದ, ಸುರಕ್ಷಿತವಾದ ಸ್ಥಳದಲ್ಲಿಟ್ಟರು. ದೇವತೆಗಳಿಂದೊಡಗೂಡಿದ ಇಂದ್ರನು ನಿಧಿರೂಪವಾದ ಆ ಅಮೃತಕಲಶವನ್ನು ಕಿರೀಟಿಯಾದ ನರನ ರಕ್ಷಣೆಗೊಪ್ಪಿಸಿದನು."

೧೯ನೆಯ ಅಧ್ಯಾಯವು ಮುಗಿಯಿತು.

೨೦ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಕದ್ರೂ ಮತ್ತು ವಿನತೆಯರ ಪಂದ್ಯ: ಕದ್ರುವು ತನ್ನ ಮಕ್ಕಳಿಗೆ ಶಾಪಕೊಟ್ಟುದು : ಅದಕ್ಕೆ ಬ್ರಹ್ಮನ ಅನುಮೋದನೆ

ಸೌತಿಗಳು ಮುಂದುವರಿದು ಹೇಳಿದರು :

**ಏತತ್ತೇ ಕಥಿತಂ ಸರ್ವಮಮೃತಂ ಮಥಿತಂ ಯಥಾ ।**
**ಯತ್ರ ಸೋಽಶ್ವಃ ಸಮುತ್ಪನ್ನಃ ಶ್ರೀಮಾನತುಲವಿಕ್ರಮಃ ॥೧॥**

"ಶೌನಕರೇ! ಸಮುದ್ರವನ್ನು ಕಡೆದು ದೇವತೆಗಳು ಅಮೃತವನ್ನು ಹೇಗೆ ಪಡೆದರೆಂಬ ವಿಷಯವನ್ನು ನಿಮಗೆ ವಿಸ್ತಾರವಾಗಿ ಹೇಳಿರುವೆನು. ಇದೇ ಸಮುದ್ರದಿಂದಲೇ ಕಾಂತಿಯುಕ್ತವಾದ, ಶಕ್ತಿಶಾಲಿಯಾದ ಉಚ್ಚೈಃಶ್ರವಸ್ಸೆಂಬ ಕುದುರೆಯೂ ಹುಟ್ಟಿತು.

ಕಶ್ಯಪರ ಪತ್ನಿಯರಾದ ಕದ್ರೂ-ವಿನತೆಯರೂ ಉಚ್ಚೈಃಶ್ರವಸ್ಸೆಂಬ ಕುದುರೆಯು ಬರುತ್ತಿರುವುದೆಂಬುದನ್ನು ಕೇಳಿ, ಅದನ್ನು ನೋಡಲು ನಿಶ್ಚಯಿ

ಸಿದರು. ಸಮುದ್ರಮಥನದ ಪ್ರಕರಣಗಳನ್ನೆಲ್ಲಾ ಪರಸ್ಪರ ಮಾತನಾಡಿ ಕೊಳ್ಳುತ್ತಿರುವಾಗ ಕದ್ರುವು ವಿನತೆಗೆ ಹೇಳಿದಳು :

"ಕುದುರೆಯು ಯಾವ ಬಣ್ಣದ್ದಾಗಿರಬಹುದು? ಹೇಳು ನೋಡೋಣ. ಸ್ವಲ್ಪವೂ ಯೋಚಿಸಕೂಡದು. ಥಟ್ಟನೆ ಹೇಳಬೇಕು."

ಅದಕ್ಕೆ ವಿನತೆಯು–

"ಕುದುರೆಯು ಬೆಳ್ಳಗಿದೆ. ನೀನು ಹೇಗೆ ಭಾವಿಸುವೆ? ಯಾವ ವರ್ಣ ದ್ದೆಂದು ನೀನೂ ಹೇಳು. ಪಂದ್ಯ ಕಟ್ಟೋಣ"–ಎಂದಳು.

"ಆಗಲಿ. ಕುದುರೆಯ ಬಾಲವು ಕಪ್ಪಾಗಿದೆಯೆಂದು ನಾನು ತಿಳಿಯು ತ್ತೇನೆ. ಈ ಪಂದ್ಯದಲ್ಲಿ ಸೋತವರು ಗೆದ್ದವರ ಅಡಿಯಾಳಾಗಬೇಕು."

"ಹಾಗೆಯೇ ಆಗಲಿ."

ಹೀಗೆಂಬುದಾಗಿ ಪಣಕಟ್ಟಿದ ಬಳಿಕ ಅವರಿಬ್ಬರೂ ಮಾರನೆಯ ದಿನ ಕುದುರೆಯನ್ನು ನೋಡಲು ನಿಶ್ಚಯಿಸಿ ಸಡಗರದಿಂದ ತಮ್ಮ-ತಮ್ಮ ಮನೆಗಳಿಗೆ ಹೊರಟುಹೋದರು.

ಕದ್ರುವು ಕುಟಿಲೋಪಾಯದಿಂದ ಸವತಿಯನ್ನು ದಾಸಿಯನ್ನಾಗಿಟ್ಟು ಕೊಳ್ಳಬೇಕೆಂದು ಹವಣಿಸಿ ಮನೆಗೆ ಬಂದೊಡನೆಯೇ ತನ್ನ ಸಾವಿರಮಕ್ಕಳನ್ನೂ ಹತ್ತಿರ ಕರೆದು ಆದರಿಸಿ ಹೇಳಿದಳು :

"ಮಕ್ಕಳಿರಾ! ನೀವೆಲ್ಲರೂ ಸೇರಿ ನಾನು ದಾಸಿಯಾಗುವುದನ್ನು ತಪ್ಪಿಸಬೇಕು."

"ನೀನೇಕಮ್ಮಾ ದಾಸಿಯಾಗಬೇಕು? ಯಾರಿಗೆ ದಾಸಿಯಾಗುವೆ ಯಮ್ಮಾ?"

"ನನ್ನ ಸವತಿಗೆ ನಾನು ದಾಸಿಯಾಗಬೇಕಾಗುವುದು. ಬೆಳ್ಳಗಿರುವ ಕುದುರೆಯ ಬಾಲವನ್ನು ಕಪ್ಪೆಂದು ಹೇಳಿಬಿಟ್ಟಿರುವೆನು."

"ದಾಸಿಯಾಗುವ ಇಚ್ಛೆಯಿಂದಲೇ ಹೀಗೆ ಹೇಳಿದೆಯೇನಮ್ಮಾ?"

"ಇಲ್ಲ. ಸವತಿಯನ್ನು ದಾಸಿಯನ್ನಾಗಿ ಮಾಡಿಕೊಳ್ಳುವ ಆಸೆಯಿಂದ ಹೀಗೆ ಹೇಳಿರುವೆನು."

“ಅದು ಹೇಗಮ್ಮಾ ಸಾಧ್ಯ? ಬಿಳುಪನ್ನು ಕಪ್ಪುಮಾಡುವುದು ಹೇಗೆ?”

“ಅದು ನಿಮ್ಮಿಂದ ಸಾಧ್ಯವಾಗಬೇಕು. ನೀವೆಲ್ಲರೂ ಆ ಕುದುರೆಯ ಬಾಲಕ್ಕೆ ಅಂಟಿಕೊಳ್ಳಿರಿ. ಬಾಲವು ಕಪ್ಪಾಗಿ ಕಂಡರೆ ಸಾಕು. ನಾನು ಗೆಲ್ಲುವೆನು. ಅವಳು ನನ್ನ ದಾಸಿಯಾಗುವಳು.”

“ಇಂತಹ ಮೋಸದ ಕಾರ್ಯಕ್ಕೆ ನಮ್ಮನ್ನು ಪ್ರೇರಿಸುತ್ತಿರುವೆಯೇನಮ್ಮಾ? ತಾಯಿಯಾದವಳು ಮಕ್ಕಳಿಗೆ ಸನ್ಮಾರ್ಗಬೋಧಕಳಾಗ ಬೇಕಲ್ಲವೇ? ನಾವೀ ಅಕಾರ್ಯವನ್ನು ಎಂದಿಗೂ ಮಾಡಲಾರೆವು.”

ಕದ್ರುವು ಕೋಪಗೊಂಡು ತನ್ನ ಮಾತನ್ನು ಪಾಲಿಸದ ಮಕ್ಕಳನ್ನು ಶಪಿಸಿದಳು : “ಪಾಂಡವಕುಲೋತ್ಪನ್ನನಾದ ಜನಮೇಜಯನು ಮಾಡುವ ಸರ್ಪಯಾಗದಲ್ಲಿ ಅಗ್ನಿಯು ನಿಮ್ಮೆಲ್ಲರನ್ನೂ ನಿರ್ದಯೆಯಿಂದ ದಹಿಸಲಿ.”

ವಿಶ್ವವಿಚಾರಗಳನ್ನು ಮನದಲ್ಲಿ ಕಾಣುತ್ತಿದ್ದ ಬ್ರಹ್ಮನು ದೈವಯೋಗದಿಂದ ಕದ್ರುವೇ ತನ್ನ ಮಕ್ಕಳಿಗಿತ್ತ ಆ ಘೋರಶಾಪವನ್ನು ಕೇಳಿದನು. ಸಕಲದೇವತೆಗಳಿಂದಲೂ ಪರಿವೃತನಾಗಿದ್ದ ಬ್ರಹ್ಮನು ಸರ್ಪಗಳು ಅಸಂಖ್ಯಾತ ವಾಗಿ ಬೆಳೆಯುತ್ತಿರುವುದನ್ನು ನೋಡಿ ಪ್ರಜೆಗಳ ಹಿತಾರ್ಥವಾಗಿ ಕದ್ರುವು ತನ್ನ ಮಕ್ಕಳಿಗಿತ್ತ ಶಾಪವನ್ನು ಅನುಮೋದಿಸಿ ದೇವತೆಗಳನ್ನು ಕುರಿತು ಹೇಳಿದನು : “ಅನೇಕ ಸರ್ಪಗಳು ತಮ್ಮಲ್ಲಿರುವ ಅಸಾಧಾರಣಶಕ್ತಿಯನ್ನು ದುರುಪಯೋಗ ಪಡಿಸಿಕೊಳ್ಳುತ್ತಾ ತೊಂದರೆಮಾಡದವರನ್ನೂ ಕಚ್ಚಿಸಾಯಿಸುತ್ತಿವೆ. ಸರ್ಪಗಳು ಹೀಗೆಯೇ ಬೆಳೆಯುತ್ತಾ ಹೋದಲ್ಲಿ ನನ್ನಿಂದ ಸೃಷ್ಟಿಸಲ್ಪಟ್ಟಿರುವ ಇತರ ಪ್ರಾಣಿಗಳೆಲ್ಲವೂ ನಾಶವಾಗಿ ಹೋಗಿಬಿಡಬಹುದು. ಈ ಕಾರಣದಿಂದ ಕದ್ರುವು ತನ್ನ ಮಕ್ಕಳಿಗಿತ್ತ ಶಾಪವು ಫಲಕಾರಿಯಾಗಲೆಂದು ಅನುಗ್ರಹಿಸಿರುವೆನು.

ಸರ್ಪಗಳಲ್ಲಿ ತೀಕ್ಷ್ಣತರವಾದ ವಿಷವಿರುವುದರಿಂದ ಮತ್ತು ಅವುಗಳು ಪೀಡನೆಯಲ್ಲಿಯೇ ಹೆಚ್ಚು ಆಸಕ್ತವಾಗಿರುವುದರಿಂದ ಅವುಗಳ ತಾಯಿಯೇ ಸರ್ಪಗಳಿಗಿತ್ತಿರುವ ಶಾಪವು ಪ್ರಜೆಗಳ ಹಿತದೃಷ್ಟಿಯಿಂದಲೂ ಯುಕ್ತವೇ ಆಗಿದೆ.

**ಅನ್ಯೇಷಾಮಪಿ ಸತ್ತ್ವಾನಾಂ ನಿತ್ಯಂ ದೋಷಪರಾಸ್ತು ಯೇ ।**
**ತೇಷಾಂ ಪ್ರಾಣಾನ್ತಕೋ ದಣ್ಡೋ ದೈವೇನ ವಿನಿಪಾತ್ಯತೇ ॥೧೨॥**

ಯಾರು ಬೇರೆಯವರಿಗೆ ಯಾವಾಗಲೂ ತೊಂದರೆಯನ್ನೇ ಉಂಟು ಮಾಡುತ್ತಿರುತ್ತಾರೆಯೋ ಅಂತಹವರಿಗೆ ಪ್ರಾಣಾಂತಕವಾದ ಶಿಕ್ಷೆಯು ದೈವ ದಿಂದಲೇ ಸಿದ್ಧವಾಗುತ್ತದೆ."

ಬ್ರಹ್ಮನು ಹೀಗೆ ಹೇಳಿ ಕದ್ರುವನ್ನು ಪ್ರಶಂಸಿಸಿ ಕಶ್ಯಪನನ್ನು ಕರೆದು ಹೇಳಿದನು :

"ಪಾಪರಹಿತನಾದ ಕಶ್ಯಪನೇ! ನೀನು ಕದ್ರುವಿನಲ್ಲಿ ಪಡೆದ ವಿಷಸರ್ಪ ಗಳು ಬಹಳವಾಗಿ ಬೆಳೆದುಹೋಗಿವೆ ಮತ್ತು ಅವುಗಳಲ್ಲಿ ಬಹುಭಯಂಕರ ವಾದ ವಿಷವಿದೆ. ಕಾರಣಾಂತರದಿಂದ ಕದ್ರುವೇ ಸರ್ಪಗಳು ವಿನಾಶವಾಗು ವಂತೆ ಶಾಪವನ್ನಿತ್ತಿದ್ದಾಳೆ. ಈ ವಿಷಯದಲ್ಲಿ ನೀನು ಖಂಡಿತವಾಗಿಯೂ ಕುಪಿತನಾಗಕೂಡದು. ಯಜ್ಞದಲ್ಲಿ ಸರ್ಪಗಳ ವಿನಾಶವಾಗುವುದೆಂದು ಹಿಂದೆಯೇ ನಿಶ್ಚಿತವಾಗಿ ಹೋಗಿರುವುದು ನಿನಗೂ ತಿಳಿದಿದೆ. ಆದುದರಿಂದ ನೀನು ನಿನ್ನ ಪುತ್ರರು ವಿನಾಶಹೊಂದುವರೆಂದು ಖಿನ್ನನೂ ಆಗಬೇಡ ; ಕುಪಿತನೂ ಆಗಬೇಡ." ಹೀಗೆಂಬುದಾಗಿ ಸೃಷ್ಟಿಕರ್ತನಾದ ಬ್ರಹ್ಮನು ಕಶ್ಯಪ ಪ್ರಜಾಪತಿಯನ್ನು ಸಮಾಧಾನಪಡಿಸಿ ಮಹಾತ್ಮನಾದ ಅವನಿಗೆ 'ವಿಷಹರೀ' ಎಂಬ ವಿಷನಾಶಕವಾದ ವಿದ್ಯೆಯನ್ನು ಉಪದೇಶಿಸಿದನು."

೨೦ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಸಮುದ್ರದ ವಿಸ್ತಾರವರ್ಣನೆ

ಸೌತಿಗಳು ಮುಂದುವರಿದು ಹೇಳುತ್ತಾರೆ :

"ಶೌನಕರೇ! ರಾತ್ರಿಯು ಕಳೆದು ಪ್ರಾತಃಕಾಲವಾಗಿ ಸೂರ್ಯೋ ದಯವಾದನಂತರ ಸೋದರಿಯರಾದ ಕದ್ರೂ-ವಿನತೆಯರು ದಾಸ್ಯದ ಪಣತೊಟ್ಟ ಕಾರಣದಿಂದ ಅಸಹನೆಯಿಂದಲೂ ಮತ್ತು ರೋಷದಿಂದಲೂ ಕೂಡಿದವರಾಗಿ ಉಚ್ಚೈಃಶ್ರವಸ್ಸೆಂಬ ಕುದುರೆಯನ್ನು ಹತ್ತಿರಕ್ಕೆ ಹೋಗಿ ನೋಡ ಬೇಕೆಂಬ ಆಶಯದಿಂದ ಹೊರಟರು.

ಸ್ವಲ್ಪದೂರ ಹೋದನಂತರ ಅಲ್ಲವರು ಜಲನಿಧಿಯಾದ ಸಮುದ್ರವನ್ನು ನೋಡಿದರು. ಸಮುದ್ರವು ಬಹಳ ವಿಶಾಲವಾಗಿದ್ದಿತು. ಅಗಾಧವಾಗಿದ್ದಿತು. ಜಲರಾಶಿಯಿಂದ ತುಂಬಿದ್ದಿತು. ವಾಯುವಿನಿಂದ ಸತತವಾಗಿ ಕಲಕಲ್ಪಡುತ್ತಾ ನಿರಂತರವೂ ಭೋರ್ಗರೆಯುತ್ತಿದ್ದಿತು. ತಿಮಿಂಗಿಲಗಳಿಂದಲೂ, ಮೀನುಗಳಿಂದಲೂ ಮತ್ತು ಮೊಸಳೆಗಳಿಂದಲೂ ಪೂರ್ಣವಾಗಿದ್ದಿತು. ನಾನಾವಿಧವಾದ ಆಕೃತಿಗಳುಳ್ಳ ಸಾವಿರಾರು ಜಲಚರಪ್ರಾಣಿಗಳಿಂದ ಕೂಡಿದ್ದಿತು. ಭಯಂಕರವಾಗಿಯೂ, ವಿಕಾರವಾಗಿಯೂ, ಘೋರವಾಗಿಯೂ, ಉಗ್ರವಾಗಿಯೂ ಇದ್ದ ಜಲಚರಪ್ರಾಣಿಗಳಿಂದ ಆ ಸಮುದ್ರವು ನಿಬಿಡವಾಗಿ ಯಾರಿಂದಲೂ ಕೂಡ ಎದುರಿಸಲು ಅಥವಾ ಪ್ರವೇಶಿಸಲು ಸಾಧ್ಯವಾಗದಂತಿದ್ದಿತು. ಅದರ ತಲಭಾಗದಲ್ಲಿ ದೊಡ್ಡ-ದೊಡ್ಡ ಆಮೆಗಳೂ, ಮೊಸಳೆಗಳೂ ನಿವಾಸಮಾಡಿಕೊಂಡಿದ್ದುವು. ಸರ್ವರತ್ನಗಳಿಗೂ ಅದು ಆಕರವಾಗಿದ್ದು ವರುಣನ ಮತ್ತು ಸರ್ಪಗಳ ರಮ್ಯವಾದ ಆಲಯವಾಗಿದ್ದಿತು. ಸಕಲನದಿಗಳಿಗೂ ಅದು ಅಧಿಪತಿಯಾಗಿದ್ದಿತು. ಅಂತಹ ಸಮುದ್ರವನ್ನು ಕದ್ರೂ-ವಿನತೆಯರು ಕಂಡರು.

ಬಡಬಾಗ್ನಿಗೆ ವಾಸಸ್ಥಾನವಾದ, ಅಸುರರಿಗೆ ಬಂಧುವಾದ ( ಆಶ್ರಯದಾತನಾದ ), ಸಕಲಪ್ರಾಣಿಗಳಿಗೂ ಭಯಂಕರನಾದ, ಶುಭಪ್ರದನಾದ ಸಮುದ್ರವನ್ನು ಕದ್ರೂ-ವಿನತೆಯರು ನೋಡಿದರು. ಮಂಗಳದಾಯಕನಾದ, ದೇವತೆಗಳಿಗೆ ಅಮೃತವನ್ನಿತ್ತ, ಅಪ್ರಮೇಯನಾದ, ಅಚಿಂತ್ಯನಾದ, ಪುಣ್ಯಜಲಸಮೃದ್ಧಿಯಿಂದ ಕೂಡಿರುವ, ಬಹುಘೋರನಾದ, ಜಲಚರಗಳ ಅನವರತವಾದ ಶಬ್ದಗಳಿಂದ ರೌದ್ರನಾಗಿ ಕಾಣುತ್ತಿರುವ, ಭಯಂಕರವಾದ ಶಬ್ದದಿಂದ ಕೂಡಿರುವ, ಸರ್ವಪ್ರಾಣಿಗಳಿಗೂ ಭಯಂಕರನಾದ ಸಮುದ್ರರಾಜನನ್ನು ಕದ್ರೂ-ವಿನತೆಯರು ವಿಸ್ಮಯಾನ್ವಿತೆಯರಾಗಿ ನೋಡಿದರು. ಗಾಳಿಯ ಸಹಾಯದಿಂದ ತೀರಪ್ರದೇಶವನ್ನು ಅಪ್ಪಳಿಸುವ ಸ್ವಭಾವವುಳ್ಳ, ಸರ್ವದಾ ಕ್ಷೋಭೆಗೊಳ್ಳುತ್ತಲೂ–ಉದ್ವೇಗಗೊಳ್ಳುತ್ತಲೂ ಇರುವ, ಪ್ರಚಲಿತವಾದ ಅಲೆಗಳೆಂಬ ಕೈಗಳಿಂದ ಮುದ್ರಾದಿಗಳನ್ನು ತೋರಿಸುತ್ತಾ ನೃತ್ಯಮಾಡುತ್ತಿರುವನೋ ಎಂಬಂತೆ ಕಾಣುತ್ತಿರುವ, ಚಂದ್ರನ ವೃದ್ಧಿ ಮತ್ತು ಕ್ಷಯಗಳಿಗೆ ಅನುಸಾರವಾಗಿ ಏರಿಳಿತಗಳನ್ನು ಹೊಂದುತ್ತಿರುವ, ಪಾಂಚಜನ್ಯವೆಂಬ ದಿವ್ಯ

ಶಂಖದ ಜನಕನಾದ, ಅತ್ಯಂತಶ್ರೇಷ್ಠನಾದ ರತ್ನಾಕರನನ್ನು ಕದ್ರೂ-ವಿನತೆ ಯರು ನೋಡಿದರು.

ಒಳಗೆ ಸೇರಿದ್ದ ಭೂಮಿಯನ್ನು ಮೇಲೆ ತರಲು ವರಾಹರೂಪಿಯಾದ ಭಗವಂತನಾದ ಗೋವಿಂದನಿಂದ ಅಲ್ಲೋಲ-ಕಲ್ಲೋಲಗೊಳಿಸಲ್ಪಟ್ಟ ಸಮುದ್ರವನ್ನು ಕದ್ರೂ-ವಿನತೆಯರು ಕೌತುಕದಿಂದ ವೀಕ್ಷಿಸಿದರು.

ಅತ್ರಿಮಹರ್ಷಿಯೊಮ್ಮೆ ತಳವನ್ನು ಕಂಡುಹಿಡಿಯಬೇಕೆಂಬ ಉದ್ದೇಶ ದಿಂದ ಸಮುದ್ರದೊಳಗೆ ನೂರು ವರ್ಷಗಳ ಕಾಲ ಸಂಚಾರಮಾಡಿದನು. ಪಾತಾಳದ ತಳದಲ್ಲಿಯೂ ವ್ಯಾಪಿಸಿದ್ದ ಸಮುದ್ರವನ್ನು ನೋಡಿ ಅದು ಅಕ್ಷಯವೆಂಬ ನಿರ್ಧಾರಕ್ಕೆ ಬ್ರಹ್ಮರ್ಷಿಯಾದ ಅತ್ರಿಯೂ ಬರಬೇಕಾಯಿತು. ಅಂತಹ ಸರ್ವವ್ಯಾಪಿಯಾದ ಅಗಾಧವಾದ ಸಮುದ್ರವನ್ನು ಕದ್ರೂ-ವಿನತೆ ಯರು ಕಂಡರು.

ಅಧ್ಯಾತ್ಮಯೋಗನಿದ್ರಾಪರವಶನಾಗಿರುವ, ಪದ್ಮನಾಭನಾದ, ಅಮಿತ ತೇಜಸ್ವಿಯಾದ ಮಹಾವಿಷ್ಣುವಿಗೆ ಯುಗದ ಆದಿಕಾಲದಲ್ಲಿ ಶಯನಸ್ವರೂಪ ನಾಗಿರುವ ಸಮುದ್ರವನ್ನು ಕದ್ರೂ-ವಿನತೆಯರು ವೀಕ್ಷಿಸಿದರು.

ವಜ್ರಾಯುಧಾಘಾತದ ಭೀತಿಯಿಂದ ಸಂತ್ರಸ್ತನಾಗಿದ್ದ ಮೈನಾಕ ಪರ್ವತಕ್ಕೆ ಅಭಯಪ್ರದನಾದ, ದೇವತೆಗಳ ಪೆಟ್ಟನ್ನು ತಾಳಲಾರದೇ ಹಾಹಾ ಕಾರಮಾಡುತ್ತಾ ಓಡಿಬಂದ ರಾಕ್ಷಸರಿಗೂ ಕೂಡ ಆಶ್ರಯಸ್ಥಾನನಾದ ಸಮುದ್ರರಾಜನನ್ನು ಕದ್ರೂ-ವಿನತೆಯರು ನೋಡಿದರು.

ವಡವಾಮುಖನೆಂದು ಪ್ರಸಿದ್ಧನಾಗಿ ಪ್ರಜ್ವಲಿಸುತ್ತಿರುವ ಯಜ್ಞೇಶ್ವರನಿಗೆ ತನ್ನಲ್ಲಿರುವ ನೀರನ್ನೇ ಹವಿಸ್ಸಿನ ರೂಪದಲ್ಲಿ ಕೊಡುತ್ತಿರುವ, ಅಗಾಧವಾದ ತೀರಪ್ರದೇಶಗಳಿಂದ ಕೂಡಿರುವ, ಬಹುವಿಸ್ತೀರ್ಣನಾದ, ಅಪ್ರಮೇಯನಾದ, ಸರಿತ್ಪತಿಯಾದ ಸಮುದ್ರರಾಜನನ್ನು ಕದ್ರೂ-ವಿನತೆಯರು ನೋಡಿದರು.

ಅನೇಕಾನೇಕ ಮಹಾನದಿಗಳು ನಾ ಮುಂದು-ತಾ ಮುಂದೆಂಬ ಸ್ಪರ್ಧೆ ಯಿಂದ ತಮ್ಮ ಪತಿಯಾದ ಸಮುದ್ರರಾಜನನ್ನು ಸೇರುತ್ತಿವೆಯೋ ಎಂಬಂತೆ– ಸಾವಿರಾರು ನದಿಗಳ ಅನವರತವಾದ ಸಂಗಮದಿಂದ ಶೋಭಾಯ

ಮಾನವಾಗಿ ಕಾಣುತ್ತಿರುವ ಮತ್ತು ಆ ನದಿಗಳಿಂದ ಸರ್ವದಾ ನೀರನ್ನು ತುಂಬಿಕೊಳ್ಳುತ್ತಿರುವ, ಅಲೆಗಳ ನೆಪದಿಂದ ಸರ್ವದಾ ನೃತ್ಯಮಾಡುತ್ತಿರುವನೋ ಎಂಬಂತೆ ಕಾಣುತ್ತಿರುವ ಸಮುದ್ರರಾಜನನ್ನು ಕದ್ರೂ-ವಿನತೆಯರು ವೀಕ್ಷಿಸಿದರು.

ಗಂಭೀರವಾದ ತಿಮಿ, ತಿಮಿಂಗಿಲ, ಮೊಸಳೆ–ಮೊದಲಾದ ಉಗ್ರವಾದ ಜಲಚರಪ್ರಾಣಿಗಳಿಂದ ಕೂಡಿರುವ–ಜಲಚರಗಳ ಘೋರನಿನಾದಗಳೊಡನೆ ಸರ್ವದಾ ಗರ್ಜಿಸುತ್ತಿರುವ–ಬಹುನಿರ್ಮಲವಾದ, ಅಗಾಧವಾದ, ಅನಂತವಾದ ನೀರಿನ ನಿಧಿಯಾದ ಸಮುದ್ರವನ್ನು ಕದ್ರೂ-ವಿನತೆಯರು ವೀಕ್ಷಿಸಿದರು.”

೨೧ನೆಯ ಅಧ್ಯಾಯವು ಮುಗಿಯಿತು.

೨೨ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಸರ್ಪಗಳು ಕುದುರೆಯ ಬಾಲವನ್ನು ಕಪ್ಪಾಗಿ ಮಾಡಿದುದು

ಸೌತಿಗಳು ಮುಂದುವರಿದು ಹೇಳುತ್ತಾರೆ :

“ಮಹರ್ಷಿಗಳೇ! ತಾಯಿಯ ಶಾಪವನ್ನು ಪಡೆದ ಹಾವುಗಳು ಖಿನ್ನವಾದ ಮನಸ್ಸಿನಿಂದ ಒಂದೆಡೆ ಸೇರಿ ಮುಂದೇನು ಮಾಡಬೇಕೆಂಬುದನ್ನು ಯೋಚಿಸತೊಡಗಿದುವು. ಅವುಗಳಲ್ಲಿ ಹಿರಿಯ ಹಾವೊಂದು ಎದ್ದುನಿಂತು ಹೇಳಿತು :

“ನಮ್ಮ ಶಾಪವಿಮೋಚನೆಗೆ ಏನು ಮಾಡೋಣ?”

“ಶಾಪವಿಮೋಚನೆಯ ಮೊದಲು ನಾವಿಂದು ಮಾಡಹೊರಟಿರುವುದು ಸರಿಯೇ? ಎಂದು ಯೋಚಿಸಬೇಕಾಗಿದೆ.”

“ಸರಿಯೇ-ತಪ್ಪೇ ಎಂದು ಯೋಚಿಸುವುದಕ್ಕಿಂತಲೂ ನಮ್ಮ ತಾಯಿಯ ಮುಂದಿನ ಗತಿಯೇನೆಂಬುದನ್ನು ವಿವೇಚಿಸುವುದೂ ಮುಖ್ಯ ಕರ್ತವ್ಯವಾಗಿದೆ.”

“ನಮ್ಮಂತಹ ಸಾಹಸವಂತರಾದ ಪುತ್ರರಿದ್ದೂ ನಮ್ಮ ತಾಯಿಯು ಪಂದ್ಯದಲ್ಲಿ ಸೋತುಹೋಗುವ ಕಾರಣದಿಂದ ದಾಸ್ಯಜೀವನವನ್ನು ಮಾಡಬೇಕಾಗುವುದಲ್ಲ!”

"ಇದರಿಂದ ವ್ಯಥಿತಳಾಗಿ ನಮ್ಮ ತಾಯಿಯು ನಮ್ಮನ್ನು ದಹಿಸಿ ಬಿಡಲೂಬಹುದು."

"ಆದುದರಿಂದ ನಾವು ಈ ಸಮಯದಲ್ಲಿ ತಾಯಿಯು ಮಾಡುತ್ತಿರುವುದು ಧರ್ಮವೇ–ಅಧರ್ಮವೇ ಎಂದು ಯೋಚಿಸುವುದಕ್ಕಿಂತಲೂ ತಾಯಿಗೆ ನೆರವಾಗಿ ಅವಳ ದಾಸ್ಯಜೀವನವನ್ನು ತಪ್ಪಿಸುವುದೇ ಶ್ರೇಯಸ್ಕರ."

"ಇದರಿಂದ ನಮ್ಮ ತಾಯಿಯು ಸುಪ್ರೀತಳಾಗಿ ನಮ್ಮನ್ನು ಶಾಪ ವಿಮುಕ್ತರನ್ನಾಗಿಯೂ ಮಾಡಬಹುದು."

"ಆದುದರಿಂದ ನಾವು ಈಗಲೇ ಹೋಗಿ ನಮ್ಮ ತಾಯಿಯೂ ಮತ್ತು ಚಿಕ್ಕಮ್ಮನೂ ಕುದುರೆಯನ್ನು ನೋಡುವುದರೊಳಗಾಗಿ ಅದರ ಬಾಲಕ್ಕೆ ಅಂಟಿಕೊಂಡು ಬಾಲವು ಕಪ್ಪಾಗಿ ಕಾಣುವಂತೆ ಮಾಡಬೇಕು."

ಈ ವಿಧವಾದ ಚರ್ಚೆಗಳಿಂದ ಸರ್ಪಗಳು ತಮ್ಮ ಕರ್ತವ್ಯವೇನೆಂಬುದನ್ನು ನಿರ್ಧರಿಸಿದುವು. ಬಳಿಕ ಕಪ್ಪಾದ ಸರ್ಪಗಳು ಕುದುರೆಯ ಬಳಿಗೆ ಹೋಗಿ ಕುದುರೆಯ ಬಾಲಕ್ಕೆ ಅಂಟಿಕೊಂಡು ಕುದುರೆಯ ಬಾಲದ ಕೂದಲಿನಂತೆಯೇ ಇದ್ದುಬಿಟ್ಟುವು. ಹಿಂದಿನ ದಿನವೇ ಪಂದ್ಯಕಟ್ಟಿಕೊಂಡಿದ್ದ ಸವತಿಯರಿಬ್ಬರೂ ಅದರ ತೀರ್ಮಾನಕ್ಕಾಗಿ ಬಹಳ ಉತ್ಸಾಹದಿಂದ ಸಮುದ್ರದ ಮತ್ತೊಂದು ತೀರಕ್ಕೆ ಹೋಗುತ್ತಿದ್ದರು. ಕದ್ರೂ-ವಿನತೆಯರು ಆಕಾಶಮಾರ್ಗದಲ್ಲಿ ಹೋಗುತ್ತಿದ್ದಾಗ ಪ್ರಶಾಂತವಾಗಿದ್ದ ಜಲನಿಧಿಯಾದ ಸಮುದ್ರವನ್ನು ನೋಡುತ್ತಾ ಹೋದರು. ಯದ್ಯಪಿ ಸಮುದ್ರವು ಪ್ರಶಾಂತವಾಗಿದ್ದರೂ ಸಹ ವಾಯುವಿನಿಂದ ಬಾರಿ-ಬಾರಿಗೂ ಕಲಕಲ್ಪಡುತ್ತಿದ್ದಿತು. ವಾಯುವಿನ ಹೊಡೆತದಿಂದಾಗಿ ದೊಡ್ಡ-ದೊಡ್ಡ ಅಲೆಗಳೆದ್ದು ಮಹಾಗರ್ಜನೆಯುಂಟಾಗುತ್ತಿದ್ದಿತು. ಅಂತಹ ಸಮುದ್ರವನ್ನು ನೋಡುತ್ತಾ ಕದ್ರೂ-ವಿನತೆಯರು ಮುಂದೆ ಹೋದರು.

ತಿಮಿಂಗಿಲಗಳಿಂದಲೂ, ಮೊಸಳೆಗಳಿಂದಲೂ, ನಾನಾವಿಧವಾದ ಸಾವಿರಾರು ಪ್ರಾಣಿಗಳಿಂದಲೂ ಸಂಕುಲವಾಗಿದ್ದ, ಘೋರವಾದ ಪ್ರಾಣಿಗಳಿರುವಿಕೆಯಿಂದಲೇ ಬಹುಘೋರವಾಗಿಯೂ ಮತ್ತು ದುರ್ಗಮ ವಾಗಿಯೂ ಇದ್ದ, ಗಂಭೀರವಾಗಿದ್ದ, ಬಹುಭಯಂಕರವಾಗಿದ್ದ ಸಮುದ್ರವನ್ನು ಸೋದರಿಯರು ನೋಡುತ್ತಾ ಮುಂದೆಹೋದರು.

ಸರ್ವರತ್ನಗಳಿಗೂ ಆಶ್ರಯವಾಗಿದ್ದ, ವರುಣನ ಮತ್ತು ಸರ್ಪಗಳ ರಮ್ಯವಾದ ಆಲಯವಾಗಿದ್ದ, ಸಕಲನದಿಗಳಿಗೂ ರಮಣನೋಪಾದಿಯಲ್ಲಿದ್ದ

ಸಮುದ್ರರಾಜನನ್ನು ಕದ್ರೂ-ವಿನತೆಯರು ನೋಡುತ್ತಾ ಆಕಾಶದಲ್ಲಿ ಪ್ರಯಾಣಮಾಡುತ್ತಿದ್ದರು.

ಬಡಬಾಗ್ನಿಗೆ ವಾಸಸ್ಥಾನನಾದ, ಅಸುರರಿಗೆ ಬಂಧುವಾದ ( ಆಶ್ರಯನಾದ ), ಭಯಂಕರನಾದ, ಅನೇಕಪ್ರಾಣಿಗಳಿಗೆ ಆಶ್ರಯಸ್ಥಾನನಾದ, ಕ್ಷಯರಹಿತನಾದ ಸಮುದ್ರನನ್ನು ಕದ್ರೂ-ವಿನತೆಯರು ನೋಡುತ್ತಾ ಹೋದರು. ಮಂಗಳದಾಯಕನಾದ, ದೇವತೆಗಳಿಗೆ ಅಮೃತವನ್ನಿತ್ತ, ಅಪ್ರಮೇಯನಾದ, ಅಚಿಂತ್ಯನಾದ, ಪುಣ್ಯಜಲಸಮೃದ್ಧಿಯಿಂದ ಕೂಡಿದ್ದ ರತ್ನಾಕರನನ್ನು ಕದ್ರೂ-ವಿನತೆಯರು ನೋಡುತ್ತಾ ಹೋದರು.

ಅನೇಕಾನೇಕ ಮಹಾನದಿಗಳು ನಾ ಮುಂದು-ತಾ ಮುಂದೆಂದು ಸ್ಪರ್ಧೆಯೊಡನೆ ತಮ್ಮ ಪತಿಯಾದ ಸಮುದ್ರರಾಜನನ್ನು ಸೇರುತ್ತಿವೆಯೋ ಎಂಬಂತೆ ಸಾವಿರಾರು ನದಿಗಳ ಅನವರತವಾದ ಸಂಗಮದಿಂದ ಶೋಭಾಯಮಾನನಾಗಿ ಕಾಣುತ್ತಿರುವ ಮತ್ತು ನದಿಗಳಿಂದ ಸರ್ವದಾ ನೀರನ್ನು ತುಂಬಿಕೊಳ್ಳುತ್ತಿರುವ, ಅಲೆಗಳ ವ್ಯಾಜದಿಂದ ಸರ್ವದಾ ನೃತ್ಯ ಮಾಡುತ್ತಿರುವನೋ ಎಂಬಂತೆ ಕಾಣುತ್ತಿರುವ ಸಮುದ್ರರಾಜನನ್ನು (ಸಮುದ್ರದ ಸೊಬಗನ್ನು ) ನೋಡುತ್ತಾ ಕದ್ರೂ-ವಿನತೆಯರು ಮುಂದೆ ಹೋದರು.

ಈ ರೀತಿಯಾಗಿ ಚಂಚಲವಾದ ಅಲೆಗಳಿಂದ ವ್ಯಾಪ್ತನಾಗಿದ್ದ, ಗಂಭೀರನಾಗಿದ್ದ, ಸ್ವಚ್ಛವಾದ ಆಕಾಶದಂತೆ ಪ್ರಕಾಶಮಾನನಾಗಿದ್ದ, ಬಡಬಾಗ್ನಿಯ ಜ್ವಾಲೆಗಳಿಂದ ಪ್ರಕಾಶಿತವಾದ ಶರೀರವನ್ನು ಹೊಂದಿದ್ದ, ಸರ್ವದಾ ಗರ್ಜನೆ ಮಾಡುತ್ತಿದ್ದ ಸಮುದ್ರರಾಜನ ಸೊಬಗನ್ನು ನೋಡುತ್ತಾ ಸವತಿಯರು ಬಹುಶೀಘ್ರವಾಗಿ ಸಮುದ್ರದ ತೀರಕ್ಕೆ ಹೋದರು."

೨೨ನೆಯ ಅಧ್ಯಾಯವು ಮುಗಿಯಿತು.

೨೩ನೆಯ ಅಧ್ಯಾಯ ಆಸ್ತೀಕಪರ್ವ(ಮುಂದುವರಿದಿದೆ.)

## ಪರಾಜಿತಳಾದ ವಿನತೆಯು ಕದ್ರುವಿಗೆ ದಾಸಿಯಾದುದು : ಗರುಡನ ಜನನ : ದೇವತೆಗಳಿಂದ ಗರುಡನ ಸ್ತುತಿ

"ಶೌನಕರೇ! ಅಂತಹ ವಿಸ್ತಾರವಾದ ಸಮುದ್ರವನ್ನೂ ದಾಟಿ ಕದ್ರುವು ವಿನತೆಯೊಡನೆ ಉಚ್ಚೈಃಶ್ರವಸ್ಸೆಂಬ ಕುದುರೆಯ ಹತ್ತಿರಕ್ಕೆ ಹೋದಳು.

ಮಹಾವೇಗದಿಂದ ಅಂತರಿಕ್ಷದಲ್ಲಿ ಹೋಗುತ್ತಿದ್ದ, ಚಂದ್ರನ ಕಿರಣಗಳಿಗೆ ಸಮಾನವಾದ ಕಾಂತಿಯಿಂದ ಪ್ರಕಾಶಿಸುತ್ತಿದ್ದ, ಕಪ್ಪಾದ ಬಾಲವನ್ನು ಹೊಂದಿದ್ದ, ಶ್ರೇಷ್ಠವಾದ ಕುದುರೆಯನ್ನು ಕದ್ರೂ-ವಿನತೆಯರಿಬ್ಬರೂ ಹತ್ತಿರ ದಿಂದಲೇ ನೋಡಿದರು.

ಇಬ್ಬರಿಗೂ ಆಶ್ಚರ್ಯವೆನಿಸುವ ರೀತಿಯಲ್ಲಿ ಕುದುರೆಯ ಬಾಲವು ಕಪ್ಪಾಗಿತ್ತು. (ಸರ್ಪಗಳು ತನ್ನ ಮಾತಿಗೆ ಪ್ರತಿಯಾಡಿದ ಕಾರಣ ಪಂದ್ಯದಲ್ಲಿ



ತಾನು ಗೆಲ್ಲುವೆನೆಂಬ ಆಸೆಯು ಕದ್ರುವಿಗೆ ಇರಲೇ ಇಲ್ಲ. ವಿನತೆಗಂತೂ ಕುದುರೆಯ ಬಾಲವು ಬಿಳುಪಾಗಿರುವುದರಲ್ಲಿ ಯಾವ ಸಂಶಯವೂ ಇರಲಿಲ್ಲ. ಆದುದರಿಂದ ಅದರ ಫಲವೇನೇ ಆದರೂ ಕುದುರೆಯನ್ನು

ನೋಡೋಣವೆಂದು ಇಚ್ಛಿಸಿ ಇಬ್ಬರೂ ಬಂದಿದ್ದರು. ವಿಧಿನಿಯಮವೆಂದರೆ ಇದೇ ಅಲ್ಲವೇ? ತಾಯಿಯ ಮಾತನ್ನು ನಿರಾಕರಣೆಮಾಡಿದ ಕಾರಣದಿಂದ ಸರ್ಪಗಳಿಗೆ ಶಾಪವನ್ನು ಅನುಭವಿಸುವುದೂ ತಪ್ಪಲಿಲ್ಲ. ವಿನತೆಗೆ ದಾಸ್ಯ ಜೀವನವೂ ತಪ್ಪಲಿಲ್ಲ. ಅರುಣನ ಶಾಪವೂ ಫಲಿಸಿತು.) ಕಪ್ಪುಕೂದಲುಗಳಿಂದ ಕೂಡಿದ್ದ ಕುದುರೆಯ ಬಾಲವನ್ನು ನೋಡಿದಕೂಡಲೇ ವಿನತೆಯ ಮುಖವು ಬಾಡಿತು. ಕಣ್ಣುಗಳಿಂದ ಧಾರಾಕಾರವಾಗಿ ನೀರು ಪ್ರವಹಿಸತೊಡಗಿತು. ಕದ್ರುವಿಗೆ ಕುದುರೆಯ ಕಪ್ಪಾದ ಬಾಲವನ್ನು ನೋಡಿ ಆಶ್ಚರ್ಯವೆನಿಸಿದರೂ ತನ್ನ ಮಕ್ಕಳನ್ನು ಮನಸ್ಸಿನಲ್ಲಿಯೇ ಶ್ಲಾಘಿಸುತ್ತಾ ದಾಸಿಯಾದಳೆಂಬ ಕಾರಣದಿಂದ ವಿನತೆಯೊಡನೆ ಹೆಚ್ಚು ಮಾತನಾಡದೇ ಮುಂದೆ ನಡೆದಳು. ಸವತಿಯ ಮೇಲೆ ಸೇಡುತೀರಿಸಿಕೊಂಡಂತಾಯಿತು. ವಿಧಿಯ ಚೋದನೆ ಯಿಂದಾಗಿ ಕುಟಿಲತೆಯಿಂದ ತಾನು ಸೋತಿರುವೆನೆಂದು ತಿಳಿದಿದ್ದರೂ ವಿನತೆಯು ಸತ್ಯವ್ರತಳಾದ ಕಾರಣ ದಾಸಿಯಂತೆ ಕದ್ರುವಿನ ಹಿಂದೆಯೇ ನಡೆದುಹೋದಳು.

ವಿನತೆಯು ಕದ್ರುವಿನ ದಾಸಿಯಾದನಂತರ ಅವಳ ಇನ್ನೊಂದು ಮೊಟ್ಟೆಯ ಯೋಗಕ್ಷೇಮವನ್ನು ನೋಡಿಕೊಳ್ಳುವವರೇ ಇರಲಿಲ್ಲ. ಆದರೂ ಕಾಲಾನುಗುಣವಾಗಿ ಮೊಟ್ಟೆಯು ತಾನಾಗಿಯೇ ಒಡೆಯಿತು. ಅದರೊಳಗಿದ್ದ ಚೇತನವು ಸಾಧಾರಣವಾದ ಚೇತನವಾಗಿರಲಿಲ್ಲ. ಅಸಾಧಾರಣವಾದ ಚೇತನ ವಾಗಿದ್ದಿತು. ಅದು ಮೊಟ್ಟೆಯಿಂದ ಹೊರಗೆ ಬಂದೊಡನೆಯೇ ಅದರ ಪ್ರಕಾಶವು ಮಿಂಚಿನಂತೆ ನಾಲ್ಕು ದಿಕ್ಕುಗಳಿಗೂ ಚೆಲ್ಲಿತು.

ಆ ಚೇತನನು ಕಾಮರೂಪನೂ ( ಇಚ್ಛಿಸಿದ ರೂಪವನ್ನು ಪಡೆದು ಕೊಳ್ಳುವ ಶಕ್ತಿಯುಳ್ಳವನೂ ), ಕಾಮಗನೂ ( ಇಚ್ಛೆಬಂದಲ್ಲಿಗೆ ಕ್ಷಣಮಾತ್ರ ದಲ್ಲಿ ಹೋಗುವ ಸಾಮರ್ಥ್ಯವುಳ್ಳವನೂ ), ಕಾಮವೀರ್ಯನೂ (ಅಪರಿಮಿತ ವಾದ ಪರಾಕ್ರಮವನ್ನು ಪಡೆದುಕೊಳ್ಳುವ ಸಾಮರ್ಥ್ಯವಿರುವವನೂ) ಆಗಿದ್ದನು. ಹುತಮಾಡಿದ ಯಜ್ಞೇಶ್ವರನಂತೆ ಕಾಣುತ್ತಿದ್ದ ಅವನು ಬಹಳ ಭಯಂಕರಾಕಾರನಾಗಿದ್ದನು. ಅವನ ಕಣ್ಣುಗಳು ಕೆಂಪಾಗಿದ್ದು ಮಿಂಚಿನಂತೆ ಥಳ-ಥಳನೆ ಪ್ರಕಾಶಿಸುತ್ತಿದ್ದುವು. ಪ್ರಳಯಕಾಲದ ಅಗ್ನಿಯಂತೆ ಅವನು ಜಾಜ್ವಲ್ಯಮಾನನಾಗಿ ಪ್ರಕಾಶಿಸುತ್ತಿದ್ದನು. ಅವನೇ ಪ್ರಸಿದ್ಧನಾದ ಗರುತ್ಮಂತ.

ಮಹಾಕಾಯನಾದ ಗರುಡನು ಹುಟ್ಟಿದೊಡನೆಯೇ ಪ್ರವೃದ್ಧನಾಗಿ

ಆಕಾಶವನ್ನೇ ವ್ಯಾಪಿಸಿದನು. ಘೋರರೂಪಿಯಾಗಿದ್ದ ಅವನು ಮಾಡುತ್ತಿದ್ದ ಶಬ್ದವೂ ಬಹುಘೋರವಾಗಿದ್ದಿತು. ರೌದ್ರನಾಗಿದ್ದ ಅವನು ಸಮುದ್ರದಲ್ಲಿ ಬಡಬಾಗ್ನಿಯಂತೆಯೇ ಪ್ರಕಾಶಿಸುತ್ತಿದ್ದನು.

ಯಜ್ಞೇಶ್ವರನೇ ತನ್ನ ಜ್ವಾಲೆಗಳನ್ನು ಬೆಳಗಿಸುತ್ತಿದ್ದಾನೆಂದು ಭ್ರಾಂತರಾದ ದೇವತೆಗಳು ಅಗ್ನಿಯ ಸಮೀಪಕ್ಕೆ ಹೋಗಿ ಮೊರೆಯಿಟ್ಟರು. ಊರ್ಧ್ವ ಮುಖವಾಗಿ ಬೆಳೆಯುತ್ತಿರುವ ಜ್ವಾಲೆಗಳನ್ನು ಸುಪ್ತಗೊಳಿಸಬೇಕೆಂದು ಪ್ರಾರ್ಥಿಸಿದರು :

"ಅಗ್ನಿದೇವ! ನೀನು ಈ ಪ್ರಕಾರವಾಗಿ ನಿನ್ನ ಶರೀರವನ್ನು ಬೆಳೆಸಬೇಡ. ನೀನು ಹೀಗೆ ವರ್ಧಿಸುತ್ತಿರುವುದು ನಮ್ಮನ್ನು ಭಸ್ಮಮಾಡುವುದಕ್ಕಲ್ಲ ತಾನೇ? ನಮ್ಮನ್ನು ಭಸ್ಮಮಾಡಿಬಿಡುವ ಆಶಯದಿಂದ ನೀನು ವರ್ಧಿಸುತ್ತಿರುವೆಯೆಂದು ನಾವು ಭಯಪಡುತ್ತಿದ್ದೇವೆ. ಇತ್ತಕಡೆ ನೋಡು, ಅಗ್ನಿದೇವ! ವರ್ಧಿಸುತ್ತಿರುವ ಈ ನಿನ್ನ ಮಹಾಜ್ವಾಲೆಗಳು ನಮ್ಮ ಕಡೆಗೂ ರಭಸದಿಂದ ಬರುತ್ತಿವೆ."

"ಅಸುರಹಂತಕರೇ! ನೀವು ಭಾವಿಸಿರುವಂತೆ ನಿಮ್ಮ ಸಮೀಪಕ್ಕೆ ಬರುತ್ತಿರುವುದು ನನ್ನ ಜ್ವಾಲೆಗಳಲ್ಲ. ನನ್ನಂತೆಯೇ ಮಹಾತೇಜಸ್ವಿಯಾದ, ಮಹಾಬಲಿಷ್ಠನಾದ ಗರುಡನಿವನು. ವಿನತಾನಂದವರ್ಧನನಾದ ಇವನು ಮಹಾತೇಜಸ್ವಿಯಾಗಿ ಹುಟ್ಟಿದ್ದಾನೆ. ತೇಜೋರಾಶಿಯಾದ ಇವನನ್ನು ನೋಡಿಯೇ ನೀವು ಭ್ರಾಂತರಾಗಿರುವಿರಿ. ಕಶ್ಯಪರ ಮಗನಾದ ಮಹಾಬಲನಾದ ಇವನು ಸರ್ಪಗಳ ವಿನಾಶಕ್ಕಾಗಿಯೇ ಹುಟ್ಟಿರುವನು. ದೇವತೆಗಳಿಗೆ ಹಿತವನ್ನುಂಟುಮಾಡತಕ್ಕವನೂ, ದೈತ್ಯ-ರಾಕ್ಷಸರಿಗೆ ಅಹಿತವನ್ನುಂಟುಮಾಡತಕ್ಕವನೂ ಆಗುವನು. ನೀವು ಇವನ ವಿಷಯದಲ್ಲಿ ಭಯಪಡಬೇಕಾದ ಕಾರಣವಿಲ್ಲ. ನೀವೆಲ್ಲರೂ ನನ್ನೊಡನೆ ಬನ್ನಿರಿ. ಎಲ್ಲರೂ ಹೋಗಿ ಅವನನ್ನೇ ನೋಡಿ ಮಾತನಾಡೋಣ."

ಅಗ್ನಿದೇವನು ಹೀಗೆ ಹೇಳಲಾಗಿ ದೇವತೆಗಳೂ ಮತ್ತು ಋಷಿಗಳೂ ಅಗ್ನಿಯನ್ನೇ ಮುಂದೆಮಾಡಿಕೊಂಡು ಗರುಡನ ಸಮೀಪಕ್ಕೆ ಹೋಗಿ ಸಮೀಚೀನವಾದ ಸ್ತೋತ್ರಗಳಿಂದ ಗರುಡನನ್ನು ಸ್ತುತಿಸತೊಡಗಿದರು :

## ದೇವಕೃತಗರುಡಸ್ತೋತ್ರಮ್

ತ್ವಮೃಷಿಸ್ತ್ವಂ ಮಹಾಭಾಗಸ್ತ್ವಂ ದೇವಃ ಪತಗೇಶ್ವರಃ ॥೧೫॥

ತ್ವಂ ಪ್ರಭುಸ್ತಪನಃ ಸೂರ್ಯಃ ಪರಮೇಷ್ಠೀ ಪ್ರಜಾಪತಿಃ ।
ತ್ವಮಿನ್ದ್ರಸ್ತ್ವಂ ಹಯಮುಖಸ್ತ್ವಂ ಶರ್ವಸ್ತ್ವಂ ಜಗತ್ಪತಿಃ ॥೧೬॥

ತ್ವಂ ಮುಖಂ ಪದ್ಮಜೋ ವಿಪ್ರಸ್ತ್ವಮಗ್ನಿಃ ಪವನಸ್ತಥಾ ।
ತ್ವಂ ಹಿ ಧಾತಾ ವಿಧಾತಾ ಚ ತ್ವಂ ವಿಷ್ಣುಃ ಸುರಸತ್ತಮಃ ॥೧೭॥

ತ್ವಂ ಮಹಾನಭಿಭೂಃ ಶಶ್ವದಮೃತಂ ತ್ವಂ ಮಹದ್ಯಶಃ ।
ತ್ವಂ ಪ್ರಭಾಸ್ತ್ವಮಭಿಪ್ರೇತಂ ತ್ವಂ ನಸ್ತ್ರಾಣಮನುತ್ತಮಮ್ ॥೧೮॥

ಬಲೋರ್ಮಿಮಾನ್ಸಾಧುರದೀನಸತ್ತ್ವಃ
ಸಮೃದ್ಧಿಮಾನ್ದುರ್ವಿಷಹಸ್ತ್ವಮೇವ ।
ತ್ವತ್ತಃ ಸೃತಂ ಸರ್ವಮಹೀನಕೀರ್ತೇ
ಹ್ಯನಾಗತಂ ಚೋಪಗತಂ ಚ ಸರ್ವಮ್ ॥೧೯॥

ತ್ವಮುತ್ತಮಃ ಸರ್ವಮಿದಂ ಚರಾಚರಂ
ಗಭಸ್ತಿಭಿರ್ಭಾನುರಿವಾವಭಾಸಸೇ ।
ಸಮಾಕ್ಷಿಪನ್ಭಾನುಮತಃ ಪ್ರಭಾಂ ಮುಹು-
ಸ್ತ್ವಮನ್ತಕಃ ಸರ್ವಮಿದಂ ಧ್ರುವಾಧ್ರುವಮ್ ॥೨೦॥

ದಿವಾಕರಃ ಪರಿಕುಪಿತೋ ಯಥಾ ದಹೇ-
ತ್ಪ್ರಜಾಸ್ತಥಾ ದಹಸಿ ಹುತಾಶನಪ್ರಭ ।
ಭಯಂಕರಃ ಪ್ರಲಯ ಇವಾಗ್ನಿರುತ್ಥಿತೋ
ವಿನಾಶಯನ್ಯುಗಪರಿವರ್ತನಾನ್ತಕೃತ್ ॥೨೧॥

ಖಗೇಶ್ವರಂ ಶರಣಮುಪಾಗತಾ ವಯಂ
ಮಹೌಜಸಂ ಜ್ವಲನಸಮಾನವರ್ಚಸಮ್ ।
ತಡಿತ್ಪ್ರಭಂ ವಿತಿಮಿರಮಭ್ರಗೋಚರಂ
ಮಹಾಬಲಂ ಗರುಡಮುಪೇತ್ಯ ಖೇಚರಮ್ ॥೨೨॥

ಪರಾವರಂ ವರದಮಜಯ್ಯವಿಕ್ರಮಂ
ತವೌಜಸಾ ಸರ್ವಮಿದಂ ಪ್ರತಾಪಿತಮ್ ।

ಜಗತ್ಪ್ರಭೋ ತಪ್ತಸುವರ್ಣವರ್ಚಸಾ
ತ್ವಂ ಪಾಹಿ ಸರ್ವಾಂಶ್ಚ ಸುರಾನ್ಮಹಾತ್ಮನಃ ॥೨೩॥

ಭಯಾನ್ವಿತಾ ನಭಸಿ ವಿಮಾನಗಾಮಿನೋ
ವಿಮಾನಿತಾ ವಿಪಥಗತಿಂ ಪ್ರಯಾನ್ತಿ ತೇ ।
ಋಷೇ ಸುತಸ್ತ್ವಮಸಿ ದಯಾವತಃ ಪ್ರಭೋ
ಮಹಾತ್ಮನಃ ಖಗವರ ಕಶ್ಯಪಸ್ಯ ಹ ॥೨೪॥

ಸ ಮಾ ಕ್ರುಧಃ ಕುರು ಜಗತೋ ದಯಾಂ ಪರಾಂ
ತ್ವಮೀಶ್ವರಃ ಪ್ರಶಮಮುಪೈಹಿ ಪಾಹಿ ನಃ ।
ಮಹಾಶನಿಸ್ಫುರಿತಸಮಸ್ವನೇನ ತೇ
ದಿಶೋಽಮ್ಬರಂ ತ್ರಿದಿವಮಿಯಂ ಚ ಮೇದಿನೀ ॥೨೫॥

ಚಲನ್ತಿ ನಃ ಖಗ ಹೃದಯಾನಿ ಚಾನಿಶಂ
ನಿಗೃಹ್ಯತಾಂ ವಪುರಿದಮಗ್ನಿಸಂನಿಭಮ್ ।
ತವ ದ್ಯುತಿಂ ಕುಪಿತಕೃತಾನ್ತಸಂನಿಭಾಂ
ನಿಶಮ್ಯ ನಶ್ಚಲತಿ ಮನೋಽವ್ಯವಸ್ಥಿತಮ್ ।
ಪ್ರಸೀದ ನಃ ಪತಗಪತೇ ಪ್ರಯಾಚತಾಂ
ಶಿವಶ್ಚ ನೋ ಭವ ಭಗವನ್ಸುಖಾವಹಃ ॥೨೬॥

"ಪ್ರಭುವೇ! ನೀನು ಮಂತ್ರದ್ರಷ್ಟಾರನಾದ ಋಷಿಯಾಗಿರುವೆ. ನೀನು ಮಹಾಭಾಗನು. ದೇವತೆಯು. ಪಕ್ಷಿಗಳಿಗೆಲ್ಲಾ ರಾಜನಾಗಿರುವೆ. ನೀನು ಪ್ರಭುವು. ಲೋಕಕ್ಕೆ ತಾಪವನ್ನುಂಟುಮಾಡುವ ಸೂರ್ಯನೂ ನೀನೇ ಆಗಿರುವೆ. ಪರಮೇಷ್ಠಿಯೂ ಮತ್ತು ಪ್ರಜಾಪತಿಯೂ ನೀನೇ. ಇಂದ್ರ, ಹಯಗ್ರೀವ, ಶಿವ–ಇವರೆಲ್ಲರೂ ನೀನೇ. ಜಗತ್ತಿಗೆ ಒಡೆಯನು ನೀನು. ನೀನು ಬ್ರಹ್ಮನ ಮುಖರೂಪನಾಗಿರುವೆ. ವರ್ಣದಲ್ಲಿ ಬ್ರಾಹ್ಮಣನು ನೀನು. ಅಗ್ನಿ ಮತ್ತು ವಾಯು ಎರಡೂ ನೀನೇ ಆಗಿರುವೆ. ಧಾತಾ, ವಿಧಾತಾ, ದೇವತೆಗಳಲ್ಲಿ ಶ್ರೇಷ್ಠನಾದ ವಿಷ್ಣು–ಇವರೆಲ್ಲರೂ ನೀನೇ. ನೀನು ಮಹಾಸತ್ತ್ವನಾಗಿರುವೆ. ನಿನ್ನೆದುರಾಗಿ ಯುದ್ಧಕ್ಕೆ ಬರುವವರೆಲ್ಲರನ್ನೂ ಜಯಿಸುವೆ. ಸನಾತನನಾದ ಅಮೃತಮಯಪುರುಷನು ನೀನು. ನಿನ್ನಲ್ಲಿ ಯಶಸ್ಸೆಂಬುದು ಮೂರ್ತಿಮತ್ತಾಗಿರುವುದು. ಪ್ರಭೆಗಳ ಆಕರನೇ ನೀನಾಗಿರುವೆ. ನೀನು

ಸರ್ವರಿಂದಲೂ ಅಪೇಕ್ಷ್ಯನಾಗಿರುವೆ. ನಮ್ಮೆಲ್ಲರ ರಕ್ಷಕನಾಗಿರುವೆ. ಬಲಕ್ಕೆ ಸಾಗರಪ್ರಾಯನು ನೀನು. ಇಷ್ಟು ಬಲಶಾಲಿಯಾಗಿದ್ದರೂ ಸಾಧುವಾಗಿರುವೆ. ನಿನ್ನಲ್ಲಿ ಉದಾರತೆ ಮತ್ತು ಸತ್ವಗುಣಗಳು ವಿರಾಜಮಾನವಾಗಿವೆ. ನೀನು ಸಕಲೈಶ್ವರ್ಯಗಳಿಗೂ ಸ್ವಾಮಿಯಾಗಿರುವೆ. ಯುದ್ಧದಲ್ಲಿ ನೀನು ಅಪರಾಜಿತನು. ಪುಣ್ಯಶ್ಲೋಕನೇ! ಈಗ ಪ್ರಕಟವಾಗುತ್ತಿರುವ, ಹಿಂದೆ ಪ್ರಕಟವಾಗಿದ್ದ ಮತ್ತು ಮುಂದೆ ಪ್ರಕಟವಾಗಲಿರುವ ಸಕಲಜಗತ್ತುಗಳೂ ನಿನ್ನಿಂದಲೇ ಆವಿರ್ಭಾವಗೊಂಡಿವೆ. ನೀನು ಪಕ್ಷಿಗಳಲ್ಲೆಲ್ಲಾ ಉತ್ತಮೋತ್ತಮನಾಗಿರುವೆ. ಸೂರ್ಯನು ತನ್ನ ಕಿರಣಗಳಿಂದ ಈ ಪ್ರಪಂಚವನ್ನು ಬೆಳಗುತ್ತಿರುವಂತೆ–ನಿನ್ನ ಅಪಾರವಾದ ದಿವ್ಯತೇಜಸ್ಸಿನಿಂದ ನೀನೂ ಈ ಪ್ರಪಂಚವನ್ನು ಬೆಳಗುತ್ತಿರುವೆ. ಸೂರ್ಯನು ತನ್ನ ತೀಕ್ಷ್ಣವಾದ ಕಿರಣಗಳನ್ನು ಪ್ರಪಂಚದ ಮೇಲೆ ಚೆಲ್ಲುವಂತೆ–ನೀನೂ ನಿನ್ನ ಕಿರಣಗಳನ್ನು ಪ್ರಸರಿಸಿರುವೆ. ಚರ ಮತ್ತು ಅಚರವಾದ ಈ ಸಕಲ ಜಗತ್ತಿಗೂ ನೀನೇ ಅಂತಕನೂ ಆಗಿರುವೆ.

ಯಜ್ಞೇಶ್ವರನಿಗೆ ಸಮಾನವಾದ ಪ್ರಭೆಯುಳ್ಳವನೇ! ಪರಿಕುಪಿತನಾದ ಸೂರ್ಯನು ಯಾವ ರೀತಿಯಲ್ಲಿ ಪ್ರಪಂಚವನ್ನೇ ಭಸ್ಮಮಾಡಿಬಿಡುವನೋ ಅದೇ ರೀತಿಯಲ್ಲಿ ಕುಪಿತನಾದೆಯಾದರೆ ನೀನೂ ಸಹ ಈ ವಿಶ್ವವನ್ನೇ ನಿನ್ನ ಪ್ರಭೆಗಳಿಂದ ದಹಿಸುವ ಸಾಮರ್ಥ್ಯವನ್ನು ಪಡೆದಿರುವೆ. ನೀನು ಬಹಳ ಭಯಂಕರನಾಗಿ ಕಾಣುತ್ತಿರುವೆ. ಯುಗಪರಿವರ್ತನಕಾಲದಲ್ಲಿ ವಿಶ್ವವನ್ನೇ ದಹಿಸಿಬಿಡುವ ಮಹಾನ್ ಅಗ್ನಿದೇವನಂತೆ ನೀನು ಉದ್ಭೂತನಾಗಿ ರುವೆ. ಪಕ್ಷಿಗಳಿಗೆ ರಾಜನಾದ ಮಹಾತೇಜಸ್ವಿಯಾದ, ಯಜ್ಞೇಶ್ವರನಿಗೆ ಅನುರೂಪವಾದ ವರ್ಚಸ್ಸಿನಿಂದ ಕೂಡಿರುವ, ಆಕಾಶದಲ್ಲಿ ಸರ್ವದಾ ಸಂಚರಿಸುವ, ಮಹಾಬಲನಾದ ಗರುಡನಾಮಕನಾದ ನಿನ್ನನ್ನು ಸಮೀಪಿಸಿ ನಾವೆಲ್ಲರೂ ನಿನಗೆ ಶರಣಾಗತರಾಗಿದ್ದೇವೆ.

ಕಾರ್ಯ-ಕಾರಣರೂಪನಾದ, ವರದನಾದ, ಇತರರಿಂದ ಜಯಿಸಲು ಅಸಾಧ್ಯವಾದ ಪರಾಕ್ರಮವುಳ್ಳ ನಿನಗೆ ಶರಣಾಗತರಾಗಿದ್ದೇವೆ. ನಿನ್ನ ಮಹತ್ತರವಾದ ತೇಜಸ್ಸಿನಿಂದಲೇ ಈ ಅಖಂಡಜಗತ್ತೂ ಸಂತಪ್ತವಾಗಿದೆ. ಜಗತ್ಪ್ರಭುವೇ! ತಪ್ತವಾದ ಚಿನ್ನದ ಕಾಂತಿಯಿಂದ ಕೂಡಿರುವ ನೀನು ನಿನ್ನ

ಬಳಿಗೆ ಶರಣಾಗತರಾಗಿ ಬಂದಿರುವ ಎಲ್ಲ ದೇವತೆಗಳನ್ನೂ, ಮಹಾತ್ಮರಾದ ಋಷಿ-ಮಹರ್ಷಿಗಳನ್ನೂ ಕಾಪಾಡು.

ಆಕಾಶದಲ್ಲಿ ವಿಮಾನಗಳಲ್ಲಿ ಸಂಚರಿಸುತ್ತಿರುವ ದೇವತೆಗಳು ನಿನ್ನನ್ನು ಕಂಡು ಭೀತರಾಗಿ ಮುಂದೆ ಪ್ರಯಾಣಮಾಡಲು ಅಸಮರ್ಥರಾಗಿದ್ದಾರೆ. ದಯಾವಂತರಾದ, ಮಹಾತ್ಮರಾದ ಕಶ್ಯಪರ ಪುತ್ರನು ನೀನಾಗಿರುವೆ. ಆದುದ ರಿಂದ ನೀನೂ ದಯಾವಂತನೆಂಬುದರಲ್ಲಿ ಸಂಶಯವಿಲ್ಲ. ದಯಮಾಡಿ ನಮ್ಮನ್ನು ಸಂರಕ್ಷಿಸು.

ಖಗೇಶ್ವರ! ಕೋಪಿಸಿಕೊಳ್ಳಬೇಡ. ಪ್ರಪಂಚದ ಮೇಲೆ ದಯೆತೋರು. ನಿನ್ನ ಅಪಾರವಾದ ಈ ತೇಜಸ್ಸನ್ನು ಸುಪ್ತಗೊಳಿಸಿ ನಮ್ಮನ್ನು ಕಾಪಾಡು. ಸಿಡಿಲಿಗೆ ಸಮಾನವಾದ ನಿನ್ನ ಧ್ವನಿಯನ್ನು ಕೇಳಿ ಎಂಟು ದಿಕ್ಕುಗಳೂ, ಆಕಾಶ, ಸ್ವರ್ಗ ಮತ್ತು ಭೂಲೋಕಗಳೂ ಕಂಪಿಸುತ್ತಿವೆ. ನಮ್ಮೆಲ್ಲರ ಹೃದಯಗಳೂ ಅನವರತವಾಗಿ ಡವ-ಡವನೆ ಹೊಡೆದುಕೊಳ್ಳುತ್ತಿವೆ. ಆದುದರಿಂದ ಅಗ್ನಿಗೆ ಸದೃಶವಾದ ಈ ನಿನ್ನ ಸುಮಹತ್ತಾದ ಶರೀರವನ್ನು ಸಂಕೋಚಗೊಳಿಸು. ಕುಪಿತನಾದ ಯಮನ ತೀಕ್ಷ್ಣವಾದ ಪ್ರಭೆಗೆ ಸಮಾನವಾದ ನಿನ್ನ ಪ್ರಭೆಯನ್ನು ನೋಡಿ ನಮ್ಮ ಮನಸ್ಸು ಅಸ್ಥಿರವಾಗಿದೆ ಮತ್ತು ಚಂಚಲವಾಗಿದೆ. ಶರಣಾಗತರಾಗಿ ಬಂದಿರುವ ನಮ್ಮ ವಿಷಯದಲ್ಲಿ ಪ್ರಸನ್ನನಾಗು, ಮಹಾನುಭಾವನೇ! ನಮಗೆ ಮಂಗಳವನ್ನುಂಟುಮಾಡು ಮತ್ತು ನಮ್ಮ ಸುಖಕ್ಕೆ ಕಾರಣನಾಗು, ದೇವ!"

ಗರುಡನು ದೇವತೆಗಳ ಸ್ತೋತ್ರಕ್ಕೆ ಪ್ರಸನ್ನನಾಗಿ ತನ್ನ ಆಕಾರವನ್ನೂ ಮತ್ತು ತೇಜಸ್ಸನ್ನೂ ಸಂಕ್ಷೇಪಗೊಳಿಸಿದನು."

ೞ೩ನೆಯ ಅಧ್ಯಾಯವು ಮುಗಿಯಿತು.

೨೪ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಗರುಡನು ತನ್ನ ಶರೀರವನ್ನೂ, ತೀಕ್ಷ್ಣವಾದ ತೇಜಸ್ಸನ್ನೂ ಉಪಸಂಹರಿಸಿದುದು : ಕೋಪದಿಂದುಂಟಾದ ಸೂರ್ಯನ ತೀಕ್ಷ್ಣತೇಜಸ್ಸನ್ನು ಶಾಂತಗೊಳಿಸಲು ಅರುಣನು ಸೂರ್ಯನ ರಥದ ಸಾರಥ್ಯವನ್ನು ವಹಿಸಿದುದು

ಸೌತಿಗಳು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

"ಶೌನಕರೇ! ದೇವತೆಗಳ ಪ್ರಾರ್ಥನೆಯನ್ನು ಕೇಳಿ ಗರುಡನು ತನ್ನ ಬೃಹದಾಕಾರವಾದ ರೂಪವನ್ನು ಒಮ್ಮೆ ತಾನೂ ನೋಡಿಕೊಂಡು ತನ್ನ ಉಜ್ವಲವಾದ ಕಾಂತಿಯನ್ನೂ, ಬೃಹದಾಕಾರದ ಶರೀರವನ್ನೂ ಸಂಕೋಚ ಗೊಳಿಸಿ ದೇವತೆಗಳಿಗೆ ಹೇಳಿದನು :

"ದೇವತೆಗಳೇ! ನನ್ನ ಈ ಶರೀರವನ್ನು ನೋಡಿ ಪ್ರಾಣಿಗಳು ಉದ್ವಿಗ್ನ ರಾಗದಿರಲೆಂದೂ, ಭಯಪಡಕೂಡದೆಂದೂ ಇಚ್ಛಿಸಿ, ನನ್ನ ಶರೀರವನ್ನೂ ತೇಜಸ್ಸನ್ನೂ ಸಂಕುಚಿಸಿದ್ದೇನೆ."

ಹೀಗೆಂದು ಹೇಳಿ ಇಚ್ಛೆಬಂದಲ್ಲಿಗೆ ಹೋಗುವ ಸಾಮರ್ಥ್ಯವಿದ್ದ, ಇಚ್ಛಿಸಿದಷ್ಟು ಬಲವನ್ನು ಸಂಕಲ್ಪಮಾತ್ರದಿಂದಲೇ ಹೊಂದುವ ಸಾಮರ್ಥ್ಯ ವನ್ನು ಹೊಂದಿದ್ದ, ಆಕಾಶಸಂಚಾರಿಯಾದ ಗರುಡನು ತನ್ನ ಅಣ್ಣನಾದ ಅರುಣನನ್ನು ತನ್ನ ಬೆನ್ನಮೇಲೆ ಕುಳ್ಳಿರಿಸಿಕೊಂಡು ತಂದೆಯ ಮನೆಯಿಂದ ಹೊರಟು, ಸಾಗರದ ಆಚೆಯ ದಡದಲ್ಲಿ ಕದ್ರುವಿನ ದಾಸಿಯಾಗಿ ಸೇವೆ ಮಾಡುತ್ತಿದ್ದ ತಾಯಿಯ ಬಳಿಗೆ ಪ್ರಯಾಣಹೊರಟನು. ಆ ಸಮಯಕ್ಕೆ ಸರಿ ಯಾಗಿ ಪೂರ್ವದಿಕ್ಕಿನಲ್ಲಿ ಲೋಕಗಳನ್ನೆಲ್ಲಾ ಸುಟ್ಟುಬಿಡಬೇಕೆಂಬ ಆಕಾಂಕ್ಷೆ ಯಿಂದ ಹೊರಟಿದ್ದ ಸೂರ್ಯದೇವನ ಮುಂದೆ ಅರುಣನನ್ನು ಕುಳ್ಳಿರಿಸಿದನು.

(ಸೌತಿಗಳು ಹಿಂದಿನ ಕಥಾಸಂದರ್ಭವನ್ನು ನೆನಪುಮಾಡಿಕೊಡುತ್ತಾ ಶೌನಕರಿಗೆ ಹೇಳುತ್ತಾರೆ) : ಆಸ್ತೀಕಮಹರ್ಷಿಯ ಕಥಾಪ್ರವಚನದ ಸಂದರ್ಭ ದಲ್ಲಿ ಪ್ರಮತಿಯು ರುರುವಿಗೆ ಹೀಗೆ ಹೇಳಲಾಗಿ, ರುರುವು ಒಡನೆಯೇ ತನ್ನ ತಂದೆಯನ್ನು ಪ್ರಶ್ನಿಸಿದನು :

"ಅಪ್ಪ! ಭಗವಾನ್ ಸೂರ್ಯದೇವನು ಲೋಕಗಳೆಲ್ಲವನ್ನೂ ಸುಟ್ಟು ಬಿಡಲು ಏಕೆ ಇಚ್ಛಿಸಿದನು? ಕಾರಣವಿಲ್ಲದೇ ಯಾರೊಬ್ಬರೂ ಕೋಪಿಸಿ ಕೊಳ್ಳುವುದಿಲ್ಲವಷ್ಟೇ? ದೇವತೆಗಳೇನಾದರೂ ಸೂರ್ಯನ ವಸ್ತುವನ್ನು ಅಪಹರಿಸಿದರೇ? ಅವನಿಗೆ ಕೋಪಬರಲು ಕಾರಣವೇನು?"

"ಮಗು! ಅಮೃತಪ್ರಾಶನಕಾಲದಲ್ಲಿ ದೇವತೆಗಳ ಮಧ್ಯೆ ವೇಷಮರೆಸಿ ಕುಳಿತಿದ್ದ ರಾಹುವೆಂಬ ರಾಕ್ಷಸನನ್ನು ಸೂರ್ಯ-ಚಂದ್ರರು, ವಿಷ್ಣುವಿಗೆ ತೋರಿಸಿದರು. ವಿಷ್ಣುವು ಚಕ್ರಾಯುಧದಿಂದ ರಾಹುವಿನ ಕುತ್ತಿಗೆ ಯನ್ನು ಕತ್ತರಿಸಿದರೂ ಅಮೃತವು ಕಂಠಗತವಾಗಿದ್ದುದರಿಂದ ರುಂಡ-ಮುಂಡ

ಗಳೆರಡರಲ್ಲಿಯೂ ಅಮೃತವು ಸೇರಿಹೋಗಿ ಎರಡು ಭಾಗಗಳೂ ರಾಹು-ಕೇತುಗಳೆಂಬ ಅಭಿಧಾನದಿಂದ ಸಚೇತನವಾದುವು.

ಯದ್ಯಪಿ ಸೂರ್ಯ-ಚಂದ್ರರು ಹೇಳಿದ ಚಾಡಿಯ ಪರಿಣಾಮವಾಗಿ ರಾಹುವಿಗೆ ಒಂದು ವಿಧದಲ್ಲಿ ಅನುಕೂಲವೇ ಆಗಿದ್ದರೂ ಅವರ ಮೇಲಿನ ವಿದ್ವೇಷವು ಮಾತ್ರ ಕಡಿಮೆಯಾಗಲಿಲ್ಲ. ಸಮಯವು ಸಿಕ್ಕಿದಾಗ ಅವನು ಸೂರ್ಯ-ಚಂದ್ರರನ್ನು ಗಳ-ಗಳನೆ ನುಂಗಿಬಿಡುತ್ತಿದ್ದನು. ಅವನ ಕಾಟವನ್ನು ತಪ್ಪಿಸಿಕೊಳ್ಳಲು ಎಷ್ಟೇ ಪ್ರಯತ್ನಪಟ್ಟರೂ ಸೂರ್ಯನಿಗೆ ಅದು ಸಾಧ್ಯವೇ ಆಗಲಿಲ್ಲ. ಒಂದು ದಿನ ತನ್ನಲ್ಲಿಯೇ ಯೋಚಿಸತೊಡಗಿದನು : "ಅಮೃತ ಪ್ರಾಶನಕಾಲದಲ್ಲಿ ವೇಷಮರೆಸಿ ಕುಳಿತಿದ್ದ ರಾಹುವನ್ನು ದೇವತೆಗಳಿಗೆ ಉಪಕಾರವನ್ನೆಸಗುವ ಇಚ್ಛೆಯಿಂದ ನಾನು ಬಯಲಿಗೆಳೆದೆನು. ಆದರೆ ಇಂದು ಮಾತ್ರ ರಾಹುವಿನ ಕಿರುಕುಳವನ್ನು ನಾನು ಮತ್ತು ಶೀತರಶ್ಮಿಯಾಗಿರುವ ಚಂದ್ರನೂ ಅನುಭವಿಸಬೇಕಾಗಿದೆಯೇ ಹೊರತು ದೇವತೆಗಳು ನಮ್ಮ ಉಪಕಾರದ ಸ್ಮರಣೆಯನ್ನೇ ಮಾಡುತ್ತಿಲ್ಲ. ನಮ್ಮಿಬ್ಬರನ್ನೂ ರಾಹು-ಕೇತುಗಳು ಸ್ವೇಚ್ಛೆಯಿಂದ ಕಬಳಿಸುವಾಗ ಈ ದೇವತೆಗಳೆಲ್ಲರೂ ಕೈಕಟ್ಟಿ ಕುಳಿತಿರುತ್ತಾರೆ. ಎಂತಹ ಅನ್ಯಾಯವಿದು? ಈ ಅಪಮಾನವನ್ನು ನಾನಿನ್ನು ಸಹಿಸಲಾರೆ. ನನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ತ್ರಿಭುವನಗಳನ್ನೇ ದಹಿಸಿಬಿಡುವೆನು."

ಸೂರ್ಯನ ಕಣ್ಣುಗಳಿಂದ ಕೆಂಡಗಳು ಉದುರುತ್ತಿದ್ದುವು. ಗಡುಸಾದ ಹೆಜ್ಜೆಗಳನ್ನಿಡುತ್ತಾ ತಾನುದ್ದೇಶಿಸಿದ ಕಾರ್ಯವನ್ನೆಸಗಲು ಸೂರ್ಯನು ಅಸ್ತಾಚಲಕ್ಕೆ ಹೊರಟುಹೋದನು.

ಸೂರ್ಯನು ಹುಟ್ಟಲು ನಾಲ್ಕೈದು ತಾಸುಗಳ ಸಮಯವಿದ್ದಾಗಲೇ ತಡೆಯಲು ಅಸಾಧ್ಯವಾದ ಬೇಗೆಯು ಹುಟ್ಟಿತು. ಆ ಬೇಗೆಯ ಪರಿಣಾಮ ವಾಗಿ ಸಣ್ಣ-ಸಣ್ಣ ಸರೋವರಗಳಲ್ಲಿದ್ದ ನೀರು ಕ್ಷಣಮಾತ್ರದಲ್ಲಿ ಬತ್ತಿ ಹೋಯಿತು. ಪ್ರಪಂಚದಲ್ಲೆಲ್ಲಾ ಹಾಹಾಕಾರವೆದ್ದಿತು. ಋಷಿಗಳೆಲ್ಲರೂ ದೇವತೆಗಳ ಮರೆಹೊಕ್ಕು ಹೇಳಿದರು :

"ದೇವತೆಗಳಿರಾ! ಈಗಿನ್ನೂ ಅರ್ಧರಾತ್ರಿಯ ಸಮಯವಾಗಿದೆ. ಈ ಸಮಯದಲ್ಲಿಯೇ ಸರ್ವಲೋಕಕ್ಕೂ ಭಯವನ್ನುಂಟುಮಾಡುತ್ತಿರುವ,

ಮೂರು ಲೋಕಗಳ ವಿನಾಶಕರವಾದ, ತಡೆಯಲಸಾಧ್ಯವಾದ ಬೇಗೆ ಯುಂಟಾಗಿದೆ. ಇದರ ಉಪಶಮನದ ವಿಷಯವಾಗಿ ಒಡನೆಯೇ ಸಮಾಲೋಚಿಸಿರಿ."

ದೇವತೆಗಳು ಋಷಿಗಳೊಡನೆ ಚತುರ್ಮುಖನ ಬಳಿಗೆ ಹೋಗಿ ಅವನನ್ನು ಪರಿ-ಪರಿಯಾಗಿ ಸ್ತೋತ್ರಮಾಡಿ : "ಮಹಾನುಭಾವನೇ! ಈ ದಾರುಣವಾದ ಪರಿತಾಪವನ್ನು ನಮ್ಮಿಂದ ಸಹಿಸಲು ಸಾಧ್ಯವೇ ಇಲ್ಲ. ತಡೆಯಲಸಾಧ್ಯವಾದ ಈ ಬೇಗೆಯು ಹುಟ್ಟಲು ಕಾರಣವೇನು? ಇದು ನಮಗೆ ಮಹಾಭಯವನ್ನುಂಟುಮಾಡಿದೆ. ಸೂರ್ಯನು ಹುಟ್ಟಲು ಇನ್ನೂ ಒಂದು ಯಾಮವಿರುವಾಗಲೇ ಈ ವಿಧವಾದ ಬೇಗೆಯುಂಟಾಗಿರುವಾಗ ಸೂರ್ಯನು ಹುಟ್ಟಿದನಂತರ ಪ್ರಪಂಚವು ಉಳಿಯುವುದೆಂದು ಹೇಳಲು ಸಾಧ್ಯವೇ ಇಲ್ಲ. ಆದುದರಿಂದ ಸೂರ್ಯನು ಹುಟ್ಟುವ ಮೊದಲೇ ಇದರ ಉಪಶಮನಕ್ಕೆ ಉಪಾಯವನ್ನು ಸೂಚಿಸು, ಪ್ರಭೋ!"–ಎಂದು ದೈನ್ಯದಿಂದ ಬೇಡಿದರು.

ದೇವತೆಗಳ ಮಾತನ್ನು ಕೇಳಿ ಬ್ರಹ್ಮನು ನಸುನಗುತ್ತಾ–"ದೇವರ್ಷಿಗಳೇ! ಧೈರ್ಯಗೆಡಬೇಡಿರಿ. ಸೂರ್ಯನು ತ್ರಿಭುವನಗಳನ್ನೂ ದಹಿಸಿಬಿಡಲು ನಿಶ್ಚಯಿಸಿರುವುದೇನೋ ನಿಜ. ಅವನು ದೃಶ್ಯನಾದೊಡನೆಯೇ (ಹುಟ್ಟಿದೊಡನೆಯೇ) ಎಲ್ಲ ಲೋಕಗಳನ್ನೂ ಭಸ್ಮೀಭೂತವನ್ನಾಗಿ ಮಾಡಿಬಿಡುತ್ತಾನೆ. ಆದರೆ ಇದಕ್ಕೆ ನಿವಾರಣೋಪಾಯವನ್ನು ನಾನಾಗಲೇ ಸಿದ್ಧ ಮಾಡಿಬಿಟ್ಟಿರುವೆನು. ಕಶ್ಯಪನ ಮಗನಾದ ಧೀಮಂತನಾದ, ಅರುಣನೆಂದು ಕರೆಯಲ್ಪಡುವ ಮಹಾನುಭಾವನೊಬ್ಬನಿದ್ದಾನೆ. ಅವನು ಮಹಾಕಾಯನೂ, ಮಹಾತೇಜಸ್ವಿಯೂ ಆಗಿರುವುದರಿಂದ ಸೂರ್ಯನ ತಾಪವನ್ನು ಸಹಿಸ ಬಲ್ಲನು. ಅವನನ್ನು ಸೂರ್ಯನಿಗೆ ಅಡ್ಡವಾಗಿ ನಿಲ್ಲಿಸಿದಲ್ಲಿ ಸೂರ್ಯನ ತಾಪವು ಕಡಿಮೆಯಾಗಿ ಪ್ರಪಂಚವೂ ಉಳಿಯುವುದು. ಅದೂ ಅಲ್ಲದೇ ಇನ್ನು ಮುಂದೆಯೂ ಕೂಡ ಸೂರ್ಯನು ಸ್ವೇಚ್ಛೆಯಿಂದ ವರ್ತಿಸದಂತೆ ಮಾಡಲು ಅವನ ರಥಕ್ಕೆ ಸಾರಥ್ಯವನ್ನು ಮಾಡಲು ಸಮರ್ಥನೂ ಆಗಿರುವನು ಮತ್ತು ಸೂರ್ಯನ ತೇಜಸ್ಸನ್ನೂ ಅಪಹರಿಸಬಲ್ಲನು. ಇದರಿಂದ ಪ್ರಪಂಚಕ್ಕೆ, ಋಷಿಗಳಿಗೆ ಮತ್ತು ದೇವತೆಗಳಿಗೆ ಕಲ್ಯಾಣವಾಗುತ್ತದೆ. ಆದುದರಿಂದ ಈಗಲೇ ಹೋಗಿ ಅರುಣನನ್ನು ಕರೆತಂದು ಸೂರ್ಯನಿಗೆ ಅಡ್ಡಲಾಗಿಡುವ

ಕಾರ್ಯಮಾಡೋಣ"–ಎಂದು ಹೇಳಿ ಚತುರ್ಮುಖನು ದೇವರ್ಷಿ ಗಳೊಡನೆ ಅರುಣನ ಸಮೀಪಕ್ಕೆ ಹೋಗಿ ಅವನನ್ನು ಸೂರ್ಯನ ಸಾರಥಿ ಯಾಗಲು ಒಪ್ಪಿಸಿ, ಸೂರ್ಯನ ರಥದಲ್ಲಿ ಕುಳ್ಳಿರಿಸಿದನು. ಅಂದು ಸಕಲ ಲೋಕಗಳನ್ನೂ ಸುಟ್ಟುಬಿಡಲು ಸೂರ್ಯನು ಕೃತಸಂಕಲ್ಪನಾಗಿ ಉದಯಿಸಿ ದರೂ ಮಹಾಕಾಯನಾದ ಅರುಣನಿಂದ ಸಮಾವೃತನಾಗಿದ್ದುದರಿಂದ ಅವನೇನೂ ಮಾಡಲಾಗಲಿಲ್ಲ. ಅರುಣನು ತನ್ನ ಪ್ರಭಾವದಿಂದ ಸೂರ್ಯನ ತೀಕ್ಷ್ಣವಾದ ತೇಜಸ್ಸನ್ನೂ ಅಪಹರಿಸಿದನು.

ಮಗು! ನೀನು ಕೇಳಿದಂತೆ ಸೂರ್ಯನೇಕೆ ಕೋಪಗೊಂಡನೆಂಬ ವಿಷಯವನ್ನೂ ನಿನಗೆ ಹೇಳಿದ್ದೇನೆ. ಅದೇ ರೀತಿಯಲ್ಲಿ ಯಾವ ಕಾರಣದಿಂದ ಪ್ರಭುವಾದ ಅರುಣನು ಸೂರ್ಯನ ಸಾರಥ್ಯವನ್ನು ಮಾಡಲುಪಕ್ರಮಿಸಿದ ನೆಂಬುದನ್ನೂ ಹೇಳಿರುತ್ತೇನೆ. ಈಗ ನೀನು ಹಿಂದೆ ಕೇಳಿರುವ ಮತ್ತೊಂದು ಪ್ರಶ್ನೆಗೂ ಉತ್ತರವನ್ನು ಹೇಳುವೆನು, ಕೇಳು."

ತಿಳನೆಯ ಅಧ್ಯಾಯವು ಮುಗಿಯಿತು.

೨೫ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಸೂರ್ಯನ ತಾಪಕ್ಕೆ ಸಿಕ್ಕಿ ಮೂರ್ಛೆಹೊಂದಿದ ಮಕ್ಕಳ ರಕ್ಷಣೆಗಾಗಿ ಕದ್ರುವು ಇಂದ್ರನನ್ನು ಸ್ತುತಿಸಿದುದು

ಪ್ರಮತಿಯು ಹೇಳುತ್ತಾನೆ :

**ತತಃ ಕಾಮಗಮಃ ಪಕ್ಷೀ ಮಹಾವೀರ್ಯೋ ಮಹಾಬಲಃ ।**
**ಮಾತುರನ್ತಿಕಮಾಗಚ್ಛತ್ಪರಂ ಪಾರಂ ಮಹೋದಧೇಃ ॥೧॥**

"ಮಗು! ಮನಬಂದೆಡೆಗೆ ಹೋಗುವ ಸಾಮರ್ಥ್ಯವನ್ನು ಪಡೆದಿದ್ದ, ಮಹಾವೀರ್ಯನಾದ, ಮಹಾಬಲನಾದ ಗರುಡನು ಸಮುದ್ರದ ಆಚೆಯ ತೀರದಲ್ಲಿದ್ದ ತನ್ನ ತಾಯಿಯ ಸಮೀಪಕ್ಕೆ ಹೋದನು. ಅಲ್ಲವನು ತಾಯಿಯು ಕದ್ರುವಿನೊಡನೆ ಕಟ್ಟಿದ್ದ ಪಂದ್ಯದಲ್ಲಿ ಸೋತು ಪಂದ್ಯದ ನಿಯಮದಂತೆ ಅವಳ ದಾಸಿಯಾಗಿ ಬಹಳವಾದ ದುಃಖಕ್ಕೆ ಗುರಿಯಾಗಿದ್ದಳು.

ವಿನಯಶೀಲಳಾದ ವಿನತೆಯು ಒಮ್ಮೆ ತನ್ನ ಮಗನೊಡನಿದ್ದಾಗ ಕದ್ರುವು ಅವಳನ್ನು ತನ್ನ ಹತ್ತಿರಕ್ಕೆ ಕರೆದು ಹೇಳಿದಳು :

"ದಾಸಿಯೇ! ಬಹಳ ಆಳವಾಗಿರುವ ಸಮುದ್ರದ ಮಧ್ಯದಲ್ಲಿ ನಿರ್ಜನ ಪ್ರದೇಶದಲ್ಲಿರುವ, ಸುರಮ್ಯವಾಗಿರುವ ನಾಗಾಲಯಕ್ಕೆ ನನ್ನನ್ನೆತ್ತಿಕೊಂಡು ಹೋಗು."

ಕದ್ರುವಿನ ಆಜ್ಞೆಯಂತೆ ದಾಸಿಯಾಗಿದ್ದ ವಿನತೆಯು ಸರ್ಪಗಳ ತಾಯಿಯಾದ ಕದ್ರುವನ್ನು ಎತ್ತಿಕೊಂಡು ಹೊರಟಳು. ತಾಯಿಯ ಆಜ್ಞೆಯಂತೆ



ಗರುಡನೂ ಕದ್ರುವಿನ ಮಕ್ಕಳನ್ನೆತ್ತಿಕೊಂಡು ತಾಯಿಯ ಹಿಂದೆಯೇ ಹೊರಟನು.

ಗರುಡನು ತನ್ನ ಪರಾಕ್ರಮಕ್ಕೆ ಅನುಗುಣವಾದ ಉತ್ಸಾಹದಿಂದ ಸರ್ಪಗಳನ್ನೆತ್ತಿಕೊಂಡು ಸೂರ್ಯನ ಸಮೀಪಕ್ಕೂ ಹಾರಿದನು. ಅಲ್ಪಬಲರಾದ ಸರ್ಪಗಳಿಗೆ ಸೂರ್ಯನ ಬೇಗೆಯನ್ನು ಸಹಿಸಲು ಸಾಧ್ಯವಾಗಲಿಲ್ಲ. ನೂರಾರು

ಸರ್ಪಗಳು ಮೂರ್ಛಾಕ್ರಾಂತವಾದುವು. ಕದ್ರುವಿಗೆ ತನ್ನ ಮಕ್ಕಳ ಅವಸ್ಥೆಯನ್ನು ನೋಡಿ ಮರುಕವುಂಟಾಯಿತು. ಮೂರ್ಛೆಹೊಂದಿರುವ ತನ್ನ ಮಕ್ಕಳ ಮೇಲೆ ಮಳೆಗರೆಯುವಂತೆ ಮಹೇಂದ್ರನನ್ನು ಕುರಿತು ನಾನಾವಿಧವಾಗಿ ಸ್ತೋತ್ರಮಾಡಲು ಪ್ರಾರಂಭಿಸಿದಳು.

## ಕದ್ರೂಕೃತ ಇಂದ್ರಸ್ತೋತ್ರಮ್

ನಮಸ್ತೇ ಸರ್ವದೇವೇಶ ನಮಸ್ತೇ ಬಲಸೂದನ ।
ನಮುಚಿಘ್ನ ನಮಸ್ತೇಽಸ್ತು ಸಹಸ್ರಾಕ್ಷ ಶಚೀಪತೇ ।
ಸರ್ಪಾಣಾಂ ಸೂರ್ಯತಪ್ತಾನಾಂ ವಾರಿಣಾಂ ತ್ವಂ ಪ್ಲವೋ ಭವ ॥೮॥

ತ್ವಮೇವ ಪರಮಂ ತ್ರಾಣಮಸ್ಮಾಕಮಮರೋತ್ತಮ ।
ಈಶೋ ಹ್ಯಸಿ ಪಯಃ ಸ್ರಷ್ಟುಂ ತ್ವಮನಲ್ಪಂ ಪುರನ್ದರ ॥೯॥

ತ್ವಮೇವ ಮೇಘಸ್ತ್ವಂ ವಾಯುಸ್ತ್ವಮಗ್ನಿರ್ವಿದ್ಯುತೋಽಮ್ಬರೇ ।
ತ್ವಮಭ್ರಗಣವಿಕ್ಷೇಪ್ತಾ ತ್ವಾಮೇವಾಹುರ್ಮಹಾಘನಮ್ ॥೧೦॥

ತ್ವಂ ವಜ್ರಮತುಲಂ ಘೋರಂ ಘೋಷವಾಂಸ್ತ್ವಂ ಬಲಾಹಕಃ ।
ಸ್ರಷ್ಟಾ ತ್ವಮೇವ ಲೋಕಾನಾಂ ಸಂಹರ್ತಾ ಚಾಪರಾಜಿತಃ ॥೧೧॥

ತ್ವಂ ಜ್ಯೋತಿಃ ಸರ್ವಭೂತಾನಾಂ ತ್ವಮಾದಿತ್ಯೋ ವಿಭಾವಸುಃ ।
ತ್ವಂ ಮಹದ್ಭೂತಮಾಶ್ಚರ್ಯಂ ತ್ವಂ ರಾಜಾ ತ್ವಂ ಸುರೋತ್ತಮಃ ॥

ತ್ವಂ ವಿಷ್ಣುಸ್ತ್ವಂ ಸಹಸ್ರಾಕ್ಷಸ್ತ್ವಂ ದೇವಸ್ತ್ವಂ ಪರಾಯಣಮ್ ।
ತ್ವಂ ಸರ್ವಮಮೃತಂ ದೇವ ತ್ವಂ ಸೋಮಃ ಪರಮಾರ್ಚಿತಃ ॥೧೩॥

ತ್ವಂ ಮುಹೂರ್ತಸ್ತಿಥಿಸ್ತ್ವಂ ಚ ತ್ವಂ ಲಯಸ್ತ್ವಂ ಪುನಃ ಕ್ಷಣಃ ।
ಶುಕ್ಲಸ್ತ್ವಂ ಬಹುಲಸ್ತ್ವಂ ಚ ಕಲಾ ಕಾಷ್ಠಾ ತ್ರುಟಿಸ್ತಥಾ ।
ಸಂವತ್ಸರರ್ತವೋ ಮಾಸಾ ರಜನ್ಯಶ್ಚ ದಿನಾನಿ ಚ ॥೧೪॥

ತ್ವಮುತ್ತಮಾ ಸಗಿರಿವನಾ ವಸುನ್ಧರಾ
ಸಭಾಸ್ಕರಂ ವಿತಿಮಿರಮಮ್ಬರಂ ತಥಾ ।
ಮಹೋದಧಿಃ ಸತಿಮಿತಿಮಿಂಗಿಲಸ್ತಥಾ
ಮಹೋರ್ಮಿಮಾನ್ಬಹುಮಕರೋ ಝಷಾಕುಲಃ ॥೧೫॥

**ಮಹಾಯಶಾಸ್ತ್ವಮಿತಿ ಸದಾಭಿಪೂಜ್ಯಸೇ**
**ಮನೀಷಿಭಿರ್ಮುದಿತಮನಾ ಮಹರ್ಷಿಭಿಃ ।**
**ಅಭಿಷ್ಟುತಃ ಪಿಬಸಿ ಚ ಸೋಮಮಧ್ವರೇ**
**ವಷಟ್ಕೃತಾನ್ಯಪಿ ಚ ಹವೀಂಷಿ ಭೂತಯೇ ॥೧೬॥**

**ತ್ವಂ ವಿಪ್ರೈಃ ಸತತಮಿಹೇಜ್ಯಸೇ ಫಲಾರ್ಥಂ**
**ವೇದಾಙ್ಗೇಷ್ವತುಲಬಲೌಘ ಗೀಯಸೇ ಚ ।**
**ತ್ವದ್ಧೇತೋರ್ಯಜನಪರಾಯಣಾ ದ್ವಿಜೇನ್ದ್ರಾ**
**ವೇದಾಙ್ಗಾನ್ಯಭಿಗಮಯನ್ತಿ ಸರ್ವಯತ್ನೈಃ ॥೧೭॥**

"ಸರ್ವದೇವತೆಗಳಿಗೂ ಈಶನೇ! ಬಲಸೂದನನೇ! ನಿನಗೆ ನಮಸ್ಕಾರವನ್ನು ಮಾಡುತ್ತೇನೆ. ನಮುಚಿಯನ್ನು ಸಂಹರಿಸಿದವನೇ! ಸಹಸ್ರಾಕ್ಷನೇ! ಶಚೀಪತಿಯೇ! ನಿನಗೆ ನಮಸ್ಕಾರಮಾಡುತ್ತೇನೆ. ನನ್ನ ಮಕ್ಕಳಾದ ಈ ಸರ್ಪಗಳು ಸೂರ್ಯನ ತಾಪಕ್ಕೆ ಸಿಕ್ಕಿ ಬೆಂದುಹೋಗುತ್ತಿವೆ. ಅವುಗಳ ಮೇಲೆ ಮಳೆಗರೆದು ಉಂಟಾಗಿರುವ ತಾಪವನ್ನು ಹೋಗಲಾಡಿಸು.

ಅಮರೋತ್ತಮನೇ! ಕಷ್ಟದಲ್ಲಿ ಸಿಕ್ಕಿರುವ ನಮ್ಮಂತಹವರಿಗೆ ನೀನೇ ಶ್ರೇಷ್ಠನಾದ ಶರಣ್ಯನು. ಅತ್ಯಧಿಕವಾದ ಜಲಸೃಷ್ಟಿಗೂ ನೀನೇ ಕಾರಣ ನಾಗಿರುವೆ, ಪುರಂದರ!

ನೀನೇ ಮೇಘಸ್ವರೂಪನೂ ಆಗಿರುವೆ. ವಾಯು, ಅಗ್ನಿ ಮತ್ತು ಆಕಾಶದಲ್ಲಿ ಕಾಣುವ ವಿದ್ಯುತ್–ಎಲ್ಲವೂ ನೀನೇ ಆಗಿರುವೆ. ಮೇಘಗಳ ಸಮೂಹವನ್ನು ವಿಕ್ಷೇಪಗೊಳಿಸುವವನೂ ನೀನೇ. ನಿನ್ನನ್ನು ವಿದ್ವಾಂಸರು ಮಹಾಮೇಘವೆಂದೂ ಕರೆಯುತ್ತಾರೆ.

ಅತಿಘೋರವೆಂದು ಹೇಳಲ್ಪಡುತ್ತಿರುವ ವಜ್ರಾಯುಧವೂ ನೀನೇ ಆಗಿರುವೆ. ಭಯಂಕರವಾಗಿ ಗರ್ಜನೆಮಾಡುವ ಪ್ರಳಯಕಾಲದ ಬಲಾಹಕ ವೆಂಬ ಕಾರ್ಮುಗಿಲೂ ನೀನೇ ಆಗಿರುವೆ. ಲೋಕಗಳ ಸೃಷ್ಟಿ-ಸ್ಥಿತಿ-ಲಯ ಗಳಿಗೂ ಸಹ ನೀನೇ ಕಾರಣನಾಗಿರುವೆ. ನೀನು ಯಾರೊಬ್ಬರಿಂದಲೂ ಜಯಿಸಲ್ಪಡತಕ್ಕವನಲ್ಲ. ಸರ್ವಭೂತಗಳ ಹೃದಯಗಳಲ್ಲಿಯೂ ಇರುವ ಪರಂಜ್ಯೋತಿಃಸ್ವರೂಪನು ನೀನು. ಆದಿತ್ಯ, ವಿಭಾವಸು–ಎಂದು ಕರೆಯ

ಲ್ಪಡುವ ಆ ಸೂರ್ಯದೇವನೂ ನೀನೇ ಆಗಿರುತ್ತೀಯೆ. ಆಶ್ಚರ್ಯಮಯ ವಾದ ಮಹದ್ಭೂತವೇ ನೀನು. ಸುರಶ್ರೇಷ್ಠನಾದ ನೀನು ತ್ರಿಭುವನಗಳಿಗೂ ರಾಜನಾಗಿರುವೆ. ನೀನೇ ವಿಷ್ಣುವು. ಸಾವಿರ ಕಣ್ಣುಗಳುಳ್ಳವನು. ದೇವ ದೇವನಾದ ನೀನು ಎಲ್ಲರಿಗೂ ಶ್ರೇಷ್ಠವಾದ ಆಶ್ರಯವಾಗಿರುವೆ. ಪೃಥ್ವಿ ಯಲ್ಲಿರುವ ಸಕಲಚರಾಚರವಸ್ತುಗಳಲ್ಲಿಯೂ ನೀನೇ ವ್ಯಾಪಿಸಿರುವೆ. ಅಮೃತವೂ ನೀನೇ. ಸಕಲರಿಂದಲೂ ಸಂಪೂಜಿತವಾದ ಸೋಮರಸವೂ ನೀನೇ ಆಗಿರುವೆ. ಮುಹೂರ್ತ, ತಿಥಿ, ಲವ, ಕ್ಷಣ, ಶುಕ್ಲಪಕ್ಷ ಮತ್ತು ಕೃಷ್ಣಪಕ್ಷಗಳು, ರಾತ್ರಿ-ಹಗಲುಗಳು ಎಲ್ಲವೂ ನೀನೇ ಆಗಿರುವೆ.

ಪರ್ವತ-ಕಾನನಗಳಿಂದ ಕೂಡಿರುವ ವಸುಂಧರೆಯೂ ನೀನೇ. ಕತ್ತಲಿ ನಿಂದ ವಿಹೀನವಾಗಿ ಸೂರ್ಯನೊಡನೆ ವಿರಾಜಿಸುತ್ತಿರುವ ಆಕಾಶವೂ ನೀನೇ. ತಿಮಿ-ತಿಮಿಂಗಿಲಗಳಿಂದಲೂ, ಮೀನು-ಮೊಸಳೆಗಳಿಂದಲೂ, ಅತ್ಯಗಾಧ ವಾದ ಅಲೆಗಳಿಂದಲೂ ಕೂಡಿರುವ ಮಹೋದಧಿಯೂ ನೀನೇ ಆಗಿರುವೆ.

ಮನೀಷಿಗಳಾದ ಮಾನವರು ನಿನ್ನನ್ನು ಮಹಾಯಶೋವಂತನೆಂದು ಸಂಪೂಜಿಸುತ್ತಾರೆ. ಮಹರ್ಷಿಗಳು ನಿರಂತರವಾಗಿ ನಿನ್ನನ್ನು ಸ್ತೋತ್ರಮಾಡು ತ್ತಾರೆ. ಯಜಮಾನನ ಅಭೀಷ್ಟಸಿದ್ಧಿಗಾಗಿ ಯಜ್ಞಗಳಲ್ಲಿ ನಿನಗರ್ಪಿಸುವ ಸೋಮರಸವನ್ನು ನೀನು ಹರ್ಷಚಿತ್ತನಾಗಿ ಸ್ವೀಕರಿಸುವೆ ಮತ್ತು ಸ್ವಾಹಾ-ವಷಟ್ಕಾರಗಳಿಂದ ಅರ್ಪಿಸುವ ಹವಿಸ್ಸುಗಳನ್ನೂ ಅಗ್ನಿಮುಖನಾದ ನೀನೇ ಸ್ವೀಕರಿಸುವೆ.

ಬಲೌಘನೇ! ವಿಪ್ರರು ನಿನ್ನನ್ನು ಐಹಿಕವಾದ ಫಲಾಭಿಲಾಷೆಯಿಂದ ಸತತವಾಗಿ ಪೂಜಿಸುತ್ತಾರೆ. ವೇದಗಳಿಂದ ನಿನ್ನನ್ನು ಸ್ತೋತ್ರಮಾಡುವರಲ್ಲದೇ ವೇದಾಂಗಗಳಿಂದಲೂ ನಿನ್ನನ್ನೇ ವಿಪ್ರರು ಸ್ತೋತ್ರಮಾಡುತ್ತಾರೆ. ನಿನ್ನನ್ನು ಪಡೆಯುವ ಕಾರಣದಿಂದಲೇ ಯಜ್ಞ-ಯಾಗಾದಿಗಳಲ್ಲಿ ನಿರತರಾಗಿರುವ ಬ್ರಾಹ್ಮಣರು ನಿನ್ನನ್ನೇ ಪ್ರತಿಪಾದಿಸುವ ವೇದ-ವೇದಾಂಗಗಳನ್ನು ಬಹಳ ಜಾಗರೂಕತೆಯಿಂದ ಅಧ್ಯಯನಮಾಡುತ್ತಾರೆ."

೨೫ನೆಯ ಅಧ್ಯಾಯವು ಮುಗಿಯಿತು.

೨೬ನೆಯ ಅಧ್ಯಾಯ ಆಸ್ತೀಕಪರ್ವ(ಮುಂದುವರಿದಿದೆ.)

## ಇಂದ್ರನ ವರಪ್ರದಾನ: ಮಳೆಯಿಂದ ಸರ್ಪಗಳ ಪ್ರಸನ್ನತೆ

"ಕದ್ರುವು ಈ ರೀತಿಯಾಗಿ ಇಂದ್ರನನ್ನು ಸ್ತೋತ್ರಮಾಡಲಾಗಿ ಸುಪ್ರೀತನಾದ ಇಂದ್ರನು ನೀಲವಾದ ಮೇಘಗಳಿಂದೊಡಗೂಡಿ ಆಕಾಶದಲ್ಲಿ ಉಪಸ್ಥಿತನಾದನು. ಶಚೀಪತಿಯು ಭೂಮಿಯ ಮೇಲೆ ಶುಭಜಲವನ್ನು ಸುರಿಸುವಂತೆ ಮೇಘಗಳಿಗೆ ಆಜ್ಞೆಮಾಡಿದನು. ಒಡನೆಯೇ ಮೇಘಗಳು ಯಥೇಚ್ಛವಾಗಿ ಮಳೆಗರೆಯಲು ಉಪಕ್ರಮಿಸಿದುವು. ಕಾರ್ಮುಗಿಲುಗಳು ಪರಸ್ಪರವಾಗಿ ಸ್ಪರ್ಧಿಸುತ್ತಿವೆಯೋ ಎಂಬಂತೆ ಗುಡುಗು-ಸಿಡಿಲುಗಳಿಂದ ಗರ್ಜನೆಮಾಡುತ್ತಾ ಮಳೆಗರೆಯುತ್ತಿದ್ದವು. ಬಾರಿ-ಬಾರಿಗೂ ಘೋರವಾದ ಶಬ್ದಗಳನ್ನು ಮಾಡುತ್ತಾ ಸತತವಾಗಿ ನೀರನ್ನು ಸುರಿಸುತ್ತಿದ್ದುವು. ತೆರೆ-ತೆರೆಯಾಗಿ ಬೀಳುತ್ತಿದ್ದ ನೀರಿನ ರಾಶಿಯನ್ನು ನೋಡಿದರೆ ಆಕಾಶವೂ ಘೋರವಾದ ಅಲೆಗಳಿಂದ ಕೂಡಿದ ಸಮುದ್ರದಂತೆಯೇ ಕಾಣುತ್ತಿದ್ದಿತು. ಕಾರ್ಮುಗಿಲು ಗಳಿಂದ ಹೊರಬರುತ್ತಿದ್ದ ಗುಡುಗು-ಸಿಡಿಲುಗಳ ಶಬ್ದಗಳಿಂದಲೂ, ಕ್ಷಣ- ಕ್ಷಣಕ್ಕೂ ಮೇಘಗಳ ಮಧ್ಯದಿಂದ ಹೊರಬರುತ್ತಿದ್ದ, ಕಣ್ಣುಗಳನ್ನು ಕೋರೈ ಸುವ ಮಿಂಚುಗಳಿಂದಲೂ, ಒನಕೆಯಷ್ಟು ದಪ್ಪವಾದ ಜಲಧಾರೆಗಳಿಂದಲೂ ವ್ಯಾಪ್ತವಾಗಿದ್ದ ಆಕಾಶದಲ್ಲಿ ಬೆಳಗುವ ಸೂರ್ಯ-ಚಂದ್ರರ ಕಿರಣಗಳು ಭೂಮಿಯ ಮೇಲೆ ಕಾಣುತ್ತಲೇ ಇರಲಿಲ್ಲ. ಸರ್ವತ್ರ ವ್ಯಾಪ್ತವಾಗಿದ್ದ ಕಾರ್ಮುಗಿಲಿನಿಂದಾಗಿ ರಾತ್ರಿ ಅಥವಾ ಹಗಲೆಂಬುದನ್ನೂ ಹೇಳಲು ಕಷ್ಟವಾಗಿತ್ತು.

ಈ ವಿಧವಾದ ಮಳೆಗರೆಯುವಿಕೆಯಿಂದಾಗಿ ಗರುಡನ ಮೇಲೆ ಕುಳಿತಿದ್ದ ಸರ್ಪಗಳಿಗೆ ಬಹಳವಾದ ಸಂತೋಷವಾಯಿತು. ಭೂಮಿಯೆಲ್ಲವೂ ನೀರಿನಿಂದ ತುಂಬಿಹೋಯಿತು. ಅಂದಿನ ಮಳೆಯ ಶೀತಲವಾದ ಮತ್ತು ಪರಿಶುದ್ಧವಾದ ನೀರು ರಸಾತಲಕ್ಕೂ ವ್ಯಾಪಿಸಿತು. ಭೂಮಿಯ ಮೇಲಿನ ಹಳ್ಳ-ಕೊಳ್ಳ-ತಟಾಕ-ನದೀ-ನದ-ಸರೋವರಗಳೆಲ್ಲವೂ ತುಂಬಿಹೋಗಿ ಎಲ್ಲೆಲ್ಲೂ ನೀರೇ ಕಾಣಿಸುತ್ತಿದ್ದಿತು.

ಸರ್ಪಗಳು ತಮ್ಮ ತಾಯಿಯಾದ ಕದ್ರುವಿನೊಡನೆ ರಾಮಣೀಯಕ ದ್ವೀಪಕ್ಕೆ ಆಗಮಿಸಿದುವು."

೨೬ನೆಯ ಅಧ್ಯಾಯವು ಮುಗಿಯಿತು.

## ರಾಮಣೀಯಕದ್ವೀಪದ ವನವರ್ಣನೆ : ತಾಯಿಯನ್ನು ದಾಸ್ಯಜೀವನದಿಂದ ವಿಮೋಚಿಸಲು ಸರ್ಪಗಳೊಡನೆ ಗರುಡನ ಸಮಾಲೋಚನೆ

"ಗರುಡನ ಮೇಲೆ ಕುಳಿತು ಪ್ರಯಾಣಮಾಡುತ್ತಿದ್ದ ನಾಗಗಳು ಆ ಸಮಯದಲ್ಲಿ ಜಲಧಾರೆಯಿಂದ ನೆನೆದು ಸಂತೋಷಗೊಂಡು ರಾಮಣೀಯಕದ್ವೀಪಕ್ಕೆ ಬಹುಶೀಘ್ರವಾಗಿ ಹೋದುವು.

ವಿಶ್ವಕರ್ಮನಿಂದ ನಿರ್ಮಿತವಾಗಿದ್ದ ಆ ರಾಮಣೀಯಕದ್ವೀಪಕ್ಕೆ ಆಗಮಿಸಿದ ಆ ನಾಗಗಳು ಮೊದಲು ಅಲ್ಲಿ ಮೊಸಳೆಗಳಿಗೆ ವಾಸಸ್ಥಾನವಾದ ಮತ್ತು ಘೋರವಾಗಿ ಕಾಣುತ್ತಿದ್ದ ಲವಣಸಮುದ್ರವನ್ನು ಕಂಡುವು. ಅನಂತರ ಸಮುದ್ರದ ಮಧ್ಯದಲ್ಲಿದ್ದ ರಾಮಣೀಯಕದ್ವೀಪಕ್ಕೆ ಹೋದುವು.

ಆ ರಾಮಣೀಯಕದ್ವೀಪವು ನಾಲ್ಕು ಕಡೆಗಳಲ್ಲಿಯೂ ಸಮುದ್ರದ ನೀರಿನಿಂದ ಪರಿವೃತವಾಗಿದ್ದಿತು. ಅಲ್ಲಿ ಅನೇಕವಿಧವಾದ ಪಕ್ಷಿಗಳಿದ್ದು ಮಧುರ ವಾಗಿ ನಿನಾದಮಾಡುತ್ತಿದ್ದುವು. ವಿಚಿತ್ರವಾದ ನಾನಾಜಾತಿಯ ಫಲ-ಪುಷ್ಪ ಗಳಿಂದ ಕೂಡಿದ ವನಗಳ ಶ್ರೇಣಿಗಳಿಂದ ಆ ದ್ವೀಪವು ರಾರಾಜಿಸುತ್ತಿದ್ದಿತು. ಅಲ್ಲಿ ಭವ್ಯವಾದ ಭವನಗಳಿದ್ದುವು. ಕಮಲಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದ ಸರೋವರಗಳೂ ತಿಳಿನೀರಿನ ಮಡುವುಗಳೂ ಇದ್ದುವು. ಎತ್ತರವಾದ ಚಂದನವೃಕ್ಷಗಳು ಆಕಾಶದ ಕಡೆಗೆ ಹಾರಿಹೋಗುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ದಿವ್ಯಗಂಧವನ್ನು ಸೂಸುತ್ತಿರುವ ಗಾಳಿಯು ಅಲ್ಲಿ ಬೀಸುತ್ತಿದ್ದಿತು. ಗಾಳಿಯ ಬೀಸುವಿಕೆಯಿಂದಾಗಿ ಹೂಗಳಿಂದ ಕೂಡಿದ್ದ ವೃಕ್ಷಗಳು ಪುಷ್ಪವೃಷ್ಟಿಯನ್ನು ಮಾಡುತ್ತಿದ್ದುವು. ಇತರ ವೃಕ್ಷಗಳಿಂದಲೂ ಕುಸುಮಗಳು ಉದುರುತ್ತಲೇ ಇದ್ದುವು. ಅದನ್ನು ನೋಡಿದರೆ ವೃಕ್ಷಗಳು ರಾಮಣೀಯಕದ್ವೀಪಕ್ಕೆ ಆಗಮಿಸಿದ ನಾಗಗಳನ್ನು ಗೌರವಿಸಲು ಪುಷ್ಪಗಳ ಮಳೆಗರೆಯುತ್ತಿರುವಂತೆ ಭಾಸವಾಗುತ್ತಿದ್ದಿತು.

ಆ ವನದ ಕಾಂತಿಯು ಮನಸ್ಸಿನ ಹರ್ಷವನ್ನು ಹೆಚ್ಚಿಸುವುದಾಗಿದ್ದಿತು.

ಗಂಧರ್ವಾಪ್ಸರೆಯರಿಗೂ ಆ ವನವು ಬಹುಪ್ರಿಯವಾಗಿದ್ದಿತು. ಪಾನಮತ್ತವಾದ ದುಂಬಿಗಳಿಂದ ಆ ಅರಣ್ಯವು ಆವೃತವಾಗಿದ್ದಿತು. ಆ ವನದ ಆಕೃತಿಯು (ರಚನೆಯು) ಮನೋಜ್ಞವಾಗಿಯೂ, ಪ್ರೇಕ್ಷಣೀಯವಾಗಿಯೂ ಇದ್ದಿತು. ರಾಮಣೀಯಕದ್ವೀಪದಲ್ಲಿದ್ದ ವನವು ರಮಣೀಯವಾಗಿಯೂ, ಮಂಗಲಕರವಾಗಿಯೂ, ಪವಿತ್ರವಾಗಿಯೂ, ಜಗನ್ಮೋಹರವಾದ ಎಲ್ಲ ಉತ್ತಮವಸ್ತುಗಳಿಂದ ಪರಿಪೂರ್ಣವಾಗಿಯೂ ಇದ್ದಿತು. ನಾನಾವಿಧವಾದ ಪಕ್ಷಿಗಳ ಧ್ವನಿಗಳಿಂದ ಕೂಡಿಯೂ, ರಮ್ಯವಾಗಿಯೂ ಮತ್ತು ಕಾದ್ರವೇಯರಿಗೆ ಹರ್ಷದಾಯಕವಾಗಿಯೂ ಇದ್ದಿತು. ಅಂತಹ ಶೋಭಾಯಮಾನವಾದ ವನಕ್ಕೆ ಆಗಮಿಸಿದ ಸರ್ಪಗಳು ಯಥೇಚ್ಛವಾಗಿ ವಿಹರಿಸಿದುವು. ಸ್ವಲ್ಪಕಾಲವು ಕಳೆದನಂತರ ಮಹಾವೀರ್ಯನಾದ, ಪಕ್ಷಿರಾಜನಾದ ಸುಪರ್ಣನಿಗೆ ಸರ್ಪಗಳು ಹೇಳಿದುವು :

"ನೀನು ಬಹಳ ಎತ್ತರದಲ್ಲಿ ಹಾರುವೆಯಾದ್ದರಿಂದ ಇದಕ್ಕಿಂತಲೂ ಸುಂದರವಾದ ಪ್ರದೇಶಗಳು ಎಲ್ಲಿವೆಯೆಂಬ ಅರಿವು ನಿನಗಿರುವುದು. ಇಲ್ಲಿ ನಾವಿನ್ನು ಹೆಚ್ಚುಕಾಲ ನಿಲ್ಲಲಾರೆವು. ನಮ್ಮನ್ನು ಸುರಮ್ಯವಾದ ಸ್ವಚ್ಛವಾದ ನೀರಿನಿಂದ ಕೂಡಿರುವ ಬೇರೆ ದ್ವೀಪಗಳಿಗೆ ಕೂಡಲೇ ಎತ್ತಿಕೊಂಡು ಹೋಗು."

ಗರುಡನಿಗೆ ಏನು ಹೇಳಬೇಕೆಂಬುದೇ ತೋಚಲಿಲ್ಲ. ಅಲ್ಲಿರುವ ಸರ್ಪಗಳ ಸಮೂಹವನ್ನು ಒಂದೇ ಸಲ ಹೊಡೆದಪ್ಪಳಿಸುವ ಶಕ್ತಿಯು ಗರುಡನಿಗಿತ್ತು. ಹೀಗಿದ್ದರೂ ಅವುಗಳು ಮಹಾಪರಾಕ್ರಮಿಯಾದ ಗರುಡನಿಗೆ ಆಜ್ಞೆಮಾಡುತ್ತಿವೆ.

ಗರುಡನು ಸರ್ಪಗಳ ಆಜ್ಞೆಗೆ ಉತ್ತರವಾಗಿ ಏನೂ ಹೇಳಲಿಲ್ಲ. ತಾಯಿಯ ಬಳಿಗೆ ಹೋಗಿ ವಿನೀತನಾಗಿ ಕೇಳಿದನು : "ಸರ್ಪಗಳ ಮಾತನ್ನು ನಾನೇಕಮ್ಮ ಕೇಳಬೇಕು ?"

ವಿನತೆಯು ಮಗನ ಮುಖವನ್ನು ನೋಡಿ ನಿಟ್ಟುಸಿರುಬಿಟ್ಟು ಗರುಡನ ತಲೆಯನ್ನು ಸವರುತ್ತಾ–"ಇದು ನಮ್ಮ ದುರ್ದೈವ ಮಗು!" ಎಂದಳು.

"ನೀನೇಕಮ್ಮಾ ಇಂತಹ ದುರ್ವಿಧಿಗೆ ಕಾರಣಳಾದೆ? ನಿನ್ನೀ ಅವಸ್ಥೆಗೆ ಕಾರಣರಾರಮ್ಮಾ?"

"ಕಾರಣರಾರೆಂದು ಹೇಳಲಿ? ಸವತಿಯರಿಬ್ಬರೂ ಪಣವೊಂದನ್ನು

ಕಟ್ಟಿದೆವು. ಸರ್ಪಗಳು ಮಾಡಿದ ಮೋಸದಿಂದ ನಾನು ಪಣದಲ್ಲಿ ಸೋಲು ವಂತಾಯಿತು. ಸೋತ ಕಾರಣದಿಂದ ನಾನಿಂದು ನನ್ನ ಸವತಿಗೆ ದಾಸಿ ಯಾಗಿರುವೆನು."

ತಾಯಿಯ ಮಾತುಗಳನ್ನು ಕೇಳಿ ಗರುಡನಿಗೆ ಬಹಳ ದುಃಖವುಂಟಾ ಯಿತು. ಒಡನೆಯೇ ಸರ್ಪಗಳ ಬಳಿಗೆ ಹೋಗಿ ಕೇಳಿದನು :

"ಎಲೈ ಸರ್ಪಗಳಿರಾ! ಯಾವ ವಸ್ತುವಿನ ಲಾಭದಿಂದ ಅಥವಾ ಯಾವ ವಸ್ತುವಿನ ಜ್ಞಾನವನ್ನು ಪಡೆಯುವುದರಿಂದ ಅಥವಾ ಪರಾಕ್ರಮದಿಂದ ಸಾಧಿತವಾಗುವ ಯಾವ ಕಾರ್ಯವನ್ನು ಮಾಡುವುದರಿಂದ ನನ್ನ ತಾಯಿಯು ದಾಸ್ಯಜೀವನದಿಂದ ನಿವೃತ್ತಿಹೊಂದುವಳು? ಹೇಳಿರಿ."

ಸಮಯವರಿತು ಕಾರ್ಯವನ್ನು ಸಾಧಿಸುವುದು ಬುದ್ಧಿವಂತರ ಲಕ್ಷಣ. ಸರ್ಪಗಳೆಲ್ಲವೂ ಸೇರಿ ಆಲೋಚಿಸಿದುವು. ಆ ಸಮಯದಲ್ಲಿ ಅಪೂರ್ವವಸ್ತು ವೊಂದನ್ನು ಪಡೆಯಬೇಕೆಂದು ನಿರ್ಧರಿಸಿದುವು. "ಅಮೃತವನ್ನು ತಂದು ಕೊಟ್ಟರೆ ಬಂಧವಿಮೋಚನೆಯಾಗುವುದು" ಎಂದು ಗರುಡನಿಗೆ ಹೇಳಿದುವು. ಕದ್ರುವೂ ಕೂಡ ತನ್ನ ಮಕ್ಕಳಿಗೆ ಅಮೃತವು ಸಿಕ್ಕಿ, ಶಾಶ್ವತಸುಖವನ್ನು ಹೊಂದುತ್ತವೆಯೆಂಬ ಆಸೆಯಿಂದ ಮಕ್ಕಳ ಮಾತಿಗೆ ಸಮ್ಮತಿಸಿದಳು."

೨೭ನೆಯ ಅಧ್ಯಾಯವು ಮುಗಿಯಿತು.

೨೮ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಅಮೃತವನ್ನು ತರಲು ಗರುಡನ ಪ್ರಯಾಣ : ತಾಯಿಯ ನಿರ್ದೇಶದಂತೆ ನಿಷಾದರನ್ನು ಭಕ್ಷಿಸಿದುದು

ಗರುಡನು ತಾಯಿಯ ಸಮೀಪಕ್ಕೆ ಬಂದು ಸರ್ಪಗಳು ಹೇಳಿದ ಮಾತನ್ನು ತಿಳಿಸಿ ಹೇಳಿದನು : "ನಾನು ಈ ಕೂಡಲೇ ಹೋಗಿ ಅಮೃತವನ್ನು ತರುವೆನಮ್ಮಾ! ಬಹಳ ಹಸಿವಾಗುತ್ತದೆ. ನನಗೆ ತಿನ್ನಲು ಆಹಾರವೆಲ್ಲಿ ಸಿಕ್ಕುವುದಮ್ಮ?"

ವಿನತೆಯು ಮಗನಿಗೆ ಹೇಳಿದಳು : "ಮಗು! ಸಮುದ್ರಮಧ್ಯದಲ್ಲಿ ನಿಷಾದರು ವಾಸಮಾಡುತ್ತಿದ್ದಾರೆ. ನಿನಗೆ ತೃಪ್ತಿಯಾಗುವಷ್ಟು ನಿಷಾದರನ್ನು

ತಿಂದು ಹಸಿವು ತೀರಿಸಿಕೊಂಡು ಅಮೃತವನ್ನು ತೆಗೆದುಕೊಂಡು ಬಾ. ಆದರೆ ಒಂದು ವಿಷಯವು ಮಾತ್ರ ನೆನಪಿರಲಿ. ಬ್ರಾಹ್ಮಣರನ್ನು ಮಾತ್ರ ಕೊಲ್ಲಬೇಡ.

**ನ ಚ ತೇ ಬ್ರಾಹ್ಮಣಂ ಹನ್ತುಂ ಕಾರ್ಯಾ ಬುದ್ಧಿಃ ಕಥಂಚನ ।**
**ಅವಧ್ಯಃ ಸರ್ವಭೂತಾನಾಂ ಬ್ರಾಹ್ಮಣೋ ಹ್ಯನಲೋಪಮಃ ॥೩॥**

ನಿನ್ನ ಬುದ್ಧಿಯು ಯಾವಾಗಲೂ ಬ್ರಾಹ್ಮಣರನ್ನು ಕೊಲ್ಲಲು ಪ್ರವೃತ್ತ ವಾಗದಿರಲಿ. ಯಜ್ಞೇಶ್ವರನಿಗೆ ಸಮನಾದ ಬ್ರಾಹ್ಮಣರನ್ನು ಯಾರೇ ಆದರೂ ಸಂಹರಿಸಬಾರದು.

**ಅಗ್ನಿರರ್ಕೋ ವಿಷಂ ಶಸ್ತ್ರಂ ವಿಪ್ರೋ ಭವತಿ ಕೋಪಿತಃ ।**
**ಗುರುರ್ಹಿ ಸರ್ವಭೂತಾನಾಂ ಬ್ರಾಹ್ಮಣಃ ಪರಿಕೀರ್ತಿತಃ ॥೪॥**

ಬ್ರಾಹ್ಮಣನು ಕುಪಿತನಾದರೆ ಅಗ್ನಿ-ಸೂರ್ಯ-ವಿಷ-ಶಸ್ತ್ರಗಳಂತೆ ಭಯಂಕರಸ್ವರೂಪನಾಗುತ್ತಾನೆ. ಸರ್ವಪ್ರಾಣಿಗಳಿಗೂ ಬ್ರಾಹ್ಮಣನು ಗುರು ವೆಂದು ಹೇಳಲ್ಪಟ್ಟಿರುತ್ತಾನೆ.

ಈ ಕಾರಣದಿಂದಲೇ ಬ್ರಾಹ್ಮಣನು ಸತ್ಪುರುಷರಿಂದಲೂ ಆದರಿಸ ಲ್ಪಡುತ್ತಾನೆ. ಆದುದರಿಂದ ನೀನೆಷ್ಟೇ ಕುಪಿತನಾಗಿದ್ದರೂ ಬ್ರಾಹ್ಮಣರ ವಧೆ ಯನ್ನು ಮಾತ್ರ ಮಾಡಲು ಹೋಗಬೇಡ.

**ಬ್ರಾಹ್ಮಣಾನಾಮಭಿದ್ರೋಹೋ ನ ಕರ್ತವ್ಯಃ ಕಥಂಚನ ।**
**ನ ಹ್ಯೇವಮಗ್ನಿರ್ನಾದಿತ್ಯೋ ಭಸ್ಮ ಕುರ್ಯಾತ್ತಥಾನಘ ।**
**ಯಥಾ ಕುರ್ಯಾದಭಿಕ್ರುದ್ಧೋ ಬ್ರಾಹ್ಮಣಃ ಸಂಶಿತವ್ರತಃ ॥೬॥**

ಎಂತಹ ಸಮಯದಲ್ಲಿಯೂ ಬ್ರಾಹ್ಮಣನಿಗೆ ದ್ರೋಹವನ್ನೆಸಗಬಾರದು. ಅಗ್ನಿ ಮತ್ತು ಆದಿತ್ಯರು ಭಸ್ಮಮಾಡಲಾಗದುದನ್ನು ಕುಪಿತನಾದ, ಕಠೋರವ್ರತನಿಷ್ಠನಾದ ಬ್ರಾಹ್ಮಣನು ಸುಟ್ಟುಬಿಡುತ್ತಾನೆ.

ರೂಪ-ಗುಣ-ಲಕ್ಷಣಗಳನ್ನು ನೋಡಿ ಇಂತಹವನೇ ಬ್ರಾಹ್ಮಣನೆಂಬು ದನ್ನು ನೀನು ತಿಳಿದುಕೊಳ್ಳಬೇಕು. ಪ್ರಾಣಿಗಳಲ್ಲೆಲ್ಲಾ ಮೊದಲು ಹುಟ್ಟಿದವನೇ ಬ್ರಾಹ್ಮಣನು. ವರ್ಣದಲ್ಲಿಯೂ ಶ್ರೇಷ್ಠನಾದವನು. ಆದುದರಿಂದಲೇ ಅವನು ಪ್ರಪಂಚಕ್ಕೆ ಗುರುವೆಂದೂ–ತಂದೆಯೆಂದೂ ಹೇಳಲ್ಪಟ್ಟಿದ್ದಾನೆ.''

"ಅಮ್ಮಾ! ಅವನ ರೂಪ-ಲಕ್ಷಣಗಳೇನಮ್ಮಾ? ಅವನ ಶೀಲವೇನು?

ಮತ್ತು ಅವನ ಪರಾಕ್ರಮವೆಷ್ಟು? ಅವನೇನು ಯಜ್ಞೇಶ್ವರನಂತಿರುವನೇ? ಅಥವಾ ಸೌಮ್ಯನಾಗಿರುವನೇ? ನಾನು ಯಾವ ಶುಭಲಕ್ಷಣಗಳಿಂದ ಬ್ರಾಹ್ಮಣನನ್ನು ಗುರುತಿಸಲಿ? ಹೇಳು, ತಾಯೇ!"

**ಯಸ್ತೇ ಕಣ್ಠಮನುಪ್ರಾಪ್ತೋ ನಿಗೀರ್ಣಂ ಬಡಿಶಂ ಯಥಾ ।**
**ದಹೇದಙ್ಗಾರವತ್ಪುತ್ರ ತಂ ವಿದ್ಯಾ ಬ್ರಾಹ್ಮಣರ್ಷಭಮ್ ॥೧೦॥**

"ಮಗು! ಬ್ರಾಹ್ಮಣನೊಬ್ಬನು ನಿನ್ನ ಕಂಠಗತನಾದನೆಂದರೆ ಗಾಳಕ್ಕೆ ಬಾಯಿಕ್ಕಿದ ಮೀನಿನಂತೆ ನೀನು ತೊಂದರೆಪಡಬೇಕಾಗುತ್ತದೆ. ಬಾಯಿಗೆ ಹಾಕಿಕೊಂಡ ಕೆಂಡವು ನಿನ್ನ ನಾಲಿಗೆ, ದವಡೆ, ಕಂಠಗಳನ್ನು ಸುಟ್ಟುಹಾಕು ವಂತೆ–ಯಾವನು ನಿನ್ನ ಕಂಠಗತನಾದಾಗ ನಿನ್ನ ಬಾಯನ್ನು ಸುಟ್ಟುಬಿಡು ತ್ತಾನೆಯೋ ಅವನನ್ನೇ ನೀನು ಬ್ರಾಹ್ಮಣನೆಂದು ತಿಳಿ. ಬ್ರಾಹ್ಮಣನೆಂದು ತಿಳಿದನಂತರ ನುಂಗಲು ಪ್ರಯತ್ನಿಸದೇ ಹೊರಕ್ಕೆ ಹಾಕಿಬಿಡು.

ನೀನು ಬಹಳ ಕುಪಿತನಾಗಿದ್ದಾಗಲೂ ಬ್ರಾಹ್ಮಣನನ್ನು ಯಾವ ಕಾರಣ ದಿಂದಲೂ ಕೊಲ್ಲಬಾರದು. ಒಂದು ವೇಳೆ ಅವನು ನಿನ್ನ ಹೊಟ್ಟೆಯೊಳಗೇ ಹೋಗಿಬಿಟ್ಟರೂ ಬ್ರಾಹ್ಮಣನನ್ನು ನೀನು ಜೀರ್ಣಿಸಿಕೊಳ್ಳಲಾರೆ. ಜೀರ್ಣ ವಾಗದೇ ನಿನ್ನ ಹೊಟ್ಟೆಯಲ್ಲಿದ್ದರೆ ಅವನನ್ನು ನೀನು ಬ್ರಾಹ್ಮಣೋತ್ತಮನೆಂದು ಭಾವಿಸು."

ಶೌನಕರೇ! ಪರಮದುಃಖಾರ್ತೆಯಾಗಿದ್ದ ವಿನತೆಗೆ ತನ್ನ ಪುತ್ರನ ಪರಾಕ್ರಮವೆಷ್ಟೆಂಬುದು ತಿಳಿದಿದ್ದಿತು. ಆದರೂ ಪುತ್ರನ ಮೇಲಿನ ಅತುಲ ವಾದ ಪ್ರೇಮದಿಂದಾಗಿ ಅವನಿಗೆ ದೇವತೆಗಳ ರಕ್ಷಣೆಯನ್ನು ಬೇಡಿ ಮನಸಾರ ಆಶೀರ್ವದಿಸಿದಳು.

**ಪಕ್ಷೌ ತೇ ಮಾರುತಃ ಪಾತು ಚನ್ದ್ರಸೂರ್ಯೌ ಚ ಪೃಷ್ಠತಃ ।**
**ಶಿರಶ್ಚ ಪಾತು ವಹ್ನಿಸ್ತೇ ವಸವಃ ಸರ್ವತಸ್ತನುಮ್ ॥೧೫॥**

**ಅಹಂ ಚ ತೇ ಸದಾ ಪುತ್ರ ಶಾನ್ತಿಸ್ವಸ್ತಿಪರಾಯಣಾ ।**
**ಇಹಾಸೀನಾ ಭವಿಷ್ಯಾಮಿ ಸ್ವಸ್ತಿಕಾರೇ ರತಾ ಸದಾ ।**
**ಅರಿಷ್ಟಂ ವ್ರಜ ಪನ್ಥಾನಂ ಪುತ್ರ ಕಾರ್ಯಾರ್ಥಸಿದ್ಧಯೇ ॥೧೬॥**

"ಮಗು! ನಿನ್ನೆರಡು ರೆಕ್ಕೆಗಳನ್ನೂ ವಾಯುವು ರಕ್ಷಿಸಲಿ. ನಿನ್ನ ಹಿಂಭಾಗವನ್ನು ಚಂದ್ರ-ಸೂರ್ಯರು ರಕ್ಷಿಸಲಿ. ನಿನ್ನ ತಲೆಯನ್ನು ಅಗ್ನಿಯು

ರಕ್ಷಿಸಲಿ. ನಿನ್ನ ಸಂಪೂರ್ಣಶರೀರವನ್ನೂ ಅಷ್ಟವಸುಗಳು ರಕ್ಷಿಸಲಿ. ನಾನಾದರೋ ಸರ್ವದಾ ನಿನ್ನ ಸನ್ಮಂಗಳದಲ್ಲಿಯೇ ನಿರತಳಾಗಿರುತ್ತಾ, ನಿನ್ನ ಕಾರ್ಯದ ಮಧ್ಯದಲ್ಲಿ ಬರಬಹುದಾದ ಸಕಲವಿಘ್ನಗಳೂ ಪರಿಹಾರವಾಗಲೆಂದು ಶಾಂತಿಮಂತ್ರವನ್ನು ಜಪಿಸಿ ಮಂಗಳಾಶಾಸನಮಾಡುತ್ತಾ ಕಾಲಕಳೆಯುತ್ತಿರುವೆನು. ನೀನಿನ್ನು ಹೋಗಿ ಬಾ, ಮಗು! ಕಾರ್ಯಸಿದ್ಧಿಗಾಗಿ ನೀನು ಹೋಗುವ ಮಾರ್ಗದಲ್ಲಿ ಯಾವ ವಿಘ್ನಗಳೂ ಉಂಟಾಗದಿರಲಿ"–ಎಂದು ಹೇಳಿ ವಿನತೆಯು ಮಗನನ್ನು ಆಶೀರ್ವದಿಸಿ ಬೀಳ್ಕೊಟ್ಟಳು.

ಗರುಡನು ವಿನತೆಯ ಆಶೀರ್ವಾದಗಳನ್ನು ಪಡೆದು ಉತ್ಸಾಹಭರಿತನಾಗಿ ಮೇಲೆ ಹಾರಿದ ರಭಸಕ್ಕೆ ಹತ್ತಿರದಲ್ಲಿದ್ದ ಅನೇಕ ಗಿಡ-ಮರ-ಬಳ್ಳಿಗಳು ಬುಡಮೇಲಾದುವು. ಸಮುದ್ರಮಧ್ಯದಲ್ಲಿದ್ದ ನಿಷಾದರಾಜ್ಯಕ್ಕೆ ಹೋಗಿ ತನ್ನ ರೆಕ್ಕೆಗಳ ವ್ಯಾಘಾತದಿಂದ ಧೂಳೆಬ್ಬಿಸಿ ನಿಷಾದರು ಸಂಚರಿಸುವ ದಾರಿಗೆ ಅಡ್ಡಲಾಗಿ ಬಾಯಿ ತೆರೆದು ಕುಳಿತನು. ಗಗನದವರೆಗೆ ಆವರಿಸಿದ ಧೂಳಿನಿಂದ ನಿಷಾದರಿಗೆ ಕಣ್ಣುಕಾಣದೇ ಭ್ರಾಂತಿಯುಂಟಾಗಿ ಅತ್ತಿತ್ತ ಅಲೆದಾಡಿ ಕಡೆಗೆ ಸಾವಿರಾರು ಸಂಖ್ಯೆಯಲ್ಲಿ–ಬಿರುಗಾಳಿಯಿಂದ ಮರಗಳು ಜೋರಾಗಿ ಕಂಪಿಸಿದಾಗ ಪೀಡಿಸಲ್ಪಟ್ಟ ಹಕ್ಕಿಗಳು ಆಕಾಶಕ್ಕೆ ಹಾರುವಂತೆ-ಗರುಡನ ಬಾಯನ್ನು ಹೊಕ್ಕರು. ಬೆಸ್ತರವನು ಬೀಸಿದ ಬಲೆಗೆ ಮೀನುಗಳು ಬೀಳುವಂತೆ–ನಿಷಾದರೆಲ್ಲರೂ ತೆರೆದ ಬಾಯೊಳಗೆ ಸೇರಿದೊಡನೆಯೇ ಗರುಡನು ತನ್ನ ಬಾಯನ್ನು ಮುಚ್ಚಿಕೊಂಡು ಒಬ್ಬೊಬ್ಬ ನಿಷಾದನನ್ನೂ ನುಂಗಲು ಪ್ರಾರಂಭಿಸಿದನು."

೨೮ನೆಯ ಅಧ್ಯಾಯವು ಮುಗಿಯಿತು.

೨೯ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಕಶ್ಯಪರು ಗರುಡನಿಗೆ ಆನೆ ಮತ್ತು ಆಮೆಗಳ ಪೂರ್ವಜನ್ಮದ ವೃತ್ತಾಂತವನ್ನು ಹೇಳಿದುದು : ಗರುಡನು ಆನೆ ಮತ್ತು ಆಮೆಗಳನ್ನೆತ್ತಿಕೊಂಡು ವಟವೃಕ್ಷದ ಮೇಲೆ ಕುಳಿತಾಗ ವಟವೃಕ್ಷದ ರೆಂಬೆಯು ಮುರಿದುಹೋದುದು

ಸೌತಿಗಳು ಹೇಳುತ್ತಾರೆ :

**ತಸ್ಯ ಕಣ್ಠಮನುಪ್ರಾಪ್ತೋ ಬ್ರಾಹ್ಮಣಃ ಸಹ ಭಾರ್ಯಯಾ ।**
**ದಹನ್ದೀಪ್ತ ಇವಾಙ್ಗಾರಸ್ತಮುವಾಚಾನ್ತರಿಕ್ಷಗಃ ॥೧॥**

ಈ ಮಧ್ಯದಲ್ಲಿ ಬ್ರಾಹ್ಮಣನೊಬ್ಬನು ಹೆಂಡತಿಯೊಡನೆ ಗರುಡನ ಬಾಯನ್ನು ಹೊಕ್ಕನು. ಆಗ ಗರುಡನ ಕಂಠವನ್ನು ಉರಿಯುತ್ತಿರುವ ಕೊಳ್ಳಿಯು ಸುಟ್ಟಂತಾಯಿತು. ಆಗ ತಾಯಿಯು ಹೇಳಿದ್ದ ಮಾತು ಅವನ ನೆನಪಿಗೆ ಬಂದಿತು. ತನ್ನ ಬಾಯೊಳಗೆ ಪತ್ನೀಸಮೇತನಾದ ಬ್ರಾಹ್ಮಣನೊಬ್ಬನು ಸೇರಿರುವನೆಂದು ಅರಿತವನಾಗಿ ಒಳಗಿರುವ ಬ್ರಾಹ್ಮಣನನ್ನು ಕುರಿತು ಹೇಳಿದನು:

"ಬ್ರಾಹ್ಮಣೋತ್ತಮನೇ! ಬೇಗ ಹೊರಗೆ ಬಾ. ನಿನ್ನ ನಿಷ್ಕ್ರಮಣಕ್ಕಾಗಿ ಬಾಯನ್ನು ತೆರೆಯುವೆನು. ಬ್ರಾಹ್ಮಣನಾದವನು ದುಷ್ಕಾರ್ಯದಲ್ಲಿ ಪ್ರವೃತ್ತ ನಾಗಿದ್ದರೂ ಅವನನ್ನು ಕೊಲ್ಲಲಾರೆನು. ಸಾವಕಾಶಮಾಡದೇ ಬೇಗ ಹೊರಗೆ ಬಾ."

"ಪಕ್ಷಿರಾಜನೇ! ನಾನೊಬ್ಬನೇ ಹೊರಗೆ ಬರಲಾರೆ. ನನ್ನ ಪತ್ನಿ ಯಾಗಿರುವ ಈ ನಿಷಾದಸ್ತ್ರೀಗೂ ಹೊರಗೆ ಬರಲು ಅವಕಾಶವನ್ನು ಕಲ್ಪಿಸು."

"ಆ ನಿಷಾದಿಯನ್ನೂ ನೀನು ಜೊತೆಯಲ್ಲಿಯೇ ಕರೆದುಕೊಂಡು ಶೀಘ್ರವಾಗಿ ಹೊರಗೆ ಬಾ. ನನ್ನ ಮಹಾತೇಜಸ್ಸಿನಿಂದಲೂ ಜೀರ್ಣನಾಗ ದಿರುವ ನಿನ್ನ ಆತ್ಮವನ್ನು ರಕ್ಷಣೆಮಾಡಿಕೋ."

ಒಡನೆಯೇ ಬ್ರಾಹ್ಮಣನು ತನ್ನ ಪತ್ನಿಯಾದ ನಿಷಾದಿಯೊಡನೆ ಹೊರಗೆ ಬಂದು ಗರುಡನನ್ನು ಆಶೀರ್ವದಿಸಿ ಇಷ್ಟಬಂದೆಡೆಗೆ ಹೊರಟುಹೋದನು.

ಸಭಾರ್ಯನಾದ ಬ್ರಾಹ್ಮಣನು ಕಂಠಪ್ರದೇಶದಿಂದ ಹೊರಬಂದ ನಂತರ ನಿಷಾದರೆಲ್ಲರನ್ನೂ ನುಂಗಿದರೂ ತೃಪ್ತಿಹೊಂದದೆ ರೆಕ್ಕೆಗಳನ್ನು ಬಡಿಯುತ್ತಾ ಗರುಡನು ಆಕಾಶಕ್ಕೆ ಹಾರಿದನು. ಆಕಾಶದಲ್ಲಿ ಹಾರುತ್ತಾ ಆಹಾರವನ್ನು ಹುಡುಕುತ್ತಿದ್ದಾಗ ತನ್ನ ತಂದೆಯಾದ ಕಶ್ಯಪರು ತಪೋವನ ವೊಂದರಲ್ಲಿ ಸಂಚರಿಸುತ್ತಿದ್ದುದನ್ನು ನೋಡಿ ಒಡನೆಯೇ ಕೆಳಗಿಳಿದು ತಂದೆಗೆ ಪ್ರಣಾಮಮಾಡಿದನು.

"ಮಗು! ಆರೋಗ್ಯದಿಂದಿರುವೆಯಾ? ಮನುಷ್ಯಲೋಕದಲ್ಲಿ ನಿನಗೆ ಬೇಕಾಗುವಷ್ಟು ಆಹಾರವು ಸಿಕ್ಕುತ್ತಿದೆಯೇ?"

ಕಶ್ಯಪರು ಹೀಗೆ ಪ್ರಶ್ನಿಸಲು ಅಮೇಯಾತ್ಮನಾದ ಗರುಡನು ಯಥಾ ಯೋಗ್ಯವಾಗಿ ಉತ್ತರಿಸಿದನು. ಅನಂತರ ಮಹರ್ಷಿಗಳು ಮಗನನ್ನು ಕುರಿತು ಇನ್ನೂ ಹಲವಾರು ಪ್ರಶ್ನೆಗಳನ್ನು ಕೇಳಿದರು : "ನೀವುಗಳೆಲ್ಲರೂ ಆರೋಗ್ಯ ದಿಂದಿರುವಿರಾ? ಅನುದಿನವೂ ನಿನ್ನ ಭೋಜನಕ್ಕೆ ಬೇಕಾಗುವಷ್ಟು ಆಹಾರವು ಸಿಕ್ಕುತ್ತಿದೆಯೇ?"

"ತಂದೆಯೇ! ನನ್ನ ತಾಯಿಯು ಕುಶಲಿಯಾಗಿದ್ದಾಳೆ. ನಮ್ಮಣ್ಣ ನಂತೆಯೇ ನಾನೂ ಕುಶಲಿಯಾಗಿದ್ದೇನೆ. ಆದರೆ ಭೋಜನದ ವಿಷಯದಲ್ಲಿ ಮಾತ್ರ ನಾನು ಕುಶಲಿಯಾಗಿಲ್ಲ. ಪರ್ಯಾಪ್ತವಾದ ಭೋಜನವು ನನಗೆ ಸಿಕ್ಕುತ್ತಿಲ್ಲ. ಸರ್ಪಗಳು ಅಮೃತವನ್ನು ತರಲು ನಿರ್ದೇಶಿಸಿವೆ. ತಾಯಿಯ ಬಂಧವಿಮೋಚನೆಗಾಗಿ ನಾನೂ ಕೂಡ ಈಗಲೇ ಹೋಗಿ ಅಮೃತವನ್ನು ತರುತ್ತೇನೆ. ಹಸಿವನ್ನಿಂಗಿಸಿಕೊಳ್ಳಲು ನಿಷಾದರನ್ನು ಭಕ್ಷಿಸುವಂತೆ ನಮ್ಮ ತಾಯಿಯು ಹೇಳಿದಳು. ತಾಯಿಯ ಮಾತಿನಂತೆ ಅನೇಕ ನಿಷಾದರನ್ನು ನುಂಗಿದೆನು. ಆದರೂ ಕೂಡ ನನ್ನ ಹಸಿವು ಇಂಗಲಿಲ್ಲ. ನನಗೆ ತೃಪ್ತಿಯೂ ಉಂಟಾಗಲಿಲ್ಲ. ಆದುದರಿಂದ ನನಗೆ ಹೊಟ್ಟೆತುಂಬುವಷ್ಟು ಭಕ್ಷ್ಯಸಿಗುವ ಬೇರೊಂದು ಸ್ಥಳವನ್ನು ದಯಮಾಡಿ ನಿರ್ದೇಶಿಸು. ಯಾವ ಭಕ್ಷ್ಯವನ್ನು ತಿಂದರೆ ನಾನು ಅನಾಯಾಸವಾಗಿ ಅಮೃತವನ್ನು ತರಬಲ್ಲೆನೋ (ಅಮೃತ ವನ್ನು ತರಲು ಸಮರ್ಥನಾಗುವೆನೋ) ಅಂತಹ ಭಕ್ಷ್ಯ ವೊಂದನ್ನು ಸೂಚಿಸು. ನಾನೀಗ ನನ್ನ ಹಸಿವು-ಬಾಯಾರಿಕೆಗಳನ್ನು ಒಡನೆಯೇ ಹೋಗಲಾಡಿಸಿ ಕೊಳ್ಳಬೇಕಾಗಿದೆ. ಆದುದರಿಂದ ಸಮೀಚೀನವಾದ ಭಕ್ಷ್ಯವನ್ನು ಸೂಚಿಸುವವನಾಗು."

"ಮಗು! ಇಲ್ಲಿ ಕಾಣುತ್ತಿರುವ ಸರೋವರವು ಮಹಾಪುಣ್ಯದಾಯಕ ವಾದುದು. ದೇವಲೋಕದಲ್ಲಿಯೂ ಇದು ವಿಖ್ಯಾತವಾಗಿದೆ. ಇದರ ನೀರೂ ಅಮೃತದಂತೆ ಸಿಹಿಯಾಗಿದೆ. ಈ ಸರೋವರದಲ್ಲಿ ಒಂದು ಆಮೆಯಿದೆ. ಅದನ್ನು ಒಂದು ಆನೆಯು ಎಳೆಯಲು ಪ್ರಯತ್ನಿಸುತ್ತಿದೆ. ಆ ಎರಡು ಪ್ರಾಣಿಗಳ ವೈರವು ಜನ್ಮಾಂತರದಿಂದ ಬಂದುದು. ಅವೆರಡರ ಭಕ್ಷಣೆಯಿಂದ ನಿನ್ನ ಹಸಿವು ತೀರುವುದು ಖಂಡಿತ."

"ಜನ್ಮಾಂತರದಿಂದ ಶತ್ರುತ್ವವು ಉಳಿದು ಬಂದಿರುವುದೇ? ಇದಕ್ಕೆ ಕಾರಣವೇನು? ಹೇಳು ತಂದೆಯೇ!"

"ಮಗು! ಈ ಸರೋವರದಲ್ಲಿರುವ ಆಮೆ-ಆನೆಗಳು ಪೂರ್ವಜನ್ಮದಲ್ಲಿ 'ವಿಭಾವಸು-ಸುಪ್ರತೀಕ' ಗಳೆಂಬ ಹೆಸರಿನ ತಪಸ್ವಿಗಳಾಗಿದ್ದರು. ವಿಭಾವಸುವು ಬಹಳ ಕೋಪಿಷ್ಠ. ಅವನ ತಮ್ಮ ಸುಪ್ರತೀಕನೆಂಬುವನು ಮಹಾ ತಪಸ್ವಿಯು. ಸುಪ್ರತೀಕನು ಕೋಪಿಷ್ಠನಾದ ಅಣ್ಣನ ಜೊತೆಯಲ್ಲಿರಲು ಇಚ್ಛಿಪಡದೆ ಆಸ್ತಿಯ ವಿಭಾಗವನ್ನು ಪದೇ-ಪದೇ ಕೇಳುತ್ತಿದ್ದನು. ಕೆಲವು ಕಾಲ ಕಳೆದನಂತರ ವಿಭಾವಸುವು ಸುಪ್ರತೀಕನನ್ನು ಕರೆದು ಹೇಳಿದನು :

**ವಿಭಾಗಂ ಬಹವೋ ಮೋಹಾತ್ಕರ್ತುಮಿಚ್ಛನ್ತಿ ನಿತ್ಯಶಃ ।**
**ತತೋ ವಿಭಕ್ತಾಸ್ತ್ವನ್ಯೋನ್ಯಂ ವಿಕ್ರುಧ್ಯನ್ತೇಽರ್ಥಮೋಹಿತಾಃ ॥೧೮॥**

**ತತಃ ಸ್ವಾರ್ಥಪರಾನ್ಮೂಢಾನ್ಪೃಥಗ್ಭೂತಾನ್ಸ್ವಕೈರ್ಧನೈಃ ।**
**ವಿದಿತ್ವಾ ಭೇದಯನ್ತ್ಯೇತಾನಮಿತ್ರಾ ಮಿತ್ರರೂಪಿಣಃ ॥೧೯॥**

**ವಿದಿತ್ವಾ ಚಾಪರೇ ಭಿನ್ನಾನನ್ತರೇಷು ಪತನ್ತ್ಯಥ ।**
**ಭಿನ್ನಾನಾಮತುಲೋ ನಾಶಃ ಕ್ಷಿಪ್ರಮೇವ ಪ್ರವರ್ತತೇ ॥೨೦॥**

**ತಸ್ಮಾದ್ವಿಭಾಗಂ ಭ್ರಾತೄಣಾಂ ನ ಪ್ರಶಂಸನ್ತಿ ಸಾಧವಃ ।**
**ಗುರುಶಾಸ್ತ್ರೇ ನಿಬದ್ಧಾನಾಮನ್ಯೋನ್ಯೇನಾಭಿಶಙ್ಕಿನಾಮ್ ॥೨೧॥**

"ಕೇವಲ ಧನದ ಆಸೆಯಿಂದ ವಿವೇಕಶೂನ್ಯರಾದ ಜನರು ಆಸ್ತಿಯ ವಿಭಾಗವನ್ನು ಕೇಳುತ್ತಾರೆ. ಸಹೋದರರು ವಿಭಾಗವಾದೊಡನೆಯೇ ಮೂರನೆಯವರು ಮಧ್ಯದಲ್ಲಿ ಪ್ರವೇಶಿಸಿ ಅನೇಕವಿಧವಾದ ಚಾಡಿಯ ಮಾತುಗಳಿಂದ ಸಹೋದರರಲ್ಲಿ ಪರಸ್ಪರ ದ್ವೇಷಭಾವವನ್ನು ಹೆಚ್ಚಿಸುತ್ತಾರೆ. ಅಲ್ಲದೇ ಅವರ ಆಸ್ತಿಯನ್ನೂ ಉಪಾಯಾಂತರದಿಂದ ಕಿತ್ತುಕೊಳ್ಳಲು ಮಿತ್ರರೂಪರಾದ ಶತ್ರುಗಳು ಪ್ರಯತ್ನಿಸುತ್ತಾರೆ. ಆದುದರಿಂದ ಸಹೋದರರು ವಿಭಾಗವಾದರೆ ಇಬ್ಬರ ವಿನಾಶವೂ ಖಂಡಿತ. ಈ ಕಾರಣದಿಂದಲೇ ವಿವೇಕಿಗಳಾದವರು ಆಸ್ತಿಯ ವಿಭಾಗಕ್ಕೆ ಎಂದೂ ಸಮ್ಮತಿಸುವುದಿಲ್ಲ. ಏಕೆಂದರೆ : ವಿಭಾಗದ ನಂತರ ಗುರುಸ್ವರೂಪವಾದ ಶಾಸ್ತ್ರದ ನಿಬಂಧನೆಗಳಿಗೆ ಅವರು ಒಳಪಡುವುದಕ್ಕಾಗುವುದಿಲ್ಲ. **ಕನಿಷ್ಠಾನ್ಪುತ್ರವತ್ಪಶ್ಯೇತ್ ಜ್ಯೇಷ್ಠೋ ಭ್ರಾತಾ**

**ಪಿತುಃ ಸಮಃ** –ಕನಿಷ್ಠರನ್ನು ಮಕ್ಕಳಂತೆ ನೋಡಿಕೊಳ್ಳಬೇಕೆಂಬ ಮತ್ತು ಹಿರಿಯಣ್ಣನು ತಂದೆಗೆ ಸಮಾನನೆಂಬ ಶಾಸ್ತ್ರದ ಉಲ್ಲಂಘನೆಯಾಗುತ್ತದೆ. ಮತ್ತು ಪರಸ್ಪರ ಸಂಶಯಗ್ರಸ್ತರಾಗುತ್ತಾರೆ. ಆದುದರಿಂದ ನೀನೂ ಕೂಡ ಆಸ್ತಿಯನ್ನು ವಿಭಜಿಸುವ ಆಲೋಚನೆಯನ್ನು ಕೈಬಿಡು. ಇಬ್ಬರೂ ಸುಖವಾಗಿ ಬಾಳೋಣ."

"ಅಣ್ಣಾ! ನಿನ್ನೊಡನೆ ಕೂಡಿ ಇರಲು ನನಗೆ ಸಾಧ್ಯವೇ ಇಲ್ಲ. ಆಸ್ತಿಯ ವಿಭಾಗವೇ ಕೂಡದೆಂಬ ಅಭಿಪ್ರಾಯವಿದ್ದರೆ ಸ್ಮೃತಿಗಳಲ್ಲಿ ಆಸ್ತಿಯ ವಿಭಾಗದ ಪ್ರಕರಣವೇ ಇರುತ್ತಿರಲಿಲ್ಲ. ನಾವಿಬ್ಬರೂ ಒಟ್ಟಾಗಿ ಇರುವುದಕ್ಕಿಂತಲೂ ಬೇರೆಯಾದಲ್ಲಿ ನಮ್ಮ ಪ್ರೀತಿಯು ಉಳಿಯುವುದೆಂದು ನನಗನಿಸುತ್ತದೆ. ಆದುದರಿಂದ ದಯೆಯಿಟ್ಟು ಶಾಸ್ತ್ರಸಮ್ಮತವಿರುವಂತೆ ನನಗೆ ವಿಭಾಗವನ್ನು ಕೊಡು. ಇಬ್ಬರೂ ಶಾಂತಿಯಿಂದ ಜೀವಿಸೋಣ."

ತಮ್ಮನ ಮಾತುಗಳನ್ನು ಕೇಳಿ ವಿಭಾವಸುವಿಗೆ ಅತಿಯಾದ ಕೋಪ ವುಂಟಾಯಿತು. ಗಡುಸಾದ ಧ್ವನಿಯಿಂದ ಹೇಳಿದನು : "ನಿನ್ನನ್ನು ಹತೋಟಿ ಯಲ್ಲಿಟ್ಟುಕೊಳ್ಳಲು ನನ್ನಿಂದ ಸಾಧ್ಯವಾಗುವುದಿಲ್ಲ. ನೀನು ಯಾವಾಗಲೂ ಭೇದಭಾವವನ್ನೇ ಬೆಳೆಸುತ್ತಾ ಹೋಗುತ್ತಿರುವುದರಿಂದ ಹಣದ ವಿಭಾಗವನ್ನು ಅಪೇಕ್ಷಿಸುತ್ತಿರುವೆ. ನನ್ನ ಮಾತನ್ನು ಕೇಳದೇ ಕೇವಲ ಯೌವನಮದದಿಂದ ಸ್ವೇಚ್ಛೆಯಾಗಿ ವರ್ತಿಸಲು ಇಚ್ಛಿಸುತ್ತಿರುವೆಯಾದ ಕಾರಣ ನಿನಗೆ ಆನೆಯ ಜನ್ಮವು ಪ್ರಾಪ್ತಿಯಾಗಲಿ."

ಅಣ್ಣನ ಮಾತನ್ನು ಕೇಳಿ ತಮ್ಮನೇನೂ ಸುಮ್ಮನಿರಲಿಲ್ಲ. "ನೀನು ವಿಶಾಲಭಾವನೆಯಿಲ್ಲದೇ–'ನಾನು ಹೇಳಿದ್ದೇ ಸರಿ'–ಎಂಬ ಸ್ವಾಭಿಮಾನವನ್ನು ಹೊಂದಿರುವೆಯಾದ ಕಾರಣ ಜಲರಾಶಿಯ ಕೆಳಭಾಗದಲ್ಲಿ ಸಂಚರಿಸುವ ಆಮೆಯ ಜನ್ಮವನ್ನು ತಾಳು"–ಎಂದು ಪ್ರತಿಶಾಪವನ್ನಿತ್ತನು.

ರೋಷವೂ ಮತ್ತು ಲೋಭವೂ ಅವರಲ್ಲಿದ್ದುದರಿಂದ ಅವರಿಬ್ಬರೂ ಈಗ ಪ್ರಾಣಿಗಳಾಗಿ ಜನ್ಮತಾಳಿದ್ದಾರೆ. ಪ್ರಾಣಿಜನ್ಮದಲ್ಲಿಯೂ ಅವರು ಪರಸ್ಪರ ವಾಗಿ ದ್ವೇಷಿಸುತ್ತಲೇ ಇದ್ದಾರೆ. ಇಬ್ಬರ ಶರೀರಗಳೂ ಬಹಳ ದೊಡ್ಡದಾಗಿರು ವುದರಿಂದಲೂ ಮತ್ತು ಅವು ಬಹುಬಲಿಷ್ಠವಾಗಿರುವುದರಿಂದಲೂ ಹೆಚ್ಚು

ಗರ್ವಿತವಾಗಿವೆ. ಮಹಾಕಾಯಗಳಾದ ಅವು ಈ ಸರಸ್ಸಿನಲ್ಲಿಯೇ ವಾಸ ಮಾಡುತ್ತಿವೆ. ಹಿಂದಿದ್ದ ವೈರಕ್ಕೆ ಅನುಗುಣವಾಗಿ ಅವುಗಳಲ್ಲೊಂದಾದ ಮಹಾ ಗಜವು ಸರಸ್ಸಿನ ಬಳಿಗೆ ಬಂದು ಘೋರವಾಗಿ ಗರ್ಜಿಸುತ್ತದೆ. ಆ ಶಬ್ದವನ್ನು ಕೇಳಿದೊಡನೆಯೇ ನೀರಿನ ತಳಭಾಗದಲ್ಲಿರುವ ಮಹಾಕಾಯಯುಕ್ತವಾದ ಆಮೆಯು ಮೇಲಕ್ಕೆ ಬಂದು ಸರೋವರದ ನೀರನ್ನು ಕಲಕಿಬಿಡುತ್ತದೆ. ಆಮೆಯನ್ನು ನೋಡಿದೊಡನೆಯೇ ಮದಗಜವು ಸೊಂಡಿಲನ್ನೆತ್ತಿಕೊಂಡು ನೀರಿನೊಳಕ್ಕೆ ಧುಮ್ಮಿಕ್ಕುತ್ತದೆ. ಮಹಾಬಲಶಾಲಿಯಾದ ಆನೆಯು ಅಸಂಖ್ಯಾತವಾದ ಮೀನುಗಳಿಂದ ಕೂಡಿರುವ ಆ ಸರೋವರವನ್ನು ದಂತ, ಸೊಂಡಿಲು, ಬಾಲ ಮತ್ತು ಕಾಲುಗಳ ಆಘಾತಗಳಿಂದ ಅಲ್ಲೋಲ-ಕಲ್ಲೋಲ ಮಾಡಿಬಿಡುತ್ತದೆ.

ಆಸ್ತಿಯ ಕಾರಣಕ್ಕಾಗಿ ಅವರಿಬ್ಬರೂ ಪರಸ್ಪರಶಾಪದಿಂದ ಆಮೆ-ಆನೆಗಳಾಗಿ ಜನಿಸಿದ್ದಾರೆ. ಅವರಿಬ್ಬರ ವೈರವು ಈಗಲೂ ಮುಂದುವರಿಯುತ್ತಿದೆ. ಆ ಎರಡು ಪ್ರಾಣಿಗಳೂ ಮನೋಹರವಾದ ಆ ಸರೋವರದಲ್ಲಿ ಬಹಳ ಕಾಲದಿಂದ ಸೆಣಸುತ್ತಲೇ ಇವೆ. ಆನೆಯ ಗರ್ಜನೆಯಿಂದ ಆಮೆಯು ನೀರೊಳಕ್ಕೆ ಹೋಗಿಬಿಡುವುದಿಲ್ಲ. ಅದೂ ತಲೆಯನ್ನು ಮೇಲೆತ್ತಿಕೊಂಡು ಆನೆಯೊಡನೆ ಯುದ್ಧಕ್ಕೆ ಸಿದ್ಧವಾಗುತ್ತದೆ. ಮದಗಜವು ಆರು ಯೋಜನ ಗಳಷ್ಟು ಎತ್ತರವಾಗಿಯೂ, ಹನ್ನೆರಡು ಯೋಜನಗಳಷ್ಟು ಉದ್ದವಾಗಿಯೂ ಇದೆ. ಆಮೆಯು ಮೂರು ಯೋಜನಗಳಷ್ಟು ಎತ್ತರವಾಗಿಯೂ ಮತ್ತು ಹತ್ತು ಯೋಜನಗಳಷ್ಟು ಸುತ್ತಳತೆಯುಳ್ಳದ್ದಾಗಿಯೂ ಇದೆ. ಒಂದು ಮತ್ತೊಂದನ್ನು ಕೊಲ್ಲುವ ಛಲದಿಂದ ಯುದ್ಧಮಾಡಲು ಎರಡೂ ಸದಾ ಉತ್ಸುಕವಾಗಿವೆ. ನೀನು ಶೀಘ್ರವಾಗಿ ಅಲ್ಲಿಗೆ ಹೋಗಿ ಅವೆರಡನ್ನೂ ಭಕ್ಷಣಮಾಡಿ ನಿನ್ನ ಅಭೀಷ್ಟಕಾರ್ಯದ ಸಾಧನೆಮಾಡು. ಮಹಾಮೇಘಮಂಡಲ ದೋಪಾದಿಯಲ್ಲಿರುವ ಆಮೆಯನ್ನೂ–ಮಹಾಪರ್ವತಕ್ಕೆ ಸಮಾನವಾಗಿರುವ ಘೋರರೂಪಿಯಾದ ಆನೆಯನ್ನೂ ಭಕ್ಷಿಸಿ ಹಸಿವನ್ನಿಂಗಿಸಿಕೊಂಡು ಅಮೃತ ವನ್ನು ತೆಗೆದುಕೊಂಡು ಬಾ, ಮಗು!”

ಶೌನಕರೇ! ಕಶ್ಯಪರು ಗರುಡನಿಗೆ ಹೀಗೆ ಹೇಳಿ ಆ ಸಮಯದಲ್ಲಿ ಅವನಿಗೆ ಮಂಗಳಾಶಾಸನಮಾಡುತ್ತಾ ಹೇಳಿದರು :

**ಯುಧ್ಯತಃ ಸಹ ದೇವೈಸ್ತೇ ಯುದ್ಧೇ ಭವತು ಮಙ್ಗಲಮ್ ।**
**ಪೂರ್ಣಕುಮ್ಭೋ ದ್ವಿಜಾ ಗಾವೋ ಯಚ್ಚಾನ್ಯತ್ಕಿಂಚಿದುತ್ತಮಮ್ ॥೩೪॥**

**ಶುಭಂ ಸ್ವಸ್ತ್ಯಯನಂ ಚಾಪಿ ಭವಿಷ್ಯತಿ ತವಾತ್ಮಜ ।**
**ಯುಧ್ಯಮಾನಸ್ಯ ಸಂಗ್ರಾಮೇ ದೇವೈಃ ಸಾರ್ಧಂ ಮಹಾಬಲ ॥೩೫॥**

**ಋಚೋ ಯಜೂಂಷಿ ಸಾಮಾನಿ ಪವಿತ್ರಾಣಿ ಹವೀಂಷಿ ಚ ।**
**ರಹಸ್ಯಾನಿ ಚ ಸರ್ವಾಣಿ ಸರ್ವೇ ವೇದಾಶ್ಚ ತೇ ಬಲಮ್ ॥೩೬॥**

"ಅಮೃತವನ್ನು ತರಲು ಹೋದಾಗ ದೇವತೆಗಳೊಡನೆ ಯುದ್ಧದಲ್ಲಿ ತೊಡಗುವ ನಿನಗೆ ಮಂಗಳವಾಗಲಿ. ಪೂರ್ಣಕುಂಭ, ಬ್ರಾಹ್ಮಣರು, ಹಸುಗಳು ಮತ್ತು ಇವುಗಳಲ್ಲದೇ ಇತರ ಯಾವ ಮಂಗಳವಸ್ತುಗಳಿವೆಯೋ ಅವುಗಳೆಲ್ಲವೂ ನಿನಗೆ ಮಂಗಳಕರವಾಗಿ ಪರಿಣಮಿಸಲಿ. ಬಲಿಷ್ಠನಾದ ಪಕ್ಷಿರಾಜನೇ! ದೇವತೆಗಳೊಡನೆ ನೀನು ಯುದ್ಧಮಾಡುವ ಸಮಯದಲ್ಲಿ ಋಕ್ಕುಗಳು, ಯಜಸ್ಸುಗಳು, ಸಾಮಗಳು, ಪವಿತ್ರವಾದ ಹವಿಸ್ಸುಗಳು, ಎಲ್ಲ ರಹಸ್ಯಗಳು, ಉಪನಿಷತ್ತುಗಳು ಮತ್ತು ಎಲ್ಲ ವೇದಗಳೂ ನಿನ್ನ ಬಲವನ್ನು ಸಂವರ್ಧಿಸಲಿ."

ಈ ರೀತಿಯಾಗಿ ತಂದೆಯಿಂದ ಆಶೀರ್ವಾದವನ್ನು ಪಡೆದ ಗರುಡನು ಆಮೆ ಮತ್ತು ಆನೆಗಳಿದ್ದ ಸರೋವರದ ಸಮೀಪಕ್ಕೆ ಹೋದನು. ನಾನಾ ಪಕ್ಷಿಗಳಿಂದ ಸಮಾಕುಲವಾಗಿದ್ದ ನಿರ್ಮಲವಾದ ನೀರಿನಿಂದ ಕೂಡಿದ್ದ ಸರೋವರವನ್ನು ಗರುಡನು ನೋಡಿದನು. ಭೀಮವೇಗನಾಗಿದ್ದ ಅಂತರಿಕ್ಷದಲ್ಲಿಯೇ ಹಾರಾಡುತ್ತಿದ್ದ ಗರುಡನು ತನ್ನ ತಂದೆಯು ಹೇಳಿದುದನ್ನು ಸ್ಮರಿಸಿದವನಾಗಿ ಸರೋವರದೆಡೆಗೆ ಹಾರಿಬಂದು ಒಂದು ಪಂಜದಿಂದ ಆನೆಯನ್ನೂ ಮತ್ತೊಂದು ಪಂಜದಿಂದ ಆಮೆಯನ್ನೂ ಹಿಡಿದು ಆಕಾಶದ ಕಡೆಗೆ ಹಾರಿದನು. ಎರಡು ಕಾಲ್ಗಳ ಉಗುರುಗಳಿಂದಲೂ ಎರಡು ಮಹಾಪ್ರಾಣಿಗಳನ್ನು ಹಿಡಿದುಕೊಂಡು ಹಾರುತ್ತಾ ಹೋಗುತ್ತಿದ್ದಾಗ ದೇವವೃಕ್ಷಗಳಿದ್ದ ಅಲಂಬ ತೀರ್ಥಕ್ಷೇತ್ರವು ಸಿಕ್ಕಿತು. ತೀರ್ಥಕ್ಷೇತ್ರದ ಮೇಲ್ಭಾಗದಲ್ಲಿ ಹಾರುತ್ತಿದ್ದಾಗ ಗರುಡನ ರೆಕ್ಕೆಗಳಿಂದ ಹೊರಟ ಗಾಳಿಯಿಂದಲೇ ಆ ದೇವವೃಕ್ಷಗಳು ಭಯ

ಗೊಂಡು ನಡುಗಿದುವು. ಸ್ವರ್ಣಮಯವಾದ ರೆಂಬೆಗಳನ್ನು ಹೊಂದಿದ್ದ ಆ ದೇವವೃಕ್ಷಗಳು 'ನಮ್ಮನ್ನು ಈ ಪಕ್ಷಿಯು ಮುರಿದು ಹಾಕದಿರಲಿ'–ಎಂದು ತಮ್ಮ-ತಮ್ಮಲ್ಲಿಯೇ ಭಯದಿಂದ ಮಾತನಾಡಿಕೊಳ್ಳುತ್ತಿದ್ದುವು. ಮನಸ್ಸಿನ ಆಶಯಕ್ಕನುಸಾರವಾಗಿ ಫಲವನ್ನು ಕೊಡುವ ಆ ದೇವವೃಕ್ಷಗಳು ನಡುಗುತ್ತಿರುವುದನ್ನು ನೋಡಿ ಬಹಳ ದೊಡ್ಡದಾಗಿಯೂ, ಸೊಂಪಾಗಿಯೂ



ಬೆಳೆದಿರುವ ಬೇರೆಯ ವೃಕ್ಷಗಳನ್ನರಸುತ್ತಾ ಗರುಡನು ಮುಂದೆ ಹಾರಿದನು. ಮುಂದೆ ಅವನಿಗೆ ಸಿಕ್ಕಿದ ವೃಕ್ಷಗಳು ಸ್ವರ್ಣಮಯವಾದ ಮತ್ತು ರಜತಮಯವಾದ ಫಲಗಳನ್ನು ಹೊಂದಿದ್ದುವು ; ವೈಡೂರ್ಯಮಯವಾದ ರೆಂಬೆಗಳನ್ನೂ ಹೊಂದಿದ್ದುವು ; ಸಮುದ್ರದ ನೀರಿನಿಂದ ಪರಿಮಾರ್ಜಿತವಾಗುತ್ತಿದ್ದುವು. ಈ ರೀತಿಯಲ್ಲಿ ಪ್ರಕಾಶಿಸುತ್ತಿದ್ದ ಮಹಾವೃಕ್ಷಗಳನ್ನು ಗರುಡನು ನೋಡಿದನು.

ಮುಂದೆ ಹಾರುತ್ತಿದ್ದಾಗ ದೊಡ್ಡದಾಗಿ ಬೆಳೆದಿದ್ದ ಆಲದ ಮರವೊಂದು ಮನೋವೇಗದಿಂದ ಹಾರಿಬರುತ್ತಿದ್ದ ಪಕ್ಷಿರಾಜನನ್ನು ಕುರಿತು ಹೇಳಿತು :

"ಪಕ್ಷಿರಾಜನೇ! ನೂರು ಯೋಜನ ವಿಸ್ತೀರ್ಣವಿರುವ ಈ ರೆಂಬೆಯು ನನ್ನಲ್ಲಿರುವ ಅತಿದೊಡ್ಡದಾದ ರೆಂಬೆಯಾಗಿದೆ. ಈ ಶಾಖೆಯ ಮೇಲೆ ಕುಳಿತು ನೀನು ಈ ಆನೆ ಮತ್ತು ಆಮೆಗಳನ್ನು ತಿನ್ನಬಹುದಾಗಿದೆ."

ಪರ್ವತಕ್ಕೆ ಸಮಾನವಾದ ಶರೀರದಿಂದ ಕೂಡಿದ್ದ, ಖಗಶ್ರೇಷ್ಠನಾದ, ಮಹಾವೇಗವಂತನಾದ ಗರುಡನು ವೃಕ್ಷದ ಆಹ್ವಾನವನ್ನಂಗೀಕರಿಸಿ ಅಸಂಖ್ಯಾತಪಕ್ಷಿಗಳಿಗೆ ಆಶ್ರಯವನ್ನಿತ್ತಿದ್ದ ಆ ವೃಕ್ಷದ ರೆಂಬೆಯ ಮೇಲೆ ಒಡನೆಯೇ ಕುಳಿತನು. ಆದರೆ ಮರುಕ್ಷಣದಲ್ಲಿಯೇ ದಟ್ಟವಾದ ಪುಷ್ಪ-ಪಲ್ಲವಗಳಿಂದ ಸುಶೋಭಿಸುತ್ತಿದ್ದ, ಶತಯೋಜನವಿಸ್ತೀರ್ಣದ ಆ ರೆಂಬೆಯೇ ಮುರಿದುಹೋಯಿತು."

೨೯ನೆಯ ಅಧ್ಯಾಯವು ಮುಗಿಯಿತು.

೩೦ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಗರುಡನು ಕಶ್ಯಪರನ್ನು ಪುನಃ ಸಂದರ್ಶಿಸಿದುದು : ಕಶ್ಯಪರ ಪ್ರಾರ್ಥನೆಯಂತೆ ಗರುಡನು ಕಚ್ಚಿಕೊಂಡಿದ್ದ ರೆಂಬೆಯನ್ನು ವಾಲಖಿಲ್ಯರು ಬಿಟ್ಟುಹೋದುದು : ಗರುಡನು ನಿರ್ಜನವಾದ ಪರ್ವತದ ಮೇಲೆ ರೆಂಬೆಯನ್ನು ಹಾಕಿದುದು

"ಶೌನಕಾದಿ ಮಹರ್ಷಿಗಳೇ! ಬಲಿಷ್ಠನಾದ ಗರುಡನು ತನ್ನ ಕಾಲುಗಳಿಂದ ಆ ಕೊಂಬೆಯನ್ನು ಮುಟ್ಟುತ್ತಲೇ ಆ ಕೊಂಬೆಯು ಪಟ ಪಟ ಶಬ್ದದಿಂದ ಕೆಳಗೆ ಬೀಳುತ್ತಿದ್ದಿತು. ಬೀಳುತ್ತಿದ್ದ ಕೊಂಬೆಯನ್ನು ಒಡನೆಯೇ ಗರುಡನು ಕೆಳಗೆ ಬೀಳದಂತೆ ಕೊಕ್ಕಿನಿಂದ ಕಚ್ಚಿಕೊಂಡನು. ಹಾಗೆಯೇ ಕೊಕ್ಕಿನಿಂದ ಹಿಡಿದು ಮಂದಹಾಸದಿಂದ ಕೂಡಿ ಬಹುದೊಡ್ಡದಾಗಿದ್ದ ಆ ಕೊಂಬೆಯ ಸುತ್ತಲೂ ನೋಡಲಾಗಿ ಅಧೋಮುಖರಾಗಿ ಜೋತುಬಿದ್ದಿದ್ದ ವಾಲಖಿಲ್ಯ ಮಹರ್ಷಿಗಳನ್ನು ಆ ಕೊಂಬೆಯಲ್ಲಿ ಕಂಡನು. ತಪಸ್ಸಿನಲ್ಲಿ ನಿರತರಾಗಿದ್ದು ರೆಂಬೆಗೆ ಜೋತುಬಿದ್ದಿದ್ದ ಬ್ರಹ್ಮರ್ಷಿಗಳನ್ನು ನೋಡಿ ಗರುಡನು ಹೀಗೆ ಯೋಚಿಸಿದನು :

“ವಾಲಖಿಲ್ಯಮಹರ್ಷಿಗಳು ಈ ಕೊಂಬೆಯಲ್ಲಿ ತಪಶ್ಚರಣೆಯನ್ನು ಮಾಡುತ್ತಿರುವರು. ಇವರನ್ನು ನಾನು ಖಂಡಿತವಾಗಿಯೂ ಕೊಲ್ಲಬಾರದು. ನಾನೇನಾದರೂ ಈ ಕೊಂಬೆಯನ್ನು ಕೆಳಕ್ಕೆ ಹಾಕಿದ್ದೇ ಆದರೆ ಇವರೆಲ್ಲರೂ ಖಂಡಿತವಾಗಿಯೂ ಸಾಯುತ್ತಾರೆ. ಹಾಗಾಗದಂತೆ ನೋಡಿಕೊಳ್ಳಬೇಕು.”

ಗರುಡನು ಹೀಗೆ ಯೋಚಿಸಿ ಗಜ-ಕಚ್ಛಪಗಳನ್ನು ಎರಡು ಕಾಲಿನ ಉಗುರುಗಳಿಂದಲೂ ಬಲವಾಗಿ ಹಿಡಿದುಕೊಂಡು ಕೊಂಬೆಯ ಪತನದಿಂದ ಮಹರ್ಷಿಗಳು ವಿನಾಶಹೊಂದುವರೆಂಬ ಭಯದಿಂದ ಅವರನ್ನು ನೋಡಿಯೇ ( ಅವರ ಹಿತವನ್ನು ಗಮನಿಸಿಯೇ ) ಕೊಂಬೆಯನ್ನೂ ಬಲವಾಗಿ ಕೊಕ್ಕಿನಲ್ಲಿ ಕಚ್ಚಿಕೊಂಡು ಹಾರತೊಡಗಿದನು. ದೇವತೆಗಳಿಂದಲೂ ಮಾಡಲಸಾಧ್ಯವಾದ ಕಾರ್ಯವನ್ನು ಪಕ್ಷಿರಾಜನು ಮಾಡುತ್ತಿರುವುದನ್ನು ಕಂಡು ಮಹರ್ಷಿಗಳು ಆಶ್ಚರ್ಯಭರಿತರಾದರಲ್ಲದೇ ಅವರ ಹೃದಯಗಳೂ ಕಂಪಿಸಿದುವು. ಅವನ ಅತುಲಪರಾಕ್ರಮವನ್ನು ಕಂಡು ಅವರು ಪಕ್ಷಿರಾಜನಿಗೆ ನೂತನವಾಗಿ ನಾಮಕರಣವನ್ನೇ ಮಾಡಿದರು. ಗರುಡಶಬ್ದಕ್ಕೆ ವ್ಯಾಖ್ಯೆ ಮಾಡಿದರು :

**ಗುರುಂ ಭಾರಂ ಸಮಾಸಾದ್ಯೋಡ್ಡೀನ ಏಷ ವಿಹಂಗಮಃ ।**
**ಗರುಡಸ್ತು ಖಗಶ್ರೇಷ್ಠಸ್ತಸ್ಮಾತ್ಪನ್ನಗಭೋಜನಃ ॥೭॥**

“ಪಕ್ಷಿಶ್ರೇಷ್ಠನಾದ, ಹಾವುಗಳೇ ಆಹಾರವಾಗಿ ಉಳ್ಳ ಈ ಪಕ್ಷಿರಾಜನು ಮಹಾಭಾರವನ್ನು ಹೊತ್ತು, ಅನಾಯಾಸವಾಗಿ ಅದನ್ನು ಎತ್ತಿಕೊಂಡು ಹಾರುತ್ತಿರುವನು. ಆದುದರಿಂದ ಮುಂದೆ ಗರುಡನೆಂದೇ ಕರೆಯಲ್ಪಡುವನು.”

ಅನಂತರದಲ್ಲಿ ಗರುಡನು ತನ್ನ ರೆಕ್ಕೆಗಳಿಂದ ಬಂದ ಗಾಳಿಯಿಂದ ಪರ್ವತಗಳನ್ನೂ ಕಂಪನಗೊಳಿಸುತ್ತಾ ಮೆಲ್ಲ-ಮೆಲ್ಲನೆ ಹಾರಿಕೊಂಡು ಹೋಗುತ್ತಿದ್ದನು. ಹೀಗೆಯೇ ಅವನು ಗಜ-ಕಚ್ಛಪಗಳನ್ನೂ, ವೃಕ್ಷದ ರೆಂಬೆ ಯನ್ನೂ ಎತ್ತಿಕೊಂಡು ಅನೇಕದೇಶಗಳನ್ನು ದಾಟಿದನು. ವಾಲಖಿಲ್ಯರ ವಿಷಯದಲ್ಲಿ ಬಹಳ ದಯಾಪರನಾಗಿದ್ದ ಗರುಡನು ಅವರನ್ನು ಎಲ್ಲಿ ಹೇಗೆ ಇಳಿಸಬೇಕೆಂಬುದನ್ನು ತಿಳಿಯದೇ ಕಡೆಗೆ ಬಹುಶೀಘ್ರವಾಗಿ ಶ್ರೇಷ್ಠವಾದ ಗಂಧಮಾದನಪರ್ವತಕ್ಕೆ ಹೋಗಿ ಅಲ್ಲಿ ತಪಸ್ಸುಮಾಡುತ್ತಿದ್ದ ತಂದೆಯಾದ ಕಶ್ಯಪರನ್ನು ಕಂಡನು. ದಿವ್ಯರೂಪನಾದ, ತೇಜೋವೀರ್ಯಬಲೋಪೇತ

ನಾದ, ಮನೋವೇಗವನ್ನೂ ಮೀರಿದ ವೇಗವುಳ್ಳ, ಪರ್ವತಶಿಖರೋಪಮ ನಾದ, ಬ್ರಹ್ಮದಂಡದಂತೆಯೇ ಸ್ವಯಂಪ್ರಕಾಶನಾಗಿರುವ ಆ ಪಕ್ಷಿರಾಜನನ್ನು ತೇಜಸ್ವಿಗಳಾದ ಕಶ್ಯಪರೂ ನೋಡಿದರು. ಅಚಿಂತ್ಯನಾದ, ಮತ್ತೊಬ್ಬರ ಊಹೆಗೂ ನಿಲುಕದಷ್ಟು ಮಹತ್ತಾದ ವೀರ್ಯವನ್ನು ಹೊಂದಿರುವ, ಸರ್ವ ಪ್ರಾಣಿಗಳಿಗೂ ಭಯವನ್ನುಂಟುಮಾಡುವ, ರೌದ್ರನಾದ, ಸಾಕ್ಷಾತ್ ಅಗ್ನಿದೇವ ನಂತೆಯೇ ಕಾಣುತ್ತಿರುವ, ದೇವ-ದಾನವ-ರಾಕ್ಷಸರಿಂದಲೂ ಎದುರಿಸಿ ನಿಲ್ಲಲು ಸಾಧ್ಯನಾಗದ, ಅಜಯ್ಯನಾದ, ಪರ್ವತಶಿಖರಗಳನ್ನೂ ಒಡೆದು ಕೆಳಗುರುಳಿಸುವ ಸಾಮರ್ಥ್ಯವುಳ್ಳ, ಸಮುದ್ರಗಳ ಅಪಾರಜಲರಾಶಿಯನ್ನೂ ಶೋಷಣಮಾಡುವಷ್ಟು ಪರಾಕ್ರಮವಿರುವ, ಸಮಸ್ತಪ್ರಪಂಚವನ್ನೂ ಭಯ ದಿಂದ ನಡುಗಿಸುವ, ಘೋರರೂಪನಾದ ಸಾಕ್ಷಾತ್ ಯಮರಾಜನಂತೆಯೇ ಕಾಣುತ್ತಿದ್ದ ಗರುಡನು ಆಗಮಿಸಿದುದನ್ನು ಭಗವಾನ್ ಕಶ್ಯಪರು ನೋಡಿ, ಅವನ ಮನಸ್ಸಿನ ಆಶಯವೇನೆಂಬುದನ್ನೂ ಜ್ಞಾನದೃಷ್ಟಿಯಿಂದ ತಿಳಿದು ಕೊಂಡು, ಮಗನನ್ನು ಕುರಿತು ಈ ಮಾತುಗಳನ್ನು ಹೇಳಿದರು :

"ಮಗು! ಸಾಹಸಕಾರ್ಯಮಾಡಲು ಯತ್ನಿಸಬೇಡ. ಸಾಹಸಕಾರ್ಯ ಮಾಡಿದೆಯಾದರೆ ದುಃಖವನ್ನನುಭವಿಸುವೆ. ಸೂರ್ಯಕಿರಣಗಳನ್ನೇ ಭಕ್ಷಿಸಿ ಜೀವಿಸುತ್ತಿರುವ ವಾಲಖಿಲ್ಯರು ನಿನ್ನ ಮೇಲೆ ಕೋಪಗೊಂಡು ನಿನ್ನನ್ನು ಭಸ್ಮಮಾಡದಿರಲಿ."

ಶೌನಕರೇ! ಕಶ್ಯಪರು ಮಗನೊಡನೆ ಹೀಗೆ ಹೇಳಿ ಅನಂತರ ಪುತ್ರನಿ ಗಾಗಿ, ಪುತ್ರನ ಶ್ರೇಯಸ್ಸಿಗಾಗಿ ಮಹಾಭಾಗರಾದ, ತಪಸ್ಸಿನಿಂದ ತಮ್ಮ ಸಕಲ ವಾದ ಪಾಪಗಳನ್ನೂ ಕಳೆದುಕೊಂಡಿರುವ ವಾಲಖಿಲ್ಯರನ್ನು ಹೀಗೆ ಪ್ರಾರ್ಥಿ ಸಿದರು :

"ತಪೋಧನರೇ! ಗರುಡನು ಮಾಡಲು ಹೊರಟಿರುವ ಈ ಕಾರ್ಯವು (ಅಮೃತಾಹರಣವು) ಪ್ರಜೆಗಳ ಹಿತಕ್ಕಾಗಿ ಆರಂಭವಾಗಿದೆ. ಮಹಾಕಾರ್ಯವೊಂದನ್ನು ಇವನು ಮಾಡಲಿದ್ದಾನೆ. ಇವನು ಮಾಡಲಿರುವ ಈ ಮಹಾಕಾರ್ಯಕ್ಕೆ ತಾವು ಅನುಮತಿಯನ್ನೀಯಬೇಕು."

ಶೌನಕರೇ! ಭಗವಾನ್ ಕಶ್ಯಪರು ಈ ರೀತಿ ಪ್ರಾರ್ಥಿಸಲು ವಾಲ

ಖಿಲ್ಯರು ಗರುಡನು ಕಚ್ಚಿಕೊಂಡಿದ್ದ ರೆಂಬೆಯನ್ನು ಪರಿತ್ಯಜಿಸಿ ಪುಣ್ಯತಮವಾದ ಹಿಮವತ್ಪರ್ವತಕ್ಕೆ ತಪಸ್ಸಿಗಾಗಿ ಹೊರಟುಹೋದರು.

ವಾಲಖಿಲ್ಯರು ಕೊಂಬೆಯನ್ನು ಬಿಟ್ಟು ಹೊರಟುಹೋದನಂತರ ಕೊಂಬೆಯು ಕೊಕ್ಕಿನಲ್ಲಿದ್ದುದರಿಂದ ಬಾಯ್ದೆರೆದು ಸ್ಪಷ್ಟವಾಗಿ ಮಾತನಾಡಲು ಸಾಧ್ಯವಾಗದೇ ಇದ್ದರೂ ಗರುಡನು ಕೊಂಬೆಯು ಕೊಕ್ಕಿನಲ್ಲಿದ್ದಂತೆಯೇ ತನ್ನ ತಂದೆಯನ್ನು ಪ್ರಶ್ನಿಸಿದನು :

"ಪೂಜ್ಯರೇ! ವೃಕ್ಷದ ಈ ದೊಡ್ಡ ಕೊಂಬೆಯನ್ನು ಎಲ್ಲಿ ಹಾಕಲಿ? ಮನುಷ್ಯರಿಂದ ವರ್ಜಿತವಾದ ಪ್ರದೇಶವೊಂದನ್ನು ಸೂಚಿಸಿರಿ."

ನಿರ್ಜನವಾಗಿದ್ದ, ಹಿಮದಿಂದ ಆಚ್ಛಾದಿತವಾಗಿದ್ದ ಸಾನುಪ್ರದೇಶದಿಂದ ಕೂಡಿದ್ದ ಪರ್ವತವೊಂದನ್ನು ಕಶ್ಯಪರು ಸೂಚಿಸಿದರು.

ದೊಡ್ಡದಾದ ತಪ್ಪಲುಪ್ರದೇಶದಿಂದ ಕೂಡಿದ್ದ, ಕಶ್ಯಪರು ಸೂಚಿಸಿದ ಮಹಾಪರ್ವತದ ಸಮೀಪಕ್ಕೆ ಗಜ-ಕಚ್ಛಪ-ವೃಕ್ಷಶಾಖಾಸಮೇತನಾದ ಗರುಡನು ಬಹುವೇಗವಾಗಿ ಹಾರಿಹೋದನು. ನೂರು ಪಶುಗಳ ಚರ್ಮದಿಂದಲೂ ಹೊದ್ದಿಸಲಾಗದಷ್ಟು ವಿಶಾಲವಾಗಿದ್ದ ವಟವೃಕ್ಷದ ಕೊಂಬೆಯನ್ನು ಗರುಡನು ತನ್ನ ಕೊಕ್ಕಿನಲ್ಲಿ ಕಚ್ಚಿಕೊಂಡು ಹಾರಿಹೋಗುತ್ತಿದ್ದನು. ಆ ಮಹಾಶಾಖೆಯನ್ನೂ ಮತ್ತು ಪಂಜಗಳಲ್ಲಿ ಗಜ-ಕಚ್ಛಪಗಳನ್ನೂ ಹೊತ್ತು ಸ್ವಲ್ಪಹೊತ್ತಿನಲ್ಲಿಯೇ ಗರುಡನು ಲಕ್ಷಯೋಜನದೂರವನ್ನೂ ದಾಟಿದನು. ಕ್ಷಣಮಾತ್ರದಲ್ಲಿ ತಂದೆಯಾದ ಕಶ್ಯಪರು ಸೂಚಿಸಿದ್ದ ಪರ್ವತದ ಬಳಿಗೆ ಹೋಗಿ ಮಹಾಶಾಖೆಯನ್ನು ಮಹಾಶಬ್ದದೊಡನೆ ಪರ್ವತದ ಮೇಲೆ ಹಾಕಿಬಿಟ್ಟನು. ಗರುಡಪಕ್ಷಿಯ ರೆಕ್ಕೆಗಳ ಬಡಿತದಿಂದುಂಟಾದ ಗಾಳಿಯಿಂದ ಆ ಮಹಾಪರ್ವತವೂ ಕ್ಷಣಕಾಲ ನಡುಗಿತು. ಅದರ ಮೇಲಿದ್ದ ಪುಷ್ಪಭರಿತವಾದ ವೃಕ್ಷಗಳು ಪರ್ವತದ ಪ್ರಕಂಪನದಿಂದಾಗಿ ಪುಷ್ಪವೃಷ್ಟಿಗೈದುವು. ಆ ಪರ್ವತದ ಶೋಭೆಯನ್ನು ಹೆಚ್ಚಿಸುತ್ತಿದ್ದ ಮಣಿಕಾಂಚನಮಯವಾಗಿಯೂ ಮತ್ತು ಚಿತ್ರ-ವಿಚಿತ್ರವಾಗಿಯೂ ಇದ್ದ ಶಿಖರಗಳು ಗರುಡನ ರೆಕ್ಕೆಗಳ ಬಡಿತದಿಂದುಂಟಾದ ದುರ್ಭರವಾದ ಬಿರುಗಾಳಿಯಿಂದ ಸೀಳಿಹೋದುವು ಮತ್ತು ದೊಡ್ಡ ಕೊಂಬೆಯು ಪರ್ವತದ ಮೇಲಿದ್ದ ಅನೇಕವೃಕ್ಷಗಳ ಮೇಲೆ ಬಿದ್ದಾಗ ಕೆಳಗುದುರಿದ ಸುವರ್ಣಮಯವಾದ ಕುಸುಮಗಳಿಂದ ಕೂಡಿದ್ದ ಮಹಾವೃಕ್ಷ

ಗಳು ಮಿಂಚುಗಳಿಂದ ಕೂಡಿದ ಮೇಘಗಳಂತೆ ಪ್ರಕಾಶಿಸಿದುವು. ವೃಕ್ಷಗಳಿಂದ ಉದುರಿದ ಸುವರ್ಣಮಯವಾದ ಕುಸುಮಗಳು ಪರ್ವತದ ಮೇಲಿದ್ದ ಗೈರಿಕಾದಿ ಧಾತುಗಳೊಡನೆ ಸೇರಿಕೊಂಡು ಸೂರ್ಯನ ಕಿರಣಗಳು ಮೇಲೆ ಬಿದ್ದಾಗ ಚೆನ್ನಾಗಿ ಪ್ರಕಾಶಿಸಿದುವು. ಆ ಪರ್ವತದ ಶಿಖರದ ಮೇಲೆ ಕುಳಿತು ಪಕ್ಷಿರಾಜನಾದ ಗರುಡನು ಆನೆ ಮತ್ತು ಆಮೆಗಳನ್ನು ಭಕ್ಷಿಸಿದನು. ಎರಡನ್ನೂ ತಿಂದ ನಂತರ ಮಹಾಬಲನಾದ ಗರುಡನು ಆ ಪರ್ವತದಿಂದ ಮೇಲಕ್ಕೆ ಹಾರಿಹೋದನು.

ಆ ವೇಳೆಗೆ ಸರಿಯಾಗಿ ದೇವಲೋಕದಲ್ಲಿ ಭಯಸೂಚಕಗಳಾದ ಅನೇಕ ಘಟನೆಗಳು ಸಂಭವಿಸಿದುವು. ಇಂದ್ರನ ವಜ್ರಾಯುಧದಲ್ಲಿ ಅನಿರೀಕ್ಷಿತವಾದ ಜ್ವಾಲೆಯು ಹೊರಟಿತು. ಹಗಲುಹೊತ್ತಿನಲ್ಲಿಯೇ ಧೂಮಾಗ್ನಿಸಹಿತವಾದ ಉಲ್ಕೆಗಳು ಕೆಳಗುರುಳಲು ಪ್ರಾರಂಭಿಸಿದುವು. ವಸು, ರುದ್ರ, ಆದಿತ್ಯ, ಸಾಧ್ಯ, ಮರುತ್–ಮೊದಲಾದ ದೇವತೆಗಳ ಆಯುಧಗಳು ಪರಸ್ಪರ ಘರ್ಷಣೆಮಾಡುತ್ತಿದ್ದುವು. ದೇವಾಸುರರ ಸಮರಕಾಲದಲ್ಲಿಯೂ ಅಂತಹ ಘಟನೆಗಳು ನಡೆದಿರಲಿಲ್ಲ. ಸಿಡಿಲಿನ ಶಬ್ದದೊಡನೆ ಬಿರುಗಾಳಿಯೂ ಬೀಸತೊಡಗಿತು. ಸಾವಿರಾರು ಸಂಖ್ಯೆಯಲ್ಲಿ ಉಲ್ಕಾಪಾತಗಳಾದುವು. ಮೋಡವಿಲ್ಲದ ಆಕಾಶದಲ್ಲಿ ಗುಡುಗುಗಳ ಶಬ್ದವು ಕೇಳಿಬರುತ್ತಿತ್ತು. ದೇವದೇವನಾದ ಪರ್ಜನ್ಯನು ನೀರಿಗೆ ಬದಲಾಗಿ ರಕ್ತವರ್ಷವನ್ನೇ ಸುರಿಸ ತೊಡಗಿದನು. ದೇವತೆಗಳು ಧರಿಸಿದ್ದ ಪುಷ್ಪಹಾರಗಳು ಕಾಂತಿಹೀನವಾದುದಲ್ಲದೇ ಅವರೆಲ್ಲರೂ ಕಾಂತಿಹೀನರಾದರು. ವಿಪತ್ಕಾಲದಲ್ಲಿ ಮಾತ್ರವೇ ಹುಟ್ಟುವ ಘೋರವಾದ ಮೇಘಗಳು ಹುಟ್ಟಿ ಸತತವಾಗಿ ರಕ್ತವರ್ಷಮಾಡಿದುವು. ಹಿಂದೆ ಯಾವ ಕಾಲದಲ್ಲಿಯೂ ಏಳದೇ ಇರುವ ಧೂಳು ಸರ್ವತ್ರ ವ್ಯಾಪಿಸಿ ದೇವತೆಗಳ ಕಿರೀಟಗಳನ್ನೂ ಮಲಿನಗೊಳಿಸಿತು. ಅವೆಲ್ಲವನ್ನೂ ನೋಡಿ ದೇವತೆಗಳ ಅಧಿಪತಿಯಾದ ದೇವೇಂದ್ರನು ಬಹಳ ಭಯಪಟ್ಟನು. ದಾರುಣವಾದ ಉತ್ಪಾತಗಳನ್ನು ನೋಡಿ ಭೀತನಾದ ಇಂದ್ರನು ಗುರುಗಳಾದ ಬೃಹಸ್ಪತಿಗಳ ಬಳಿಗೆ ಹೋಗಿ ತನ್ನ ಮನಸ್ಸಿನ ಕಳವಳವನ್ನು ಹೇಳಿಕೊಂಡನು:

"ಆಚಾರ್ಯರೇ! ಇದ್ದಕ್ಕಿದ್ದಂತೆಯೇ ಈ ಉತ್ಪಾತಗಳೇಕೆ ತಲೆ

ದೋರಿವೆ? ನಮ್ಮನ್ನು ಯುದ್ಧದಲ್ಲಿ ಎದುರಿಸಿ ನಿಲ್ಲಲು ಸಮರ್ಥರಾದ ಶತ್ರುಗಳೇ ನನಗೆ ಕಾಣುತ್ತಿಲ್ಲ. ನಮಗೆ ಈ ಸಮಯದಲ್ಲಿ ಶತ್ರುಗಳಾರೂ ಇರುವುದಿಲ್ಲ. ಹೀಗಿರುವಾಗ ಈ ಉತ್ಪಾತಗಳು ಏಕೆ ಸಂಭವಿಸಿದುವೆಂಬುದನ್ನು ದಯಮಾಡಿ ಹೇಳಿರಿ."

ಸರ್ವಜ್ಞರಾದ ಬೃಹಸ್ಪತಿಗಳು ಹೇಳಿದರು : "ಮಹೇಂದ್ರ! ನಿನ್ನ ಅಪರಾಧ ಮತ್ತು ಪ್ರಮಾದಗಳಿಂದಲೂ, ವಾಲಖಿಲ್ಯರ ತಪೋಬಲದಿಂದಲೂ– ಮಹರ್ಷಿಗಳಾದ ಕಶ್ಯಪರು ಮತ್ತು ವಿನತೆಯರ ಸಂಯೋಗದಿಂದ ಹುಟ್ಟಿದ, ಮಹಾಪರಾಕ್ರಮಿಯಾದ, ಮಹಾಬಲಿಷ್ಠನಾದ, ಇಚ್ಛೆಬಂದಂತೆ ರೂಪವನ್ನು ಧರಿಸುವ ಸಾಮರ್ಥ್ಯವುಳ್ಳ ಗರುಡನೆಂಬ ಪಕ್ಷಿಶ್ರೇಷ್ಠನು ಅಮೃತವನ್ನು ಅಪಹರಿಸಲು ಬರುತ್ತಿದ್ದಾನೆ. ಬಲಶಾಲಿಗಳಲ್ಲಿ ಶ್ರೇಷ್ಠನಾದ ಅವನು ಅಮೃತವನ್ನು ಅಪಹರಿಸಿಕೊಂಡು ಹೋಗಲು ಸಮರ್ಥನೂ ಆಗಿದ್ದಾನೆ. ಅವನಲ್ಲಿ ಎಲ್ಲ ಮಹಾಶಕ್ತಿಗಳೂ ಅಡಕವಾಗಿವೆಯೆಂದು ನಾನು ಭಾವಿಸುತ್ತೇನೆ. ಯಾರಿಂದಲೂ ಸಾಧಿಸಲಾಗದುದನ್ನು ಅವನು ಸಾಧಿಸಬಲ್ಲನು."

ಬೃಹಸ್ಪತಿಗಳ ಮಾತನ್ನು ಕೇಳಿದೊಡನೆಯೇ ಇಂದ್ರನು ಅಮೃತವನ್ನು ರಕ್ಷಿಸುತ್ತಿದ್ದ ದೇವಯೋಧರನ್ನು ಕರೆಸಿ ಹೇಳಿದನು : "ಮಹಾವೀರ್ಯ-ಪರಾಕ್ರಮಗಳಿಂದ ಸಮನ್ವಿತನಾದ ಗರುಡನು ಅಮೃತವನ್ನು ಅಪಹರಿಸಿಕೊಂಡು ಹೋಗಲು ಆಗಮಿಸುತ್ತಿದ್ದಾನೆ. ಅವನು ಬಲಾತ್ಕಾರದಿಂದ ಅಮೃತವನ್ನು ಅಪಹರಿಸದಂತೆ ಎಚ್ಚರಿಕೆ ವಹಿಸಬೇಕೆಂದು ನಿಮಗೆ ಸೂಚನೆ ಕೊಡುತ್ತಿದ್ದೇನೆ. ಅವನ ಬಲವು ಅತುಲವಾದುದೆಂದೂ, ಅಮಿತವಾದುದೆಂದೂ ಬೃಹಸ್ಪತಿಗಳೇ ಹೇಳಿರುವರು."

ಇಂದ್ರನ ಮಾತುಗಳನ್ನು ಕೇಳಿ ದೇವತೆಗಳು ವಿಸ್ಮಿತರಾಗಿ ಅಮೃತದ ರಕ್ಷಣೆಗಾಗಿ ಅದರ ಸುತ್ತಲೂ ಸಜ್ಜಾಗಿ ನಿಂತರು. ಇಂದ್ರನೂ ವಜ್ರಾಯುಧವನ್ನು ಧರಿಸಿ ಅಲ್ಲಿಯೇ ನಿಂತನು. ಅಮೃತವನ್ನು ಹೇಗಾದರೂ ಮಾಡಿ ರಕ್ಷಿಸಿಯೇ ತೀರಬೇಕೆಂದು ನಿರ್ಧರಿಸಿದ ದೇವತೆಗಳು ಚಿತ್ರ-ವಿಚಿತ್ರವಾಗಿದ್ದ, ಸುವರ್ಣಮಯವಾದ, ಬಹುಮೂಲ್ಯವಾದ, ವೈಡೂರ್ಯಮಣಿಯುಕ್ತವಾದ ಕವಚಗಳನ್ನು ಧರಿಸಿದರು. ದೃಢವಾಗಿದ್ದ ಮತ್ತು ಪ್ರಕಾಶಮಾನವಾಗಿದ್ದ ಚರ್ಮದ ಚೀಲಗಳನ್ನು ಕೈ-ಕಾಲುಗಳಿಗೆ ತೊಟ್ಟುಕೊಂಡರು. ವಿಧ-ವಿಧ

ವಾದ, ಘೋರರೂಪಗಳಾದ, ಹೆಚ್ಚು ಹರಿತವಾಗಿದ್ದ ಮತ್ತು ತೀಕ್ಷ್ಣವಾಗಿದ್ದ ಶಸ್ತ್ರಗಳನ್ನು ಧಾರಣೆಮಾಡಿಕೊಂಡು ಯುದ್ಧಸನ್ನದ್ಧರಾದರು. ಧೂಮಸಮೇತ ವಾದ ಅಗ್ನಿಯ ಕಿಡಿಗಳನ್ನು ಹೊರಸೂಸುತ್ತಿದ್ದ ಚಕ್ರಗಳನ್ನೂ, ಪರಿಘಾಯುಧ ಗಳನ್ನೂ, ತ್ರಿಶೂಲಗಳನ್ನೂ, ಪರಶ್ವಾಯುಧಗಳನ್ನೂ, ಅನೇಕ ವಿಧವಾದ ತೀಕ್ಷ್ಣವಾದ ಶಕ್ತ್ಯಾಯುಧಗಳನ್ನೂ, ಥಳ-ಥಳಿಸುತ್ತಿದ್ದ ಕತ್ತಿಗಳನ್ನೂ, ಬಹು ಭಯಂಕರವಾಗಿ ಕಾಣುತ್ತಿದ್ದ ಗದೆಗಳನ್ನೂ ಒಬ್ಬೊಬ್ಬರೂ ತಮ್ಮ ಅಂತಸ್ತಿಗೆ ಅಥವಾ ಶರೀರಕ್ಕೆ ತಕ್ಕಂತೆ ಧರಿಸಿ ಯುದ್ಧಸನ್ನದ್ಧರಾದರು.

ವಿಜಯದಲ್ಲಿ ಯಾವ ವಿಧವಾದ ಶಂಕೆಯೂ ಇಲ್ಲದೇ ದಿವ್ಯಾಭರಣ ಗಳನ್ನು ಧರಿಸಿದ್ದ ದೇವತೆಗಳು ಉಜ್ಜ್ವಲಪ್ರಕಾಶದಿಂದ ಕೂಡಿದ್ದ ಶಸ್ತ್ರಗಳನ್ನು ಧರಿಸಿ ಹೆಚ್ಚು ಪ್ರಕಾಶಮಾನರಾದರು. ದೇವತೆಗಳು ಅನುಪಮವಾದ ಬಲ, ವೀರ್ಯ ಮತ್ತು ತೇಜಸ್ಸುಗಳಿಂದ ಕೂಡಿದವರಾಗಿದ್ದರು. ಅಮೃತದ ರಕ್ಷಣೆ ಯನ್ನು ಮಾಡಿಯೇ ತೀರಬೇಕೆಂದು ನಿರ್ಧಾರಮಾಡಿದ್ದರು. ಅವರು ಇದುವರೆಗೆ ಅಸುರರೊಡನೆ ಮಾಡಿದ ಅನೇಕಯುದ್ಧಗಳಲ್ಲಿ ವಿಜಯಗಳಿಸಿ ಅವರ ಪಟ್ಟಣಗಳನ್ನೂ ನಾಶಮಾಡಿದ್ದರು. ಅಂತಹವರೀಗ ಪ್ರಜ್ವಲಿಸುವ ಯಜ್ಞೇಶ್ವರನಂತೆಯೇ ಪ್ರಕಾಶಿಸುತ್ತಿದ್ದರು.

ಈ ರೀತಿಯಾಗಿ ದೇವತೆಗಳು ಮುಂದೆ ನಡೆಯಲಿರುವ ಘೋರವಾದ ಯುದ್ಧಕ್ಕೆ ಸಜ್ಜಾಗಿ ನಿಂತರು. ದೇವತೆಗಳು ಕೈಯಲ್ಲಿ ಹಿಡಿದು ಝಳಪಿಸುತ್ತಿದ್ದ ಪರಿಘವೇ ಮುಂತಾದ ಸಾವಿರಾರು ಆಯುಧಗಳಿಂದ ವ್ಯಾಪ್ತವಾಗಿದ್ದ ರಣರಂಗವು ಸೂರ್ಯನ ಕಿರಣಗಳಿಂದ ಪ್ರಕಾಶಿಸುತ್ತಿದ್ದ ಕಳಚಿ ಬಿದ್ದಿರುವ ಮತ್ತೊಂದು ಆಕಾಶದಂತೆಯೇ ಕಾಣುತ್ತಿದ್ದಿತು."

ಇ೦ನೆಯ ಅಧ್ಯಾಯವು ಮುಗಿಯಿತು.

ಇ೧ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಇಂದ್ರನು ವಾಲಖಿಲ್ಯರಿಗೆ ಅಪಮಾನಮಾಡಿದುದು : ವಾಲಖಿಲ್ಯರ ತಪಃಪ್ರಭಾವದಿಂದ ಅರುಣ ಮತ್ತು ಗರುಡರ ಉತ್ಪತ್ತಿ

ಶೌನಕರು ಸೌತಿಗಳನ್ನು ಪ್ರಶ್ನಿಸುತ್ತಾರೆ :

"ಸೂತಪುತ್ರನೇ! ದೇವಗುರುಗಳಾದ ಬೃಹಸ್ಪತಿಗಳು ಇಂದ್ರನಿಗೆ

"ನಿನ್ನ ಅಪರಾಧದಿಂದ ಕ್ರುದ್ಧರಾದ ವಾಲಖಿಲ್ಯರ ತಪೋಬಲದಿಂದ ಜನಿಸಿದ ಗರುಡನು ಅಮೃತದ ಹರಣಕ್ಕಾಗಿ ಬರುತ್ತಿದ್ದಾನೆ"–ಎಂದು ಹೇಳಿದರು. ವಾಲಖಿಲ್ಯರ ತಪಸ್ಸಿನಿಂದ ಗರುಡನು ಹೇಗೆ ಹುಟ್ಟಿದನು? ದ್ವಿಜಾತಿಶ್ರೇಷ್ಠರಾದ ಕಶ್ಯಪರಿಗೆ ಪಕ್ಷಿರಾಜನು ಮಗನಾಗಿ ಹುಟ್ಟಿದುದು ಹೇಗೆ? ಆ ಖಗಶ್ರೇಷ್ಠನು ಸಕಲರಿಂದಲೂ ಅಪರಾಜಿತನೂ, ಅವಧ್ಯನೂ ಹೇಗಾದನು? ಅವನನ್ನು 'ಕಾಮಚಾರೀ' ( ಇಷ್ಟಬಂದಲ್ಲಿಗೆ ಹೋಗುವ ಸಾಮರ್ಥ್ಯವಿರುವವನು ) 'ಕಾಮವೀರ್ಯ' ( ಬೇಕಾದಷ್ಟು ಬಲವನ್ನು ಸಮಯಾನುಗುಣವಾಗಿ ಹೆಚ್ಚಿಸಿಕೊಳ್ಳುವ ಸಾಮರ್ಥ್ಯವಿರುವವನು ) ಎಂದೂ ಹೇಳಿದ್ದೀರಿ. ಆ ಮಹಾಶಕ್ತಿಗಳು ಅವನಿಗೆ ಹೇಗೆ ಪ್ರಾಪ್ತವಾದುವು? ಈ ವಿಷಯಗಳೇನಾದರೂ ಪುರಾಣಗಳಲ್ಲಿ ಹೇಳಲ್ಪಟ್ಟಿರುವುದಾದರೆ ಅವನ್ನು ಕೇಳುವ ಆಶಯದಿಂದಿರುತ್ತೇನೆ.

"ಶೌನಕರೇ! ನೀವು ಕೇಳಿದ ಈ ವಿಷಯಗಳು ಪುರಾಣದ ವಿಷಯಗಳೇ ಆಗಿವೆ. ಎಲ್ಲ ವಿಷಯಗಳನ್ನೂ ನಿಮಗೆ ಸಂಕ್ಷೇಪವಾಗಿ ಹೇಳುತ್ತೇನೆ, ಕೇಳಿರಿ.

ಕಶ್ಯಪರಿಗೆ ವೀರರಾದ ಪುತ್ರರನ್ನು ಪಡೆಯಬೇಕೆನ್ನುವ ಅಪೇಕ್ಷೆಯಾಯಿತು. ಅದಕ್ಕಾಗಿ ಒಂದು ಯಾಗವನ್ನೇ ಪ್ರಾರಂಭಿಸಿದರು. ಅವರ ಯಾಗಕ್ಕೆ ಇಂದ್ರಾದಿದೇವತೆಗಳೂ ಗಂಧರ್ವರೂ ಹೋಮದ್ರವ್ಯಗಳನ್ನು ತಂದು ಕೊಡುತ್ತಿದ್ದರು. ಇಂದ್ರನೇ ಮೊದಲಾದ ದೇವತೆಗಳಿಗೂ, ವಾಲಖಿಲ್ಯಾದಿ ಋಷಿಗಳಿಗೂ ಕಶ್ಯಪರು ಸಮಿತ್ತುಗಳನ್ನು ತರುವಂತೆ ನಿರ್ದೇಶಿಸಿದ್ದರು. ಇಂದ್ರನು ತನ್ನ ಶಕ್ತಿಗೆ ಅನುರೂಪವಾದ ಪರ್ವತಾಕಾರದ ಸಮಿತ್ತಿನ ಹೊರೆಯನ್ನು ಸ್ವಲ್ಪವೂ ಕಷ್ಟವಿಲ್ಲದೇ ಅನಾಯಾಸವಾಗಿ ತರುತ್ತಿದ್ದನು. ಅವನು ಬರುತ್ತಿದ್ದ ದಾರಿಯಲ್ಲಿ ಅಂಗುಷ್ಠಮಾತ್ರದ ಹಲವಾರು ಋಷಿಗಳು ಒಂದೇ ಒಂದು ಮುತ್ತುಗದ ಕಡ್ಡಿಯನ್ನು ಬಹಳ ಪ್ರಯಾಸದಿಂದ ಹೊತ್ತುಕೊಂಡು ಬರುತ್ತಿದ್ದರು. ಆ ಋಷಿಗಳು ಬಹಳ ಕಾಲದಿಂದ ಆಹಾರವಿಲ್ಲದೇ ತಪಸ್ಸಿನಿಂದ ದೇಹವನ್ನು ಸವೆಸಿ ಬಹಳ ಕೃಶರಾಗಿ ಹೋಗಿದ್ದರು. ಅವರು ಬರುತ್ತಿದ್ದ ದಾರಿಯಲ್ಲಿ ಹಸುವಿನ ಹೆಜ್ಜೆಯಿಂದ ಹಳ್ಳವಾಗಿ ನೀರುತುಂಬಿದ್ದ ಗುಂಡಿಯೊಳಗೆ ಮುತ್ತುಗದ ಕಡ್ಡಿಯನ್ನು ಎತ್ತಿಹಾಕಿಕೊಂಡು ತಾವೂ ಬಿದ್ದು ಪುನಃ ಹೊರಗೆ

ಬರಲು ಬಹಳ ಪ್ರಯಾಸಪಡುತ್ತಿದ್ದರು. ಇಂದ್ರನು ಆ ವಿಚಿತ್ರವ್ಯಕ್ತಿಗಳನ್ನು ನೋಡಿ ಆಶ್ಚರ್ಯಭರಿತನಾದುದು ಮಾತ್ರವಲ್ಲದೇ ಆ ಮಹರ್ಷಿಗಳನ್ನು ಅಪಹಾಸ್ಯಮಾಡಿ ಅವರನ್ನು ದಾಟಿ ಮುಂದೆ ಹೋದನು. ಇಂದ್ರನ ಆ ಅಕಾರ್ಯಕ್ಕೆ ವಾಲಖಿಲ್ಯರು ಬಹಳ ದುಃಖಿತರಾದರು. ಕೋಪವೂ ಅವರನ್ನು ಆವರಿಸಿತು. ಇಂದ್ರನಿಗೆ ತಕ್ಕ ಶಾಸ್ತಿಮಾಡಲು ಅವರೆಲ್ಲರೂ ಸೇರಿ ಶಕ್ರನಿಗೆ ಭಯವನ್ನುಂಟುಮಾಡುವ ಮಹಾಯಾಗವೊಂದನ್ನು ಉಪಕ್ರಮಿಸಿದರು.

ಉತ್ತಮತಪಸ್ವಿಗಳಾದ ವಾಲಖಿಲ್ಯರು ಯಾವ ಕಾಮನೆಯಿಂದ ನಾನಾ ವಿಧವಾದ ಮಂತ್ರಗಳಿಂದ ವಿಧಿವತ್ತಾಗಿ ಅಗ್ನಿದೇವನಿಗೆ ಆಹುತಿಯನ್ನು ಸಮರ್ಪಿಸಿದರೆಂಬುದನ್ನು ಹೇಳುವೆನು ಕೇಳಿರಿ :

ಸ್ವೇಚ್ಛೆಯಿಂದ ಸಂಚರಿಸುವ, ಪರಮಸಾಹಸಿಯಾದ, ಈಗಿರುವ ಇಂದ್ರನ ಹೃದಯದಲ್ಲಿ ಭಯವನ್ನು ಹುಟ್ಟಿಸುವ ಬೇರೊಬ್ಬ ಇಂದ್ರನನ್ನು ಪಡೆಯುವುದೇ ಆ ಯಾಗದ ಉದ್ದೇಶವಾಗಿತ್ತು.

"ಶೌರ್ಯದಲ್ಲಿ ಮತ್ತು ವೀರ್ಯದಲ್ಲಿ ಇಂದ್ರನಿಗಿಂತಲೂ ನೂರು ಪಾಲು ಅಧಿಕನಾದವನೂ, ಮನಸ್ಸಿನ ವೇಗದ ಗತಿಗೆ ಸಮನಾದ ವೇಗವುಳ್ಳ ವನೂ, ಇಂದ್ರನಿಗೆ ಭಯಂಕರನೂ ಆದವನೊಬ್ಬನು ನಮ್ಮ ತಪಃಪ್ರಭಾವ ದಿಂದ ಪ್ರಾದುರ್ಭೂತನಾಗಲಿ"–ಎಂಬುದೇ ಅವರ ಸಂಕಲ್ಪವಾಗಿದ್ದಿತು.

ಇಂದ್ರನು ಅದನ್ನು ತಿಳಿದವನಾಗಿ ಭಯದಿಂದ ನಡುಗುತ್ತಾ ಕಠೋರ ವ್ರತನಿಷ್ಠರಾದ ಕಶ್ಯಪರ ಮರೆಹೊಕ್ಕನು. ಕಶ್ಯಪರು ಇಂದ್ರನನ್ನು ಸಂತೈಸಿ ವಾಲಖಿಲ್ಯರ ಯಾಗಭೂಮಿಗೆ ಹೋಗಿ ಅವರು ಮಾಡುತ್ತಿದ್ದ ಕರ್ಮದ ಸಿದ್ಧಿಯ ( ಮತ್ತೊಬ್ಬ ಇಂದ್ರನನ್ನು ಪಡೆಯುವ ) ವಿಷಯವಾಗಿ ಪ್ರಶ್ನಿಸಿದರು. "ಮತ್ತೊಬ್ಬ ಇಂದ್ರನನ್ನು ಪಡೆಯುವುದರಲ್ಲಿ ದೋಷವೇನಿದೆ? ಮತ್ತೊಬ್ಬ ಇಂದ್ರನೇ ಹುಟ್ಟಬೇಕು. 'ಏವಮಸ್ತು' "–ಎಂಬುದಾಗಿ ಸತ್ಯವಾದಿಗಳಾದ ವಾಲಖಿಲ್ಯರು ಹೇಳಿಬಿಟ್ಟರು. ಆಗ ಪುನಃ ಕಶ್ಯಪರು ತಪಸ್ವಿಗಳನ್ನು ಸವಿ ಮಾತುಗಳಿಂದ ಸಾಂತ್ವನಗೊಳಿಸುತ್ತಾ ಹೇಳಿದರು : "ಮಹರ್ಷಿಗಳೇ! ಬ್ರಹ್ಮ ನಿಯಮದಂತೆ ತ್ರಿಲೋಕಗಳಿಗೂ ಈಗಿರುವ ಇಂದ್ರನೊಬ್ಬನೇ ಅಧಿಪತಿಯು. ನೀವು ಬೇರೊಬ್ಬ ಇಂದ್ರನು ಬೇಕೆಂದು ಯಜ್ಞವನ್ನು ಆರಂಭಿಸಿರುತ್ತೀರಿ.

ಬ್ರಹ್ಮನಿಯಮವನ್ನು ಸುಳ್ಳುಮಾಡುವುದು ಸತ್ಯಕಾಮರಾದ ನಿಮಗೆ ಸಲ್ಲದು. ಆದರೆ ನೀವು ಪ್ರಾರಂಭಿಸಿರುವ ಯಜ್ಞವೂ ಫಲದಾಯಕವಾಗದೇ ಇರಕೂಡದು. ನೀವು ಅಭಿಲಷಿಸಿರುವ ಇಂದ್ರನು ಖೇಚರಪ್ರಾಣಿಗಳೆಲ್ಲಕ್ಕೂ ಒಡೆಯನಾಗಿ ಅತ್ಯಂತಪರಾಕ್ರಮವುಳ್ಳವನಾಗಲಿ. ಭೀತನಾಗಿ ಮರೆಹೊಕ್ಕಿರುವ ಇಂದ್ರನನ್ನು ಅನುಗ್ರಹಿಸಿರಿ"–ಎಂದು ಹೇಳಿದರು.

ಕಶ್ಯಪರ ವಿವೇಚನಾಯುಕ್ತವಾದ ಮಾತನ್ನು ಕೇಳಿ ವಾಲಖಿಲ್ಯರು ಕಶ್ಯಪರನ್ನು ಸ್ವಾಗತಿಸಿ, ಸತ್ಕರಿಸಿ, ಸುಖಾಸನದಲ್ಲಿ ಕುಳ್ಳಿರಿಸಿ, ಮುನಿಶ್ರೇಷ್ಠರಿಗೆ ಹೇಳಿದರು :

"ಮಹರ್ಷಿಗಳೇ! ಈ ಯಾಗವು ಇಂದ್ರನ ಪ್ರಾಪ್ತಿಗಾಗಿ ಎಂಬುದು ನಿಜ. ಆ ಇಂದ್ರನೂ ತಮ್ಮ ಸುತನಾಗಿ ಹುಟ್ಟಬೇಕೆಂದೇ ನಾವು ನಿಶ್ಚಯಿಸಿದ್ದೇವೆ. ಈ ಯಜ್ಞಫಲವನ್ನು ನೀವೇ ಅಂಗೀಕರಿಸಿ. ಉಳಿದ ವಿಷಯಗಳು ತಮ್ಮ ಇಚ್ಛಾನುಸಾರವಾಗಿಯೇ ನಡೆಯಲಿ"–ಎಂದು ಹೇಳಿದರು.

ಅದೇ ಸಮಯದಲ್ಲಿ ದಕ್ಷಬ್ರಹ್ಮನ ಮಗಳಾದ, ಶುಭಲಕ್ಷಣೆಯಾದ, ಮಂಗಳಮಯಿಯಾದ, ಯಶಸ್ವಿನಿಯಾದ, ಕಶ್ಯಪಪತ್ನಿಯಾದ, ಪರಿಶುದ್ಧಳಾದ 'ವಿನತಾ' ಎಂಬ ಹೆಸರಿನ ಕನ್ಯಾಮಣಿಯು ಅನೇಕಕಾಲದವರೆಗೆ ತಪಸ್ಸುಮಾಡಿ ವ್ರತಾನುಷ್ಠಾನಪರಳಾಗಿದ್ದಳು. ಒಮ್ಮೆ ಋತುಸ್ನಾನಮಾಡಿದ ಅವಳು ಪುತ್ರಪ್ರಾಪ್ತಿಗಾಗಿ ಪತಿಯ ಸಮೀಪಕ್ಕೆ ಹೋದಳು. ಅವಳನ್ನು ಕುರಿತು ಕಶ್ಯಪರು ಹೇಳಿದರು :

"ದೇವಿ! ಇಷ್ಟಾರ್ಥವನ್ನು ಪಡೆಯುವ ನಿನ್ನ ಪ್ರಯತ್ನವು ಸಫಲವಾಗುತ್ತದೆ. ನಿನಗೆ ತ್ರಿದಶೇಶ್ವರರಾದ ಇಬ್ಬರು ಮಕ್ಕಳು ಹುಟ್ಟುವರು. ವಾಲಖಿಲ್ಯರ ತಪಃಪ್ರಭಾವದಿಂದಲೂ ಮತ್ತು ನನ್ನ ಸಂಕಲ್ಪದಿಂದಲೂ ಮಹಾಭಾಗರಾದ ತ್ರೈಲೋಕ್ಯಪೂಜಿತರಾದ ಇಬ್ಬರು ಮಕ್ಕಳು ಹುಟ್ಟುವರು."

ಮೌನವನ್ನು ಧರಿಸಿ ನಿಂತಿದ್ದ ವಿನತೆಗೆ ಪೂಜ್ಯರಾದ ಕಶ್ಯಪರು ಪುನಃ ಹೇಳಿದರು :

"ದೇವಿ! ನಿನ್ನಲ್ಲಿ ಉತ್ಪನ್ನವಾಗುವ ಗರ್ಭವು ಅಭ್ಯುದಯಕಾರಿಯಾದುದು. ಅಪ್ರಮತ್ತಳಾಗಿ ನೀನು ಈ ಗರ್ಭವನ್ನು ಧರಿಸುವವಳಾಗು. ಆ ಇಬ್ಬರೂ ಪಕ್ಷಿಕೋಟಿಗೆ ಇಂದ್ರರಾಗುತ್ತಾರೆ. ಅವರು ಸಕಲಲೋಕಗಳ

ಲ್ಲಿಯೂ ಸಂಭಾವಿತರಾಗುತ್ತಾರೆ. ಸ್ವರೂಪತಃ ಅವರು ಪಕ್ಷಿಯ ರೂಪಗಳಲ್ಲಿದ್ದರೂ ಇಚ್ಛೆಬಂದ ರೂಪಗಳನ್ನು ಧರಿಸಲು ಸಮರ್ಥರಾಗುತ್ತಾರೆ."

ವಿನತೆಗೆ ಕಶ್ಯಪಪ್ರಜಾಪತಿಗಳು ಹೀಗೆ ಹೇಳಿ, ಶತಕ್ರತುವನ್ನು ( ಇಂದ್ರನನ್ನು) ಕುರಿತು ಹೇಳಿದರು :

"ಮಹೇಂದ್ರ! ಮಹಾವೀರ್ಯರಾಗಿ ಜನಿಸುವ ಸೋದರರು ನಿನ್ನ ಸಹಾಯಕರಾಗಿಯೂ ಆಗುತ್ತಾರೆ. ಆದರೆ ನಿನ್ನ ಕಡೆಯಿಂದ ಅವರಿಗೆ ಯಾವ ವಿಧವಾದ ತೊಂದರೆಯೂ ಉಂಟಾಗಕೂಡದು. (ನೀನು ಅವರ ವಿಷಯದಲ್ಲಿ ಅಪರಾಧವನ್ನೆಸಗಬಾರದು.) ನಿನಗುಂಟಾಗಿರುವ ಸಂತಾಪವನ್ನು ದೂರಮಾಡು. ನಿನಗೆ ಇಂದ್ರಪದವಿಯು ಸ್ಥಿರವಾಗಿ ಉಳಿಯುವುದು. ಆದರೆ ಬ್ರಹ್ಮವಾದಿಗಳನ್ನು ಇನ್ನು ಮುಂದೆ ಯಾವ ಕಾರಣದಿಂದಲೂ ತಿರಸ್ಕರಿಸಬೇಡ. ಅವರು ಯಾವಾಗಲೂ ಶೀಘ್ರಕೋಪಿಗಳೂ, ವಾಗ್ವಜ್ರರೂ ( ಮಾತೇ ವಜ್ರಾಯುಧವಾಗಿ ಉಳ್ಳವರೂ ) ಆಗಿರುತ್ತಾರೆ."

ಕಶ್ಯಪರು ಇಂದ್ರನಿಗೆ ಹೀಗೆ ಹೇಳಲಾಗಿ ಇಂದ್ರನೂ ತನ್ನ ಮನಸ್ಸಿನಲ್ಲುಂಟಾಗಿದ್ದ ಶಂಕೆಯನ್ನು ದೂರಮಾಡಿ ಸ್ವರ್ಗಕ್ಕೆ ತೆರಳಿದನು. ಮನೋಭಿಲಷಿತವನ್ನು ಪಡೆದ ವಿನತೆಯೂ ಸಂತೋಷಭರಿತಳಾದಳು.

ಸ್ವಲ್ಪಕಾಲಾನಂತರದಲ್ಲಿ ವಿನತೆಯು ಅರುಣ ಮತ್ತು ಗರುಡರೆಂಬ ಇಬ್ಬರು ಪುತ್ರರನ್ನು ಪಡೆದಳು. ಅಂಗವಿಕಲನಾಗಿ ಹುಟ್ಟಿದ ಅರುಣನು ಸೂರ್ಯನ ಮುಂದೆ ಕುಳಿತು ರಥದ ಸಾರಥ್ಯವನ್ನು ವಹಿಸಿದನು. ಗರುಡನು ಪಕ್ಷಿಗಳಿಗೆ ಇಂದ್ರನಾಗಿ ಅಭಿಷಿಕ್ತನಾದನು. ಅವನ ಮಹಾಪರಾಕ್ರಮದ ವಿಷಯವನ್ನೇ ನಾನು ಮುಂದೆ ಹೇಳುತ್ತೇನೆ, ಕೇಳಿರಿ."

ωೂನೆಯ ಅಧ್ಯಾಯವು ಮುಗಿಯಿತು.

೩೨ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಗರುಡನು ದೇವತೆಗಳೊಡನೆ ಯುದ್ಧಮಾಡಿದುದು : ದೇವತೆಗಳ ಪರಾಜಯ

ಸೌತಿಗಳು ಮುಂದುವರಿದು ಹೇಳುತ್ತಾರೆ :

"ಶೌನಕರೇ! ದೇವತೆಗಳು ಈ ಹಿಂದೆ ಹೇಳಿದ ರೀತಿಯಲ್ಲಿ ಅಮೃತದ

ರಕ್ಷಣೆಗಾಗಿ ಆಯುಧಗಳನ್ನು ಧರಿಸಿ ಸಜ್ಜಾಗಿ ನಿಂತಿದ್ದಾಗ ಪಕ್ಷಿರಾಜನಾದ ಗರುಡನು ದೇವತೆಗಳಿಗೆದುರಾಗಿ ಬಂದುನಿಂತನು. ಅತಿಬಲನಾದ ಗರುಡನನ್ನು ಕಂಡು ದೇವತೆಗಳೆಲ್ಲರೂ ಭಯದಿಂದ ಕಂಪಿಸಿದರು. ಗರುಡನನ್ನು ಘಾತಿಸಲು ಹೊರಟಿದ್ದ ಆಯುಧಗಳು ಹಿಡಿದಿದ್ದವರ ಭಯದ ಕಾರಣದಿಂದ ಪಕ್ಕದಲ್ಲಿದ್ದವರನ್ನು ಘಾಸಿಮಾಡುವುದರಲ್ಲಿ ಪರ್ಯವಸಾನಗೊಂಡುವೇ ಹೊರತು, ದೇವತೆಗಳ ಮೊದಲಿನ ಧ್ಯೇಯದ ಸಾಧನೆಯನ್ನು ಮಾಡಲಿಲ್ಲ.

ವಿದ್ಯುತ್ತಿಗೂ ಮತ್ತು ಅಗ್ನಿಗೂ ಸಮಾನನಾಗಿದ್ದ, ಅಮೇಯಾತ್ಮನಾದ, ಮಹಾವೀರ್ಯನಾದ ಭೌಮನನು ( ವಿಶ್ವಕರ್ಮನು ) ಅಮೃತದ ರಕ್ಷಣೆ ಯನ್ನು ಮಾಡುತ್ತಿದ್ದನು. ಗರುಡನು ಮಹಾಪರಾಕ್ರಮಿಯಾದ ಭೌಮನ ನೊಡನೆ ಒಂದೆರಡು ಕ್ಷಣಗಳು ಸೆಣಸಿದನು. ಪಕ್ಷಿಯ ಪಕ್ಷಗಳ ಆಘಾತದ ಯಾತನೆಯನ್ನು ತಾಳಲಾರದೇ ಭೌಮನನು ಯುದ್ಧರಂಗದಲ್ಲಿ ನಿಶ್ಚೇಷ್ಟಿತನಾಗಿ ಬಿದ್ದನು. ಇಂದ್ರನಿಂದ ಚೋದಿತವಾದ ಮತ್ತೊಂದು ದೇವತೆಗಳ ಸೈನ್ಯವು ಯುದ್ಧರಂಗಕ್ಕೆ ಬರುವುದರೊಳಗಾಗಿ ಗರುಡನು ತನ್ನ ರೆಕ್ಕೆಗಳಿಂದ ಧೂಳೆಬ್ಬಿಸಿ ಯಾರಿಗೂ ಕಣ್ಣೇಕಾಣದಂತೆ ಮಾಡಿದನು. ಸರ್ವತ್ರವ್ಯಾಪ್ತವಾಗಿದ್ದ ಧೂಳಿನಿಂದ ದೇವತೆಗಳು ಭ್ರಾಂತರಾದರು. ಅಮೃತವನ್ನು ರಕ್ಷಿಸುತ್ತಿದ್ದವರೂ ಧೂಳಿನಿಂದ ಮುಚ್ಚಲ್ಪಟ್ಟವರಾಗಿ ಎಲ್ಲಿ ಏನಾಗುತ್ತಿದೆಯೆಂಬುದನ್ನೂ ಕಾಣದವರಾದರು. ಈ ರೀತಿಯಾಗಿ ಗರುಡನು ಸ್ವರ್ಗಲೋಕವನ್ನು ಕ್ಷಣಮಾತ್ರದಲ್ಲಿ ಅಲ್ಲೋಲ-ಕಲ್ಲೋಲಮಾಡಿಬಿಟ್ಟನು. ತನ್ನ ಭೀಷಣವಾದ ರೆಕ್ಕೆಗಳ ಪ್ರಹಾರಗಳಿಂದ ದೇವತೆಗಳನ್ನು ಅಂಗಾಂಗಗಳಲ್ಲಿಯೂ ಘಾಸಿಪಡಿ ಸಿದನು. ಒಡನೆಯೇ ಇಂದ್ರನು ವಾಯುದೇವನನ್ನು ಕರೆದು ಧೂಳಿನ ನಿವಾರಣೆಮಾಡಲು ಆಜ್ಞಾಪಿಸಿ, ಧೂಳಿನ ನಿವಾರಣೆಯು ಅವನ ಕಾರ್ಯವೇ ಆಗಿದೆಯೆಂದೂ ಹೇಳಿದನು. ವಾಯುವಿನ ಪ್ರಭಾವದಿಂದ ಧೂಳೆಲ್ಲವೂ ಹೋಗಿ ವಾತಾವರಣವು ನಿರ್ಮಲವಾಗಲಾಗಿ, ದೇವತೆಗಳೆಲ್ಲರೂ ಒಂದೇ ಬಾರಿಗೆ ಗರುಡನ ಮೇಲೆ ಬಿದ್ದರು. ಸಕಲಪ್ರಾಣಿಗಳನ್ನೂ ಕ್ಷಣಮಾತ್ರದಲ್ಲಿ ಉಡುಗಿಸುವ ಪರಾಕ್ರಮವುಳ್ಳ, ಮಹಾವೀರ್ಯನಾದ, ಮಹಾಬಲಿಷ್ಠನಾದ ಗರುಡನು ಸುತ್ತಮುತ್ತಲೂ ಇದ್ದ ದೇವತೆಗಳಿಂದ ಪ್ರಹಾರವನ್ನು ತಿನ್ನುತ್ತಾ, ಅದಕ್ಕೆ ಪ್ರತಿಯಾಗಿ ಅಂತರಿಕ್ಷದಲ್ಲಿರುವ ಮೇಘಗಳಂತೆ ಗರ್ಜನೆ

ಮಾಡುತ್ತಾ ಮೇಲಕ್ಕೆ ಹಾರಿದನು. ಅಂತರಿಕ್ಷದಲ್ಲಿ ತಮ್ಮ ಮೇಲ್ಭಾಗದಲ್ಲಿದ್ದ ಗರುಡನನ್ನು ನೋಡಿ ದಿವ್ಯವಾದ ಕವಚಗಳನ್ನು ಧರಿಸಿದ್ದ ಇಂದ್ರಪ್ರಮುಖ ರಾದ ದೇವತೆಗಳು ಪಟ್ಟಿಶ, ಪರಿಘ, ಶೂಲ, ಗದೆ ಮುಂತಾದ ಆಯುಧ ಗಳಿಂದ ಸತತವಾಗಿ ಪ್ರಹರಿಸಿದರು. ಅಗ್ನಿಗೆ ಸಮಾನವಾದ ಕ್ಷುರಪ್ರವೆಂಬ ಆಯುಧಗಳಿಂದಲೂ, ಸೂರ್ಯಸದೃಶವಾದ ಚಕ್ರಗಳಿಂದಲೂ ಮತ್ತು ಇನ್ನೂ ಇತರ ಅನೇಕಶಸ್ತ್ರಗಳಿಂದಲೂ ಸತತವಾಗಿ ಪ್ರಹರಿತನಾದರೂ ಗರುಡನು ಸ್ವಲ್ಪವೂ ವಿಚಲಿತನಾಗಲಿಲ್ಲ. ನಾಲ್ಕುಕಡೆಗಳಿಂದಲೂ ದೇವತೆಗಳು ತಮ್ಮ ದಿವ್ಯಾಯುಧಗಳಿಂದ ಏಕಾಕಿಯಾಗಿದ್ದ ಗರುಡನನ್ನು ಪ್ರಹರಿಸುತ್ತಿದ್ದರೂ ಗರುಡನು ಸ್ವಲ್ಪವೂ ವಿಚಲಿತನಾಗದೇ ಯುದ್ಧವನ್ನು ಮುಂದುವರಿಸಿದನು. ದೇವತೆಗಳೆಲ್ಲರನ್ನೂ ಭಸ್ಮಮಾಡಿಬಿಡುವನೋ ಎಂಬಂತೆ ಪ್ರತಾಪವಂತನಾದ ಗರುಡನು ತನ್ನೆರಡು ರೆಕ್ಕೆಗಳಿಂದಲೂ ಮತ್ತು ಎದೆಯಿಂದಲೂ ಸತತವಾಗಿ ದೇವತೆಗಳನ್ನು ಪ್ರಹರಿಸಿ ಅವರನ್ನು ಕೆಳಗುರುಳಿಸಿದನು. ಗರುಡನಿಂದ ಪ್ರಹೃತರಾದ ಅನೇಕದೇವತೆಗಳು, ಗರುಡನ ಕುಕ್ಕುವಿಕೆಯಿಂದ, ಪರಚುವಿಕೆಯಿಂದ ಅಂಗಾಂಗಗಳಲ್ಲಿ ರಕ್ತವನ್ನು ಸುರಿಸುತ್ತಾ ದಿಕ್ಕಾಪಾಲಾಗಿ ಓಡುತ್ತಿದ್ದರು. ಅವನ ಹೊಡೆತವನ್ನು ತಾಳಲಾರದೇ, ಸಾಧ್ಯ-ಗಂಧರ್ವರು ಪೂರ್ವದ ಕಡೆಗೂ, ವಸು-ರುದ್ರರು ದಕ್ಷಿಣಕ್ಕೂ, ಆದಿತ್ಯರು ಪಶ್ಚಿಮಕ್ಕೂ, ಅಶ್ವಿನೀದೇವತೆಗಳು ಉತ್ತರಕ್ಕೂ ಪಲಾಯನಮಾಡಿದರು. ಅನಂತರ ಬಂದ ಅಶ್ವಕ್ರಂದ, ರೇಣುಕ, ಕ್ರಥನ, ತಪನ, ಉಲೂಕ, ಶ್ವಸನ, ನಿಮೇಷ, ಪ್ರರುಜ, ಮತ್ತು ಪುಲಿನಾದಿ ಯಕ್ಷರೊಡನೆ ಗರುಡನು ಯುದ್ಧಮಾಡಿದನು. ಪ್ರಳಯಕಾಲದ ಸಮಯದಲ್ಲಿ ಸಂಕ್ರುದ್ಧನಾದ ಪಿನಾಕಿಯಂತೆ ಮಹಾಬಲಿಷ್ಠನಾದ ಗರುಡನು ತನ್ನೆದುರಾಗಿ ಯುದ್ಧಮಾಡುತ್ತಿದ್ದ ಆ ವೀರರೆಲ್ಲರನ್ನೂ ರೆಕ್ಕೆಗಳಿಂದಲೂ, ಕೊಕ್ಕಿನಿಂದಲೂ ಅಪ್ಪಳಿಸಿದನು. ಮಹಾಬಲರಾದ, ಹೆಚ್ಚಿನ ಉತ್ಸಾಹದಿಂದ ಯುದ್ಧಕ್ಕೆ ಆಗಮಿಸಿದ್ದ ದೇವತೆಗಳು ಗರುಡನ ಪ್ರಹಾರಗಳಿಂದ ಅಂಗಾಂಗಗಳಲ್ಲಿಯೂ ಗಾಯಗೊಂಡವರಾಗಿ ತಮ್ಮ ಶರೀರಗಳಿಂದ ರಕ್ತವನ್ನು ಸುರಿಸುತ್ತಾ ಮಳೆಗರೆಯುವ ಮೇಘಗಳಂತೆ ಪ್ರಕಾಶಿಸಿದರು. ಪಕ್ಷಿರಾಜನು ಆ ಎಲ್ಲ ದೇವ-ಯಕ್ಷಯೋಧರನ್ನೂ ಧ್ವಂಸಗೊಳಿಸಿ ಅಮೃತವಿದ್ದ ಕಡೆಗೆ ಧಾವಿಸಿದನು.

ಇಷ್ಟಾದರೂ ಅಮೃತವು ಮಾತ್ರ ಸುಲಭವಾಗಿ ಸಿಕ್ಕುವಂತಿರಲಿಲ್ಲ. ಅಮೃತಕಲಶದ ಸುತ್ತಲೂ ಆಕಾಶವ್ಯಾಪಿಯಾಗಿದ್ದ ಅಗ್ನಿಯ ಜ್ವಾಲೆಗಳು ವ್ಯಾಪ್ತವಾಗಿದ್ದುವು. ಅಗ್ನಿಯೊಳಗೆ ಪ್ರವೇಶಿಸುವುದು ಗರುಡನಿಗೆ ಅಸಾಧ್ಯ ವೆನಿಸಿ, ಎಂಟು ಸಾವಿರದ ನೂರು ಬಾಯಿಗಳನ್ನು ಧರಿಸಿದವನಾಗಿ ಕ್ಷಣ ಮಾತ್ರದಲ್ಲಿ ನದಿಗಳ ನೀರನ್ನು ಎಲ್ಲ ಬಾಯಿಗಳಲ್ಲೂ ತುಂಬಿಕೊಂಡು ಬಂದು ಅಗ್ನಿಯ ಮೇಲೆ ಸುರಿದು, ಅಗ್ನಿಯನ್ನು ಶಮನಗೊಳಿಸಿ, ಅಮೃತಭಾಂಡದ ಸಮೀಪಕ್ಕೆ ಹೋಗಲು ತನ್ನ ಶರೀರವನ್ನು ಬಹುಸೂಕ್ಷ್ಮಗೊಳಿಸಿದನು.”

೩೨ನೆಯ ಅಧ್ಯಾಯವು ಮುಗಿಯಿತು.

೩೩ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಅಮೃತವನ್ನು ತೆಗೆದುಕೊಂಡು ಗರುಡನು ಪಲಾಯನ ಮಾಡಿದುದು : ಮಾರ್ಗದಲ್ಲಿ ವಿಷ್ಣುವಿನಿಂದ ಗರುಡನು ವರವನ್ನು ಪಡೆದುದು : ಇಂದ್ರನು ಗರುಡನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದುದು

ಸೌತಿಗಳು ಮುಂದುವರಿದು ಹೇಳುತ್ತಾರೆ :

“ನದಿಗಳು ರಭಸದಿಂದ ಸಮುದ್ರಕ್ಕೆ ನುಗ್ಗುವಂತೆ–ಗರುಡನು ಸೂರ್ಯರಶ್ಮಿಗೆ ಸಮಾನವಾದ ಪ್ರಭೆಯಿಂದ ಪ್ರಜ್ವಲಿಸುತ್ತಾ ಸುವರ್ಣಮಯ ವಾದ ಸ್ವರೂಪವನ್ನು ಧರಿಸಿ ಬಲಾತ್ಕಾರವಾಗಿ ಅಮೃತವಿರುವ ಸ್ಥಳಕ್ಕೆ ನುಗ್ಗಿದನು.

ಮುಂದೆ ಹೋಗುತ್ತಿರುವಾಗ ತೀಕ್ಷ್ಣವಾದ ಅಲುಗುಗಳಿಂದ ಕೂಡಿದ ಚಕ್ರವೊಂದು ಅಮೃತಕಲಶದ ಸುತ್ತಲೂ ಬಹಳ ವೇಗದಿಂದ ಸುತ್ತುತ್ತಿದ್ದಿತು. ಚಕ್ರದ ಧಾರೆಗಳು ಶಿಲೆಯನ್ನೂ ಚೂರುಮಾಡುವಷ್ಟು ಹರಿತವಾಗಿದ್ದುವು. ಪ್ರಜ್ವಲಿಸುತ್ತಿರುವ ಅಗ್ನಿ ಮತ್ತು ಸೂರ್ಯರಿಗೆ ಸಮಾನವಾಗಿದ್ದ, ಘೋರ ರೂಪವಾದ ಆ ಚಕ್ರವನ್ನು ದೇವತೆಗಳು ಅಮೃತಾಪಹಾರಕರನ್ನು ಕತ್ತರಿಸುವ ಸಲುವಾಗಿಯೇ ನಿರ್ಮಿಸಿದ್ದರು.

ಗರುಡನು ಒಂದೆರಡು ಕ್ಷಣಗಳು ಯೋಚಿಸಿ ಇನ್ನೂ ಸೂಕ್ಷ್ಮರೂಪ

ವನ್ನು ತಾಳಿ ಚಕ್ರದ ಅರೆಕಾಲುಗಳ ಮಧ್ಯದಿಂದ ಒಳಗೆ ಪ್ರವೇಶಿಸಿದನು. ಅಲ್ಲಿಯೂ ಅಮೃತಕಲಶದ ಲಾಭವು ಅಪಾಯರಹಿತವಾಗಿರಲಿಲ್ಲ. ಚಕ್ರದ ಕೆಳಗೆ ಉರಿಯುತ್ತಿರುವ ಅಗ್ನಿಗೆ ಸಮಾನವಾಗಿದ್ದ ಎರಡು ಘಟಸರ್ಪಗಳು ಹೆಡೆಯೆತ್ತಿ ವಿಷವನ್ನು ಕಕ್ಕುತ್ತಾ ಕುಳಿತಿದ್ದುವು. ಅವುಗಳ ನಾಲಿಗೆಗಳೂ ವಿದ್ಯುತ್ತಿನಂತೆ ಥಳ-ಥಳಿಸುತ್ತಿದ್ದುವು. ಅವು ಮಹಾವೀರ್ಯಶಾಲಿಗಳಾಗಿದ್ದುವು. ಅವುಗಳ ಮುಖಗಳು ಜಾಜ್ವಲ್ಯಮಾನವಾಗಿ ಕಾಣುತ್ತಿದ್ದುವು. ಕಣ್ಣುಗಳು ಫಳಫಳಿಸುತ್ತಿದ್ದುವು. ಅವುಗಳು ಕಣ್ಣುಗಳಲ್ಲಿಯೇ ವಿಷವನ್ನು ತುಂಬಿಕೊಂಡಿದ್ದುವು. ಮಹಾಘೋರರೂಪಿಗಳಾಗಿದ್ದುವು. ಸರ್ವದಾ ಕೋಪಗೊಂಡು ಬುಸುಗುಟ್ಟುತ್ತಲೇ ಇರುತ್ತಿದ್ದುವು. ಬಹುವೇಗಶಾಲಿಗಳಾಗಿದ್ದುವು. ಅಂತಹ ಎರಡು ಸರ್ಪಗಳು ಅಮೃತವನ್ನು ರಕ್ಷಿಸುತ್ತಿರುವುದನ್ನು ಗರುಡನು ನೋಡಿದನು. ಆ ಮಹಾಸರ್ಪಗಳು ಯಾವಾಗಲೂ ಕೋಪದಿಂದ ಕೆಂಪಾದ ದೃಷ್ಟಿಯನ್ನು ಹೊಂದಿದ್ದು ಒಮ್ಮೆಯಾದರೂ ಕಣ್ಣುಗಳನ್ನು ಮುಚ್ಚುತ್ತಲೇ ಇರಲಿಲ್ಲ. ಆ ಎರಡು ಸರ್ಪಗಳಲ್ಲಿ ಯಾವುದಾದರೂ ಒಂದು ಸರ್ಪವು ಅಮೃತವನ್ನು ಅಪಹರಿಸಲು ಬರುವವನನ್ನು ಕ್ಷಣಕಾಲ ದಿಟ್ಟಿಸಿನೋಡಿದ್ದೇ ಆದರೆ ಅಮೃತಾಪಹಾರಕನು ಕ್ಷಣಮಾತ್ರದಲ್ಲಿ ಭಸ್ಮವಾಗಿ ಹೋಗಿಬಿಡುತ್ತಿದ್ದನು. ಅವುಗಳ ದೃಷ್ಟಿಯು ಅಷ್ಟು ಕ್ರೂರವಾಗಿದ್ದಿತು. ಗರುಡನು ಅವುಗಳ ಕಣ್ಣುಗಳಿಗೆ ಧೂಳನ್ನು ಹಾಕಿ, ಒಡನೆಯೇ ಅವುಗಳ ಮೇಲೆ ಬಿದ್ದು ತುಂಡರಿಸಿ, ಸುತ್ತಲೂ ಸುತ್ತುತ್ತಿದ್ದ ಚಕ್ರವನ್ನು ಒಡೆದುಹಾಕಿ ಮರುಕ್ಷಣದಲ್ಲಿಯೇ ಅಮೃತಕಲಶವನ್ನೆತ್ತಿಕೊಂಡು ಹಾರಿದನು.

ಆದರೆ ಇಷ್ಟು ಕಷ್ಟದಿಂದ ಸಂಪಾದಿಸಿದ ಅಮೃತವನ್ನು ತಾನು ಮೊದಲು ಕುಡಿಯಬೇಕೆಂಬ ಯೋಚನೆಯೇ ಗರುಡನಿಗುಂಟಾಗಲಿಲ್ಲ. ತನ್ನ ತಾಯಿಯ ಬಂಧನವನ್ನು ಬಿಡಿಸುವುದು ಮಹಾಕಾರ್ಯವೆನಿಸಿತ್ತೇ ಹೊರತು ಅಮೃತವು ಮಹಾವಸ್ತುವೆಂಬ ಭಾವನೆಯೇ ಅವನಿಗುಂಟಾಗಲಿಲ್ಲ.

ತನ್ನ ಪ್ರಭೆಯಿಂದ ಸೂರ್ಯನ ಪ್ರಭೆಯನ್ನೂ ತಿರಸ್ಕರಿಸುತ್ತಾ ಸ್ವಲ್ಪವಾದರೂ ಶ್ರಮವಿಲ್ಲದೇ ಅಮೃತವನ್ನೆತ್ತಿಕೊಂಡು ಗರುಡನು ಹಾರತೊಡಗಿದನು. ಆ ಸಮಯಕ್ಕೆ ಸರಿಯಾಗಿ ಆಕಾಶದಲ್ಲಿ ಮಹಾವಿಷ್ಣುವು ಗರುಡನನ್ನು ನೋಡಿದನು. ಗರುಡನ ಪರಾಕ್ರಮವನ್ನೂ ಮತ್ತು ಅಮೃತದ ವಿಷಯದಲ್ಲಿ

ಅವನಿಗಿದ್ದ ನಿಸ್ಪೃಹತೆಯನ್ನೂ ನೋಡಿ ಮಹಾವಿಷ್ಣುವು ಸಂತುಷ್ಟನಾಗಿ, ಮುಂದೆ-ಮುಂದೆ ಹಾರಿಹೋಗುತ್ತಿದ್ದ ಗರುಡನನ್ನು ಕುರಿತು ಹೇಳಿದನು :



"ಪಕ್ಷಿರಾಜನೇ! ನಿನ್ನ ಕಾರ್ಯವನ್ನು ಮೆಚ್ಚಿರುವೆನು. ನಿನಗೆ ಬೇಕಾದ ವರವನ್ನು ಕೇಳು, ಅನುಗ್ರಹಿಸುವೆನು."

"ದೇವದೇವ! ನಾನು ನಿನಗಿಂತಲೂ ಉನ್ನತಸ್ಥಾನದಲ್ಲಿರಬೇಕು ಮತ್ತು ಅಮೃತವನ್ನು ಸೇವಿಸದಿದ್ದರೂ ನಾನು ಚಿರಾಯುವಾಗಿಯೂ ನೀರೋಗದೃಢಕಾಯನಾಗಿಯೂ ಇರಬೇಕು."

"ಹಾಗೆಯೇ ಆಗಲಿ."

"ವಿಷ್ಣುದೇವ! ನಾನೂ ನಿನಗೆ ವರವನ್ನು ಕೊಡಲಿಚ್ಛಿಸಿರುವೆನು.

ನೀನು ಸಕಲೈಶ್ವರ್ಯಗಳನ್ನೂ ಹೊಂದಿರುವೆಯಾದರೂ ಏನಾದರೂ ಕೇಳು, ಕೊಡುವೆನು.''

“ನೀನು ನನ್ನ ವಾಹನವಾಗಿರಬೇಕು''

“ಹಾಗೆಯೇ ಆಗಲಿ''

ಗರುಡನು ವಿಷ್ಣುವಿನ ಮೇಲಿರಬೇಕೆಂದು ವರವನ್ನು ಕೇಳಿಕೊಂಡನು. ವಿಷ್ಣುವು ಗರುಡನನ್ನು ಕೆಳಗಿರುವಂತೆ ( ವಾಹನರೂಪದಲ್ಲಿ ) ವರವನ್ನು ಕೇಳಿದನು. ವಿಷ್ಣುವು ಗರುಡನನ್ನು ತನ್ನ ಧ್ವಜದಲ್ಲಿ ಕುಳ್ಳಿರಿಸಿ ಇಬ್ಬರ ವರಗಳೂ ಹುಸಿಯಾಗದಂತೆ ಮಾಡಿದನು.

ಗರುಡನು ಮಹಾವಿಷ್ಣುವಿಗೆ ನಮಸ್ಕರಿಸಿ ಅಮೃತಕಲಶವನ್ನೆತ್ತಿಕೊಂಡು ವೇಗವಾಗಿ ಮುಂದೆ ಹಾರುತ್ತಾ ಹೋಗುತ್ತಿದ್ದಾಗ ಮಹೇಂದ್ರನು ಅಡ್ಡಲಾಗಿ ಬಂದು ಗರುಡನ ಮೇಲೆ ಬಹಳ ರೋಷದಿಂದ ವಜ್ರಾಯುಧವನ್ನು ಪ್ರಯೋಗಿಸಿದನು. ಗರುಡನು ಗಟ್ಟಿಯಾಗಿ ನಕ್ಕು–“ಮಹೇಂದ್ರ! ನಿನ್ನ ವಜ್ರಾಯುಧಪ್ರಯೋಗದಿಂದ ನನಗೆ ಸ್ವಲ್ಪವಾದರೂ ಘಾಸಿಯಾಗಿದೆಯೆಂದು ಭ್ರಮಿಸಬೇಡ. ಮಹರ್ಷಿಗಳಾದ ದಧೀಚಿಗಳಿಗೆ ನಾನು ಮನ್ನಣೆಕೊಡುವೆನು. ಈ ಕಾರಣದಿಂದ ಅವರ ಅಸ್ಥಿಯಿಂದ ಮಾಡಿರುವ ವಜ್ರಾಯುಧಕ್ಕೂ ಮತ್ತು ನಿನಗೂ ನನ್ನ ಮನ್ನಣೆಯಿದೆ. ಅಂತಹ ವಜ್ರಾಯುಧಕ್ಕೆ ಮಾನ್ಯತೆಯನ್ನು ಕೊಡುವ ಸಲುವಾಗಿ ನನ್ನೀ ಗರಿಯನ್ನು ಕೆಳಕ್ಕೆ ಹಾಕುವೆನು. ನನ್ನಲ್ಲಿರುವ ಮತ್ತು ನಾನೀಗ ಕೆಳಕ್ಕೆ ಬೀಳಿಸಲಿರುವ ಗರಿಯ ಆದಿ ಮತ್ತು ಅಂತ್ಯಗಳನ್ನೂ ನೀನು ತಿಳಿದವನಾಗಿಲ್ಲ. ನೀನು ಮಾಡಿದ ವಜ್ರಾಯುಧಪ್ರಹಾರದಿಂದ ನನಗೆ ಸ್ವಲ್ಪವಾದರೂ ಪೀಡೆಯಾಗಿರುವುದಿಲ್ಲ''–ಎಂದು ಹೇಳಿ ತನ್ನ ಒಂದು ಗರಿಯನ್ನು ಕೆಳಕ್ಕೆ ಬೀಳಿಸಿದನು. ಗರುಡನು ಕೆಳಗೆ ಬೀಳಿಸಿದ ರೆಕ್ಕೆಯ ಗರಿಯನ್ನು ನೋಡಿ ಸಕಲಪ್ರಾಣಿಗಳೂ ಆನಂದಿಸಿದುವು.

ನಯನಮನೋಹರವಾಗಿದ್ದ ಗರುಡನ ಆ ಗರಿಯನ್ನು ನೋಡಿದ ಋಷಿಗಳು ಅವನನ್ನು ‘ಸುಪರ್ಣ’ ನೆಂದೂ ಕರೆದರು. ಆ ಮಹಾಶ್ಚರ್ಯವನ್ನು ಕಂಡು ಸಹಸ್ರಾಕ್ಷನಾದ ದೇವೇಂದ್ರನು–ಈ ಗರುಡಪಕ್ಷಿಯೊಂದು ಮಹದ್ಭೂತವೆಂದೇ ಭಾವಿಸಿ ಪಕ್ಷಿರಾಜನಿಗೆ ಹೇಳಿದನು:

"ಖಗೋತ್ತಮನೇ! ನಿನ್ನ ಸರ್ವೋತ್ತಮವಾದ ಬಲದ ಪರಿಮಿತಿ ಯೆಷ್ಟೆಂಬುದನ್ನು ನಿನ್ನಿಂದಲೇ ಕೇಳಿ ತಿಳಿಯಲಿಚ್ಛಿಸಿದ್ದೇನೆ. ಎರಡನೆಯದಾಗಿ ನಿನ್ನೊಡನೆ ಅನಂತವಾದ ಅವಿಚ್ಛಿನ್ನವಾದ ಮೈತ್ರಿಯನ್ನೂ ಅಪೇಕ್ಷಿಸುತ್ತೇನೆ."

ಮೂವತ್ಮೂರನೆಯ ಅಧ್ಯಾಯವು ಮುಗಿಯಿತು.

೩೪ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಇಂದ್ರ ಮತ್ತು ಗರುಡರ ಮೈತ್ರಿ : ಗರುಡನು ಅಮೃತವನ್ನು ತೆಗೆದುಕೊಂಡು ಸರ್ಪಗಳ ಸಮೀಪಕ್ಕೆ ಹೋದುದು : ದಾಸ್ಯಭಾವದಿಂದ ವಿನತೆಯ ವಿಮೋಚನೆ : ಇಂದ್ರನು ಅಮೃತವನ್ನು ಅಪಹರಿಸಿಕೊಂಡು ಸ್ವರ್ಗಕ್ಕೆ ಹಿಂದಿರುಗಿದುದು

ಗರುಡನು ಇಂದ್ರನಿಗೆ ಹೇಳುತ್ತಾನೆ :

"ದೇವೇಂದ್ರ! ನಿನ್ನ ಇಚ್ಛೆಯಂತೆ ನಾವಿಬ್ಬರೂ ಗೆಳೆಯರಾಗೋಣ. ನನ್ನ ಇಚ್ಛೆಯೂ ಹಾಗೆಯೇ ಇದೆ. ಸ್ವಭುಜಬಲ-ಪರಾಕ್ರಮಗಳ ಗುಣ ಸಂಕೀರ್ತನ ವನ್ನು ತಾನೇ ಮಾಡಿಕೊಳ್ಳುವುದನ್ನು ವಿದ್ವಾಂಸರು ಒಪ್ಪುವುದಿಲ್ಲ. ನೀನು ಸ್ನೇಹಿತನಾಗಿರುವುದರಿಂದಲೂ ಮತ್ತು ನೀನಾಗಿಯೇ ಕೇಳುತ್ತಿರುವುದ ರಿಂದಲೂ ಹೇಳುತ್ತೇನೆ. ಕಾರಣವಿಲ್ಲದೇ ಆತ್ಮಪ್ರಶಂಸೆಯ ಮಾತುಗಳನ್ನು ಖಂಡಿತವಾಗಿಯೂ ಹೇಳಬಾರದು. ನನ್ನ ಸಾಮರ್ಥ್ಯವನ್ನು ಒಂದೇ ಮಾತಿನಲ್ಲಿ ಹೇಳಬೇಕಾದರೆ ನನ್ನ ಒಂದೇ ಪಕ್ಷದ ಮೇಲೆ ಪರ್ವತ, ವನ, ಅಪಾರಜಲ ಸಹಿತವಾದ ಈ ಸಮುದ್ರ–ಇವುಗಳನ್ನೊಳಗೊಂಡ ಭೂಮಿಯನ್ನೂ ನಿನ್ನ ಸಹಿತವಾಗಿ ಹೊರಬಲ್ಲೆನು ಅಥವಾ ಚರಾಚರಯುಕ್ತ ವಾದ ಸಕಲಲೋಕ ಗಳನ್ನೂ ಒಂದೆಡೆಯಲ್ಲಿ ಗುಡ್ಡೆಹಾಕಿ ನನ್ನ ಮೇಲೆ ಹೊರಿಸುವುದಾದಲ್ಲಿ, ಆ ಭಾರವನ್ನೂ ಸಹ ನಾನು ಸ್ವಲ್ಪವಾದರೂ ಶ್ರಮ ವಿಲ್ಲದೇ ಹೊರಬಲ್ಲೆನು. ಇದರಿಂದಲೇ ನೀನು ನನ್ನ ಬಲವೆಷ್ಟೆಂಬುದನ್ನು ತಿಳಿದುಕೊಳ್ಳಬಹುದಾಗಿದೆ."

ಶೌನಕರೇ! ಗರುಡನು ಹೇಳಿದ ಮಾತುಗಳನ್ನು ಕೇಳಿ ಶ್ರೀಮಂತರಲ್ಲಿ ಶ್ರೇಷ್ಠನಾದ, ಸರ್ವಲೋಕಹಿತನಾದ, ಪ್ರಭುವಾದ, ಕಿರೀಟಿಯಾದ ದೇವೇಂದ್ರನು ಗರುಡನಿಗೆ ಹೇಳಿದನು :

"ಪಕ್ಷಿರಾಜ! ನೀನು ಹೇಳುವುದರಲ್ಲಿ ಅತಿಶಯವೇನೂ ಕಾಣು

ವುದಿಲ್ಲ. ನಿನಗೆ ಪ್ರಪಂಚದಲ್ಲಿ ಅಸಾಧ್ಯವೆನಿಸುವ ಕಾರ್ಯವೇ ಇಲ್ಲ. ನನ್ನ ಪ್ರೇಮಪೂರ್ವಕವಾದ ಉತ್ತಮೋತ್ತಮವಾದ ಮೈತ್ರಿಯನ್ನು ಸ್ವೀಕರಿಸು, ಖಗೇಶ್ವರ!"

"ಹಾಗೆಯೇ ಆಗಲಿ."

ಎರಡು ಕ್ಷಣಗಳು ಕಳೆದುವು. ಇಂದ್ರನಿಗೆ ಗರುಡನೊಡನೆ ಮೈತ್ರಿ ಯಿಂದಿರುವುದರ ಜೊತೆಗೆ ಅಮೃತವನ್ನು ಪುನಃ ದೇವಲೋಕಕ್ಕೆ ಒಯ್ಯುವ ಇಚ್ಛೆಯೂ ಇತ್ತು. ಇಂದ್ರನು ಗರುಡನಿಗೆ ಹೇಳಿದನು :

"ಸರ್ವಶಕ್ತನಾದ ನಿನಗೆ ಅಮೃತವೇಕೆ, ಪಕ್ಷಿರಾಜ? ನೀನದನ್ನು ಮತ್ತಾರಿಗಾದರೂ ಕೊಟ್ಟರೆ ಅವರು ಅಮೃತಪಾನಮಾಡಿ ನಮ್ಮನ್ನೇ ದ್ವೇಷಿ ಸುವರು."

"ದೇವೇಂದ್ರ! ಅಮೃತವನ್ನು ಕುಡಿಯುವ ಅಪೇಕ್ಷೆಯು ನನಗಿಲ್ಲ. ಮತ್ತಾರಿಗೂ ಕುಡಿಸುವುದೂ ಇಲ್ಲ."

"ಹಾಗಾದರೆ ಕಲಶವನ್ನು ಹಿಂದಕ್ಕೆ ಕೊಡುವೆಯಾ?"

"ಈಗ ನಾನು ಕೊಡಲಾರೆನು. ಇದರಿಂದ ಒಂದು ಕಾರ್ಯದ ಸಾಧನೆ ಯಾಗಬೇಕಾಗಿದೆ. ಈ ಅಮೃತಕಲಶವನ್ನು ನಿರ್ದಿಷ್ಟಸ್ಥಳವೊಂದರಲ್ಲಿಡುವೆನು. ಕೂಡಲೇ ನೀನಿದನ್ನು ಒಯ್ಯಬಹುದು."

"ಹಾಗೆಯೇ ಆಗಲಿ. ನಿನ್ನ ಈ ಮಾತಿನಿಂದ ನಾನು ಬಹಳ ತುಷ್ಟ ನಾಗಿರುವೆನು. ನಮ್ಮಿಬ್ಬರ ಮೈತ್ರಿಯು ಚಿರಸ್ಮರಣೀಯವಾಗಿರಲು ನಿನಗೆ ಬೇಕಾದ ವರವೊಂದನ್ನು ಕೇಳು, ಪಕ್ಷಿರಾಜ!"

ಗರುಡನು ಇಂದ್ರನ ಮಾತನ್ನು ಕೇಳಿದನು. ಗರುಡನೇ ಸರ್ವಶಕ್ತ ನಾದುದರಿಂದ ಅವನಿಗಾವ ವರವೂ ಬೇಕಾಗಿರಲಿಲ್ಲ. ಆದರೂ ಇಂದ್ರನ ಆಶಯ ವನ್ನು ಪೂರೈಸುವ ಇಚ್ಛೆಯಿಂದ ಕ್ಷಣಕಾಲ ಯೋಚಿಸಿದನು. ಕದ್ರುವಿನ ಮಕ್ಕಳ ದುಷ್ಟತನ, ಅವುಗಳು ತನ್ನ ತಾಯಿಯನ್ನು ಕದ್ರುವಿಗೆ ದಾಸಿಯನ್ನಾಗಿ ಮಾಡಿಕೊಡಲು ಮಾಡಿದ ಮೋಸ–ಇವೆಲ್ಲವೂ ಗರುಡನ ಸ್ಮರಣೆಗೆ ಬಂದುವು. ಅಂತೆಯೇ ಇಂದ್ರನಿಗೆ ಹೇಳಿದನು :

"ನಾನು ಎಲ್ಲಕ್ಕೂ ಈಶನಾಗಿದ್ದರೂ, ಯಾವುದೊಂದಕ್ಕೂ ನಿನ್ನನ್ನು ಅಪೇಕ್ಷಿಸುವ ಕಾರಣವಿಲ್ಲದಿದ್ದರೂ ನಿನ್ನ ಇಚ್ಛಾನುಸಾರವಾಗಿ ವರವೊಂದನ್ನು

ಅಪೇಕ್ಷಿಸುತ್ತೇನೆ. ನಾನು ಸರ್ಪಾಹಾರಿಯಾಗುವಂತೆ ಅನುಗ್ರಹಿಸು, ದೇವೇಂದ್ರ!"

ದೇವೇಂದ್ರನು ಹಾಗೆಯೇ ಆಗಲೆಂದು ಹೇಳಿ, ಗರುಡನು ಅಮೃತವನ್ನು ಕೆಳಗಿಟ್ಟೊಡನೆಯೇ ತಾನು ತೆಗೆದುಕೊಂಡು ಹೋಗುವೆನೆಂಬುದನ್ನೂ ಪುನಃ ಗರುಡನ ಸ್ಮರಣೆಗೆ ತಂದು ಹೊರಟುಹೋದನು.

ಅನಂತರ ಸುಪರ್ಣನು ತಾಯಿಯ ಸಮೀಪಕ್ಕೆ ಬಹುಶೀಘ್ರವಾಗಿ ಧಾವಿಸಿದನು. ಕಾರ್ಯಸಿದ್ಧಿಯಾದುದರಿಂದ ಪರಮಹೃಷ್ಟನಾಗಿರುವಂತೆ ತೋರಿಸಿಕೊಳ್ಳುತ್ತಾ ಸರ್ಪಗಳನ್ನು ಸಂಧಿಸಿ ಈ ಮಾತುಗಳನ್ನು ಹೇಳಿದನು :

"ಸರ್ಪಗಳಿರಾ! ನಿಮ್ಮ ಅಭಿಲಾಷೆಯಂತೆ ಅಮೃತವನ್ನು ತಂದಿದ್ದೇನೆ ಮತ್ತು ಈ ಕಲಶವನ್ನು ನಿಮ್ಮೆದುರಿನಲ್ಲಿಯೇ ದರ್ಭೆಯ ಮೇಲಿಡುತ್ತೇನೆ. ಎಲ್ಲರೂ ಶುಚಿಯಾಗಿ ಬಂದು ಅಮೃತವನ್ನು ಸೇವಿಸಿರಿ. ಇಂದಿಗೆ ನಮ್ಮ ತಾಯಿಯ ದಾಸ್ಯಜೀವನಕ್ಕೆ ವಿಮೋಚನೆಯಾಯಿತು. ನೀವು ಹೇಳಿದ ಕಾರ್ಯವನ್ನು ನಾನು ಮಾಡಿಕೊಟ್ಟಿದ್ದೇನೆ."

ಅಮೃತವು ಸಿಕ್ಕಿದ ಸಂತೋಷದಿಂದ ಸರ್ಪಗಳು ಗರುಡನಿಗೆ **'ತಥಾಸ್ತು'**–'ನಿನ್ನ ತಾಯಿಯು ಇನ್ನು ಮುಂದೆ ದಾಸಿಯಲ್ಲ'–ಎಂದು ಪ್ರತಿವಚನವನ್ನಿತ್ತು ಸ್ನಾನಮಾಡುವ ಸಲುವಾಗಿ ಹೊರಟುಹೋದುವು. ಪೂರ್ವಕೃತಯೋಜನೆಯಂತೆ ಇಂದ್ರನು ಅಮೃತಕಲಶವನ್ನಪಹರಿಸಿಕೊಂಡು ದೇವಲೋಕಕ್ಕೆ ಹೊರಟುಹೋದನು.

ಅಮೃತಪಾನಮಾಡಲಿಚ್ಛಿಸಿದ್ದ ಸರ್ಪಗಳು ಸ್ನಾನಮಾಡಿ, ಮಂಗಲಾ ಚರಣೆಯನ್ನು ಮುಗಿಸಿ ಪರಮಹೃಷ್ಟರಾಗಿ ದರ್ಭೆಯ ಮೇಲೆ ಅಮೃತ ಕಲಶವಿದ್ದ ಸ್ಥಳಕ್ಕೆ ಆಗಮಿಸಿದುವು. ಆದರೆ ಅಲ್ಲಿ ಅಮೃತಕಲಶವಿರಲಿಲ್ಲ. ಇಂದ್ರನೇ ಅದನ್ನು ಅಪಹರಿಸಿಕೊಂಡುಹೋದನೆಂಬ ವಿಷಯವೂ ತಿಳಿಯಿತು. ಒಡನೆಯೇ ಅವು 'ನಾವು ಮಾಡಿದ ಮೋಸಕ್ಕೆ ಪ್ರತಿಯಾದ ಮೋಸ ವಿದು'–ಎಂದು ಅರಿತುಕೊಂಡವು.

ಅಮೃತವನ್ನಿಟ್ಟಿದ್ದ ದರ್ಭೆಯಾದರೂ ಉಳಿದಿರುವುದೆಂಬ ಭ್ರಾಂತಿ

ಯಿಂದ ಆ ದರ್ಭೆಯನ್ನೇ ಹಾವುಗಳು ನೆಕ್ಕತೊಡಗಿದುವು. ಹೀಗೆ ಮಾಡಿದುದರಿಂದ ಅಮೃತವು ಸಿಕ್ಕುವುದಕ್ಕೆ ಬದಲಾಗಿ ಸರ್ಪಗಳ ನಾಲಿಗೆಗಳು ಎರಡು ಭಾಗಗಳಾಗಿ ಹೋದುವು.

**ಅಭವಂಶ್ಚಾಮೃತಸ್ಪರ್ಶಾದ್ದರ್ಭಾಸ್ತೇಽಥ ಪವಿತ್ರಿಣಃ ॥೨೪॥**

ಆದರೆ ಸ್ವಲ್ಪಕಾಲವಾದರೂ ಅಮೃತದ ಸಂಪರ್ಕವಿದ್ದ ದರ್ಭೆಗಳು ಚಿರಕಾಲದ ಪ್ರಯೋಜನವನ್ನೇ ಪಡೆದುವು. ಅಮೃತಸ್ಪರ್ಶದಿಂದ ದರ್ಭೆಗಳು ಪರಮಪಾವನವಾದುವು. 'ಪವಿತ್ರೀ' ಎಂಬ ಹೆಸರೇ ದರ್ಭೆಗೆ ಬಂದಿತು.

ಈ ರೀತಿಯಾಗಿ ಗರುಡನಿಂದ ಅಮೃತವು ತರಲ್ಪಟ್ಟಿತು ; ಮರುಕ್ಷಣದಲ್ಲಿಯೇ ಅದು ಅಪಹೃತವೂ ಆಯಿತು. ಈ ಎಲ್ಲ ಕಾರ್ಯಗಳ ಫಲಿತಾಂಶದಲ್ಲಿ ಗರುಡನ ಕಾರ್ಯದಿಂದ ಸರ್ಪಗಳ ನಾಲಿಗೆಗಳು ಇಬ್ಭಾಗವಾದುವು.

ಅನಂತರದಲ್ಲಿ ಸುಪರ್ಣನು ತನ್ನ ತಾಯಿಯೊಡನೆ ಆ ಅರಣ್ಯದಲ್ಲಿಯೇ ಆನಂದವಾಗಿ ವಿಹರಿಸುತ್ತಿದ್ದನು. ಹಾವುಗಳ ಭಕ್ಷಕನಾದ, ಮಹೋನ್ನತ ಕೀರ್ತಿಮಂತನಾದ ಗರುಡನು ಇತರ ಪಕ್ಷಿಕೋಟಿಗಳಿಂದಲೂ ಪುರಸ್ಕೃತನಾಗಿ ತಾಯಿಯಾದ ವಿನತೆಗೆ ಆನಂದವನ್ನುಂಟುಮಾಡುತ್ತಿದ್ದನು.

ಶೌನಕರೇ! ಈ ಕಥೆಯ ಶ್ರವಣ-ಪ್ರವಚನಗಳು ಬಹುಪುಣ್ಯದಾಯಕಗಳು.

**ಇಮಾಂ ಕಥಾಂ ಯಃ ಶೃಣುಯಾನ್ನರಃ ಸದಾ**
**ಪಠೇತ ವಾ ದ್ವಿಜಗಣಮುಖ್ಯಸಂಸದಿ ।**
**ಅಸಂಶಯಂ ತ್ರಿದಿವಮಿಯಾತ್ಸ ಪುಣ್ಯಭಾ-**
**ಙ್ಮಹಾತ್ಮನಃ ಪತಗಪತೇಃ ಪ್ರಕೀರ್ತನಾತ್ ॥೨೬॥**

ಈ ಕಥೆಯನ್ನು ಯಾರು ಯಾವಾಗಲೂ ಕೇಳುತ್ತಿರುತ್ತಾರೆಯೋ ಮತ್ತು ದ್ವಿಜರ ಸಮೂಹದಲ್ಲಿ ಹೇಳುತ್ತಿರುತ್ತಾರೆಯೋ–ಅಂತಹವರು ಮಹಾತ್ಮರಾದ, ಪತಗಪತಿಯಾದ ಗರುಡನ ಪುಣ್ಯಚಾರಿತ್ರ್ಯದ ಸಂಕೀರ್ತನೆಯಿಂದ ಪುಣ್ಯಶಾಲಿಗಳಾಗಿ ಅವಸಾನಾನಂತರದಲ್ಲಿ ಸ್ವರ್ಗವನ್ನು ಸೇರುತ್ತಾರೆಂಬುದರಲ್ಲಿ ಯಾವ ಸಂಶಯವೂ ಇಲ್ಲ."

ಒ೪ನೆಯ ಅಧ್ಯಾಯವು ಮುಗಿಯಿತು.

೩೫ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಸರ್ಪಪ್ರಮುಖರ ನಾಮಧೇಯಗಳು

ಶೌನಕರು ಕೇಳುತ್ತಾರೆ :

**ಭುಜಙ್ಗಮಾನಾಂ ಶಾಪಸ್ಯ ಮಾತ್ರಾ ಚೈವ ಸುತೇನ ಚ ।**
**ವಿನತಾಯಾಸ್ತ್ವಯಾ ಪ್ರೋಕ್ತಂ ಕಾರಣಂ ಸೂತನನ್ದನ ॥೧॥**

"ಸೂತನಂದನನೇ! ನೀನು ಇದುವರೆಗೆ ಸರ್ಪಗಳಿಗೆ ತಾಯಿಯಾದ ಕದ್ರುವು ಕೊಟ್ಟ ಶಾಪ ಮತ್ತು ಅದಕ್ಕೆ ಕಾರಣ ; ವಿನತೆಗೆ ಆಕೆಯ ಮಗನಾದ ಅರುಣನೇ ಕೊಟ್ಟ ಶಾಪ ಮತ್ತು ಅದಕ್ಕೆ ಕಾರಣ–ಈ ಎಲ್ಲ ವಿಷಯಗಳನ್ನೂ ವಿವರವಾಗಿ ಹೇಳಿರುವೆ.

ಕದ್ರೂ-ವಿನತೆಯರಿಗೆ ಕಶ್ಯಪರು ಕೊಟ್ಟ ವರದ ವಿಷಯವಾಗಿಯೂ ಹೇಳಿರುವೆ ಮತ್ತು ವಿನತೆಯ ಮಕ್ಕಳ ನಾಮಧೇಯಗಳನ್ನೂ ಹೇಳಿರುವೆ. ಕದ್ರುವಿನ ಮಕ್ಕಳಾದ ಸರ್ಪಗಳ ನಾಮಧೇಯಗಳನ್ನೂ ಕೇಳುವ ಆಶಯವಿದೆ. ಆದರೆ ಅಸಂಖ್ಯಾತವಾದ ಸರ್ಪಗಳ ಹೆಸರುಗಳನ್ನೆಲ್ಲಾ ಹೇಳುತ್ತಾ ಹೋಗುವುದು ಕಷ್ಟವೆಂಬ ವಿಷಯವೂ ನನಗೆ ಗೊತ್ತಿದೆ. ಆದರೆ ಸರ್ಪಗಳಲ್ಲಿ ಬಹುಮುಖ್ಯರಾದವರ ಹೆಸರುಗಳನ್ನಾದರೂ ತಿಳಿದುಕೊಳ್ಳುವ ಆಸಕ್ತಿ ಯಿಂದಿರುತ್ತೇವೆ."

"ಶೌನಕರೇ! ನೀವೇ ಹೇಳಿದಂತೆ ಸರ್ಪಗಳು ಬಹುಸಂಖ್ಯಾತವಾಗಿರು ವುದರಿಂದ ಎಲ್ಲ ಸರ್ಪಗಳ ಹೆಸರುಗಳನ್ನೂ ಹೇಳಹೋಗುವುದಿಲ್ಲ. ಅವು ಗಳಲ್ಲಿ ಬಹುಮುಖ್ಯರಾದ ಸರ್ಪಗಳ ನಾಮಧೇಯಗಳನ್ನು ಮಾತ್ರ ಹೇಳು ತ್ತೇನೆ, ಕೇಳಿರಿ. ಕದ್ರುವಿಗೆ ಮೊದಲು ಹುಟ್ಟಿದವನು ಆದಿಶೇಷನು ; ವಾಸು ಕಿಯು ಎರಡನೆಯವನು. ಅನಂತರದಲ್ಲಿ ಐರಾವತ, ತಕ್ಷಕ, ಕರ್ಕೋಟಕ, ಧನಂಜಯ, ಕಾಲೀಯ, ಮಣಿನಾಗ, ಆಪೂರಣ, ಪಿಂಜರಕ, ಏಲಾಪತ್ರ, ವಾಮನ, ನೀಲ, ಅನೀಲ, ಕಲ್ಮಾಷ, ಶಬಲ, ಆರ್ಯಕ, ಉಗ್ರಕ, ಕಲಶ, ಪೋತಕ, ಸುಮನ, ದಧಿಮುಖ, ವಿಮಲಪಿಂಡಕ, ಆಪ್ತ, ಎರಡನೆಯ ಕರ್ಕೋಟಕ, ಶಂಖ, ವಾಲಿಶಿಖ, ನಿಷ್ಠಾನಕ, ಹೇಮಗುಹ, ನಹುಷ, ಪಿಂಗಲ, ಬಾಹ್ಯಕರ್ಣ, ಹಸ್ತಿಪದ, ಮುದ್ಗರ, ಪಿಂಡಕ, ಕಂಬಲ, ಅಶ್ವತರ,

ಕಾಲೀಯಕ, ವೃತ್ತ, ಸಂವರ್ತಕ, ಮೊದಲನೆಯ ಪದ್ಮ, ಎರಡನೆಯ ಪದ್ಮ, ಶಂಖಮುಖ, ಕೂಷ್ಮಾಂಡಕ, ಕ್ಷೇಮಕ, ಪಿಂಡಾರಕ, ಕರವೀರ, ಪುಷ್ಪದಂಷ್ಟ್ರ, ಬಿಲ್ವಕ, ಬಿಲ್ವಪಾಂಡುರ, ಮೂಷಕಾದ, ಶಂಖಶಿರಸ, ಪೂರ್ಣಭದ್ರ, ಹರಿದ್ರಕ, ಅಪರಾಜಿತ, ಜ್ಯೋತಿಕ, ಶ್ರೀವಹ, ಕೌರವ್ಯ, ಧೃತರಾಷ್ಟ್ರ, ಪರಾಕ್ರಮಿಯಾದ ಶಂಖಪಿಂಡ, ವಿರಜಸ, ಸುಬಾಹು, ವೀರ್ಯವಂತನಾದ ಶಾಲಿಪಿಂಡ, ಹಸ್ತಿಪಿಂಡ, ಪಿಠರಕ, ಸುಮುಖ, ಕೌಣಪಾಶನ, ಕುಠರ, ಕುಂಜರ, ಪ್ರಭಾಕರ, ಕುಮುದ, ಕುಮುದಾಕ್ಷ, ತಿತ್ತಿರಿ, ಹಲಿಕ, ಮಹಾನಾಗ, ಕರ್ದಮ, ಬಹುಮೂಲಕ, ಕರ್ಕರ, ಅಕರ್ಕರ, ಕುಂಡೋದರ ಮತ್ತು ಮಹೋದರ–ಇವರುಗಳು ಯಥಾನುಕ್ರಮವಾಗಿ ಹುಟ್ಟಿದರು.

ಸರ್ಪಗಳಲ್ಲಿ ಇವರೆಲ್ಲರೂ ಪ್ರಧಾನರಾಗಿರುವುದರಿಂದ ಇವರುಗಳ ನಾಮಧೇಯಗಳನ್ನು ಮಾತ್ರ ಹೇಳಿದ್ದೇನೆ. ಸರ್ಪಗಳ ಬಾಹುಳ್ಯದಿಂದಾಗಿ ಉಳಿದುವುಗಳ ನಾಮಧೇಯಗಳನ್ನು ಹೇಳಿರುವುದಿಲ್ಲ. ಈ ಸರ್ಪಗಳ ಮಕ್ಕಳು, ಮೊಮ್ಮಕ್ಕಳು (ಸಂತತಿಯ) ಲಕ್ಷೋಪಲಕ್ಷಸಂಖ್ಯೆಯಲ್ಲಿ ಬೆಳೆದುಹೋಗಿವೆ. ಆದುದರಿಂದ ಅವುಗಳ ನಾಮಧೇಯಗಳನ್ನು ಹೇಳುವ ಸಾಧ್ಯತೆಯೂ ಇಲ್ಲ."

ಒ೩ನೆಯ ಅಧ್ಯಾಯವು ಮುಗಿಯಿತು.

ಒ೬ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಆದಿಶೇಷನ ತಪಸ್ಸು: ಬ್ರಹ್ಮನ ಆದೇಶದಂತೆ ಭೂಧಾರಣೆ

ಶೌನಕರು ಪ್ರಶ್ನಿಸುತ್ತಾರೆ :

"ಸೂತಪುತ್ರ! ನೀನೇ ಹೇಳಿದಂತೆ ಸರ್ಪಗಳು ಅಸಂಖ್ಯಾತವಾಗಿ ಬೆಳೆದುಹೋಗಿದ್ದುವು. ಮೇಲಾಗಿ ಎಲ್ಲ ಸರ್ಪಗಳೂ ಪರಾಕ್ರಮವುಳ್ಳವುಗಳಾಗಿಯೂ, ಎದುರಿಸಲು ಅಸಾಧ್ಯವಾದುವುಗಳಾಗಿಯೂ ಇದ್ದುವು. ಅಂತಹವುಗಳಿಗೆ–'ಜನಮೇಜಯನು ಮಾಡಲಿರುವ ಸರ್ಪಯಾಗದಲ್ಲಿ ವಿನಾಶಹೊಂದಿರಿ'–ಎಂದು ಕದ್ರುವು ಶಾಪವನ್ನಿತ್ತಳು. ಅವಳ ಶಾಪವನ್ನು ಕೇಳಿದನಂತರ ಶಾಪದ ಪರಿಹಾರಕ್ಕಾಗಿ ಸರ್ಪಗಳು ಮುಂದೇನು ಮಾಡಿದುವು? ಈ ವಿವರವನ್ನು ಕೇಳಲು ನಾನು ಕುತೂಹಲಿಯಾಗಿದ್ದೇನೆ."

"ಶೌನಕರೇ! ಕದ್ರುವಿನ ಮಕ್ಕಳಲ್ಲಿ ಹೆಚ್ಚು ಮಂದಿ ಬಹಳ ಕ್ರೂರಿಗಳಾಗಿಯೂ, ವಿವೇಚನಾರಹಿತರಾಗಿಯೂ, ಕಂಡ-ಕಂಡವರನ್ನು ಕಚ್ಚುವ ಸ್ವಭಾವವುಳ್ಳವರಾಗಿಯೂ ಇದ್ದರು. ಅವರ ದುಷ್ಟವರ್ತನೆಯು ಹಿರಿಯವನಾದ ಶೇಷನಿಗೆ ಸ್ವಲ್ಪವೂ ಹಿಡಿಸಲಿಲ್ಲ. ಅವನು ತನ್ನ ಸಹೋದರರೊಡ ನಿರಲು ಇಚ್ಛಿಸದೇ ಅವರ ದುಷ್ಟವರ್ತನೆಯನ್ನು ನೋಡಿ ಜುಗುಪ್ಸೆಹೊಂದಿ ದವನಾಗಿ ಮನೆಯಿಂದ ಹೊರಬಿದ್ದನು. ಗಂಧಮಾದನ, ಬದರಿ, ಗೋಕರ್ಣ, ಪುಷ್ಕರ ಮುಂತಾದ ಪುಣ್ಯಕ್ಷೇತ್ರಗಳನ್ನು ದರ್ಶನಮಾಡಿ ಅಲ್ಲಿಂದ ಹಿಮವತ್ಪರ್ವತದ ತಪ್ಪಲನ್ನು ಸೇರಿ ಘೋರವಾದ ತಪಸ್ಸನ್ನು ಮಾಡತೊಡಗಿದನು. ಅನೇಕವರ್ಷಗಳು ಅನ್ನಾಹಾರಗಳಿಲ್ಲದೇ ಕೇವಲ ವಾಯುಭಕ್ಷಕನಾಗಿ ಮಾಡಿದ ಘೋರತಪಸ್ಸಿನ ಪರಿಣಾಮವಾಗಿ ಶೇಷನ ಶರೀರವೆಲ್ಲವೂ ಕ್ಷೀಣವಾಗಿ ಹೋಯಿತು. ಆದರೆ ತಪಸ್ಸಿನ ಜ್ವಾಲೆಗಳು ಪ್ರಪಂಚವೆಲ್ಲವನ್ನೂ ಸುಡುತ್ತಿವೆಯೋ ಎಂಬಂತೆ ತೋರುತ್ತಿತ್ತು. ಶೇಷನ ತಪಃಪ್ರಭಾವದಿಂದ ಸಕಲಚರಾಚರಗಳೂ ಸಂಕಟಪಡುತ್ತಿರುವುದನ್ನು ಕಂಡು ಚತುರ್ಮುಖನು ಜಟಾ-ಚೀರವಸನನಾಗಿದ್ದ ಶೇಷನ ಸಮೀಪಕ್ಕೆ ಬಂದು ತಪಸ್ಸಿಗೆ ಕಾರಣವನ್ನು ಪ್ರಶ್ನಿಸಿದನು :

"ಶೇಷನೇ! ನೀನು ನಿನ್ನ ಬಹುತೀಕ್ಷ್ಣವಾದ ತಪಸ್ಸಿನಿಂದಾಗಿ ಪ್ರಪಂಚದಲ್ಲಿರುವ ಪ್ರಜೆಗಳೆಲ್ಲರಿಗೂ ತಾಪವನ್ನುಂಟುಮಾಡುತ್ತಿರುವೆ. ಹೀಗೆ ತಪಸ್ಸುಮಾಡಲು ನಿನ್ನ ಹೃದಯದ ಕಾಮನೆಯೇನೆಂಬುದನ್ನು ಹೇಳು."

ಬ್ರಹ್ಮನ ಮಾತನ್ನು ಕೇಳಿ ಶೇಷನು ಬದ್ಧಾಂಜಲಿಯಾಗಿ ಹೇಳಿದನು :

"ಪಿತಾಮಹ! ನನ್ನ ಸಹೋದರರೆಲ್ಲರೂ ಮಂದಬುದ್ಧಿಯವರಾಗಿರುವರು. ಇನ್ನು ಮುಂದೆ ನನಗೆ ಅವರೊಡನೆ ವಾಸಮಾಡಲು ಇಷ್ಟವಿಲ್ಲ. ಈ ನನ್ನ ನಿರ್ಧಾರಕ್ಕೆ ನೀನು ಅನುಮತಿಯನ್ನೀಯಬೇಕಾಗಿದೆ. ಸಹೋದರರಲ್ಲಿಯೇ ಒಬ್ಬರಿಗೊಬ್ಬರು–ಶತ್ರುಗಳ ವಿಷಯದಲ್ಲಿ ಅಸೂಯೆಪಡುವಂತೆ– ಅಸೂಯೆಪಡುತ್ತಾರೆ. ನಾನವರನ್ನು ಇನ್ನು ಮುಂದೆ ನೋಡಲೇಕೂಡದೆಂಬ ಕಾರಣದಿಂದ ತಪಸ್ಸನ್ನು ಮಾಡಲುಪಕ್ರಮಿಸಿದೆನು. ವಿನತೆಯನ್ನೂ–ನಮ್ಮ ಮತ್ತೊಬ್ಬ ಸಹೋದರನಾದ, ವಿನತೆಯ ಮಗನಾದ, ಖಗೇಶ್ವರನಾದ ವೈನ

ತೇಯನನ್ನೂ ಈ ನನ್ನ ಅನುಜರು ಸದಾ ದ್ವೇಷಿಸುತ್ತಾರೆ. ಗರುಡನಾದರೋ ಮಹಾಪ್ರತಾಪಶಾಲಿಯು. ಮಹಾತ್ಮರಾದ ಕಶ್ಯಪರ ವರಪ್ರಸಾದದಿಂದಾಗಿ ಮಹಾಬಲಿಷ್ಠನಾಗಿದ್ದಾನೆ. ಆ ದುಷ್ಟಸರ್ಪಗಳ ಸಹೋದರನಾಗಿರುವ ನಾನು ಈ ನನ್ನ ಶರೀರದ ವಿಷಯದಲ್ಲಿಯೇ ಜುಗುಪ್ಸಿತನಾಗಿರುತ್ತೇನೆ. ಈ ಕಾರಣದಿಂದಲೇ ನಾನು ಅನವರತವಾಗಿ ತಪಸ್ಸನ್ನು ಮಾಡುತ್ತಿದ್ದು ಈ ದೇಹವನ್ನೇ ತ್ಯಾಗಮಾಡಬೇಕೆಂದಿದ್ದೇನೆ. ಶರೀರವನ್ನು ಪರಿತ್ಯಜಿಸಿದ ಬಳಿಕ ನಾನು ಪ್ರೇತನಾಗಿರುವಾಗಲೂ ಆ ದುಷ್ಟರ ಸಂಬಂಧವಿರಬಾರದು. ಇದು ಹೇಗೆಂಬ ಬಗೆಗೆ ಯೋಚಿಸುತ್ತಿದ್ದೇನೆ." (ಕಳೇಬರವನ್ನು ಬಿಟ್ಟೊಡನೆಯೇ ಶವಸಂಸ್ಕಾರಕ್ಕಾಗಿ ಅವರು ಬರುವುದರಿಂದ ಅವರ ಸಂಬಂಧವು ಕಡಿದು ಹೋದಂತಾಗುವುದಿಲ್ಲವೆಂಬುದು ಶೇಷನ ಅಭಿಪ್ರಾಯವಾಗಿದೆ. )

ಬಹುದುಃಖಿತನಾದ ಶೇಷನಿಗೆ ಬ್ರಹ್ಮನು ಹೇಳಿದನು :

"ಅನಂತ! ನಿನ್ನ ಅನುಜರ ಸ್ವಭಾವವನ್ನು ನಾನು ಚೆನ್ನಾಗಿ ತಿಳಿದಿರುವೆನು. ಅವರು ಬಹಳ ದುಷ್ಟರಾಗಿರುವುದು ನಿಜ. ನಿನ್ನ ತಾಯಿಗೆ ನಿನ್ನ ಅನುಜರು ಮಾಡಿದ ಅಪರಾಧದಿಂದಾಗಿ ಅವರಿಗೆ ಮಹತ್ತರವಾದ ವಿಪತ್ತು ಕಾದಿದೆ. ಇದಕ್ಕೆ ತಕ್ಕ ಪರಿಹಾರವನ್ನೂ ನಾನೀಗಲೇ ಕಲ್ಪಿಸಿರುವೆನು. ನಿನ್ನ ಅನುಜರ ವಿಷಯವಾಗಿ ನೀನು ಶೋಕಿಸಬೇಕಾದ ಕಾರಣವಿಲ್ಲ. ನಿನ್ನ ಮನೋಭಿಲಷಿತವಾದ ಯಾವುದಾದರೂ ವರವನ್ನು ಕೇಳು. ನಾನು ನಿನ್ನ ವಿಷಯದಲ್ಲಿ ಪರಮಪ್ರೀತನಾಗಿರುವುದರಿಂದ ನೀನು ಕೇಳಲಿರುವ ವರವನ್ನು ಈಗಲೇ ಕೊಡುತ್ತೇನೆ. ಭುಜಗೋತ್ತಮ! ಅದೃಷ್ಟವಿಶೇಷದಿಂದಲೇ ನಿನ್ನ ಬುದ್ಧಿಯು ಧರ್ಮನಿಷ್ಠವಾಗಿದೆ. ಮುಂದೆಯೂ ನಿನ್ನ ಬುದ್ಧಿಯು ಧರ್ಮದಲ್ಲಿಯೇ ಸುಸ್ಥಿರವಾಗಿರಲೆಂದು ನಾನು ಆಶಿಸುತ್ತೇನೆ."

"ಪಿತಾಮಹ! ನಿನ್ನ ಅಭಿಲಾಷೆಯಂತೆಯೇ ನನ್ನ ಹೃದಯವು ಯಾವಾಗಲೂ ಧರ್ಮ, ಮನೋನಿಗ್ರಹ ಮತ್ತು ತಪಸ್ಸು–ಇವುಗಳಲ್ಲಿಯೇ ನಿರತವಾಗಿರಲಿ."

"ಶೇಷ! ನಿನ್ನ ಜಿತೇಂದ್ರಿಯತೆ ಮತ್ತು ಶಾಂತಿಪ್ರಿಯತೆ ಇವುಗಳು ನನಗೆ ಸಂಪೂರ್ಣವಾಗಿ ಆನಂದವನ್ನುಂಟುಮಾಡಿವೆ. ನನ್ನ ಆಜ್ಞೆಯಂತೆ

ನನ್ನ ಸೃಷ್ಟಿಗೆ ಹಿತಕರವಾದ ಒಂದು ಕಾರ್ಯವನ್ನೂ ನೀನು ಮಾಡಬೇಕಾಗಿದೆ."

"ಪಿತಾಮಹ! ನಿನ್ನ ಸೃಷ್ಟಿಗೆ ಹಿತಕರವಾದ ಕಾರ್ಯವು ನನ್ನಿಂದ ಆಗುವುದಿದ್ದರೆ ಎಷ್ಟೇ ಪ್ರಯಾಸವೆನಿಸಿದರೂ ಮಾಡುವೆನು. ಅಂತಹ ಕಾರ್ಯ ದಿಂದಲಾದರೂ ನನ್ನ ಶರೀರವು ಸಾರ್ಥಕಹೊಂದಲಿ."

"ಅನಂತ! ಸಕಲಚರಾಚರಪ್ರಾಣಿಗಳನ್ನೊಳಗೊಂಡಿರುವ ಮತ್ತು ನದಿಗಳಿಂದಲೂ, ಸಾಗರಗಳಿಂದಲೂ, ಪರ್ವತಗಳಿಂದಲೂ, ಗ್ರಾಮ-ನಗರ ಗಳಿಂದಲೂ ಪರಿಶೋಭಿಸುತ್ತಿರುವ ಮತ್ತು ಅವುಗಳ ಭಾರದಿಂದ ಅತ್ತಿತ್ತ ತೂಗಾಡುತ್ತಿರುವ ಈ ವಿಶಾಲವಾದ ಪೃಥ್ವಿಯನ್ನು ನೀನು ಹೊತ್ತು ನಿಲ್ಲ ಬೇಕು."

ಅನಂತನಿಗೆ ಇದು ಅಸಾಧ್ಯವೆನಿಸಲಿಲ್ಲ. ಅಸಾಧ್ಯವಾದ ಕಾರ್ಯವನ್ನು ಬ್ರಹ್ಮನು ತನಗೆ ಹೇಳುವುದಿಲ್ಲವೆಂಬ, ಒಂದು ವೇಳೆ ತನಗೆ ಅಸಾಧ್ಯವೆನಿಸಿದರೂ ಬ್ರಹ್ಮನ ಅನುಗ್ರಹದಿಂದ ಅಸಾಧ್ಯವೆನಿಸಿದ ಕಾರ್ಯವೂ ಸುಸಾಧ್ಯವಾದ ಕಾರ್ಯವಾಗುವುದೆಂಬ ದೃಢನಂಬಿಕೆಯಿಂದ ಶೇಷನು ಒಡನೆಯೇ ಬ್ರಹ್ಮನಿಗೆ ಹೇಳಿದನು :

"ವರದನಾದ, ಪ್ರಜಾಪತಿಯಾದ, ದೇವದೇವನಾದ, ಮಹೀಪತಿ ಯಾದ, ಜಗತ್ಪತಿಯಾದ ನೀನು ಹೇಳಿದಂತೆಯೇ ತೂಗಾಡುತ್ತಿರುವ ಈ ಭೂದೇವಿಯನ್ನು ನೀನು ನನ್ನ ತಲೆಯ ಮೇಲಿರಿಸು, ದೇವ!"

"ಭುಜಗೋತ್ತಮ! ಭೂಮಿಯ ಕೆಳಭಾಗಕ್ಕೆ ಹೋಗು. ಕೆಳಭಾಗಕ್ಕೆ ಹೋಗಲು ಭೂದೇವಿಯೇ ನಿನಗೆ ಮಾರ್ಗಮಾಡಿಕೊಡುತ್ತಾಳೆ. ನನ್ನ ಸಲಹೆ ಯಂತೆ ಈ ಭೂಮಿಯನ್ನು ಧರಿಸಿದರೆ ನೀನು ನನಗೆ ಅತ್ಯಂತಪ್ರಿಯವಾದ ಕಾರ್ಯವನ್ನು ಮಾಡಿಕೊಟ್ಟಂತಾಗುತ್ತದೆ."

ಅನಂತನು ಹಾಗೆಯೇ ಆಗಲೆಂದು ಹೇಳಿ ಚತುರ್ಮುಖನಿಗೆ ಸಾಷ್ಟಾಂಗ ಪ್ರಣಾಮಮಾಡಿ ಭೂದೇವಿಯು ಕಲ್ಪಿಸಿಕೊಟ್ಟ ಸುರಂಗದಲ್ಲಿ ಇಳಿದು ಹೋದನು. ಪೃಥ್ವಿಯ ಕೆಳಭಾಗಕ್ಕೆ ಹೋಗಿ ನದೀ-ತಟಾಕ-ಪರ್ವತಗಳಿಂದ

ಕೂಡಿರುವ ಸಮುದ್ರಾಂತಳಾದ ಭೂದೇವಿಯನ್ನು ತಲೆಯ ಮೇಲೆ ಹೊತ್ತು ಕೊಂಡು ನಿಂತನು.

ಶೇಷನು ಭೂಮಿಯನ್ನು ಹೊತ್ತುಕೊಳ್ಳುತ್ತಲೇ ಪರಮತುಷ್ಟನಾದ ಬ್ರಹ್ಮನು ಶೇಷನನ್ನು ಶ್ಲಾಘಿಸುತ್ತಾ ಹೇಳಿದನು : "ನೀನೊಬ್ಬನೇ ಈ ಅಖಂಡವಿಶ್ವವನ್ನೂ ಶಿರಸ್ಸಿನಲ್ಲಿ ಧಾರಣೆಮಾಡಿರುವೆಯಾದ್ದರಿಂದ ನೀನು ಸರ್ವಶ್ರೇಷ್ಠನೂ, ಧರ್ಮಮೂರ್ತಿಯೂ ಆದ ಶೇಷನಾಗಿರುವೆ. ನಾನು ಈ ವಿಶ್ವದ ಏಕೈಕಸೃಷ್ಟಿಕರ್ತನಾಗಿರುವಂತೆ–ಇಂದ್ರನು ಈ ತ್ರಿಭುವನಗಳ ಏಕೈಕ ರಾಜನಾಗಿರುವಂತೆ–ನೀನೊಬ್ಬನೇ ನಿನ್ನ ಅನಂತವಾದ ಹೆಡೆಗಳಿಂದ ಈ ಭೂಮಿಯನ್ನು ವಹಿಸಿರುವುದರಿಂದ ನಮಗೆ ಸಮಾನನಾಗಿರುವೆ."

ಎಂದು ಹೇಳಿ ಬ್ರಹ್ಮನು ಅಂತರ್ಹಿತನಾದನು.

ಶೌನಕರೇ! ಇಂದಿಗೂ ಸಹ ಭೂಮಿಯ ಕೆಳಭಾಗದಲ್ಲಿ ಬ್ರಹ್ಮನ ನಿರ್ದೇಶನದಂತೆ ಪ್ರತಾಪವಂತನಾದ, ಅನಂತನಾದ ನಾಗಶ್ರೇಷ್ಠನಾದ ಆದಿ ಶೇಷನು ಭೂಮಿಯನ್ನು ಹೊತ್ತು ಕುಳಿತಿದ್ದಾನೆ.

ಕೆಲವು ಕಾಲ ಕಳೆದನಂತರ ಅಮರಶ್ರೇಷ್ಠನಾದ, ಭಗವಂತನಾದ ಚತುರ್ಮುಖನು ಶೇಷನ ಸಹಾಯಕ್ಕೆ ವೈನತೇಯನಾದ ಸುಪರ್ಣನನ್ನೂ ಕಳುಹಿಸಿಕೊಟ್ಟನು."

ಇ೬ನೆಯ ಅಧ್ಯಾಯವು ಮುಗಿಯಿತು.

ಇ೭ನೆಯ ಅಧ್ಯಾಯ ಆಸ್ತೀಕಪರ್ವ(ಮುಂದುವರಿದಿದೆ.)

## ಶಾಪದಿಂದ ಪಾರಾಗಲು ಸರ್ಪಗಳ ಪರಸ್ಪರಪರಾಮರ್ಶೆ

"ಅನಂತರ ಶೇಷನ ಮೊದಲನೆಯ ತಮ್ಮನಾದ ವಾಸುಕಿಯು–ಅಣ್ಣನು ಜುಗುಪ್ಸೆಯಿಂದ ಮನೆಯನ್ನು ಬಿಟ್ಟು ಹೊರಟುಹೋದಮೇಲೆ ತನ್ನ ತಮ್ಮಂದಿರ ಯೋಗ-ಕ್ಷೇಮಗಳನ್ನು ನೋಡಿಕೊಳ್ಳುವ ಭಾರವನ್ನು ವಹಿಸಿ ಕೊಂಡನು. ಮೇಲಾಗಿ ತಾಯಿಯು ಕೊಟ್ಟ ಶಾಪವು ಕಾರ್ಯರೂಪಕ್ಕೆ ಬಾರದಂತೆ ಮಾಡುವುದು ಹೇಗೆಂಬ ಯೋಚನೆಯು ವಾಸುಕಿಯನ್ನು ಹಗ

ಲಿರುಳೂ ಕಾಡುತ್ತಿತ್ತು. ಆ ವಿಪತ್ತಿನಿಂದ ಪಾರಾಗಲು ಏನಾದರೂ ಉಪಾಯ ವನ್ನು ಯೋಚಿಸಬೇಕೆಂಬ ಇಚ್ಛೆಯಿಂದ ಸರ್ವಧರ್ಮಪರಾಯಣರಾದ ಐರಾವತಾದಿ ಸಾವಿರಾರು ಮಂದಿ ಅನುಜರೆಲ್ಲರನ್ನೂ ಕರೆದು ಸಮಾ ಲೋಚನೆ ಮಾಡತೊಡಗಿದನು :

"ಪ್ರಿಯಸಹೋದರರೇ! ನಾವಿಂದು ಸೇರಿರುವುದು ಒಂದು ಮಹಾ ಕಾರ್ಯದ ಆಲೋಚನೆಗಾಗಿ. ಯಾವಾಗಲೂ ಮಹಾಕಾರ್ಯವೊಂದನ್ನು ಕೈಗೊಳ್ಳಬೇಕಾದರೆ ಹತ್ತಾರು ಜನರ ಸಲಹೆಗಳನ್ನು ಪಡೆದು ಆರಂಭಿಸುವುದು ಹಿತಕರವೆಂದು ತಜ್ಞರು ಅಭಿಪ್ರಾಯಪಡುತ್ತಾರೆ. ಮೇಲಾಗಿ ಇಂದು ನಾವು ಯೋಚಿಸಬೇಕಾಗಿರುವ ಕಾರ್ಯವು ನಮ್ಮೆಲ್ಲರಿಗೂ ವ್ಯಕ್ತಿಶಃ ಸಂಬಂಧಪಟ್ಟಿ ದ್ದಾಗಿದೆ. ಪಾಪರಹಿತರೇ! ನಮ್ಮ ತಾಯಿಯು ನಮಗೆ ಕೊಟ್ಟ ಶಾಪದ ವಿಷಯವು ನಿಮ್ಮೆಲ್ಲರಿಗೂ ತಿಳಿದೇ ಇರುವುದು. ನಾವೆಲ್ಲರೂ ಪರಸ್ಪರವಾಗಿ ಸಮಾಲೋಚಿಸಿ ಆ ಶಾಪದ ಪರಿಹಾರಕ್ಕಾಗಿ ಪ್ರಯತ್ನಮಾಡೋಣ.

**ಸರ್ವೇಷಾಮೇವ ಶಾಪಾನಾಂ ಪ್ರತಿಘಾತೋ ಹಿ ವಿದ್ಯತೇ ।**
**ನ ತು ಮಾತ್ರಾಭಿಶಪ್ತಾನಾಂ ಮೋಕ್ಷಃ ಕ್ವಚನ ವಿದ್ಯತೇ ॥೪॥**

ತಪಸ್ಸು, ದಾನ, ಪ್ರಾಯಶ್ಚಿತ್ತಾದಿಗಳಿಂದ ಎಲ್ಲ ಶಾಪಗಳನ್ನೂ ನಿವಾರಣೆಮಾಡಿಕೊಳ್ಳಲು ಸಾಧ್ಯವಾಗಬಹುದು. ಆದರೆ ತಾಯಿಯು ಕೊಟ್ಟ ಶಾಪವನ್ನು ಮಾತ್ರ ಎಂತಹ ದುಸ್ಸಾಧ್ಯವಾದ ವ್ರತಾಚರಣೆಗಳಿಂದಲೂ ನಿವಾರಿಸಿಕೊಳ್ಳಲು ಸಾಧ್ಯವಿಲ್ಲ.

ಅವಿನಾಶಿಯಾದ, ಅಪ್ರಮೇಯನಾದ, ಸತ್ಯಸ್ವರೂಪನಾದ ಬ್ರಹ್ಮನ ಸಮ್ಮುಖದಲ್ಲಿಯೇ ನಮ್ಮ ತಾಯಿಯು ನಮಗೆ ಶಾಪವಿತ್ತಳೆಂಬ ವಾರ್ತೆಯನ್ನು ಕೇಳಿದ ಮೇಲಂತೂ ನನ್ನ ಹೃದಯವು ಬಹುವಾಗಿ ಪರಿಕಂಪಿಸತೊಡಗಿದೆ. ನಿಶ್ಚಯವಾಗಿ ಹೇಳುವುದಾದರೆ ನಾವು ಸಂಪೂರ್ಣವಾಗಿ ನಾಶಹೊಂದುವ ಕಾಲವು ಸನ್ನಿಹಿತವಾಗಿದೆ. ಏಕೆಂದರೆ : ನಮ್ಮ ತಾಯಿಯು ನಮಗೆ ಕೊಟ್ಟ ಶಾಪವನ್ನು ಬ್ರಹ್ಮದೇವನು ಅನುಮೋದಿಸಿದನೇ ಹೊರತು ಪ್ರತಿರೋಧಿಸ ಲಿಲ್ಲವೆಂಬುದೇ ಇದಕ್ಕೆ ಮುಖ್ಯಕಾರಣವಾಗಿದೆ. ಆದುದರಿಂದ ನಾವೀಗ ಭುಜಂಗಗಳ ಯೋಗ-ಕ್ಷೇಮಗಳ ವಿಷಯವಾಗಿ ಸಮಾಲೋಚಿಸಬೇಕಾಗಿದೆ.

ಒಂದು ವೇಳೆ ನಮ್ಮ ತಾಯಿಯ ಈ ಶಾಪವನ್ನು ಸಂಪೂರ್ಣವಾಗಿ ನಿವಾರಿಸಿಕೊಳ್ಳಲು ಸಾಧ್ಯವಾಗದೇ ಇದ್ದರೂ, ನಮ್ಮ ಸರ್ಪಕುಲದಲ್ಲಿ ಸರ್ವರೂ ನಾಶವಾಗದಂತೆ ಮಾಡುವುದಾದರೂ ನಮ್ಮ ಇಂದಿನ ಮುಖ್ಯ ಕರ್ತವ್ಯವಾಗಿದೆ.

ನಾವೆಲ್ಲರೂ ಬುದ್ಧಿವಂತರಾಗಿಯೂ, ವಿಚಕ್ಷಣರಾಗಿಯೂ ಇದ್ದೇವೆ. ಹಿಂದೊಮ್ಮೆ ದೇವತೆಗಳು ಗುಹೆಗಳಲ್ಲಡಗಿಕೊಂಡಿದ್ದ ಅಗ್ನಿದೇವನನ್ನು ಹುಡುಕಿ ಹೊರಕ್ಕೆ ತಂದಂತೆ–ನಾವೆಲ್ಲರೂ ಪರಸ್ಪರವಾಗಿ ಸಮಾಲೋಚನೆ ನಡೆಸಿದರೆ ನಮಗೂ ಸಹ ಯಾವುದಾದರೊಂದು ಶಾಪನಿವಾರಣೋಪಾಯವು ಸಿಕ್ಕಬಹುದೆಂದು ನಾನು ಭಾವಿಸಿದ್ದೇನೆ. ಸರ್ಪಗಳ ವಿನಾಶಕ್ಕಾಗಿಯೇ ನಡೆಯುವ ಜನಮೇಜಯನ ಸರ್ಪಯಾಗವು ನಡೆಯದಂತೆಯೇ ಮಾಡುವುದು ; ಒಂದು ವೇಳೆ ನಡೆದರೂ ಅದಕ್ಕೆ ಮಧ್ಯದಲ್ಲಿಯೇ ವಿಘ್ನ ವನ್ನುಂಟುಮಾಡುವುದು–ಇದನ್ನು ಹೇಗೆ ಸಾಧಿಸಬೇಕೆಂಬ ವಿಷಯವಾಗಿ ನೀವು ನಿಮ್ಮ-ನಿಮ್ಮ ಅಭಿಪ್ರಾಯಗಳನ್ನು ತಿಳಿಸಿರಿ."

ಶೌನಕರೇ! ವಾಸುಕಿಯು ಹೀಗೆ ಹೇಳಿದನಂತರ ಅಲ್ಲಿಗೆ ಆಗಮಿಸಿದ್ದ ಮಂತ್ರಬುದ್ಧಿವಿಶಾರದರಾದ ಕಾದ್ರವೇಯರು ಹಾಗೆಯೇ ಆಗಲೆಂದು ವಾಸುಕಿಗೆ ಹೇಳಿ ಪರಸ್ಪರವಾಗಿ ಸಮಾಲೋಚನೆ ನಡೆಸಿದರು.

ಅನಂತರದಲ್ಲಿ ಅವರು ವಾಸುಕಿಯ ಅನುಮತಿಯನ್ನು ಪಡೆದು ವೇದಿಕೆಯ ಬಳಿಗೆ ಬಂದು ತಮ್ಮ-ತಮ್ಮ ಅಭಿಪ್ರಾಯಗಳನ್ನು ತಿಳಿಸಿ ಹೋಗು ತ್ತಿದ್ದರು.

"ಬ್ರಾಹ್ಮಣನು ಬೇಡುವ ಯಾಚನೆಯನ್ನು ಕುರುವಂಶದ ಅಧಿಪತಿ ಗಳೆಂದಿಗೂ ತಿರಸ್ಕರಿಸುವುದಿಲ್ಲ. ಆದುದರಿಂದ ನಮ್ಮಲ್ಲಿ ಕೆಲವರು ಶ್ರೋತ್ರಿಯ ಬ್ರಾಹ್ಮಣವೇಷಧಾರಿಗಳಾಗಿ ಜನಮೇಜಯನ ಬಳಿಗೆ ಹೋಗಿ– 'ನೀನು ಮಾಡಬೇಕೆಂದು ಯೋಚಿಸಿರುವ ಸರ್ಪಯಾಗವನ್ನು ಮಾಡಲೇ ಕೂಡದು. ಇದೇ ನಮ್ಮ ಯಾಚನೆ'–ಎಂದು ಹೇಳಿಬಿಡುವುದರಿಂದ ಸರ್ಪಯಾಗವು ನಡೆಯದಂತೆ ಮಾಡಬಹುದೆಂದು ನಾನು ಅಭಿಪ್ರಾಯಪಡುತ್ತೇನೆ."

"ನಮ್ಮಲ್ಲಿ ಕೆಲವರು ರಾಜನ ಸಲಹೆಗಾರರಂತೆ ವೇಷಧರಿಸಿ

ಹೋಗೋಣ. ಯಾವ ಕಾರ್ಯವನ್ನು ಮಾಡಬೇಕಾದರೂ ರಾಜನು ನಮ್ಮ ಸಲಹೆಗಳನ್ನು ಕೇಳಿಯೇ ಕೇಳುವನು. ಸರ್ಪಯಾಗದ ಸಮಾಲೋಚನೆಯು ಬಂದಾಗ ಆ ಯಾಗವನ್ನು ಮಾಡುವುದರಿಂದ ಪ್ರಯೋಜನಕ್ಕಿಂತಲೂ ಹೆಚ್ಚು ಹಾನಿಯೇ ಆಗುವುದೆಂಬುದನ್ನು ನಾನಾವಿಧವಾದ ಚತುರೋಕ್ತಿಗಳಿಂದ ರಾಜನಿಗೆ ಮನಗಾಣಿಸಿ ಯಜ್ಞವು ನಡೆಯದಂತೆ ಮಾಡಬಹುದೆಂಬುದು ನನ್ನ ಅಭಿಪ್ರಾಯ."

"ನಮ್ಮಲ್ಲಿ ಯಾರಾದರೂ ಸಮರ್ಥರಾದವರು ಹೋಗಿ ಸರ್ಪಯಾಗದ ಪ್ರಕ್ರಿಯೆಯನ್ನು ತಿಳಿದಿರುವ ಪುರೋಹಿತರನ್ನೇ ಕಚ್ಚಿ ಕೊಂದುಬಿಟ್ಟರೆ ಯಾಗವು ನಡೆಯಲಾರದೆಂಬುದು ನನ್ನ ಭಾವನೆ."

"ಪುರೋಹಿತರೊಬ್ಬರನ್ನು ಮಾತ್ರ ಕಚ್ಚುವುದರಿಂದ ನಮ್ಮ ಕಾರ್ಯವು ಸಾಧಿಸಲಾರದು. ಆ ಯಜ್ಞದಲ್ಲಿ ಭಾಗವಹಿಸುವ ಋತ್ವಿಜರೆಲ್ಲರನ್ನೂ ಕಚ್ಚಿ ಕೊಲ್ಲುವುದರಿಂದ ನಮ್ಮ ವಿಪತ್ತು ಪರಿಹಾರವಾಗುವುದೆಂದು ನಾನು ಭಾವಿಸಿದ್ದೇನೆ."

"ಋತ್ವಿಜರನ್ನೂ, ಪುರೋಹಿತರನ್ನೂ ಕಚ್ಚುವುದೇ? ಬ್ರಹ್ಮಹತ್ಯೆಯನ್ನು ಮಾಡುವುದೇ? ಎಂತಹ ಅಕಾರ್ಯ? ಅಧಾರ್ಮಿಕವಾದ ಈ ಸಲಹೆಯನ್ನು ನಾವೆಂದಿಗೂ ಒಪ್ಪಲಾರೆವು. ಆಪತ್ತಿನ ಕಾಲದಲ್ಲಿ ಧಾರ್ಮಿಕವಾದ ಕಾರ್ಯಗಳಿಂದ ಮಾತ್ರ ನಮಗೊದಗಿರುವ ಕಷ್ಟವನ್ನು ನಿವಾರಿಸಿಕೊಳ್ಳಲು ಸಾಧ್ಯವಾದೀತು. ಅಧಾರ್ಮಿಕಪ್ರವೃತ್ತಿಯು ಕೊನೆಯಲ್ಲಿ ಪ್ರಪಂಚವನ್ನೇ ನಾಶಮಾಡುವುದು. ಆದುದರಿಂದ ಬ್ರಾಹ್ಮಣರನ್ನು ಕಚ್ಚಿ ಕೊಲ್ಲುವ ಸಲಹೆಯನ್ನು ನಾನು ಒಪ್ಪುವುದಿಲ್ಲ."

"ನಮಗೆ ಒದಗಿರುವ ಅಪಾಯವನ್ನು ನಿವಾರಿಸಿಕೊಳ್ಳಬೇಕಾದರೆ ಸಂಪೂರ್ಣವಾಗಿ ಧರ್ಮದ ಹಾದಿಯಲ್ಲಿಯೇ ಹೋಗಬೇಕೆಂದು ಪ್ರತಿಜ್ಞಾಬದ್ಧರಾಗಿರಲು ಸಾಧ್ಯವಿಲ್ಲ. ಒಂದುರೀತಿಯಲ್ಲಿ ಜನಮೇಜಯನು ಮಾಡುವ ಸರ್ಪಯಾಗಕ್ಕೆ ತಡೆಮಾಡಬೇಕೆನ್ನುವ ಯೋಚನೆಯೂ ಅಧಾರ್ಮಿಕವೇ ಅಲ್ಲವೇ? ಆದುದರಿಂದ ಒಂದು ವೇಳೆ ನಮ್ಮ ಸಹೋದರನ ಸಲಹೆಯಂತೆ

ಋತ್ವಿಕ್ಪುರೋಹಿತರುಗಳನ್ನು ಕೊಲೆಮಾಡದಿದ್ದರೂ ಬೇರೆ ಯಾವ ವಿಧ ದಿಂದಲಾದರೂ ಯಜ್ಞವನ್ನು ನಿಲ್ಲಿಸಿಯೇ ತೀರಬೇಕಲ್ಲವೇ? ನಾವುಗಳು ಮೇಘಸ್ವರೂಪವನ್ನು ತಾಳಿ ಜನಮೇಜಯನು ಮಾಡುವ ಸರ್ಪಯಾಗದ ಯಜ್ಞಕುಂಡದ ಮೇಲೆ ಅವಿಚ್ಛಿನ್ನವಾಗಿ ಮಳೆಗರೆದು ಅಗ್ನಿಯನ್ನು ಶಾಂತ ನನ್ನಾಗಿ



ಮಾಡಿಬಿಡೋಣ. ಆದರಿಂದ ಯಜ್ಞವು ಮುಂದುವರಿಯುವುದಿಲ್ಲ ವೆಂದು ನನ್ನ ಭಾವನೆ."

"ಇದಕ್ಕಿಂತಲೂ ಉತ್ತಮವಾದ ಸಲಹೆಯೊಂದನ್ನು ನಾನು ಕೊಡಲು ಇಚ್ಛಿಸುತ್ತೇನೆ. ರಾತ್ರಿಯ ವೇಳೆಯಲ್ಲಿ ಯಜ್ಞಶಾಲೆಯೊಳಗೆ ನುಸುಳಿ ಹೋಮಪಾತ್ರೆಯನ್ನೇ ಅಪಹರಿಸಿ ತಂದರೆ ಮುಂದೆ ಯಜ್ಞವು ಹೇಗೆ ತಾನೇ ನಡೆದೀತು?"

"ಸಾವಿರಾರು ಸರ್ಪಗಳು ಯಜ್ಞಶಾಲೆಯೊಳಗೆ ನುಗ್ಗಿ ಕಂಡ-ಕಂಡ

ಜನರನ್ನು ಕಚ್ಚಿ ಅವರು ದಿಕ್ಕಾಪಾಲಾಗಿ ಓಡುವಂತೆ ಮಾಡುವುದೇ ಯಜ್ಞವು ನಡೆಯದಂತೆ ಮಾಡಲು ಸೂಕ್ತವಾದ ಉಪಾಯವೆಂದು ನನಗೆ ತೋರುತ್ತದೆ."

"ಇಷ್ಟುಮಾತ್ರವಲ್ಲದೇ ಅಲ್ಲಿರುವ ಚರು, ಆಜ್ಯ, ಸ್ರುಕ್ಕು, ಸ್ರುವ–ಮುಂತಾದ ಪವಿತ್ರವಸ್ತುಗಳ ಮೇಲೆಲ್ಲಾ ಮೂತ್ರ-ಪುರೀಷೋತ್ಸರ್ಜನೆಗಳನ್ನು ಮಾಡಿ ಯಜ್ಞವು ಮುಂದುವರಿಯದಂತೆ ಮಾಡಿಬಿಡಬೇಕು."

"ಜನಮೇಜಯನ ಸರ್ಪಯಾಗಕ್ಕೆ ನಾವುಗಳೇ ಋತ್ವಿಜರ ವೇಷವನ್ನು ಧರಿಸಿ ಹೋಗಿಬಿಡೋಣ. ಪ್ರಾರಂಭದಲ್ಲಿ ಇಷ್ಟೇ ದಕ್ಷಿಣೆಯನ್ನು ಕೊಡಬೇಕೆಂದು ನಿರ್ಬಂಧಮಾಡೋಣ. ಕೊಡಲು ಸಾಧ್ಯವಾಗಲಾರದೆಂದರೆ 'ಯಾಗವನ್ನೇ ನಿಲ್ಲಿಸಿಬಿಡು' ಎನ್ನೋಣ."

"ನನ್ನ ಸಹೋದರರು ಕೊಟ್ಟಿರುವ ಎಲ್ಲ ಸಲಹೆಗಳಿಗಿಂತಲೂ ಉತ್ತಮವಾದುದೆಂದು ಭಾವಿಸಿ ನಾನೀ ಸಲಹೆಯನ್ನು ನಿಮ್ಮ ಮುಂದೆ ಇಡುತ್ತಿದ್ದೇನೆ. ರಾಜನು ಜಲಕ್ರೀಡೆಗಾಗಿ ಆಗಿಂದಾಗ್ಗೆ ಸರೋವರಕ್ಕೆ ಬರುತ್ತಿರುತ್ತಾನೆ. ಆ ಸಮಯದಲ್ಲಿ ನಮ್ಮಲ್ಲಿ ಬಲಿಷ್ಠರಾದ ನೂರಾರು ಸರ್ಪಗಳು ಹೋಗಿ ಅವನನ್ನು ಸುತ್ತಿ ಎತ್ತಿಕೊಂಡು ಬಂದುಬಿಡೋಣ. ರಾಜನೇ ಇಲ್ಲದೇ ಯಜ್ಞವು ಹೇಗೆ ತಾನೇ ನಡೆದೀತು?"

"ನಮ್ಮ ಅಗ್ರಜನು ಕೊಟ್ಟ ಸಲಹೆಯು ನಿಶ್ಚಯವಾಗಿಯೂ ಶ್ಲಾಘನೀಯವಾಗಿದೆ. ಆದರೆ ನಾವು ರಾಜನನ್ನು ಎತ್ತಿ ತರುವ ಕಾರಣವಿಲ್ಲ. ಅವನನ್ನು ಕಚ್ಚಿ ಕೊಂದುಹಾಕುವುದೇ ಲೇಸು. ಶತ್ರುವನ್ನು ಯಾವ ಕಾರಣದಿಂದಲೂ ಜೀವಸಹಿತವಾಗಿ ಉಳಿಸಿರಕೂಡದೆಂದು ತಜ್ಞರು ಅಭಿಪ್ರಾಯಪಡುತ್ತಾರೆ.

"ಚಕ್ಷುಃಶ್ರವಸನೇ! ನಾವು ನಮ್ಮ-ನಮ್ಮ ಸ್ವಭಾವಕ್ಕನುಗುಣವಾಗಿ ಇಷ್ಟು ವಿಧವಾಗಿ ಸಲಹೆಗಳನ್ನು ಕೊಟ್ಟಿರುತ್ತೇವೆ. ಈ ಸಲಹೆಗಳನ್ನು ಅಂಗೀಕರಿಸುವುದು ಅಥವಾ ತಿರಸ್ಕರಿಸುವುದು ನಿನಗೆ ಸೇರಿದ್ದಾಗಿದೆ. ನೀನು ಯಾವುದು ಸೂಕ್ತವೆಂದು ಭಾವಿಸುವೆಯೋ ಅದನ್ನು ಶೀಘ್ರವಾಗಿ ಸಾಧಿಸುವವನಾಗು."

ಹೀಗೆ ಹೇಳಿ ಸರ್ಪಶ್ರೇಷ್ಠರೆಲ್ಲರೂ ಪನ್ನಗೋತ್ತಮನಾದ ವಾಸುಕಿಯ

ಮುಖವನ್ನು ನೋಡುತ್ತಾ ಕುಳಿತರು. ವಾಸುಕಿಯೂ ಕ್ಷಣಕಾಲ ಯೋಚಿಸಿ ಹೇಳಿದನು :

"ಪ್ರಿಯಸಹೋದರರೇ! ನೀವು ಕೊಟ್ಟಿರುವ ಪ್ರತಿಯೊಂದು ಸಲಹೆಯೂ ಯುಕ್ತಿಯುಕ್ತವಾಗಿಯೇ ಇದೆ. ಆದರೆ ನಿಮ್ಮ ಸಲಹೆಗಳಲ್ಲಿ ಯಾವುದನ್ನೂ ಅಂಗೀಕರಿಸಲು ನನ್ನ ಮನಸ್ಸು ಒಡಂಬಡುತ್ತಿಲ್ಲ. ನಾವು ಕೈಗೊಳ್ಳುವ ಕಾರ್ಯದಿಂದ ನಮ್ಮೆಲ್ಲರಿಗೂ ಒದಗಿರುವ ಆಪತ್ತು ನಿವಾರಣೆಯಾಗಬೇಕು. ಇದರಲ್ಲಿ ನಮ್ಮ ತಂದೆಯಾದ ಕಶ್ಯಪರ ಆಶೀರ್ವಾದವೊಂದನ್ನುಳಿದು ಬೇರಾವ ಮಾರ್ಗವನ್ನೂ ಕಾಣದವನಾಗಿದ್ದೇನೆ. ನನ್ನ ಜ್ಞಾತಿ-ಬಾಂಧವರ ಶ್ರೇಯಸ್ಸಿನ ದೃಷ್ಟಿಯಿಂದಲೂ ಮತ್ತು ಸ್ವಹಿತದ ದೃಷ್ಟಿಯಿಂದಲೂ ವಿವೇಚಿಸಿದೆನಾದರೆ ನೀವುಗಳು ಹೇಳಿದುದರಲ್ಲಿ ಯಾವುದೊಂದನ್ನು ಮಾಡಲೂ ನನ್ನ ಬುದ್ಧಿಯು ಒಡಂಬಡುತ್ತಿಲ್ಲ. ನಿಮಗೆ ಹಿತವಾಗತಕ್ಕ ಕಾರ್ಯವನ್ನೇ ನಾನು ಮಾಡಬೇಕಾಗಿದೆ. ಒಂದು ವೇಳೆ ನಾನು ಅವಿವೇಕದಿಂದ ಕಾರ್ಯಮಾಡಿದರೆ ಅದರ ದೋಷಕ್ಕೆ ನಾನೇ ಪೂರ್ಣಭಾಗಿಯಾಗುವೆನು. ನಾನೀಗ ಹಿರಿಯವನಾಗಿರುವುದರಿಂದ ಗುಣ-ದೋಷಗಳು ನನ್ನನ್ನೇ ಆಶ್ರಯಿಸುವುವು"–ಎಂದು ಹೇಳಿ ವಾಸುಕಿಯು ಚಿಂತಾಮಗ್ನನಾಗಿ ಸಿಂಹಾಸನದಲ್ಲಿ ಕುಳಿತನು."

೩೦ನೆಯ ಅಧ್ಯಾಯವು ಮುಗಿಯಿತು.

೩೧ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ವಾಸುಕಿಯ ತಂಗಿಯಾದ ಜರತ್ಕಾರುವನ್ನು ಜರತ್ಕಾರು ಮಹರ್ಷಿಗೆ ಮದುವೆಮಾಡಿಕೊಡಲು ನಿಶ್ಚಯಿಸಿದುದು

ಸೌತಿಗಳು ಮುಂದುವರಿದು ಹೇಳುತ್ತಾರೆ :

"ಎಲ್ಲ ಸರ್ಪಗಳೂ ಕೊಟ್ಟ ಸಲಹೆಗಳನ್ನೂ, ವಾಸುಕಿಯು ಹೇಳಿದ ಹಿತವಚನಗಳನ್ನೂ ಕೇಳಿದನಂತರ ಏಲಾಪತ್ರನೆಂಬ ಹೆಸರಿನ ನಾಗಶ್ರೇಷ್ಠನು ಸರ್ಪಸಮೂಹದಿಂದ ಮೇಲೆದ್ದು– "ಮಹಾರಾಜ! ಕಟ್ಟಕಡೆಯದಾಗಿ ನಾನು ಕೆಲವು ಮಾತುಗಳನ್ನಾಡಲು ಅಪೇಕ್ಷಿಸುವೆನು"–ಎಂದು ಹೇಳಿ ವೇದಿಕೆಯ ಸಮೀಪಕ್ಕೆ ಬಂದು ಹೇಳತೊಡಗಿದನು :

"ಪ್ರಿಯಭ್ರಾತೃಗಳೇ! ಅಸಾಧಾರಣವಾದ ನಿಮ್ಮ ಯಾವುದೇ ಪ್ರಯತ್ನ ದಿಂದಲೂ ಸರ್ಪಯಾಗವನ್ನು ನಿಲ್ಲಿಸಲು ಸಾಧ್ಯವಾಗುವುದಿಲ್ಲ. ಯಜ್ಞದೀಕ್ಷೆ ಯನ್ನು ಕೈಗೊಳ್ಳಲಿರುವ ಪಾಂಡವವಂಶೋತ್ಪನ್ನನಾದ ಜನಮೇಜಯರಾಜ ನನ್ನು ಯಜ್ಞದ ದೀಕ್ಷೆಯನ್ನು ವಹಿಸದಂತೆ ಮಾಡಲು ಕೂಡ ಯಾರಿಂದಲೂ ಸಾಧ್ಯವಿಲ್ಲ. ಇಂದು ನಮಗೆ ದೈವಸಂಕಲ್ಪದಿಂದ ಒದಗಿಬಂದಿರುವ ವಿಪತ್ತು ದೈವಸಂಕಲ್ಪದಿಂದಲೇ ನಿವಾರಣೆಯಾಗಬೇಕೇ ಹೊರತು ನಮ್ಮ ಯುಕ್ತಾ ಯುಕ್ತವಿವೇಚನೆಗಳಿಂದ ಈ ವಿಪತ್ತನ್ನು ನಿವಾರಿಸಿಕೊಳ್ಳಲು ಸಾಧ್ಯವಿಲ್ಲ. ಆದರೆ ದೈವಸಂಕಲ್ಪದಿಂದ ನಮಗೊದಗಿರುವ ವಿಪತ್ತಿನ ನಿವಾರಣೆಗೆ ವಿಧಿನಿಯಮದಂತೆ ಬೇರಾವುದಾದರೂ ಉಪಾಯವಿದೆಯೇ ಎಂಬುದನ್ನು ನಾವಿಂದು ಯೋಚಿಸಬೇಕಾಗಿದೆ. ಈ ವಿಷಯದಲ್ಲಿ ನಾನು ಕೇಳಿರುವ ಒಂದೆ ರಡು ರಹಸ್ಯವಿಷಯಗಳನ್ನು ತಮ್ಮೊಡನೆ ಹೇಳುವೆನು. ತಾಯಿಯು ನಮ್ಮನ್ನು ಶಪಿಸಿದ ಕಾಲದಲ್ಲಿ ನಾನು ತಾಯಿಯ ಮಡಿಲಿನಲ್ಲಿಯೇ ಬಿದ್ದು ಹೊರ ಳಾಡುತ್ತಿದ್ದೆನು. ತಾಯಿಯು ನಮ್ಮನ್ನು ಶಪಿಸಿದೊಡನೆಯೇ ಪಿತಾಮಹನು 'ತಥಾಸ್ತು' ಎಂದಿದ್ದನ್ನು ಕೇಳಿ ದೇವತೆಗಳೆಲ್ಲರೂ ಆಶ್ಚರ್ಯಭರಿತರಾಗಿ– 'ಕಠಿನಹೃದಯಳಾದ ಕದ್ರುವು ತನ್ನ ಪ್ರೀತಿಯ ಮಕ್ಕಳನ್ನು ಶಪಿಸಿದ್ದಕ್ಕೆ ನಿನ್ನ ಒಪ್ಪಿಗೆಯೂ ಇದೆಯೇ?'–ಎಂದು ಕೇಳಿದರು. ಅದಕ್ಕೆ ಚತುರ್ಮುಖನು– 'ನನ್ನ ಇಚ್ಛೆಯಿಂದಲೇ ಕದ್ರುವಿನ ಬಾಯಲ್ಲಿ ಈ ಮಾತುಗಳು ಹೊರಟಿವೆ. ಕದ್ರುವಿನ ಸಾವಿರಾರು ಮಕ್ಕಳು ದುಷ್ಟರಾಗಿ, ತಮ್ಮಲ್ಲಿರುವ ವಿಷದಿಂದ ಮತ್ತರಾಗಿ ನನ್ನಿಂದ ಸೃಷ್ಟಿಸಲ್ಪಟ್ಟ ಸಾವಿರಾರು ಪ್ರಾಣಿಗಳನ್ನು ನಿಷ್ಕಾರಣವಾಗಿ ಕಚ್ಚಿ ಪ್ರತಿನಿತ್ಯವೂ ಯಮಾಲಯಕ್ಕೆ ಕಳುಹಿಸುತ್ತಿದ್ದಾರೆ. ಇವರು ಹೀಗೆಯೇ ಬೆಳೆಯುತ್ತಿದ್ದರೆ ಒಂದು ಪ್ರಾಣಿಯೂ ಪೃಥ್ವಿಯಲ್ಲಿ ಉಳಿಯಲಾರದು. ಈ ಕಾರಣದಿಂದ ಕದ್ರುವು ಕೊಟ್ಟ ಶಾಪವನ್ನು ನಾನು ಸಂಪೂರ್ಣವಾಗಿ ಸಮ್ಮತಿಸಿ ದ್ದೇನೆ. ಆದರೆ ಜನಮೇಜಯನ ಸರ್ಪಯಾಗದಲ್ಲಿ ಕದ್ರುವಿನ ಶಾಪದ ಕಾರಣ ದಿಂದ ಸರ್ಪಕುಲವೆಲ್ಲವೂ ವಿನಾಶಹೊಂದುವುದೆಂದು ಭಯಪಡಬೇಕಾಗಿಲ್ಲ. ದುಷ್ಟಸರ್ಪಗಳ ಸಮೂಹವು ಮಾತ್ರ ನಾಶಹೊಂದುವುದು. ಧರ್ಮಮಾರ್ಗವನ್ನವಲಂಬಿಸಿರುವ ಸರ್ಪಗಳಿಗೆ ಪ್ರಾಣಭಯವೆಂದಿಗೂ ಇರದು. ಯಾಯಾವರಕುಲದಲ್ಲಿ ಹುಟ್ಟಿದ ಜರತ್ಕಾರುಮಹರ್ಷಿಯಿಂದ

'ವಾಸುಕಿಯ ತಂಗಿಯಾದ ಜರತ್ಕಾರುವಿನ ಉದರದಲ್ಲಿ ಆಸ್ತೀಕನೆಂಬ ಮಹರ್ಷಿಯು ಜನಿಸಿ ಸರ್ಪಯಾಗವನ್ನು ನಿಲ್ಲಿಸುವನು. ಸರ್ಪಗಳನ್ನೂ ಶಾಪದಿಂದ ವಿಮೋಚನೆಗೊಳಿಸುವನು'–ಎಂದು ಹೇಳಿದನು. ಬ್ರಹ್ಮನ ಮಾತನ್ನು ಕೇಳಿದ ದೇವತೆಗಳು ಹಾಗೆಯೇ ಆಗಲೆಂದರು. ಬ್ರಹ್ಮನೂ ತನ್ನ ಲೋಕಕ್ಕೆ ಹೊರಟುಹೋದನು.

ಆದುದರಿಂದ ಇಂದು ನಾವು ನಮ್ಮ ಸಹೋದರಿಯ ವಿವಾಹಕ್ಕೆ ಸಿದ್ಧತೆಮಾಡೋಣ. ಯಾಯಾವರವಂಶದಲ್ಲಿ ಜನಿಸಿರುವ ಜರತ್ಕಾರುವು ವಾಸುಕಿಯ ಸೋದರಿಗೆ ಅನುರೂಪವರನೆಂದು ಬ್ರಹ್ಮನೇ ಹೇಳಿರುವನಾದ್ದರಿಂದ ನಾವು ಆ ವಿಷಯವಾಗಿಯೂ ಯೋಚಿಸಬೇಕಾದ ಕಾರಣವಿಲ್ಲ. ಆದುದರಿಂದ, ಸರ್ಪಶ್ರೇಷ್ಠನೇ! ಜರತ್ಕಾರುವೆಂದು ಖ್ಯಾತನಾಗಿರುವ, ಕನ್ಯಾಭಿಕ್ಷೆಯನ್ನು ಅಪೇಕ್ಷಿಸುವ, ಸುವ್ರತನಾದ ಮಹರ್ಷಿಗೆ ನಿನ್ನ ತಂಗಿಯನ್ನು ಕೊಟ್ಟು ವಿವಾಹಮಾಡುವುದರಿಂದ ಸರ್ಪಗಳ ಭಯವು ದೂರವಾಗುತ್ತದೆ. ಶಾಪವಿಮೋಕ್ಷಣದ ಈ ವಿಷಯವು ಹಿಂದೆ ನನ್ನಿಂದ ಕೇಳಲ್ಪಟ್ಟಿತ್ತು. ಅದನ್ನು ಯಥಾವತ್ತಾಗಿ ತಿಳಿಸಿದ್ದೇನೆ"–ಎಂದು ಹೇಳಿ ಏಲಾಪತ್ರನು ತನ್ನ ಸ್ಥಾನಕ್ಕೆ ಹೋಗಿ ಕುಳಿತನು."

ಖ೮ನೆಯ ಅಧ್ಯಾಯವು ಮುಗಿಯಿತು.

೩೯ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ವಾಸುಕಿಗೆ ಬ್ರಹ್ಮನ ಆಶ್ವಾಸನೆ

ಸೌತಿಗಳು ಮುಂದುವರಿದು ಹೇಳುತ್ತಾರೆ :

"ಶೌನಕರೇ! ಏಲಾಪತ್ರನ ಮಾತುಗಳನ್ನು ಕೇಳಿ ಎಲ್ಲ ಸರ್ಪಗಳಿಗೂ ಅತ್ಯಾನಂದವಾಯಿತು. ಎಲ್ಲರೂ ಏಲಾಪತ್ರನ ಮಾತನ್ನು 'ಸಾಧು-ಸಾಧು' ಎನ್ನುತ್ತಾ ಸ್ವಾಗತಿಸಿದರು. ವಾಸುಕಿಯೂ ಸಹ ಅವನ ಮಾತನ್ನು ಕೇಳಿ ಹರ್ಷಿತನಾದನು. ಅಲ್ಲಿಂದ ಮುಂದಕ್ಕೆ ತನ್ನ ತಂಗಿಯಾದ ಜರತ್ಕಾರುವನ್ನು ಆದರದಿಂದ ವಿಶೇಷವಾಗಿ ರಕ್ಷಿಸಿ ಪೋಷಣೆಮಾಡುತ್ತಿದ್ದನು.

ಅದಾದ ಸ್ವಲ್ಪಕಾಲಾನಂತರದಲ್ಲಿ ದೇವಾಸುರರು ಸಮುದ್ರವನ್ನು ಕಡೆದರು. ಆಗ ಮಹಾಬಲಿಷ್ಠನಾದ ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿ

ದೇವಾಸುರರು ಉಪಯೋಗಿಸಿಕೊಳ್ಳಬೇಕಾಯಿತು. ಸಮುದ್ರಮಥನವಾಗಿ ಅಭಿಲಷಿಸಿದ್ದ ಅಮೃತವನ್ನು ಪಡೆದನಂತರ ದೇವತೆಗಳು ವಾಸುಕಿಯಿಂದ ಸಮೇತರಾಗಿ ಚತುರ್ಮುಖನ ಸಮೀಪಕ್ಕೆ ಹೋಗಿ ಪ್ರಾರ್ಥಿಸಿದರು :

"ಪೂಜ್ಯನೇ! ಮಹಾಶಕ್ತಿಮಂತನಾದ ಈ ವಾಸುಕಿಯ ಸಹಾಯ ದಿಂದಾಗಿ ನಾವು ಮಂದರಪರ್ವತವನ್ನೇ ಕಡೆಗೋಲನ್ನಾಗಿಟ್ಟುಕೊಂಡು ಅಗಾಧವಾದ ಸಮುದ್ರವನ್ನು ಕಡೆಯಲು ಸಾಧ್ಯವಾಯಿತು. ಆದರೆ ಇವ ನಿಂದು ತಾಯಿಯ ಶಾಪದ ಕಾರಣದಿಂದಾಗಿ ಅಪರಿಮಿತವಾದ ದುಃಖಕ್ಕೊಳ ಗಾಗಿರುವನು. ತಾಯಿಯ ಶಾಪವೆಂಬುದು ಇವನ ಮನಸ್ಸಿನಲ್ಲಿ ಶಲ್ಯರೂಪ ವಾಗಿ ಅಹರ್ನಿಶಿ ಕಾಡುತ್ತಿದೆ. ಆ ಶಲ್ಯವನ್ನು ತೆಗೆದುಹಾಕಲು ನೀನೇ ಸಮರ್ಥನು. ಮೇಲಾಗಿ ಇವನು ನಮ್ಮ ವಿಷಯದಲ್ಲಿ ಯಾವಾಗಲೂ ಹಿತಕರನಾಗಿದ್ದಾನೆ. ಆದುದರಿಂದ ಇವನ ವಿಷಯದಲ್ಲಿ ಪ್ರಸನ್ನನಾಗಿ ಇವನ ಮನೋಗತವಾಗಿರುವ ಜ್ವರವನ್ನು ಹೋಗಲಾಡಿಸು. ದೇವೇಶ! ಇವನ ವಿಷಯದಲ್ಲಿ ಪ್ರಸನ್ನನಾಗು."

ಬ್ರಹ್ಮನು ಹೇಳುತ್ತಾನೆ :

"ದೇವತೆಗಳೇ! ಏಲಾಪತ್ರನ ಮೂಲಕವಾಗಿ ನನ್ನ ಸಂಕಲ್ಪವೇನೆಂಬು ದನ್ನು ನಾನು ಈಗಾಗಲೇ ವಾಸುಕಿಗೂ ಮತ್ತು ಅವನ ಅನುಯಾಯಿಗಳಿಗೂ ತಿಳಿಸಿಯೇ ಬಿಟ್ಟಿರುವೆನು. ನನ್ನ ಪ್ರೇರಣೆಯಿಂದಲೇ ಏಲಾಪತ್ರನು ಎಲ್ಲ ವಿಷಯಗಳನ್ನೂ ಹೇಳಿರುವನು. ಏಲಾಪತ್ರನು ಹೇಳಿರುವ ರೀತಿಯಲ್ಲಿ ವಾಸುಕಿಯು ತನ್ನ ತಂಗಿಯಾದ ಜರತ್ಕಾರುವನ್ನು ಜರತ್ಕಾರುಮಹರ್ಷಿಗೆ ಕೊಟ್ಟು ಮದುವೆಮಾಡಲಿ. ಜನಮೇಜಯನ ಸರ್ಪಯಾಗದಲ್ಲಿ ಸರ್ಪಗಳ ವಿನಾಶವು ನಿಶ್ಚಿತವಾಗಿದೆ, ಆದರೆ :

**ವಿನಶಿಷ್ಯನ್ತಿ ಯೇ ಪಾಪಾ ನ ತು ಯೇ ಧರ್ಮಚಾರಿಣಃ ॥೯॥**

ಯಾರು ಅತಿಯಾದ ಪಾಪಕರ್ಮಗಳನ್ನು ಮಾಡಿರುವರೋ–ಅವರು ಮಾತ್ರವೇ ಆ ಯಾಗದಲ್ಲಿ ವಿನಾಶಹೊಂದುತ್ತಾರೆ. ಧರ್ಮಚಾರಿಗಳಾದ ಸರ್ಪಗಳಿಗೆ ಎಂದಿಗೂ ಭಯವಿಲ್ಲ.

ಈಗಾಗಲೇ ಜರತ್ಕಾರುವು ಹುಟ್ಟಿ ಉಗ್ರವಾದ ತಪಸ್ಸಿನಲ್ಲಿ ನಿರತನಾಗಿ

ದ್ದಾನೆ. ವಾಸುಕಿಯು ತಂಗಿಯಾದ ಜರತ್ಕಾರುವನ್ನು ಅವನಿಗೇ ಕೊಟ್ಟು ಸಕಾಲದಲ್ಲಿ ವಿವಾಹಮಾಡಲಿ.

ಏಲಾಪತ್ರನು ಏನು ಹೇಳಿದನೋ ಅದು ಸರ್ಪಗಳಿಗೆಲ್ಲಾ ಅತ್ಯಂತ ಹಿತಕರವಾದ ಮಾತೇ ಆಗಿರುತ್ತದೆ. ಅದಕ್ಕೆ ವ್ಯತಿರಿಕ್ತವಾಗಿ ಯಾವುದೂ ನಡೆಯಲಾರದು."

ಶೌನಕರೇ! ಬ್ರಹ್ಮನ ಆ ಮಾತುಗಳನ್ನು ಕೇಳಿದನಂತರ ವಾಸುಕಿಯ ಮನಸ್ಸಿನಲ್ಲಿ ಯಾವ ವಿಧವಾದ ಸಂಶಯವೂ ಉಳಿಯಲಿಲ್ಲ. ತಾಯಿಯ ಶಾಪದಿಂದ ಬಹುಭೀತನಾಗಿದ್ದ ವಾಸುಕಿಯು ಜರತ್ಕಾರುಮಹರ್ಷಿಯನ್ನು ಹುಡುಕುವ ಸಲುವಾಗಿ ತನ್ನ ಅನುಯಾಯಿಗಳನ್ನು ಅನೇಕಸ್ಥಳಗಳಿಗೆ ಕಳುಹಿಸಿದನು.

"ಜರತ್ಕಾರುಮಹರ್ಷಿಯು ಯಾವ ಸಮಯದಲ್ಲಿ ಭಾರ್ಯೆಯನ್ನು ಅಪೇಕ್ಷಿಸುವನೋ ಆ ಕೂಡಲೇ ನೀವುಗಳು ಆ ವಾರ್ತೆಯನ್ನು ನನಗೆ ತಡ ಮಾಡದೇ ತಿಳಿಸಬೇಕು. ಅದರಿಂದ ನಮಗೆ ಶ್ರೇಯಸ್ಸು ಲಭಿಸುತ್ತದೆ"– ಎಂದು ಹೇಳಿ ಕಳುಹಿಸಿಕೊಟ್ಟನು."

೩೯ನೆಯ ಅಧ್ಯಾಯವು ಮುಗಿಯಿತು.

೪೦ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಜರತ್ಕಾರುವಿನ ತಪಸ್ಸು : ಪರೀಕ್ಷಿತನ ಉಪಾಖ್ಯಾನ : ಪರೀಕ್ಷಿತನು ಋಷಿಯ ಕೊರಳಿಗೆ ಸತ್ತಹಾವನ್ನು ಹಾಕಿದುದು : ಶೃಂಗಿಯ ಕೋಪ

ಶೌನಕರು ಪ್ರಶ್ನಿಸುತ್ತಾರೆ :

"ಸೌತಿಗಳೇ! ಜರತ್ಕಾರುವಿನ ವಿಷಯವಾಗಿ ನೀವು ಇದುವರೆಗೂ ಹೇಳಿದಿರಿ. ಮಹಾತ್ಮನಾದ ಆ ಮಹರ್ಷಿಯನ್ನು 'ಜರತ್ಕಾರು' ಎಂದೇಕೆ ಕರೆದರು? ಪ್ರಪಂಚದಲ್ಲವನು 'ಜರತ್ಕಾರು' ಎಂದೇಕೆ ಪ್ರಸಿದ್ಧಿಹೊಂದಿದನು? ಜರತ್ಕಾರುಪದದ ನಿರುಕ್ತಿಯನ್ನು ಯಥಾವತ್ತಾಗಿ ಹೇಳಿರಿ."

**ಜರೇತಿ ಕ್ಷಯಮಾಹುರ್ವೈ ದಾರುಣಂ ಕಾರುಸಂಜ್ಞಿತಮ್ ।**
**ಶರೀರಂ ಕಾರು ತಸ್ಯಾಸೀತ್ತತ್ಸ ಧೀಮಾಞ್ಛನೈಃ ಶನೈಃ ॥೩॥**

**ಕ್ಷಪಯಾಮಾಸ ತೀವ್ರೇಣ ತಪಸೇತ್ಯತ ಉಚ್ಯತೇ ।**
**ಜರತ್ಕಾರುರಿತಿ ಬ್ರಹ್ಮನ್ವಾಸುಕೇರ್ಭಗಿನೀ ತಥಾ ॥೪॥**

"ಶೌನಕರೇ! 'ಜರಾ' ಎಂಬ ಶಬ್ದವು ಕ್ಷಯಸೂಚಕವಾಗಿದೆ. 'ಕಾರು' ಎಂದರೆ ಸಹಿಸಲಸಾಧ್ಯವಾದಷ್ಟು ಸ್ಥೂಲವೆಂದರ್ಥ. ಅರ್ಥಾತ್ ಅವನ ಶರೀರವು ಬಹಳ ಸ್ಥೂಲವಾಗಿತ್ತು. ಅಂತಹ ಅತಿದಾರುಣವಾದ ಸ್ಥೂಲ ಶರೀರವನ್ನೂ ಅವನು ಕಠೋರವಾದ ತಪೋನುಷ್ಠಾನಗಳನ್ನು ಮಾಡಿ ಕ್ಷಯಿಸಿಬಿಟ್ಟನಾದ್ದರಿಂದ ಅವನಿಗೆ ಜರತ್ಕಾರುವೆಂಬ ಅನ್ವರ್ಥನಾಮವುಂಟಾಯಿತು. ಅಂತೆಯೇ ವಾಸುಕಿಯ ತಂಗಿಗೂ ಇದೇ ಕಾರಣದಿಂದಲೇ ಆ ಹೆಸರು ಬಂದಿತು."

ಸೌತಿಗಳ ಆ ಮಾತನ್ನು ಕೇಳಿದೊಡನೆಯೇ ಶೌನಕರು ಅನುರೂಪ ದಾಂಪತ್ಯಕ್ಕಾಗಿ ನಗುತ್ತಾ ಸೌತಿಗಳನ್ನು ಕುರಿತು ಹೇಳಿದರು :

"ಸೂತನಂದನನೇ! ಜರತ್ಕಾರುಮಹರ್ಷಿಯ ವಿಷಯವನ್ನು ಈ ಹಿಂದೆಯೇ ಅಲ್ಪ-ಸ್ವಲ್ಪ ನಿನ್ನಿಂದ ಕೇಳಿ ತಿಳಿದಿದ್ದೇವೆ. ಈಗ ನಾವು ತಿಳಿದು ಕೊಳ್ಳಬೇಕಾಗಿರುವುದು ಆಸ್ತೀಕನ ಜನ್ಮವೃತ್ತಾಂತ. ಅವನು ಹೇಗೆ ಹುಟ್ಟಿದನೆಂಬುದನ್ನು ಹೇಳು."

ಶೌನಕರ ಮಾತನ್ನು ಕೇಳಿ ಸೌತಿಗಳು ಪುರಾಣಶಾಸ್ತ್ರಾನುಸಾರವಾಗಿ ಕಥೆಯನ್ನು ಮುಂದುವರಿಸಿ ಹೇಳತೊಡಗಿದರು :

"ಶೌನಕರೇ! ನಾನು ಈ ಹಿಂದೆಯೇ ಹೇಳಿದಂತೆ ತನ್ನ ತಂಗಿಯನ್ನು ಮಹರ್ಷಿಗೆ ಕೊಟ್ಟು ಮದುವೆಮಾಡುವ ಸಲುವಾಗಿ ವಾಸುಕಿಯು ತನ್ನ ಅನುಯಾಯಿಗಳನ್ನು ಎಲ್ಲ ಕಡೆಗಳಿಗೂ ಕಳುಹಿಸಿಕೊಟ್ಟನು.

ಒಂದು ವೇಳೆ ಋಷಿಯು ಎಲ್ಲಿರುವನೆಂಬ ವಿಷಯವು ತಿಳಿದರೂ ಅವನು ಇಚ್ಛಿಸುವವರೆಗೂ ಅವನಿಗೆ ಹೆಣ್ಣುಕೊಟ್ಟು ಮದುವೆಮಾಡುವಂತಿರಲಿಲ್ಲ. ಬಹಳ ಕಾಲದವರೆಗೂ ಜರತ್ಕಾರುಮಹರ್ಷಿಗೆ ಮದುವೆಯಾಗುವ ಯೋಚನೆಯೇ ಬಂದಿರಲಿಲ್ಲ. ಕಠೋರವ್ರತನಿಷ್ಠನಾಗಿದ್ದ ಮಹರ್ಷಿಗೆ

ಮದುವೆಯೇ ಬೇಡವಾಗಿತ್ತು. ಅವನು ಊರ್ಧ್ವರೇತಸ್ಕನಾದ ಬ್ರಹ್ಮಚಾರಿ ಯಾಗಿದ್ದನು. ವೇದಾಧ್ಯಯನವನ್ನು ಮಾಡುತ್ತಿದ್ದನು. ಅವನಿಗೆ ಯಾವ ವಿಧವಾದ ಭಯವೂ ಇರಲಿಲ್ಲ. ಸಂತುಷ್ಟವಾದ ಅಂತರಂಗವುಳ್ಳವನಾಗಿ ದ್ದನು. ಸರ್ವದಾ ತೀರ್ಥಯಾತ್ರೆ-ಪುಣ್ಯಕ್ಷೇತ್ರದರ್ಶನಗಳಲ್ಲಿಯೇ ಆಸಕ್ತನಾಗಿ ದ್ದನು. 'ನಾನಿನ್ನೂ ಬ್ರಹ್ಮಚಾರಿಯಾಗಿಯೇ ಇದ್ದೇನೆ. ಅನುರೂಪಳಾದ ಕನ್ಯೆಯನ್ನು ಮದುವೆಯಾಗಿ ಗೃಹಸ್ಥನಾಗಬೇಕು'–ಎಂಬ ಮನಸ್ಸೂ ಅವನಿಗೆ ಯಾವಾಗಲೂ ಉಂಟಾಗಲೇ ಇಲ್ಲ.

ಶೌನಕರೇ! ಈ ಘಟನೆಗಳು ನಡೆದ ಬಹುಕಾಲದನಂತರ ಕೌರವ ವಂಶಜನಾದ ಪರೀಕ್ಷಿತನೆಂಬುವನು ಹಸ್ತಿನಾಪುರದಲ್ಲಿ ರಾಜ್ಯವಾಳುತ್ತಿದ್ದನು. ಪ್ರಪಿತಾಮಹನಾದ ಪಾಂಡುವಿನಂತೆ ಮಹಾಬಾಹುವಾದ ಪರೀಕ್ಷಿತನೂ ಯುದ್ಧದಲ್ಲಿ ಅಪ್ರತಿಮನಾಗಿಯೂ ಮತ್ತು ಬೇಟೆಯಾಡುವುದರಲ್ಲಿ ಹೆಚ್ಚಿನ ಆಸಕ್ತಿಯುಳ್ಳವನಾಗಿಯೂ ಇದ್ದನು. ಜಿಂಕೆಗಳನ್ನೂ, ಕಾಡುಹಂದಿಗಳನ್ನೂ, ಕಾಡೆಮ್ಮೆಗಳನ್ನೂ, ಇನ್ನೂ ಇತರ ಕಾಡುಮೃಗಗಳನ್ನೂ ಬೇಟೆಯಾಡುತ್ತಾ ಕಾಡಿನಲ್ಲಿ ತಿರುಗುವುದೇ ಅವನ ಸ್ವಾಭಾವಿಕವಾದ ಗುಣವಾಗಿದ್ದಿತು.

ಅವನೊಮ್ಮೆ ಒಂದು ಜಿಂಕೆಗೆ ಗುರಿಯಿಟ್ಟು ಹೊಡೆದನು. ಆದರೆ ಆ ಜಿಂಕೆಯು ಅಲ್ಲಿಯೇ ಸತ್ತುಬೀಳದೇ ನೆಟ್ಟಿದ್ದ ಬಾಣದೊಂದಿಗೆ ಓಡಿ ಹೋಯಿತು. ಬೇಟೆಯಾಡಿದ ಮೃಗವು ತಪ್ಪಿಸಿಕೊಂಡು ಹೋಯಿತೆಂಬ ಧಾವಂತದಿಂದ ಧನುಸ್ಸನ್ನು ಹೆಗಲಿಗೆ ಹಾಕಿಕೊಂಡು ಅದು ಓಡಿಹೋದ ಮಾರ್ಗವನ್ನೇ ಹಿಡಿದು ರಾಜನೂ ಹೊರಟನು. ಅವನು ಹೋಗುತ್ತಿದ್ದುದನ್ನು ನೋಡಿದರೆ–ಹಿಂದೊಮ್ಮೆ ದಕ್ಷಯಜ್ಞದಲ್ಲಿ ರುದ್ರದೇವನು ಯಜ್ಞ ಮೃಗವನ್ನಟ್ಟಿಕೊಂಡು ಹೋಗುತ್ತಿದ್ದುದರ ಸ್ಮರಣೆಯುಂಟಾಗುತ್ತಿದ್ದಿತು. ಅಂದಿನ ಇತಿಹಾಸದಲ್ಲಿ ಪರೀಕ್ಷಿತನ ಬಾಣದ ಆಘಾತಕ್ಕೆ ಸಿಕ್ಕಿ ತಪ್ಪಿಸಿಕೊಂಡು ಹೋದ ಪ್ರಾಣಿಯೇ ಇರಲಿಲ್ಲ. ಪರೀಕ್ಷಿತನು ತನ್ನ ಜೀವಮಾನಕಾಲದಲ್ಲಿ ಬೇಟೆಯಾಡಿದ ಸಾವಿರಾರು ಮೃಗಗಳೂ ಅವನ ಬಾಣಗಳು ಶಬ್ದಮಾಡುತ್ತಾ ಬರುತ್ತಿದ್ದಂತೆಯೇ ಪ್ರಾಣಗಳನ್ನು ತೊರೆಯುತ್ತಿದ್ದುವು. ಆದರೆ ಅಂದು ಮಾತ್ರ ಆ ಮೃಗವು ಬಾಣದ ಪೆಟ್ಟುಬಿದ್ದರೂ ಪರೀಕ್ಷಿತನನ್ನು ಸ್ವರ್ಗಕ್ಕೊಯ್ಯುತ್ತಿದೆಯೋ ಎಂಬಂತೆ (ಅವನ ಮರಣಸೂಚನೆಯೋ ಎಂಬಂತೆ) ಓಡೋಡುತ್ತಾ ರಾಜನನ್ನು ಬಹಳ ದೂರದವರೆಗೂ ಸೆಳೆದೊಯ್ದು ಅದೃಶ್ಯವಾಯಿತು.

ಜಿಂಕೆಯನ್ನು ಅಟ್ಟಿಸಿಕೊಂಡು ಹೋದ ಆಯಾಸದಿಂದ ರಾಜನು ಬಹಳವಾಗಿ ಬಳಲಿದ್ದನು. ಬಾಯಾರಿಕೆಯಿಂದ ನಾಲಿಗೆಯು ಒಣಗಿಹೋಗಿದ್ದಿತು. ಆ ಸ್ಥಿತಿಯಲ್ಲವನು ಶಮೀಕನೆಂಬ ಮಹರ್ಷಿಯ ಆಶ್ರಮದ ಬಳಿಗೆ ಬಂದನು. ಶಮೀಕಮಹರ್ಷಿಯಾದರೋ–ಕರುಗಳು ಹಸುಗಳ ಹಾಲು ಕುಡಿಯುತ್ತಿರುವಾಗ ಅವುಗಳ ಕಟಬಾಯಿಗಳಿಂದ ಹೊರಬರುತ್ತಿದ್ದ ಹಾಲಿನ ನೊರೆಯನ್ನೇ ಸೇವಿಸಿ ಜೀವಿಸುತ್ತಾ ತಪಶ್ಚರಣೆಮಾಡುತ್ತಿದ್ದನು. ರಾಜನು ಬಂದ ವೇಳೆಯಲ್ಲಿ ಶಮೀಕಮಹರ್ಷಿಯು ಪದ್ಮಾಸನದಲ್ಲಿ ಕುಳಿತಿದ್ದನು.

ಜಿಂಕೆಯು ತಪ್ಪಿಸಿಕೊಂಡು ಹೋಯಿತೆಂಬ ಉದ್ವೇಗದಿಂದ ಸ್ಥೈರಣೆಯನ್ನು ಕಳೆದುಕೊಂಡಿದ್ದ ರಾಜನು ಧನುಸ್ಸನ್ನು ಮೇಲೆತ್ತಿಕೊಂಡು ಕಠಿಣ ತಪೋನಿಷ್ಠನಾದ ಶಮೀಕಮಹರ್ಷಿಯನ್ನು "ಎಲೈ ಮಹರ್ಷಿಯೇ! ನಾನು ಅಭಿಮನ್ಯುವಿನ ಪುತ್ರನಾದ ಪರೀಕ್ಷಿತನೆಂಬ ರಾಜನಾಗಿದ್ದೇನೆ. ನಾನು ಬಾಣದಿಂದ ಪ್ರಹರಿಸಿದ ಜಿಂಕೆಯೊಂದು ತಪ್ಪಿಸಿಕೊಂಡು ಹೊರಟುಹೋಗಿರುವುದು. ನೀನೇನಾದರೂ ಆ ಮೃಗವನ್ನು ನೋಡಿದೆಯಾ?"–ಎಂದು ಕೇಳಿದನು. ಶಮೀಕನಂದು ಮೌನವ್ರತದಲ್ಲಿದ್ದ ಕಾರಣ ರಾಜನಿಗೆ ಯಾವ ಉತ್ತರವನ್ನೂ ಕೊಡಲಿಲ್ಲ. ರಾಜನಿಗೆ ಬಹಳವಾಗಿ ಕೋಪವುಂಟಾಯಿತು. ಹತ್ತಿರದಲ್ಲಿಯೇ ಇದ್ದ ಸತ್ತ ಹಾವೊಂದನ್ನು ಧನುಸ್ಸಿನ ತುದಿಯಿಂದ ಎತ್ತಿ ಮೌನಿಯಾಗಿ ಸುಖಾಸನದಲ್ಲಿ ಕುಳಿತಿದ್ದ ಶಮೀಕಮಹರ್ಷಿಯ ಕುತ್ತಿಗೆಗೆ ಹಾಕಿಬಿಟ್ಟನು. ಕುತ್ಸಿತವಾದ ಆ ಅಕಾರ್ಯವೂ ಶಮೀಕಮಹರ್ಷಿಯ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡಲಿಲ್ಲ. ಕುತ್ತಿಗೆಯಲ್ಲಿದ್ದ ಸತ್ತ ಹಾವನ್ನು ತೆಗೆದುಹಾಕುವ ಶ್ರಮವನ್ನೂ ತೆಗೆದುಕೊಳ್ಳದೇ ಯಥಾಪೂರ್ವವಾಗಿಯೇ ಶಮೀಕನು ಕುಳಿತಿದ್ದನು. ರಾಜನನ್ನುದ್ದೇಶಿಸಿ ಶುಭವಾದ ಅಥವಾ ಅಶುಭವಾದ ಮಾತುಗಳಾವುದನ್ನೂ ಆಡಲಿಲ್ಲ. ಮಹರ್ಷಿಯ ಆ ವಿಧವಾದ ಪ್ರತಿಕ್ರಿಯೆಯನ್ನು ಕಂಡು ರಾಜನ ಕೋಪವು ಇಳಿದುಹೋಯಿತು. ತಾನು ಮಾಡಿದ ಕುತ್ಸಿತಕಾರ್ಯಕ್ಕಾಗಿ ಪಶ್ಚಾತ್ತಾಪಪಡುತ್ತಾ ರಾಜಧಾನಿಗೆ ಹಿಂದಿರುಗಿದನು.

ಪರೀಕ್ಷಿತನು ಶಮೀಕಮಹರ್ಷಿಯ ವಿಷಯದಲ್ಲಿ ಅಕಾರ್ಯಮಾಡಿದ ನಾದರೂ ರಾಜನು ಸ್ವಧರ್ಮನಿರತನೆಂದು ಪ್ರಸಿದ್ಧನಾಗಿದ್ದನು. ಆ ಕಾರಣ ದಿಂದಲೇ ಕ್ಷಮಾಶೀಲನಾದ ಮಹಾಮುನಿಯಾದ ಶಮೀಕನು ಅವಮಾನಿತ ನಾದರೂ ರಾಜನಿಗೆ ಯಾವ ವಿಧವಾದ ಶಾಪವನ್ನೂ ಕೊಡಲು ಮನಸ್ಸು ಮಾಡಲಿಲ್ಲ. ಶಮೀಕನು ಧರ್ಮಪರಾಯಣನೆಂಬ ಮತ್ತು ಕಠಿನವ್ರತನಿಷ್ಠ ನೆಂಬ ವಿಷಯವು ರಾಜಶಾರ್ದೂಲನಾದ ಪರೀಕ್ಷಿತನಿಗೆ ತಿಳಿದಿರಲಿಲ್ಲವಾದು ದರಿಂದ ಯಃಕಶ್ಚಿತ್ ಮನುಷ್ಯನೆಂದು ಭಾವಿಸಿ ಶಮೀಕನಿಗೆ ಅವಮಾನ ಮಾಡಿದನು.

ಶಮೀಕನಿಗೆ ಶೃಂಗಿಯೆಂಬ ಮಗನಿದ್ದನು. ಅವನು ಮಹಾತೇಜಸ್ವಿಯು ಮತ್ತು ಮಹಾತಪಸ್ವಿಯು. ತಂದೆಯಂತೆಯೇ ವ್ರತನಿಷ್ಠನು. ಆದರೆ ಮಹಾಕೋಪಿಷ್ಠನೂ ಆಗಿದ್ದನು. ಅವನ ಕೋಪವು ವಿಷಸದೃಶವಾಗಿತ್ತು. (ಅವನನ್ನು ಪ್ರಸನ್ನಗೊಳಿಸುವುದು ತುಂಬಾ ಕಷ್ಟವಾಗಿತ್ತು. )

ಶೃಂಗಿಯು ಜಿತೇಂದ್ರಿಯನಾಗಿದ್ದುಕೊಂಡು, ಶ್ರೇಷ್ಠವಾದ ಆಸನದಲ್ಲಿ ಕುಳಿತಿರುವ, ಸರ್ವಪ್ರಾಣಿಗಳ ಹಿತದಲ್ಲಿಯೇ ಆಸಕ್ತನಾದ ಬ್ರಹ್ಮದೇವನ ಬಳಿಗೆ ಆಗಾಗ ಹೋಗಿ ಅವನ ಸೇವೆಮಾಡುತ್ತಿದ್ದನು.

ಅಂದು ಶೃಂಗಿಯು ಬ್ರಹ್ಮನಿಂದ ಅನುಮತಿಯನ್ನು ಪಡೆದು ಆಶ್ರಮಕ್ಕೆ ಹಿಂದಿರುಗುತ್ತಿದ್ದಾಗ ಅವನ ಗೆಳೆಯನಾದ ಕೃಶನು ಶೃಂಗಿಯ ತಂದೆಯಿರುವ ಸ್ಥಿತಿಯನ್ನು ವರ್ಣಿಸಿ ಹಾಸ್ಯಮಾಡಿ ನಕ್ಕನು. ಮಹಾಕೋಪಿಷ್ಠನಾದ, ವಿಷ ದಂತೆ ಕ್ರೂರನಾದ ಶೃಂಗಿಯು ಗೆಳೆಯನ ಮಾತನ್ನು ಕೇಳಿದೊಡನೆಯೇ ಕೋಪದಿಂದ ಉರಿದುಬಿದ್ದನು. ಕೃಶನು ಅಷ್ಟಕ್ಕೇ ಸುಮ್ಮನಿರಲಿಲ್ಲ. ಪುನಃ ಪುನಃ ರೇಗಿಸುತ್ತಿದ್ದನು:

**ತೇಜಸ್ವಿನಸ್ತವ ಪಿತಾ ತಥೈವ ಚ ತಪಸ್ವಿನಃ ।**
**ಶವಂ ಸ್ಕನ್ಧೇನ ವಹತಿ ಮಾ ಶೃಙ್ಗಿನ್ಗರ್ವಿತೋ ಭವ ॥೨೯॥**

“ಶೃಂಗಿಯೇ! ನೀನು ಮಹಾತೇಜಸ್ವಿಯು ಮತ್ತು ಮಹಾತಪಸ್ವಿಯು. ಆದರೆ ನಿನ್ನ ತಂದೆಯ ಅವಸ್ಥೆಯನ್ನಾದರೂ ನೋಡು. ಶವವನ್ನು ಕುತ್ತಿಗೆಯಲ್ಲಿ ತೂಗುಹಾಕಿಕೊಂಡಿದ್ದಾನೆ. ಇನ್ನಾದರೂ ನಿನ್ನ ದುರಹಂಕಾರ

ವನ್ನು ಬಿಟ್ಟುಬಿಡಪ್ಪಾ. ಇನ್ನುಮೇಲಾದರೂ ನಮ್ಮಂತಹ ಋಷಿಕುಮಾರರ ವಿಷಯದಲ್ಲಿ ತಾತ್ಸಾರವಾದ ಮಾತುಗಳನ್ನಾಡುವುದನ್ನು ನಿಲ್ಲಿಸು. ನಾವೂ ಸಿದ್ಧರೂ, ಬ್ರಹ್ಮವಿದರೂ, ತಪಸ್ವಿಗಳೂ ಆಗಿದ್ದೇವೆ. ಶೃಂಗಿಯೇ! ನಿನ್ನ ಆ ಪೌರುಷವೆಲ್ಲಿ ಹೋಯಿತು? ನಿನ್ನ ತಂದೆಯ ಹೆಗಲಿನ ಮೇಲೆ ಸತ್ತುಹೋದ ಹಾವನ್ನು ನೋಡಿದನಂತರವೂ ನಿನ್ನಲ್ಲಿ ಆ ದುರಭಿಮಾನವು ಇನ್ನೂ ಉಳಿಯಲು ಸಾಧ್ಯವಿದೆಯೆ? ಯಾರೂ ಯಾವಾಗಲೂ ಯಾವ ಕಾರಣದಿಂದಲೂ ದುರಹಂಕಾರಿಗಳಾಗಬಾರದು. ಕ್ಷಮಾಮೂರ್ತಿಯಾದ ನಿಮ್ಮ ತಂದೆಗೆ ಹೀಗಾಗಬಾರದಾಗಿತ್ತು. ನಿಮ್ಮ ತಂದೆಗಾಗಿರುವ ಅಪಮಾನವು ನನ್ನ ತಂದೆಗೇ ಆಗಿದೆಯೆಂಬಷ್ಟು ದುಃಖವು ನನಗುಂಟಾಗಿದೆ."

ಳ೦ನೆಯ ಅಧ್ಯಾಯವು ಮುಗಿಯಿತು.

ಳ೧ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಶೃಂಗಿಯು ಪರೀಕ್ಷಿತನಿಗೆ ಶಾಪವನ್ನಿತ್ತುದು : ಶೃಂಗಿಯ ಅನುಚಿತಕಾರ್ಯಕ್ಕಾಗಿ ಶಮೀಕನ ಖಂಡನೆ

ಸೌತಿಗಳು ಹೇಳುತ್ತಾರೆ :

**ಏವಮುಕ್ತಃ ಸ ತೇಜಸ್ವೀ ಶೃಙ್ಗೀ ಕೋಪಸಮನ್ವಿತಃ ।**
**ಮೃತಧಾರಂ ಗುರುಂ ಶ್ರುತ್ವಾ ಪರ್ಯತಪ್ಯತ ಮನ್ಯುನಾ ॥೧॥**

"ಶೌನಕರೇ! ತಂದೆಯ ಕೊರಳಿನಲ್ಲಿ ಸತ್ತ ಹಾವಿದೆಯೆಂಬ ವಾರ್ತೆಯನ್ನು ಮಿತ್ರನಾದ ಕೃಶನಿಂದ ಕೇಳಿ ಮಹಾತೇಜಸ್ವಿಯಾದ ಶೃಂಗಿಯು ಕೋಪದಿಂದ ಪರಿತಪಿಸಿದನು. ಆದರೆ ಕೃಶನೊಡನೆ ಸಮಾಧಾನದಿಂದಲೇ ಮಾತನಾಡುತ್ತಾ ಪ್ರಶ್ನಿಸಿದನು :

"ವಯಸ್ಯನೇ! ನನ್ನ ತಂದೆಯ ಕುತ್ತಿಗೆಯಲ್ಲಿ ಸತ್ತ ಹಾವು ಹೇಗೆ ಬಂದಿತು?"

"ಇಲ್ಲಿಗೆ ಪರೀಕ್ಷಿದ್ರಾಜನು ಬೇಟೆಯಾಡಲು ಬಂದಿದ್ದನು. ಅವನು ನಿನ್ನ ತಂದೆಯ ಕುತ್ತಿಗೆಗೆ ಸತ್ತ ಹಾವನ್ನು ಹಾಕಿದನು."

“ರಾಜಾ ಪರೀಕ್ಷಿತನು ನನ್ನ ತಂದೆಯ ಕೊರಳಿಗೆ ಸತ್ತ ಹಾವನ್ನು ಹಾಕಿದನೇ? ಆ ದುರಾತ್ಮನಿಗೆ ನನ್ನ ತಂದೆಯು ಮಾಡಿದ ಅಪರಾಧವಾದರೂ ಏನು? ಕೃಶನೇ! ನಡೆದ ಸಂಗತಿಯನ್ನು ಯಥಾವತ್ತಾಗಿ ಹೇಳು. ಅನಂತರ ತಪಸ್ಸಿನ ಪ್ರಭಾವವನ್ನಾದರೂ ನೋಡು.”

“ಅಭಿಮನ್ಯುವಿನ ಮಗನಾದ ಪರೀಕ್ಷಿತನು ಬೇಟೆಯಾಡಲು ಬಂದಿದ್ದನು. ಅವನ ಬಾಣಕ್ಕೆ ಗುರಿಯಾಗಿದ್ದ ಒಂದು ಜಿಂಕೆಯು ತಪ್ಪಿಸಿಕೊಂಡು ಓಡಿಹೋಗುತ್ತಿತ್ತು. ರಾಜನು ಆ ಜಿಂಕೆಯನ್ನು ಬೆನ್ನಟ್ಟಿ ಬರುತ್ತಿದ್ದನು. ಇದ್ದಕ್ಕಿದ್ದಂತೆಯೇ ಅದು ಅದೃಶ್ಯವಾಯಿತು. ಆ ವೇಳೆಗವನು ನಿಮ್ಮ ಆಶ್ರಮವನ್ನು ಸಮೀಪಿಸಿದ್ದನು. ಆಶ್ರಮದಲ್ಲಿದ್ದ ನಿನ್ನ ತಂದೆಯನ್ನು ‘ಮುನಿವರ್ಯನೇ! ನನ್ನ ಬಾಣದಿಂದ ಪ್ರಹೃತವಾದ ಜಿಂಕೆಯನ್ನು ಕಂಡೆಯಾ?’ ಎಂದು ಪ್ರಶ್ನಿಸಿದನು. ನಿನ್ನ ತಂದೆಯು ಸ್ಥಾಣುವಿನಂತಿದ್ದನೇ ಹೊರತು ಉತ್ತರವನ್ನೇನೂ ಕೊಡಲಿಲ್ಲ. ರಾಜನಾದರೋ ಮಾರ್ಗಾಯಾಸದಿಂದಲೂ, ಹಸಿವು-ಬಾಯಾರಿಕೆಗಳಿಂದಲೂ ಬಳಲಿ ಬೆಂಡಾಗಿ ಹೋಗಿದ್ದನು. ನಿಮ್ಮ ತಂದೆಯನ್ನು ಜಿಂಕೆಯ ವಿಷಯವಾಗಿ ಪುನಃ ಪುನಃ ರಾಜನು ಪ್ರಶ್ನಿಸಿದನು. ಮೌನವ್ರತದಲ್ಲಿದ್ದ ನಿನ್ನ ತಂದೆಯು ರಾಜನು ನಾಲ್ಕಾರು ಬಾರಿ ಪ್ರಶ್ನಿಸಿದರೂ ಉತ್ತರಿಸಲಿಲ್ಲ. ಆಗ ರಾಜನು ಹತ್ತಿರದಲ್ಲಿ ಸತ್ತುಬಿದ್ದಿದ್ದ ಹಾವೊಂದನ್ನು ಧನುಸ್ಸಿನ ತುದಿಯಿಂದ ಮೇಲೆತ್ತಿ ಅದನ್ನು ನಿನ್ನ ತಂದೆಯ ಕೊರಳಿಗೆ ಹಾಕಿ ಹೊರಟುಹೋದನು. ನಿಯತವಾದ ವ್ರತಾನುಷ್ಠಾನಪರನಾದ ನಿನ್ನ ತಂದೆಯು ಈಗಲೂ ಆ ಸರ್ಪವನ್ನೇ ಧರಿಸಿ ಅನುದ್ವಿಗ್ನನಾಗಿಯೇ ಕುಳಿತಿದ್ದಾನೆ.”

ಶೌನಕರೇ! ತಂದೆಯ ಕತ್ತಿನಲ್ಲಿ ಈಗಲೂ ಸತ್ತ ಹಾವಿದೆಯೆಂಬ ವಾರ್ತೆಯನ್ನು ಕೃಶನಿಂದ ಕೇಳಿದೊಡನೆಯೇ ಶೃಂಗಿಗೆ ಪುನಃ ಕೋಪವು ಉಲ್ಬಣಿಸಿತು. ಕಣ್ಣುಗಳು ಕೆಂಪಾದುವು. ಒಡನೆಯೇ ಕ್ರೋಧವಶನಾದ ಶೃಂಗಿಯು ಕಮಂಡಲುವಿನಲ್ಲಿದ್ದ ಶುದ್ಧೋದಕದಿಂದ ಆಚಮನಮಾಡಿ ಪರೀಕ್ಷಿತನನ್ನು ಶಪಿಸಿಬಿಟ್ಟನು :

“ರಾಜಕುಲಕಳಂಕನಾದ, ಕುರುಗಳ ವಂಶಕ್ಕೇ ಅಯಶಸ್ಕರನಾದ ಈ

ಪರೀಕ್ಷಿದ್ರಾಜನು–ವೃದ್ಧನಾದ, ಮೌನವ್ರತದಲ್ಲಿದ್ದ ನನ್ನ ತಂದಯ ಕುತ್ತಿಗೆಗೆ ಕಾರಣವಿಲ್ಲದೇ ಸತ್ತ ಸರ್ಪವನ್ನು ಹಾಕಿದನಲ್ಲವೇ? ಸಂಕ್ರುದ್ಧನಾದ, ತೀಕ್ಷ್ಣ ವಾದ ತೇಜಸ್ಸಿನಿಂದ ಕೂಡಿರುವ, ಪನ್ನಗೇಶ್ವರನಾದ, ವಿಷಧರನಾದ ತಕ್ಷಕನು ನನ್ನೀ ಶಾಪದಿಂದ ಚೋದಿತನಾಗಿ ಇಂದಿಗೆ ಏಳು ರಾತ್ರಿಗಳ ಅವಧಿಯಲ್ಲಿ ಆ ಪಾತಕಿಯನ್ನು, ಬ್ರಾಹ್ಮಣಾಪಮಾನಕನನ್ನು, ಕುರುವಂಶಕ್ಕೇ ಕಳಂಕಪ್ರಾಯ ನಾಗಿರುವವನನ್ನು ಕಚ್ಚಿ ಯಮಾಲಯಕ್ಕೆ ಕಳುಹಿಸಲಿ."

ಶೌನಕರೇ! ಸಂಕ್ರುದ್ಧನಾದ ಶೃಂಗಿಯು, ಹೀಗೆ ಶಾಪವಿತ್ತನಂತರ ಸತ್ತ ಹಾವನ್ನು ಕಂಠದಲ್ಲಿ ಧರಿಸಿ ಗೋಶಾಲೆಯಲ್ಲಿ ಕುಳಿತಿದ್ದ ತಂದೆಯ ಸಮೀಪಕ್ಕೆ ಹೋದನು.

ಸತ್ತ ಹಾವನ್ನು ತಂದೆಯ ಕುತ್ತಿಗೆಯಲ್ಲಿ ಪ್ರತ್ಯಕ್ಷವಾಗಿಯೇ ನೋಡಿದ ನಂತರ ಅವನ ಕೋಪವು ಮತ್ತೂ ಹೆಚ್ಚಿತು. ಕೋಪದಿಂದ ಆಗಬೇಕಾಗಿದ್ದ ಕಾರ್ಯವು ನಡೆದುಹೋಗಿದ್ದಿತು. ಮರುಕ್ಷಣದಲ್ಲಿಯೇ ಅದೇ ಕೋಪವು ದುಃಖಕ್ಕೆ ಪರಿವರ್ತನೆಹೊಂದಿತು. ಕಣ್ಣುಗಳಿಂದ ನೀರು ಸುರಿಸುತ್ತಾ ಶೃಂಗಿಯು ತಂದೆಯನ್ನು ಕುರಿತು ಹೇಳಿದನು :

"ಅಪ್ಪಾ! ದುರಾತ್ಮನಾದ ಪರೀಕ್ಷಿತನು ನಿನಗೆ ಮಾಡಿದ ಅಪರಾಧವನ್ನು ಕೃಶನಿಂದ ಕೇಳಿ ಆಗಲೇ ಅವನನ್ನು ನಾನು ಶಪಿಸಿಬಿಟ್ಟೆನು. ಆ ಕುರು ಕುಲಾಧಮನು ನನ್ನ ಉಗ್ರಶಾಪಕ್ಕೆ ಯೋಗ್ಯನಾಗಿಯೇ ಇರುವನು. ಅವನು ಮಾಡಿದ ಅಪರಾಧಕ್ಕೆ ಅನುಗುಣವಾದ ಶಾಪವನ್ನೇ ಕೊಟ್ಟಿದ್ದೇನೆ. ಇಂದಿಗೆ ಏಳು ರಾತ್ರಿಗಳ ಅಂತರದಲ್ಲಿ ನನ್ನ ಶಾಪದ ಪ್ರಭಾವದಿಂದ ಪನ್ನಗೋತ್ತಮ ನಾದ ತಕ್ಷಕನು ಪರೀಕ್ಷಿತನನ್ನು ಕಚ್ಚಿ ಪರಮದಾರುಣವಾದ ಯಮಾಲಯಕ್ಕೆ ಕಳುಹಿಸಿಬಿಡುತ್ತಾನೆ."

ಕ್ರೋಧಮೂರ್ಛಿತನಾಗಿದ್ದ ತನ್ನ ಮಗನಿಗೆ ಶಾಂತಮೂರ್ತಿಯಾದ ಶಮೀಕನು ಹೇಳಿದನು :

"ಮಗು! ರಾಜನಿಗೆ ಶಾಪವನ್ನಿತ್ತಿದ್ದು ನನಗೆ ಪ್ರಿಯವಾದ ಕಾರ್ಯವನ್ನು ಮಾಡಿದಂತಾಗಲಿಲ್ಲ. ಹೀಗೆ ಶಾಪಕೊಡುವುದು ತಪಸ್ವಿಗಳ ಧರ್ಮವೂ ಅಲ್ಲ. ನಾವೂ ಆ ನರೇಂದ್ರನ ರಾಜ್ಯದಲ್ಲಿ ವಾಸಮಾಡುತ್ತಿದ್ದೇವೆ. ಅವನಿಂದ

ನಾವು ರಕ್ಷಿತರಾಗಿದ್ದೇವೆ. ಅಂತಹವನಿಗೆ ಶಾಪಕೊಟ್ಟುದು ಸರ್ವಥಾ ಯುಕ್ತ ವಲ್ಲ. ಒಂದು ವೇಳೆ ರಾಜನು ಯಾವುದಾದರೂ ಕಾರಣದಿಂದ ಅಪರಾಧ ವನ್ನೆಸಗಿದರೂ ನಮ್ಮಂತಹವರು ಅವನನ್ನು ಕ್ಷಮಿಸಿಬಿಡಬೇಕು. ರಾಜನು ಧರ್ಮದ ಪರಿಪಾಲನೆಯನ್ನು ಮಾಡತಕ್ಕವನು. ರಾಜನ ವಿನಾಶದಿಂದ ಧರ್ಮವೇ ವಿನಾಶವಾಗುತ್ತದೆ. ರಾಜನು ಈ ಅರಣ್ಯದಲ್ಲಿರುವ ನಮ್ಮನ್ನೇ ನಾದರೂ ರಕ್ಷಿಸದಿದ್ದರೆ ನಮಗೆ ಖಂಡಿತವಾಗಿಯೂ ಪೀಡೆಯು ತಪ್ಪಿದ್ದಲ್ಲ. ನಾವು ಸುಖವಾಗಿ ಧರ್ಮಕಾರ್ಯಗಳನ್ನು ಮಾಡಲೂ ಸಮರ್ಥರಾಗು ವುದಿಲ್ಲ. ಧರ್ಮೈಕದೃಷ್ಟಿಯುಳ್ಳ ರಾಜರಿಂದ ರಕ್ಷಿಸಲ್ಪಡುವ ನಾವು ವಿಪುಲವಾದ ಧರ್ಮಕಾರ್ಯಗಳನ್ನು ಮಾಡುತ್ತೇವೆ. ನಾವು ಮಾಡುವ ಧರ್ಮದಲ್ಲಿ ರಾಜರಿಗೂ ಒಂದು ಭಾಗವು ಸಿಕ್ಕುತ್ತದೆ. ಆದುದರಿಂದ ಈಗ ನಮ್ಮ ರಾಜ ನಾದ ಪರೀಕ್ಷಿತನು ಯದ್ಯಪಿ ಅಪರಾಧವನ್ನೆಸಗಿದ್ದರೂ ಅವನನ್ನು ಕ್ಷಮಿಸು ವುದು ನಮ್ಮ ಮುಖ್ಯಕರ್ತವ್ಯವಾಗಿದ್ದಿತು. ಮೇಲಾಗಿ ಪರೀಕ್ಷಿತನು ತನ್ನ ಪ್ರಪಿತಾಮಹನಾದ ಪಾಂಡುವಿನಂತೆಯೇ ನಮ್ಮನ್ನು ರಕ್ಷಣೆಮಾಡುತ್ತಿದ್ದಾನೆ. ಒಬ್ಬ ರಾಜನು ಯಾವ-ಯಾವ ವಿಧದಲ್ಲಿ ಪ್ರಜೆಗಳಿಗೆ ಹೇಗೆ-ಹೇಗೆ ರಕ್ಷಣೆ ನೀಡಬೇಕೋ ಅದೇ ರೀತಿಯಲ್ಲಿ ಪರೀಕ್ಷಿತನೂ ತನ್ನ ಸಕಲಪ್ರಜೆಗಳನ್ನೂ ಸಂರಕ್ಷಿಸುತ್ತಿದ್ದಾನೆ. ಅವನು ಯಾವ ಸಮಯದಲ್ಲಿ ಅಪರಾಧಮಾಡಿದನೆಂಬು ದನ್ನೂ ನಾವಿಲ್ಲಿ ವಿವೇಚಿಸಬೇಕಾಗಿದೆ. ತಪಸ್ವಿಯಾದ ರಾಜನು ಹಸಿವು-ಬಾಯಾರಿಕೆಗಳಿಂದ ಬಹಳವಾಗಿ ಬಳಲಿಹೋಗಿದ್ದನು. ಎರಡನೆಯದಾಗಿ : ನಾನು ಮೌನವ್ರತದಲ್ಲಿರುವೆನೆಂಬ ವಿಷಯವು ಅವನಿಗೆ ತಿಳಿಯದೆಯೂ ಇದ್ದಿರಬಹುದು. ಅವನು ಮಾಡಿದ ಅಲ್ಪಾಪರಾಧಕ್ಕಾಗಿ ಅವನನ್ನೇ ಧ್ವಂಸ ಗೊಳಿಸಿಬಿಟ್ಟೆಯಲ್ಲವೇ, ಮಗು! ರಾಜನಿಲ್ಲದ ದೇಶವು ವಿನಾಗುವುದೆಂಬು ದನ್ನು ಬಲ್ಲೆಯಾ?

**ಅರಾಜಕೇ ಜನಪದೇ ದೋಷಾ ಜಾಯನ್ತಿ ವೈ ಸದಾ ।**
**ಉದ್ವೃತ್ತಂ ಸತತಂ ಲೋಕಂ ರಾಜಾ ದಣ್ಡೇನ ಶಾಸ್ತಿ ವೈ ॥೨೭॥**

ರಾಜನಿಲ್ಲದ ರಾಜ್ಯದಲ್ಲಿ ಅನೇಕವಿಧವಾದ ದೋಷಗಳು ಉಂಟಾಗು ತ್ತವೆ. ಧರ್ಮದ ಮರ್ಯಾದೆಯನ್ನೇ ಮೀರಿ ನಡೆಯುವ ಉದ್ಧತರಾದ

ಜನರನ್ನು ರಾಜನು ದಂಡವಿಧಿಸಿ ಶಿಕ್ಷಿಸುತ್ತಾನೆ. ರಾಜದಂಡದ ಭಯದಿಂದಾಗಿ ಉದ್ವೃತ್ತಜನರ ಉಪಟಳವು ಲೋಕದಲ್ಲಿ ಕಡಿಮೆಯಾಗುತ್ತದೆ.

**ದಣ್ಡಾತ್ಪ್ರತಿಭಯಂ ಭೂಯಃ ಶಾನ್ತಿರುತ್ಪದ್ಯತೇ ತದಾ ।**
**ನೋದ್ವಿಗ್ನಶ್ಚರತೇ ಧರ್ಮಂ ನೋದ್ವಿಗ್ನಶ್ಚರತೇ ಕ್ರಿಯಾಮ್ ॥೨೮॥**

ರಾಜ್ಯವ್ಯವಹಾರದಲ್ಲಿ 'ರಾಜದಂಡ ಅಥವಾ ಶಿಕ್ಷೆ' ಎಂಬುದೊಂದಿರುವುದರಿಂದಲೇ ಶಾಂತಿಸ್ಥಾಪನೆಯಾಗುತ್ತದೆ. ಚೋರರೇ ಮುಂತಾದವರ ಭಯದಿಂದ ಉದ್ವಿಗ್ನನಾದ ಮನುಷ್ಯನು ಯಾವ ರೀತಿಯ ಧರ್ಮಕಾರ್ಯವನ್ನೂ ಮಾಡಲಾಗುವುದಿಲ್ಲ. ಯಾವ ಕರ್ಮಗಳನ್ನು ಮಾಡಲೂ ಸಾಧ್ಯವಾಗುವುದಿಲ್ಲ. ರಾಜದಂಡವಿರುವುದರಿಂದಲೇ ಪ್ರಜೆಗಳೂ ಯಾವ ವಿಧವಾದ ಭಯವೂ ಇಲ್ಲದೇ ತಮ್ಮ-ತಮ್ಮ ಧರ್ಮಗಳನ್ನೂ ಮತ್ತು ಕೆಲಸಗಳನ್ನೂ ಮಾಡುತ್ತಾರೆ.

**ರಾಜ್ಞಾ ಪ್ರತಿಷ್ಠಿತೋ ಧರ್ಮೋ ಧರ್ಮಾತ್ಸ್ವರ್ಗಃ ಪ್ರತಿಷ್ಠಿತಃ ।**
**ರಾಜ್ಞೋ ಯಜ್ಞಕ್ರಿಯಾಃ ಸರ್ವಾ ಯಜ್ಞಾದ್ದೇವಾಃ ಪ್ರತಿಷ್ಠಿತಾಃ ॥೨೯॥**

ರಾಜನಿಂದ ಧರ್ಮದ ಸ್ಥಾಪನೆಯಾಗುತ್ತದೆ. ಧರ್ಮಮಾರ್ಗದಲ್ಲಿ ನಡೆಯುವುದರಿಂದ ಸ್ವರ್ಗಲೋಕದ ಪ್ರಾಪ್ತಿಯಾಗುತ್ತದೆ. ರಾಜನಿಂದಲೇ ಯಜ್ಞ-ಯಾಗಾದಿಗಳು ಮಾಡಲ್ಪಡುತ್ತವೆ ಮತ್ತು ರಕ್ಷಿಸಲ್ಪಡುತ್ತವೆ. ಯಜ್ಞ-ಯಾಗಾದಿಗಳಿಂದ ದೇವತೆಗಳು ಸುಪ್ರೀತರಾಗುತ್ತಾರೆ.

**ದೇವಾದ್ವೃಷ್ಟಿಃ ಪ್ರವರ್ತೇತ ವೃಷ್ಟೇರೋಷಧಯಃ ಸ್ಮೃತಾಃ ।**
**ಓಷಧಿಭ್ಯೋ ಮನುಷ್ಯಾಣಾಂ ಧಾರಯನ್ಸತತಂ ಹಿತಮ್ ॥೩೦॥**

**ಮನುಷ್ಯಾಣಾಂ ಚ ಯೋ ಧಾತಾ ರಾಜಾ ರಾಜ್ಯಕರಃ ಪುನಃ ।**
**ದಶಶ್ರೋತ್ರಿಯಸಮೋ ರಾಜಾ ಇತ್ಯೇವಂ ಮನುರಬ್ರವೀತ್ ॥೩೧॥**

ದೇವತೆಗಳು ಪ್ರಸನ್ನರಾಗಿ ಕಾಲ-ಕಾಲಗಳಲ್ಲಿ ಮಳೆಗರೆಯುತ್ತಾರೆ. ಮಳೆಯಿಂದ ಧಾನ್ಯಾದಿಗಳ ಸಮೃದ್ಧಿಯುಂಟಾಗುತ್ತದೆ. ಧಾನ್ಯಸಮೃದ್ಧಿಯಿಂದ ಪ್ರಜೆಗಳು ಸುಖವಾಗಿ ಜೀವನಮಾಡುತ್ತಾರೆ. ಆದುದರಿಂದ ಮನುಷ್ಯನ ಸುಖಕ್ಕೆ ರಾಜನೇ ಮೂಲಕಾರಣನಾಗುತ್ತಾನೆ. ಧರ್ಮದಿಂದ

ರಾಜ್ಯವಾಳುವ ರಾಜನೇ ಪ್ರಜೆಗಳಿಗೆ ಅದೃಷ್ಟದಾಯಕನಾಗುತ್ತಾನೆ. ಸುಖ-ಸಂಪತ್ತುಗಳ ಪ್ರಾಪ್ತಿಗೆ ಕಾರಣನಾಗುತ್ತಾನೆ. ಈ ಕಾರಣದಿಂದಲೇ ಮನುವು ರಾಜನನ್ನು ಹತ್ತು ಮಂದಿ ಶ್ರೋತ್ರಿಯರಿಗೆ ಸಮಾನನೆಂದು ಹೇಳಿದ್ದಾನೆ.

ಆದುದರಿಂದ ನೀನು ರಾಜನನ್ನು ಶಪಿಸಬಾರದಾಗಿತ್ತು. ಹಸಿವಿನಿಂದ ಬಳಲಿದ್ದ ಪರೀಕ್ಷಿತನು–ನಾನು ಮೌನವ್ರತವನ್ನಾಚರಿಸುತ್ತಿರುವೆನೆಂಬುದನ್ನು ತಿಳಿಯದೇ–ಅಪರಾಧವನ್ನೆಸಗಿಬಿಟ್ಟನು. ಅವನ ಅಕಾರ್ಯವನ್ನು ಕ್ಷಮಿಸುವುದು ನಮ್ಮಂತಹ ತಪಸ್ವಿಗಳ ಧರ್ಮವಾಗಿತ್ತು. ನೀನು ಸ್ವಲ್ಪವಾದರೂ ವಿವೇಚಿಸಲಿಲ್ಲ. ಕೇವಲ ಹುಡುಗುತನದಿಂದ ಇಂತಹ ದುಷ್ಕಾರ್ಯವನ್ನು ಮಾಡಿಬಿಟ್ಟಿರುವೆ. ನಮ್ಮಂತಹವರಿಂದ ಅವನು ಶಪ್ತನಾಗಬಾರದಾಗಿತ್ತು."

ಳ೧ನೆಯ ಅಧ್ಯಾಯವು ಮುಗಿಯಿತು.

ಳ೨ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಶಮೀಕನು ಮಗನಿಗೆ ಸಮಾಧಾನಹೇಳಿದುದು : ಗೌರಮುಖನ ಮೂಲಕ ಪರೀಕ್ಷಿತನಿಗೆ ಶಾಪದ ವಾರ್ತೆಯನ್ನು ಹೇಳಿ ಕಳುಹಿಸಿದುದು : ರಾಜನಿಂದ ಆತ್ಮರಕ್ಷಣೆಯ ವ್ಯವಸ್ಥೆ: ತಕ್ಷಕ ಮತ್ತು ಕಾಶ್ಯಪರ ಸಂಭಾಷಣೆ

ತಂದೆಯ ಮಾತನ್ನು ಕೇಳಿ ಶೃಂಗಿಯು ಹೇಳುತ್ತಾನೆ :

"ಅಪ್ಪ! ನಾನು ದುಡುಕಿ ಒಳ್ಳೆಯ ಕಾರ್ಯವನ್ನು ಮಾಡಿದೆನೋ ಅಥವಾ ದುಷ್ಕಾರ್ಯವನ್ನು ಮಾಡಿದೆನೋ–ಅದು ನನಗೆ ತಿಳಿಯದು. ನಾನು ಮಾಡಿದ ಕಾರ್ಯವು ನಿನಗೆ ಪ್ರಿಯವಾಗಿಯಾದರೂ ಇರಲಿ ; ಅಪ್ರಿಯವಾಗಿಯಾದರೂ ಇರಲಿ–ನಾನು ಹೇಳಿರುವ ಮಾತು ಮಾತ್ರ ಸುಳ್ಳಾಗುವಂತಿಲ್ಲ. ನಾನು ನಿನಗೆ ನಿಶ್ಚಯವಾಗಿ ಹೇಳುತ್ತೇನೆ. ನಾನು ಹೇಳಿದಂತೆ ನಡೆದೇ ತೀರುತ್ತದೆ. ನಿನಗೆ ತಿಳಿದಿರುವಂತೆ ನಾನು ಪರಿಹಾಸಕ್ಕಾದರೂ ಸುಳ್ಳಾಡಿದವನಲ್ಲ. ಹೀಗಿರುವಾಗ ನಾನು ಕೊಟ್ಟ ಶಾಪವು ಸುಳ್ಳಾಗುವುದಾದರೂ ಎಂತು?"

"ಮಗು! ನಿನ್ನ ತಪಸ್ಸಿನ ಉಗ್ರತೆಯೆಷ್ಟೆಂಬುದನ್ನೂ ನಾನು ತಿಳಿದಿರುವೆನು. ನೀನು ಸತ್ಯವಾದಿಯೆಂಬುದನ್ನೂ ಅರಿತಿರುವೆನು. ನೀನು ಈ

ಹಿಂದೆಯೂ ಯಾವಾಗಲೂ ಸುಳ್ಳಾಡಿದವನಲ್ಲ. ಆದುದರಿಂದ ನೀನು ಕೊಟ್ಟ ಶಾಪವೆಂದಿಗೂ ಸುಳ್ಳಾಗಲಾರದು. ಆದರೆ ನಿನಗೆ ಸಮಯಗಳಲ್ಲಿ ಹಿತೋಪದೇಶಮಾಡುವುದು ನನ್ನ ಮುಖ್ಯಕರ್ತವ್ಯ. ಅಂತೆಯೇ ನಾನು ಹೇಳಿದಂತೆ ನಡೆಯುವುದೂ ನಿನ್ನ ಧರ್ಮ.

**ಪಿತ್ರಾ ಪುತ್ರೋ ವಯಃಸ್ಥೋಽಪಿ ಸತತಂ ವಾಚ್ಯ ಏವ ತು ।**
**ಯಥಾ ಸ್ಯಾದ್ಗುಣಸಂಯುಕ್ತಃ ಪ್ರಾಪ್ನುಯಾಚ್ಚ ಮಹದ್ಯಶಃ ॥೪॥**

ಮಗನು ವಯಸ್ಕನಾಗಿದ್ದರೂ ತಂದೆಯಾದವನು ಮಗನಿಗೆ ಬುದ್ಧಿಯನ್ನು ಹೇಳುತ್ತಲೇ ಇರಬೇಕು. ಪುತ್ರನು ಗುಣಸಂಪನ್ನನಾಗುವಂತೆಯೂ, ಯಶೋವಂತನಾಗುವಂತೆಯೂ ಬುದ್ಧಿಯನ್ನು ಹೇಳುತ್ತಿರಬೇಕು.

**ಕಿಂ ಪುನರ್ಬಾಲ ಏವ ತ್ವಂ ತಪಸಾ ಭಾವಿತಃ ಸದಾ ।**
**ವರ್ಧತೇ ಚ ಪ್ರಭವತಾಂ ಕೋಪೋಽತೀವ ಮಹಾತ್ಮನಾಮ್ ॥೫॥**

ಹೀಗಿರುವಾಗ ನೀನಿನ್ನೂ ಬಾಲಕನು. ಯಾವಾಗಲೂ ತಪಶ್ಚರಣೆಯಲ್ಲಿಯೇ ನಿರತನಾಗಿರುವವನು. ತಪಶ್ಚರಣೆಯಿಂದ ನೀನು ಆರ್ಜಿಸಿರುವ ಫಲದ ವಿಷಯವಾಗಿಯೂ ನಿನಗೇನೂ ತಿಳಿಯದು. ಕೋಪದ ಕಾರಣದಿಂದ ರಾಜನಿಗೆ ಶಾಪಕೊಟ್ಟುದಕ್ಕಾಗಿ ನಿನ್ನ ತಪಃಶಕ್ತಿಯು ಎಷ್ಟು ವ್ಯರ್ಥವಾಯಿತೆಂಬುದರ ಅರಿವೂ ನಿನಗಿಲ್ಲ.

ಮಹಾತ್ಮರೇ ಆದರೂ ತಪಃಶಕ್ತಿಯು ಹೆಚ್ಚಿದಂತೆಲ್ಲಾ ಕೋಪವೂ ಹೆಚ್ಚಾಗುತ್ತದೆ. ಮಹಾತ್ಮರೂ ಕೋಪವನ್ನು ತಡೆದುಕೊಳ್ಳಲು ಅಸಮರ್ಥರಾಗುತ್ತಾರೆ. ಹೀಗಿರುವಾಗ ನಿನ್ನ ವಿಷಯದಲ್ಲಿ ಹೇಳುವುದೇನಿದೆ? ಸ್ವಭಾವತಃ ಬಂದ ಕೋಪದಿಂದ ನೀನು ರಾಜನನ್ನು ಶಪಿಸಿಬಿಟ್ಟಿರುವೆ. ಆದರೆ ತಪಸ್ವಿಗಳೆಂದಿಗೂ ಕೋಪಕ್ಕೆ ಆಶ್ರಯವನ್ನು ನೀಡಬಾರದು. ನೀನು ನನಗೆ ಪುತ್ರನಾಗಿರುವುದರಿಂದಲೂ ಮತ್ತು ಇನ್ನೂ ಬಾಲಕನಾಗಿರುವುದರಿಂದಲೂ ವಿಷಯವನ್ನು ನಾನು ನಿನಗೆ ಹೇಳಲೇಬೇಕಾಗಿದೆ. ನಿನ್ನ ಶ್ರೇಯಸ್ಸಿಗಾಗಿ ನಾನಿದನ್ನು ಹೇಳುತ್ತಿದ್ದೇನೆ. ನೀನು ಈ ಕೋಪವನ್ನು ಮೊದಲು ತ್ಯಜಿಸಬೇಕು. ಇಂದ್ರಿಯಗಳನ್ನು ನಿಗ್ರಹಮಾಡಿ ಅರಣ್ಯದಲ್ಲಿ ಸಿಕ್ಕುವ ಗೆಡ್ಡೆ-ಗೆಣಸುಗಳನ್ನೇ ತಿನ್ನುತ್ತಾ ತಪಸ್ಸನ್ನು ಮಾಡಬೇಕು. ನೀನು ಕೋಪವನ್ನು ನಿಗ್ರಹಿಸಿದರೆ ನಿನ್ನಲ್ಲಿರುವ ಧರ್ಮಕ್ಕೆ ಹಾನಿಯಾಗುವುದಿಲ್ಲ.

ಯತಿಗಳು ಬಹಳ ಕಷ್ಟದಿಂದ ಆರ್ಜಿಸಿದ ಧರ್ಮವನ್ನು–ಅವರಿಗೆ ಯಾವುದೋ ಸಮಯದಲ್ಲಿ ಯಾವುದೋ ಕಾರಣದಿಂದ ಬರುವ ಕೋಪವು–ಕ್ಷಣಮಾತ್ರದಲ್ಲಿ ಧ್ವಂಸಮಾಡಿಬಿಡುತ್ತದೆ. ಕ್ರೋಧವಶರಾಗಿ ಧರ್ಮಹೀನರಾದವರಿಗೆ ಅಭೀಷ್ಟವಾದ ಸದ್ಗತಿಯು ಖಂಡಿತವಾಗಿಯೂ ಸಿಕ್ಕುವುದಿಲ್ಲ.

ಕ್ಷಮಾಶೀಲರಾದ ಯತಿಗಳಿಗೆ ಮನೋನಿಗ್ರಹವು ಸರ್ವಸಿದ್ಧಿಕಾರಕ ವಾಗುತ್ತದೆ. ಕ್ಷಮಾವಂತರಾದವರಿಗೆ ಇಹದಲ್ಲಿಯೂ ಸುಖವಿದೆ ; ಪರ ದಲ್ಲಿಯೂ ಸುಖವಿದೆ.

**ತಸ್ಮಾಚ್ಚರೇಥಾಃ ಸತತಂ ಕ್ಷಮಾಶೀಲೋ ಜಿತೇನ್ದ್ರಿಯಃ ।**
**ಕ್ಷಮಯಾ ಪ್ರಾಪ್ಸ್ಯಸೇ ಲೋಕಾನ್ಬ್ರಹ್ಮಣಃ ಸಮನನ್ತರಾನ್ ॥೧೦॥**

ಮಗು! ಆದುದರಿಂದ ನೀನು ಯಾವಾಗಲೂ ಕ್ಷಮಾವಂತನಾಗಿಯೂ ಜಿತೇಂದ್ರಿಯನಾಗಿಯೂ ಇರಬೇಕು. ಕ್ಷಮಾಗುಣದಿಂದ ನೀನು ಬ್ರಹ್ಮಲೋಕ ಪರ್ಯಂತವಾದ ಸಕಲಲೋಕಗಳನ್ನೂ ಜಯಿಸಬಹುದಾಗಿದೆ.

ನಾನಾದರೋ ಕ್ಷಮಾಗುಣವನ್ನೇ ಪ್ರಧಾನವನ್ನಾಗಿಟ್ಟುಕೊಂಡು ಈ ಸಮಯದಲ್ಲಿ ರಾಜನ ಹಿತಕ್ಕಾಗಿ ಏನು ಮಾಡಲು ಸಾಧ್ಯವಿದೆಯೋ ಅಷ್ಟನ್ನೂ ಮಾಡುತ್ತೇನೆ–'ಮಹಾರಾಜ! ನೀನು ನನಗೆ ಮಾಡಿದ ಅಪಮಾನವನ್ನು ಸಹಿಸಲಾಗದೇ ಬಾಲನಾದ, ಅಲ್ಪಬುದ್ಧಿಯವನಾದ ನನ್ನ ಮಗನು ನಿನಗೆ ಶಾಪವನ್ನಿತ್ತಿದ್ದಾನೆ'–ಎಂದು ರಾಜನಿಗೆ ನಾನೀಗಲೇ ಹೇಳಿಕಳುಹಿಸುತ್ತೇನೆ."

ಶೌನಕರೇ! ದಯಾಮಯನಾದ, ಮಹಾತಪಸ್ವಿಯಾದ ಶಮೀಕನು ಹೀಗೆ ಮಗನೊಡನೆ ಹೇಳಿ ಶೀಲವಂತನಾದ ಗೌರಮುಖನೆಂಬ ಶಿಷ್ಯನನ್ನು ಕರೆದು ಕುಶಲಪ್ರಶ್ನೆಯ ಪುರಸ್ಸರವಾಗಿ ಶಾಪದ ವೃತ್ತಾಂತವನ್ನು ಪರೀಕ್ಷಿತನಿಗೆ ಹೇಳಿಬರಲು ಕಳುಹಿಸಿಕೊಟ್ಟನು.

ಶಮೀಕನ ನಿರ್ದೇಶದಂತೆ ಗೌರಮುಖನು ಶೀಘ್ರವಾಗಿ ಹಸ್ತಿನಾ ಪಟ್ಟಣಕ್ಕೆ ಪ್ರಯಾಣಮಾಡಿ ಅರಮನೆಯ ದ್ವಾರಪಾಲಕರ ಮೂಲಕವಾಗಿ ತಾನು ಬಂದಿರುವ ವಾರ್ತೆಯನ್ನು ರಾಜನಿಗೆ ತಿಳಿಯಪಡಿಸಿ, ರಾಜನ ಅನು ಮತಿಯನ್ನು ಪಡೆದು ಅರಮನೆಯೊಳಗೆ ಪ್ರವೇಶಮಾಡಿದನು. ಆಗಮಿಸಿದ ಋಷಿಕುಮಾರನನ್ನು ಪರೀಕ್ಷಿತನು ಯಥೋಚಿತವಾಗಿ ಸತ್ಕರಿಸಿ ಸುಖಾಸನದಲ್ಲಿ

ಕುಳ್ಳಿರಿಸಿದನು. ಶಮೀಕನ ನಿರ್ದೇಶದಂತೆ ಗೌರಮುಖನು ಮೊದಲು ರಾಜನ ಕುಶಲಪ್ರಶ್ನೆಗಳನ್ನು ಮಾಡಿದ ಅನಂತರದಲ್ಲಿ ಶಮೀಕನು ಹೇಳಿಕಳುಹಿಸಿದ್ದ ಅತಿಘೋರವಾದ ವಾರ್ತೆಯನ್ನು ಮಂತ್ರಿಗಳ ಸಮ್ಮುಖದಲ್ಲಿ ರಾಜನಿಗೆ ತಿಳಿಯಪಡಿಸಿದನು :

"ಮಹಾರಾಜ! ನಿನ್ನ ರಾಜ್ಯದ ಅರಣ್ಯವೊಂದರಲ್ಲಿ ಶಾಂತನಾದ, ಪರಮಧಾರ್ಮಿಕನಾದ ಶಮೀಕನೆಂಬ ಮಹರ್ಷಿಯಿದ್ದಾನೆ. ನೀನು ಸತ್ತ ಸರ್ಪವೊಂದನ್ನು ಧನುಸ್ಸಿನ ತುದಿಯಿಂದ ಎತ್ತಿ ಮೌನವ್ರತಾನುಷ್ಠಾನದಲ್ಲಿದ್ದ ಆ ಮಹರ್ಷಿಯ ಕುತ್ತಿಗೆಗೆ ಹಾಕಿದೆ. ನಿನ್ನ ಆ ಅಕಾರ್ಯವನ್ನು ಶಮೀಕನೇನೋ ಕ್ಷಮಿಸಿಬಿಟ್ಟನು. ಆದರೆ ಅವನ ಮಗನು ಮಾತ್ರ ತನ್ನ ತಂದೆಗಾದ ಅಪಮಾನವನ್ನು ಕ್ಷಮಿಸಲಿಲ್ಲ. ತಂದೆಗೆ ತಿಳಿಯದಂತೆಯೇ ಅವನು ನಿನ್ನನ್ನು ಶಪಿಸಿಬಿಟ್ಟನು. ಅವನ ಶಾಪದ ಕಾರಣದಿಂದಾಗಿ ತಕ್ಷಕನು ಏಳು ರಾತ್ರಿಗಳೊಳಗಾಗಿ ನಿನಗೆ ಮೃತ್ಯುವಾಗುತ್ತಾನೆ. ಆದುದರಿಂದ ಈಗಿನಿಂದಲೇ ನಿನ್ನ ರಕ್ಷಣೆಮಾಡಿಕೊಳ್ಳುವುದು ಉಚಿತವಾಗಿದೆ. ಮಹಾರಾಜ! ಈ ಮಾತನ್ನು ಶಮೀಕಮಹರ್ಷಿಯು ಪುನಃ ಪುನಃ ಒತ್ತಿ ಹೇಳಿದ್ದಾನೆ. ಈ ಸಮಯದಲ್ಲಿ ನಿನ್ನ ರಕ್ಷಣೆಯನ್ನು ನೀನೇ ಮಾಡಿಕೊಳ್ಳಬೇಕಾಗಿರುವುದೇ ಹೊರತು ಬೇರೊಬ್ಬರಿಂದ ಏನು ಮಾಡಲೂ ಸಾಧ್ಯವಿಲ್ಲ. ಕೋಪಸಮನ್ವಿತನಾದ ತನ್ನ ಮಗನನ್ನು ಸಮಾಧಾನಮಾಡಲೂ ಕೂಡ ಶಮೀಕನಿಗೆ ಸಾಧ್ಯವಾಗಲಿಲ್ಲ. ಆದುದರಿಂದ ಶಮೀಕನು ನಿನ್ನ ಹಿತಾರ್ಥವಾಗಿ ನನ್ನನ್ನು ನಿನ್ನ ಸಮೀಪಕ್ಕೆ ಕಳುಹಿಸಿದ್ದಾನೆ."

ಶೌನಕರೇ! ಕುರುನಂದನನಾದ, ಮಹಾತಪಸ್ವಿಯಾದ ರಾಜನು ಘೋರವಾದ ಆ ಮಾತುಗಳನ್ನು ಕೇಳಿ, ಶಮೀಕನ ವಿಷಯದಲ್ಲಿ ತಾನು ಮಾಡಿದ ಮಹಾಪರಾಧಕ್ಕಾಗಿ ಪರಿತಪಿಸಿದನು. ತಾನು ಸಂಧಿಸಿದ ಸಮಯ ದಲ್ಲಿ ಶಮೀಕನು ಮೌನವ್ರತನಿಷ್ಠನಾಗಿದ್ದನೆಂಬ ವಾರ್ತೆಯನ್ನು ಗೌರಮುಖನ ಮೂಲಕವಾಗಿ ಕೇಳಿದನಂತರ ಅವನ ಶೋಕ-ಸಂತಾಪಗಳು ಮತ್ತೂ ಹೆಚ್ಚಿ ದುವು. ತಾನು ಅಪರಾಧವನ್ನೆಸಗಿದ್ದರೂ ಕ್ಷಮಾವಂತನಾದ ಶಮೀಕ ಮಹರ್ಷಿಯು ತನ್ನ ವಿಷಯದಲ್ಲಿ ತೋರಿದ ಅನುತಾಪವನ್ನು ಕಂಡು ಪರೀಕ್ಷಿತನ ದುಃಖಕ್ಕೆ ಪಾರವಿಲ್ಲವಾಯಿತು. ಅಂತಹ ಪರಮಪಾವನನಾದ

ಮಹರ್ಷಿಗೆ ಅಪರಾಧಮಾಡಿದುದಕ್ಕಾಗಿ ರಾಜನು ಬಹುವಾಗಿ ಪರಿತಪಿಸಿದನು. ತನಗೆ ಏಳು ರಾತ್ರಿಗಳ ಅವಧಿಯಲ್ಲಿ ಮರಣವುಂಟಾಗುವುದೆಂಬ ವಾರ್ತೆಯನ್ನು ಕೇಳಿ ಧರ್ಮಾತ್ಮನಾದ ಆ ರಾಜನಿಗೆ ಅಷ್ಟೇನೂ ದುಃಖವಾಗಲಿಲ್ಲ. ಆದರೆ ದೇವತೆಗಳಿಗೆ ಸಮಾನನಾದ ರಾಜನು ತಾನು ಮಾಡಿದ ಕುತ್ಸಿತಕಾರ್ಯಕ್ಕಾಗಿ ಬಹುವಾಗಿ ದುಃಖಿಸಿದನು. ಅನಂತರ ರಾಜನು ಗೌರಮುಖನನ್ನು ಯಥೋಚಿತವಾಗಿ ಸತ್ಕರಿಸಿ ತನ್ನ ವಿಷಯದಲ್ಲಿ ಪ್ರಸನ್ನನಾಗುವಂತೆ ಶಮೀಕಮಹರ್ಷಿಗೆ ಹೇಳಬೇಕೆಂದು ಬಾರಿ-ಬಾರಿಗೂ ಪ್ರಾರ್ಥಿಸಿ ಬೀಳ್ಕೊಟ್ಟನು.

ಗೌರಮುಖನು ಅರಣ್ಯಾಭಿಮುಖವಾಗಿ ಹೊರಟುಹೋಗಲಾಗಿ, ಉದ್ವಿಗ್ನಹೃದಯನಾದ ರಾಜನು ಅದೇ ವಿಷಯವಾಗಿ ಮಂತ್ರಿಗಳೊಡನೆ ಸಮಾಲೋಚಿಸಿದನಂತರ ಒಂದೇ ಕಂಬವಿರುವ ಅರಮನೆಯೊಂದನ್ನು ಪ್ರತ್ಯೇಕವಾಗಿ ನಿರ್ಮಿಸಲು ಆಜ್ಞಾಪಿಸಿದನು. ಅರಮನೆಯು ಸಿದ್ಧವಾದೊಡನೆಯೇ ಮಂತ್ರಸಿದ್ಧಿಯನ್ನು ಹೊಂದಿದ್ದ ಬ್ರಾಹ್ಮಣರನ್ನೂ, ವಿಷವೈದ್ಯರನ್ನೂ ಆ ಅರಮನೆಯ ಸುತ್ತಲೂ ಸರ್ವಕಾಲದಲ್ಲಿಯೂ ಇರುವಂತೆ ವ್ಯವಸ್ಥೆಮಾಡಿದನು. ಸರ್ವತ್ರ ರಕ್ಷಣೆಯನ್ನು ಸಿದ್ಧಗೊಳಿಸಿ ತಾನು ಆ ಅರಮನೆಯಲ್ಲಿಯೇ ಇದ್ದುಕೊಂಡು ಆಗಿಂದಾಗ್ಗೆ ಸಮಾಲೋಚಿಸುತ್ತಾ ರಾಜಕಾರ್ಯಗಳನ್ನು ನಡೆಸುತ್ತಿದ್ದನು. ಆ ಸಮಯದಲ್ಲಿ ರಾಜನ ಸಮೀಪಕ್ಕೆ ಯಾರೊಬ್ಬರೂ ಹೋಗುವಂತಿರಲಿಲ್ಲ. ವಾಯುವಿಗೂ ಸಹ ರಾಜನಲ್ಲಿಗೆ ಹೋಗಿ ಬರುವ ಸ್ವಾತಂತ್ರ್ಯವಿರಲಿಲ್ಲ. ಆ ವಿಷಯವು ಸರ್ವತ್ರ ವಿದಿತವಾಯಿತು. ರಾಜನ ಪ್ರಾಣವನ್ನುಳಿಸಲು ಮಂತ್ರಜ್ಞನಾದ ಕಾಶ್ಯಪನೆಂಬ ಬ್ರಾಹ್ಮಣನು ಆ ದಿನಕ್ಕೆ ಸರಿಯಾಗಿ ರಾಜನ ಸಮೀಪಕ್ಕೆ ಆಗಮಿಸುತ್ತಿದ್ದನು. ಅವನಿಗೂ ತಕ್ಷಕನು ಋಷಿಕುಮಾರನ ಶಾಪದ ಕಾರಣದಿಂದಾಗಿ ರಾಜನನ್ನು ಯಮಾಲಯಕ್ಕೆ ಕಳುಹಿಸುವನೆಂಬ ವಾರ್ತೆಯು ತಿಳಿದಿದ್ದಿತು. 'ನಾಗರಾಜನಿಂದ ಕಚ್ಚಲ್ಪಟ್ಟ ರಾಜನಿಗೆ ಚಿಕಿತ್ಸೆಮಾಡುತ್ತೇನೆ ಮತ್ತು ಅವನನ್ನು ನಾನು ಬದುಕಿಸುತ್ತೇನೆ. ಇದರಿಂದ ನನಗೆ ಧರ್ಮ ಮತ್ತು ಅರ್ಥಗಳೆರಡೂ ಪ್ರಾಪ್ತವಾಗುತ್ತವೆ'– ಎಂಬ ಆಲೋಚನೆಯಿಂದ ಕಾಶ್ಯಪನು ರಾಜನ ಸಮೀಪಕ್ಕೆ ಬರುತ್ತಿದ್ದನು. ಅದೇ ಸಮಯದಲ್ಲಿ ಋಷಿಕುಮಾರನ ಶಾಪದಿಂದ ಆಕರ್ಷಿತನಾದ ತಕ್ಷಕನೂ

ರಾಜನನ್ನು ಕಚ್ಚಿ ಯಮಲೋಕಕ್ಕೆ ಕಳುಹಿಸುವ ಸಲುವಾಗಿ ಹಸ್ತಿನಾಪಟ್ಟಣಕ್ಕೆ ಬರುತ್ತಿದ್ದನು. ರಾಜನನ್ನು ಮೃತ್ಯುವಿನಿಂದ ಪಾರುಮಾಡಬೇಕೆನ್ನುವ ಏಕೋದ್ದೇಶದಿಂದ ಬರುತ್ತಿದ್ದ ಕಾಶ್ಯಪನನ್ನು ಕಂಡು ತಕ್ಷಕನು ಮುಖಭಾವದಿಂದಲೇ ಅವನ ಮನಸ್ಸಿನ ಇಂಗಿತವನ್ನರಿತವನಾಗಿ ವೃದ್ಧಬ್ರಾಹ್ಮಣನ ವೇಷವನ್ನು ಧರಿಸಿ ಕಾಶ್ಯಪನ ಸಮೀಪಕ್ಕೆ ಬಂದು ಕೇಳಿದನು : "ಬ್ರಾಹ್ಮಣೋತ್ತಮನೇ! ಇದೇಕಿಷ್ಟೊಂದು ಅವಸರದಿಂದ ಹೋಗುತ್ತಿರುವೆ?"

"ನನಗೆ ನಿಶ್ಚಯವಾಗಿಯೂ ಬಹಳ ಅವಸರದ ಕಾರ್ಯವೇ ಇದೆ. ಕುರುಕುಲೋತ್ಪನ್ನನಾದ, ಅರಿಂದಮನಾದ ಪರೀಕ್ಷಿದ್ರಾಜನನ್ನು ಪನ್ನಗಶ್ರೇಷ್ಠನಾದ ತಕ್ಷಕನು ಇಷ್ಟರಲ್ಲಿಯೇ ಕಚ್ಚಿಬಿಡುತ್ತಾನೆ. ಪಾಂಡುಕುಲಶ್ರೇಷ್ಠನಾದ, ಮಹಾತೇಜಸ್ವಿಯಾದ ಪರೀಕ್ಷಿದ್ರಾಜನನ್ನು ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ತಕ್ಷಕನು ಕಚ್ಚಿದೊಡನೆಯೇ ರಾಜನಿಗೆ ಚಿಕಿತ್ಸೆಮಾಡುವ ಸಲುವಾಗಿ ನಾನು ಇಷ್ಟು ಅವಸರದಿಂದ ಹೋಗುತ್ತಿದ್ದೇನೆ."

"ಬ್ರಾಹ್ಮಣೋತ್ತಮನೇ! ತಕ್ಷಕನು ಕಚ್ಚಿದ್ದಕ್ಕೆ ನೀನು ಚಿಕಿತ್ಸೆಮಾಡುವೆಯಾ? ನಿನ್ನಿಂದದು ಸಾಧ್ಯವಾಗಲಾರದು. ನಾನೇ ಆ ತಕ್ಷಕನಾಗಿದ್ದೇನೆ. ನಾನು ರಾಜನನ್ನು ವಿಷದಿಂದ ದಹಿಸಿಯೇ ಬಿಡುತ್ತೇನೆ. ಇದರ ಉಪಶಮನದ ಚಿಕಿತ್ಸೆಯು ನಿನ್ನಿಂದ ಮಾತ್ರವಲ್ಲ ; ಯಾರಿಂದಲೂ ಸಾಧ್ಯವಿಲ್ಲ. ಆದುದರಿಂದ ಆಯಾಸಪಟ್ಟುಕೊಳ್ಳದೇ ಹಿಂದಿರುಗು, ಕಾಶ್ಯಪ!"

"ತಕ್ಷಕ! ನೀನೇಕೆ ನನ್ನನ್ನು ತಡೆಯುವೆ? ನೀನು ನಿನ್ನ ಕೆಲಸವನ್ನು ಮಾಡು. ವಿದ್ಯೆ ಮತ್ತು ತಪಸ್ಸುಗಳ ಬಲದಿಂದ ಕೂಡಿರುವ ನನ್ನ ಬುದ್ಧಿಯು ರಾಜನಿಗೆ ಚಿಕಿತ್ಸೆಮಾಡುವ ಸಾಧ್ಯತೆಯಿದೆಯೆಂದು ಹೇಳುತ್ತಿದೆ. ವಿದ್ಯೆ, ಬುದ್ಧಿ ಮತ್ತು ತಪೋಬಲಗಳ ಸಹಾಯದಿಂದ ನಾನು ರಾಜನ ಚಿಕಿತ್ಸೆಯನ್ನು ಮಾಡುತ್ತೇನೆ."

೪೨ನೆಯ ಅಧ್ಯಾಯವು ಮುಗಿಯಿತು.

## ತಕ್ಷಕನು ಕಾಶ್ಯಪನ ವಿದ್ಯೆಯನ್ನು ಪರೀಕ್ಷಿಸಿದುದು : ಕಾಶ್ಯಪನ ವಿದ್ಯಾಸತ್ತ್ವಕ್ಕೆ ಮೆಚ್ಚಿ ಅವನಿಗೆ ಅಪಾರವಾದ ಧನಕೊಟ್ಟು ತಕ್ಷಕನು ಅವನನ್ನು ಹಿಂದಕ್ಕೆ ಕಳುಹಿಸಿದುದು : ತಕ್ಷಕನು ಅಣುರೂಪದಲ್ಲಿ ರಾಜನ ಸಮೀಪಕ್ಕೆ ಹೋಗಿ ಅವನನ್ನು ಕಚ್ಚಿದುದು

"ಶೌನಕರೇ! ಕಾಶ್ಯಪನ ಮಾತು ತಕ್ಷಕನ ಸಾಮರ್ಥ್ಯವನ್ನೇ ಪರೀಕ್ಷಿಸುವುದಾಗಿತ್ತು. 'ನಾನು ಕಚ್ಚಿದನಂತರ ಅದಕ್ಕೆ ಚಿಕಿತ್ಸೆ ಬೇರೆ ಇರುವುದೇ?' ಎಂದೆನ್ನಿಸಿತು ತಕ್ಷಕನಿಗೆ. ಅದೇ ಧೋರಣೆಯಿಂದಲೇ ತಕ್ಷಕನು ಕಾಶ್ಯಪನೊಡನೆ ಹೇಳಿದನು : "ಬ್ರಾಹ್ಮಣೋತ್ತಮನೇ! ನಾನು ಕಚ್ಚಿದುದಕ್ಕೆ ಸ್ವಲ್ಪವಾದರೂ ಚಿಕಿತ್ಸೆಮಾಡುವ ಸಾಮರ್ಥ್ಯವನ್ನು ನೀನು ಪಡೆದಿರುವೆಯಾದರೆ ನಾನೀಗ ನಿನ್ನ ಸಮ್ಮುಖದಲ್ಲಿಯೇ ಕಚ್ಚುವ ಈ ವೃಕ್ಷಕ್ಕೆ ಚಿಕಿತ್ಸೆಮಾಡಿ ಅದನ್ನು ಪುನಶ್ಚೇತನಗೊಳಿಸು, ನೋಡೋಣ. ನೀನು ಸಂಪೂರ್ಣವಾಗಿ ಪ್ರಯತ್ನಿಸಿ ಈ ವೃಕ್ಷವನ್ನು ಪುನಶ್ಚೇತನಗೊಳಿಸಿ ನಿನ್ನಲ್ಲಿರುವ ಮಹಾಮಂತ್ರದ ಬಲವನ್ನು ಪ್ರದರ್ಶಿಸು. ನೀನು ನೋಡುತ್ತಿರುವಾಗಲೇ ಈ ವಟವೃಕ್ಷವನ್ನು ಕಚ್ಚಿ ನಾನಿದನ್ನು ನನ್ನ ಸಾಮರ್ಥ್ಯದಿಂದ ಭಸ್ಮಮಾಡಿಬಿಡುವೆನು."

"ನಾಗೇಂದ್ರನೇ! ನೀನು ನಿನ್ನ ಪರಾಕ್ರಮದಲ್ಲಿ ಇಷ್ಟೊಂದು ಅಭಿಮಾನವಿರುವವನಾಗಿದ್ದರೆ ಈ ವಟವೃಕ್ಷವನ್ನು ಕಚ್ಚಿ ಭಸ್ಮಮಾಡು. ನಿನ್ನಿಂದ ಕಚ್ಚಲ್ಪಟ್ಟು ಭಸ್ಮವಾಗುವ ಈ ವೃಕ್ಷವನ್ನೇ ನಾನು ನನ್ನ ಮಂತ್ರಬಲದಿಂದ ಪುನಶ್ಚೇತನಗೊಳಿಸುತ್ತೇನೆ."

ಶೌನಕರೇ! ಕಾಶ್ಯಪನು ಹೀಗೆ ಹೇಳಿದೊಡನೆಯೇ ಕುಪಿತನಾದ ಪನ್ನಗೋತ್ತಮನು ಆ ವಟವೃಕ್ಷದ ಸಮೀಪಕ್ಕೆ ಹೋಗಿ ಅದನ್ನು ಕಚ್ಚಿದನು. ಮಹಾತ್ಮನಾದ, ಸರ್ಪರಾಜನಾದ, ತಕ್ಷಕನಿಂದ ಕಚ್ಚಲ್ಪಟ್ಟ ಆ ವೃಕ್ಷವು ತೀಕ್ಷ್ಣವಾದ ವಿಷದಿಂದ ವ್ಯಾಪ್ತವಾಗಿ ಧಗ-ಧಗನೆ ಉರಿಯಲಾರಂಭಿಸಿತು.

ಕೆಲವೇ ಕ್ಷಣಗಳೊಳಗಾಗಿ ಹಚ್ಚಹಸುರಾಗಿದ್ದ ವೃಕ್ಷವು ಸುಟ್ಟುಹೋಗಿ ಬೂದಿಯ ರಾಶಿಯಾಗಿ ಪರಿಣಮಿಸಿತು.

ತನ್ನ ಸಾಮರ್ಥ್ಯವನ್ನು ಯಶಸ್ವಿಯಾಗಿ ಪ್ರದರ್ಶಿಸಿದ ತಕ್ಷಕನು ಅಭಿ ಮಾನಪೂರ್ವಕವಾಗಿಯೇ ಕಾಶ್ಯಪನಿಗೆ ಹೇಳಿದನು :

"ಬ್ರಾಹ್ಮಣೋತ್ತಮ! ನೀನಿನ್ನು ಪ್ರಯತ್ನಿಸಿ ಈ ವೃಕ್ಷವನ್ನು ಜೀವಂತ ಗೊಳಿಸು, ನೋಡೋಣ."



ಶೌನಕರೇ! ಕಾಶ್ಯಪನೂ ಎದೆಗುಂದಲಿಲ್ಲ. ಅವನ ಮಂತ್ರಬಲದಲ್ಲಿ ಅವನಿಗೆ ಸಂಪೂರ್ಣವಾದ ವಿಶ್ವಾಸವಿತ್ತು. ಶುದ್ಧಾಚಮನಮಾಡಿ ಆ ವೃಕ್ಷದ ಬೂದಿಯನ್ನು ಸಂಗ್ರಹಿಸಿ ತಕ್ಷಕನಿಗೆ ಹೇಳಿದನು : "ನಾನೀಗ ಈ ವೃಕ್ಷದ ಮೇಲೆ

ಪ್ರಯೋಗಿಸಲಿರುವ ಸಂಜೀವಿನೀವಿದ್ಯೆಯ ಬಲವನ್ನಾದರೂ ನೋಡು, ತಕ್ಷಕ! ನಾನು ನೋಡುತ್ತಿರುವಂತೆಯೇ ನೀನು ಹೇಗೆ ಈ ವೃಕ್ಷವನ್ನು ನಿನ್ನ ಸಾಮರ್ಥ್ಯದಿಂದ ಭಸ್ಮಮಾಡಿದೆಯೋ ಹಾಗೆಯೇ ನಾನೂ ನೀನು ನೋಡುತ್ತಿರುವಂತೆಯೇ ಇದೇ ವೃಕ್ಷವನ್ನು ಸಚೇತನಗೊಳಿಸುತ್ತೇನೆ."

ಹೀಗೆ ಹೇಳಿ ವಿದ್ಯಾವಂತನಾದ, ಸೌಭಾಗ್ಯಶಾಲಿಯಾದ, ಬ್ರಾಹ್ಮಣ ಶ್ರೇಷ್ಠನಾದ ಕಾಶ್ಯಪನು ಭಸ್ಮರಾಶಿಯಾಗಿದ್ದ ವಟವೃಕ್ಷವನ್ನು ತನ್ನ ಮಂತ್ರಬಲ ದಿಂದ ಯಥಾಪೂರ್ವಸ್ಥಿತಿಗೆ ತಂದನು. ಅವನು ಮಹಾಮಂತ್ರವನ್ನು ಪುನ ಶ್ಚರಣೆಮಾಡುತ್ತಿದ್ದಂತೆ ಮೊದಲು ಬೀಜದ ಅಂಕುರವಾಯಿತು ; ಅನಂತರ ದಲ್ಲಿ ಎರಡು ಚಿಗುರುಗಳು ಕಾಣಿಸಿಕೊಂಡುವು ; ಸಣ್ಣ ಗಿಡವಾಯಿತು ; ಮರವಾಯಿತು ; ಶಾಖೆಗಳೊಡೆದುವು ; ಶಾಖೋಪಶಾಖೆಗಳಾದುವು ; ಸ್ವಲ್ಪ ಹೊತ್ತಿನಲ್ಲಿಯೇ ನ್ಯಗ್ರೋಧವೃಕ್ಷವು ತನ್ನ ಪೂರ್ವರೂಪವನ್ನು ಹೊಂದಿತು. ತಕ್ಷಕನು ಕಾಶ್ಯಪನ ಮಂತ್ರಸಿದ್ಧಿಯನ್ನು ನೋಡಿ ಬೆರಗಾಗಿ ಹೋದನು. ಅಂತೆಯೇ ಬ್ರಾಹ್ಮಣನಿಗೆ ಹೇಳಿದನು :

"ನಿನ್ನಲ್ಲಿರುವ ಪರಮಾದ್ಭುತವಾದ ಮಂತ್ರಶಕ್ತಿಯನ್ನು ನೋಡಿದ ಮೇಲೆ ಈ ವೃಕ್ಷವನ್ನು ನೀನು ಪುನಶ್ಚೇತನಗೊಳಿಸಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ನನ್ನ ವಿಷವನ್ನೂ ನೀನು ಪರಿಹರಿಸಲು ಸಮರ್ಥನಾಗಿರುವೆ. ನನ್ನಂತೆಯೇ ಇತರ ಸರ್ಪಶ್ರೇಷ್ಠರ ವಿಷಕ್ಕೂ ಚಿಕಿತ್ಸೆಮಾಡುವ ವಿಧಾನವು ನಿನಗೆ ಸಂಪೂರ್ಣವಾಗಿ ತಿಳಿದಿರುವುದು. ತಪೋಧನನೇ! ಯಾವ ಪ್ರಯೋಜನವನ್ನು ಪಡೆಯುವ ಸಲುವಾಗಿ ರಾಜನಲ್ಲಿಗೆ ವಿಷಚಿಕಿತ್ಸೆಗಾಗಿ ಹೋಗುತ್ತಿರುವೆ? ನೀನು ರಾಜನಿಂದ ಪಡೆಯಲಿಚ್ಛಿಸುವುದನ್ನು ನಾನೇ ಕೊಡುತ್ತೇನೆ. ನೀನಪೇಕ್ಷಿಸಲಿರುವ ವಸ್ತುವು ಯದ್ಯಪಿ ದುರ್ಲಭವಾಗಿದ್ದರೂ ಕೊಡುತ್ತೇನೆ. ಮೇಲಾಗಿ ರೋಗಿಯನ್ನು ಚಿಕಿತ್ಸೆಮಾಡುವಾಗ ಅವನ ವಿಧಿಯನ್ನೂ ನೋಡಬೇಕಾದ ಅವಶ್ಯಕತೆಯಿದೆ. ಬ್ರಾಹ್ಮಣೋತ್ತಮನೇ! ಪ್ರಕೃತಸಂದರ್ಭದಲ್ಲಿ, ನೀನು ಚಿಕಿತ್ಸೆಮಾಡಲಿಚ್ಛಿಸಿರುವ ರಾಜನು ಬ್ರಾಹ್ಮಣನ ಶಾಪಕ್ಕೆ ಗುರಿಯಾಗಿರುವನು. ಅವನಿಗೆ ಆಯುಷ್ಯವೂ ಮುಗಿದಿದೆ. ಹೀಗಿರುವಾಗ ಅವನ ವಿಷಯದಲ್ಲಿ ನೀನು ಮಾಡುವ ಚಿಕಿತ್ಸೆಯು ಫಲದಾಯಕವಾಗದೆಯೂ ಇರಬಹುದಲ್ಲವೇ? ಹಾಗೇನಾದರೂ ಆದರೆ

ಮೂರು ಲೋಕಗಳಲ್ಲಿಯೂ ನಿನ್ನೀ ಕೀರ್ತಿಯು ಕಿರಣರಹಿತವಾಗಿ ಮುಳುಗಿಹೋಗುವ ಸೂರ್ಯನಂತೆ ಲುಪ್ತವಾಗಿ ಹೋಗುವುದು."

ಬ್ರಾಹ್ಮಣನೂ ಕ್ಷಣಕಾಲ ಯೋಚಿಸಿದನು. ತಕ್ಷಕನು ಹೇಳಿದ್ದರಲ್ಲಿಯೂ ತಥ್ಯಾಂಶವಿರುವಂತೆ ಅವನಿಗೆ ಕಂಡುಬಂದಿತು. ಅಂತೆಯೇ ತಕ್ಷಕನನ್ನು ಕುರಿತು ಹೇಳಿದನು : "ಭುಜಂಗಮನೇ! ನಾನು ಕೇವಲ ಧನಾರ್ಥಿಯಾಗಿ ಅಲ್ಲಿಗೆ ಹೋಗುತ್ತಿದ್ದೇನೆ. ನಾನಪೇಕ್ಷಿಸುವ ಧನವನ್ನು ನೀನೇ ಕೊಡುವೆಯಾದರೆ ಅದನ್ನು ತೆಗೆದುಕೊಂಡು ನಾನು ಹಿಂದಿರುಗುತ್ತೇನೆ."

"ಪರೀಕ್ಷಿದ್ರಾಜನಿಂದ ನೀನು ಎಷ್ಟು ಹಣವನ್ನು ಅಪೇಕ್ಷಿಸುವೆಯೋ ಅದಕ್ಕಿಂತಲೂ ಹೆಚ್ಚಿನ ಹಣವನ್ನು ನಾನೇ ಕೊಡುತ್ತೇನೆ. ಅದನ್ನು ತೆಗೆದು ಕೊಂಡು ಹಿಂದಿರುಗು, ಕಾಶ್ಯಪ!"

ಶೌನಕರೇ! ಕಾಶ್ಯಪನು ಮಂತ್ರಜ್ಞನಾಗಿದ್ದುದು ಮಾತ್ರವಲ್ಲದೇ ಮಹಾಜ್ಞಾನಿಯೂ ಆಗಿದ್ದನು. ತಕ್ಷಕನು ಹೇಳಿದ ಮಾತುಗಳನ್ನು ಕೇಳಿ ಸ್ವಲ್ಪಹೊತ್ತು ಅಂತರ್ಮುಖನಾಗಿದ್ದು ಪರೀಕ್ಷಿತನ ವಿಷಯವಾಗಿ ದಿವ್ಯದೃಷ್ಟಿ ಯಿಂದ ನೋಡಿದನು. ಪಾಂಡವೇಯನ ಆಯುಷ್ಯವು ಮುಗಿದಿದೆಯೆಂಬ ಅರಿವು ಕಾಶ್ಯಪನಿಗುಂಟಾಯಿತು. ರಾಜನಲ್ಲಿಗೆ ಹೋಗುವ ಸಂಕಲ್ಪವನ್ನು ಪರಿತ್ಯಜಿಸಿ ತಕ್ಷಕನಿಂದ ತನಗೆ ಬೇಕಾದಷ್ಟು ಹಣವನ್ನು ಪಡೆದು ಹಿಂದಿರು ಗಿದನು.

ಇತ್ತಲಾಗಿ ಕಾಶ್ಯಪನು ಹೊರಟುಹೋದೊಡನೆಯೇ ತಕ್ಷಕನು ಅವ ಸರದಿಂದ ಹಸ್ತಿನಾಪಟ್ಟಣಕ್ಕೆ ಆಗಮಿಸಿದನು. ತಕ್ಷಕನು ಹೋಗುತ್ತಿದ್ದಾಗ– ವಿಷಪರಿಹಾರಕವಾದ ಮಂತ್ರಪಠನಗಳಿಂದಲೂ ಮತ್ತು ಔಷಧಿಗಳಿಂದಲೂ ವೈದ್ಯರೂ, ಮಾಂತ್ರಿಕರೂ ರಾಜನನ್ನು ಸರ್ವದಾ ರಕ್ಷಿಸುತ್ತಿದ್ದಾರೆಂಬ ವಾರ್ತೆಯು ಅವನಿಗೆ ತಿಳಿಯಿತು. ರಾಜನ ಬಳಿಗೆ ಹೋಗುವ ಉಪಾಯ ವನ್ನು ಕುರಿತು ತಕ್ಷಕನು ಕ್ಷಣಕಾಲ ಯೋಚಿಸಿದನು. ವಂಚನೆಮಾಡಿಯೇ ರಾಜನ ಸಮೀಪಕ್ಕೆ ಹೋಗಬೇಕಾಗಿದೆಯೆಂದು ತಕ್ಷಕನು ನಿರ್ಧರಿಸಿದನು. ತನ್ನ ಅನುಯಾಯಿಗಳನ್ನು ತಪಸ್ವಿಗಳ ವೇಷದಲ್ಲಿ ರಾಜನಲ್ಲಿಗೆ ಕಳುಹಿಸಿ ದನು. ಅವರೆಲ್ಲರೂ ಫಲ, ದರ್ಭೆ ಮತ್ತು ಶುದ್ಧೋದಕಗಳನ್ನು ತೆಗೆದು

ಕೊಂಡು ಹೋಗಿದ್ದರು. ಹೋಗುವ ಮುಂಚೆ ತಕ್ಷಕನು ಅವರೊಡನೆ ಹೇಳಿದ್ದನು: "ನೀವು ಅವ್ಯಗ್ರಚಿತ್ತರಾಗಿ ( ಅಳುಕದ ಮನಸ್ಸಿನಿಂದ ) ರಾಜನಲ್ಲಿಗೆ ಹೋಗಬೇಕು. ನೀವು ತೆಗೆದುಕೊಂಡು ಹೋಗುವ ಫಲ-ಪುಷ್ಪೋದಕಗಳನ್ನು ರಾಜನಿಗೆ ಕೊಟ್ಟು ಬರಬೇಕು." ತಾಪಸವೇಷವನ್ನು ಧರಿಸಿದ್ದ ಸರ್ಪಗಳು ತಕ್ಷಕನು ಹೇಳಿದಂತೆಯೇ ಮಾಡಿದುವು. ರಾಜನಿಗೆ ಫಲ, ಪುಷ್ಪ ಮತ್ತು ತೀರ್ಥಗಳನ್ನು ಸಮರ್ಪಿಸಿದುವು. ಆ ಎಲ್ಲವನ್ನೂ ರಾಜನು ಭಕ್ತಿಭಾವದಿಂದ ಸ್ವೀಕರಿಸಿದನು. ತಪಸ್ವಿಗಳೆಲ್ಲರನ್ನೂ ಯಥೋಚಿತವಾಗಿ ಸತ್ಕರಿಸಿ ಬೀಳ್ಕೊಟ್ಟನು. ಛದ್ಮವೇಷಧಾರಿಗಳಾದ ತಪಸ್ವಿಗಳು ಹೊರಟುಹೋದನಂತರ ಅಮಾತ್ಯರನ್ನೂ, ಸುಹೃದರನ್ನೂ ಕುರಿತು ಹೀಗೆಂದು ಹೇಳಿದನು :

"ಸಚಿವೋತ್ತಮರೇ! ಸುಹೃದರೇ! ಸುಪಕ್ವವಾಗಿರುವ ಈ ಫಲಗಳನ್ನು ತಾಪಸಶ್ರೇಷ್ಠರು ಕೊಟ್ಟು ಹೋಗಿದ್ದಾರೆ. ರುಚಿಕರವಾದ ಈ ಹಣ್ಣುಗಳನ್ನು ನೀವೂ ಭಕ್ಷಿಸಿರಿ. ನಿಮ್ಮೊಡನೆ ನಾನೂ ತೆಗೆದುಕೊಳ್ಳುತ್ತೇನೆ."

ಶೌನಕರೇ! ಪರೀಕ್ಷಿತನು ಹೀಗೆ ಹೇಳಿ ಕಪಟತಾಪಸಿಗಳು ಕೊಟ್ಟು ಹೋಗಿದ್ದ ಹಣ್ಣುಗಳನ್ನು ತನ್ನ ಸಚಿವರೊಂದಿಗೆ ತಿನ್ನಲು ಪ್ರಾರಂಭಿಸಿದನು. ವಿಧಿನಿಯಮದಂತೆ ಮತ್ತು ಋಷಿಕುಮಾರನ ಶಾಪದಂತೆ ರಾಜನು ತಿನ್ನಲು ಯಾವ ಹಣ್ಣನ್ನು ತೆಗೆದುಕೊಂಡನೋ ಅದೇ ಹಣ್ಣಿನಲ್ಲಿಯೇ ತಕ್ಷಕನೂ ಅಣುರೂಪದಲ್ಲಿ ಕುಳಿತಿದ್ದನು. ಅಣುವಾಗಿದ್ದ ತಕ್ಷಕನು ಒಡನೆಯೇ ಸಣ್ಣ ಕ್ರಿಮಿಯಾಗಿ ಪರಿವರ್ತಿತನಾದನು. ಹಣ್ಣಿನಿಂದ ರಾಜನ ಹಸ್ತಕ್ಕೆ ಬಂದ ಆ ಕ್ರಿಮಿಯ ಕಣ್ಣುಗಳು ಕಪ್ಪಾಗಿಯೂ, ಶರೀರವು ಕೆಂಪಾಗಿಯೂ ಇದ್ದಿತು. ಆ ಕ್ರಿಮಿಯನ್ನೇ ಕೈಯಲ್ಲಿ ಹಿಡಿದು ಪರೀಕ್ಷಿತನು ಸಚಿವರುಗಳನ್ನು ಕುರಿತು ಹೇಳಿದನು :

"ಸಚಿವೋತ್ತಮರೇ! ಸೂರ್ಯನಾಗಲೇ ಅಸ್ತಂಗತನಾಗುತ್ತಿದ್ದಾನೆ. ಋಷಿಶಾಪದ ಅವಧಿಯು ಮುಗಿದುಹೋಗಿದೆ. ಆದುದರಿಂದ ನನಗಿನ್ನು ಸರ್ಪವಿಷದ ಭಯವಿಲ್ಲ. ಆದರೆ ಹೀಗಾಗುವುದು ನನಗೆ ಸಮಾಧಾನ ವನ್ನುಂಟುಮಾಡುವುದಿಲ್ಲ. ನಾನು ಶಮೀಕಮಹರ್ಷಿಗೆ ಮಾಡಿದ ಅಪರಾಧಕ್ಕೆ ಶಿಕ್ಷೆಯಿಲ್ಲದಂತೆಯೇ ಆಗಿಬಿಡುತ್ತದೆ. ಮೇಲಾಗಿ ಋಷಿಕುಮಾರನ ಮಾತೂ

ಸುಳ್ಳಾಗಕೂಡದು. ಆದುದರಿಂದ ಈ ಹಣ್ಣಿನೊಡನೆ ನುಸುಳಿ ಬಂದಿರುವ ಮತ್ತು ನನ್ನ ಕೈಯಲ್ಲಿರುವ ಈ ಕ್ರಿಮಿಯೇ ತಕ್ಷಕನಾಗಿ ನನ್ನನ್ನು ಕಚ್ಚಿಬಿಡಲಿ. ಇದರಿಂದಲಾದರೂ ನಾನು ಮಾಡಿದ ಅಪರಾಧಕ್ಕೆ ತಕ್ಕ ಶಿಕ್ಷೆ ಯಾದಂತಾಗುತ್ತದೆ. ನಾನು ದೋಷದಿಂದ ವಿಮುಕ್ತನಾಗುತ್ತೇನೆ."

ಕಾಲಚೋದಿತರಾದಂತೆ ರಾಜನ ಸುತ್ತಲೂ ಕುಳಿತಿದ್ದ ಮಂತ್ರಿ-ಸುಹೃದರೂ ರಾಜನ ಮಾತುಗಳನ್ನು ಸಮ್ಮತಿಸಿದರು. ಯಾರೊಬ್ಬರೂ ರಾಜನ ಇಚ್ಛೆಗೆ ಪ್ರತಿಯಾಗಿ ಮಾತನಾಡದಿರಲು ಪರೀಕ್ಷಿತನು ಆ ಕ್ರಿಮಿಯನ್ನು ತನ್ನ ಕುತ್ತಿಗೆಯ ಮೇಲೆ ಬಿಟ್ಟುಕೊಂಡು ಗಹಗಹಿಸಿ ನಗತೊಡಗಿದನು. ಪ್ರಾಣೋತ್ಕ್ರಮಣವು ಸಮೀಪಿಸಿತ್ತಾದ್ದರಿಂದ ರಾಜನಿಗೆ ಬುದ್ಧಿಯೂ ವಿಕಲ್ಪವಾಗಿತ್ತು. ಮರುಕ್ಷಣದಲ್ಲಿಯೇ ಕ್ರಿಮಿಯ ರೂಪದಲ್ಲಿದ್ದ ತಕ್ಷಕನು ನಿಜರೂಪವನ್ನು ತಾಳಿ ರಾಜನ ಕುತ್ತಿಗೆಗೆ ಸುತ್ತಿಕೊಂಡನು. ರಾಜನು ಮೊದಲಿನಂತೆಯೇ ನಗುತ್ತಲೇ ಇದ್ದನು. ಸರ್ಪಶ್ರೇಷ್ಠನಾದ ತಕ್ಷಕನೊಮ್ಮೆ ಘೋರಶಬ್ದವನ್ನು ಮಾಡಿ ಪೃಥ್ವೀಪಾಲನಾದ ಪರೀಕ್ಷಿತನನ್ನು ಕಚ್ಚಿಬಿಟ್ಟನು."

೪೩ನೆಯ ಅಧ್ಯಾಯವು ಮುಗಿಯಿತು.

೪೪ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಜನಮೇಜಯನ ರಾಜ್ಯಾಭಿಷೇಕ ಮತ್ತು ವಿವಾಹ

"ಶೌನಕರೇ! ರಾಜನಾದ ಪರೀಕ್ಷಿತನನ್ನು ಸರ್ಪವು ಸುತ್ತಿಕೊಂಡಿರುವುದನ್ನು ನೋಡಿ ಮಂತ್ರಿಗಳೂ, ಸುಹೃದರೂ ರೋದನಮಾಡತೊಡಗಿದರು. ಮರುಕ್ಷಣದಲ್ಲಿಯೇ ಘೋರಶಬ್ದವಾಯಿತು. ಸರ್ಪವಲ್ಲಿರಲಿಲ್ಲ. ಘೋರಧ್ವನಿ ಮಾಡುತ್ತಾ ಸರ್ಪವು ಹೊರಟುಹೋಗಿತ್ತು. ಶಬ್ದವನ್ನೇ ಅನುಸರಿಸಿ ಮಂತ್ರಿಗಳೂ, ಸುಹೃದರೂ ಹೊರಗೆ ಬಂದು ನೋಡಿದರು. ಅದ್ಭುತಾಕಾರನಾದ, ಸುಮನೋಹರರೂಪನಾದ, ಸರ್ಪಶ್ರೇಷ್ಠನಾದ ತಕ್ಷಕನು ಸೀಮಂತರೇಖೆಯಂತೆ ( ಹೆಂಗಸರ ಬೈತಲೆಯ ಮಧ್ಯದಲ್ಲಿರುವ ರೇಖೆ ) ನೀಲವಾದ ಆಕಾಶದಲ್ಲಿ ಹೋಗುತ್ತಿರುವುದನ್ನು ಅವರೆಲ್ಲರೂ ನೋಡಿದರು.

ಶಾಪಾನುಸಾರವಾಗಿ ತಕ್ಷಕನು ರಾಜನನ್ನು ಕಚ್ಚಿ ಸಾಯಿಸಿದನೆಂದು ತಿಳಿದನಂತರ ರಾಜಪರಿವಾರದವರೆಲ್ಲರೂ ಗೋಳಾಡಿದರು. ತಕ್ಷಕನಿಂದ ಹೊರಹೊಮ್ಮಿದ ವಿಷವು ರಾಜನಲ್ಲಿಯೇ ಸೀಮಿತವಾಗಿ ಉಳಿಯಲಿಲ್ಲ. ತನ್ನ ಪ್ರಭಾವದಿಂದಾಗಿ ರಾಜನು ನೂತನವಾಗಿ ನಿರ್ಮಿಸಿದ್ದ ಅರಮನೆಯನ್ನೇ ಆ ಮಹಾವಿಷವು ಭಸ್ಮಮಾಡಿಬಿಟ್ಟಿತು. ಆ ಮಧ್ಯೆ ರಾಜನು ಸಿಡಿಲು ಬಡಿದವ ನಂತೆ ಕೆಳಗುರುಳಿದನು. ಮಂತ್ರಿ-ಸುಹೃದರೆಲ್ಲರೂ ವಿಷದ ಜ್ವಾಲೆಯನ್ನು ಸಹಿಸಿಕೊಳ್ಳಲಾರದೇ ದಿಕ್ಕಾಪಾಲಾಗಿ ಓಡಿಹೋದರು.

ಅರಮನೆಯೆಲ್ಲವೂ ಶೋಕದಿಂದ ಮುಳುಗಿಹೋಯಿತು. ತಕ್ಷಕನ ದಂಶನದಿಂದಾಗಿ ರಾಜನು ಸತ್ತುಹೋಗಲು ಅವನಿಗೆ ಯಥೋಚಿತವಾದ ಉತ್ತರಕ್ರಿಯೆಗಳು ನಡೆದುವು. ಪರೀಕ್ಷಿತನ ಉತ್ತರಕ್ರಿಯೆಗಳಾದನಂತರ ಮುಂದಿನ ರಾಜನ ವಿಷಯವಾಗಿ ಮಂತ್ರಿ-ಪುರೋಹಿತರು ಸಮಾಲೋಚಿಸಿ ಪ್ರಜೆಗಳ ಅಭಿಪ್ರಾಯವನ್ನೂ ಸಹ ಸಂಗ್ರಹಿಸಿ ಪರೀಕ್ಷಿತನ ಮಗನಾದ ಜನಮೇಜಯನೆಂಬ ಹೆಸರಿನ ಚಿಕ್ಕ ಬಾಲಕನನ್ನು ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡಿದರು. ಜನಮೇಜಯನು ಬಾಲನಾಗಿ ದ್ದರೂ ಅನುಭವಿಗಳಾದ ಆರ್ಯರಿಗಿರುವ ಬುದ್ಧಿಯು ಅವನಿಗಿದ್ದಿತು. ಅನುದಿನವೂ ಮಂತ್ರಿಗಳೊಡನೆ ಸಮಾಲೋಚಿಸುತ್ತಾ ಮುತ್ತಾತನಾದ ಯುಧಿಷ್ಠಿರನಂತೆಯೇ ಧರ್ಮದಿಂದ ಮತ್ತು ವಿಚಕ್ಷಣತೆಯಿಂದ ರಾಜ್ಯವನ್ನು ಪರಿಪಾಲನೆಮಾಡುತ್ತಿದ್ದನು.

ಶತ್ರುಗಳ ವಿಧ್ವಂಸಕನಾದ ಜನಮೇಜಯನು ಪ್ರಾಪ್ತವಯಸ್ಕನಾಗಲಾಗಿ ರಾಜ್ಯದ ಮಂತ್ರಿ-ಪುರೋಹಿತರು ಕಾಶೀರಾಜನಾದ ಸುವರ್ಣವರ್ಮನಲ್ಲಿಗೆ ಹೋಗಿ ಅವನ ಮಗಳಾದ ವಪುಷ್ಟಮೆಯನ್ನು ಜನಮೇಜಯನಿಗಾಗಿ ಯಾಚಿಸಿದರು. ಕಾಶೀರಾಜನೂ ಜನಮೇಜಯನ ಕುಲ-ಗೋತ್ರಗಳೆಲ್ಲವನ್ನೂ ಸಂಪೂರ್ಣವಾಗಿ ತಿಳಿದವನಾಗಿದ್ದುದರಿಂದ ತನ್ನ ಮಗಳಾದ ವಪು ಷ್ಟಮೆಯನ್ನು ಕುರುಕುಲಪುಂಗವನಿಗೆ ವಿಜೃಂಭಣೆಯಿಂದ ಮದುವೆಮಾಡಿ ಕೊಟ್ಟನು. ವಪುಷ್ಟಮೆಯನ್ನು ವಿವಾಹವಾಗಿ ರಾಜನೂ ತನಗೆ ಅನುರೂಪ ಳಾದ ಭಾರ್ಯೆಯು ಸಿಕ್ಕಿದಳೆಂದು ತಿಳಿದು ಆನಂದಭರಿತನಾದನು. ಅವನು

ಯಾವಾಗಲೂ ಇತರ ನಾರಿಯರನ್ನು ಮನಸ್ಸಿನಲ್ಲಿಯೂ ಸ್ಮರಿಸುತ್ತಿರಲಿಲ್ಲ. ಪತ್ನಿಯ ಜೊತೆಯಲ್ಲಿ ಜಲಕ್ರೀಡೆಯಾಡಲು ಸರೋವರಕ್ಕೆ ಹೋಗುತ್ತಿದ್ದನು; ನಲಿದಾಡಲು ಉದ್ಯಾನವನಕ್ಕೆ ಹೋಗುತ್ತಿದ್ದನು ; ಪತ್ನಿಯೊಡನೆ ತೀರ್ಥಯಾತ್ರೆಗಳನ್ನು ಮಾಡುತ್ತಿದ್ದನು. ಪುರೂರವನು ಊರ್ವಶಿಯೊಡನೆ ಸಕಲವಿಧವಾದ ಸುಖೋಪಭೋಗಗಳನ್ನೂ ಅನುಭವಿಸಿದಂತೆ–ಜನಮೇಜಯನೂ ವಪುಷ್ಟಮೆಯೊಡನೆ ಸಕಲವಿಧವಾದ ಸುಖೋಪಭೋಗಗಳನ್ನೂ ಅನುಭವಿಸುತ್ತಿದ್ದನು.

ವಪುಷ್ಟಮೆಯು ಪತಿವ್ರತೆಯಾಗಿದ್ದಳು. ಅವಳ ರೂಪು ಲೋಕದಲ್ಲಿಯೇ ವಿಖ್ಯಾತವಾಗಿದ್ದಿತು. ತನಗೆ ಅನುರೂಪನಾದ ಪತಿಯು ಸಿಕ್ಕಿದನೆಂದು ಅವಳೂ ಆನಂದಸಾಗರದಲ್ಲಿ ಮುಳುಗಿಹೋಗಿದ್ದಳು. ವಿಹಾರಕಾಲದಲ್ಲಿ ರಾಜನ ಮನಸ್ಸಿಗೆ ಅನುಕೂಲಳಾಗಿ ನಡೆದುಕೊಳ್ಳುತ್ತಾ ಅವನನ್ನು ಆನಂದಸಾಗರದಲ್ಲಿ ಮುಳುಗಿಸಿಬಿಡುತ್ತಿದ್ದಳು."

ಳಳನೆಯ ಅಧ್ಯಾಯವು ಮುಗಿಯಿತು.

ಳ೫ನೆಯ ಅಧ್ಯಾಯ — ಆಸ್ತೀಕಪರ್ವ (ಮುಂದುವರಿದಿದೆ.)

## ವೀರಣಸ್ತಂಭದಲ್ಲಿ ಜೋತಾಡುತ್ತಿರುವ ಪಿತೃದೇವತೆಗಳೊಡನೆ ಜರತ್ಕಾರುವಿನ ಸಂಭಾಷಣೆ

"ಶೌನಕರೇ! ಜನಮೇಜಯನು ವಪುಷ್ಟಮೆಯನ್ನು ಮದುವೆಯಾಗಿ ಧರ್ಮದಿಂದ ರಾಜ್ಯಪರಿಪಾಲನೆಮಾಡುತ್ತಾ ಆನಂದಭರಿತನಾಗಿದ್ದನು. ನಾನು ಹಿಂದೊಮ್ಮೆ ಪ್ರಕರಣಾಂತರದಲ್ಲಿ ಹೇಳಿದಂತೆ ಅದೇ ಸಮಯಕ್ಕೆ ಸರಿಯಾಗಿ ಮಹಾತಪಸ್ವಿಯಾದ ಜರತ್ಕಾರುವು ಸಾಯಂಗೃಹನಾಗಿ* ವಿಶ್ವಪರ್ಯಟನೆ ಮಾಡುತ್ತಿದ್ದನು.

ಜರತ್ಕಾರುವು ಜಿತೇಂದ್ರಿಯರಲ್ಲದವರಿಗೆ ಅನುಷ್ಠಾನಮಾಡಲು

---

* ಸಾಯಂಗೃಹಃ –ಇಂತಹ ಕಡೆಗೆ ಇದೇ ಹೊತ್ತಿನಲ್ಲಿ ಹೋಗಬೇಕೆಂಬ ನಿಯಮವಿಲ್ಲದೇ ಪ್ರಯಾಣಮಾಡುತ್ತಲೇ ಇರುವುದು ; ಸೂರ್ಯಾಸ್ತಮಯವಾಗುವ ವೇಳೆಗೆ ಸರಿಯಾಗಿ ಸಿಕ್ಕುವ ಹಳ್ಳಿಗಳಲ್ಲಿ ತಂಗುವುದು. ಬೆಳಗಾಗುತ್ತಲೇ ಸ್ನಾನ-ಸಂಧ್ಯಾದಿಗಳನ್ನು ಮುಗಿಸಿ ಆಹಾರವನ್ನು ಭಕ್ಷಿಸಿ ಆಹಾರವು ಸಿಕ್ಕದಿದ್ದರೆ ಆಹಾರವಿಲ್ಲದೆಯೇ ಮುಂದೆ ಪ್ರಯಾಣಮಾಡುವುದು. ಹೀಗೆ ಮಾಡುವವರಿಗೆ ಸಾಯಂಗೃಹರೆಂದು ಹೆಸರು.

ಅಸಾಧ್ಯವಾದ ವ್ರತದೀಕ್ಷೆಗಳನ್ನು ಕೈಗೊಂಡಿದ್ದನು. ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡುತ್ತಾ ಪುಣ್ಯಸ್ಥಳಗಳ ಯಾತ್ರೆಯಲ್ಲಿಯೇ ಯಾವಾಗಲೂ ಕಾಲಕಳೆಯುತ್ತಿದ್ದನು. ಅವನಿಗೆ ಇಂತಹುದೇ ಆಹಾರವು ಬೇಕೆಂಬ ಅಭಿಲಾಷೆಯೂ ಇರಲಿಲ್ಲ. ಅವನು ಹಸಿವನ್ನೂ ಜಯಿಸಿದ್ದನಾದ್ದರಿಂದ ಅನೇಕಸಮಯಗಳಲ್ಲಿ ಗಾಳಿಯನ್ನೇ ಆಹಾರವನ್ನಾಗಿ ಮಾಡಿಕೊಂಡು ನಿರಾಹಾರನಾಗಿಯೇ ಇದ್ದುಬಿಡುತ್ತಿದ್ದನು. ಇದರಿಂದ ಅವನ ಆತ್ಮಶಕ್ತಿಯು ಹೆಚ್ಚಾಗುತ್ತಿದ್ದರೂ ಶರೀರವು ಮಾತ್ರ ದಿನ-ದಿನಕ್ಕೂ ಕ್ಷಯಿಸಿಹೋಗುತ್ತಿದ್ದಿತು. ಹೀಗೆಯೇ ಸಂಚರಿಸುತ್ತಿರುವಾಗ ಒಂದು ಹಳ್ಳದ ಬಳಿಯಲ್ಲಿದ್ದ ವೀರಣಸ್ತಂಭದಲ್ಲಿ ( ಲಾಮಂಚದ ಪೊದೆಯಲ್ಲಿ ) ತಲೆಕೆಳಗಾಗಿ ಜೋತುಬಿದ್ದಿದ್ದ ಪಿತೃದೇವತೆಗಳನ್ನು ನೋಡಿದನು.

ಜೋತುಬೀಳುವ ಸಾಧನವಾಗಿದ್ದ ಪೊದೆಯ ಬೇರನ್ನೂ ಹತ್ತಿರದ ಬಿಲದಲ್ಲಿದ್ದ ಇಲಿಯೊಂದು ಕಡಿದುಹಾಕುತ್ತಿದ್ದಿತು. ಬೇರಿನ ಒಂದೇ ಒಂದು ತಂತುವು ಮಾತ್ರ ಉಳಿದಿದ್ದು ಪಿತೃದೇವತೆಗಳು ಆ ತಂತುವನ್ನೇ ಅವಲಂಬಿಸಿದ್ದರು. ಆ ಏಕತಂತುವನ್ನೂ ಇಲಿಯು ಕಚ್ಚಿ ಕತ್ತರಿಸಿಬಿಟ್ಟರೆ ಅವರು ಹಳ್ಳದಲ್ಲಿ ಬಿದ್ದುಹೋಗುತ್ತಿದ್ದರು.*

ಹಳ್ಳದ ಮೇಲ್ಭಾಗದಲ್ಲಿ ತಲೆಕೆಳಗಾಗಿ ಜೋತಾಡುತ್ತಿದ್ದ, ಆಹಾರರಹಿತರಾಗಿದ್ದ, ಬಹುಕೃಶರಾಗಿದ್ದ, ದೀನರಾಗಿದ್ದ, ತಮಗೆ ಯಾರಾದರೊಬ್ಬರ

---

* ಇಲ್ಲಿ ಹಳ್ಳದಲ್ಲಿ ಅಧೋಮುಖರಾಗಿ ಪಿತೃದೇವತೆಗಳು ನೇತಾಡುತ್ತಿದ್ದರೆಂದು ಹೇಳಲಾಗಿದೆ. '**ಗರ್ತೇ ಲಮ್ಬಮಾನಾನಧೋಮುಖಾನ್**' ಪುನಃ ವೀರಣಸ್ತಮ್ಬಮಾಶ್ರಿತಾನ್ ವೀರಣಸ್ತಂಭವನ್ನು ಆಶ್ರಯಿಸಿದ್ದರೆಂದೂ ಹೇಳಲಾಗಿದೆ. ಆ ವೀರಣಸ್ತಂಭವು ಒಂದೇ ಬೇರಿನಿಂದ ನಿಂತಿದ್ದಿತೆಂದೂ ಹೇಳಲಾಗಿದೆ. 'ಏಕತನ್ತ್ವವಶಿಷ್ಟ ವೀರಣಸ್ತಂಭಂ' ಆ ಒಂದು ತಂತುವನ್ನೂ ಸಹ ಬಿಲದಲ್ಲಿದ್ದ ಇಲಿಯೊಂದು ಕತ್ತರಿಸಲು ಪ್ರಯತ್ನಿಸುತ್ತಿತ್ತು. ಈ ಪ್ರಕರಣವನ್ನು ನಾವು ಮನಸ್ಸಿನಲ್ಲಿ ಚಿತ್ರಿಸಿಕೊಳ್ಳಲು ಸ್ವಲ್ಪ ಕಷ್ಟವೇ ಆದರೂ ಇದರ ತಾತ್ಪರ್ಯಾರ್ಥವನ್ನು ಹೀಗೆ ಸಮನ್ವಯಮಾಡಬಹುದಾಗಿದೆ. ಪೀಳಿಗೆಯು ಮುಂದುವರಿಯದಿದ್ದರೆ ಪಿತೃ ದೇವತೆಗಳು 'ಪುತ್' ಎಂಬ ಹೆಸರಿನ ನರಕಕ್ಕೆ ಹೋಗುತ್ತಾರೆ. ಯಾಯಾವರವಂಶದಲ್ಲಿ ಜರತ್ಕಾರುವೊಬ್ಬನೇ ಉಳಿದಿದ್ದನು. ಅವನು ಬಹಳಕಾಲದವರೆಗೂ ಮದುವೆಯಾಗದೆಯೇ ಇದ್ದನು. ಮೇಲಾಗಿ ಅವನಿಗೆ ಮದುವೆಯಾಗುವ

ಸಹಾಯವು ಬೇಕೆಂಬುದನ್ನು ಸೂಚಿಸುತ್ತಿದ್ದ ಪಿತೃದೇವತೆಗಳನ್ನು ನೋಡಿ ಸಮೀಪಕ್ಕೆ ಹೋಗಿ ದಯಾರ್ದ್ರಹೃದಯನಾದ ಜರತ್ಕಾರುವು ಪ್ರಶ್ನಿಸಿದನು:

"ಭೋಃ! ವೀರಣಸ್ತಂಭವನ್ನಾಶ್ರಯಿಸಿ ತಲೆಕೆಳಗಾಗಿ ತೂಗಾಡು ತ್ತಿರುವ ನೀವು ಯಾರು? ಈ ವೀರಣಸ್ತಂಭದ ಬೇರಿನ ಬಹುಭಾಗವನ್ನು ಸಮೀಪದ ಬಿಲದಲ್ಲಿರುವ ಇಲಿಯು ಈಗಾಗಲೇ ಕಚ್ಚಿಹಾಕಿಬಿಟ್ಟಿದೆ. ಒಂದು ಬೇರು ಮಾತ್ರವೇ ಉಳಿದಿರುವುದರಿಂದ ಇದನ್ನೂ ಆ ಇಲಿಯು ಅತ್ಯಲ್ಪ ಕಾಲದಲ್ಲಿಯೇ ಕಚ್ಚಿಹಾಕಿಬಿಡುತ್ತದೆ. ಮೇಲಾಗಿ ನೀವು ಅಧೋಮುಖರಾಗಿ ದ್ದೀರಿ. ಈ ಒಂದು ತಂತುವನ್ನೂ ಕಚ್ಚಿಹಾಕಿಬಿಟ್ಟರೆ ನಿಮ್ಮ ಸ್ಥಿತಿಯು ಏನಾಗುವುದೆಂಬುದನ್ನು ಹೇಳುವಂತೆಯೇ ಇಲ್ಲ.

ಇಂತಹ ಸ್ಥಿತಿಯಲ್ಲಿರುವ ನಿಮ್ಮನ್ನು ನೋಡಿ ದುಃಖಿತನಾಗಿ ಈ ಆಪತ್ಕಾಲದಲ್ಲಿ ನಿಮಗೆ ಉಪಕರಿಸಬೇಕೆನ್ನುವ ಆಶಯದಿಂದಿರುತ್ತೇನೆ. ನಾನೇನು ಮಾಡಲಿ? ನನ್ನಿಂದ ನಿಮ್ಮ ದುಃಸ್ಥಿತಿಯನ್ನು ಪರಿಹರಿಸುವ ಸಾಧ್ಯತೆ ಯಿರುವುದೇ? ನಾನು ಬಹಳವಾಗಿ ತಪಶ್ಚರಣೆಯನ್ನು ಮಾಡಿದ್ದೇನೆ. ತಪಶ್ಚರಣೆಯಿಂದ ಮಹತ್ತರವಾದ ಫಲವನ್ನೂ ಗಳಿಸಿದ್ದೇನೆ.

**ತಪಸೋಽಸ್ಯ ಚತುರ್ಥೇನ ತೃತೀಯೇನಾಥವಾ ಪುನಃ ।**
**ಅರ್ಧೇನ ವಾಪಿ ನಿಸ್ತರ್ತುಮಾಪದಂ ಬ್ರೂತ ಮಾ ಚಿರಮ್ ॥೧೦॥**

---

ಅಪೇಕ್ಷೆಯೂ ಇರಲಿಲ್ಲ. ವಂಶವು ಮುಂದುವರಿಯದೇ ತಾವು ಪುನ್ನಾಮನರಕದಲ್ಲಿ ಬೀಳುತ್ತೇವೆಂಬ ಭಯವು ಪಿತೃದೇವತೆಗಳಲ್ಲಿ ಮೂಡಿತ್ತು.

ಇಲ್ಲಿನ 'ಗರ್ತ' ಶಬ್ದಕ್ಕೆ ಪುನ್ನಾಮನರಕವೆಂದು ಅರ್ಥಹೇಳಬಹುದಾಗಿದೆ. ವೀರಣಸ್ತಂಭವೇ ಯಾಯಾವರವಂಶ. ಆ ಸ್ತಂಭವನ್ನವರು ಆಶ್ರಯಿಸಿದ್ದಾರೆ. ಆ ವಂಶದಲ್ಲಿ ಅನೇಕ ಪೀಳಿಗೆಗಳಿದ್ದುವು. ಆದರೆ ಈಗ ಒಂದು ಬೇರು ಮಾತ್ರವೇ ಉಳಿದುಕೊಂಡಿದೆ. ಆ ಒಂದು ಬೇರೇ ಜರತ್ಕಾರು. ಅದನ್ನೂ ಸಹ ಬಿಲದಲ್ಲಿರುವ ಇಲಿಯು ಕಚ್ಚಿಹಾಕಲು ಪ್ರಯತ್ನಿಸುತ್ತಿದೆ. ಬಿಲದಲ್ಲಿರುವ ಇಲಿಯೇ ಕಾಲನು. ಜಗದ್ರಕ್ಷಕನಾದ ಕಾಲನು ಜರತ್ಕಾರುವಿನ ಆಯುಷ್ಯವನ್ನೂ ನುಂಗುತ್ತಿದ್ದಾನೆ. ಏಕತಂತುರೂಪನಾಗಿರುವ ಜರತ್ಕಾರುವು ಕಾಲಾಧೀನನಾಗಿಬಿಟ್ಟರೆ ಪಿತೃಗಳು ನರಕದಲ್ಲಿ ಬಿದ್ದುಹೋಗುತ್ತಾರೆ. ಇದನ್ನೇ ಪಿತೃದೇವತೆಗಳು ನಾಟಕೀಯವಾಗಿ ಜರತ್ಕಾರುವಿಗೆ ತೋರಿಸಿದರು.

ನಿಮ್ಮ ಈ ದುಃಸ್ಥಿತಿಯ ನಿವಾರಣೆಗಾಗಿ ನನ್ನ ತಪಃಫಲದಲ್ಲಿ ನಾಲ್ಕನೆಯ ಒಂದು ಭಾಗ ಅಥವಾ ಮೂರನೆಯ ಒಂದು ಭಾಗ–ಅದೂ ಸಾಲದಾದರೆ ಅರ್ಧಭಾಗವನ್ನಾದರೂ ನಿಮಗೆ ಧಾರೆಯೆರೆದುಕೊಡಲು ಸಿದ್ಧನಿದ್ದೇನೆ. ಬೇಗ ಹೇಳಿರಿ. ನನ್ನ ತಪಃಫಲದಿಂದ ನಿಮ್ಮ ದುಃಖನಿವಾರಣೆಯಾಗುವುದೇ?

**ಅಥವಾಪಿ ಸಮಗ್ರೇಣ ತರನ್ತು ತಪಸಾ ಮಮ ।**
**ಭವನ್ತಃ ಸರ್ವ ಏವೇಹ ಕಾಮಮೇವಂ ವಿಧೀಯತಾಮ್ ॥೧೧॥**

ನೀವು ಸಂಕಟದಿಂದ ಪಾರಾಗುವುದಾದರೆ ಅರ್ಧಫಲವೇಕೆ? ನನ್ನ ಸಮಗ್ರವಾದ ತಪಸ್ಸಿನ ಫಲವನ್ನೇ ಧಾರೆಯೆರೆಯುತ್ತೇನೆ. ಸಂಪೂರ್ಣವಾದ ನನ್ನ ತಪಃಫಲದಿಂದ ನೀವೆಲ್ಲರೂ ಈ ದುಃಸ್ಥಿತಿಯಿಂದ ಪಾರಾಗುವುದನ್ನು ಮಾತ್ರವೇ ನಾನು ಅಪೇಕ್ಷಿಸುತ್ತೇನೆ. ಬೇಗ ಹೇಳಿರಿ."

ಪಿತೃದೇವತೆಗಳು ಹೇಳಿದರು :

"ವಿಪ್ರಶ್ರೇಷ್ಠನೇ! ನೀನಾಗಲೇ ವೃದ್ಧನಾಗಿರುವೆ. ಬ್ರಹ್ಮಚಾರಿಯಾಗಿ ರುವೆ. ಇಂತಹ ನೀನು ನಮ್ಮನ್ನು ರಕ್ಷಿಸಲು ಅಭಿಲಷಿಸಿ ಮುಂದೆ ಬಂದಿರುವೆ. ನೀನು ಮಹಾತಪಸ್ವಿಯೆಂದೂ ಹೇಳಿಕೊಂಡಿರುವೆ. ಆದರೆ ನಿನ್ನ ತಪೋಬಲ ದಿಂದ ನಮ್ಮ ಈ ದುಃಸ್ಥಿತಿಯು ಸುಧಾರಿಸುವುದಂತಹುದಲ್ಲ. ನಮ್ಮಲ್ಲಿ ತಪಸ್ಸಿನ ಫಲವಿಲ್ಲವೆಂದಲ್ಲ. ನಾವೂ ಅಪಾರವಾದ ತಪಸ್ಸನ್ನು ಮಾಡಿ ಬೇಕಾದಷ್ಟು ಫಲಸಂಚಯನವನ್ನು ಮಾಡಿರುತ್ತೇವೆ. ಆದರೆ ಆ ತಪಸ್ಸಿನ ಫಲವು ಇಂದು ನಮಗೆ ಯಾವ ಪ್ರಯೋಜನಕ್ಕೂ ಬರುತ್ತಿಲ್ಲ.

**ಸಂತಾನಪ್ರಕ್ಷಯಾದ್ಬ್ರಹ್ಮನ್ಪತಾಮ ನರಕೇಽಶುಚೌ ।**
**ಸಂತಾನಂ ಹಿ ಪರೋ ಧರ್ಮ ಏವಮಾಹ ಪಿತಾಮಹಃ ॥೧೪॥**

ಎಷ್ಟೇ ತಪಃಫಲವಿದ್ದರೂ ಸಂತಾನವು (ವಂಶವು) ಕ್ಷಯಿಸಿಹೋಗುತ್ತಿರುವ ಕಾರಣದಿಂದಾಗಿ ನಾವಿಂದು ಅಪವಿತ್ರವಾದ ನರಕದಲ್ಲಿ ಬೀಳುತ್ತಿದ್ದೇವೆ. ಸಂತಾನವನ್ನು ಪಡೆಯುವುದು ಪರಮಶ್ರೇಷ್ಠವಾದ ಧರ್ಮವೆಂದು ಪಿತಾಮಹನೇ ಹೇಳಿದ್ದಾನೆ.

ನರಕದಲ್ಲಿ ಬೀಳಲು ಜೋಲಾಡುತ್ತಿರುವ ನಮ್ಮ ಬುದ್ಧಿಯು ವಿಕಲ್ಪ

ವಾಗಿದೆ. ವಿಖ್ಯಾತಪುರುಷನಾದ ನೀನಾರೆಂಬುದು ನಮಗೆ ತಿಳಿದಿಲ್ಲ. ನಮ್ಮನ್ನು ಬಹಳ ಕರುಣೆಯಿಂದ ವಿಚಾರಿಸಿಕೊಳ್ಳುತ್ತಿರುವೆ. ಆದುದರಿಂದ ದ್ವಿಜೋತ್ತಮನೇ! ನಿನ್ನ ಕುಲ-ಗೋತ್ರಗಳು ನಮಗೆ ತಿಳಿಯದಿದ್ದರೂ ನಮ್ಮ ವಿಷಯದಲ್ಲಿ ನೀನು ತೋರುತ್ತಿರುವ ಸೌಜನ್ಯದಿಂದಾಗಿ ನಾವಾರೆಂಬುದನ್ನು ಹೇಳುತ್ತೇವೆ. ನಿಷ್ಠುರವ್ರತನಿಷ್ಠರಾದ ಯಾಯಾವರರೆಂಬ ಹೆಸರಿನ ಋಷಿಗಳೇ ನಾವು. ನಮ್ಮ ತಪಸ್ಸಿನ ಫಲದಿಂದಾಗಿ ನಾವು ಇದುವರೆಗೂ ಪುಣ್ಯ ಲೋಕಗಳಲ್ಲಿಯೇ ಇದ್ದೆವು. ಆದರೆ ನಮ್ಮ ವಂಶವು ಕ್ಷಯಿಸಿಹೋಗುತ್ತಿರುವ ಕಾರಣ ಪುಣ್ಯಲೋಕಗಳಿಂದ ನಾವು ಚ್ಯುತರಾದೆವು. ನಮಗೆ ಸಂತಾನವಿಲ್ಲದ ಕಾರಣ ನಮ್ಮ ತಪಸ್ಸಿನ ಫಲವೆಲ್ಲವೂ ನಷ್ಟವಾಗಿ ಹೋಗಿದೆ. ಈ ಭೂಮಿ ಯಲ್ಲಿ ನಮ್ಮ ವಂಶೀಯನೇನೋ ಒಬ್ಬನಿದ್ದಾನೆ. ಆದರೆ ಅವನು ಇದ್ದೂ ಇಲ್ಲದವನಂತಾಗಿದ್ದಾನೆ. ಅಲ್ಪಭಾಗ್ಯರಾದ ನಮ್ಮ ಕುಲದಲ್ಲಿ ಆ ಮಂದಭಾಗ್ಯನು ಹುಟ್ಟಿದ್ದಾನೆ. ಅವನು ಪ್ರಪಂಚದಲ್ಲಿ ಜರತ್ಕಾರುವೆಂದು ಪ್ರಸಿದ್ಧನಾಗಿದ್ದಾನೆ. ಅವನೇನು ಸಾಮಾನ್ಯನಲ್ಲ. ವೇದ-ವೇದಾಂಗಪಾರಂಗತನು ; ಜಿತೇಂದ್ರಿಯನು ; ಮಹಾತ್ಮನು ; ವ್ರತನಿಷ್ಠನು ; ಮಹಾತಪಸ್ವಿಯು. ಆದರೆ ಅವನು ತಪೋಲೋಭಿಯು. ಅವನಿಗೆ ಜೀವನದಲ್ಲಿ ಮತ್ತೇನೂ ಬೇಕಾಗಿಲ್ಲ. ಈ ಕಾರಣದಿಂದ ನಾವು ಇಂತಹ ಕಷ್ಟದಲ್ಲಿ ಸಿಕ್ಕಿ ತೊಳಲಬೇಕಾಗಿದೆ. ಆ ಲೋಭಿಗೆ ಹೆಂಡತಿಯಿಲ್ಲ, ಮಕ್ಕಳಿಲ್ಲ, ಬಂಧು-ಬಾಂಧವರೂ ಇಲ್ಲ. ಈ ಕಾರಣದಿಂದ ನಾವು ಅನಾಥರಂತೆ ಈ ಹಳ್ಳದಲ್ಲಿ ಜೋತುಬಿದ್ದಿದ್ದೇವೆ. ನಮ್ಮ ಸ್ಮರಣಶಕ್ತಿಯೂ ಕುಂಠಿತವಾಗುತ್ತಿದೆ.

ಬ್ರಾಹ್ಮಣೋತ್ತಮನೇ! ಅನಾಥರಂತೆ ಈ ಹಳ್ಳದಲ್ಲಿ ಪರಿತಪಿಸುತ್ತಿರುವ ನಮ್ಮನ್ನು ಸನಾಥರನ್ನಾಗಿ ಮಾಡಲು ನೀನು ನಮಗೆ ಈ ಉಪಕಾರವನ್ನು ಮಾಡಬೇಕಾಗಿದೆ. ನಿನ್ನ ಯಾತ್ರೆಯ ಸಮಯದಲ್ಲಿ ಜರತ್ಕಾರುವೇನಾದರೂ ಸಿಕ್ಕಿದರೆ ಅವನಿಗೆ ಈ ಮಾತುಗಳನ್ನು ನೀನು ತಪ್ಪದೇ ಹೇಳು :

**ಪಿತರಸ್ತೇಽವಲಮ್ಬನ್ತೇ ಗರ್ತೇ ದೀನಾ ಅಧೋಮುಖಾಃ ।**
**ಸಾಧು ದಾರಾನ್ಕುರುಷ್ವೇತಿ ಪ್ರಜಾಮುತ್ಪಾದಯೇತಿ ಚ ।**
**ಕುಲತನ್ತುರ್ಹಿ ನಃ ಶಿಷ್ಟಸ್ತ್ವಮೇವೈಕಸ್ತಪೋಧನ ॥೨೨॥**

"ತಪೋಧನನೇ! ನಿನ್ನ ಪಿತೃಗಳು ಹಳ್ಳವೊಂದರಲ್ಲಿ ಅಧೋಮುಖ ರಾಗಿ, ದೀನರಾಗಿ ಜೋತುಬಿದ್ದಿದ್ದಾರೆ. ಅವರ ದುರವಸ್ಥೆಯನ್ನು ತಪ್ಪಿಸ ಬೇಕಾದರೆ ಅತ್ಯವಶ್ಯವಾಗಿ ಈ ಕೂಡಲೇ ಮದುವೆಯಾಗಿ ಮಕ್ಕಳನ್ನು ಪಡೆಯಬೇಕು. ನಿಮ್ಮ ವಂಶದಲ್ಲಿ ವಂಶಾಭಿವೃದ್ಧಿಗಾಗಿ ಉಳಿದಿರುವವನು ನೀನೊಬ್ಬನೇ. ನೀನೇ ಅವರಿಗೆ ಆಶ್ರಯಭೂತನಾದ 'ವೀರಣಸ್ತಂಭ ವಾಗಿರುವೆ'* ಎಂಬುದಾಗಿ ಹೇಳಬೇಕು."

ಪಿತೃಗಳು ಮುಂದುವರಿದು ಹೇಳುತ್ತಾರೆ : "ಲಾಮಂಚದ ಬೇರು ಗಳನ್ನು ಇಲಿಯು ಕತ್ತರಿಸುತ್ತಿರುವುದನ್ನು ನೋಡು. ಈ ಲಾಮಂಚಕ್ಕೆ ಅನೇಕಾನೇಕ ಬೇರುಗಳಿದ್ದುವು. ಕಾಲಾನುಕ್ರಮವಾಗಿ ಎಲ್ಲ ಬೇರುಗಳೂ ಹೋಗುತ್ತಿವೆ. ಎಲ್ಲ ಬೇರುಗಳನ್ನೂ ಕಾಲನು ಕಚ್ಚಿ ತಿಂದುಬಿಟ್ಟಿದ್ದಾನೆ. ಉಳಿದಿರುವ ಒಂದು ಬೇರಿನ ಅರ್ಧಭಾಗವೂ ಈಗಾಗಲೇ ಕಡಿದುಹೋಗಿದೆ. ಈ ಬೇರಿನ ಸಹಾಯದಿಂದಾಗಿ ನಾವಿನ್ನೂ ಜೋತಾಡುತ್ತಿದ್ದೇವೆ. ನೀನು ಕಾಣುತ್ತಿರುವ ಬೇರನ್ನು ಕತ್ತರಿಸಲು ಯತ್ನಿಸುತ್ತಿರುವ ಇಲಿಯೇ ಮಹಾ ಕಾಲನು. ಆ ಏಕಮಾತ್ರತಂತುವೇ ಅಥವಾ ಬೇರೇ ಜರತ್ಕಾರುವು ; ತಪೋ ನಿರತನಾದ ಮಂದಾತ್ಮನಾದ ಅವನೇ ನಮ್ಮ ಕುಲದೀಪಕನು. ಅವನನ್ನೂ ಮೂಷಕರೂಪನಾದ ಕಾಲನು ಕಚ್ಚಿ-ಕಚ್ಚಿ ಕತ್ತರಿಸಿಬಿಡುತ್ತಾನೆ.

ಅವನ ತಪಃಶಕ್ತಿಯಿಂದ ನಮ್ಮ ಕಷ್ಟವನ್ನು ಪರಿಹರಿಸುವ ಸಾಧ್ಯತೆಯಿಲ್ಲ. ನಾವೀಗ ಇರುವ ಸ್ಥಿತಿಯನ್ನಾದರೂ ನೋಡುತ್ತಿರುವೆಯಲ್ಲವೇ? ಬ್ರಾಹ್ಮಣೋತ್ತಮನೇ! ನಾವು ಅವಲಂಬಿಸಿರುವ ಲಾಮಂಚದ ಪೊದರಿನ ಕಡೆಯ ಬೇರೂ ಕಡಿದು ಹೋಗುವುದರಲ್ಲಿದೆ. ನಮ್ಮ ಬುದ್ಧಿಯೂ ಪರಿ ಭ್ರಮಿಸುತ್ತಿದೆ. ದುಷ್ಕರ್ಮಿಗಳಂತೆ ನಾವೀಗ ಅಧಃಪತನವನ್ನು ಹೊಂದು ತ್ತಿದ್ದೇವೆ. ಸಬಾಂಧವರಾದ ನಾವು ನರಕದಲ್ಲಿ ಬಿದ್ದುಹೋದನಂತರ ಅವನಿ

---

* ಇಲ್ಲಿ 'ವೀರಣಸ್ತಂಭ' ಎಂಬ ಪದಪ್ರಯೋಗವೂ ಸಹ ಹೃದಯಂಗಮವಾಗಿದೆ. ವೀರಣಸ್ತಂಭವೆಂದರೆ ಲಾಮಂಚದ ಪೊದೆ. ಬಿಸಿಲುಕಾಲದಲ್ಲಿ ನೀರನ್ನು ತಣ್ಣಗಿರುವಂತೆ ಮಾಡಲು ಲಾಮಂಚದ ಬೇರನ್ನು ನೀರಿನಲ್ಲಿ ಹಾಕುತ್ತಾರೆ. ವೀರಣಸ್ತಂಭರೂಪನಾಗಿರುವ ಜರತ್ಕಾರುವೊಬ್ಬನಿರುವುದರಿಂದ ಅವನ ಪಿತೃಗಳ ಆತ್ಮಕ್ಕೆ ಸ್ವಲ್ಪ ಶಾಂತಿಯಿದೆ.

ಗಾದರೂ ಇದೇ ಗತಿಯು ತಪ್ಪಿದ್ದಲ್ಲ. ಅವಸಾನಾನಂತರದಲ್ಲಿ ಅವನೂ ನರಕದಲ್ಲಿಯೇ ಬೀಳಬೇಕಾಗುತ್ತದೆ. ತಪಸ್ಸು, ಯಜ್ಞ ಮತ್ತು ಪಾವನ ಗೊಳಿಸುವ ಇತರ ಪುಣ್ಯಕಾರ್ಯಗಳು ಇವು ಯಾವುವೂ ಸತ್ಸಂತಾನಕ್ಕೆ ಸಮನಲ್ಲ.

ತಾಪಸೋತ್ತಮನೇ! ನೀನೇನಾದರೂ ಜರತ್ಕಾರುವನ್ನು ಕಂಡ ಪಕ್ಷದಲ್ಲಿ ಈ ಎಲ್ಲ ವಿಷಯಗಳನ್ನೂ ಅವನಿಗೆ ತಪ್ಪದೇ ಹೇಳಬೇಕು. ನೀನೀಗ ಕಾಣುತ್ತಿರುವ ನಮ್ಮ ದುರವಸ್ಥೆಯನ್ನು ಅವನಿಗೆ ಯಥಾವತ್ತಾಗಿ ಬಣ್ಣಿಸಿ ಹೇಳಬೇಕು. ಅವನು ನಿನ್ನ ಮಾತನ್ನು ಕೇಳಿದೊಡನೆಯೇ ಮದುವೆಯಾಗಿ ಸಂತಾನವನ್ನು ಪಡೆಯುವ ರೀತಿಯಲ್ಲಿ ನೀನು ಈ ವಿಷಯವನ್ನು ಅವನ ಮುಂದಿಡಬೇಕು. ಆದರೆ, ಬ್ರಾಹ್ಮಣೋತ್ತಮ! ಮತ್ತೊಂದು ಪ್ರಶ್ನೆಯನ್ನೂ ಕೇಳಬೇಕೆಂದಿದ್ದೇವೆ. ಅನಾಥರಾದ ನಮಗೆ ನಾಥನಂತೆಯೂ, ಬಂಧುಗಳ ಹಿತಕ್ಕಾಗಿಯೂ ಮತ್ತು ನಮ್ಮ ಕುಲದ ಹಿತಕ್ಕಾಗಿಯೂ ಚಿಂತಿಸುತ್ತಾ ನಮ್ಮನ್ನು ಇಷ್ಟು ಆದರದಿಂದ ಪ್ರಶ್ನಿಸುತ್ತಿರುವ ಮತ್ತು ನಮ್ಮನ್ನು ಒಳ್ಳೆಯ ಮಾತುಗಳಿಂದ ಸಂತೈಸುತ್ತಿರುವ ನೀನು ಯಾರೆಂಬುದನ್ನು ಕೇಳಲಿಚ್ಛಿಸುತ್ತೇವೆ.”

ಳ೫ನೆಯ ಅಧ್ಯಾಯವು ಮುಗಿಯಿತು.

ಳ೬ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಮದುವೆಯಾಗಲು ಜರತ್ಕಾರುವಿನ ನಿರ್ಧಾರ

ಸೌತಿಗಳು ಹೇಳುತ್ತಾರೆ :

“ಪಿತೃದೇವತೆಗಳ ಮಾತನ್ನು ಕೇಳಿ ಜರತ್ಕಾರುವಿಗೆ ಬಹಳ ದುಃಖ ವಾಯಿತು. ಗದ್ಗದವಾದ ಧ್ವನಿಯಿಂದ ಪಿತೃಗಳಿಗೆ ಹೇಳಿದನು :

“ನೀವುಗಳೇ ನನ್ನ ಪಿತೃ-ಪಿತಾಮಹ-ಪ್ರಪಿತಾಮಹರು. ನಿಮಗೆ ಪ್ರಿಯವಾಗುವ ಯಾವ ಕಾರ್ಯವನ್ನಾದರೂ ಹೇಳಿರಿ. ಮಾಡಲು ಸಿದ್ಧ ನಾಗಿದ್ದೇನೆ. ಪಾಪಭೂಯಿಷ್ಠನಾದ, ನಿಮ್ಮ ಮಗನಾದ ಆ ಜರತ್ಕಾರುವೇ ನಾನು. ನಿಮ್ಮ ವಿಷಯದಲ್ಲಿ ದುಷ್ಕಾರ್ಯವನ್ನೆಸಗಿರುವ, ದುರಾತ್ಮನಾದ ನನಗೆ ಯಾವ ಶಿಕ್ಷೆಯನ್ನು ಬೇಕಾದರೂ ನೀಡಿರಿ.”

“ಮಗು! ಕೇವಲ ಅದೃಷ್ಟವಶದಿಂದ ನೀನು ನಮ್ಮ ದುಃಸ್ಥಿತಿಯನ್ನು ಕಾಣಲು ಇಲ್ಲಿಗೆ ಆಗಮಿಸಿರುವೆ. ಕುಮಾರ! ನೀನೇಕೆ ಇದುವರೆಗೂ ಪತ್ನೀ ವಂತನಾಗಿಲ್ಲ?”

“ನನಗೆ ಮದುವೆಯಾಗುವ ಇಚ್ಛೆಯೇ ಉಂಟಾಗಿಲ್ಲ. ಅಂತ್ಯಕಾಲದ ವರೆಗೂ ಊರ್ಧ್ವರೇತಸ್ಕನಾಗಿಯೇ ಇದ್ದು ಸಶರೀರನಾಗಿಯೇ ಸ್ವರ್ಗಕ್ಕೆ ಹೋಗಬೇಕೆನ್ನುವ ಅಭಿಲಾಷೆಯು ನನ್ನದಾಗಿದೆ. ಈ ಕಾರಣದಿಂದಲೇ ನನ್ನ ಮನಸ್ಸು ಮದುವೆಯಾಗಲು ಇದುವರೆಗೂ ಒಡಂಬಟ್ಟಿರಲಿಲ್ಲ. ಆದರೆ ನೀವು ಕೀಚಬಾಲದ ಹಕ್ಕಿಯಂತೆ ತಲೆಕೆಳಗಾಗಿ ಲಾಮಂಚಗಿಡದ ಪೊದರಿನಲ್ಲಿ ನೇತುಬಿದ್ದಿರುವುದನ್ನು ನೋಡಿದನಂತರ ನನ್ನ ಮನಸ್ಸಿನಲ್ಲಿ ಅಚಲವಾಗಿದ್ದ ನಿರ್ಧಾರವನ್ನು ಬದಲಾಯಿಸಿದ್ದೇನೆ. ನಿಮಗೆ ಪ್ರಿಯವಾದುದನ್ನೇ ಮಾಡು ತ್ತೇನೆ. ನಿಮಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಮದುವೆಯಾಗುತ್ತೇನೆ. ಈ ವಿಷಯದಲ್ಲಿ ತಾವು ಸಂಶಯಿಸುವ ಕಾರಣವಿಲ್ಲ. ಆದರೆ ಕೆಲವು ನಿಯಮಗಳಿಗನುಸಾರವಾಗಿ ನಾನು ವಿವಾಹವಾಗುತ್ತೇನೆ.

ಎಲ್ಲಿಯಾದರೂ ನನ್ನ ಹೆಸರಿನವಳೇ ಆದ ಕನ್ಯೆಯು ಸಿಕ್ಕಿದರೆ ಮಾತ್ರವೇ ಮದುವೆಯಾಗುತ್ತೇನೆ. ನನಗೆ ಕನ್ಯೆಯನ್ನು ಭಿಕ್ಷಾರೂಪವಾಗಿ ಕೊಡುವುದಾದರೆ ಮಾತ್ರವೇ ಮದುವೆಯಾಗುತ್ತೇನೆ. ಮೂರನೆಯದಾಗಿ ನಾನವಳನ್ನು ಸಾಕುವ ಹವ್ಯಾಸವನ್ನೂ ಇಟ್ಟುಕೊಳ್ಳುವುದಿಲ್ಲ. ಈ ಮೂರು ನಿಯಮಗಳಿಗೊಳಪಟ್ಟು ಕನ್ಯೆಯು ಸಿಕ್ಕುವುದಾದರೆ ಮಾತ್ರವೇ ನಾನು ಮದುವೆಯಾಗುವೆನು. ಈ ಮೂರು ನಿಯಮಗಳಲ್ಲಿ ಯಾವುದೊಂದು ನಿಯಮಕ್ಕೂ ಚ್ಯುತಿಯುಂಟಾಗುವುದಾದರೂ ನಾನು ಮದುವೆಯಾಗುವು ದಿಲ್ಲ. ಪಿತೃಗಳೇ! ನನ್ನ ಈ ಮಾತು ಸತ್ಯ.

ಹೀಗೂ ಕನ್ಯೆಯು ಸಿಕ್ಕಿ ನಾನವಳನ್ನು ಮದುವೆಯಾಗಿ ಅವಳಿಂದೇ ನಾದರೂ ಒಂದು ಜಂತುವು ( ಸಂತಾನವು ) ಹುಟ್ಟುವುದಾದರೆ ಅದರಿಂದ ನಿಮ್ಮೆಲ್ಲರ ಉದ್ಧಾರವಾಗಲಿ. ನನ್ನ ಪಿತೃಗಳು ಶಾಶ್ವತವಾದ, ಕ್ಷಯರಹಿತವಾದ ಬ್ರಹ್ಮಲೋಕವನ್ನು ಪಡೆಯಲಿ.”

ಶೌನಕರೇ! ಮೂರು ನಿಯಮಗಳಿಗೆ ನಿಬದ್ಧಳಾಗಿ ಸಿಕ್ಕುವ ಹೆಣ್ಣನ್ನು ಮದುವೆಯಾಗುವೆನೆಂದು ಜರತ್ಕಾರುವು ಪಿತೃಗಳಿಗೆ ಆಶ್ವಾಸನೆಯನ್ನಿತ್ತು ಪುನಃ

ವಿಶ್ವಪರ್ಯಟನೆಮಾಡಲು ಪ್ರಾರಂಭಿಸಿದನು. ಅವನು ವೃದ್ಧನಾಗಿದ್ದನೆಂಬ ಕಾರಣದಿಂದ ಅವನಿಗೆ ಹೆಣ್ಣು ಕೊಡಲು ಯಾರೂ ಮುಂದೆ ಬರಲಿಲ್ಲ. ಜರತ್ಕಾರುವು ಬಹಳ ದುಃಖಿತನಾದನು. ಅರಣ್ಯಕ್ಕೆ ಹೋಗಿ ಗಟ್ಟಿಯಾಗಿ ಕೂಗಿಕೊಂಡನು :

"ಭೋಃ! ನಾನು ಕನ್ಯಾಭಿಕ್ಷೆಯನ್ನು ಬೇಡುತ್ತಿದ್ದೇನೆ. **'ಕನ್ಯಾಂ ಯಾಚಾಮಿ'**–ಎಂಬುದಾಗಿ ಮೂರು ಬಾರಿ ಗಟ್ಟಿಯಾಗಿ ಕೂಗಿಕೊಂಡನು. ಅರಣ್ಯದಲ್ಲಿದ್ದ ಸ್ಥಾವರ-ಜಂಗಮಗಳನ್ನೂ ಕುರಿತು ಹೇಳಿದನು :

"ಈ ಅರಣ್ಯದಲ್ಲಿ ಯಾವ ಚರಾಚರವಸ್ತುಗಳು ಇರುವುವೋ, ದೃಶ್ಯವಾದ ಯಾವ ಪ್ರಾಣಿಗಳಿವೆಯೋ, ಅದೃಶ್ಯವಾದ ಯಾವ ಪ್ರಾಣಿಗಳಿವೆಯೋ ಅವುಗಳೆಲ್ಲವೂ ನಾನು ಹೇಳಲಿರುವ ಈ ಮಾತುಗಳನ್ನು ಕೇಳಲಿ! ನನ್ನ ಪಿತೃದೇವತೆಗಳು ನಮ್ಮ ವಂಶದಲ್ಲಿ ವಂಶೋದ್ಧಾರಕನೊಬ್ಬನು ಇಲ್ಲದ ಕಾರಣದಿಂದ ಅಧೋಮುಖರಾಗಿ ಕೆಳಕ್ಕೆ ಬೀಳುತ್ತಿದ್ದಾರೆ. ಬಹಳ ಕಷ್ಟಕ್ಕೆ ಗುರಿಯಾಗಿದ್ದಾರೆ. ಆದುದರಿಂದಲೇ ಅವರು ನನ್ನನ್ನು ಮದುವೆಯಾಗುವಂತೆ ಹೇಳಿರುತ್ತಾರೆ. ಅವರ ಆಶಯದಂತೆ ನಾನು ಕನ್ಯಾಭಿಕ್ಷೆಯನ್ನು ಬೇಡುತ್ತಾ ವಿಶ್ವದಲ್ಲಿ ಪರ್ಯಟನೆಮಾಡುತ್ತಿದ್ದೇನೆ. ನಾನು ದರಿದ್ರನಾಗಿದ್ದೇನೆ. ಬಹು ದುಃಖಿತನಾಗಿದ್ದೇನೆ. ಪಿತೃಗಳಿಂದ ವಿವಾಹವಾಗಲು ನಿರ್ದೇಶಿತನಾಗಿದ್ದೇನೆ. ಕನ್ಯಾಭಿಕ್ಷೆಗಾಗಿ ಅಲೆಯುತ್ತಿರುವ ನನಗೆ ಈ ಅರಣ್ಯದಲ್ಲಿರುವ ಯಾವ ಪ್ರಾಣಿಯಾದರೂ ಸರಿಯೇ. ವಿವಾಹಯೋಗ್ಯಳಾದ ಕನ್ಯೆಯು ಅವರಲ್ಲಿರುವಳಾದರೆ ಒಡನೆಯೇ ಮುಂದೆ ಬಂದು ನನಗೆ ಕನ್ಯಾಭಿಕ್ಷೆಯನ್ನು ನೀಡಲಿ. ಅರಣ್ಯದಲ್ಲಿರುವ ಸಕಲಪ್ರಾಣಿಗಳೂ ನನ್ನ ಮೂರು ನಿಯಮಗಳನ್ನೂ ಸ್ಪಷ್ಟವಾಗಿ ಕೇಳಿಸಿಕೊಳ್ಳಲಿ. ಕನ್ಯೆಯಿದ್ದ ಮಾತ್ರದಿಂದಲೇ ನಾನವಳನ್ನು ಮದುವೆಯಾಗ ತಕ್ಕವನಲ್ಲ.

ಅವಳು ನನ್ನ ಹೆಸರಿನವಳೇ ಆಗಿರಬೇಕು ; ಅವಳ ಪೋಷಕರು ಅವಳನ್ನು ಭಿಕ್ಷಾರೂಪವಾಗಿಯೇ ಕೊಡಬೇಕು ಮತ್ತು ಅವಳನ್ನು ಸಾಕುವ ಹೊಣೆಯೂ ನನ್ನದಾಗಿರಬಾರದು."

ಜರತ್ಕಾರುವು ಈ ರೀತಿಯಲ್ಲಿ ತನ್ನ ಅಪೇಕ್ಷೆಯನ್ನು ಘೋಷಿಸುವವರೆಗೂ ಕಾದಿದ್ದು ಅನಂತರ ಆ ವಾರ್ತೆಯನ್ನು ತನಗೆ ತಿಳಿಸಬೇಕೆಂದು ವಾಸುಕಿಯು ತನ್ನ ಅನುಯಾಯಿಗಳಾದ ಸರ್ಪಗಳಿಗೆ ಮೊದಲೇ ಹೇಳಿದ್ದ

ನಲ್ಲವೇ? ಜರತ್ಕಾರುವಿಗಾಗಿ ಕಾಡು-ಮೇಡುಗಳಲ್ಲಿ ಅಲೆದಾಡುತ್ತಿದ್ದ ಸರ್ಪಗಳು ಜರತ್ಕಾರುವಿನ ಆ ಕೂಗನ್ನು ಕೇಳಿದೊಡನೆಯೇ ಸಂಭ್ರಮದಿಂದ ವಾಸುಕಿಯ ಸಮೀಪಕ್ಕೆ ಹೋಗಿ ವಿಷಯವನ್ನು ನಿವೇದಿಸಿದುವು.

ಸರ್ಪಗಳ ಮಾತನ್ನು ಕೇಳಿದೊಡನೆಯೇ ವಾಸುಕಿಯು ಸಾಲಂಕೃತೆಯಾದ ಕನ್ಯೆಯನ್ನು ಕರೆದುಕೊಂಡು ಮಹರ್ಷಿಯ ಸಮೀಪಕ್ಕಾಗಮಿಸಿದನು. ಭಿಕ್ಷಾರೂಪವಾಗಿಯೇ ಆ ಕನ್ಯೆಯನ್ನು ಮಹರ್ಷಿಗೆ ಸಮರ್ಪಿಸಲು ಹೋದನು. ಆದರೆ ಭಿಕ್ಷೆಯನ್ನು ಜರತ್ಕಾರುವು ಒಡನೆಯೇ ಸ್ವೀಕರಿಸಲಿಲ್ಲ.

ಅವನು ವೃದ್ಧನಾಗಿದ್ದರೂ ಅವನಿಚ್ಛಿಸಿದ್ದಂತೆಯೇ ಭಿಕ್ಷಾರೂಪದಲ್ಲಿಯೇ ಅವನಿಗೆ ಹೆಣ್ಣು ಲಭ್ಯವಾಯಿತು. ಆದರಿಂದವನಿಗೆ ಸಂತೋಷವಾಗದಿರಲಿಲ್ಲ. ಅವನು ಮೋಕ್ಷಭಾವದಿಂದಿದ್ದನು. ಅವಳನ್ನು ಒಡನೆಯೇ ಪರಿಗ್ರಹಿಸಲು ಸ್ವಲ್ಪ ಹಿಂದು-ಮುಂದು ನೋಡಿದನು. ಅದಕ್ಕೆ ಕಾರಣವೇನೆಂದರೆ : ಉಳಿದೆರಡು ವಿಷಯಗಳು ಸ್ಪಷ್ಟವಾಗಿರಲಿಲ್ಲ. ಹೆಣ್ಣು ಅವನ ಹೆಸರನ್ನೇ ಹೊಂದಿದವಳಾಗಿರಬೇಕು. ಅವನಿಗೆ ಅವಳನ್ನು ಸಾಕುವ ಹೊಣೆಯಿರಕೂಡದು. ಸಂಸಾರತಾಪತ್ರಯಕ್ಕೆ ಸಿಕ್ಕಿಕೊಳ್ಳಬಾರದು. ಅದನ್ನು ತಿಳಿಯುವ ಸಲುವಾಗಿ ಅವನು ವಾಸುಕಿಯನ್ನು ಕೇಳಿದನು : "ಈ ಕನ್ಯೆಯ ಹೆಸರೇನು? ಇವಳು ನನ್ನ ಹೆಸರಿನವಳೇ ಆಗಿದ್ದರೆ ನಾನಿವಳನ್ನು ಮದುವೆಯಾಗುವೆನೇ ಹೊರತು ಇಲ್ಲದಿದ್ದರೆ ಇಲ್ಲ. ಇವಳನ್ನು ನಾನು ಸಾಕಿ- ಸಲಹುವ ಹವ್ಯಾಸವನ್ನೂ ಇಟ್ಟುಕೊಳ್ಳುವುದಿಲ್ಲ."

ಳ೬ನೆಯ ಅಧ್ಯಾಯವು ಮುಗಿಯಿತು.

ಳ೭ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ನಾಗಕನ್ಯೆಯೊಡನೆ ಜರತ್ಕಾರುವಿನ ವಿವಾಹ : ನಾಗಕನ್ಯೆಯು ಪತಿಸೇವೆಮಾಡುತ್ತಿದ್ದುದು: ಸಲ್ಲದ ನೆಪಮಾಡಿ ಜರತ್ಕಾರುವು ಪತ್ನಿಯನ್ನು ತ್ಯಾಗಮಾಡಿದುದು

ಸೌತಿಗಳು ಹೇಳುತ್ತಾರೆ :

**ವಾಸುಕಿಸ್ತ್ವಬ್ರವೀದ್ವಾಕ್ಯಂ ಜರತ್ಕಾರುಮೃಷಿಂ ತದಾ ।**
**ಸನಾಮ್ನೀ ತವ ಕನ್ಯೇಯಂ ಸ್ವಸಾ ಮೇ ತಪಸಾನ್ವಿತಾ ॥೧॥**

**ಭರಿಷ್ಯಾಮಿ ಚ ತೇ ಭಾರ್ಯಾಂ ಪ್ರತೀಚ್ಛೇಮಾಂ ದ್ವಿಜೋತ್ತಮ ।**
**ರಕ್ಷಣಂ ಚ ಕರಿಷ್ಯೇಽಸ್ಯಾಃ ಸರ್ವಶಕ್ತ್ಯಾ ತಪೋಧನ ।**
**ತ್ವದರ್ಥಂ ರಕ್ಷ್ಯತೇ ಚೈಷಾ ಮಯಾ ಮುನಿವರೋತ್ತಮ ॥೨॥**

ವಾಸುಕಿಯು ಜರತ್ಕಾರುಮಹರ್ಷಿಗೆ ಹೇಳಿದನು :



"ಮುನಿಶ್ರೇಷ್ಠನೇ! ಇವಳ ಹೆಸರು 'ಜರತ್ಕಾರು'. ನಿನ್ನ ಹೆಸರಿನವಳೇ ಆಗಿರುವಳು. ಇವಳು ನನ್ನ ತಂಗಿ. ಸರ್ವದಾ ನಿನ್ನಂತೆಯೇ ತಪಶ್ಚರಣೆಯಲ್ಲಿಯೇ ಕಾಲಕಳೆಯುತ್ತಿದ್ದಾಳೆ. ನೀನಿವಳನ್ನು ಪೋಷಿಸಬೇಕಾಗಿಲ್ಲ. ಇವಳನ್ನೂ ಮತ್ತು ಇವಳೊಡನಿರುವ ನಿನ್ನನ್ನೂ ನಾನೇ ಪೋಷಿಸುತ್ತೇನೆ. ನಿನಗೆ ಪಾಣಿಗ್ರಹಣಮಾಡಿಕೊಡಲೆಂದೇ ನಾನಿದುವರೆಗೂ ಇವಳನ್ನು ಜಾಗರೂಕತೆಯಿಂದ ಸಂರಕ್ಷಣೆಮಾಡಿರುವೆನು. ಆದುದರಿಂದ ಇವಳನ್ನು ದಯಮಾಡಿ ಪರಿಗ್ರಹಿಸು."

ಜರತ್ಕಾರುವು ವಾಸುಕಿಗೆ ಹೇಳುತ್ತಾನೆ :

**ನ ಭರಿಷ್ಯೇऽಹಮೇತಾಂ ವೈ ಏಷ ಮೇ ಸಮಯಃ ಕೃತಃ ।**
**ಅಪ್ರಿಯಂ ಚ ನ ಕರ್ತವ್ಯಂ ಕೃತೇ ಚೈನಾಂ ತ್ಯಜಾಮ್ಯಹಮ್ ॥೩॥**

"ನಾನಿವಳ ಪೋಷಣೆಯ ಭಾರವನ್ನು ವಹಿಸಿಕೊಳ್ಳುವುದಿಲ್ಲ. ಇದಂತೂ ನನ್ನ ನಿಯಮಗಳಿಗೆ ಸೇರಿದ್ದೇ ಆಗಿರುವುದು. ಇದರೊಂದಿಗೆ ನನ್ನ ಮತ್ತೊಂದು ನಿಯಮವನ್ನೂ ಈಗಲೇ ಹೇಳಿಬಿಡುತ್ತೇನೆ. ಯಾವಾಗಲೂ ನಿನ್ನ ತಂಗಿಯು ನನಗೆ ಅಪ್ರಿಯವಾದ ಕಾರ್ಯವನ್ನು ಮಾಡಲೇಕೂಡದು. ಅಪ್ರಿಯಕಾರ್ಯವನ್ನು ಮಾಡಿದಳೆಂದರೆ ಆ ಕೂಡಲೇ ನಾನಿವಳನ್ನು ಪರಿತ್ಯಜಿಸಿ ಹೊರಟುಹೋಗುತ್ತೇನೆ."

ವಾಸುಕಿಯು ಅದಕ್ಕೂ ಸಮ್ಮತಿಸಿ ಹಾಗೇನಾದರೂ ಆದರೆ (ಪರಿತ್ಯಜಿಸಿ ಹೋದರೆ ) ತನ್ನ ತಂಗಿಯನ್ನು ತಾನೇ ಪೋಷಿಸುವೆನೆಂದು ಪ್ರತಿವಚನವನ್ನಿತ್ತ ನಂತರ ಜರತ್ಕಾರುವು ಸರ್ಪರಾಜನ ಅರಮನೆಗೆ ತೆರಳಿದನು.

ಮಂತ್ರವಿದರಲ್ಲಿ ಶ್ರೇಷ್ಠನಾದ, ವೃದ್ಧನಾದ, ವ್ರತನಿಷ್ಠನಾದ, ಧರ್ಮಾತ್ಮನಾದ ಜರತ್ಕಾರುಮಹರ್ಷಿಯು ವಿಧಿಪೂರ್ವಕವಾಗಿ ನಾಗಕನ್ಯೆಯ ಪಾಣಿಗ್ರಹಣಮಾಡಿಕೊಂಡನು. ನಾಗರಾಜನು ಜರತ್ಕಾರುಮಹರ್ಷಿಗಾಗಿಯೇ ಅರಮನೆಯೊಂದನ್ನು ಬಿಟ್ಟುಕೊಟ್ಟನು. ರಮ್ಯವಾಗಿದ್ದ ಆ ಅರಮನೆಗೆ ಋಷಿ-ಮಹರ್ಷಿಗಳ ಸ್ತೋತ್ರಕ್ಕೆ ಪಾತ್ರನಾಗಿದ್ದ ಜರತ್ಕಾರುಮಹರ್ಷಿಯು ಭಾರ್ಯೆಯೊಡನೆ ತೆರಳಿದನು. ಆ ಅರಮನೆಯಲ್ಲಿನ ಶಯನಗೃಹವು ಸಕಲವಿಧವಾದ ಭೋಗ್ಯವಸ್ತುಗಳಿಂದಲೂ ಸುಸಜ್ಜಿತವಾಗಿದ್ದಿತು. ಆ ಅರಮನೆಯಲ್ಲಿಯೇ ಮಹರ್ಷಿಯು ಕೆಲವು ಕಾಲದವರೆಗೆ ಭಾರ್ಯೆಯೊಡನೆ ಸುಖದಿಂದ ಕಾಲ ಕಳೆದನು.

ವಾಸುಕಿಯೊಡನೆ ಹೇಳಿದ ವಿಷಯವನ್ನೇ ಪುನಃ ಭಾರ್ಯೆಯೊಡನೆಯೂ ಮಹರ್ಷಿಯು ಹೇಳಿದನು :

**ವಿಪ್ರಿಯಂ ಮೇ ನ ಕರ್ತವ್ಯಂ ನ ಚ ವಾಚ್ಯಂ ಕದಾಚನ ॥೮॥**

"ನನಗೆ ಅಪ್ರಿಯವಾದ ಕಾರ್ಯವನ್ನೂ ಮಾಡಬಾರದು ಮತ್ತು ಅಪ್ರಿಯವಾದ ಯಾವ ಮಾತನ್ನೂ ಹೇಳಬಾರದು.

**ತ್ಯಜೇಯಂ ವಿಪ್ರಿಯೇ ಚ ತ್ವಾಂ ಕೃತೇ ವಾಸಂ ಚ ತೇ ಗೃಹೇ ।**
**ಏತದ್ಗೃಹಾಣ ವಚನಂ ಮಯಾ ಯತ್ಸಮುದೀರಿತಮ್ ॥೯॥**

ನೀನೇನಾದರೂ ನನಗೆ ಅಪ್ರಿಯವಾದ ಕಾರ್ಯವನ್ನು ಮಾಡಿದ್ದೇ ಆದರೆ–ನಿನ್ನನ್ನು ಪರಿತ್ಯಜಿಸುವೆನು ; ನಿನ್ನ ಮನೆಯನ್ನೂ ಬಿಟ್ಟುಹೋಗುವೆನು. ನಾನು ಸ್ಪಷ್ಟವಾಗಿ ಹೇಳಿರುವ ಈ ನನ್ನ ಮಾತುಗಳನ್ನು ನೀನು ಸದಾ ಮನಸ್ಸಿನಲ್ಲಿಟ್ಟುಕೊಂಡಿರಬೇಕು, ತಿಳಿಯಿತೇ?"

ಮಹರ್ಷಿಯು ಹೇಳಿದ ಮಾತುಗಳನ್ನು ಕೇಳಿ ವಾಸುಕಿಯ ತಂಗಿಯು ಬಹುದುಃಖಿತಳಾಗಿ ಪತಿಯನ್ನು ಕುರಿತು ಹೇಳಿದಳು : 'ಏವಮಸ್ತು'– ಹಾಗೆಯೇ ಆಗಲಿ. ನಾನು ತಮಗೆ ಅಪ್ರಿಯವಾದ ಯಾವ ಕಾರ್ಯವನ್ನೂ ಮಾಡುವುದಿಲ್ಲ.'

ಅದನ್ನೇ ಮನದಲ್ಲಿ ನೆನೆಯುತ್ತಾ ಜರತ್ಕಾರುವು ಬಹಳವಾಗಿ ದುಃಖಿಸುತ್ತಿದ್ದಳು. ಏಕೆಂದರೆ : ಮಹರ್ಷಿಯು ಹೇಳಿದಂತೆಯೇ ನಡೆಯತಕ್ಕವನು. ಪರಿಹಾಸಕ್ಕಾಗಿ ಈ ಮಾತನ್ನಾಡಿದವನಲ್ಲ. ಆದುದರಿಂದ ಜರತ್ಕಾರುವಿನ ಮನಸ್ಸು ಯಾವಾಗಲೂ ಉದ್ವಿಗ್ನವಾಗಿಯೇ ಇರುತ್ತಿತ್ತು. ದುಃಖದಾಯಕನಾದ ಪತಿಯನ್ನು * ಶ್ವೇತಕಾಕೀಯೋಪಾಯಗಳಿಂದ (ಶ್ವೇತಕಾಕೀಯ ನ್ಯಾಯದಂತೆ) ಸರ್ವಕಾಲದಲ್ಲಿಯೂ ಉಪಚರಿಸುತ್ತಿದ್ದಳು.

ಒಮ್ಮೆ ಋತುಕಾಲವು ಪ್ರಾಪ್ತವಾಗಲಾಗಿ, ಋತುಸ್ನಾತೆಯಾದ ಜರ

---

* 'ಶ್ವಾ' ಎಂದರೆ ನಾಯಿ ; ನಾಯಿಯಂತೆ ಪತಿಯ ಸೇವೆಯಲ್ಲಿ ಸರ್ವದಾ ಜಾಗರೂಕಳಾಗಿರುತ್ತಿದ್ದಳು. 'ಏತ' ಎಂದರೆ ಜಿಂಕೆ ; ಜಿಂಕೆಯಂತೆ ಗಂಡನ ಸಮೀಪದಲ್ಲಿ ಭೀತಳಾಗಿರುತ್ತಿದ್ದಳು. 'ಕಾಕ' ಎಂದರೆ ಕಾಗೆ ; ಕಾಗೆಗೆ ಮುಂದೇನಾಗುವುದೆಂಬುದರ ಅರಿವಿರುತ್ತದೆಯೆಂದು ಹೇಳುತ್ತಾರೆ. ಜರತ್ಕಾರುವೂ ಗಂಡನಿಗೆ ಬೇಕಾದುದೆಲ್ಲವನ್ನೂ ಮೊದಲೇ ಸಿದ್ಧಮಾಡಿರುತ್ತಿದ್ದಳು. ಅವನು ವಾಚಾ ಹೇಳದಿದ್ದರೂ ಕೇವಲ ಮುಖಭಾವದಿಂದಲೇ ಅವನ ಮನಸ್ಸಿನ ಇಂಗಿತವನ್ನರಿತು ಅದರಂತೆ ನಡೆದುಕೊಳ್ಳುತ್ತಿದ್ದಳು. ಹೀಗೂ ಒಬ್ಬರು ವ್ಯಾಖ್ಯಾನಿಸಿದ್ದಾರೆ.

'ಶ್ವೇತಕಾಕ' ಎಂದರೆ ಬಿಳಿಯ ಕಾಗೆ. ಕಾಗೆಯು ಬೆಳ್ಳಗಿದೆಯೆಂದರೂ ಇಲ್ಲವೆನ್ನದೆ 'ನಿಜ-ನಿಜ!' ಎಂದು ಹೇಳುತ್ತಾ ಉಪಾಯದಿಂದ ನಡೆದುಕೊಳ್ಳುವುದಕ್ಕೆ ಶ್ವೇತ ಕಾಕೀಯನ್ಯಾಯವೆನ್ನುತ್ತಾರೆ.

ತ್ಕಾರುವು ಪತಿಯ ಸೇವೆಯಲ್ಲಿ ನಿರತಳಾದಳು. ಸುಮುಹೂರ್ತದಲ್ಲಿ ಜರತ್ಕಾರುಗಳಿಬ್ಬರ ಸಮಾಗಮದಿಂದಾಗಿ ಮಹಾತೇಜಸ್ಸಿನಿಂದ ಕೂಡಿದ್ದ, ಪ್ರಭೆಯಲ್ಲಿ ಯಜ್ಞೇಶ್ವರನಿಗೆ ಅನುರೂಪವಾಗಿದ್ದ ಗರ್ಭವು ಜರತ್ಕಾರುವಿನಲ್ಲಿ ಅಂಕುರಿಸಿತು. ಶುಕ್ಲಪಕ್ಷದ ಚಂದ್ರನಂತೆ ದಿನ-ದಿನಕ್ಕೂ ಆ ಗರ್ಭವು ಅಭಿವೃದ್ಧಿಹೊಂದುತ್ತಿದ್ದಿತು. ಜರತ್ಕಾರುವು ಗರ್ಭಧಾರಣೆಮಾಡಿದ ಕೆಲವು ದಿನಗಳನಂತರ ಮಹರ್ಷಿಯೊಮ್ಮೆ ಆಯಾಸಗೊಂಡವನಂತೆ ಪತ್ನಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದನು. ಅವನು ಹಾಗೆಯೇ ಸ್ವಲ್ಪಹೊತ್ತು ಮಲಗಿರುವಾಗ ಸೂರ್ಯನು ಅಸ್ತಂಗತನಾಗುತ್ತಿದ್ದನು. ಆ ಸಮಯದಲ್ಲಿ ತಾನು ಮಾಡಬೇಕಾಗಿದ್ದ ಕರ್ತವ್ಯದ ವಿಷಯವಾಗಿ ಜರತ್ಕಾರುವು ಆಲೋಚಿಸತೊಡಗಿದಳು. ಸೂರ್ಯಾಸ್ತಮಯವಾಯಿತೆಂದು ಹೇಳಿ ಪತಿಯನ್ನು ನಿತ್ಯಕರ್ಮಾನುಷ್ಠಾನಕ್ಕೆ ಎಚ್ಚರಿಸಬೇಕೇ? ಸುಖನಿದ್ರಿತನಾಗಿರುವ ಪತಿಯನ್ನು ಎಚ್ಚರಿಸಕೂಡದೇ? ಹೇಗೆ ಮಾಡುವುದರಿಂದ ಧರ್ಮದ ಸಾಧನೆಯಾಗುತ್ತದೆ ಮತ್ತು ಪತಿಗೆ ಪ್ರಿಯವಾದುದನ್ನು ಮಾಡಿದಂತಾಗುತ್ತದೆ? ಹೇಗೆ ಮಾಡಿದರೂ ದುಃಖವನ್ನುಂಟುಮಾಡುವ ಸ್ವಭಾವವುಳ್ಳ ಮಹರ್ಷಿಗೆ ತಪ್ಪಾಗಿ ಕಾಣಬಹುದು. ಅಥವಾ ಪ್ರಿಯವಾಗಿಯೂ ಕಾಣಬಹುದು. ಈ ಸಮಯದಲ್ಲಿ ತಾನು ಹೇಗೆ ನಡೆದುಕೊಳ್ಳಬೇಕು? ಈಗ ಇವನನ್ನು ಎಚ್ಚರಿಸಿದರೆ ಇವನು ನನ್ನ ಮೇಲೆ ಕೋಪಿಸಿಕೊಳ್ಳಬಹುದು. ಎಚ್ಚರಿಸದಿದ್ದರೆ ಸಕಾಲದಲ್ಲಿ ಮಾಡಬೇಕಾದ ನಿತ್ಯಕರ್ಮಕ್ಕೆ ಲೋಪವುಂಟಾಗುವುದು. ಕಳೆದುಹೋದ ಸಂಧ್ಯೆಯು ಪುನಃ ಹಿಂದಕ್ಕೆ ಬರುವುದಿಲ್ಲ–ಹೀಗೆ ಕೆಲವು ಕ್ಷಣಗಳು ಸಮಾಲೋಚಿಸಿ ಕಡೆಗೆ–**'ಧರ್ಮಲೋಪೋ ಗರೀಯಾನ್'** – ಎಂಬ ನಿರ್ಧಾರಕ್ಕೆ ಬಂದಳು. 'ಸುಖಸುಪ್ತನಾಗಿರುವ ಪತಿಯು ನನ್ನ ಮೇಲೆ ಕೋಪಿಸಿಕೊಂಡರೂ ಚಿಂತೆಯಿಲ್ಲ. ಧರ್ಮಲೋಪವು ಮಾತ್ರ ಉಂಟಾಗಕೂಡದು' ಇವನು ಮಾಡಬೇಕಾಗಿರುವ ಸಂಧ್ಯಾಕರ್ಮವು ಕಾಲಾತೀತವಾಗಕೂಡದು.

**ಉತ್ಥಾಪಯಿಷ್ಯೇ ಯದ್ಯೇನಂ ಧ್ರುವಂ ಕೋಪಂ ಕರಿಷ್ಯತಿ ।**
**ಧರ್ಮಲೋಪೋ ಭವೇದಸ್ಯ ಸಂಧ್ಯಾತಿಕ್ರಮಣೇ ಧ್ರುವಮ್ ॥೧೯॥**

ಪತಿಯನ್ನು ಎಚ್ಚರಗೊಳಿಸಿದ್ದೇ ಆದರೆ–ಕೂಡಲೇ ಇವನು ನನ್ನ

ಮೇಲೆ ಕೋಪಗೊಳ್ಳುವುದಂತೂ ನಿಶ್ಚಯ. ಅನುಭವಿಸಬೇಕಾದುದನ್ನು ಅನು ಭವಿಸಿಯೇ ತೀರಬೇಕು. ಒಂದು ವೇಳೆ ಮಹರ್ಷಿಯನ್ನು ಎಚ್ಚರಗೊಳಿಸ ದಿದ್ದರೆ ಸಂಧ್ಯಾಕಾಲವು ಅತಿಕ್ರಮಿಸಿ ಧರ್ಮಲೋಪವುಂಟಾಗುತ್ತದೆ. ಆದುದರಿಂದ ನಾನು ಪತಿಯ ಪ್ರಕೋಪಕ್ಕೆ ಪಾತ್ರಳಾದರೂ ಚಿಂತೆಯಿಲ್ಲ. ಧರ್ಮಲೋಪಕ್ಕೆ ಅವಕಾಶವಾಗದಂತೆ ನಡೆದುಕೊಳ್ಳುವುದು ನನ್ನ ಕರ್ತವ್ಯ ವಾಗಿದೆ'–ಎಂಬುದಾಗಿ ಮನಸ್ಸಿನಲ್ಲಿ ನಿಶ್ಚಯಿಸಿ, ಅನವರತವಾದ ತಪಶ್ಚರಣೆ ಯಿಂದ ದೇದೀಪ್ಯಮಾನವಾದ ತೇಜಸ್ಸನ್ನು ಹೊಂದಿ ಸಾಕ್ಷಾತ್ ಯಜ್ಞೇಶ್ವರ ನಂತೆಯೇ ಕಾಣುತ್ತಿದ್ದ ಮಹರ್ಷಿಯನ್ನು ಕುರಿತು, ಮಧುರಭಾಷಿಣಿಯಾದ ಸರ್ಪಕನ್ಯೆಯು ಮೆಲ್ಲನೆ ನುಡಿದಳು :

**ಉತ್ತಿಷ್ಠ ತ್ವಂ ಮಹಾಭಾಗ ಸೂರ್ಯೋಽಸ್ತಮುಪಗಚ್ಛತಿ ।**
**ಸಂಧ್ಯಾಮುಪಾಸ್ವ ಭಗವನ್ನಪಃ ಸ್ಪೃಷ್ಟ್ವಾ ಯತವ್ರತಃ ।**
**ಪ್ರಾದುಷ್ಕೃತಾಗ್ನಿಹೋತ್ರೋಽಯಂ ಮುಹೂರ್ತೋ ರಮ್ಯದಾರುಣಃ ।**
**ಸಂಧ್ಯಾ ಪ್ರವರ್ತತೇ ಚೇಯಂ ಪಶ್ಚಿಮಾಯಾಂ ದಿಶಿ ಪ್ರಭೋ ॥೨೨॥**

"ಮಹಾಭಾಗನೇ! ಸೂರ್ಯನು ಅಸ್ತಂಗತನಾಗುತ್ತಿದ್ದಾನೆ. ಸಾಯಂ ಸಂಧ್ಯೆಯನ್ನು ಮಾಡಲು ಎದ್ದೇಳು. ವ್ರತನಿಷ್ಠನಾದ ನೀನು ಶುದ್ಧಾಚಮನ ಮಾಡಿ ಸಾಯಂಸಂಧ್ಯೆಯನ್ನು ಮಾಡುವವನಾಗು. ಅಗ್ನಿಹೋತ್ರವನ್ನು ಮಾಡಲು ಇದು ಸಕಾಲವಾಗಿದೆ. ಪಶ್ಚಿಮದಿಕ್ಕಿನಲ್ಲಿ ಸೂರ್ಯನು ಅಸ್ತಂಗತ ನಾಗುತ್ತಿದ್ದು ಆಕಾಶವು ರಕ್ತಚ್ಛಾಯೆಯಿಂದ ಕೂಡಿ ಬಹುರಮ್ಯವಾಗಿ ಮತ್ತು ದಾರುಣವಾಗಿ ಕಾಣುತ್ತಿರುವ ಈ ಸಮಯವು ಸಾಯಂಸಂಧ್ಯಾನುಷ್ಠಾನಕ್ಕೆ ಮತ್ತು ಅಗ್ನಿಹೋತ್ರಕ್ಕೆ–ಬಹುಪ್ರಶಸ್ತವಾದ ಸಮಯವಾಗಿರುವುದು. ಪೂಜ್ಯನೇ! ಜಾಗ್ರತನಾಗು"–ಎಂದು ಮೆಲ್ನುಡಿಯಿಂದ ಹೇಳುತ್ತಾ ಮೃದು ವಾದ ಕೈಗಳಿಂದ ಪತಿಯ ಮುಖಾರವಿಂದವನ್ನು ಮೃದುವಾಗಿ ಸ್ಪರ್ಶಿಸಿದಳು.

ಭೀರುವಾದ, ಮಂದಗಾಮಿನಿಯಾದ ನಾಗಕನ್ಯೆಯು ಹೀಗೆ ಹೇಳಿದ್ದೇ ತಡ–ಮಹಾತಪಸ್ವಿಯಾದ ಜರತ್ಕಾರುವು ಕೋಪದಿಂದ ಅದುರುತ್ತಿದ್ದ ತುಟಿ ಗಳಿಂದ ಕೂಡಿದವನಾಗಿ ಭಾರ್ಯೆಯನ್ನು ಕುರಿತು ಹೇಳಿದನು :

**ಅವಮಾನಃ ಪ್ರಯುಕ್ತೋಽಯಂ ತ್ವಯಾ ಮಮ ಭುಜಙ್ಗಮೇ ।**
**ಸಮೀಪೇ ತೇ ನ ವತ್ಸ್ಯಾಮಿ ಗಮಿಷ್ಯಾಮಿ ಯಥಾಗತಮ್ ॥೨೪॥**

"ಭುಜಂಗಮೇ! ನೀನು ನನಗಿಂದು ಮಹತ್ತರವಾದ ಅಪಮಾನ ಮಾಡಿಬಿಟ್ಟಿರುವೆ. ಇದನ್ನು ನಾನು ಸಹಿಸಿಕೊಂಡು ಖಂಡಿತವಾಗಿಯೂ ಇಲ್ಲಿರಲಾರೆನು. ನಾನಿನ್ನು ಎಲ್ಲಿಂದ ಬಂದಿದ್ದೆನೋ ಅಲ್ಲಿಗೇ ಹೊರಟು ಹೋಗುತ್ತೇನೆ.

**ಶಕ್ತಿರಸ್ತಿ ನ ವಾಮೋರು ಮಯಿ ಸುಪ್ತೇ ವಿಭಾವಸೋಃ ।**
**ಅಸ್ತಂ ಗನ್ತುಂ ಯಥಾಕಾಲಮಿತಿ ಮೇ ಹೃದಿ ವರ್ತತೇ ॥೨೫॥**

ನಾನಿನ್ನೂ ಮಲಗಿರುವಾಗ ಸೂರ್ಯನಿಗೆ ಅಸ್ತಂಗತನಾಗುವ ಶಕ್ತಿಯಿಲ್ಲ. ಮಲಗಿರುವವರೆಗೂ ಅವನು ಅಸ್ತಂಗತನಾಗುವುದಿಲ್ಲವೆಂದು ನನ್ನ ಮನಸ್ಸಿಗೆ ತಿಳಿದಿದೆ.

**ನ ಚಾಪ್ಯವಮತಸ್ಯೇಹ ವಾಸೋ ರೋಚೇತ ಕಸ್ಯಚಿತ್ ।**
**ಕಿಂ ಪುನರ್ಧರ್ಮಶೀಲಸ್ಯ ಮಮ ವಾ ಮದ್ವಿಧಸ್ಯ ವಾ ॥೨೬॥**

ಅವಮಾನವಾದೆಡೆಯಲ್ಲಿ ವಾಸಮಾಡಲು ಯಾವನಿಗೂ ಇಚ್ಛೆಯುಂಟಾಗುವುದಿಲ್ಲ. ಹೀಗಿರುವಾಗ ಧರ್ಮಶೀಲನಾದ ನನ್ನ ವಿಷಯವಾಗಿ ಅಥವಾ ನನ್ನಂತಹವರ ವಿಷಯವಾಗಿ ಹೇಳುವುದೇನಿದೆ?"

ಮಹರ್ಷಿಯ ಆ ಮಾತುಗಳು ನಾಗಕನ್ಯೆಯ ಹೃದಯವನ್ನು ಕಂಪನಗೊಳಿಸಿದುವು. ಆ ಮಾತುಗಳನ್ನು ಕೇಳಿದ ವಾಸುಕಿಯ ತಂಗಿಯು ದೈನ್ಯಮುಖಭಾವದಿಂದ ಕೂಡಿದವಳಾಗಿ ಪತಿಗೆ ಹೇಳಿದಳು :

**ನಾವಮಾನಾತ್ಕೃತವತೀ ತವಾಹಂ ವಿಪ್ರ ಬೋಧನಮ್ ।**
**ಧರ್ಮಲೋಪೋ ನ ತೇ ವಿಪ್ರ ಸ್ಯಾದಿತ್ಯೇತನ್ಮಯಾ ಕೃತಮ್ ॥೨೭॥**

"ಪತಿದೇವನೇ! ನಿನಗೆ ಅಪಮಾನವನ್ನೆಸಗಬೇಕೆನ್ನುವ ಆಶಯದಿಂದ ಸುಖನಿದ್ರಿತನಾಗಿದ್ದ ನಿನ್ನನ್ನು ಜಾಗ್ರತಗೊಳಿಸಲಿಲ್ಲ. ಸಾಯಂಸಂಧ್ಯಾಕಾಲವು ಅತೀತವಾಗಿ ಧರ್ಮಲೋಪವಾಗಕೂಡದೆಂಬ ಒಂದೇ ಆಶಯದಿಂದ ನಾನು ನಿನ್ನನ್ನು ಎಚ್ಚರಗೊಳಿಸಿದೆನು. ಇದಕ್ಕಾಗಿ ಕೋಪಿಸಬೇಡ, ಪ್ರಭೋ!"

ಜರತ್ಕಾರುವಿಗೆ ಕೋಪವೂ ಬಂದಿತ್ತು. ಮೇಲಾಗಿ ಅವನು ಭಾರ್ಯೆಯನ್ನು ತ್ಯಜಿಸಿಹೋಗಲು ನಿಶ್ಚಯವನ್ನೂ ಮಾಡಿಬಿಟ್ಟಿದ್ದನು. ಆದರಿಂದಾಗಿ ಪತ್ನಿಯ ದೈನ್ಯಯುಕ್ತವಾದ ಪ್ರಾರ್ಥನೆಯು ಅವನ ಮನಸ್ಸಿನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡಲಿಲ್ಲ. ದುಃಖಪರಿತಪ್ತಳಾಗಿದ್ದ ಭುಜಂಗಮೆಗೆ ಕಟ್ಟುನಿಟ್ಟಾಗಿ ಹೇಳಿದನು :

**ನ ಮೇ ವಾಗನೃತಂ ಪ್ರಾಹ ಗಮಿಷ್ಯೇಽಹಂ ಭುಜಙ್ಗಮೇ ।**
**ಸಮಯೋ ಹ್ಯೇಷ ಮೇ ಪೂರ್ವಂ ತ್ವಯಾ ಸಹ ಮಿಥಃ ಕೃತಃ ॥**

**ಸುಖಮಸ್ಮ್ಯುಷಿತೋ ಭದ್ರೇ ಬ್ರೂಯಾಸ್ತ್ವಂ ಭ್ರಾತರಂ ಶುಭೇ ।**
**ಇತೋ ಮಯಿ ಗತೇ ಭೀರು ಗತಃ ಸ ಭಗವಾನಿತಿ ।**
**ತ್ವಂ ಚಾಪಿ ಮಯಿ ನಿಷ್ಕ್ರಾನ್ತೇ ನ ಶೋಕಂ ಕರ್ತುಮರ್ಹಸಿ ॥**

"ನಾಗಕನ್ಯೆಯೇ! ನನ್ನ ಮುಖದಿಂದ ಇದುವರೆಗೂ ಸುಳ್ಳೆಂಬುದೇ ಹೊರಟಿಲ್ಲ. ಆದುದರಿಂದ ಇಂದು ನಾನು ಹೇಳಿದ ಮಾತು ಸುಳ್ಳಾಗಲು ಸಾಧ್ಯವಿಲ್ಲ. ನಾನು ಹೊರಟುಬಿಡುತ್ತೇನೆ. ನಾನು ನಿನ್ನೊಡನೆ ಸಂಸಾರವನ್ನು ಆರಂಭಿಸಿದಾಗಲೇ ಈ ಮಾತನ್ನು ನಿನ್ನೊಡನೆ ರಹಸ್ಯದಲ್ಲಿ ಹೇಳಿದ್ದೆನಲ್ಲವೇ? ಆದುದರಿಂದ ಈ ವಿಷಯವಾಗಿ ಪುನಃ ಪರ್ಯಾಲೋಚಿಸುವ ಸಾಧ್ಯತೆಯೂ ಇಲ್ಲ. ಆದರೆ, ಭದ್ರೇ! ನಿನ್ನೊಡನೆ ನಾನು ಸುಖದಿಂದ ಕಾಲಕಳೆದೆನು. ನಾನು ಹೊರಟುಹೋದನಂತರ ನಿನ್ನಣ್ಣನಿಗೂ ಈ ವಾರ್ತೆಯನ್ನು ತಿಳಿಸಿಬಿಡು. ನಾನು ಹೋದುದಕ್ಕಾಗಿ ನೀನೂ ಶೋಕಿಸುವ ಕಾರಣವಿಲ್ಲ."

ನಾಗಕನ್ಯೆಗೆ ದುಃಖವನ್ನು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಚಿಂತಾ-ಶೋಕಪರಾಯಣಳಾದ ಜರತ್ಕಾರುವು ಮಾತನಾಡಬೇಕೆಂದು ಪ್ರಯತ್ನಿಸಿದರೂ ಅವಳ ಬಾಯಲ್ಲಿ ಮಾತು ಹೊರಡದಂತಾಯಿತು. ಬಿಕ್ಕಿ-ಬಿಕ್ಕಿ ಅಳುತ್ತಿದ್ದಳು. ಧಾರಾಕಾರವಾದ ಕಣ್ಣೀರಿನಿಂದ ಮುಖವೆಲ್ಲವೂ ತೋಯ್ದುಹೋಯಿತು. ಹೃದಯವು ಕಂಪಿಸುತ್ತಿತ್ತು. ಎರಡು ಕೈಗಳನ್ನೂ ಜೋಡಿಸಿ ಪತಿದೇವನ ಮುಂದೆ ನಿಂತಳು. ಮಾತನಾಡಬೇಕೆಂದು ಎಷ್ಟೇ ಪ್ರಯತ್ನಿಸಿದರೂ ಬರೀ ಪ್ರಯತ್ನದಲ್ಲಿಯೇ ಪರ್ಯವಸಾನಹೊಂದುತ್ತಿತ್ತು. ಮಾತು ಗಂಟಲಿನಿಂದ ಮುಂದೆ ಬರುತ್ತಿರಲಿಲ್ಲ. ಕಣ್ಣುಗಳಲ್ಲಿ ಬುಗ್ಗೆಯಂತೆ

ನೀರು ತುಂಬಿ ಹರಿಯುತ್ತಿತ್ತು. ಆದರೂ ಧೈರ್ಯತಂದುಕೊಂಡು ಪತಿಯನ್ನು ಕುರಿತು ಹೇಳಿದಳು :

**ನ ಮಾಮರ್ಹಸಿ ಧರ್ಮಜ್ಞ ಪರಿತ್ಯಕ್ತುಮನಾಗಸಮ್ ।**
**ಧರ್ಮೇ ಸ್ಥಿತಾಂ ಸ್ಥಿತೋ ಧರ್ಮೇ ಸದಾ ಪ್ರಿಯಹಿತೇ ರತಾಮ್ ।**
**ಪ್ರಧಾನೇ ಕಾರಣಂ ಯಚ್ಚ ಮಮ ತುಭ್ಯಂ ದ್ವಿಜೋತ್ತಮ ॥೩೬॥**

**ತದಲಬ್ಧವತೀಂ ಮನ್ದಾಂ ಕಿಂ ಮಾಂ ವಕ್ಷ್ಯತಿ ವಾಸುಕಿಃ ।**
**ಮಾತೃಶಾಪಾಭಿಭೂತಾನಾಂ ಜ್ಞಾತೀನಾಂ ಮಮ ಸತ್ತಮ ॥೩೭॥**

**ಅಪತ್ಯಾಮೀಪ್ಸಿತಂ ತ್ವತ್ತಸ್ತಚ್ಚ ತಾವನ್ನ ದೃಶ್ಯತೇ ।**
**ತ್ವತ್ತೋ ಹ್ಯಪತ್ಯಲಾಭೇನ ಜ್ಞಾತೀನಾಂ ಮೇ ಶಿವಂ ಭವೇತ್ ॥೩೮॥**

**ಸಮ್ಪ್ರಯೋಗೋ ಭವೇನ್ನಾಯಂ ಮಮ ಮೋಘಸ್ತ್ವಯಾ ದ್ವಿಜ ।**
**ಜ್ಞಾತೀನಾಂ ಹಿತಮಿಚ್ಛನ್ತಿ ಭಗವಂಸ್ತ್ವಾಂ ಪ್ರಸಾದಯೇ ॥೩೯॥**

"ಧರ್ಮಜ್ಞನೇ! ಧರ್ಮದಲ್ಲಿಯೇ ನಿರತನಾಗಿರುವ ನೀನು ಧರ್ಮ ಪರಾಯಣೆಯಾದ, ಸರ್ವದಾ ನಿನಗೆ ಪ್ರಿಯವನ್ನೂ–ಹಿತವನ್ನೂ ಮಾಡು ವುದರಲ್ಲಿಯೇ ಆಸಕ್ತಳಾಗಿರುವ, ಪಾಪರಹಿತಳಾದ ನನ್ನನ್ನು ಪರಿತ್ಯಜಿಸುವುದು ಯೋಗ್ಯವಲ್ಲ. ವಾಸುಕಿಯು ನನ್ನನ್ನು ನಿನಗೆ (ಯಾವ ಕಾರಣದಿಂದ) ಮದುವೆಮಾಡಿಕೊಟ್ಟನೋ ಅದನ್ನು ಇನ್ನೂ ಪಡೆದುಕೊಳ್ಳದೇ ಇರುವ ಮಂದಭಾಗ್ಯಳಾದ ನನ್ನ ವಿಷಯದಲ್ಲಿ ವಾಸುಕಿಯು ಏನು ಹೇಳುವನು? (ನನ್ನನ್ನವನು ಹೀಯಾಳಿಸುವುದಿಲ್ಲವೇ? ) ಮಾತೃಶಾಪದಿಂದ ಪರಿತಪ್ತರಾಗಿ ರುವ ಜ್ಞಾತಿಗಳ ಶಾಪವಿಮೋಚನೆಗಾಗಿ ನಿನ್ನಿಂದ ಮಗನನ್ನು ಅಪೇಕ್ಷಿಸಿ ನನ್ನಣ್ಣನು ನನ್ನನ್ನು ಪ್ರಯತ್ನಪೂರ್ವಕವಾಗಿ ನಿನಗೆ ಮದುವೆಮಾಡಿಕೊಟ್ಟಿದ್ದಾನೆ. ಆದರೆ ಇದುವರೆಗೂ ಅವನ ಆಶಯವು ಫಲಿತವಾಗುವ ಯಾವ ಕುರುಹುಗಳೂ ಕಂಡುಬಂದಿರುವುದಿಲ್ಲ. ನಿನ್ನಿಂದ ಪುತ್ರನನ್ನು ಪಡೆಯು ವುದರಿಂದ ಮಾತ್ರವೇ ನನ್ನ ಜ್ಞಾತಿ-ಬಾಂಧವರಿಗೆ ಮಂಗಳವುಂಟಾಗುತ್ತದೆ.

ಬ್ರಾಹ್ಮಣೋತ್ತಮನೇ! ನಿನ್ನೊಡನೆ ನನ್ನ ಸಂಬಂಧವು ನಿಷ್ಪ್ರಯೋಜಕ ವಾಗಬಾರದು. ನನ್ನ ಜ್ಞಾತಿ-ಬಾಂಧವರಿಗೆ ಹಿತವನ್ನುಂಟುಮಾಡುವ ಏಕೈಕವಾದ ಇಚ್ಛೆಯಿಂದ ನಾನು ನಿನ್ನನ್ನು ದೈನ್ಯದಿಂದ ಪ್ರಾರ್ಥಿಸುತ್ತೇನೆ.

**ಇಮಮವ್ಯಕ್ತರೂಪಂ ಮೇ ಗರ್ಭಮಾಧಾಯ ಸತ್ತಮ ।**
**ಕಥಂ ತ್ಯಕ್ತ್ವಾ ಮಹಾತ್ಮಾ ಸನ್ಗನ್ತುಮಿಚ್ಛಸ್ಯನಾಗಸಮ್ ॥೪೦॥**

ನಿನ್ನ ಅನುಗ್ರಹದಿಂದಾಗಿ ನಾನು ಗರ್ಭವತಿಯಾಗಿರುವುದೇನೋ ನಿಶ್ಚಯ. ಆದರೆ ಗರ್ಭವಿನ್ನೂ ಅವ್ಯಕ್ತವಾಗಿದೆ. ಇಂತಹ ಸ್ಥಿತಿಯಲ್ಲಿ ಪಾಪ



ರಹಿತಳಾದ ನನ್ನನ್ನು ಪರಿತ್ಯಜಿಸಿ ಹೊರಟುಹೋಗಲು ಮಹಾತ್ಮನಾದ ನಿನಗೆ ಹೇಗೆ ಸಾಧ್ಯವಾಗುವುದು?"

ನಾಗಕನ್ಯೆಯು ಹೀಗೆ ಹೇಳಲಾಗಿ ತಪೋಧನನಾದ ಜರತ್ಕಾರುವು ಭಾರ್ಯೆಯಾದ ಜರತ್ಕಾರುವಿಗೆ ಹೇಳಿದನು :

"ಭುಜಂಗಮೇ! ನೀನು ಹೇಳಿದುದು ಯುಕ್ತವಾಗಿದೆ ಮತ್ತು ಧರ್ಮ ಪರಾಯಣಳಾದ ನಿನಗೆ ಅನುರೂಪವೂ ಆಗಿದೆ. ನಿನ್ನ ಗರ್ಭಾಂಬುಧಿಯಲ್ಲಿ

"ಪುಂಗರ್ಭವೇ ಪ್ರತಿಷ್ಠಿತವಾಗಿದೆ. ಇದರಲ್ಲಾವ ಸಂಶಯವೂ ಇರುವುದಿಲ್ಲ. ಗರ್ಭಸ್ಥನಾಗಿರುವ ಬಾಲಕನು ಸಾಮಾನ್ಯನಲ್ಲ. ಇವನು ಮುಂದೆ ಯಜ್ಞೇಶ್ವರನಿಗೆ ಸದೃಶನಾದವನೂ, ವೇದ-ವೇದಾಂಗಪಾರಂಗತನೂ, ಪರಮ ಧರ್ಮಾತ್ಮನೂ ಆದ ಮಹರ್ಷಿಯಾಗುತ್ತಾನೆ."

ಹೀಗೆ ಆಶ್ವಾಸನೆಯನ್ನಿತ್ತು ಮಹಾಮುನಿಯಾದ, ಧರ್ಮಾತ್ಮನಾದ ಜರತ್ಕಾರುಮಹರ್ಷಿಯು ಮೊದಲೇ ನಿಶ್ಚಯಿಸಿದ್ದಂತೆ ಉಗ್ರವಾದ ತಪಸ್ಸು ಮಾಡಲು ಕಾಡಿಗೆ ಹೊರಟುಹೋದನು.

೪೭ನೆಯ ಅಧ್ಯಾಯವು ಮುಗಿಯಿತು.

೪೮ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ವಾಸುಕಿಯ ಚಿಂತೆ : ಜರತ್ಕಾರುವು ವಾಸುಕಿಯನ್ನು ಸಮಾಧಾನಪಡಿಸಿದುದು : ಆಸ್ತೀಕನ ಜನನ ಮತ್ತು ವಿದ್ಯಾಭ್ಯಾಸ

"ಶೌನಕರೇ! ಜರತ್ಕಾರುಮಹರ್ಷಿಯು ಹೊರಟುಹೋದೊಡನೆಯೇ ನಾಗಕನ್ಯೆಯು ಅಣ್ಣನಾದ ವಾಸುಕಿಯ ಬಳಿಗೆ ಹೋಗಿ ನಡೆದ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ತಿಳಿಸಿದಳು. ಭುಜಗಶ್ರೇಷ್ಠನಾದ ವಾಸುಕಿಯು ತಂಗಿಯು ಹೇಳಿದ ಅಪ್ರಿಯವಾದ ಮಾತುಗಳನ್ನು ಕೇಳಿ ಹೇಳಿದನು : "ಭದ್ರೇ! ನಾನು ನಿನ್ನನ್ನು ಆ ಮಹರ್ಷಿಗೆ ಮದುವೆಮಾಡಿಕೊಟ್ಟ ಕಾರಣವು ನಿನಗೆ ತಿಳಿದಿರುವುದಲ್ಲವೇ? 'ಜರತ್ಕಾರುಮಹರ್ಷಿಯಿಂದ ನಿನಗೊಬ್ಬ ತೇಜಸ್ವಿಯಾದ ಪುತ್ರನು ಸರ್ಪಗಳಿಗೆ ಹಿತವನ್ನುಂಟುಮಾಡುವ ಸಲುವಾಗಿ ಹುಟ್ಟುತ್ತಾನೆ. ಜನಮೇಜಯನು ಮಾಡುವ ಸರ್ಪಯಾಗದಲ್ಲಿ ಅವನು ನಮ್ಮೆಲ್ಲರನ್ನೂ ಸಂರಕ್ಷಿಸುತ್ತಾನೆ'–ಈ ಆಶಯದಿಂದ ನಾನು ನಿನ್ನನ್ನು ಅವನಿಗೆ ಮದುವೆಮಾಡಿಕೊಟ್ಟೆನು. ಬ್ರಹ್ಮನೂ ಇದೇ ರಹಸ್ಯವನ್ನು ದೇವತೆಗಳೊಡನೆಯೂ ಹೇಳಿದ್ದನು. ತಂಗಿ! ಅವನು ಹೊರಟುಹೋದ ವಿಷಯವನ್ನೇನೋ ಹೇಳಿದೆ. ಆದರೆ ಮತ್ತೊಂದು ವಿಷಯವನ್ನು ನಿನ್ನ ಬಾಯಿಂದಲೇ ಕೇಳಿ ತಿಳಿದುಕೊಳ್ಳುವುದು ಉಚಿತವಲ್ಲವೆಂಬುದೂ ಮರ್ಯಾದಾತೀತವೆಂಬುದೂ ನನಗೆ ತಿಳಿದಿರುವುದು. ಆದರೂ ಕಾತರನಾದ

ನಾನು ಗತ್ಯಂತರವಿಲ್ಲದೆ ಕೇಳಬೇಕಾಗಿದೆ. ಮರೆಮಾಚದೆ ಈ ಗುಹ್ಯವಾದ ವಿಷಯವನ್ನು ನನ್ನೊಡನೆ ತಿಳಿಸಿ ನನ್ನ ಹೃದಯದ ಭಾರವನ್ನು ಕಡಿಮೆ ಮಾಡುವವಳಾಗು. ಆ ಮಹಾತ್ಮನಿಂದ ನೀನು ಗರ್ಭವತಿಯಾಗಿರುವೆಯಾ? ನಾಚಿಕೆಯನ್ನು ಬಿಟ್ಟು ಹೇಳು, ತಂಗಿ! ಮಹಾತೇಜಸ್ವಿಯಾದ ನಿನ್ನ ಗಂಡನನ್ನು ತಡೆಯುವ ಸಾಧ್ಯತೆಯಂತೂ ಇಲ್ಲ. ಅವನ ಬೆನ್ನಟ್ಟಿ ಹೋಗಿ ಅವನನ್ನು ಪುನಃ ಕರೆತರಬೇಕೆಂಬ ಮನಸ್ಸಿದ್ದರೂ ಕುಪಿತನಾದ ಅವನು ಶಾಪವನ್ನೇ ಕೊಟ್ಟುಬಿಟ್ಟಾನೆಂಬ ಭಯದಿಂದ ನಾನವನ ಬೆನ್ನಟ್ಟಿ ಹೋಗಲು ಹಿಂಜರಿಯುತ್ತಿದ್ದೇನೆ. ಭದ್ರೇ! ನಿನ್ನ ಪತಿಯು ಏನು ಮಾಡಿದನು ಮತ್ತು ಏನು ಹೇಳಿದನೆಂಬುದೆಲ್ಲವನ್ನೂ ವಿಶದವಾಗಿ ಹೇಳು. ಆಶಾಪೂರ್ಣವಾದ ಮಾತುಗಳನ್ನು ಹೇಳಿ ನನ್ನ ಹೃದಯಾಂತರಾಳದಲ್ಲಿ ಬಹಳ ದಿನಗಳಿಂದಲೂ ನೆಟ್ಟುಕೊಂಡಿರುವ ಮುಳ್ಳನ್ನು ತೆಗೆದುಹಾಕು, ತಂಗಿ!"

ಸಾಧ್ವಿಯಾದ ನಾಗಕನ್ಯೆಯು ಮಹರ್ಷಿಯು ಹೊರಟುಹೋದ ವಿಷಯವನ್ನು ನಾಗರಾಜನೊಡನೆ ಹೇಳಿದ್ದಳೇ ಹೊರತು ನಾಚಿಕೆಯ ಕಾರಣ ದಿಂದಾಗಿ ತಾನು ಗರ್ಭವತಿಯಾಗಿರುವುದನ್ನೂ ಮತ್ತು ಅದನ್ನೇ ಮಹ ರ್ಷಿಯು ಸಮರ್ಥಿಸಿ ಕೊಟ್ಟಿದ್ದ ಆಶ್ವಾಸನೆಯನ್ನೂ ಅವಳು ಅಣ್ಣನೊಡನೆ ಹೇಳಿರಲಿಲ್ಲ.

ಅಣ್ಣನ ದೀನವಾದ ಮಾತುಗಳನ್ನು ಕೇಳಿ ಜರತ್ಕಾರುವು ಅವನಿಗೆ ಆಶ್ವಾಸನೆನೀಡುತ್ತಾ ಈ ಮಾತುಗಳನ್ನು ಹೇಳಿದಳು :

"ಅಣ್ಣ! ಮಹಾತಪಸ್ವಿಯಾದ ನನ್ನ ಪತಿಯನ್ನು ನಾನೂ ಈ ವಿಷಯ ವಾಗಿಯೇ ದೈನ್ಯದಿಂದ ಪ್ರಶ್ನಿಸಿದೆನು. ಅದಕ್ಕುತ್ತರವಾಗಿ ಆ ಮಹರ್ಷಿಯು ನನ್ನನ್ನು ಕುರಿತು 'ಅಸ್ತಿ–ನಿನ್ನ ಗರ್ಭದಲ್ಲಿ ಪುತ್ರನಿದ್ದಾನೆ' ಇಷ್ಟುಮಾತ್ರ ಹೇಳಿ ಹೊರಟುಹೋದನು. ಮಹಾತ್ಮನಾದ ಮಹರ್ಷಿಯ ಮಾತು ಸುಳ್ಳಾಗಲು ಸಾಧ್ಯವಿಲ್ಲ. ಏಕೆಂದರೆ : ಅವನು ವಿನೋದಕ್ಕಾದರೂ ಸುಳ್ಳನ್ನಾಡಿದುದನ್ನು ನಾನು ಇದುವರೆಗೂ ಕೇಳಿಲ್ಲ. ಹೀಗಿರುವಾಗ ಈ ಸಮಯದಲ್ಲಿ ಅವನು ಸುಳ್ಳುಹೇಳಿ ಹೊರಟುಹೋಗಿರುವನೆಂದು ನಾನು ಭಾವಿಸುವುದಿಲ್ಲ. ಮಹರ್ಷಿಯು ನನ್ನೊಡನೆ ಸ್ಪಷ್ಟವಾಗಿ ಹೇಳಿದ ನುಡಿಗಳಿವು :

**ನ ಸಂತಾಪಸ್ತ್ವಯಾ ಕಾರ್ಯಃ ಕಾರ್ಯಂ ಪ್ರತಿ ಭುಜಙ್ಗಮೇ ।**
**ಉತ್ಪತ್ಸ್ಯತಿ ಚ ತೇ ಪುತ್ರೋ ಜ್ವಲನಾರ್ಕಸಮಪ್ರಭಃ ॥೧೨॥**

"ನಾಗಕನ್ಯೆಯೇ! ನೀನು ಕಾರ್ಯಸಿದ್ಧಿಯ ವಿಷಯವಾಗಿ ಸಂತಾಪ ಪಡಬೇಕಾದ ಕಾರಣವಿಲ್ಲ. ಸೂರ್ಯಾಗ್ನಿಗಳಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ಮಗನು ನಿನ್ನಲ್ಲಿ ಹುಟ್ಟುತ್ತಾನೆ"–ಇಷ್ಟುಮಾತ್ರ ಹೇಳಿ ತಪೋಧನ ನಾದ ನನ್ನ ಪತಿಯು ಹೊರಟುಹೋದನು. ಆದುದರಿಂದ, ಅಣ್ಣ! ನಿನ್ನ ಮನಸ್ಸಿನಲ್ಲಿರುವ ದುಃಖವನ್ನು ದೂರಮಾಡು. ಸರ್ಪಕುಲದ ಸಂತಾಪ ಹರನಾದ ಮಗನು ನನ್ನಲ್ಲಿ ಹುಟ್ಟುವನೋ ಇಲ್ಲವೋ–ಎಂಬ ಸಂಶಯಕ್ಕೆ ಕಾರಣವಿಲ್ಲ."

ಶೌನಕರೇ! ತಂಗಿಯು ಹೇಳಿದ ಅಮೃತೋಪಮವಾದ ಮಾತುಗಳನ್ನು ಕೇಳಿ ವಾಸುಕಿಗೆ ಮಹಾನಂದವಾಯಿತು. "ಹಾಗೆಯೇ ಆಗಲಮ್ಮ"– ಎಂದು ಹೇಳಿ ತಂಗಿಯ ಮಾತನ್ನು ಸ್ವಾಗತಿಸಿದನು.

ಉಡಿಗೆ-ತೊಡಿಗೆಗಳನ್ನೂ, ಆಭರಣಾದಿಗಳನ್ನೂ, ಫಲ-ಪುಷ್ಪ-ತಾಂಬೂಲಾದಿಗಳನ್ನೂ ಕೊಟ್ಟು ವಾಸುಕಿಯು ಜರತ್ಕಾರುವನ್ನು ಯಥೋ ಚಿತವಾಗಿ ಸತ್ಕರಿಸಿದನು.

ಶುಕ್ಲಪಕ್ಷದಲ್ಲಿ ದಿನಗಳು ಕಳೆದಂತೆಲ್ಲಾ ಚಂದ್ರನು ಅಭಿವೃದ್ಧಿಹೊಂದು ವಂತೆ–ಮಾಸಗಳು ಕಳೆದಂತೆಲ್ಲಾ ಮಹಾತೇಜಸ್ಸಿನಿಂದ ಮತ್ತು ಮಹಾಪ್ರಭೆ ಯಿಂದ ಕೂಡಿದ್ದ ನಾಗಕನ್ಯೆಯ ಗರ್ಭವು ಅಭಿವೃದ್ಧಿಹೊಂದಿತು. ನವಮಾಸ ಗಳು ತುಂಬಲಾಗಿ ವಾಸುಕಿಯ ತಂಗಿಯು ಮಾತಾ-ಪಿತೃವಂಶಗಳೆರಡಕ್ಕೂ ಭಯನಿವಾರಕನಾದ, ದೇವಕುಮಾರನಂತಿರುವ ಗಂಡುಮಗುವಿಗೆ ಜನ್ಮ ವನ್ನಿತ್ತಳು. ಆ ಕುಮಾರನು ವಾಸುಕಿಯ ಅರಮನೆಯಲ್ಲಿ ಶುಕ್ಲಪಕ್ಷದ ಚಂದ್ರ ನಂತೆ ದಿನ-ದಿನಕ್ಕೂ ವೃದ್ಧಿಹೊಂದುತ್ತಿದ್ದನು. ಋಷಿಕುಮಾರನು ಭೃಗು ವಂಶೀಯನಾದ ಚ್ಯವನಮಹರ್ಷಿಯಿಂದ ನಾಲ್ಕು ವೇದಗಳನ್ನೂ ಸಾಂಗವಾಗಿ ಅಧ್ಯಯನಮಾಡಿದನು. ಬ್ರಹ್ಮಚರ್ಯವ್ರತನಿಷ್ಠನಾಗಿದ್ದು, ಬುದ್ಧಿವಂತ ನಾಗಿಯೂ, ಸತ್ವಗುಣಸಂಪನ್ನನಾಗಿಯೂ ಇದ್ದನು. ಅವನು ಲೋಕದಲ್ಲಿ 'ಆಸ್ತೀಕ' ಎಂಬ ಅನ್ವರ್ಥನಾಮದಿಂದಲೇ ಪ್ರಸಿದ್ಧಿಹೊಂದಿದನು.

**ಅಸ್ತೀತ್ಯುಕ್ತ್ವಾ ಗತೋ ಯಸ್ಮಾತ್ಪಿತಾ ಗರ್ಭಸ್ಥಮೇವ ತಮ್ ।**
**ವನಂ ತಸ್ಮಾದಿದಂ ತಸ್ಯ ನಾಮಾಸ್ತೀಕೇತಿ ವಿಶ್ರುತಮ್ ॥೨೦॥**

ಅವನಿನ್ನೂ ಗರ್ಭಸ್ಥನಾಗಿದ್ದಾಗಲೇ ಅವನ ತಂದೆಯಾದ ಜರತ್ಕಾರುವು 'ಅಸ್ತಿ' 'ಗರ್ಭದಲ್ಲಿ ಮಹಾಪುರುಷನೊಬ್ಬನಿದ್ದಾನೆ'–ಎಂದು ಹೇಳಿ ಅರಣ್ಯಕ್ಕೆ ಹೊರಟುಹೋದನಾದ ಕಾರಣದಿಂದ ಅವನು ಲೋಕದಲ್ಲಿ 'ಆಸ್ತೀಕ' ಎಂಬ ಹೆಸರಿನಿಂದಲೇ ಪ್ರಸಿದ್ಧಿಹೊಂದಿದನು.

ಆಸ್ತೀಕನು ಬಾಲಕನಾಗಿದ್ದಾಗಲೇ ಮಹಾಬುದ್ಧಿವಂತನಾಗಿಯೂ, ಮೇಧಾವಂತನಾಗಿಯೂ, ಪ್ರಜ್ಞಾವಂತನಾಗಿಯೂ ಇದ್ದನು. ಅವನ ಲಾಲನೆ-ಪಾಲನೆಗಳನ್ನು ಸರ್ಪರಾಜನ ಅರಮನೆಯಲ್ಲಿ ಬಹಳ ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು. ಶೂಲಪಾಣಿಯಾದ, ಹಿರಣ್ಮಯನಾದ, ದೇವೇಶನಾದ, ಭಗವಂತನಾದ ಪರಮೇಶ್ವರನು ತನ್ನ ಸಾನ್ನಿಧ್ಯದಿಂದ ಪ್ರಮಥಗಣಗಳಿಗೆ ಸಂತೋಷವನ್ನುಂಟುಮಾಡುವಂತೆ–ದಿನ-ದಿನಕ್ಕೂ ಅಭಿವೃದ್ಧಿಹೊಂದುತ್ತಿದ್ದ ಆಸ್ತೀಕನೂ ಸರ್ಪಗಳಿಗೆ ಸಂತೋಷದಾಯಕನಾಗಿದ್ದನು."

ಳಲನೆಯ ಅಧ್ಯಾಯವು ಮುಗಿಯಿತು.

ಳ೯ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಪರೀಕ್ಷಿದ್ರಾಜನ ಧಾರ್ಮಿಕತೆಯ ಮತ್ತು ಉತ್ತಮಗುಣಗಳ ವರ್ಣನೆ : ರಾಜನು ಬೇಟೆಯಾಡಲು ಹೋದುದು ಮತ್ತು ಅರಣ್ಯದಲ್ಲಿದ್ದ ಶಮೀಕಮಹರ್ಷಿಗೆ ಅವಮಾನಪಡಿಸಿದುದು

ಶೌನಕರು ಸೌತಿಗಳನ್ನು ಪ್ರಶ್ನಿಸುತ್ತಾರೆ :*

**ಯದಪೃಚ್ಛತ್ತದಾ ರಾಜಾ ಮನ್ತ್ರಿಣೋ ಜನಮೇಜಯಃ ।**
**ಪಿತುಃ ಸ್ವರ್ಗಗತಿಂ ತನ್ಮೇ ವಿಸ್ತರೇಣ ಪುನರ್ವದ ॥೧॥**

---

* ಈ ಕಥೆಯು ಮೂರನೆಯ ಅಧ್ಯಾಯದಿಂದ ಮುಂದುವರಿದಿದೆ. ಮೂರನೆಯ ಅಧ್ಯಾಯದ ೧೮೭ನೆಯ ಶ್ಲೋಕದಲ್ಲಿ ಸೌತಿಗಳು ಹೇಳುತ್ತಾರೆ :

ಅಪೃಚ್ಛತ್ಸ ತದಾ ರಾಜಾ ಮನ್ತ್ರಿಣಸ್ತಾನ್ಸುದುಃಖಿತಃ ।
ಉತ್ತಙ್ಕಸ್ಯೈವ ಸಾಂನಿಧ್ಯೇ ಪಿತುಃ ಸ್ವರ್ಗಗತಿಂ ಪ್ರತಿ ॥

"ಸೂತನಂದನ! ಜನಮೇಜಯರಾಜನು ತನ್ನ ತಂದೆಯ ಮರಣದ ವಿಷಯವಾಗಿ ಮಂತ್ರಿಗಳನ್ನು ಕುರಿತು ಏನೆಂದು ಪ್ರಶ್ನಿಸಿದನು? ಅದಕ್ಕುತ್ತರ ವಾಗಿ ಮಂತ್ರಿಗಳೇನೆಂದು ಹೇಳಿದರು? ಈ ಎಲ್ಲ ವಿಷಯಗಳನ್ನೂ ಸಹ ಈಗ ಪುನಃ ವಿಸ್ತರಿಸಿ ಹೇಳು. ಮಹಾತ್ಮರ ಕಥೆಗಳನ್ನು ಪುನಃ ಪುನಃ ಕೇಳ ಬೇಕೆನ್ನಿಸುತ್ತದೆ."

"ಬ್ರಾಹ್ಮಣೋತ್ತಮರೇ! ನಿಮ್ಮ ಆಶಯದಂತೆ ರಾಜನು ಮಂತ್ರಿಗಳನ್ನು ಕುರಿತು ಏನೆಂದು ಪ್ರಶ್ನಿಸಿದನು ಮತ್ತು ಅದಕ್ಕೆ ಉತ್ತರವಾಗಿ ಅವನ ಮಂತ್ರಿಗಳು ಪರೀಕ್ಷಿತನ ಮರಣದ ವಿಷಯವನ್ನು ಹೇಗೆ ಬಣ್ಣಿಸಿ ಹೇಳಿ ದರು?–ಎಂಬುದೆಲ್ಲವನ್ನೂ ವಿಸ್ತಾರವಾಗಿ ಹೇಳುತ್ತೇನೆ :

ಉತ್ತಂಕನಿಂದ ಪ್ರಚೋದಿತನಾದ ಜನಮೇಜಯರಾಜನು ಮಂತ್ರಿ ಗಳನ್ನು ಕೇಳಿದನು :

"ಮಂತ್ರಿಸತ್ತಮರೇ! ನಿಮಗೆ ನಮ್ಮ ತಂದೆಯ ಆಚಾರ-ವಿಚಾರ-ವ್ಯವಹಾರಗಳೆಲ್ಲವೂ ಸಂಪೂರ್ಣವಾಗಿ ತಿಳಿದಿರುತ್ತದೆ. ಅವನ ಅಂತ್ಯವು ಹೇಗಾಯಿತೆಂಬ ವಿಷಯವೂ ನಿಮಗೆ ಸ್ಪಷ್ಟವಾಗಿ ತಿಳಿದಿರುವುದು. ಎಲ್ಲ ವಿಷಯಗಳನ್ನೂ ನನಗೆ ಮರೆಮಾಚದೇ ಹೇಳಿರಿ. ನನ್ನ ತಂದೆಯ ಸಂಬಂಧವಾದ ಸಕಲವೃತ್ತಾಂತಗಳನ್ನೂ ನಿಮ್ಮಿಂದ ಕೇಳಿ ತಿಳಿದುಕೊಂಡು ಮನಸ್ಸನ್ನು ಶಾಂತಗೊಳಿಸುವ ವಿಧಾನವನ್ನು ಹುಡುಕುತ್ತೇನೆ. ಈ ವಿಷಯವು ನನಗೆ ಸಂಪೂರ್ಣವಾಗಿ ತಿಳಿಯುವವರೆಗೂ ನನ್ನ ಮನಸ್ಸಿಗೆ ಸಮಾಧಾನ ವಿಲ್ಲ."

---

ಬಹುದುಃಖಿತನಾದ ಜನಮೇಜಯನು-ಉತ್ತಂಕನ ಸಮ್ಮುಖದಲ್ಲಿಯೇ–'ತನ್ನ ತಂದೆಯು ಸ್ವರ್ಗಸ್ಥನಾದುದು ಹೇಗೆಂಬ ವಿಷಯವನ್ನು ಸವಿಸ್ತಾರವಾಗಿ ಹೇಳಬೇಕೆಂದು ತನ್ನ ಮಂತ್ರಿಗಳನ್ನು ಕೇಳಿದನು'–ಎಂಬುದರಿಂದ ಈ ಕಥೆಯು ಅನುವರ್ತಿತವಾಗಿದೆ. ೪೦ನೆಯ ಅಧ್ಯಾಯದಿಂದ ೪೪ನೆಯ ಅಧ್ಯಾಯಪೂರ್ತಿಯಾಗಿ ಪರೀಕ್ಷಿತನ ಉಪಾಖ್ಯಾನವನ್ನು ಜರತ್ಕಾರುವು ತಪಸ್ಸುಮಾಡುತ್ತಿದ್ದ ಸಂದರ್ಭದಲ್ಲಿ ಹೇಳಿದ್ದಾರೆ. ಅಲ್ಲಿ ಈ ಉಪಾಖ್ಯಾನವನ್ನು ಜನಮೇಜಯನ ವಿವಾಹಪರ್ಯಂತವಾಗಿ ಹೇಳಿದ್ದಾರೆ. ಈ ಸಂದರ್ಭದಲ್ಲಿ ಸರ್ಪಯಾಗದ ಕಾರಣವನ್ನು ನಿರೂಪಿಸುವ ಸಲುವಾಗಿ ಪರೀಕ್ಷಿತನ ಉಪಾಖ್ಯಾನವನ್ನು ಇಲ್ಲಿ ಕೊಡಲಾಗಿದೆ. ಅನೇಕಕಡೆಗಳಲ್ಲಿ ಶ್ಲೋಕಗಳು ಪುನರುಕ್ತವಾಗಿವೆ.

ಮಹಾತ್ಮನಾದ ರಾಜನ ಮಾತುಗಳನ್ನು ಕೇಳಿ ಧರ್ಮವಿದರಾದ ಮಂತ್ರಿಗಳು ಹೇಳಿದರು :

"ಮಹಾರಾಜ! ಮಹಾತ್ಮನಾದ ನಿನ್ನ ತಂದೆಯ ಸುಚರಿತೆಗಳನ್ನೂ ಮತ್ತು ಅವನು ಹೇಗೆ ಮರಣಹೊಂದಿದನೆಂಬುದನ್ನೂ ಕೇಳುವವನಾಗು" ಎಂದು ಹೇಳಿ ಸಚಿವರುಗಳು ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ಪರೀಕ್ಷಿತನ ಗುಣಗಾನವನ್ನು ಮಾಡಿದರು.

"ಜನಮೇಜಯ! ಧರ್ಮಾತ್ಮನಾಗಿಯೂ, ಮಹಾತ್ಮನಾಗಿಯೂ, ಪ್ರಜಾಪರಿಪಾಲಕನಾಗಿಯೂ ಇದ್ದ ನಿನ್ನ ತಂದೆಯು ಯಾವ ರೀತಿಯಲ್ಲಿ ಆಚಾರ-ವ್ಯವಹಾರಗಳನ್ನಿಟ್ಟುಕೊಂಡಿದ್ದನೆಂಬುದನ್ನು ಕೇಳು. ಅವನು ಚಾತುರ್ವರ್ಣ್ಯದವರು ತಮ್ಮ-ತಮ್ಮ ಧರ್ಮಗಳಲ್ಲಿ ನಿರತರಾಗಿರುವಂತೆ ವ್ಯವಸ್ಥೆಮಾಡಿದ್ದನು. ಧರ್ಮವಿದನಾದ, ಧರ್ಮಮೂರ್ತಿಯಾದ ಅವನು ಪ್ರಜೆಗಳನ್ನು ತನ್ನ ಮಕ್ಕಳಂತೆ–ಯಾವ ವಿಧವಾದ ತಾರತಮ್ಯವೂ ಇಲ್ಲದೇ ಸಂರಕ್ಷಿಸುತ್ತಿದ್ದನು.

ಅತುಲಪರಾಕ್ರಮಿಯಾದ, ಶ್ರೀಸಂಪನ್ನನಾದ ರಾಜನು ಭೂಮಿಯನ್ನು ಧರ್ಮದಿಂದ ಪರಿಪಾಲನೆಮಾಡುತ್ತಿದ್ದನು. ಅವನ ತಾತನಂತೆಯೇ ಅಜಾತ ಶತ್ರುವಾಗಿದ್ದನು. ನಿನ್ನ ತಂದೆಗೆ ದ್ವೇಷಿಗಳೆಂಬುವರೇ ಇರಲಿಲ್ಲ. ಅವನೂ ಯಾರನ್ನೂ ದ್ವೇಷಿಸುತ್ತಿರಲಿಲ್ಲ. ಪ್ರಜಾಪತಿಯು ತಾನು ಸೃಷ್ಟಿಸಿದ ಪ್ರಾಣಿಗಳ ವಿಷಯದಲ್ಲಿ ಯಾವ ವಿಧವಾದ ತಾರತಮ್ಯವೂ ಇಲ್ಲದೇ ಯಾವ ರೀತಿ ಇರುತ್ತಾನೆಯೋ–ಅದೇ ರೀತಿಯಲ್ಲಿ ಪರೀಕ್ಷಿತನೂ ಸಹ ತಾನು ಪರಿಪಾಲಿಸು ತ್ತಿದ್ದ ಪ್ರಜೆಗಳಲ್ಲಿ ಯಾವ ವಿಧವಾದ ವ್ಯತ್ಯಾಸವನ್ನೂ ತೋರಿಸುತ್ತಿರಲಿಲ್ಲ. ಅವನ ರಾಜ್ಯಪಾಲನೆಯಲ್ಲಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಲ್ಲರೂ ತಮ್ಮ-ತಮ್ಮ ಕರ್ಮಗಳಲ್ಲಿ ನಿರತರಾಗಿರುತ್ತಿದ್ದರು. ಅವರಿಗೆ ಅವರವರ ಕಾರ್ಯಗಳಲ್ಲಿ ಸಂತೃಪ್ತಿಯಿದ್ದಿತು. ವಿಧವೆಯರು, ಅನಾಥರು, ಅಂಗ ವಿಕಲರು–ಇವರುಗಳನ್ನು ರಾಜನೇ ನೇರವಾಗಿ ತನ್ನ ಮೇಲ್ವಿಚಾರಣೆಯಲ್ಲಿ ಸಂರಕ್ಷಿಸುತ್ತಿದ್ದನು. ಅವನು ತನ್ನ ರಾಜ್ಯದ ಸಕಲಪ್ರಾಣಿಗಳಿಗೂ ಚಂದ್ರನಂತೆ ಪ್ರಿಯದರ್ಶನನಾಗಿದ್ದನು. ತೇಜಃಪುಂಜಯುಕ್ತವಾದ ಅವನ ಮುಖಾರವಿಂದ

ವನ್ನು ಸಂದರ್ಶಿಸಲು ಜನರು ಕುತೂಹಲಿಗಳಾಗಿದ್ದರು. ಅವನ ರಾಜ್ಯದಲ್ಲಿ ಪ್ರಜೆಗಳು ತುಷ್ಟರಾಗಿಯೂ ಪುಷ್ಟರಾಗಿಯೂ ಇದ್ದರು. ರಾಜನು ಸತ್ಯನಿಷ್ಠ ನಾಗಿಯೂ, ಮಹಾಪರಾಕ್ರಮಿಯಾಗಿಯೂ ಇದ್ದನು. ಶಾರದ್ವತನ ಶಿಷ್ಯನಾಗಿದ್ದ ಪರೀಕ್ಷಿತನು ಧನುರ್ವಿದ್ಯೆಯನ್ನು ಆಮೂಲಾಗ್ರವಾಗಿ ಕಲಿತನು. ಶ್ರೀಕೃಷ್ಣನಿಗಂತೂ ಅವನು ಬಹುಪ್ರಿಯನಾಗಿದ್ದನು. (ಶ್ರೀಕೃಷ್ಣನೇ ಅವನನ್ನು ಬದುಕಿಸಿದುದು.) ರಾಜ್ಯದ ಎಲ್ಲ ಪ್ರಜೆಗಳೂ ಅವನನ್ನು ಬಹುವಾಗಿ ಪ್ರೀತಿಸುತ್ತಿದ್ದರು.

**ಪರಿಕ್ಷೀಣೇಷು ಕುರುಷು ಸೋತ್ತರಾಯಮಜೀಜನತ್ ।**
**ಪರೀಕ್ಷಿದಭವತ್ತೇನ ಸೌಭದ್ರಸ್ಯಾತ್ಮಜೋ ಬಲೀ ॥೧೪॥**

ಕುರುವಂಶವೇ ಸಂಪೂರ್ಣವಾಗಿ ಪರಿಕ್ಷೀಣವಾಗುವುದರಲ್ಲಿದ್ದಾಗ (ನಶಿಸಿಹೋಗುವುದರಲ್ಲಿದ್ದಾಗ) ಅಭಿಮನ್ಯುವಿನ ಮಗನಾಗಿ ಉತ್ತರೆಯಲ್ಲಿ ಹುಟ್ಟಿದನಾದ್ದರಿಂದ ಅವನು 'ಪರೀಕ್ಷಿತ್' ಎಂದೇ ಪ್ರಸಿದ್ಧಿಹೊಂದಿದನು.

ರಾಜನು ಧರ್ಮಾರ್ಥಗಳಲ್ಲಿ ಕುಶಲನಾಗಿದ್ದನಲ್ಲದೇ ಸರ್ವಸದ್ಗುಣ ಸಂಪನ್ನನಾಗಿಯೂ, ಮೇಧಾವಿಯಾಗಿಯೂ, ಧರ್ಮಕ್ಕೆ ಆಶ್ರಯಭೂತ ನಾಗಿಯೂ, ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳನ್ನು ಜಯಿಸಿದವನಾಗಿಯೂ, ನೀತಿಶಾಸ್ತ್ರವಿಶಾರದನಾಗಿಯೂ, ಮಹಾಬುದ್ಧಿಶಾಲಿ ಯಾಗಿಯೂ ಇದ್ದನು. ಈ ರೀತಿಯಾಗಿ ಅವನು ತನ್ನ ಪ್ರಜೆಗಳನ್ನು ಅರುವತ್ತು ವರ್ಷಗಳ ಪರ್ಯಂತವಾಗಿ ಧರ್ಮದಿಂದ ಪರಿಪಾಲನೆಮಾಡಿದನು. ಅನಂತರದಲ್ಲಿ ನಮ್ಮೆಲ್ಲರನ್ನೂ ದುಃಖಸಾಗರದಲ್ಲಿ ಮುಳುಗಿಸಿ ಸ್ವರ್ಗ ವನ್ನೈದಿದನು. ಆ ಸಮಯದಲ್ಲಿ ನೀನಿನ್ನೂ ಬಾಲಕನಾಗಿದ್ದೆ. ಸಹಸ್ರವರ್ಷ ಗಳಿಂದಲೂ ಕುರುಶ್ರೇಷ್ಠರಿಂದ ಪರಿಪಾಲಿತವಾಗಿದ್ದ ಈ ವಸುಂಧರೆಯ ರಾಜ್ಯಾಭಿಷೇಕವನ್ನು ನಿನಗೆ ಮಾಡಲಾಯಿತು. ಬಾಲ್ಯದಲ್ಲಿಯೇ ನಿನಗೆ ಪಟ್ಟಾಭಿಷೇಕವಾದರೂ ಈ ರಾಜ್ಯವನ್ನು ನೀನು ಧರ್ಮದಿಂದಲೂ, ವಿಚಕ್ಷಣತೆಯಿಂದಲೂ ಪರಿಪಾಲಿಸಿಕೊಂಡು ಬಂದಿರುವೆ."

"ಮಂತ್ರಿಸತ್ತಮರೇ! ನನಗೆ ತಿಳಿದಿರುವಂತೆ ಈ ನಮ್ಮ ವಂಶದಲ್ಲಿ ಪ್ರಜೆಗಳಿಗೆ ಅಪ್ರಿಯನಾದ ಮತ್ತು ಪ್ರಜೆಗಳಿಗೆ ಅಪ್ರಿಯವಾದ ಕಾರ್ಯವನ್ನು

ಮಾಡುವ ಒಬ್ಬ ರಾಜನೂ ಇರಲಿಲ್ಲವೆಂದು ನಾನು ಭಾವಿಸುತ್ತೇನೆ. ನನ್ನ ಪಿತೃ-ಪಿತಾಮಹರ ಸುಚರಿತೆಗಳನ್ನು ತಿಳಿದವನು ಪ್ರಜೆಗಳಿಗೆ ಅಪ್ರಿಯ ನಾಗಿರುವ ಸಾಧ್ಯತೆಯೇ ಇಲ್ಲ. ಹೀಗಿರುವಾಗ ನೀವು ಹೇಳುತ್ತಿರುವಂತೆಯೇ ಪರಮಧಾರ್ಮಿಕನಾದ ಆ ನನ್ನ ತಂದೆಯು ಅಕಾಲಿಕವಾದ ಮರಣಕ್ಕೆ ಹೇಗೆ ತುತ್ತಾದನು? ಈ ವಿಷಯವನ್ನು ಕೇಳಿ ತಿಳಿದುಕೊಳ್ಳಬೇಕೆಂದು ನನ್ನ ಮನಸ್ಸು ಬಹಳವಾಗಿ ತವಕಿಸುತ್ತಿದೆ. ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ಹೇಳಿರಿ."

ಈ ರೀತಿಯಾಗಿ ರಾಜನಿಂದ ಪೃಷ್ಟರಾದ ಮಂತ್ರಿಗಳು ರಾಜನಿಗೆ ಹಿಂದಿನ ವೃತ್ತಾಂತವನ್ನು ಹೇಗೆ ನಡೆಯಿತೋ ಹಾಗೆಯೇ ಹೇಳಲು ಉಪ ಕ್ರಮಿಸಿದರು :

"ಶಸ್ತ್ರಧಾರಿಗಳಲ್ಲಿ ಶ್ರೇಷ್ಠನೆನಿಸಿದ್ದ ನಿನ್ನ ತಂದೆ ಪರೀಕ್ಷಿತನು ಬೇಟೆ ಯಾಡುವುದರಲ್ಲಿ ಹೆಚ್ಚಿನ ಆಸಕ್ತಿಯುಳ್ಳವನಾಗಿದ್ದನು. ನಿನ್ನ ಪ್ರಪಿತಾಮಹನಾದ ಪಾಂಡುವಿನಂತೆಯೇ ಅವನೂ ಧನುರ್ಧಾರಿಗಳಲ್ಲಿ ಶ್ರೇಷ್ಠನೆನಿಸಿ ಯುದ್ಧದಲ್ಲಿ ಅಪರಾಜಿತನಾಗಿದ್ದನು. ಬೇಟೆಯಾಡುವುದರಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿದ್ದ ಅವನು ರಾಜಕಾರ್ಯಗಳೆಲ್ಲವನ್ನೂ ನಮಗೆ ಒಪ್ಪಿಸಿ ಬೇಟೆಯಾಡಲು ಹೋಗುತ್ತಿದ್ದನು. ಒಮ್ಮೆ ಬೇಟೆಗಾಗಿ ಕಾಡಿಗೆ ಹೋದ ಪರೀಕ್ಷಿತನು ಜಿಂಕೆಯೊಂದಕ್ಕೆ ಗುರಿಯಿಟ್ಟು ಬಾಣದಿಂದ ಹೊಡೆದನು. ಆದರೆ ಆ ಜಿಂಕೆಯು ಅವನ ಬಾಣದ ಆಘಾತದಿಂದ ಅಸುವನ್ನು ನೀಗಿ ಕೆಳಕ್ಕೆ ಬೀಳದೇ ನೆಟ್ಟಬಾಣದೊಂದಿಗೇ ಓಡಿಹೋಯಿತು. ರಾಜನೂ ಅದರ ಬೆನ್ನಟ್ಟಿ ಹೋದನು. ಕುದುರೆಯೂ ಸಹ ಹತ್ತಿರದಲ್ಲಿರಲಿಲ್ಲ. ಕಾಲ್ನಡಿಗೆಯಲ್ಲಿಯೇ ಮೃಗವನ್ನು ಬೆನ್ನಟ್ಟಿ ಓಡುತ್ತಿದ್ದನು. ಅಲ್ಲದೆ ಕತ್ತಿ, ಧನುಸ್ಸು, ಬತ್ತಳಿಕೆ ಇವುಗಳನ್ನೂ ಹೊತ್ತುಕೊಂಡೇ ಹೋಗುತ್ತಿದ್ದನು. ಬಹುವಾದ ಶ್ರಮದಿಂದ ಮೃಗದ ಹಿಂದೆ ಓಡಿದರೂ ಗಹನವಾಗಿದ್ದ ಆ ಅರಣ್ಯದಲ್ಲಿ ಜಿಂಕೆಯು ತಪ್ಪಿಸಿಕೊಂಡೇ ಬಿಟ್ಟಿತು. ಅನತಿದೂರದಲ್ಲಿಯೇ ಕಣ್ಣಿಗೆ ಕಾಣಿಸುತ್ತಿದ್ದ ಆ ಜಿಂಕೆಯು ರಾಜನ ದೃಷ್ಟಿಪಥಕ್ಕೂ ಗೋಚರಿಸದಾಯಿತು. ಆ ಸಮಯದಲ್ಲಿ ನಿನ್ನ ತಂದೆಯಾಗಲೇ ಅಪರವಯಸ್ಕನಾಗಿದ್ದನು. ಅರುವತ್ತನೆಯ ವರ್ಷವು ಸಮೀಪಿಸಿತ್ತು. ಕ್ಷುದ್ಬಾಧೆಯಿಂದಲೂ, ಬಾಯಾರಿಕೆಯಿಂದಲೂ ಬಹಳ

ಆಯಾಸಗೊಂಡಿದ್ದನು. ಅಂತಹ ಸ್ಥಿತಿಯಲ್ಲಿ ಜಿಂಕೆಯನ್ನು ಹುಡುಕಿಕೊಂಡು ಹೋಗುತ್ತಿದ್ದಾಗ ರಾಜನು ಮುನಿಶ್ರೇಷ್ಠನೊಬ್ಬನನ್ನು ನೋಡಿದನು. ಮೌನವ್ರತವನ್ನು ಧರಿಸಿದ್ದ ಋಷಿಯನ್ನು ರಾಜನು ಜಿಂಕೆಯ ವಿಷಯವಾಗಿ ಪ್ರಶ್ನಿಸಿದನು. ಹಲವಾರು ಬಾರಿ ಪ್ರಶ್ನಿಸಿದರೂ ಋಷಿಯು ರಾಜನಿಗೆ ಯಾವುದೊಂದು ಉತ್ತರವನ್ನೂ ಕೊಡಲಿಲ್ಲ."

ಮಂತ್ರಿಗಳು ಮುಂದುವರಿದು ಹೇಳಿದರು :

"ರಾಜನಾದರೋ ಹಸಿವು-ಬಾಯಾರಿಕೆಗಳಿಂದ ಬಹಳವಾಗಿ ಬಳಲಿದ್ದನು. ಋಷಿಯು ಸ್ಥಾಣುವಿನಂತಿದ್ದುದನ್ನೂ ತಾನು ಎಷ್ಟೇ ಪ್ರಶ್ನಿಸಿದರೂ ಮೌನಧರಿಸಿ ಕುಳಿತಿದ್ದುದನ್ನೂ ನೋಡಿ ರಾಜನಿಗೆ ಸಹಜವಾಗಿಯೇ ಕೋಪ ಬಂದಿತು. ಆ ಮಹರ್ಷಿಯು ರಾಜನು ಬಂದನೆಂಬ ಮರ್ಯಾದೆಯನ್ನೂ ತೋರದೇ ತಾತ್ಸಾರದಿಂದ ಮಾತನಾಡುತ್ತಿಲ್ಲವೆಂದು ನಿನ್ನ ತಂದೆಯು ಭಾವಿಸಿದನೇ ಹೊರತು ಅವನು ಮೌನವ್ರತದಲ್ಲಿರುವನೆಂಬ ವಿಷಯವು ನಿನ್ನ ತಂದೆಗೆ ತಿಳಿಯದೇ ಹೋಯಿತು. ಈ ಕಾರಣದಿಂದಾಗಿ ನಿನ್ನ ತಂದೆಯು ಋಷಿಯನ್ನು ತಿರಸ್ಕಾರಭಾವದಿಂದ ಕಂಡನು. ಸತ್ತುಬಿದ್ದಿದ್ದ ಸರ್ಪವೊಂದನ್ನು ಧನುಸ್ಸಿನ ತುದಿಯಿಂದ ಮೇಲೆತ್ತಿ ಶುದ್ಧಾತ್ಮನಾದ ಋಷಿಯ ಕೊರಳಿಗೆ ಆ ಸರ್ಪವನ್ನು ಹಾಕಿಬಿಟ್ಟನು. ನಿನ್ನ ತಂದೆಯು ಸತ್ತ ಸರ್ಪವನ್ನು ಹೆಗಲಿಗೆ ಹಾಕಿದರೂ ಮೇಧಾವಿಯಾದ ಆ ಮುನಿಯು ಒಳ್ಳೆಯ ಮಾತನ್ನಾಗಲೀ ನಿಷ್ಠುರವಾದ ಮಾತನ್ನಾಗಲೀ ಹೇಳಲಿಲ್ಲ. ಸತ್ತ ಸರ್ಪವನ್ನು ಹೆಗಲಿಗೆ ಹಾಕಿದ್ದಕ್ಕಾಗಿ ಸ್ವಲ್ಪವೂ ಕೋಪಿಸಿಕೊಳ್ಳದೇ ಶಾಂತನಾಗಿ ಹಿಂದಿದ್ದಂತೆಯೇ ಇದ್ದುಬಿಟ್ಟನು."

* ೪೯ನೆಯ ಅಧ್ಯಾಯವು ಮುಗಿಯಿತು.

---

* ಪಾಠಕರು ಈ ಪ್ರಕರಣವನ್ನು ಆಸಕ್ತಿವಹಿಸಿ ಓದುವುದರ ಅಗತ್ಯವಿದೆ. ಹಿಂದೆ ೪೦ನೆಯ ಅಧ್ಯಾಯದಲ್ಲಿ ಸೌತಿಗಳು ಶೌನಕರಿಗೆ ಹೇಳಿದ ಪರೀಕ್ಷಿತನ ಕಥೆಯಿದೆ. ಇಲ್ಲಿ ಜನಮೇಜಯನ ಮಂತ್ರಿಗಳು ಅದೇ ಪರೀಕ್ಷಿತನ ಕಥೆಯನ್ನು ಜನಮೇಜಯನಿಗೆ ಹೇಳುತ್ತಿದ್ದಾರೆ. ರಾಜನಾದವನಿಗೆ ಅವನ ತಂದೆಯ ವಿಷಯವನ್ನು ಹೇಳುವಾಗ ಯಾವ ವಿಷಯವನ್ನು ಒತ್ತಿ ಹೇಳಬೇಕು ; ಯಾವುದನ್ನು ಮರೆಮಾಚಬೇಕೆಂಬ ವಿವೇಚನೆಯಿಂದ ಮಂತ್ರಿಗಳು ರಾಜನಿಗೆ ಈ ಕಥೆಯನ್ನು

೩೦ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಶೃಂಗಿಯು ಪರೀಕ್ಷಿತನಿಗೆ ಶಾಪಕೊಟ್ಟುದು : ತಕ್ಷಕನು ಚಿಕಿತ್ಸೆ ಮಾಡಲು ಬರುತ್ತಿದ್ದ ಕಾಶ್ಯಪನನ್ನು ಹಿಂದಕ್ಕೆ ಕಳುಹಿಸಿದುದು : ಸರ್ಪದಂಶನದಿಂದ ಪರೀಕ್ಷಿತನ ಮರಣ : ತಕ್ಷಕನಿಗೆ ಪ್ರತೀಕಾರಮಾಡಲು ಜನಮೇಜಯನ ಪ್ರತಿಜ್ಞೆ

"ಮಹಾರಾಜ! ಹಸಿವಿನಿಂದ ಬಳಲಿದ್ದ ನಿನ್ನ ತಂದೆಯು ಸತ್ತ ಸರ್ಪವನ್ನು ಶಮೀಕಮಹರ್ಷಿಯ ಹೆಗಲಿನಲ್ಲಿ ಹಾಕಿ, ರಾಜಧಾನಿಗೆ ಆಗಮಿಸಿದನು. ಶಮೀಕನಿಗೆ ಹಸುವಿನಲ್ಲಿ ಹುಟ್ಟಿದ್ದ ಶೃಂಗೀ ಎಂಬ ಹೆಸರಿನ ಮಗನಿದ್ದನು. ಅವನು ಮಹಾತೇಜಸ್ವಿಯೂ, ಯಶೋವಂತನೂ, ಬಹುಶಕ್ತಿವಂತನೂ ಮತ್ತು ಬಹುಕೋಪಿಷ್ಠನೂ ಆಗಿದ್ದನು. ಅವನು ಬ್ರಹ್ಮದೇವನ ಆರಾಧಕನು. ಅಂದು ಬ್ರಹ್ಮನ ಪೂಜೆಯನ್ನು ಮುಗಿಸಿ ಆಚಾರ್ಯನ ಅನುಮತಿಯನ್ನು ಪಡೆದು ಶೃಂಗಿಯು ಆಶ್ರಮಕ್ಕೆ ಹಿಂದಿರುಗುತ್ತಿದ್ದನು. ದಾರಿಯಲ್ಲಿಯೇ ಅವನ ಮಿತ್ರನೊಬ್ಬನು ಸಿಕ್ಕಿ ಪರೀಕ್ಷಿತನು ಶೃಂಗಿಯ ತಂದೆಯ ಹೆಗಲಿನಲ್ಲಿ ಸತ್ತ ಹಾವನ್ನು ಹಾಕಿ ಹೋಗಿದ್ದಾನೆಂಬ ವಾರ್ತೆಯನ್ನು ಹೇಳಿದನು. ಶೃಂಗಿಗೆ ತನ್ನ ತಂದೆಯ ಸ್ವಭಾವವು ಚೆನ್ನಾಗಿ ತಿಳಿದಿತ್ತು. ಶಮಗುಣಪ್ರಧಾನನಾಗಿದ್ದುದರಿಂದಲೇ ಅವನಿಗೆ ಶಮೀಕನೆಂದು ಹೆಸರಾಗಿತ್ತು. ಅವನು ಯಾವಾಗಲೂ ಸ್ಥಾಣುವಿನಂತೆ ಕುಳಿತಲ್ಲಿಯೇ ಕುಳಿತಿರುತ್ತಿದ್ದನು. ಮಹಾತಪಸ್ವಿಯಾಗಿದ್ದನು. ಮುನಿಗಳಲ್ಲಿ ಶ್ರೇಷ್ಠನೆನಿಸಿದ್ದನು. ಜಿತೇಂದ್ರಿಯನಾಗಿಯೂ, ವಿಶುದ್ಧಾಂತರಂಗನಾಗಿಯೂ ಇದ್ದನು. ಅದ್ಭುತವೆನಿಸಿದ ಕಾರ್ಯಸಾಧನೆಯಲ್ಲಿಯೇ ಸರ್ವದಾ ನಿರತನಾಗಿರುತ್ತಿದ್ದನು. ಅನವರತವಾದ ತಪಸ್ಸಿನಿಂದ ಅವನ ಆತ್ಮವು ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದಿತು. ಅವನು ತನ್ನ ಬಹಿರಿಂದ್ರಿಯಗಳನ್ನೂ, ಅಂತರಿಂದ್ರಿಯಗಳನ್ನೂ, ಸಂಪೂರ್ಣವಾಗಿ ಸ್ವಾಧೀನದಲ್ಲಿಟ್ಟುಕೊಂಡಿದ್ದನು. ಶುಭಕರವಾದ ಆಚಾರ-

---

ಹೇಳುತ್ತಿದ್ದಾರೆಂಬುದನ್ನು ಮರೆಯಬಾರದು. ಈ ದೃಷ್ಟಿಯಿಂದ ಎರಡು ಕಡೆಗಳಲ್ಲಿಯೂ ಬರುವ ಕಥೆಯನ್ನು ಪುನರುಕ್ತಿಯೆಂದು ನಿರ್ಲಕ್ಷಿಸದೇ ಕಥೆ ಹೇಳುವುದರಲ್ಲಿರುವ ಸ್ವಾರಸ್ಯವನ್ನು ಗಮನಿಸಬೇಕು.

ವ್ಯವಹಾರವುಳ್ಳವನಾಗಿದ್ದನು. ಯಾವಾಗಲೂ ಶುಭವಾದುದನ್ನೇ ಹೇಳುವನು. ನಿತ್ಯತೃಪ್ತನಾಗಿದ್ದನು. ಅವನಿಗೆ ಆಸೆಯಾಗಲೀ ಅಸೂಯೆಯಾಗಲೀ ಇರಲಿಲ್ಲ. ಕ್ಷುದ್ರತ್ವವೆಂಬುದು ಅವನ ಹತ್ತಿರಕ್ಕೂ ಸುಳಿಯುತ್ತಿರಲಿಲ್ಲ. ವೃದ್ಧನಾಗಿದ್ದನು. ಮೌನವ್ರತವನ್ನಾಚರಿಸುತ್ತಿದ್ದನು. ಸರ್ವಪ್ರಾಣಿಗಳಿಗೂ ಶರಣ್ಯನಾಗಿದ್ದನು. ಇಂತಹ ತಪೋನಿಷ್ಠನಾದ ತನ್ನ ತಂದೆಯ ಹೆಗಲಿಗೆ ಪರೀಕ್ಷಿತನು ಸತ್ತ ಹಾವನ್ನು ಹಾಕಿ ಅವಮಾನಗೊಳಿಸಿದನೆಂದು ತಿಳಿದು ಶೃಂಗಿಯು ಕುಪಿತನಾದನು. ಮಹಾತೇಜಸ್ಸಿನಿಂದ ಕೂಡಿದ್ದ, ಬಾಲಕನಾಗಿದ್ದರೂ ಅನೇಕ ವರ್ಷಗಳ ಕಾಲ ತಪಸ್ಸುಮಾಡಿದ ತೇಜಃಪೂರ್ಣನಾಗಿರುವ ವೃದ್ಧನಂತೆಯೇ ಕಂಗೊಳಿಸುತ್ತಿದ್ದ, ಕೋಪಾವಿಷ್ಟನಾಗಿದ್ದ ಶೃಂಗಿಯು ನಿನ್ನ ತಂದೆಯನ್ನು ಶಪಿಸಿಬಿಟ್ಟನು.

ತನ್ನ ತಂದೆಯ ಹೆಗಲಿನಲ್ಲಿ ಸತ್ತುಹೋದ ಸರ್ಪವೊಂದನ್ನು ಪರೀಕ್ಷಿತನು ಹಾಕಿ ಹೋಗಿರುವನೆಂದು ತಿಳಿದೊಡನೆಯೇ ಶೃಂಗಿಯು ಕೋಪಾವಿಷ್ಟನಾಗಿ ಶುದ್ಧಾಚಮನಮಾಡಿ ನಿನ್ನ ತಂದೆಯನ್ನುದ್ದೇಶಿಸಿ ಹೀಗೆ ಹೇಳಿದನು :

**ಅನಾಗಸಿ ಗುರೌ ಯೋ ಮೇ ಮೃತಂ ಸರ್ಪಮವಾಸೃಜತ್ ।**
**ತಂ ನಾಗಸ್ತಕ್ಷಕಃ ಕ್ರುದ್ಧಸ್ತೇಜಸಾ ಪ್ರದಹಿಷ್ಯತಿ ॥೧೦॥**

"ಪಾಪವೆಂದರೇನೆಂಬುದನ್ನೇ ತಿಳಿಯದ (ಯಾವ ಅಪರಾಧವನ್ನೂ ಮಾಡದ) ನನ್ನ ತಂದೆಯ ಕೊರಳಿನಲ್ಲಿ ಯಾವನು ಸತ್ತ ಸರ್ಪವನ್ನು ಮಾಲೆಯಂತೆ ಹಾಕಿದನೋ–ಅವನನ್ನು ಕ್ರುದ್ಧನಾದ ತಕ್ಷಕನು ತನ್ನ ತೇಜಸ್ಸಿನಿಂದ ಸುಟ್ಟುಹಾಕಿಬಿಡುತ್ತಾನೆ. ವಿಷದ ಹಲ್ಲುಗಳನ್ನು ಹೊಂದಿರುವ, ಬಹುತೀಕ್ಷ್ಣವಾದ ತೇಜಸ್ಸಿನಿಂದ ಕೂಡಿರುವ ತಕ್ಷಕನು ನನ್ನ ಈ ಶಾಪದಿಂದ ಪ್ರಚೋದಿತನಾಗಿ ಇಂದಿನಿಂದ ಏಳು ರಾತ್ರಿಗಳು ಕಳೆಯುವುದರೊಳಗೆ ರಾಜನನ್ನು ಕಚ್ಚಿ ಸಾಯಿಸುತ್ತಾನೆ. ಮಿತ್ರನೇ! ನನ್ನ ತಪಸ್ಸಿನ ಪ್ರಭಾವವೆಷ್ಟೆಂಬುದನ್ನಾದರೂ ನೀನೀಗ ಪರೀಕ್ಷಿಸು."

ಶೃಂಗಿಯು ಹೀಗೆ ಮಿತ್ರನೊಡನೆ ಹೇಳಿ ತಂದೆಯ ಸಮೀಪಕ್ಕೆ ಹೋಗಿ ಅಲ್ಲಿ ಮೃತಸರ್ಪವನ್ನು ಧರಿಸಿದ್ದ ತಂದೆಯನ್ನು ಕಂಡು ಪರೀಕ್ಷಿತನು ಮಾಡಿದ ಅಪರಾಧಕ್ಕಾಗಿ ತಾನು ಕೊಟ್ಟ ಶಾಪವನ್ನೂ ತಂದೆಗೆ ಅರುಹಿದನು.

ಕ್ಷಮಾಮೂರ್ತಿಯಾದ ಶಮೀಕನು ಮಗನು ಮಾಡಿದ ಕಾರ್ಯಕ್ಕೆ ಪಶ್ಚಾತ್ತಾಪಪಟ್ಟು ತನ್ನ ಶಿಷ್ಯನಾದ ಗೌರಮುಖನನ್ನು ನಿನ್ನ ತಂದೆಯ ಸಮೀಪಕ್ಕೆ ಕಳುಹಿಸಿಕೊಟ್ಟನು. ಅರಮನೆಗೆ ಬಂದು ಸ್ವಲ್ಪಕಾಲ ವಿಶ್ರಾಂತಿಯನ್ನು ಪಡೆದ ಗೌರಮುಖನು ನಿನ್ನ ತಂದೆಗೆ ಶಮೀಕಮಹರ್ಷಿಯ ಸಂದೇಶವನ್ನು ಯಥಾವತ್ತಾಗಿ ಹೇಳಿದನು :

"ಮಹಾರಾಜ! ನನ್ನ ಮಗನು ನಿನಗೆ ಶಾಪವನ್ನಿತ್ತಿದ್ದಾನೆ. ಆ ಶಾಪಕ್ಕೆ ಅನುಸಾರವಾಗಿ ತಕ್ಷಕನು ನಿನ್ನನ್ನು ಏಳು ರಾತ್ರಿಗಳೊಳಗಾಗಿ ತನ್ನ ತೇಜಸ್ಸಿನಿಂದ ದಹಿಸಿಬಿಡುತ್ತಾನೆ. ಆದುದರಿಂದ ಈ ಸಮಯದಲ್ಲಿ ನಿನ್ನ ಪ್ರಾಣರಕ್ಷಣೆಗೆ ಪ್ರಯತ್ನಿಸುವುದು ನಿನ್ನ ಕರ್ತವ್ಯವಾಗಿದೆ."

ಜನಮೇಜಯ! ಶಮೀಕನು ಹೇಳಿಕಳುಹಿಸಿದ್ದ ಮಾತುಗಳನ್ನು ಕೇಳಿ ನಿನ್ನ ತಂದೆಯು ಪನ್ನಗೋತ್ತಮನಾದ ತಕ್ಷಕನ ವಿಷಯದಲ್ಲಿ ಭಯಪಟ್ಟನು. ಜಾಗ್ರತನಾಗಿ ಸ್ವರಕ್ಷಣೆಯನ್ನು ಯಥಾನುಕೂಲವಾಗಿ ಮಾಡಿಕೊಂಡನು. ಪ್ರಜೆಗಳೆಲ್ಲರೂ ನಿನ್ನ ತಂದೆಯ ವಿಷಯದಲ್ಲಿ ಅತ್ಯಂತಪ್ರೀತಿಯುಳ್ಳವರಾಗಿದ್ದರು. ಏಳನೆಯ ದಿನದಲ್ಲಿ ತಕ್ಷಕನು ರಾಜನನ್ನು ಕಚ್ಚಿಬಿಡುವನೆಂಬ ವಾರ್ತೆಯನ್ನು ಕೇಳಿ ಕಾಶ್ಯಪನೆಂಬ ಮಹರ್ಷಿಯು ನಿನ್ನ ತಂದೆಯ ಬಳಿಗೆ ಸರ್ಪದಂಶನದನಂತರ ಚಿಕಿತ್ಸೆಮಾಡುವ ಸಲುವಾಗಿ–ಆತುರದಿಂದ ಬರುತ್ತಿದ್ದನು.

ಹೀಗೆ ಅವಸರದಿಂದ ಹಸ್ತಿನಾಪಟ್ಟಣಕ್ಕೆ ಅಭಿಮುಖನಾಗಿ ಬರುತ್ತಿದ್ದ ಕಾಶ್ಯಪನನ್ನು ಕಂಡು ತಕ್ಷಕನು ಪ್ರಶ್ನಿಸಿದನು :

"ಬ್ರಾಹ್ಮಣೋತ್ತಮನೇ! ಇಷ್ಟೊಂದು ಅವಸರವಾಗಿ ಎಲ್ಲಿಗೆ ಹೋಗುತ್ತಿರುವೆ? ಯಾವ ಕಾರ್ಯದ ಸಾಧನೆಗಾಗಿ ಹೋಗುತ್ತಿರುವೆ?"

ವೃದ್ಧಬ್ರಾಹ್ಮಣನ ವೇಷವನ್ನು ಧರಿಸಿದ್ದ ತಕ್ಷಕನಿಗೆ ಬ್ರಾಹ್ಮಣನು ಹೇಳಿದನು: "ಕುರುಶ್ರೇಷ್ಠನಾದ 'ಪರೀಕ್ಷಿತ್' ಎಂಬ ಹೆಸರಿನ ರಾಜನಿದ್ದಾನೆ. ಇನ್ನು ಸ್ವಲ್ಪ ಹೊತ್ತಿನೊಳಗಾಗಿಯೇ ತಕ್ಷಕನೆಂಬ ಪನ್ನಗೋತ್ತಮನು ಆ ರಾಜನನ್ನು ತನ್ನ ಉಜ್ವಲವಾದ ತೇಜಸ್ಸಿನಿಂದ ಭಸ್ಮಮಾಡಿಬಿಡುತ್ತಾನೆ.

ಸರ್ಪದಿಂದ ದಷ್ಟನಾದ ರಾಜನನ್ನು ಚಿಕಿತ್ಸೆಮಾಡಿ ಸರ್ಪದ ವಿಷವನ್ನು ವಿನಾಶಗೊಳಿಸಲು ನಾನಲ್ಲಿಗೆ ಹೋಗುತ್ತಿದ್ದೇನೆ. ಸರ್ಪವು ಕಚ್ಚುವ ಮೊದಲೇ ನಾನಲ್ಲಿಗೆ ಹೋದರೆ ರಾಜನನ್ನು ಸರ್ಪವು ಕಚ್ಚದಂತೆಯೂ ನೋಡಿ ಕೊಳ್ಳುತ್ತೇನೆ. ನಾನು ರಾಜನ ಸಮೀಪದಲ್ಲಿದ್ದರೆ ರಾಜನನ್ನು ಸರ್ಪವು ಏನೂ ಮಾಡಲಾರದು."

"ಬ್ರಾಹ್ಮಣೋತ್ತಮನೇ! ನೀನು ಹೇಳಿದ ತಕ್ಷಕನು ನಾನೇ ಆಗಿದ್ದೇನೆ. ನನ್ನಿಂದ ಕಚ್ಚಲ್ಪಟ್ಟವನನ್ನು ಪುನರುಜ್ಜೀವನಗೊಳಿಸಬೇಕೆಂದು ಆಶಿಸುವ ಕಾರಣವಾದರೂ ಏನಿದೆ? ಮೇಲಾಗಿ ನಾನು ಸಾಮಾನ್ಯಸರ್ಪವೆಂದು ಭಾವಿಸಬೇಡ. ನನ್ನಿಂದ ಕಚ್ಚಲ್ಪಟ್ಟವನನ್ನು ಪುನರುಜ್ಜೀವನಗೊಳಿಸಲು ಖಂಡಿತವಾಗಿಯೂ ನಿನಗೆ ಸಾಧ್ಯವಾಗಲಾರದು." ಹೀಗೆ ಹೇಳಿ ತಕ್ಷಕನು ಬ್ರಾಹ್ಮಣನನ್ನು ಪರೀಕ್ಷಿಸುವ ಸಲುವಾಗಿ ಹತ್ತಿರದಲ್ಲಿಯೇ ಇದ್ದ ಮಹಾವೃಕ್ಷ ವೊಂದನ್ನು ಕಚ್ಚಿಬಿಟ್ಟನು. ತಕ್ಷಕನು ಕಚ್ಚಿದ ಮರುಕ್ಷಣದಲ್ಲಿಯೇ ಆ ಮಹಾ ವೃಕ್ಷವು ಸುಟ್ಟು ಭಸ್ಮವಾಗಿ ಹೋಯಿತು. ಒಡನೆಯೇ ಕಾಶ್ಯಪನು ಮರದ ಬೂದಿಯೆಲ್ಲವನ್ನೂ ತನ್ನ ಮುಂದೆ ಸುರಿದುಕೊಂಡು ತನ್ನ ಮಂತ್ರಬಲದಿಂದ ಮತ್ತು ವಿದ್ಯೆಯ ಪ್ರಭಾವದಿಂದ ಅದೇ ವೃಕ್ಷವನ್ನು ಪುನಶ್ಚೇತನಗೊಳಿಸಿದನು. ಕಾಶ್ಯಪನ ಮಂತ್ರದ ಪ್ರಭಾವವನ್ನು ನೋಡಿ ಮುಗ್ಧನಾದ ತಕ್ಷಕನು ಬ್ರಾಹ್ಮಣ ನನ್ನು ಯಾವುದಾದರೂ ಉಪಾಯದಿಂದ ಹಿಂದಿರುಗುವಂತೆ ಮಾಡ ಬೇಕೆಂದು ನಿಶ್ಚಯಿಸಿ ಕಾಶ್ಯಪನಿಗೆ ಹೇಳಿದನು : "ಕಾಶ್ಯಪ! ನೀನು ರಾಜನಲ್ಲಿಗೆ ಯಾವ ಆಶಯದಿಂದ ಹೋಗುತ್ತಿರುವೆ? ಧನಕ್ಕಾಗಿ ಹೋಗುವೆಯೋ?"

"ನೀನು ಹೇಳುವುದು ನಿಜ. ಧನದ ಆಸೆಯಿಂದಲೂ ನಾನಲ್ಲಿಗೆ ಹೋಗುತ್ತಿದ್ದೇನೆ."

"ಹಾಗಾದರೆ ರಾಜನಿಂದ ನೀನು ಎಷ್ಟು ಧನವನ್ನು ಪಡೆಯಲು ಇಚ್ಛಿ ಸಿರುವೆಯೋ ಅದಕ್ಕಿಂತಲೂ ಹೆಚ್ಚಿನ ಧನವನ್ನು ನಾನೇ ಕೊಟ್ಟುಬಿಡುತ್ತೇನೆ. ರಾಜನ ಬಳಿಗೆ ಹೋಗುವ ಶ್ರಮವೇ ಇಲ್ಲದೇ ಅಪಾರವಾದ ಧನವನ್ನು ನೀನು ನನ್ನಿಂದಲೇ ಪಡೆದು ಹಿಂದಿರುಗಬಹುದಲ್ಲವೇ?"

ನಾಗರಾಜನು ಹೀಗೆಂದು ಹೇಳಲಾಗಿ ಧನಲುಬ್ಧನಾದ ಕಾಶ್ಯಪನು ತನಗೆ ಬೇಕಾದಷ್ಟು ಧನವನ್ನು ತಕ್ಷಕನಿಂದ ಪಡೆದು ಹಿಂದಿರುಗಿದನು.

ಕಾಶ್ಯಪನು ಹೊರಟುಹೋದನಂತರ ತಕ್ಷಕನು ಛದ್ಮವೇಷವನ್ನು ಧರಿಸಿ, ಸಕಲರಕ್ಷಣೆಯನ್ನೂ ಪಡೆದು ಜಾಗರೂಕನಾಗಿ ಅರಮನೆಯಲ್ಲಿದ್ದ ಧಾರ್ಮಿಕನಾದ ನಿನ್ನ ತಂದೆಯನ್ನು ವಿಷವೆಂಬ ಅಗ್ನಿಯಿಂದ ಭಸ್ಮಮಾಡಿ ಬಿಟ್ಟನು. ಅನಂತರದಲ್ಲಿ ದೇಶದ ರಕ್ಷಣೆಗಾಗಿ ನಿನಗೆ ಪಟ್ಟಾಭಿಷೇಕವನ್ನು ಮಾಡಲಾಯಿತು. ಇದರಲ್ಲಿ ನಾವು ಪ್ರತ್ಯಕ್ಷವಾಗಿ ನೋಡಿದ ಸಂಗತಿಗಳೂ ಇವೆ. ಎಲ್ಲ ವಿಷಯಗಳನ್ನೂ ನಿನಗೆ ಯಥಾವತ್ತಾಗಿ ತಿಳಿಸಿರುತ್ತೇವೆ. ದಾರುಣ ವಾದ ಈ ಕಥೆಯನ್ನು ನಮಗೆ ಹೇಳುವ ಇಚ್ಛೆಯಿಲ್ಲದಿದ್ದರೂ ನಿನ್ನ ಅಪ್ಪಣೆಯ ಮೇರೆಗೆ ಹೇಳಿದ್ದೇವೆ. ನಿನ್ನ ತಂದೆಯಾದ ಪರೀಕ್ಷಿತನ ಅಂತ್ಯವು ಹೇಗಾಯಿತೆಂಬುದನ್ನೂ ಹೇಳಿದ್ದೇವೆ ಮತ್ತು ಉತ್ತಂಕನು ಹೇಳಿದ ವಿಷಯ ವನ್ನೂ ನೀನು ಕೇಳಿರುವೆ. ಈ ಸಮಯದಲ್ಲಿ ನಿನಗೆ ಹೇಗೆ ಸೂಕ್ತವೋ ಹಾಗೆ ಮಾಡಬಹುದಾಗಿದೆ."

ಮಂತ್ರಿಗಳು ಹೇಳಿದ ಮಾತುಗಳನ್ನು ಏಕಾಗ್ರಚಿತ್ತನಾಗಿ ಕೇಳಿದ ಜನಮೇಜಯನು ಮಂತ್ರಿಗಳನ್ನು ಪುನಃ ಪ್ರಶ್ನಿಸಿದನು :

"ಮಂತ್ರಿಮಹೋದಯರೇ! ತಕ್ಷಕನು ಮಹಾವೃಕ್ಷವೊಂದನ್ನು ತನ್ನ ವಿಷದ ಜ್ವಾಲೆಯಿಂದ ಭಸ್ಮಮಾಡಿಬಿಟ್ಟನೆಂದು ಹೇಳಿದಿರಿ. ಬೂದಿಯ ರಾಶಿ ಯಾಗಿ ಬಿದ್ದಿದ್ದ ಆ ಮಹಾವೃಕ್ಷವನ್ನು ಕಾಶ್ಯಪನು ಪುನಶ್ಚೇತನಗೊಳಿಸಿದನೆಂದೂ ಹೇಳಿದಿರಿ. ಈ ವಿಷಯವು ನಿಶ್ಚಯವಾಗಿಯೂ ಪರಮಾದ್ಭುತವಾದುದೇ ಸರಿ. ನಿಜವಾಗಿಯೂ ತಕ್ಷಕನು ಕಾಶ್ಯಪನನ್ನು ಧನದ ಆಸೆಯನ್ನು ತೋರಿಸಿ ಹಿಂದಕ್ಕೆ ಕಳುಹಿಸದಿದ್ದರೆ ನಮ್ಮ ತಂದೆಯನ್ನು ಕಾಶ್ಯಪನು ಖಂಡಿತವಾಗಿಯೂ ಬದುಕಿಸಿಬಿಡುತ್ತಿದ್ದನು. ತಕ್ಷಕನ ಘೋರವಾದ ವಿಷವನ್ನೂ ಕಾಶ್ಯಪನು ತನ್ನ ಮಂತ್ರಬಲದಿಂದ ಶಕ್ತಿಹೀನವನ್ನಾಗಿ ಮಾಡಿಬಿಡುತ್ತಿದ್ದನು. ದುಷ್ಟಾತ್ಮನಾದ ಆ ತಕ್ಷಕನು ಈ ವಿಷಯವನ್ನು ಯೋಚಿಸಿಯೇ ಧನದ ಆಸೆಯಿಂದ ಬರುತ್ತಿದ್ದ ಕಾಶ್ಯಪನನ್ನು ತೃಪ್ತಿಪಡಿಸಿ ಕಳುಹಿಸಿಬಿಟ್ಟನು. 'ಮಹಾವಿಷಧರನೆಂದು ಪ್ರಸಿದ್ಧ ನಾಗಿರುವ ನಾನು ಕಚ್ಚಿದ ರಾಜನನ್ನು ಈ ಕಾಶ್ಯಪನೇನಾದರೂ ತನ್ನ ಮಂತ್ರಬಲದಿಂದ ಬದುಕಿಸಿಬಿಟ್ಟರೆ ಲೋಕದಲ್ಲಿ ನಾನು ಎಲ್ಲರ ಅಪಹಾಸ್ಯಕ್ಕೂ ಗುರಿಯಾಗುತ್ತೇನೆ. ಹಾಗಾಗಲು ಅವಕಾಶವೀಯಬಾರದು'–ಎಂದು ತಕ್ಷಕನು

ದುರಾಲೋಚನೆಮಾಡಿ ಕಾಶ್ಯಪನು ನನ್ನ ತಂದೆಯ ಸಮೀಪಕ್ಕೆ ಬಾರದಂತೆ ತಡೆದುಬಿಟ್ಟನು. ಇರಲಿ! ಯಾವುದಾದರೊಂದು ರೀತಿಯಲ್ಲಿ ನನ್ನ ತಂದೆಗೆ ತಕ್ಷಕನು ಮಾಡಿದ ಅಪರಾಧದ ಸೇಡನ್ನು ತೀರಿಸಿಕೊಳ್ಳುತ್ತೇನೆ. ಅವನಿಗೆ ಪರಮದಾರುಣವಾದ ಯಾತನೆಯನ್ನೇ ಕೊಡುತ್ತೇನೆ. ಆದರೆ ನೀವು ಹೇಳಿದುದರಲ್ಲಿ ಒಂದು ವಿಷಯವು ಮಾತ್ರ ಸ್ವಲ್ಪ ಸಮಸ್ಯೆಯಾಗಿ ಉಳಿದಿದೆ. ಹಸ್ತಿನಾಪುರಕ್ಕೆ ಬರುವ ಹಾದಿಯಲ್ಲಿ ಕಾಶ್ಯಪ-ತಕ್ಷಕರಿಬ್ಬರೂ ಸಂಧಿಸಿದರು. ತಕ್ಷಕನು ಭಸ್ಮಮಾಡಿದ ವೃಕ್ಷವನ್ನು ಕಾಶ್ಯಪನು ಸಚೇತನಗೊಳಿಸಿ ತನಗೆ ಬೇಕಾದಷ್ಟು ಧನವನ್ನು ತಕ್ಷಕನಿಂದ ತೆಗೆದುಕೊಂಡು ಹೊರಟುಹೋದನು. ಇತ್ತ ತಕ್ಷಕನು ನನ್ನ ತಂದೆಯ ಸಮೀಪಕ್ಕೆ ವೇಷವನ್ನು ಮರೆಯಿಸಿ ಬಂದು ಅವನನ್ನು ಕಚ್ಚಿ ಸಾಯಿಸಿಬಿಟ್ಟನು. ಅರಣ್ಯದಲ್ಲಿ ತಕ್ಷಕ-ಕಾಶ್ಯಪರ ನಡುವೆ ನಡೆದ ವಿಷಯವು ನಿಮಗೆ ತಿಳಿದಿದ್ದು ಹೇಗೆ? ವೃಕ್ಷವು ತಕ್ಷಕನ ವಿಷದಿಂದ ಭಸ್ಮವಾಗಿಹೋದುದನ್ನೂ ಮತ್ತು ಬ್ರಾಹ್ಮಣನು ಅದನ್ನು ಪುನಶ್ಚೇತನ ಗೊಳಿಸಿದುದನ್ನೂ ನಿಮಗೆ ಹೇಳಿದವರು ಯಾರು? ಈ ವಿಷಯವೊಂದನ್ನು ನಿಮ್ಮಿಂದ ತಿಳಿದುಕೊಂಡು ಅನಂತರ ನಾನು ಮಾಡಬೇಕಾದ ಕಾರ್ಯದ ವಿಷಯವಾಗಿ (ಸರ್ಪಗಳನ್ನು ವಿನಾಶಗೊಳಿಸುವ ವಿಷಯವಾಗಿ) ನನ್ನ ನಿರ್ಧಾರವನ್ನು ಕೈಗೊಳ್ಳುತ್ತೇನೆ.”

ರಾಜನ ಮಾತುಗಳನ್ನು ಕೇಳಿ ಮಂತ್ರಿಗಳು ಪ್ರತ್ಯಕ್ಷದರ್ಶಿಯು ಯಾರೆಂಬುದನ್ನು ಬಹಿರಂಗಪಡಿಸಿದರು.

“ಮಹಾರಾಜ! ಹಾದಿಯಲ್ಲಿ ತಕ್ಷಕನಿಗೂ ಮತ್ತು ಕಾಶ್ಯಪನಿಗೂ ಆದ ಸಮಾಗಮ, ನಡೆದ ಸಂಭಾಷಣೆ ಮತ್ತು ವಿದ್ಯಾಪ್ರದರ್ಶನಗಳು ನಮಗೆ ಹೇಗೆ ತಿಳಿಯಿತೆಂಬುದನ್ನು ಹೇಳುವೆವು, ಕೇಳು. ತಕ್ಷಕನು ಯಾವ ವೃಕ್ಷವನ್ನು ಭಸ್ಮಮಾಡಿದನೋ ಅದೇ ವೃಕ್ಷವನ್ನು ಹತ್ತಿ ಒಬ್ಬನು ಕಟ್ಟಿಗೆಗಾಗಿ ಒಣಗಿದ ಕೊಂಬೆಯನ್ನು ಕಡಿಯುತ್ತಿದ್ದನು. ಅವನು ಆ ವೃಕ್ಷದ ಮೇಲಿದ್ದುದು ಕಾಶ್ಯಪನಿ ಗಾಗಲೀ, ತಕ್ಷಕನಿಗಾಗಲೀ ತಿಳಿಯದು. ತಕ್ಷಕನು ಮರವನ್ನು ಕಚ್ಚಿದಾಗ ವೃಕ್ಷದ ಜೊತೆಯಲ್ಲಿಯೇ ಆ ಮನುಷ್ಯನೂ ಭಸ್ಮೀಭೂತನಾಗಿ ಹೋದನು. ಕಾಶ್ಯಪನು ವೃಕ್ಷವನ್ನು ಸಚೇತನಗೊಳಿಸಿದಾಗ ಆ ಮನುಷ್ಯನೂ ಸಚೇತನ ನಾದನು. ವೃಕ್ಷದ ಮೇಲಿದ್ದ ಪಕ್ಷಿಗಳೆಲ್ಲವೂ ಬದುಕಿಕೊಂಡುವು. ಈ

ರೀತಿಯಲ್ಲಿ ಕಾಶ್ಯಪನ ಮಂತ್ರಪ್ರಭಾವದಿಂದ ವೃಕ್ಷದೊಡನೆ ಬದುಕಿಕೊಂಡ ಆ ಮನುಷ್ಯನು ನಮ್ಮ ಬಳಿಗೆ ಬಂದು ಎಲ್ಲ ವಿಷಯಗಳನ್ನೂ ಹೇಳಿದನು. ಅವನಿಂದ ಈ ರಹಸ್ಯವಿಷಯವೂ ತಿಳಿಯಿತು. ತಕ್ಷಕನ ಮತ್ತು ಆ ಬ್ರಾಹ್ಮಣನ ಎಲ್ಲ ವಿಷಯಗಳನ್ನೂ ನಿನಗೆ ನಿವೇದಿಸಿದ್ದೇವೆ. ನೀನಿನ್ನು ನಿನಗೆ ಉಚಿತ ವೆನಿಸುವ ರೀತಿಯಲ್ಲಿ ಕಾರ್ಯವನ್ನು ಕೈಗೊಳ್ಳಬಹುದಾಗಿದೆ."

ಮಂತ್ರಿಗಳ ಮಾತುಗಳನ್ನು ಕೇಳಿ ಜನಮೇಜಯನು ಬಹುಸಂತಪ್ತ ನಾದನು. 'ಅಯ್ಯೋ! ಕಾಶ್ಯಪನನ್ನು ಆ ದುಷ್ಟತಕ್ಷಕನು ತಡೆಯದೇ ಹೋಗಿದ್ದರೆ ನನ್ನ ತಂದೆಯು ಬದುಕಿಬಿಡುತ್ತಿದ್ದನಲ್ಲವೇ?'–ಎಂದೆನ್ನುತ್ತಾ ಕೈ-ಕೈ ಹಿಸುಕಿಕೊಂಡನು. ರಾಜೀವಲೋಚನನಾದ ಜನಮೇಜಯನು ಬಾರಿ-ಬಾರಿಗೂ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಬಿಕ್ಕಿ-ಬಿಕ್ಕಿ ಅತ್ತನು. ಅವನ ಎರಡು ಕಣ್ಣುಗಳಿಂದಲೂ ಅಶ್ರುಬಿಂದುಗಳು ಎಡೆಬಿಡದೇ ತೊಟ್ಟಿಕ್ಕಿದುವು. ಅನಂತರದಲ್ಲಿ ಶುದ್ಧಾಚಮನಮಾಡಿ ಮುಹೂರ್ತಕಾಲ ಸ್ತಬ್ಧನಾಗಿ ಏನನ್ನೋ ಗಾಢವಾಗಿ ಆಲೋಚಿಸುತ್ತಿದ್ದು, ಅನಂತರ ಯಾವುದೋ ಒಂದು ನಿರ್ಧಾರಕ್ಕೆ ಬಂದ ಮುಖಭಾವದಿಂದ ಕೂಡಿದವನಾಗಿ ಎಲ್ಲ ಮಂತ್ರಿಗಳನ್ನೂ ಕರೆದು ಹೀಗೆ ಹೇಳಿದನು :

"ಮಂತ್ರಿಸತ್ತಮರೇ! ನಾನು ತಮ್ಮಿಂದ ನನ್ನ ತಂದೆಯ ಅಂತ್ಯವು ಹೇಗಾಯಿತೆಂಬ ವಿಷಯವನ್ನು ವಿಶದವಾಗಿ ಕೇಳಿ ತಿಳಿದುಕೊಂಡೆನು. ನನ್ನ ತಂದೆಯ ಮರಣಕ್ಕೆ ಮುಖ್ಯಕಾರಣರಾರೆಂಬುದನ್ನೂ ನಾನೀಗ ನಿರ್ಧರಿಸಿ ದ್ದೇನೆ. ತಕ್ಷಕನೇ ನನ್ನ ತಂದೆಯ ಮರಣಕ್ಕೆ ಮುಖ್ಯಕಾರಣನೆಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ಪೂಜ್ಯನಾದ ನನ್ನ ತಂದೆಯನ್ನು ಕಚ್ಚಿ ಸಾಯಿಸಿದ ಮಹಾಪಾಪಿಗೆ ಪ್ರತಿಕ್ರಿಯೆಯನ್ನು ಮಾಡಿಯೇ ತೀರಬೇಕೆಂದು ನಿಶ್ಚಯಿಸಿಬಿಟ್ಟಿದ್ದೇನೆ. ನನ್ನ ತಂದೆಯನ್ನು ಕೊಲ್ಲಲು ತಕ್ಷಕನಿಗೆ ಶೃಂಗಿಯ ಶಾಪವು ಕೇವಲ ನಿಮಿತ್ತವಾಯಿತು. ಹಾಗಿಲ್ಲದಿದ್ದರೆ ಅನಾಹೂತನಾಗಿ ತಾನಾಗಿಯೇ ರಾಜನ ಪ್ರಾಣವನ್ನುಳಿಸಲು ಆಗಮಿಸುತ್ತಿದ್ದ ಕಾಶ್ಯಪನನ್ನು ಆ ತಕ್ಷಕನು ಹೇರಳವಾದ ಧನವನ್ನು ಕೊಟ್ಟು ಹಿಂದಕ್ಕೆ ಕಳುಹಿಸುತ್ತಿರಲಿಲ್ಲ. ಕಾಶ್ಯಪ

ನೇನಾದರೂ ತಕ್ಷಕನಿಂದ ಹಿಂದಿರುಗಿಸಲ್ಪಡದೇ ನನ್ನ ತಂದೆಯ ಬಳಿಗೆ ಬಂದಿದ್ದರೆ ನನ್ನ ತಂದೆಗೆ ಸಾವಿನ ಭಯವು ಖಂಡಿತವಾಗಿಯೂ ಇರುತ್ತಿರಲಿಲ್ಲ. ರಾಜನನ್ನು ಬದುಕಿಸಿಯೇ ತೀರಬೇಕೆಂಬ ಮಂತ್ರಿಗಳ ಪ್ರಯತ್ನದಿಂದಲೂ, ಬ್ರಾಹ್ಮಣಶ್ರೇಷ್ಠನಾದ ಕಾಶ್ಯಪನ ವರಪ್ರಸಾದದಿಂದಲೂ ನನ್ನ ತಂದೆಯು ಬದುಕಿಬಿಟ್ಟಿದ್ದರೆ ತಕ್ಷಕನಿಗೆ ಆಗುತ್ತಿದ್ದ ನಷ್ಟವಾದರೂ ಏನು?

**ಸ ತು ವಾರಿತವಾನ್ಮೋಹಾತ್ಕಾಶ್ಯಪಂ ದ್ವಿಜಸತ್ತಮಮ್ ।**
**ಸಂಜಿಜೀವಯಿಷುಂ ಪ್ರಾಪ್ತಂ ರಾಜಾನಮಪರಾಜಿತಮ್ ॥೫೨॥**

**ಮಹಾನತಿಕ್ರಮೋ ಹ್ಯೇಷ ತಕ್ಷಕಸ್ಯ ದುರಾತ್ಮನಃ ।**
**ದ್ವಿಜಸ್ಯ ಯೋಽದದದ್ದ್ರವ್ಯಂ ಮಾ ನೃಪಂ ಜೀವಯೇದಿತಿ ॥೫೩॥**

**ಉತ್ತಙ್ಕಸ್ಯ ಪ್ರಿಯಂ ಕರ್ತುಮಾತ್ಮನಶ್ಚ ಮಹತ್ಪ್ರಿಯಮ್ ।**
**ಭವತಾಂ ಚೈವ ಸರ್ವೇಷಾಂ ಗಚ್ಛಾಮ್ಯಪಚಿತಿಂ ಪಿತುಃ ॥೫೪॥**

ಅಪರಾಜಿತನಾದ ನನ್ನ ತಂದೆಯನ್ನು ಬದುಕಿಸುವ ಉದ್ದೇಶದಿಂದಲೇ ಬರುತ್ತಿದ್ದ ಕಾಶ್ಯಪನನ್ನು ತಕ್ಷಕನು ಕಪಟಮಾರ್ಗದಿಂದ ಹಿಂದಿರುಗಿಸಿಬಿಟ್ಟನು. ಈ ವಿಷಯದಲ್ಲಿ ದುರಾತ್ಮನಾದ ತಕ್ಷಕನು ಮಹಾಪರಾಧಮಾಡಿದ್ದಾನೆ. ನಮ್ಮ ತಂದೆಯನ್ನು ಬದುಕಿಸದಿರಲು ಆ ದುಷ್ಟನು ಬ್ರಾಹ್ಮಣನಿಗೆ ಯಥೇಚ್ಛವಾಗಿ ಹಣವನ್ನು ಕೊಟ್ಟು ಹಿಂದಕ್ಕೆ ಕಳುಹಿಸಿಬಿಟ್ಟನು. ಇಂತಹ ದುರಾತ್ಮನಿಗೆ ಪ್ರತಿಕ್ರಿಯೆಯನ್ನು ಮಾಡಲೇಬೇಕು. ಈ ಸಮಯದಲ್ಲಿ ಬ್ರಾಹ್ಮಣೋತ್ತಮನಾದ ಉತ್ತಂಕನಿಗೆ ಪ್ರಿಯವನ್ನುಂಟುಮಾಡುವುದೂ ನನ್ನ ಕರ್ತವ್ಯವಾಗಿದೆ. ನನ್ನ ಮನಸ್ಸಿಗೂ ಶಾಂತಿಯು ಲಭಿಸಬೇಕಾಗಿದೆ. ರಾಜನ ಮರಣದ ವಿಷಯವಾಗಿ ನೀವೂ ಬಹಳವಾಗಿ ಸಂಕಟಪಡುತ್ತಿದ್ದೀರಿ. ತಕ್ಷಕನು ಮಾಡಿದ ಕುಕಾರ್ಯಕ್ಕಾಗಿ ನೀವೆಲ್ಲರೂ ಕೋಪದಿಂದ ಪರಿತಪಿಸುತ್ತಿದ್ದೀರಿ. ಇದರ ನಿವಾರಣೆಗಾಗಿ ನಾನು ತಂದೆಯ ವೈರಿಗೆ ತಕ್ಕುದಾದ ಪ್ರತಿಕ್ರಿಯೆಯನ್ನು ಮಾಡಲು ನಿಶ್ಚಯಿಸಿದ್ದೇನೆ."

೫೦ನೆಯ ಅಧ್ಯಾಯವು ಮುಗಿಯಿತು.

೫೧ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಜನಮೇಜಯನಿಂದ ಸರ್ಪಯಾಗೋಪಕ್ರಮ

ಸೌತಿಗಳು ಮುಂದುವರಿದು ಹೇಳುತ್ತಾರೆ :

**ಏವಮುಕ್ತ್ವಾ ತತಃ ಶ್ರೀಮಾನ್ಮನ್ತ್ರಿಭಿಶ್ಚಾನುಮೋದಿತಃ ।**
**ಆರುರೋಹ ಪ್ರತಿಜ್ಞಾಂ ಸ ಸರ್ಪಸತ್ರಾಯ ಪಾರ್ಥಿವಃ ॥೧॥**

"ಶೌನಕರೇ! ಶ್ರೀಮಂತನಾದ ಜನಮೇಜಯನು ಹೀಗೆ ಹೇಳಲು, ತಕ್ಷಕನಿಗೆ ಪ್ರತಿಕ್ರಿಯೆಮಾಡಬೇಕೆಂಬುದಕ್ಕೆ ಮಂತ್ರಿಗಳೂ ಸಮ್ಮತಿಸಿದರು. ಅನಂತರದಲ್ಲಿ ಜನಮೇಜಯನು ಸರ್ಪಯಾಗವನ್ನು ಮಾಡಲು ಪ್ರತಿಜ್ಞೆ ಮಾಡಿದನು.

ವಸುಧಾಧಿಪನಾದ, ವಾಗ್ಮಿಯಾದ ಜನಮೇಜಯನು ಪುರೋಹಿತರನ್ನೂ ಋತ್ವಿಜರನ್ನೂ ಅರಮನೆಗೆ ಬರಮಾಡಿಕೊಂಡು ಕಾರ್ಯಸಿದ್ಧಿಕರವಾದ ಈ ಮಾತುಗಳನ್ನಾಡಿದನು :

**ಯೋ ಮೇ ಹಿಂಸಿತವಾಂಸ್ತಾತಂ ತಕ್ಷಕಃ ಸ ದುರಾತ್ಮವಾನ್ ।**
**ಪ್ರತಿಕುರ್ಯಾಂ ತಥಾ ತಸ್ಯ ತದ್ಭವನ್ತೋ ಬ್ರುವನ್ತು ಮೇ ॥೨॥**

**ಅಪಿ ತತ್ಕರ್ಮ ವಿದಿತಂ ಭವತಾಂ ಯೇನ ಪನ್ನಗಮ್ ।**
**ತಕ್ಷಕಂ ಸಮ್ಪ್ರದೀಪ್ತೇಽಗ್ನೌ ಪ್ರಕ್ಷಿಪೇಯಂ ಸಬಾನ್ಧವಮ್ ॥೪॥**

**ಯಥಾ ತೇನ ಪಿತಾ ಮಹ್ಯಂ ಪೂರ್ವಂ ದಗ್ಧೋ ವಿಷಾಗ್ನಿನಾ ।**
**ತಥಾಹಮಪಿ ತಂ ಪಾಪಂ ದಗ್ಧುಮಿಚ್ಛಾಮಿ ಪನ್ನಗಮ್ ॥೫॥**

"ಬ್ರಾಹ್ಮಣೋತ್ತಮರೇ! ನಮ್ಮ ತಂದೆಯಾದ ಪರೀಕ್ಷಿದ್ರಾಜನನ್ನು ದುರಾತ್ಮನಾದ ತಕ್ಷಕನು ಕಡಿದು ಸಾಯಿಸಿದನೆಂಬ ವಿಷಯವು ನಿಮ್ಮೆಲ್ಲರಿಗೂ ತಿಳಿದೇ ಇರುವುದು. ಆ ದುಷ್ಟತಕ್ಷಕನಿಗೆ ಪ್ರತಿಕ್ರಿಯೆಮಾಡಲು ಸಂಕಲ್ಪಿಸಿದ್ದೇನೆ. ಆ ಪ್ರತಿಕ್ರಿಯೆಯನ್ನು ಹೇಗೆ ಮಾಡಬೇಕು? ಅದಕ್ಕೇನಾದರೂ ವಿಶೇಷವಾದ ವಿಧಿ-ನಿಯಮಗಳಿವೆಯೇ? ಆ ತಕ್ಷಕನು ನನ್ನ ತಂದೆಯನ್ನು ವಿಷಾಗ್ನಿಯಿಂದ ದಹಿಸಿದಂತೆ ಸಬಾಂಧವನಾದ ಅವನನ್ನು ಧಗ-ಧಗನೆ

ಪ್ರಜ್ವಲಿಸುವ ಯಜ್ಞಕುಂಡದಲ್ಲಿ ಹಾಕಿ ಭಸ್ಮಮಾಡಬೇಕೆಂದಿರುವೆನು. ಇದಕ್ಕೇನಾದರೂ ಶಾಸ್ತ್ರೀಯವಾದ ಪ್ರಕ್ರಿಯೆಗಳಿದ್ದು ಅದು ನಿಮಗೆ ತಿಳಿದಿದ್ದರೆ ದಯಮಾಡಿ ತಿಳಿಸಿರಿ."

ಋತ್ವಿಜರು ಹೇಳುತ್ತಾರೆ :

**ಅಸ್ತಿ ರಾಜನ್ಮಹತ್ಸತ್ರಂ ತ್ವದರ್ಥಂ ದೇವನಿರ್ಮಿತಮ್ ।**
**ಸರ್ಪಸತ್ರಮಿತಿ ಖ್ಯಾತಂ ಪುರಾಣೇ ಪರಿಪಠ್ಯತೇ ॥೬॥**

**ಆಹರ್ತಾ ತಸ್ಯ ಸತ್ರಸ್ಯ ತ್ವನ್ನಾನ್ಯೋಽಸ್ತಿ ನರಾಧಿಪ ।**
**ಇತಿ ಪೌರಾಣಿಕಾಃ ಪ್ರಾಹುರಸ್ಮಾಕಂ ಚಾಸ್ತಿ ನ ಕ್ರತುಃ ॥೭॥**

"ಮಹಾರಾಜ! ನಿನಗಾಗಿಯೇ–ನೀನು ಮಾಡುವ ಸಲುವಾಗಿಯೇ ದೇವತೆಗಳಿಂದ ನಿರ್ದಿಷ್ಟವಾಗಿರುವ ಸರ್ಪಸತ್ರವೆಂಬ ಮಹಾಯಾಗ ವೊಂದಿರುವುದು. ಪುರಾಣಗಳಲ್ಲಿ ಈ ಸರ್ಪಯಾಗದ ವರ್ಣನೆಯಿದೆ. 'ಜನಮೇಜಯನನ್ನು ಬಿಟ್ಟರೆ ಬೇರೆಯವರು ಈ ಯಜ್ಞಮಾಡಲು ಅರ್ಹ ರಾಗುವುದಿಲ್ಲ' ಎಂಬುದಾಗಿ ಪೌರಾಣಿಕರು ಹೇಳುತ್ತಾರೆ. ಆ ಯಜ್ಞವಿಧಾನವು ನಮ್ಮೆಲ್ಲರಿಗೂ ತಿಳಿದಿರುವುದು.

ಋತ್ವಿಜರಾಡಿದ ಮಾತುಗಳನ್ನು ಕೇಳಿ ಆನಂದಭರಿತನಾದ ಮಹಾ ರಾಜನು–ತಕ್ಷಕನು ಬಂದು ಅಗ್ನಿಯಲ್ಲಿ ಬಿದ್ದು ದಗ್ಧನಾಗಿಹೋದನೆಂದೇ ಭಾವಿಸಿಬಿಟ್ಟನು. ಮಂತ್ರವಿದರಾದ ಋತ್ವಿಗ್ಬ್ರಾಹ್ಮಣರೊಡನೆ ರಾಜನು ಹೇಳಿದನು : "ನೀವು ಹೇಳಿದಂತೆ ನಾನೊಬ್ಬನೇ ಆ ಮಹಾಯಾಗವನ್ನು ಮಾಡಲು ಅರ್ಹನಾಗಿರುವುದಾದರೆ ನಾನು ಆ ಯಜ್ಞವನ್ನು ಈಗಲೇ ಉಪಕ್ರಮಿಸುತ್ತೇನೆ. ಆ ಮಹಾಕ್ರತುವಿಗೆ ಬೇಕಾಗುವ ಸಂಭಾರಗಳೆಲ್ಲವನ್ನೂ ಒಡನೆಯೇ ಸಿದ್ಧಗೊಳಿಸಿರಿ."

ಜನಮೇಜಯನ ಮಾತುಗಳನ್ನು ಕೇಳಿದ ಋತ್ವಿಜರು ಯಥಾಶಾಸ್ತ್ರ ವಾಗಿ ಯಜ್ಞಭೂಮಿಯನ್ನಳೆದರು. ಋತ್ವಿಜರೆಲ್ಲರೂ ವೇದವಿದ್ವಾಂಸ ರಾಗಿದ್ದರು. ಅವರಿಗೆ ಅಪಾರವಾದ ಮೇಧಾಶಕ್ತಿಯಿದ್ದಿತು. ಅವರೆಲ್ಲರೂ ಶಾಸ್ತ್ರಾನುರೂಪವಾದ ಯಜ್ಞಶಾಲೆಯನ್ನು ನಿರ್ಮಿಸಿದರು. ಆ ಯಜ್ಞ ಮಂಟಪದಲ್ಲಿ ಯಜ್ಞಕ್ಕೆ ಬೇಕಾದ ಸಕಲಸಂಭಾರಗಳ ಸಮೃದ್ಧಿಯಿದ್ದಿತು. ಅಲ್ಲಿ

ವೇದ-ವೇದಾಂಗಪಾರಂಗತರಾದ ಬ್ರಾಹ್ಮಣರಿದ್ದರು. ಹೇರಳವಾದ ಧಾನ್ಯವು ಅಲ್ಲಿಯ ಕಣಜಗಳಲ್ಲಿ ತುಂಬಿದ್ದಿತು. ಯಜ್ಞದಕ್ಷಿಣೆಗಾಗಿ ಜನಮೇಜಯನು ಅಪಾರವಾದ ದ್ರವ್ಯವನ್ನು ಸಂಗ್ರಹಿಸಿಟ್ಟಿದ್ದನು. ಅನುಷ್ಠಾನಸಂಪನ್ನರಾದ ಋತ್ವಿಜರು ಯಜ್ಞದ ವೇದಿಕೆಯನ್ನಲಂಕರಿಸಿದ್ದರು. ಅಂತಹ ಉತ್ತಮೋತ್ತಮವಾದ ಯಜ್ಞಶಾಲೆಯನ್ನು ನಿರ್ಮಿಸಿದನಂತರ ಸರ್ಪಯಾಗದ ಸಲುವಾಗಿ ಜನಮೇಜಯರಾಜನಿಗೆ ವಿಧಿಪೂರ್ವಕವಾಗಿ ದೀಕ್ಷೆಯನ್ನು ಕೊಡಲಾಯಿತು. ಎಲ್ಲವೂ ವಿಧಿವತ್ತಾಗಿಯೇ ನಡೆದಿದ್ದರೂ ಯಜ್ಞವು ಪ್ರಾರಂಭವಾಗುವ ಮೊದಲು ಯಜ್ಞವಿಘ್ನಕಾರಕಗಳಾದ ಸೂಚನೆಗಳು ಕಂಡುಬಂದುವು. ಯಜ್ಞಶಾಲೆಯು ವಿಧಿಪೂರ್ವಕವಾಗಿ ನಿರ್ಮಿಸಲ್ಪಡುತ್ತಿರುವಾಗ ಬುದ್ಧಿಸಂಪನ್ನನಾದ, ವಾಸ್ತುವಿದ್ಯಾವಿಶಾರದನಾದ, ಸೂತ್ರಧಾರನಾದ, ಸ್ಥಪತಿಯಾದ (ಶಿಲ್ಪಶಾಸ್ತ್ರವನ್ನು ತಿಳಿದಿದ್ದ ) ಸೂತನು ರಾಜನನ್ನು ಕುರಿತು ಹೀಗೆ ಹೇಳಿದನು:

**ಯಸ್ಮಿನ್ದೇಶೇ ಚ ಕಾಲೇ ಚ ಮಾಪನೇಯಂ ಪ್ರವರ್ತಿತಾ ।**
**ಬ್ರಾಹ್ಮಣಂ ಕಾರಣಂ ಕೃತ್ವಾ ನಾಯಂ ಸಂಸ್ಥಾಸ್ಯತೇ ಕ್ರತುಃ ॥೧೬॥**

"ಮಹಾರಾಜ! ನಿನ್ನಿಂದ ನಿರ್ದೇಶಿತರಾದ ಬ್ರಾಹ್ಮಣರು ವಿಧಿಪೂರ್ವಕವಾಗಿ ಯಜ್ಞಶಾಲೆಯನ್ನು ನಿರ್ಮಿಸಲು ಭೂಮಿಯನ್ನು ಅಳೆದಿರುವ ಮುಹೂರ್ತವನ್ನೂ ಮತ್ತು ಯಜ್ಞಕ್ಕಾಗಿ ಆರಿಸಿಕೊಂಡಿರುವ ಭೂಪ್ರದೇಶವನ್ನೂ ಶಾಸ್ತ್ರದೃಷ್ಟಿಯಿಂದ ಅವಲೋಕಿಸಿದ್ದೇ ಆದರೆ–ಈ ಯಜ್ಞಶಾಲೆಯಲ್ಲಿ ನಡೆಯಲಿರುವ ಸರ್ಪಯಾಗವು ಬ್ರಾಹ್ಮಣನೊಬ್ಬನ ನಿಮಿತ್ತದಿಂದಾಗಿ ಅರ್ಧದಲ್ಲಿಯೇ ನಿಲ್ಲುವುದೆಂಬ ಸೂಚನೆಯನ್ನು ಕೊಡುತ್ತದೆ."

ಶಿಲ್ಪಿಯಾಡಿದ ಮಾತುಗಳನ್ನು ಕೇಳಿ ಜನಮೇಜಯನು ದೀಕ್ಷಾಬದ್ಧನಾಗುವ ಮೊದಲೇ ತನ್ನ ಸೇವಕರನ್ನು ಕರೆದು–'**ನ ಹಿ ಮೇ ಕಶ್ಚಿದಜ್ಞಾತಃ ಪ್ರವಿಶೇತ್**'–"ನನಗೆ ಮುಂದಾಗಿ ಸೂಚನೆಯನ್ನು ಕೊಡದೇ ಯಾವ ಅಪರಿಚಿತವ್ಯಕ್ತಿಯನ್ನೂ ಯಜ್ಞಶಾಲೆಯೊಳಗೆ ಬಿಡಬಾರದು"–ಎಂದು ಕಟ್ಟಾಜ್ಞೆಮಾಡಿದನು.

ಽ೫೧ನೆಯ ಅಧ್ಯಾಯವು ಮುಗಿಯಿತು.

೫೨ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಸರ್ಪಯಾಗದ ಆರಂಭ ಮತ್ತು ಸರ್ಪಗಳ ವಿನಾಶ

ಸೌತಿಗಳು ಮುಂದುವರಿದು ಹೇಳುತ್ತಾರೆ :

**ತತಃ ಕರ್ಮ ಪ್ರವವೃತೇ ಸರ್ಪಸತ್ರವಿಧಾನತಃ ।**
**ಪರ್ಯಕ್ರಾಮಂಶ್ಚ ವಿಧಿವತ್ಸ್ವೇ ಸ್ವೇ ಕರ್ಮಣಿ ಯಾಜಕಾಃ ॥೧॥**

"ಶೌನಕರೇ! ಹಿಂದೆಯೇ ನಿರ್ದಿಷ್ಟವಾಗಿದ್ದ ಸರ್ಪಯಾಗಪ್ರಯೋಗ ವನ್ನೇ ಅನುಸರಿಸಿ ಯಾಗವು ಪ್ರಾರಂಭವಾಯಿತು. ಋತ್ವಿಜರು ತಮಗೆ ವರಣಮಾಡಿದ ರೀತಿಯಲ್ಲಿ ತಮ್ಮ-ತಮ್ಮ ಜಪ-ಹೋಮಾದಿಗಳನ್ನು ಮಾಡಿ ಮುಗಿಸುತ್ತಿದ್ದರು. ಶಾಸ್ತ್ರನಿಯಮಗಳಂತೆ ಆ ಯಾಗದಲ್ಲಿ ಭಾಗವಹಿಸಿದ್ದ ಋತ್ವಿಜರೆಲ್ಲರೂ ಕಪ್ಪಾದ ವಸ್ತ್ರಗಳನ್ನುಟ್ಟಿದ್ದರು. ಅವರ ಕಣ್ಣುಗಳು ಅನವರತವಾದ ಧೂಮದ ವ್ಯಾಪನೆಯಿಂದಾಗಿ ಕೆಂಪಾಗಿದ್ದುವು. ಮಂತ್ರ ಪೂರ್ವಕವಾಗಿ ಜ್ವಲಿಸುತ್ತಿರುವ ಯಜ್ಞೇಶ್ವರನಲ್ಲಿ ಹೋಮಮಾಡುತ್ತಿದ್ದರು. ಪೂರ್ವಾಂಗಹೋಮಗಳೆಲ್ಲವೂ ಮುಗಿದನಂತರ ಸರ್ಪಗಳ ಹೃದಯಗಳು ಭಯದಿಂದ ತತ್ತರಿಸುವಂತೆ ಪ್ರತಿಯೊಂದು ಸರ್ಪವನ್ನೂ ಹೆಸರು ಹಿಡಿದು ಅಗ್ನಿಯ ಸಮೀಪಕ್ಕೆ ಆಹ್ವಾನಿಸುತ್ತಿದ್ದರು. ಋತ್ವಿಜರು ಸರ್ಪಗಳ ಹೆಸರನ್ನು ಹೇಳಿ ಅಗ್ನಿಯ ಬಳಿಗೆ ಆಹ್ವಾನಿಸಿ 'ಸ್ವಾಹಾ' ಎಂಬ ಶಬ್ದವನ್ನು ಉಚ್ಚರಿಸಿ ದೊಡನೆಯೇ ಸರ್ಪಗಳು ಪ್ರದೀಪ್ತವಾದ ಅಗ್ನಿಯಲ್ಲಿ ಬೀಳುತ್ತಿದ್ದುವು. ಅಗ್ನಿಯ ಬಳಿಗೆ ಬರುವಾಗ ದೈನ್ಯದಿಂದ ಪರಸ್ಪರವಾಗಿ ನೋಡುತ್ತಾ, ತಪ್ಪಿಸಿಕೊಳ್ಳಲು ಅಲ್ಪ-ಸ್ವಲ್ಪ ಪ್ರಯತ್ನಮಾಡುತ್ತಾ, ಅಗ್ನಿಯಲ್ಲಿ ಬೀಳುವ ವೇಳೆಯಲ್ಲಿ ದಾರುಣವಾಗಿ ಶಬ್ದಮಾಡುತ್ತಾ ಯಜ್ಞೇಶ್ವರನಿಗೆ ಆಹುತಿಯಾಗುತ್ತಿದ್ದುವು. ಕೆಲವು ಹಾವುಗಳು ಬುಸುಗುಟ್ಟುತ್ತಿದ್ದುವು. ಮತ್ತೆ ಕೆಲವು ದೀರ್ಘ ವಾಗಿ ನಿಟ್ಟುಸಿರುಬಿಡುತ್ತಿದ್ದುವು. ಅಗ್ನಿಯಲ್ಲಿ ಬೀಳುವ ಭಯದಿಂದ ಪರಸ್ಪರವಾಗಿ ತೆಕ್ಕೆಹಾಕಿಕೊಳ್ಳುತ್ತಿದ್ದುವು. ಆದರೆ ಮಂತ್ರದಿಂದ ಆಕರ್ಷಿತ ವಾದ ಸರ್ಪಗಳು ಯಜ್ಞೇಶ್ವರನಿಂದ ಮಾತ್ರ ತಪ್ಪಿಸಿಕೊಳ್ಳುವ ಸಾಧ್ಯತೆ ಯಿರಲಿಲ್ಲ. ಕೆಲವು ಬಾಲದ ಕಡೆಯಿಂದಲೂ ಮತ್ತು ಕೆಲವು ತಲೆಯ ಕಡೆ

ಯಿಂದಲೂ ಯಜ್ಞೇಶ್ವರನಿಗೆ ಆಹುತಿಯಾಗುತ್ತಿದ್ದುವು. ಬಿಳಿಯ ಸರ್ಪಗಳು, ಕಾಳಿಂಗನಾಗಗಳು, ನೀಲಸರ್ಪಗಳು, ವೃದ್ಧನಾಗಗಳು, ಚಿಕ್ಕ ಹಾವುಗಳು– ಇವುಗಳೆಲ್ಲವೂ ಘೋರವಾಗಿ ಶಬ್ದಮಾಡುತ್ತಾ ಯಜ್ಞೇಶ್ವರನಲ್ಲಿ ಬಂದು ಬೀಳುತ್ತಿದ್ದುವು.

ಅಗ್ನಿಹೋತ್ರಿಗಳಲ್ಲಿ ಶ್ರೇಷ್ಠರಾದ ಶೌನಕರೇ! ಸರ್ಪಗಳಲ್ಲಿ ಕೆಲವು ಒಂದು ಕ್ರೋಶದಷ್ಟು ಉದ್ದವಾಗಿರುತ್ತಿದ್ದುವು ; ಮತ್ತೆ ಕೆಲವು ಒಂದು ಯೋಜನ ದೂರದಷ್ಟು ಉದ್ದವಾಗಿರುತ್ತಿದ್ದುವು ; ಇನ್ನೂ ಕೆಲವು ಗೋಕರ್ಣದಷ್ಟು ಪುಟ್ಟದಾಗಿರುತ್ತಿದ್ದುವು. ಆ ಎಲ್ಲ ಸರ್ಪಗಳೂ ಮಂತ್ರದಿಂದ ಆಕೃಷ್ಟ ವಾದೊಡನೆಯೇ ಯಜ್ಞಕುಂಡದಲ್ಲಿ ಬಂದು ಬೀಳುತ್ತಿದ್ದುವು. ಈ ವಿಧವಾಗಿ ಲಕ್ಷೋಪಲಕ್ಷ-ಕೋಟ್ಯಾನುಕೋಟಿ-ಅರ್ಬುದ-ನ್ಯರ್ಬುದಸಂಖ್ಯಾತವಾದ ಸರ್ಪಗಳು ಯಜ್ಞೇಶ್ವರನಲ್ಲಿ ಬಿದ್ದು ಅಸುವನ್ನು ನೀಗಿದುವು. ಕೆಲವು ಸರ್ಪಗಳು ಕುದುರೆಯ ಆಕಾರವನ್ನು ಹೊಂದಿದ್ದುವು. ಮತ್ತೆ ಕೆಲವು ಆನೆಯ ಸೊಂಡಿಲಿನಂತಹ ಆಕಾರವುಳ್ಳವುಗಳಾಗಿಯೂ, ಮದಿಸಿದುವುಗಳಾಗಿಯೂ ಇದ್ದುವು. ಅವುಗಳೆಲ್ಲವೂ ಯಜ್ಞೇಶ್ವರನಿಗೆ ಆಹುತಿಯಾದುವು. ಕೆಲವು ಸರ್ಪಗಳು ಭಯಂಕರವಾದ ವಿಷವನ್ನು ಹೊಂದಿದ್ದುವು. ನಾನಾವರ್ಣಗಳಿಂದ ಕೂಡಿದ್ದುವು. ನೋಡಲು ಬಹಳ ಘೋರವಾಗಿ ಕಾಣುತ್ತಿದ್ದುವು. ಮತ್ತೆ ಕೆಲವು ಪರಿಘಾಯುಧಕ್ಕೆ ಸದೃಶವಾಗಿದ್ದುವು. ಕೆಲವು ಮಹಾಬಲಶಾಲಿಗಳಾಗಿಯೂ ನಿಷ್ಕಾರಣವಾಗಿ ಮನುಷ್ಯರನ್ನು ಕಡಿಯುವ ಸ್ವಭಾವವುಳ್ಳವುಗಳಾಗಿಯೂ ಇದ್ದುವು. ಆ ಎಲ್ಲ ಸರ್ಪಗಳೂ ಮಾತೃಶಾಪದಿಂದ ಪೀಡಿತವಾಗಿ ಅಗ್ನಿಯಲ್ಲಿ ತಂಡ-ತಂಡವಾಗಿ ಬೀಳುತ್ತಿದ್ದುವು."

ಐ೭ನೆಯ ಅಧ್ಯಾಯವು ಮುಗಿಯಿತು.

೫೩ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಸರ್ಪಯಾಗದಲ್ಲಿ ಭಾಗವಹಿಸಿದ್ದ ಋತ್ವಿಜರ ನಾಮಾವಳಿ : ಭಯಂಕರವಾದ ರೀತಿಯಲ್ಲಿ ಸರ್ಪಗಳ ವಿನಾಶ : ತಕ್ಷಕನು ಇಂದ್ರನನ್ನು ಆಶ್ರಯಿಸಿದುದು : ವಾಸುಕಿಯು ತನ್ನ ತಂಗಿಗೆ ಆಸ್ತೀಕನನ್ನು ಯಾಗಪ್ರತಿಬಂಧಕ್ಕಾಗಿ ಕಳುಹಿಸಿಕೊಡುವಂತೆ ಹೇಳಿದುದು

ಶೌನಕರು ಸೌತಿಗಳನ್ನು ಪ್ರಶ್ನಿಸುತ್ತಾರೆ :

"ಸೂತಪುತ್ರನೇ! ಧೀಮಂತನಾದ ಪಾಂಡವೇಯನ ಸರ್ಪಯಾಗ ದಲ್ಲಿ ಭಾಗವಹಿಸಿದ್ದ ಋತ್ವಿಜರು ಯಾರೆಂಬುದನ್ನು ನಿನ್ನಿಂದ ಕೇಳಿ ತಿಳಿದು ಕೊಳ್ಳಬೇಕೆಂದಿರುತ್ತೇವೆ. ಸರ್ಪಗಳಿಗೆ ವಿಷಾದಜನಕವಾದ, ಅತ್ಯಂತಭಯಾ ವಹವಾದ, ಸುದಾರುಣವಾದ ಆ ಮಹಾಯಜ್ಞದಲ್ಲಿದ್ದ ಸದಸ್ಯರ ನಾಮ ಧೇಯಗಳನ್ನು ಹೇಳು. ಎಲ್ಲ ವಿಷಯಗಳನ್ನೂ ನೀನು ವಿಶದವಾಗಿಯೇ ಹೇಳಬೇಕು. ಸರ್ಪಯಾಗದ ವಿಧಿಯನ್ನು ಅಥವಾ ಪ್ರಯೋಗವನ್ನು ತಿಳಿದ ಯಾವ-ಯಾವ ಮಹರ್ಷಿಗಳು ಆ ಯಜ್ಞದಲ್ಲಿ ಭಾಗವಹಿಸಿದ್ದರೆಂಬುದನ್ನೂ ಹೇಳು."

"ಶೌನಕರೇ! ತಮ್ಮ ಆಶಯದಂತೆ ಆ ಯಜ್ಞದಲ್ಲಿ ಭಾಗವಹಿಸಿದ್ದ, ಸರ್ಪಯಾಗದ ಪ್ರಯೋಗವನ್ನು ತಿಳಿದಿದ್ದ ಋತ್ವಿಜರು ಮತ್ತು ಅಲ್ಲಿದ್ದ ಸದಸ್ಯರು–ಇವರುಗಳೆಲ್ಲರ ನಾಮಧೇಯಗಳನ್ನೂ ಹೇಳುತ್ತೇನೆ. ತಮಗೆ ಕೇಳಲು ಎಷ್ಟು ಆಸಕ್ತಿಯಿರುವುದೋ ನನಗೆ ಹೇಳಲೂ ಅಷ್ಟೇ ಆಸಕ್ತಿಯಿದೆ. ಚಂಡಭಾರ್ಗವನೆಂಬ ಬ್ರಾಹ್ಮಣನು ಆ ಮಹಾಯಜ್ಞದಲ್ಲಿ ಹೋತೃವಾಗಿದ್ದನು. ಅವನು ಚ್ಯವನಮಹರ್ಷಿಯ ವಂಶದಲ್ಲಿ ಹುಟ್ಟಿದವನು. ವೇದ-ವೇದಾಂಗಪಾರಂಗತನಾಗಿದ್ದನು. ವೃದ್ಧನಾದ ಮತ್ತು ವಿದ್ವಾಂಸನಾದ ಕೌತ್ಸಜೈಮಿನಿಯು ಸರ್ಪಯಾಗದಲ್ಲಿ ಉದ್ಗಾತೃವಾಗಿದ್ದನು. ಶಾರ್ಙ್ಗರವನು ಬ್ರಹ್ಮನಾಗಿಯೂ, ಪಿಂಗಲನು ಅಧ್ವರ್ಯುವಾಗಿಯೂ ಭಾಗವಹಿಸಿದ್ದರು. ಪುತ್ರರಿಂದಲೂ ಮತ್ತು ಶಿಷ್ಯರಿಂದಲೂ ಕೂಡಿದ್ದ ವ್ಯಾಸರೂ, ಉದ್ದಾಲಕ, ಪ್ರಮತಕ, ಶ್ವೇತಕೇತು, ಪಿಂಗಲ, ಅಸಿತ, ದೇವಲ, ನಾರದ, ಪರ್ವತ, ಆತ್ರೇಯ, ಕುಂಡ, ಜಠರ, ದ್ವಿಜಶ್ರೇಷ್ಠನಾದ ಕಾಲಘಟ, ವಾತ್ಸ್ಯ, ಜಪ-

ಸ್ವಾಧ್ಯಾಯಗಳಲ್ಲಿ ನಿರತನಾದ ಮತ್ತು ವೃದ್ಧನಾದ ಶ್ರುತಶ್ರವ, ಕೋಹಲ, ದೇವಶರ್ಮಾ, ಮೌದ್ಗಲ್ಯ ಮತ್ತು ಸಮಸೌರಭ–ಇವರೇ ಅಲ್ಲದೇ ಅನೇಕ ಬ್ರಾಹ್ಮಣೋತ್ತಮರೂ ಯಜ್ಞದ ಸದಸ್ಯರಾಗಿದ್ದರು.

ಶೌನಕರೇ! ಆ ಸರ್ಪಯಾಗದಲ್ಲಿ ವೇದ-ವೇದಾಂಗಪಾರಂಗತರಾದ ಋತ್ವಿಜರು 'ಸ್ವಾಹಾ' ಎಂದು ಹೇಳಿ ಆಹುತಿಯನ್ನು ಕೊಟ್ಟೊಡನೆಯೇ ಪ್ರಾಣಿಮಾತ್ರಕ್ಕೇ ಭಯವನ್ನುಂಟುಮಾಡುತ್ತಿದ್ದ ಘೋರಸರ್ಪಗಳು ಯಜ್ಞೇಶ್ವರನಲ್ಲಿ ತೊಪ-ತೊಪನೆ ಬೀಳುತ್ತಿದ್ದುವು. ಲಕ್ಷೋಪಲಕ್ಷ ಹಾವುಗಳು ಯಜ್ಞೇಶ್ವರನಲ್ಲಿ ಬಿದ್ದು, ಅವುಗಳ ಕೊಬ್ಬು ಮತ್ತು ಮೇದಸ್ಸು ನದಿಯ ರೂಪದಲ್ಲಿ ಹೊರಗೆ ಹರಿಯಿತು. ಹಾವುಗಳನ್ನು ಭಸ್ಮಮಾಡಿದುದರಿಂದ ಉಂಟಾದ ದುರ್ಗಂಧವು ಸರ್ವತ್ರ ವ್ಯಾಪ್ತವಾಯಿತು. ಆಕಾಶದಿಂದ ಅಗ್ನಿಗೆ ಬೀಳುತ್ತಿದ್ದ, ಒಂದೆರಡು ಕ್ಷಣಗಳು ಆಕಾಶದಲ್ಲಿಯೇ ಇರುತ್ತಿದ್ದ ಮತ್ತು ಅಗ್ನಿಗೆ ಬಿದ್ದು ಪ್ರಾಣತೊರೆಯುತ್ತಿದ್ದ ಹಾವುಗಳ ಫೂತ್ಕಾರಗಳು ಅನವರತವಾಗಿ ಕೇಳಿಬರುತ್ತಿದ್ದುವು.

ಜನಮೇಜಯನು ಸರ್ಪಯಾಗದ ದೀಕ್ಷೆಯನ್ನು ಕೈಗೊಂಡಿರುವನೆಂಬ ವಾರ್ತೆಯು ತಿಳಿದೊಡನೆಯೇ ತಕ್ಷಕನು ಇಂದ್ರನ ಅರಮನೆಗೆ ಹೋದನು. ಅಲ್ಲಿ ಇಂದ್ರನಿಗೆ ಎಲ್ಲ ವಿಷಯಗಳನ್ನೂ ತಿಳಿಸಿ ರಕ್ಷಣೆಗಾಗಿ ಅವನ ಮರೆ ಹೊಕ್ಕನು.

ತಕ್ಷಕನ ವಿಷಯದಲ್ಲಿ ದೇವೇಂದ್ರನು ಸುಪ್ರೀತನಾಗಿ ಅವನನ್ನು ಕುರಿತು–"ನಾಗರಾಜ! ನೀನು ನನ್ನ ಅರಮನೆಯಲ್ಲಿದ್ದುಬಿಟ್ಟರೆ ಜನಮೇಜಯನು ಮಾಡುತ್ತಿರುವ ಸರ್ಪಯಾಗದಿಂದ ನಿನಗೆ ಯಾವ ವಿಧವಾದ ತೊಂದರೆಯೂ ಉಂಟಾಗುವುದಿಲ್ಲ. ನಿನಗೋಸ್ಕರವೇ ನಾನು ಈ ಹಿಂದೆ ಬ್ರಹ್ಮನನ್ನು ಪ್ರಾರ್ಥನೆ ಮಾಡಿದ್ದೆನು. ಆದುದರಿಂದ ನಿನ್ನ ಆತಂಕವನ್ನು ದೂರ ಮಾಡು. ನಿರ್ಭೀತನಾಗಿ ನನ್ನ ಅರಮನೆಯಲ್ಲಿರು"–ಎಂದು ಹೇಳಿದನು.

ಇಂದ್ರನು ಹೇಳಿದ ಮಾತುಗಳು ತಕ್ಷಕನಿಗೆ ಅಮೃತಪ್ರಾಯವಾದುವು. ಆ ವಿಧವಾದ ಆಶ್ವಾಸನೆಯನ್ನು ಇಂದ್ರನಿಂದ ಪಡೆದ ತಕ್ಷಕನು ಸಂತೋಷಭರಿತನಾಗಿ ಇಂದ್ರನ ಅರಮನೆಯಲ್ಲಿಯೇ ಸುಖವಾಗಿದ್ದುಬಿಟ್ಟನು.

ಇತ್ತ ವಾಸುಕಿಗೆ ತನ್ನ ವಂಶೀಯರು ಕೋಟಿಸಂಖ್ಯೆಯಲ್ಲಿ ಜನಮೇಜಯನ ಸರ್ಪಯಾಗದಲ್ಲಿ ಅಸುನೀಗುತ್ತಿರುವುದನ್ನು ಕಂಡು ಬಹಳ ದುಃಖವಾಯಿತು. ಇನ್ನೂ ಸ್ವಲ್ಪಕಾಲ ಯಾಗವು ನಡೆದರೆ ಪ್ರಪಂಚದಲ್ಲಿ ಸರ್ಪವಂಶವೇ ನಿರ್ನಾಮವಾಗಿ ಹೋಗಬಹುದೆಂದು ವಾಸುಕಿಯು ಭಯಪಟ್ಟನು. ಮನಸ್ಸಿಗೆ ಬಹುವಾಗಿ ವೇದನೆಯುಂಟಾಯಿತು. ಹೃದಯವು ಕಂಪಿಸತೊಡಗಿತು. ಆ ಸ್ಥಿತಿಯಲ್ಲಿದ್ದ ವಾಸುಕಿಯು ತಂಗಿಯಾದ ಜರತ್ಕಾರುವಿನ ಬಳಿಗೆ ಹೋಗಿ ಹೇಳಿದನು :

"ತಂಗಿ! ನನ್ನ ಅಂಗಾಂಗಗಳೂ ಸುಡುತ್ತಿವೆ. ನನಗೆ ದಿಕ್ಕುಗಳೇ ಕಾಣುತ್ತಿಲ್ಲ. ನಾನು ಕ್ಷಣ-ಕ್ಷಣಕ್ಕೂ ಬಲಹೀನನಾಗುತ್ತಿದ್ದೇನೆ. ತಲೆಯು ಸುತ್ತುತ್ತಿದೆ. ಕಣ್ಣುಗಳೂ ಸುತ್ತುತ್ತಿವೆ. ಏನು ಮಾಡಲೂ ತೋರುತ್ತಿಲ್ಲ. ಹೃದಯವು ಸೀಳಿಹೋಗುತ್ತಿರುವಂತೆ ಭಾಸವಾಗುತ್ತಿದೆ. ನಾನೀಗಲೇ ಪ್ರಜ್ಞಾಹೀನನಾಗಿ ಜನಮೇಜಯನು ಮಾಡುತ್ತಿರುವ ಸರ್ಪಯಾಗದ ಅಗ್ನಿಕುಂಡದಲ್ಲಿ ಬಿದ್ದುಬಿಡುವೆನೋ ಎಂದು ಭ್ರಮಿಸುತ್ತಿದ್ದೇನೆ. ನಮ್ಮೆಲ್ಲರನ್ನೂ ಸಂಪೂರ್ಣವಾಗಿ ವಿನಾಶಮಾಡಲೆಂದೇ ಜನಮೇಜಯನು ಈ ಸತ್ರವನ್ನು ಆರಂಭಿಸಿದ್ದಾನೆ. ಜ್ಞಾತಿ-ಬಾಂಧವರ ಜೊತೆಯಲ್ಲಿ ನಾನೂ ಸಹ ಪ್ರೇತರಾಜನ ಅರಮನೆಗೆ ಹೋಗುವುದು ಅನಿವಾರ್ಯವೆಂದೇ ಭಾಸವಾಗುತ್ತಿದೆ. ತಂಗಿ! ಈಗ ನಮಗಿರುವ ಶರಣ್ಯಳು ನೀನೊಬ್ಬಳೇ. ನಾನು ನಿನ್ನನ್ನು ಚಿಕ್ಕಂದಿನಿಂದಲೂ ಅಕ್ಕರೆಯಿಂದ ಸಾಕಿ-ಸಲಹಿ ಅರಣ್ಯದಲ್ಲಿ ಅಲೆದಾಡುತ್ತಿದ್ದ ಜರತ್ಕಾರು ಮಹರ್ಷಿಯನ್ನು ಹುಡುಕಿ ಯಾವ ಕಾರಣದಿಂದ ಅವನಿಗೆ ನಿನ್ನನ್ನು ಕೊಟ್ಟು ಮದುವೆಮಾಡಿದೆನೋ ಅದರ ಫಲಿತಾಂಶವನ್ನೀಗ ನಾನು ಕಾಣಬೇಕಾಗಿದೆ. ಜನಮೇಜಯನ ಸರ್ಪಯಾಗವು ಆರಂಭವಾಗಿಬಿಟ್ಟಿದೆ. ಕೋಟ್ಯನುಕೋಟಿ ಸಂಖ್ಯೆಯಲ್ಲಿ ನಮ್ಮ ಜ್ಞಾತಿ-ಬಾಂಧವರು ವಿನಾಶಹೊಂದಿಬಿಟ್ಟಿದ್ದಾರೆ. ಅಳಿದುಳಿದಿರುವ ನಾವೂ ಸಹ ಯಜ್ಞೇಶ್ವರನಿಗೆ ಆಹುತಿಯಾಗಬೇಕಾದ ಸಂದರ್ಭವು ಇದೀಗ ಒದಗಿಬಂದುಬಿಟ್ಟಿದೆ. ಈಗ ನಮ್ಮನ್ನು ಸಂರಕ್ಷಿಸುವ ಸಾಮರ್ಥ್ಯವಿರುವವನೆಂದರೆ ನಿನ್ನ ಮಗನಾದ ಆಸ್ತೀಕನೊಬ್ಬನೇ. ಭುಜಂಗಮೇ! ಆಸ್ತೀಕನೇ ಈ ಸರ್ಪಯಾಗವನ್ನು ಪ್ರತಿರೋಧಿಸುತ್ತಾನೆಂದೂ ಅವನೊಬ್ಬನಿಗೇ ಅಂತಹ ಸಾಮರ್ಥ್ಯವಿರುವುದೆಂದೂ ಸಾಕ್ಷಾತ್

ಪಿತಾಮಹನೇ ಹೇಳಿದ್ದಾನೆ. ಆದುದರಿಂದ ಈ ಮಹಾಕಾರ್ಯವು ಮತ್ತು ಮಹೋಪಕಾರವು ನಿನ್ನ ಮಗನಿಂದಲೇ ಆಗಬೇಕಾಗಿದೆ. ಆದುದರಿಂದ ನೀನೀಗಲೇ ವೇದ-ವೇದಾಂಗಪಾರಂಗತನಾದ, ವೃದ್ಧಸಮ್ಮತನಾದ ಆಸ್ತೀಕನಿಗೆ ಭೃತ್ಯ-ಬಾಂಧವಸಮೇತನಾದ ಮಾತುಲನನ್ನು ಉದ್ಧರಿಸಬೇಕೆಂದು ಹೇಳು."

೫೩ನೆಯ ಅಧ್ಯಾಯವು ಮುಗಿಯಿತು.

೫೪ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ವಾಸುಕಿಗೆ ಆಸ್ತೀಕನ ಆಶ್ವಾಸನೆ : ಆಸ್ತೀಕನು ಸರ್ಪಯಜ್ಞಕ್ಕೆ ಹೋದುದು

ಸೌತಿಗಳು ಹೇಳುತ್ತಾರೆ :

**ತತ ಆಹೂಯ ಪುತ್ರಂ ಸ್ವಂ ಜರತ್ಕಾರುರ್ಭುಜಜ್ಗಮಾ ।**
**ವಾಸುಕೇರ್ನಾಗರಾಜಸ್ಯ ವಚನಾದಿದಮಬ್ರವೀತ್ ॥೧॥**

ಅಣ್ಣನ ಮಾತಿನಂತೆ ನಾಗಕನ್ಯೆಯು ತನ್ನ ಮಗನನ್ನು ಕರೆದು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಹೇಳಿದಳು :

"ಮಗು! ನಾನು ನಿನ್ನ ತಂದೆಗೆ ನಮ್ಮಣ್ಣನಿಂದ ಭಿಕ್ಷಾರೂಪವಾಗಿ ಕೊಡಲ್ಪಟ್ಟೆನು. ಅದಕ್ಕೊಂದು ಕಾರಣವಿದ್ದಿತು. ನಮ್ಮಣ್ಣನು ಆಸಕ್ತಿಯಿಂದ ನಿರೀಕ್ಷಿಸುತ್ತಿದ್ದ ಕಾಲವೀಗ ಸನ್ನಿಹಿತವಾಗಿದೆಯಪ್ಪಾ!"

"ಅಮ್ಮ! ನಿನ್ನನ್ನು ನಮ್ಮಪ್ಪನಿಗೆ ಮದುವೆಮಾಡಿಕೊಡಲು ವಿಶೇಷ ಕಾರಣವೂ ಇದ್ದಿತೇನು? ಅದೆಲ್ಲವನ್ನೂ ವಿಶದವಾಗಿ ಹೇಳಮ್ಮಾ! ಅನಂತರವೇ ನಾನು ನೀನು ಹೇಳಿದಂತೆ ಮಾಡುವೆನು."

ಶೌನಕರೇ! ನಾಗರಾಜನ ತಂಗಿಯಾದ, ಶಾಂತಚಿತ್ತಳಾಗಿದ್ದ ಜರತ್ಕಾರುವು ತನ್ನ ಮಗನಿಗೆ ಹಿಂದಿನ ಎಲ್ಲ ಕಥೆಯನ್ನೂ ಹೇಳತೊಡಗಿದಳು.

"ಮಗು! ನಮ್ಮೆಲ್ಲರಿಗೂ ( ಸರ್ಪಗಳೆಲ್ಲಕ್ಕೂ ) ತಾಯಿ ಕದ್ರು ಎಂಬುವಳು. ಅವಳೊಮ್ಮೆ ತನ್ನ ಮಕ್ಕಳಿಗೆ ಶಾಪಕೊಟ್ಟುಬಿಟ್ಟಳು.

ಜನಮೇಜಯನ ಸರ್ಪಯಾಗದಲ್ಲಿ ಭಸ್ಮೀಭೂತರಾಗುವಂತೆ ಶಪಿಸಿಬಿಟ್ಟಳು.

ಅವಳೊಮ್ಮೆ ತನ್ನ ಸಪತ್ನಿಯಾದ ವಿನತೆಯೊಡನೆ ಉಚ್ಚೈಃಶ್ರವಸ್ಸೆಂಬ

ಕುದುರೆಯ ಬಾಲವು ಕಪ್ಪಾಗಿರುವುದೆಂದು ಪಂದ್ಯಕಟ್ಟಿದಳು. ಗೆಲ್ಲದಿದ್ದರೆ ತಾನು ವಿನತೆಯ ದಾಸಿಯಾಗಬೇಕಾಗಿದ್ದಿತು. ಕುದುರೆಯ ಬಾಲವು ಬಿಳು ಪಾಗಿರುವುದೆಂಬ ವಿಷಯವು ಕದ್ರುವಿಗೂ ತಿಳಿದಿತ್ತು. ಮೋಸದಿಂದಲಾದರೂ ತಾನು ಪಂದ್ಯವನ್ನು ಗೆದ್ದು ವಿನತೆಯನ್ನು ದಾಸಿಯನ್ನಾಗಿ ಮಾಡಿ ಕೊಳ್ಳಬೇಕೆಂಬುದು ಅವಳ ಆಶಯವಾಗಿತ್ತು. ತನ್ನ ಮಕ್ಕಳಿಗೆ ಹೇಳಿದಳು : "ಮಕ್ಕಳಿರಾ! ನಾನು ವಿನತೆಯೊಡನೆ ಕುದುರೆಯ ಬಾಲವು ಕಪ್ಪಾಗಿದೆಯೆಂದು ಪಂದ್ಯವನ್ನು ಕಟ್ಟಿಬಿಟ್ಟಿದ್ದೇನೆ. ಅದನ್ನೀಗ ನೀವು ಕಪ್ಪುಬಣ್ಣವಾಗಿ ಪರಿವರ್ತಿಸಬೇಕಾಗಿದೆ."

ತಾಯಿಯು ಹೇಳಿದುದು ಧರ್ಮಸಮ್ಮತವಲ್ಲವೆಂದು ಭಾವಿಸಿ, ಮೊದಲು ಸರ್ಪಗಳು ತಾಯಿಯ ಆಜ್ಞೆಯನ್ನು ನಿರಾಕರಿಸಿದುವು. ಅದರಿಂದ ನಿಮ್ಮಜ್ಜಿಗೆ ಮಹಾಕೋಪವೇ ಬಂದು ಶಪಿಸಿಯೇ ಬಿಟ್ಟಳು.

"ಜನಮೇಜಯನು ಮಾಡಲಿರುವ ಸರ್ಪಯಾಗದಲ್ಲಿ ವಾಯುಸಾರಥಿ ಯಾದ ಅಗ್ನಿಯು ನಿಮ್ಮೆಲ್ಲರನ್ನೂ ಸುಟ್ಟುಹಾಕಲಿ. ಅವನ ಯಾಗದಲ್ಲಿ ಅಸು ವನ್ನು ನೀಗಿದ ನೀವು ಪ್ರೇತಲೋಕಕ್ಕೆ ಹೊರಟುಹೋಗಿರಿ."

ಬ್ರಹ್ಮಲೋಕದಲ್ಲಿ ಲೋಕಪಿತಾಮಹನಾದ ಬ್ರಹ್ಮನೂ ಕದ್ರುವು ಮಕ್ಕಳಿಗೆ ಶಾಪವಿತ್ತೊಡನೆಯೇ–**'ತಥಾಸ್ತು'** 'ಹಾಗೆಯೇ ಆಗಲಿ'–ಎಂದು ಹೇಳಿ ಅವಳಿತ್ತ ಶಾಪವನ್ನು ದೃಢೀಕರಿಸಿದನು. ನಮ್ಮಣ್ಣನಾದ ವಾಸುಕಿಗೆ ಕೂಡ ಈ ವಿಷಯವು ತಿಳಿದುಹೋಗಿ ಅವನ ಎದೆಯು ಕಂಪಿಸಿತು. ಅಮೃತ ಮಂಥನವಾದ ಕೂಡಲೇ ನಮ್ಮಣ್ಣನು ದೇವತೆಗಳ ಮರೆಹೊಕ್ಕನು. ಆ ಸಮಯದಲ್ಲಿ ದೇವತೆಗಳೆಲ್ಲರೂ ಅಮೃತದ ಪ್ರಾಪ್ತಿಯಿಂದ ಆನಂದಭರಿತರಾಗಿದ್ದರು. ಸಮುದ್ರವನ್ನು ಕಡೆಯುವಾಗ ವಾಸುಕಿಯು ವಹಿಸಿದ್ದ ಪಾತ್ರಕ್ಕಾಗಿ ದೇವತೆಗಳು ಕೃತಜ್ಞರಾಗಿದ್ದರು. ಆ ಕಾರಣದಿಂದಲೇ ಅವರು ತಮ್ಮನ್ನು ಮರೆಹೊಕ್ಕ ವಾಸುಕಿಯನ್ನು ಕರೆದುಕೊಂಡು ಪಿತಾಮಹನ ಬಳಿಗೆ ತೆರಳಿದರು. ವಾಸುಕಿಯೊಡನೆ ಅವರೆಲ್ಲರೂ ಪಿತಾಮಹನನ್ನು ನಾನಾಪ್ರಕಾರವಾಗಿ ಸ್ತೋತ್ರಮಾಡಿ ಮಾತೃಶಾಪವು ವಾಸುಕಿಗೂ ಮತ್ತು ಅವನ ಬಾಂಧವರಿಗೂ ತಟ್ಟದ ರೀತಿಯಲ್ಲಿ ಅಭಯಪ್ರದಾನಮಾಡಬೇಕೆಂದು ಪಿತಾಮಹನನ್ನು ಕೇಳಿಕೊಂಡರು :

"ದೇವದೇವನೇ! ಈ ವಾಸುಕಿಯು ಮಾತೃಶಾಪದಿಂದ ತನ್ನ ಜ್ಞಾತಿ-ಬಾಂಧವರ ವಿನಾಶವಾಗಿಬಿಡುವುದೆಂದು ಬಹಳ ದುಃಖಿತನಾಗಿದ್ದಾನೆ. ಮಾತೃ ಶಾಪವು ಇವನಿಗೂ ಇವನ ಬಾಂಧವರಿಗೂ ತಟ್ಟದಂತೆ ಮಾಡಲು ಯಾವುದಾದರೂ ಉಪಾಯವಿರುವುದೇ? ದಯಮಾಡಿ ಹೇಳು."

"ಮಗು! ಅವರೆಲ್ಲರೂ ಅಂಗಲಾಚಿ ಬ್ರಹ್ಮನನ್ನು ಬೇಡಿಕೊಂಡನಂತರ ಪ್ರಜಾಪತಿಯು ನಮ್ಮಣ್ಣನನ್ನೂ ಮತ್ತು ದೇವತೆಗಳನ್ನೂ ಕುರಿತು ಹೀಗೆ ಹೇಳಿದನಂತೆ :

**ಜರತ್ಕಾರುರ್ಜರತ್ಕಾರುಂ ಯಾಂ ಭಾರ್ಯಾಂ ಸಮವಾಪ್ಸ್ಯತಿ ।**
**ತತ್ರ ಜಾತೋ ದ್ವಿಜಃ ಶಾಪಾನ್ಮೋಕ್ಷಯಿಷ್ಯತಿ ಪನ್ನಗಾನ್ ॥೧೩॥**

"ಜರತ್ಕಾರು–ಎಂಬ ಮಹರ್ಷಿಯು ಜರತ್ಕಾರು–ಎಂಬ ಕನ್ಯೆಯನ್ನು ಭಾರ್ಯೆಯನ್ನಾಗಿ ಮಾಡಿಕೊಳ್ಳುತ್ತಾನೆ. ಅವರಿಬ್ಬರ ಸಮಾಗಮದಿಂದಾಗಿ ಒಬ್ಬ ಬ್ರಾಹ್ಮಣನು ಹುಟ್ಟುತ್ತಾನೆ. ಅವನು ಸರ್ಪಗಳನ್ನು ಮಾತೃಶಾಪದಿಂದ ವಿಮೋಚನೆಗೊಳಿಸುತ್ತಾನೆ."

ಮಗು, ಆಸ್ತೀಕ! ಬ್ರಹ್ಮನು ಹೇಳಿದ ಆ ಮಾತನ್ನು ಕೇಳಿ ನಮ್ಮಣ್ಣನು ನಿನ್ನ ತಂದೆಯನ್ನು ಹುಡುಕಿಸಿ ನನ್ನನ್ನು ಅವನಿಗೆ ಮದುವೆಮಾಡಿಕೊಟ್ಟನು. ಮಹರ್ಷಿಯ ಅನುಗ್ರಹದಿಂದಾಗಿ ನೀನು ನನ್ನಲ್ಲಿ ಜನ್ಮತಾಳಿರುವೆ. ನಮ್ಮ ಅಣ್ಣನು ಬಹಳ ಕಾತರದಿಂದ ನಿರೀಕ್ಷಿಸುತ್ತಿದ್ದ ಕಾಲವೀಗ ಸನ್ನಿಹಿತವಾಗಿದೆ. ಸರ್ಪವಿನಾಶದ ಭಯದಿಂದ ನಮ್ಮನ್ನೀಗ ಸಂರಕ್ಷಿಸಲು ನೀನು ಸಮರ್ಥನಾಗಿರುವೆ. ಮಂತ್ರದಿಂದ ಆಕೃಷ್ಟನಾಗಿ ಯಜ್ಞೇಶ್ವರನಲ್ಲಿ ಬೀಳಲಿರುವ ನಮ್ಮಣ್ಣನನ್ನು ಸಂರಕ್ಷಿಸು. ನಮ್ಮಣ್ಣನು ಇದೇ ಉದ್ದೇಶದಿಂದ ಪ್ರಯತ್ನಪೂರ್ವಕವಾಗಿ ನಿಮ್ಮ ತಂದೆಗೆ ನನ್ನನ್ನು ಮದುವೆಮಾಡಿಕೊಟ್ಟ ಶ್ರಮವು ವ್ಯರ್ಥವಾಗಬಾರದು. ಮಗು! ಅವರೆಲ್ಲರನ್ನೂ ನೀನಿಂದು ಸಂರಕ್ಷಿಸಬೇಕು. ನಿನ್ನದೂ ಇದೇ ಅಭಿಪ್ರಾಯವಾಗಿರುವುದಲ್ಲವೇ?"

ಶೌನಕರೇ! ತಾಯಿಯ ಆ ಮಾತನ್ನು ಕೇಳಿ ಆಸ್ತೀಕನು–"ಹಾಗೆಯೇ ಆಗಲಮ್ಮ! ನಾನವರನ್ನು ಮಾತೃಶಾಪದಿಂದ ವಿಮೋಚನೆಮಾಡುತ್ತೇನೆ"–

ಎಂದು ಆಶ್ವಾಸನೆಯನ್ನಿತ್ತು ಮಾವನಾದ ವಾಸುಕಿಯ ಬಳಿಗೆ ಹೋಗಿ ಹೇಳಿದನು :

"ಪನ್ನಗೋತ್ತಮನೇ! ಮಹಾಸತ್ವನೇ! ನಾನು ನಿಮ್ಮನ್ನು ಮಾತೃಶಾಪದಿಂದ ವಿಮೋಚನೆಗೊಳಿಸುತ್ತೇನೆ. ಸತ್ಯದ ಮೇಲೆ ಆಣೆಯಿಟ್ಟು ಈ ಮಾತನ್ನು ಹೇಳುತ್ತಿದ್ದೇನೆ. ಇನ್ನು ಮೇಲಾದರೂ ನೀನು ನಿನ್ನ ಮನಸ್ಸಿನ ಉದ್ವಿಗ್ನತೆಯನ್ನು ಪರಿತ್ಯಜಿಸಿ ಶಾಂತಮನಸ್ಕನಾಗು. ನಿಮ್ಮೆಲ್ಲರಿಗೂ ಶ್ರೇಯಸ್ಸುಂಟಾಗುವಂತೆ ನಾನು ಸಂಪೂರ್ಣವಾಗಿ ಪ್ರಯತ್ನಿಸುತ್ತೇನೆ.

ನಾನು ಇದುವರೆಗೂ ಯಾವ ಕಾರಣದಿಂದಲೂ ಸುಳ್ಳನ್ನಾಡಿರುವುದಿಲ್ಲ. ಆದುದರಿಂದ ಈ ಸಂದರ್ಭದಲ್ಲಿ ನಾನು ಖಂಡಿತವಾಗಿಯೂ ಸುಳ್ಳನ್ನಾಡೆನು. ಯಜ್ಞದೀಕ್ಷೆಯನ್ನು ಕೈಗೊಂಡು ಕುಳಿತಿರುವ ಜನಮೇಜಯನ ಬಳಿಗೆ ನಾನೀಗಲೇ ಹೋಗಿ ಮಂಗಳಯುಕ್ತವಾದ ಸುಮಧುರವಾದ ಮಾತುಗಳಿಂದ ಅವನನ್ನು ಸಂತೋಷಗೊಳಿಸುತ್ತೇನೆ. ಅವನು ಆ ಯಜ್ಞವನ್ನು ಒಡನೆಯೇ ನಿಲ್ಲಿಸುವಂತೆ ಮಾಡುತ್ತೇನೆ. ನಾಗೇಂದ್ರ! ಮಹಾಮತೇ! ನಾನು ಹೇಳುವುದರಲ್ಲಿ ವಿಶ್ವಾಸವನ್ನಿಡು. 'ಆಸ್ತೀಕನು ಸರ್ಪಗಳ ಸಂರಕ್ಷಕನಾಗುತ್ತಾನೆ' ಎಂಬ ನಿನ್ನ ದೃಢವಿಶ್ವಾಸವು ಖಂಡಿತವಾಗಿಯೂ ಸುಳ್ಳಾಗದು, ಮಾತುಲ!"

"ಆಸ್ತೀಕ! ಬ್ರಹ್ಮದಂಡದಿಂದ* ಪೀಡಿತನಾಗಿರುವ ನನ್ನ ತಲೆಯು ಸುತ್ತುತ್ತಿದೆ. ಹೃದಯವು ಸೀಳಿಹೋಗುತ್ತಿದೆ. ದಿಕ್ಕುಗಳೇ ಕಾಣುತ್ತಿಲ್ಲ. ಅಷ್ಟು ಅಸ್ವಸ್ಥನಾಗಿದ್ದೇನೆ."

"ದುಃಖಿಸಬೇಡ, ಮಾವಯ್ಯ! ನೀನು ಸ್ವಲ್ಪವಾದರೂ ಸಂತಾಪಪಡುವ ಕಾರಣವಿಲ್ಲ. ಜನಮೇಜಯನ ಯಜ್ಞಾಗ್ನಿಯಿಂದ ಸಮುತ್ಪನ್ನವಾಗಿರುವ ಈ ನಿನ್ನ ಭಯವನ್ನು ಖಂಡಿತವಾಗಿಯೂ ಹೋಗಲಾಡಿಸುತ್ತೇನೆ. ಮಾತುಲ! ಬ್ರಹ್ಮದಂಡವು ಕಾಲಾಗ್ನಿಯಂತೆ ಅಮಿತವಾದ ತೇಜಸ್ಸಿನಿಂದ ಕೂಡಿ ಮಹಾಘೋರವಾಗಿರುತ್ತದೆ. ಆದರಿಂದ ನಿಮ್ಮನ್ನು ನಾನು ವಿಮೋಚನೆ ಮಾಡುತ್ತೇನೆ. ನೀನು ಈ ವಿಷಯದಲ್ಲಿ ಸಂಶಯಿಸುವ ಅಥವಾ ಭಯಗೊಳ್ಳುವ ಕಾರಣವೂ ಇಲ್ಲ."

---

* ಬ್ರಹ್ಮದಂಡಃ = ಬ್ರಾಹ್ಮಣರು ವಿಧಿಸಿರುವ ಶಿಕ್ಷೆ, ಸರ್ಪಯಜ್ಞ.

ಆಸ್ತೀಕನು ಹೀಗೆ ಹೇಳಿ ನಾಗರಾಜನನ್ನು ಪರಿ-ಪರಿಯ ಸಾಂತ್ವವಚನ ಗಳಿಂದ ಸಂತೈಸಿ, ವಾಸುಕಿಯ ಮನಸ್ಸಿನಲ್ಲಿ ಅನೇಕವರ್ಷಗಳಿಂದ ಬೀಡು ಬಿಟ್ಟಿದ್ದ ಚಿಂತೆಯನ್ನು ಬಹುಪ್ರಯಾಸದಿಂದ ದೂರಮಾಡಿ, ಶಾಪವನ್ನು ದೂರಮಾಡುವ ಸಂಪೂರ್ಣಭಾರವನ್ನೂ ತಾನೇ ವಹಿಸಿಕೊಂಡು, ಸಕಲ ವಿಧವಾದ ಸಂಭಾರಗಳಿಂದಲೂ ಕೂಡಿ ವಿಧ್ಯುಕ್ತವಾಗಿ ನಡೆಯುತ್ತಿದ್ದ ಜನಮೇಜಯನ ಸರ್ಪಯಾಗಕ್ಕೆ ಅವಸರದಿಂದ ಧಾವಿಸಿದನು. ಅಲ್ಲಿಗೆ ಹೋಗುತ್ತಲೇ ಆಸ್ತೀಕನು ಸೂರ್ಯಾಗ್ನಿಸಮತೇಜಸ್ಕರಾದ ಅನೇಕಾನೇಕ ಸದಸ್ಯರುಗಳಿಂದ ತುಂಬಿಹೋಗಿದ್ದ ಅಸದೃಶವಾದ ಯಜ್ಞಮಂಟಪವನ್ನು ನೋಡಿದನು.

ಆದರೆ ಆಸ್ತೀಕನು ಯಜ್ಞಮಂಟಪದೊಳಕ್ಕೆ ಹೋಗಲು ದ್ವಾರಪಾಲಕರು ಬಿಡಲಿಲ್ಲ. ಅಪರಿಚಿತರಾದ ಯಾರನ್ನೂ ಯಜ್ಞಮಂಟಪದೊಳಕ್ಕೆ ತನ್ನ ಅನುಜ್ಞೆಯಿಲ್ಲದೇ ಬಿಡಲಾಗದೆಂದು ರಾಜನು ಕಟ್ಟಾಜ್ಞೆಮಾಡಿದ್ದನು. ಆಗ ಆಸ್ತೀಕನು ಅಲ್ಲಿ ನಡೆಯುತ್ತಿದ್ದ ಸರ್ಪಯಾಗವನ್ನೇ ಉಚ್ಚಧ್ವನಿಯಿಂದ ಸ್ತೋತ್ರಮಾಡಲು ಉಪಕ್ರಮಿಸಿದನು.

ಬ್ರಾಹ್ಮಣಶ್ರೇಷ್ಠನಾದ, ಪುಣ್ಯಾತ್ಮರಲ್ಲಿ ವರಿಷ್ಠನಾದ ಆಸ್ತೀಕನು ಅತಿ ಶ್ರೇಷ್ಠವಾದ ಯಜ್ಞಶಾಲೆಯ ಮಹಾದ್ವಾರದ ಸಮೀಪದಲ್ಲಿ ನಿಂತು ಯಜ್ಞವನ್ನು ಮಾತ್ರವೇ ಅಲ್ಲ ; ಯಜ್ಞ, ಅನಂತಕೀರ್ತಿಮಂತನಾದ ಜನಮೇಜಯರಾಜ, ಯಜ್ಞದ ಋತ್ವಿಜರು, ಸದಸ್ಯರು ಮತ್ತು ಅಗ್ನಿ–ಎಲ್ಲರನ್ನೂ ಉಚ್ಚಧ್ವನಿಯಿಂದ ಸ್ತೋತ್ರಮಾಡಲು ಪ್ರಾರಂಭಿಸಿದನು."

ಽಳನೆಯ ಅಧ್ಯಾಯವು ಮುಗಿಯಿತು.

ಽಽನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಆಸ್ತೀಕನು ಯಜ್ಞದ ಯಜಮಾನನನ್ನೂ, ಯಜ್ಞವನ್ನೂ, ಋತ್ವಿಜರನ್ನೂ, ಸದಸ್ಯರನ್ನೂ ಮತ್ತು ಅಗ್ನಿದೇವನನ್ನೂ ಸ್ತುತಿಸಿದುದು

ಆಸ್ತೀಕನು ಯಜ್ಞಮಂಟಪದ ಮಹಾದ್ವಾರದಲ್ಲಿ ನಿಂತು, ನಡೆಯು ತ್ತಿದ್ದ ಮಹಾಸರ್ಪಯಾಗದ ಪ್ರಶಂಸೆಯನ್ನು ಮಾಡಲುಪಕ್ರಮಿಸಿದನು :

**ಸೋಮಸ್ಯ ಯಜ್ಞೋ ವರುಣಸ್ಯ ಯಜ್ಞಃ**
**ಪ್ರಜಾಪತೇರ್ಯಜ್ಞ ಆಸೀತ್ಪ್ರಯಾಗೇ ।**
**ತಥಾ ಯಜ್ಞೋಽಯಂ ತವ ಭಾರತಾಗ್ರ್ಯ**
**ಪಾರಿಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥೧॥**

"ಭರತವಂಶಪ್ರದೀಪನೇ! ಜನಮೇಜಯ! ನಾನು ಅನೇಕಯಜ್ಞಗಳನ್ನು ಸಂದರ್ಶಿಸಿದ್ದೇನೆ ಮತ್ತು ಅನೇಕ ಯಜ್ಞಗಳಲ್ಲಿ ಭಾಗವಹಿಸಿದ್ದೇನೆ. ಕೆಲವು ಮಹಾಯಜ್ಞಗ್ಗಳು ಹೇಗೆ ನಡೆದುವೆಂಬುದನ್ನೂ ಬ್ರಾಹ್ಮಣಮುಖ್ಯರಿಂದ ಕೇಳಿ ತಿಳಿದಿದ್ದೇನೆ. ನೀನು ಮಾಡುತ್ತಿರುವ ಈ ಮಹಾಯಜ್ಞವೂ ಆ ಯಜ್ಞಗ್ಗಳಿಗೆ ಸಮಾನವಾಗಿದೆ. ಸೋಮನು ಮಾಡಿದ ಯಜ್ಞ, ವರುಣನು ಮಾಡಿದ ಯಜ್ಞ, ಪ್ರಜಾಪತಿಯು ಪ್ರಯಾಗದಲ್ಲಿ ಮಾಡಿದ ಯಜ್ಞ–ಇವುಗಳಿಗೆ ಸಮಾನವಾಗಿ ನಿನ್ನ ಯಜ್ಞವಿಂದು ನಡೆಯುತ್ತಿದೆ. ನಮಗೆ ಪ್ರಿಯರಾದವರೆಲ್ಲರಿಗೂ ಮಂಗಳವುಂಟಾಗಲಿ.

**ಶಕ್ರಸ್ಯ ಯಜ್ಞಃ ಶತಸಂಖ್ಯ ಉಕ್ತ-**
**ಸ್ತಥಾ ಪೂರೋಸ್ತುಲ್ಯಸಂಖ್ಯಂ ಶತಂ ವೈ ।**
**ತಥಾ ಯಜ್ಞೋಽಯಂ ತವ ಭಾರತಾಗ್ರ್ಯ**
**ಪಾರಿಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥೨॥**

ಭರತಕುಲಾವತಂಸ! ಇಂದ್ರನು ನೂರು ಯಜ್ಞಗ್ಗಳನ್ನು ಮಾಡಿದನೆಂದು ಹೇಳುತ್ತಾರೆ. ಆದುದರಿಂದಲೇ ಅವನನ್ನು 'ಶತಕ್ರತು' ಎಂದೂ ಕರೆಯುತ್ತಾರೆ. ಇಂದ್ರನಂತೆಯೇ ಪೂರುವೂ ನೂರು ಯಾಗಗಳನ್ನು ಮಾಡಿದ್ದನು. ಇಂದ್ರನು ಮಾಡಿದ ಮತ್ತು ಪೂರುವು ಮಾಡಿದ ನೂರು-ನೂರು ಯಾಗಗಳಿಗೆ ನೀನಿಂದು ಮಾಡುತ್ತಿರುವ ಸರ್ಪಯಾಗವು ಸದೃಶವಾಗಿದೆ. ನಮಗೆ ಪ್ರಿಯರಾದವರೆಲ್ಲರಿಗೂ ಮಂಗಳವಾಗಲಿ.

**ಯಮಸ್ಯ ಯಜ್ಞೋ ಹರಿಮೇಧಸಶ್ಚ**
**ಯಥಾ ಯಜ್ಞೋ ರನ್ತಿದೇವಸ್ಯ ರಾಜ್ಞಃ ।**
**ತಥಾ ಯಜ್ಞೋಽಯಂ ತವ ಭಾರತಾಗ್ರ್ಯ**
**ಪಾರಿಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥೩॥**

ಭಾರತಾಗ್ರ್ಯನೇ! ಯಮನು ಮಾಡಿದ ಯಜ್ಞಕ್ಕೆ, ಹರಿಮೇಧನು ಮಾಡಿದ ಯಜ್ಞಕ್ಕೆ ಮತ್ತು ರಂತಿದೇವನು ಮಾಡಿದ ಯಜ್ಞಕ್ಕೆ ಈ ನಿನ್ನ ಯಜ್ಞವು ಸಮಾನವಾಗಿದೆ. ನೀನು ಮಾಡುತ್ತಿರುವ ಸರ್ಪಯಾಗವು ಯಾವ ವಿಧದಲ್ಲಿಯೂ ಅವರು ಮಾಡಿದ ಯಜ್ಞಗಳಿಗೆ ಕಡಿಮೆಯಿಲ್ಲ. ನಮಗೆ ಪ್ರಿಯರಾದವರೆಲ್ಲರಿಗೂ ಮಂಗಳವುಂಟಾಗಲಿ.

**ಗಯಸ್ಯ ಯಜ್ಞಃ ಶಶಬಿನ್ದೋಶ್ಚ ರಾಜ್ಞೋ**
**ಯಜ್ಞಸ್ತಥಾ ವೈಶ್ರವಣಸ್ಯ ರಾಜ್ಞಃ ।**
**ತಥಾ ಯಜ್ಞೋಽಯಂ ತವ ಭಾರತಾಗ್ರ್ಯ**
**ಪಾರಿಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥೪॥**

ಪಾಂಡವೇಯನೇ! ಗಯನು ಮಾಡಿದ ಯಜ್ಞ, ಶಶಬಿಂದುವು ಮಾಡಿದ ಯಜ್ಞ ಮತ್ತು ಕುಬೇರನು ಮಾಡಿದ ಯಜ್ಞ-ಇವುಗಳಿಗೂ ನಿನ್ನ ಈ ಸರ್ಪಯಾಗವು ಸದೃಶವಾಗಿದೆ. ನಮಗೆ ಪ್ರಿಯರಾದವರೆಲ್ಲರಿಗೂ ಮಂಗಳವುಂಟಾಗಲಿ.

**ನೃಗಸ್ಯ ಯಜ್ಞಸ್ತ್ವಜಮೀಢಸ್ಯ ಚಾಸೀ-**
**ದ್ಯಥಾ ಯಜ್ಞೋ ದಾಶರಥೇಶ್ಚ ರಾಜ್ಞಃ ।**
**ತಥಾ ಯಜ್ಞೋಽಯಂ ತವ ಭಾರತಾಗ್ರ್ಯ**
**ಪಾರಿಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥೫॥**

ಪಾರಿಕ್ಷಿತನೇ! ನೃಗನು ಮಾಡಿದ ಯಜ್ಞ, ಅಜಮೀಢನು ಮಾಡಿದ ಯಜ್ಞ ಮತ್ತು ದಶರಥನ ಮಗನಾದ ಶ್ರೀರಾಮಚಂದ್ರನು ಮಾಡಿದ ಯಜ್ಞ-ಇವುಗಳಿಗೂ ಈ ನಿನ್ನ ಯಜ್ಞವು ಅನುರೂಪವಾಗಿದೆ. ನಮಗೆ ಪ್ರಿಯರಾದವರೆಲ್ಲರಿಗೂ ಮಂಗಳವುಂಟಾಗಲಿ.

**ಯಜ್ಞಃ ಶ್ರುತೋ ದಿವಿ ದೇವಸ್ಯ ಸೂನೋ-**
**ರ್ಯುಧಿಷ್ಠಿರಸ್ಯಾಜಮೀಢಸ್ಯ ರಾಜ್ಞಃ ।**
**ತಥಾ ಯಜ್ಞೋಽಯಂ ತವ ಭಾರತಾಗ್ರ್ಯ**
**ಪಾರಿಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥೬॥**

ಜನಮೇಜಯ! ಅಜಮೀಢವಂಶೀಯನಾದ, ಯಮನ ಪುತ್ರನಾದ ಯುಧಿಷ್ಠಿರನು ಮಾಡಿದ ಯಜ್ಞವು ದೇವಲೋಕದಲ್ಲಿಯೂ ಪ್ರಸಿದ್ಧವಾಗಿದ್ದಿತು. ದೇವತೆಗಳೂ ಸಹ ಅವನು ಮಾಡಿದ ಯಜ್ಞವನ್ನು ಬಹುವಾಗಿ ಶ್ಲಾಘಿಸುತ್ತಾರೆ. ಅಂತೆಯೇ ನೀನು ಮಾಡುತ್ತಿರುವ ಈ ಯಾಗವೂ ಯುಧಿಷ್ಠಿರನು ಮಾಡಿದ ಯಜ್ಞಕ್ಕೆ ಸದೃಶವಾಗಿದ್ದು ದೇವಲೋಕದಲ್ಲಿಯೂ ವಿಖ್ಯಾತವಾಗಿದೆ. ನಮಗೆ ಪ್ರಿಯರಾದವರೆಲ್ಲರಿಗೂ ಮಂಗಳವುಂಟಾಗಲಿ.

**ಕೃಷ್ಣಸ್ಯ ಯಜ್ಞಃ ಸತ್ಯವತ್ಯಾಃ ಸುತಸ್ಯ**
**ಸ್ವಯಂ ಚ ಕರ್ಮ ಪ್ರಚಕಾರ ಯತ್ರ ।**
**ತಥಾ ಯಜ್ಞೋಽಯಂ ತವ ಭಾರತಾಗ್ರ್ಯ**
**ಪಾರಿಕ್ಷಿತ ಸ್ವಸ್ತಿ ನೋಽಸ್ತು ಪ್ರಿಯೇಭ್ಯಃ ॥೭॥**

ಸತ್ಯವತಿಯ ಪುತ್ರರಾದ ವ್ಯಾಸಮಹರ್ಷಿಗಳು ಯಜ್ಞಮಾಡಿದರು. ಆ ಯಜ್ಞದಲ್ಲಿ ತಾವೇ ಮುಖ್ಯಪುರೋಹಿತರೂ ಆಗಿದ್ದು ಯಜ್ಞವನ್ನು ಬಹಳ ವಿತರಣೆಯಿಂದ ಮಾಡಿದರು. ವ್ಯಾಸರು ಮಾಡಿದ ಆ ಮಹಾಯಜ್ಞಕ್ಕೆ ನೀನು ಮಾಡುತ್ತಿರುವ ಈ ಸರ್ಪಯಾಗವು ಸಮಾನವಾಗಿರುವುದು. ನಮಗೆ ಪ್ರಿಯರಾದವರೆಲ್ಲರಿಗೂ ಮಂಗಳವುಂಟಾಗಲಿ."

ಆಸ್ತೀಕನು ಯಜ್ಞವನ್ನು ಪ್ರಶಂಸೆಮಾಡಿದನಂತರ ಋತ್ವಿಜರನ್ನು ಪ್ರಶಂಸೆಮಾಡಲು ಉಪಕ್ರಮಿಸಿದನು :

**ಇಮೇ ಚ ತೇ ಸೂರ್ಯಸಮಾನವರ್ಚಸಃ**
**ಸಮಾಸತೇ ವೃತ್ರಹಣಃ ಕ್ರತುಂ ಯಥಾ ।**
**ನೈಷಾಂ ಜ್ಞಾತುಂ ವಿದ್ಯತೇ ಜ್ಞಾನಮದ್ಯ**
**ದತ್ತಂ ಯೇಭ್ಯೋ ನ ಪ್ರಣಶ್ಯೇತ್ಕದಾಚಿತ್ ॥೮॥**

"ಇಂದ್ರನು ಮಾಡಿದ ಯಜ್ಞದಲ್ಲಿ ಹೇಗೆ ಸೂರ್ಯಸಮಾನವರ್ಚಸ್ವಿಗಳಾದ ಋತ್ವಿಜರು ಭಾಗವಹಿಸಿದ್ದರೋ–ಅದೇ ರೀತಿಯಲ್ಲಿ ಈ ನಿನ್ನ ಯಜ್ಞದಲ್ಲಿಯೂ ಮಹಾತೇಜಸ್ವಿಗಳಾದ ಈ ಋತ್ವಿಜರು ಭಾಗವಹಿಸಿದ್ದಾರೆ. ಇವರು ತಿಳಿದುಕೊಳ್ಳಬೇಕಾದ ವಿಷಯವೇ ಯಾವುದೂ ಇರುವುದಿಲ್ಲ. ವೇದ-ವೇದಾಂಗಪಾರಂಗತರಾದ ಇವರು ಸರ್ವಜ್ಞರಾಗಿದ್ದಾರೆ. ಇವರಿಗೆ

ಕೊಡಲ್ಪಡುವ ದಾನವು ಒಂದಕ್ಕೆ ಹತ್ತಾಗಿ–ನೂರಾಗಿ ಫಲಕೊಡುವುದೇ ಹೊರತು ವ್ಯರ್ಥವೆಂದಿಗೂ ಆಗುವುದಿಲ್ಲ.

**ಋತ್ವಿಕ್ಸಮೋ ನಾಸ್ತಿ ಲೋಕೇಷು ಚೈವ**
**ದ್ವೈಪಾಯನೇನೇತಿ ವಿನಿಶ್ಚಿತಂ ಮೇ ।**
**ಏತಸ್ಯ ಶಿಷ್ಯಾ ಕ್ಷಿತಿಮಾಚರನ್ತಿ**
**ಸರ್ವರ್ತ್ವಿಜಃ ಕರ್ಮಸು ಸ್ವೇಷು ದಕ್ಷಾಃ ॥೯॥**

ಕೃಷ್ಣದ್ವೈಪಾಯನರಿಗೆ ಸಮಾನರಾದ ಋತ್ವಿಜರು ಈ ಲೋಕದಲ್ಲಿಯೇ ಇಲ್ಲವೆಂಬುದು ನನ್ನ ಅಭಿಮತವಾಗಿದೆ. ಅವರ ಶಿಷ್ಯರೂ ತಮ್ಮ-ತಮ್ಮ ಕರ್ಮಗಳಲ್ಲಿ ಸಮರ್ಥರಾಗಿದ್ದಾರೆ. ಆದುದರಿಂದಲೇ ಇವರು ಪ್ರಪಂಚದ ಎಲ್ಲೆಡೆಗಳಲ್ಲಿಯೂ ನಡೆಯುವ ಯಜ್ಞಗಳಲ್ಲಿ ಭಾಗವಹಿಸುತ್ತಿರುತ್ತಾರೆ."

ಆಸ್ತೀಕನು ಮುಂದೆ ಅಗ್ನಿಯನ್ನು ಸ್ತೋತ್ರಮಾಡುತ್ತಾನೆ :

**ವಿಭಾವಸುಶ್ಚಿತ್ರಭಾನುರ್ಮಹಾತ್ಮಾ**
**ಹಿರಣ್ಯರೇತಾ ಹುತಭುಕ್ ಕೃಷ್ಣವರ್ತ್ಮಾ ।**
**ಪ್ರದಕ್ಷಿಣಾವರ್ತಶಿಖಃ ಪ್ರದೀಪ್ತೋ**
**ಹವ್ಯಂ ತವೇದಂ ಹುತಭುಗ್ವಷ್ಟಿ ದೇವಃ ॥೧೦॥**

"ವಿಭಾವಸುವಾದ, ಚಿತ್ರ-ವಿಚಿತ್ರವಾದ ಜ್ವಾಲೆಗಳಿಂದ ಕೂಡಿ ರುವ, ಮಹಾತ್ಮನಾದ, ಹಿರಣ್ಯರೇತಸ್ಕನಾದ, ಹುತಭುಜನಾದ, ಕಪ್ಪಾದ ಧೂಮದಿಂದ ಕೂಡಿರುವ, ಪ್ರದಕ್ಷಿಣಾಕಾರನಾಗಿಯೂ, ಜಾಜ್ವಲ್ಯಮಾನ ನಾಗಿಯೂ ಉರಿಯುತ್ತಿರುವ ಈ ಯಜ್ಞೇಶ್ವರನು–ತನ್ನಲ್ಲಿ ಹೋಮಮಾಡಿದ ನಿನ್ನ ಹೋಮದ್ರವ್ಯಗಳನ್ನು ಆಯಾ ದೇವತೆಗಳಿಗೆ ಒಯ್ಯುತ್ತಿದ್ದಾನೆ."

ಅನಂತರ ಆಸ್ತೀಕನು ರಾಜನನ್ನು ಸ್ತೋತ್ರಮಾಡುತ್ತಾನೆ :

**ನೇಹ ತ್ವದನ್ಯೋ ವಿದ್ಯತೇ ಜೀವಲೋಕೇ**
**ಸಮೋ ನೃಪಃ ಪಾಲಯಿತಾ ಪ್ರಜಾನಾಮ್ ।**
**ಧೃತ್ಯಾ ಚ ತೇ ಪ್ರೀತಮನಾಃ ಸದಾಹಂ**
**ತ್ವಂ ವಾ ವರುಣೋ ಧರ್ಮರಾಜೋ ಯಮೋ ವಾ॥**

"ಮಹಾರಾಜ! ನಿನಗೆ ಸಮಾನರಾದ ರಾಜರು ಈ ಜೀವಲೋಕದಲ್ಲಿಯೇ ಮತ್ತಾರೂ ಇರುವುದಿಲ್ಲ. ಪ್ರಜೆಗಳನ್ನು ಪರಿಪಾಲಿಸುವವರಲ್ಲಿ ನೀನು ಅಗ್ರಗಣ್ಯನಾಗಿರುವೆ. ನೀನು ಸಾಕ್ಷಾತ್ ಯಮನೋ, ವರುಣನೋ ಅಥವಾ ಧರ್ಮರಾಜನೋ ಆಗಿರಬೇಕೆಂದು ನಾನು ಭಾವಿಸುತ್ತೇನೆ.

**ಶಕ್ರಃ ಸಾಕ್ಷಾದ್ವಜ್ರಪಾಣಿರ್ಯಥೇಹ**
**ತ್ರಾತಾ ಲೋಕೇऽಸ್ಮಿಂಸ್ತ್ವಂ ತಥೇಹ ಪ್ರಜಾನಾಮ್ ।**
**ಮತಸ್ತ್ವಂ ನಃ ಪುರುಷೇನ್ದ್ರೇಹ ಲೋಕೇ**
**ನ ಚ ತ್ವದನ್ಯೋ ಭೂಪತಿರಸ್ತಿ ಜಜ್ಞೇ ॥೧೨॥**

ಮಹಾರಾಜ! ವಜ್ರಪಾಣಿಯಾದ ಇಂದ್ರನು ಯಾವ ರೀತಿಯಲ್ಲಿ ಸ್ವರ್ಗವನ್ನು ಪರಿಪಾಲಿಸುತ್ತಿರುವನೋ–ಅದೇ ರೀತಿಯಲ್ಲಿ ನೀನು ಈ ಲೋಕವನ್ನು ಪರಿಪಾಲಿಸುತ್ತಿರುವೆ. ಪುರುಷೇಂದ್ರನೇ! ಈ ಪ್ರಪಂಚದಲ್ಲಿ ನಿನಗೆ ಸಮಾನರಾದ ರಾಜರು ಬೇರಾರೂ ಇಲ್ಲವೆಂದೇ ನಮ್ಮೆಲ್ಲರ ಭಾವನೆಯಾಗಿದೆ.

**ಖಟ್ವಾಙ್ಗನಾಭಾಗದಿಲೀಪಕಲ್ಪ**
**ಯಯಾತಿಮಾನ್ಧಾತೃಸಮಪ್ರಭಾವ ।**
**ಆದಿತ್ಯತೇಜಃಪ್ರತಿಮಾನತೇಜಾ**
**ಭೀಷ್ಮೋ ಯಥಾ ರಾಜಸಿ ಸುವ್ರತಸ್ತ್ವಮ್ ॥೧೩॥**

ನೀನು ಖಟ್ವಾಂಗ, ನಾಭಾಗ, ದಿಲೀಪ–ಇವರುಗಳಿಗೆ ಸಮಾನನಾಗಿರುವೆ. ಯಯಾತಿ, ಮಾಂಧಾತಾ ಇವರಲ್ಲಿದ್ದ ಪ್ರಭಾವವು ನಿನ್ನಲ್ಲಿಯೂ ಇರುವುದು. ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕಂಗೊಳಿಸುತ್ತಿರುವೆ. ವ್ರತನಿಷ್ಠೆಯಲ್ಲಿ ನೀನು ಭೀಷ್ಮನಿಗೆ ಸಮಾನನಾಗಿರುವೆ.

**ವಾಲ್ಮೀಕಿವತ್ತೇ ನಿಭೃತಂ ಸ್ವವೀರ್ಯಂ**
**ವಸಿಷ್ಠವತ್ತೇ ನಿಹತಶ್ಚ ಕೋಪಃ ।**
**ಪ್ರಭುತ್ವಮಿನ್ದ್ರತ್ವಸಮಂ ಮತಂ ಮೇ**
**ದ್ಯುತಿಶ್ಚ ನಾರಾಯಣವದ್ವಿಭಾತಿ ॥೧೪॥**

ವಾಲ್ಮೀಕಿಯಂತೆ ನಿನ್ನ ಪರಮಾದ್ಭುತವಾದ ಶಕ್ತಿಯು ಗುಪ್ತ (ಪೂರ್ಣ) ವಾಗಿದೆ. ವಸಿಷ್ಠರಂತೆ ನೀನು ಕೋಪವನ್ನು ದಮನಮಾಡಿರುವೆ. ಪ್ರಭುತ್ವ

ದಲ್ಲಿ ನೀನು ಇಂದ್ರನಿಗೆ ಸಮಾನನಾಗಿರುವೆ. ಸಾಕ್ಷಾತ್ ಶ್ರೀಮನ್ನಾರಾಯಣ ನಂತೆ ನೀನು ಕಾಂತಿಯುಕ್ತನಾಗಿರುವೆ.

**ಯಮೋ ಯಥಾ ಧರ್ಮವಿನಿಶ್ಚಯಜ್ಞಃ**
**ಕೃಷ್ಣೋ ಯಥಾ ಸರ್ವಗುಣೋಪಪನ್ನಃ ।**
**ಶ್ರಿಯಾಂ ನಿವಾಸೋಽಸಿ ಯಥಾ ವಸೂನಾಂ**
**ನಿಧಾನಭೂತೋಽಸಿ ತಥಾ ಕ್ರತೂನಾಮ್ ॥೧೫॥**

ಧರ್ಮಾಧರ್ಮಗಳ ಖಚಿತವಾದ ವಿವೇಚನೆಯಲ್ಲಿ ನೀನು ಯಮ ಧರ್ಮನಿಗೆ ಸಮಾನನು. ಸಕಲಗುಣಗಳ ಪರಿಪೂರ್ಣತೆಯಲ್ಲಿ ನೀನು ಶ್ರೀಕೃಷ್ಣನಿಗೆ ಸಮಾನನಾಗಿರುವೆ. ವಸುಗಳು ಸಕಲೈಶ್ವರ್ಯಗಳಿಗೂ ಅಧಿಪತಿ ಗಳಾಗಿರುವಂತೆ ನೀನು ಸಕಲಸಂಪತ್ತುಗಳಿಗೂ ನಿವಾಸಸ್ಥಾನನಾಗಿರುವೆ. ಸಕಲಕ್ರತುಗಳಿಗೂ ನೀನು ಆಶ್ರಯಭೂತನಾಗಿರುವೆ.

**ದಮ್ಭೋದ್ಭವೇನಾಸಿ ಸಮೋ ಬಲೇನ**
**ರಾಮೋ ಯಥಾ ಶಾಸ್ತ್ರವಿದಸ್ತ್ರವಿಚ್ಚ ।**
**ಔರ್ವತ್ರಿತಾಭ್ಯಾಮಸಿ ತುಲ್ಯತೇಜಾ**
**ದುಷ್ಪ್ರೇಕ್ಷಣೀಯೋಽಸಿ ಭಗೀರಥೇನ ॥೧೬॥**

ಬಲದಲ್ಲಿ ನೀನು ದಮ್ಭೋದ್ಭವನಿಗೆ ಸಮಾನನು. ಶಾಸ್ತ್ರಜ್ಞರಲ್ಲಿ ಮತ್ತು ಅಸ್ತ್ರಜ್ಞರಲ್ಲಿ ನೀನು ಜಮದಗ್ನಿಯ ಮಗನಾದ ಪರಶುರಾಮನಿಗೆ ಸಮಾನ ನಾಗಿರುವೆ. ತೇಜಸ್ಸಿನಲ್ಲಿ ಮಹಾತೇಜಸ್ವಿಗಳಾದ ಔರ್ವ ಮತ್ತು ತ್ರಿತ ಮಹರ್ಷಿಗಳಿಗೆ ಸಮಾನನಾಗಿರುವೆ. ಭಗೀರಥನಂತೆ ನೀನೂ ನಿನ್ನ ಶತ್ರುಗಳ ಕಣ್ಣಿಗೆ ಬಹುಘೋರನಾಗಿಯೂ, ಭಯಂಕರನಾಗಿಯೂ ಕಾಣುವೆ."

ಶೌನಕರೇ! ಆಸ್ತೀಕನು ಹೀಗೆ ಸ್ತೋತ್ರಮಾಡಿದೊಡನೆಯೇ ರಾಜನಾದ ಜನಮೇಜಯ, ಸದಸ್ಯರು, ಋತ್ವಿಜರು ಮತ್ತು ಯಜ್ಞೇಶ್ವರ–ಇವರೆಲ್ಲರೂ ಸುಪ್ರೀತರಾದರು. ಅವರೆಲ್ಲರ ಇಂಗಿತವನ್ನೂ ಗ್ರಹಿಸಿದ ಜನಮೇಜಯನು ಅವರೆಲ್ಲರನ್ನೂ ಉದ್ದೇಶಿಸಿ ಹೇಳಿದನು."

ಐಐನೆಯ ಅಧ್ಯಾಯವು ಮುಗಿಯಿತು.

ಀ೬ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಜನಮೇಜಯರಾಜನು ಆಸ್ತೀಕನಿಗೆ ವರನೀಡಲು ಸಿದ್ಧನಾದುದು : ತಕ್ಷಕನ ವ್ಯಾಕುಲತೆ : ಸರ್ಪಯಾಗವನ್ನು ನಿಲ್ಲಿಸುವಂತೆ ಆಸ್ತೀಕನು ವರವನ್ನು ಕೇಳಿದುದು

ಜನಮೇಜಯನು ಹೇಳುತ್ತಾನೆ :

**ಬಾಲೋಽಪ್ಯಯಂ ಸ್ಥವಿರ ಇವಾವಭಾಷತೇ**
**ನಾಯಂ ಬಾಲಃ ಸ್ಥವಿರೋಽಯಂ ಮತೋ ಮೇ ।**
**ಇಚ್ಛಾಮ್ಯಹಂ ವರಮಸ್ಮೈ ಪ್ರದಾತುಂ**
**ತನ್ಮೇ ವಿಪ್ರಾಃ ಸಂವಿದಧ್ವಂ ಯಥಾವತ್ ॥೧॥**

"ಬ್ರಾಹ್ಮಣೋತ್ತಮರೇ! ಯಜ್ಞವನ್ನೂ, ಋತ್ವಿಜರನ್ನೂ, ಅಗ್ನಿಯನ್ನೂ ಮತ್ತು ನನ್ನನ್ನೂ ಸ್ತೋತ್ರಮಾಡುತ್ತಿರುವ ಇವನು ಬಾಲಕನಾದರೂ ಸರ್ವಾನುಭವಗಳೂ ಇರುವ ವೃದ್ಧನಂತೆಯೇ ಕಾಣುತ್ತಿದ್ದಾನೆ. ತೋರಿಕೆಗೆ ಬಾಲಕನಾಗಿ ಕಂಡುಬಂದರೂ ಸಹ ಇವನಾಡುತ್ತಿರುವ ಮಾತುಗಳಿಂದ ಇವನು ಸ್ಥವಿರನೇ ಆಗಿರಬೇಕೆಂಬುದು ನನ್ನ ಅಭಿಮತವಾಗಿದೆ. ಇವನು ಅಪೇಕ್ಷಿಸುವ ವರವನ್ನು ಕೊಡಲು ನಾನು ಇಚ್ಛಿಸಿದ್ದೇನೆ. ಈ ವಿಷಯದಲ್ಲಿ ನೀವೆಲ್ಲರೂ ಸಮಾಲೋಚಿಸಿ ನನಗೆ ಸಲಹೆ ನೀಡಿರಿ. ಈ ಸಮಯದಲ್ಲಿ ವರಕೊಡುವ ಯುಕ್ತಾಯುಕ್ತತೆಯನ್ನೂ ವಿವೇಚಿಸಿ ಹೇಳಿರಿ."

ಸದಸ್ಯರು ಹೇಳುತ್ತಾರೆ :

**ಬಾಲೋಽಪಿ ವಿಪ್ರೋ ಮಾನ್ಯ ಏವೇಹ ರಾಜ್ಞಾಂ**
**ವಿದ್ವಾನ್ಯೋ ವೈ ಸ ಪುನರ್ವೈ ಯಥಾವತ್ ।**
**ಸರ್ವಾನ್ಕಾಮಾಂಸ್ತ್ವತ್ತ ಏವಾರ್ಹತೇಽದ್ಯ**
**ಯಥಾ ಚ ನಸ್ತಕ್ಷಕ ಏತಿ ಶೀಘ್ರಮ್ ॥೨॥**

"ಬ್ರಾಹ್ಮಣನು ಬಾಲಕನಾದರೂ ರಾಜನಾದವನು ಅವನಿಗೆ ಮರ್ಯಾದೆಯನ್ನು ಕೊಡಬೇಕು. ಆದುದರಿಂದ ಬ್ರಾಹ್ಮಣಬಾಲಕನೂ ವಿದ್ವಾಂಸನೂ ಆಗಿರುವ ಇವನು ನಿನ್ನಿಂದ ತನ್ನ ಅಭಿಲಾಷೆಯನ್ನು ಪೂರೈಸಿ

ಕೊಳ್ಳಲು ಅರ್ಹನಾಗಿದ್ದಾನೆ. ನೀನು ಅವನು ಕೇಳಿದ ವರಕೊಡುವುದು ಸರ್ವಥಾ ಯೋಗ್ಯವಾಗಿದೆ. ಆದರೆ ತಕ್ಷಕನು ಎಷ್ಟು ಬೇಗ ಬಂದರೆ ಅಷ್ಟು ಬೇಗ ನೀನು ಈ ಬಾಲಕನ ಇಚ್ಛೆಯನ್ನು ಪೂರೈಸಬಹುದಾಗಿದೆ."

ಸೌತಿಗಳು ಹೇಳುತ್ತಾರೆ :

ಆಸ್ತೀಕನ ಹೊಗಳಿಕೆಯ ಮಾತಿನಿಂದ ಪರಿತುಷ್ಟನಾಗಿದ್ದ ಜನಮೇಜಯನಿಗೆ ಬಾಲಕನಿಗೆ ವರವನ್ನು ಕೊಟ್ಟುಬಿಡಬೇಕೆಂಬ ಆತುರವಿದ್ದಿತು. ಅಂತೆಯೇ ಜನಮೇಜಯನು ಆಸ್ತೀಕನಿಗೆ ಹೇಳಿದನು :

"ಬ್ರಾಹ್ಮಣೋತ್ತಮ! ನಿನಗೆ ಬೇಕಾದ ವರವನ್ನು ಕೇಳು."

ಆದರೆ ರಾಜನ ಆತುರವು ಹೋತೃವಿಗೆ 'ಸರಿ' ಎನಿಸಲಿಲ್ಲ. ರಾಜನು ಹೇಳಿದುದಕ್ಕೆ ಸ್ವಲ್ಪ ಅಸಮಾಧಾನವನ್ನೇ ಸೂಚಿಸುತ್ತಾ ಹೇಳಿದನು :

"ಮಹಾರಾಜ! ಯಜ್ಞೇಶ್ವರನಲ್ಲಿ ಆಹುತಿಯಾಗಲು ತಕ್ಷಕನಿನ್ನೂ ಆಗಮಿಸಲಿಲ್ಲ."

ತಕ್ಷಕನೊಬ್ಬನು ಮಾಡಿದ ಅಪರಾಧಕ್ಕಾಗಿ ಸರ್ಪಕುಲವೇ ವಿನಾಶ ವಾಗುತ್ತಿದೆ. ಹೀಗಿರುವಾಗ ತಕ್ಷಕನೇ ಬಾರದಿದ್ದರೆ ಯಾಗವೇ ನಿಷ್ಪ್ರಯೋಜಕ ವಾಗುವುದಿಲ್ಲವೇ? ರಾಜನು ಹೋತೃವಿನ ಮಾತಿನಿಂದ ಎಚ್ಚರಗೊಂಡು ಹೇಳಿದನು :

**ಯಥಾ ಚೇದಂ ಕರ್ಮ ಸಮಾಪ್ಯತೇ ಮೇ**
**ಯಥಾ ಚ ವೈ ತಕ್ಷಕ ಏತಿ ಶೀಘ್ರಮ್ ।**
**ತಥಾ ಭವನ್ತಃ ಪ್ರಯತನ್ತು ಸರ್ವೇ**
**ಪರಂ ಶಕ್ತ್ಯಾ ಸ ಹಿ ಮೇ ವಿದ್ವಿಷಾಣಃ ॥೪॥**

"ಬ್ರಾಹ್ಮಣೋತ್ತಮರೇ! ತಕ್ಷಕನು ಬಾರದೇ ನನ್ನ ಯಾಗವು ಪೂರ್ಣವಾಗುವಂತಿಲ್ಲ. ಆದುದರಿಂದ ತಕ್ಷಕನು ಬಹುಶೀಘ್ರವಾಗಿ ಇಲ್ಲಿಗೆ ಆಗಮಿಸುವಂತೆಯೂ, ನನ್ನ ಯಜ್ಞವು ಪೂರ್ಣವಾಗುವಂತೆಯೂ ನೀವು ಸಂಪೂರ್ಣವಾಗಿ ಪ್ರಯತ್ನಿಸಿರಿ. ನಿಮ್ಮ ಮಂತ್ರಶಕ್ತಿಯೆಲ್ಲವನ್ನೂ ಉಪ ಯೋಗಿಸಿ ಅವನನ್ನಿಲ್ಲಿಗೆ ಸೆಳೆದುತನ್ನಿರಿ. ಅವನೇ ಅಲ್ಲವೇ ನನಗೆ ಪರಮ

ದ್ವೇಷಿಯಾದ ಸರ್ಪರಾಜನು? ಅವನನ್ನು ಧ್ವಂಸಮಾಡದೇ ನಮ್ಮ ಯಾಗವು ಪೂರ್ಣವಾಗುವ ಸಾಧ್ಯತೆಯೇ ಇಲ್ಲ."

ಋತ್ವಿಜರು ಕ್ಷಣಕಾಲ ಯೋಚಿಸಿ ಹೇಳಿದರು :

"ಮಹಾರಾಜ! ಕಾಲನಿರ್ಣಾಯಕಶಾಸ್ತ್ರಗಳು ಸೂಚಿಸುತ್ತಿರುವಂತೆ ಮತ್ತು ಯಜ್ಞೇಶ್ವರನು ತನ್ನ ಜ್ವಾಲೆಗಳ ಮತ್ತು ಫೂತ್ಕಾರಗಳ ಮೂಲಕ ಸೂಚಿಸುತ್ತಿರುವಂತೆ ಈ ಸಮಯದಲ್ಲಿ ತಕ್ಷಕನು ಭಯಪೀಡಿತನಾಗಿ ಇಂದ್ರನ ಅರಮನೆಯಲ್ಲಿ ಸೇರಿಕೊಂಡಿದ್ದಾನೆ."

ಆಗ ರಾಜನು ಸ್ಥಪತಿಯಾದ ಪೌರಾಣಿಕನನ್ನು ಪ್ರಶ್ನಿಸಿದನು. ಯಜ್ಞಕ್ಕೆ ಬ್ರಾಹ್ಮಣನ ನಿಮಿತ್ತವಾಗಿ ವಿಘ್ನವು ಒದಗುವುದೆಂದು ಸ್ಥಪತಿಯು ಹೇಳಿದ್ದ ಮಾತುಗಳೂ ರಾಜನ ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದುವು.

ರಾಜನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಮಹಾತ್ಮನಾದ, ಲೋಹಿತಾಕ್ಷನಾದ, ಪೌರಾಣಿಕನಾದ ಸ್ಥಪತಿಯು ಸಮೀಪದಲ್ಲಿ ನಿಂತು ಉತ್ತರಿಸಿದನು :

"ಮಹಾರಾಜ! ಬ್ರಾಹ್ಮಣರು ಹೇಳಿದಂತೆ ತಕ್ಷಕನು ಇಂದ್ರನ ಅರಮನೆಯಲ್ಲಿದ್ದಾನೆ. ಪುರಾಣವನ್ನರಿತು ನಾನು ಹೇಳುತ್ತಿದ್ದೇನೆ. ಇಂದ್ರನು ತನ್ನ ಅರಮನೆಯಲ್ಲಿರುವ ತಕ್ಷಕನಿಗೆ ಸರ್ಪಯಾಗದಿಂದ ಭಯವಿಲ್ಲವೆಂದು ಸಂಪೂರ್ಣವಾಗಿ ಆಶ್ವಾಸನೆಯನ್ನಿತ್ತಿದ್ದಾನೆ.

**ವಸೇಹ ತ್ವಂ ಮತ್ಸಕಾಶೇ ಸುಗುಪ್ತೋ**
**ನ ಪಾವಕಸ್ತ್ವಾಂ ಪ್ರದಹಿಷ್ಯತೀತಿ ॥೭॥**

'ನೀನು ನನ್ನ ಅರಮನೆಯಲ್ಲಿ ಸುರಕ್ಷಿತನಾಗಿದ್ದುಬಿಡು. ಅಗ್ನಿಯು ನಿನ್ನನ್ನು ದಹಿಸುವುದಿಲ್ಲ'–ಎಂದೂ ಇಂದ್ರನು ತಕ್ಷಕನಿಗೆ ಧೈರ್ಯಹೇಳಿದ್ದಾನೆ."

ಸ್ಥಪತಿಯ ಮಾತುಗಳನ್ನು ಕೇಳಿ ದೀಕ್ಷಿತನಾದ ಜನಮೇಜಯನು ಸಂತಪ್ತನಾದನು. ತಕ್ಷಕನನ್ನು ಕೂಡಲೇ ಮಂತ್ರದಿಂದ ಆಕರ್ಷಿಸಬೇಕೆಂದು ರಾಜನು ಹೋತೃವಿಗೆ ಪ್ರೇರಿಸಿದನು. ಒಡನೆಯೇ ಹೋತೃವು ಯಾಜ್ಯಾ ಪುರೋನುವಾಕ್ಯಗಳನ್ನು ಹೇಳಿದನು. ಅಧ್ವರ್ಯುವು ಅಗ್ನಿಯಲ್ಲಿ ಹೋಮ

ಮಾಡಿದನು. ಇತರ ಸರ್ಪಗಳಂತೆ ತಕ್ಷಕನು ಅಷ್ಟು ಸುಲಭವಾಗಿ ಬರಲಿಲ್ಲ. ಆದರೆ ಇಂದ್ರನ ಅರಮನೆಯಲ್ಲಿ ನಿಗೂಢವಾಗಿರಲೂ ಸಾಧ್ಯವಾಗಲಿಲ್ಲ. ತನಗೆ ಆಶ್ರಯವನ್ನಿತ್ತಿದ್ದ ಇಂದ್ರನನ್ನೇ ಬಲವಾಗಿ ಹಿಡಿದಿದ್ದನು. ತಕ್ಷಕನನ್ನು ಸಂರಕ್ಷಿಸುವ ಸಲುವಾಗಿ ಇಂದ್ರನು ರಥದಲ್ಲಿ ಕುಳಿತು ಯಜ್ಞವೇದಿಕೆಯ ಮೇಲ್ಭಾಗದಲ್ಲಿ ಆಕಾಶದಲ್ಲಿ ಬಂದು ನಿಂತನು. ಇಂದ್ರನನ್ನು ಸ್ತೋತ್ರಮಾಡುತ್ತಾ ಸಕಲದೇವತೆಗಳೂ ಅವನನ್ನೇ ಅನುಸರಿಸಿ ಬಂದರು. ಮೇಘಗಳೂ ಅವನನ್ನನುಸರಿಸಿ ಬಂದುವು. ವಿದ್ಯಾಧರರೂ ಅಪ್ಸರೆಯರೂ ಇಂದ್ರನೊಡನಿದ್ದರು. ಭಯದಿಂದ ಉದ್ವಿಗ್ನನಾಗಿದ್ದ ತಕ್ಷಕನು ಇಂದ್ರನ ಉತ್ತರೀಯದಲ್ಲಿ ಸೇರಿಕೊಂಡಿದ್ದನು. ಮಂತ್ರದಿಂದ ಪ್ರತಿಕ್ಷಣದಲ್ಲಿಯೂ ಆಕರ್ಷಿತನಾಗುತ್ತಿದ್ದ ಅವನಿಗೆ ಸುಖವೆಂಬುದೇ ಇರಲಿಲ್ಲ. ತಕ್ಷಕಾಕರ್ಷಕ ಮಂತ್ರವನ್ನು ಹೇಳಿ ಅಗ್ನಿಯಲ್ಲಿ ಹೋಮಮಾಡಿದರೂ ತಕ್ಷಕನು ಬಾರ ದಿರುವುದನ್ನು ಕಂಡು ರಾಜನು ಕುಪಿತನಾದನು. ಅವನಿಗೆ ತನ್ನ ಪರಮಶತ್ರು ವಾದ ತಕ್ಷಕನನ್ನು ಅಗ್ನಿಯಲ್ಲಿ ಬೀಳಿಸಿಬಿಡಬೇಕೆಂಬ ಧಾವಂತವು ಹೆಚ್ಚಾಯಿತು. ಬ್ರಾಹ್ಮಣರನ್ನು ಕುರಿತು ಉದ್ವೇಗದಿಂದ ಹೇಳಿದನು :

**ಇನ್ದ್ರಸ್ಯ ಭವನೇ ವಿಪ್ರಾ ಯದಿ ನಾಗಃ ಸ ತಕ್ಷಕಃ ।**
**ತಮಿನ್ದ್ರೇಣೈವ ಸಹಿತಂ ಪಾತಯಧ್ವಂ ವಿಭಾವಸೌ ॥೧೧॥**

“ಇಂದ್ರನ ಅರಮನೆಯಲ್ಲಿ ಸೇರಿಕೊಂಡಿರುವ ಆ ತಕ್ಷಕನಿಗೆ ಇಂದ್ರನು ಆಶ್ರಯವನ್ನು ಕೊಟ್ಟಿರುವನಾದರೆ ಇಂದ್ರಸಹಿತನಾಗಿಯೇ ತಕ್ಷಕನನ್ನು ಮಂತ್ರದಿಂದ ಆಕರ್ಷಿಸಿ ಅಗ್ನಿಯಲ್ಲಿ ಬೀಳುವಂತೆ ಮಾಡಿರಿ.”

ಜನಮೇಜಯನು ಹೀಗೆಂದು ಹೇಳಿದೊಡನೆಯೇ ಹೋತೃವು ಮಂತ್ರ ಪುನಶ್ಚರಣೆಮಾಡಿ **‘ಸಹೇನ್ದ್ರಂ ತಕ್ಷಕಂ ಜುಹೋಮಿ–ಸ್ವಾಹಾ’** ಎಂದು ಅಗ್ನಿಯಲ್ಲಿ ಆಜ್ಯವನ್ನು ಹೋಮಮಾಡಿದನು.*

---

* ಮಂತ್ರದ ಶಕ್ತಿಯು ಅಮೋಘವಾದುದು. ದರ್ಭೆಯನ್ನು ಬ್ರಹ್ಮಾಸ್ತ್ರವನ್ನಾಗಿ ಪರಿವರ್ತಿಸಲು ಮಂತ್ರಕ್ಕೆ ಶಕ್ತಿಯಿದೆ. ಮಂತ್ರಶಕ್ತಿಯಿಂದ ಬ್ರಹ್ಮಾಂಡವನ್ನೇ ಸೃಷ್ಟಿಸಲು ಅಥವಾ ವಿನಾಶ ಗೊಳಿಸಲು ಸಾಧ್ಯವಿದೆ. ಮಂತ್ರಗಳೆಂದರೆ ಬೀಜಾಕ್ಷರಗಳ ಸಮುಚ್ಚಯ. ಮಂತ್ರಗಳ ಅರ್ಥವೇನೇ ಇರಲಿ. ಅವುಗಳ ಸತತವಾದ ಪುನಶ್ಚರಣೆಯಿಂದಲೇ ನಮ್ಮ ದೇಹದಲ್ಲಿ ವಿದ್ಯುತ್ತು ಉತ್ಪನ್ನವಾಗುತ್ತದೆ. ಮಂತ್ರಗಳನ್ನು ಪುನಶ್ಚರಣೆಮಾಡುವ ವಿಧಿಗಳಿವೆ. ಆ

ಹೋತೃವು ಮಂತ್ರಪುನಶ್ಚರಣೆಮಾಡಿ ಯಜ್ಞೇಶ್ವರನಲ್ಲಿ ಹೋಮ ಮಾಡಿದೊಡನೆಯೇ ಆ ಮಹಾಮಂತ್ರವು ಇಂದ್ರಸಹಿತನಾದ ತಕ್ಷಕನನ್ನು ವೇದಿಕೆಯ ಮೇಲಕ್ಕೆ ದರ-ದರನೆ ಸೆಳೆದುಕೊಂಡು ಬಂದಿತು. ತಕ್ಷಕನು ಅಗ್ನಿಯಲ್ಲಿ ಬೀಳುವ ಸಮಯವು ಸನ್ನಿಹಿತವಾದುದನ್ನು ಕಂಡು ವ್ಯಥಿತ ನಾದನು.

**ಪುರನ್ದರಸ್ತು ತಂ ಯಜ್ಞಂ ದೃಷ್ಟ್ವೋರುಭಯಮಾವಿಶತ್ ।**
**ಹಿತ್ವಾ ತು ತಕ್ಷಕಂ ತ್ರಸ್ತಃ ಸ್ವಮೇವ ಭವನಂ ಯಯೌ ॥೧೪॥**

ಇಂದ್ರನು ಆ ಯಜ್ಞವನ್ನು ನೋಡಿ ಬಹಳವಾಗಿ ಭಯಗೊಂಡನು. ಒಡನೆಯೇ ಉತ್ತರೀಯದಲ್ಲಿ ಅಡಗಿಕೊಂಡಿದ್ದ ತಕ್ಷಕನನ್ನು ಕೆಳಕ್ಕೆ ಕೆಡವಿ ಸ್ವರ್ಗಕ್ಕೆ ಹೊರಟುಹೋದನು.

ಇಂದ್ರನು ಹೊರಟುಹೋಗಲಾಗಿ ಭಯವಿಹ್ವಲನಾದ, ಮಂತ್ರಶಕ್ತಿ ಯಿಂದ ಆಕರ್ಷಿತನಾದ ತಕ್ಷಕನು ಪ್ರಜ್ಞಾಹೀನನಾಗಿ, ಪ್ರಜ್ವಲಿಸುತ್ತಿದ್ದ ಅಗ್ನಿಯ ಕಡೆಗೆ ಬರುತ್ತಿದ್ದನು. ತಕ್ಷಕನು ಬಂದು ಯಜ್ಞವು ಪೂರ್ಣವಾಗುವ ಸೂಚನೆಗಳನ್ನು ಕಂಡು ಋತ್ವಿಜರು ರಾಜನಿಗೆ ಹೇಳಿದರು :

**ವರ್ತತೇ ತವ ರಾಜೇನ್ದ್ರ ಕರ್ಮೈತದ್ವಿಧಿವತ್ಪ್ರಭೋ ।**
**ಅಸ್ಮೈ ತು ದ್ವಿಜಮುಖ್ಯಾಯ ವರಂ ತ್ವಂ ದಾತುಮರ್ಹಸಿ ॥೧೬॥**

"ಮಹಾರಾಜ! ನೀನು ಆರಂಭಿಸಿರುವ ಸರ್ಪಯಾಗವು ವಿಧಿವತ್ತಾಗಿ

---

ವಿಧಿಯನ್ನನುಸರಿಸಿಯೇ ಮಂತ್ರಪುನಶ್ಚರಣೆಮಾಡಬೇಕು. 'ಹ್ಯೇಗೆ ಮಾಡಿದರೇನು? ಮನಶ್ಶುದ್ಧಿಯು ಮುಖ್ಯ' ಇತ್ಯಾದಿ ತಾರ್ಕಿಕವಾದ ಮಾತುಗಳಿಂದ ಸಿದ್ಧಿಯಾಗುವುದಿಲ್ಲ. ಪ್ರಯೋಗಶಾಲೆಯಲ್ಲಿ ದ್ರಾವಣಗಳನ್ನು ಸರಿಯಾದ ಪ್ರಮಾಣದಲ್ಲಿ ಬೆರೆಸಿದಾಗ ಮಾತ್ರ ನಮಗೆ ಬೇಕಾದ ವಸ್ತುವು ಸಿಕ್ಕುವಂತೆ–ವಿಧಿಪೂರ್ವಕವಾಗಿ ಮಹಾಮಂತ್ರಗಳ ಪುನಶ್ಚರಣೆಮಾಡಿದರೆ ಯಾವುದನ್ನು ಬೇಕಾದರೂ ಸಿದ್ಧಿಮಾಡಿಕೊಳ್ಳಬಹುದಾಗಿದೆ. ಸಿದ್ಧಿಮಾಡಿಕೊಂಡು ಅದರಿಂದ ಪ್ರಯೋಜನವನ್ನು ಪಡೆಯುವ ಆಶಯವಿಲ್ಲದಿದ್ದರೂ ನಮ್ಮ ಪೂರ್ವಜರಿಂದ ಉಪದಿಷ್ಟವಾಗಿ ಬಂದಿರುವ ವೇದಮಾತೆಯಾದ ಗಾಯತ್ರಿಯನ್ನಾದರೂ ಅಧಿಕಾರಿಗಳು ತ್ರಿಕಾಲಗಳಲ್ಲಿಯೂ ಪರಿಶುದ್ಧರಾಗಿ ಜಪಿಸಬೇಕಾದ ಕರ್ತವ್ಯವಿದೆ. ನಮ್ಮ ದೇಹವೇ ಒಂದು ಪ್ರಯೋಗಶಾಲೆ. ಆ ಪ್ರಯೋಗಶಾಲೆಯಲ್ಲಿ ನಾವು ಏನನ್ನಾದರೂ ಸಿದ್ಧಿಮಾಡಿಕೊಳ್ಳಲು ಅವಕಾಶವಿದೆ. ಇದಕ್ಕೆ ಮುಖ್ಯವಾಗಿ ಜಿತೇಂದ್ರಿಯತೆ ಮತ್ತು ಆತ್ಮಸಂಯಮ–ಇವುಗಳಿರಬೇಕು.

ಮುಗಿಯುವುದರಲ್ಲಿದೆ. ಆದುದರಿಂದ ನೀನು ಈ ದ್ವಿಜಶ್ರೇಷ್ಠನಿಗೆ (ಆಸ್ತೀಕನಿಗೆ) ಅವನು ಆಶಿಸಿದ ವರವನ್ನು ಕೊಡುವುದು ಸಾಧುವಾಗಿದೆ."

ಋತ್ವಿಜರು ವರದಾನಮಾಡಬಹುದೆಂದು ಹೇಳಿದೊಡನೆಯೇ ಜನಮೇಜಯನು ಆಸ್ತೀಕನಿಗೆ ಹೇಳಿದನು :

**ಬಾಲಾಭಿರೂಪಸ್ಯ ತವಾಪ್ರಮೇಯ**
**ವರಂ ಪ್ರಯಚ್ಛಾಮಿ ಯಥಾನುರೂಪಮ್ ।**
**ವೃಣೀಷ್ವ ಯತ್ತೇಽಭಿಮತಂ ಹೃದಿ ಸ್ಥಿತಂ**
**ತತ್ತೇ ಪ್ರದಾಸ್ಯಾಮ್ಯಪಿ ಚೇದದೇಯಮ್ ॥೧೭॥**

"ಬ್ರಾಹ್ಮಣಬಾಲಕನೇ! ಅಪ್ರಮೇಯನೇ! ನಿನ್ನ ಬ್ರಹ್ಮತೇಜಸ್ಸಿಗೆ ಅನುರೂಪವಾದ ವರವನ್ನೇ ಕೊಡುತ್ತೇನೆ. ನಿನ್ನ ಮನಸ್ಸಿನಲ್ಲಿರುವ ಅಭಿಲಾಷೆಯನ್ನು ನಿಸ್ಸಂಕೋಚವಾಗಿ ಹೇಳು. ಒಂದು ವೇಳೆ ನೀನು ಕೇಳಲಿರುವ ವರವು ಕೊಡಕೂಡದಾಗಿದ್ದರೂ ಕೊಡುವೆನು."

ಜನಮೇಜಯನು ಹೀಗೆ ಹೇಳಿದ ವೇಳೆಗೆ ಸರಿಯಾಗಿ ತಕ್ಷಕನ ದಾರುಣಧ್ವನಿಯು ಕೇಳಿಬಂದಿತು. ಅದನ್ನು ಕೇಳಿದ ಋತ್ವಿಜರು ರಾಜನಿಗೆ ಹೇಳಿದರು :

"ಮಹಾರಾಜ! ತಕ್ಷಕನು ನಿನ್ನ ವಶನಾಗಿ ಹೋದನು. ನಿನ್ನ ಪರಮ ದ್ವೇಷಿಯ ಅವಸಾನವು ಇಷ್ಟರಲ್ಲಿಯೇ ಆಗುವುದರಲ್ಲಿದೆ. ಗಟ್ಟಿಯಾಗಿ ಅರಚಿಕೊಳ್ಳುತ್ತಾ ಯಜ್ಞೇಶ್ವರನ ಸಮೀಪಕ್ಕೆ ಆಗಮಿಸುತ್ತಿದ್ದಾನೆ. ಅವನು ಮಾಡುತ್ತಿರುವ ಘೋರನಿನಾದವು ಕೇಳಿಬರುತ್ತಿದೆ. ಆಶ್ರಯವನ್ನು ಕೊಟ್ಟಿದ್ದ ಇಂದ್ರನು ತಕ್ಷಕನನ್ನು ನಿಶ್ಚಯವಾಗಿಯೂ ಪರಿತ್ಯಾಗಮಾಡಿಬಿಟ್ಟಿದ್ದಾನೆ. ಸ್ವರ್ಗದಿಂದ ಭ್ರಷ್ಟನಾಗಿರುವ ಇವನು ನಾವು ಪುನಶ್ಚರಣೆಮಾಡಿದ ಮಂತ್ರಶಕ್ತಿಯಿಂದ ಬಂಧಿತನಾಗಿ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಗತಪ್ರಜ್ಞನಾಗಿ ಗರ-ಗರನೆ ತಿರುಗುತ್ತಾ ಆಕಾಶದಿಂದ ಬೀಳುತ್ತಿದ್ದಾನೆ."

ಶೌನಕರೇ! ನಾಗೇಂದ್ರನಾದ ತಕ್ಷಕನು ಅಗ್ನಿಯಲ್ಲಿ ಬೀಳುವುದರಲ್ಲಿದ್ದಾಗ ವರಕೇಳಲು ಇದೇ ಸರಿಯಾದ ಸಮಯವೆಂದೆಣಿಸಿ ಆಸ್ತೀಕನು ರಾಜನಿಗೆ ಹೇಳಿದನು :

"ಜನಮೇಜಯ! ನೀನು ನನಗೆ ವರವನ್ನು ಕೊಡುವ ಇಚ್ಛೆಯುಳ್ಳವನಾಗಿದ್ದರೆ ಈ ಒಂದು ವರವನ್ನು ನಾನು ಕೇಳುತ್ತೇನೆ.

**ಸತ್ರಂ ತೇ ವಿರಮತ್ವೇತನ್ನ ಪತೇಯುರಿಹೋರಗಾಃ ॥೨೧॥**

ನಿನ್ನ ಯಾಗವು ವಿರಾಮವನ್ನು ಹೊಂದಲಿ. (ಪರಿಸಮಾಪ್ತವಾಗಲಿ.) ಈ ಕ್ಷಣದಿಂದಲೇ ಯಜ್ಞಕುಂಡಕ್ಕೆ ಸರ್ಪಗಳು ಬೀಳುವುದು ಬೇಡ."

ಆಸ್ತೀಕನು ಹೀಗೆ ಕೇಳಲಾಗಿ ಪರೀಕ್ಷಿತನ ಮಗನಾದ ಜನಮೇಜಯ ನಿಗೆ ಹೆಚ್ಚು ಸಂತೋಷವಾಗಲಿಲ್ಲ. ಬೇರೆ ಯಾವುದಾದರೂ ವರಕೇಳುವಂತೆ ಆಸ್ತೀಕನಿಗೆ ಹೇಳಿದನು.

**ಸುವರ್ಣಂ ರಜತಂ ಗಾಶ್ಚ ಯಚ್ಚಾನ್ಯನ್ಮನ್ಯಸೇ ವಿಭೋ ।**
**ತತ್ತೇ ದದ್ಯಾಂ ವರಂ ವಿಪ್ರ ನ ನಿವರ್ತೇತ್ಕ್ರತುರ್ಮಮ ॥೨೩॥**

"ವಿಪ್ರಶ್ರೇಷ್ಠನೇ! ನಡೆಸಿಕೊಡಲು ಬಹಳ ದುಃಸಾಧ್ಯವಾದುದನ್ನೇ ನೀನು ಕೇಳಿಬಿಟ್ಟಿರುವೆ. ಇಂತಹ ವರವನ್ನು ಕೇಳಬೇಡ. ನೀನು ಕೇಳಿದಷ್ಟು ಸುವರ್ಣನಾಣ್ಯಗಳನ್ನಾಗಲೀ, ಬೆಳ್ಳಿಯ ನಾಣ್ಯಗಳನ್ನಾಗಲೀ, ಹಸುಗಳನ್ನಾಗಲೀ ಕೊಡುತ್ತೇನೆ. ಅಥವಾ ಮತ್ತೇನನ್ನು ಬೇಕಾದರೂ ಕೇಳು ; ಕೊಡುತ್ತೇನೆ. ಆದರೆ ನನ್ನ ಯಜ್ಞವು ಮಾತ್ರ ಇಲ್ಲಿಗೇ ಪರಿಸಮಾಪ್ತಿಯಾಗಕೂಡದು."

ಆಸ್ತೀಕನು ಹೇಳುತ್ತಾನೆ :

**ಸುವರ್ಣಂ ರಜತಂ ಗಾಶ್ಚ ನ ತ್ವಾಂ ರಾಜನ್ವೃಣೋಮ್ಯಹಮ್ ।**
**ಸತ್ರಂ ತೇ ವಿರಮತ್ವೇತತ್ಸ್ವಸ್ತಿ ಮಾತೃಕುಲಸ್ಯ ನಃ ॥೨೪॥**

"ಮಹಾರಾಜ! ನಿನ್ನಲ್ಲಿರುವ ಸುವರ್ಣವನ್ನೇ ಆಗಲೀ, ಬೆಳ್ಳಿಯನ್ನೇ ಆಗಲೀ, ಹಸುಗಳನ್ನೇ ಆಗಲೀ ನಾನು ಕೇಳತಕ್ಕವನಲ್ಲ. ನಿನ್ನ ಯಾಗವು ಈ ಕ್ಷಣದಲ್ಲಿಯೇ ನಿಲ್ಲಬೇಕು. ಈ ಒಂದು ವರವು ಮಾತ್ರವೇ ನನಗೆ ಬೇಕಾಗಿದೆ. ಈ ವರದಿಂದ ನಾನು ನನ್ನ ಮಾತೃಕುಲದ ಕಲ್ಯಾಣವನ್ನು ಸಾಧಿಸಬೇಕಾಗಿದೆ. ಆದುದರಿಂದ ನಿನ್ನ ವಚನದಂತೆ ಈ ವರವನ್ನು ಕೊಟ್ಟು ಯಜ್ಞವನ್ನು ನಿಲ್ಲಿಸು."

ಸೌತಿಗಳು ಹೇಳುತ್ತಾರೆ :

ಶೌನಕರೇ! ಪುಸಲಾಯಿಸುವ ಮಾತುಗಳಿಂದ ಆಸ್ತೀಕನ ನಿರ್ಧಾರವನ್ನು ಬದಲಾಯಿಸಲು ರಾಜನು ಪುನಃ ಪುನಃ ಪ್ರಯತ್ನಿಸಿದನು.

**ಅನ್ಯಂ ವರಯ ಭದ್ರಂ ತೇ ವರಂ ದ್ವಿಜವರೋತ್ತಮ ॥೨೬॥**

"ಬೇರೆ ಏನನ್ನಾದರೂ ಕೇಳು. ನನ್ನ ರಾಜ್ಯ-ಕೋಶಗಳನ್ನೇ ಕೇಳಿದರೂ ಕೊಟ್ಟುಬಿಡುವೆನು. ನಿನಗೆ ಮಂಗಳವಾಗಲಿ, ಬ್ರಾಹ್ಮಣೋತ್ತಮ! ಆದರೆ ಈ ಒಂದು ವರವನ್ನು ಮಾತ್ರ ಕೇಳಬೇಡ. ನನ್ನ ಯಜ್ಞವು ಪೂರ್ಣವಾಗದೇ ನಿಂತುಹೋಗಕೂಡದು. ಯೋಚಿಸಿ ಹೇಳು. ಬಾಲಕ! ನೀನು ಎಲ್ಲ ವರಗಳಿಗೂ ಅರ್ಹನಾಗಿರುವುದೇನೋ ನಿಜ. ನಿನಗೆ ಕೊಡಕೂಡದೆಂಬ ವಸ್ತುವೇ ಇಲ್ಲ. ಆದರೆ ನೀನು ಕೇಳುತ್ತಿರುವುದು ಅನರ್ಘ್ಯವಸ್ತುಗಳಲ್ಲಿಯೂ ಸೇರುವುದಿಲ್ಲ. ಇದರಿಂದ ನನ್ನ ಯಜ್ಞಕ್ಕೆ ನ್ಯೂನತೆಯೂ ಉಂಟಾಗುತ್ತದೆ. ಆದುದರಿಂದ ಬೇರೆ ಯಾವುದಾದರೂ ವರವನ್ನು ಕೇಳು. 'ಕೊಡಲು ಸಾಧ್ಯವೇ? ಇಲ್ಲವೇ?' ಎಂದು ಯೋಚಿಸದೆಯೇ ಕೊಟ್ಟುಬಿಡುತ್ತೇನೆ."

ಜನಮೇಜಯನು ಎಷ್ಟೇ ಪರಿಯಿಂದ ಹೇಳಿದರೂ ಆಸ್ತೀಕನು ಬೇರೆ ಯಾವ ವರವನ್ನೂ ಕೇಳಲಿಲ್ಲ. ವೇದವಿದರಾದ ಎಲ್ಲ ಸದಸ್ಯರೂ ಒಕ್ಕೊರಲಿನಿಂದ ರಾಜನನ್ನು ಕುರಿತು ಹೇಳಿದರು : 'ಲಭತಾಂ ಬ್ರಾಹ್ಮಣೋ ವರಮ್ – ಈ ಬ್ರಾಹ್ಮಣಬಾಲಕನಿಗೆ ಅವನು ಪ್ರಾರ್ಥಿಸುವ ವರವು ಲಭ್ಯವಾಗಲಿ."

ಜ೬ನೆಯ ಅಧ್ಯಾಯವು ಮುಗಿಯಿತು.

## ಅಗ್ನಿಕುಂಡದಲ್ಲಿ ದಗ್ಧವಾಗಿಹೋದ ಪ್ರಮುಖಸರ್ಪಗಳು

ಶೌನಕರು ಸೌತಿಗಳನ್ನು ಪ್ರಶ್ನಿಸುತ್ತಾರೆ :

**ಯೇ ಸರ್ಪಾಃ ಸರ್ಪಸತ್ರೇಽಸ್ಮಿನ್ಪತಿತಾ ಹವ್ಯವಾಹನೇ ।**
**ತೇಷಾಂ ನಾಮಾನಿ ಸರ್ವೇಷಾಂ ಶ್ರೋತುಮಿಚ್ಛಾಮಿ ಸೂತಜ ॥೧॥**

"ಸೂತಪುತ್ರನೇ! ಜನಮೇಜಯನ ಯಜ್ಞಕುಂಡದಲ್ಲಿ ಯಾವ- ಯಾವ ಸರ್ಪಗಳು ಬಿದ್ದು ಅಸುನೀಗಿದುವೋ ಆ ಎಲ್ಲ ಸರ್ಪಗಳ ಹೆಸರುಗಳನ್ನೂ ಕೇಳಿ ತಿಳಿದುಕೊಳ್ಳಬೇಕೆಂಬ ಆಶಯವಿದೆ."

"ಬ್ರಾಹ್ಮಣೋತ್ತಮರೇ! ನೀವು ಕೇಳುತ್ತಿರುವಂತೆ ಯಾಗದಲ್ಲಿ ದಗ್ಧವಾಗಿ ಹೋದ ಎಲ್ಲ ಸರ್ಪಗಳ ಹೆಸರುಗಳನ್ನೂ ಹೇಳುವ ಸಾಧ್ಯತೆಯೇ ಇಲ್ಲ. ಏಕೆಂದರೆ : ಮಂತ್ರದಿಂದ ಆಕೃಷ್ಟವಾಗಿ ಅಗ್ನಿಕುಂಡಕ್ಕೆ ಬಿದ್ದ ಸರ್ಪಗಳು ಎಷ್ಟೋ ಸಾವಿರ, ಎಷ್ಟೋ ಲಕ್ಷ, ಪ್ರಯುತ-ಅರ್ಬುದ-ನ್ಯರ್ಬುದ ಸಂಖ್ಯೆಯಲ್ಲಿ ಬಿದ್ದುವು. ನಿಷ್ಕೃಷ್ಟವಾಗಿ ಅವುಗಳ ಸಂಖ್ಯೆಯನ್ನೇ ಹೇಳಲು ಅಸಾಧ್ಯ ವಾಗಿರುವಾಗ ಅವುಗಳ ಹೆಸರುಗಳನ್ನು ಹೇಳುವ ಸಾಧ್ಯತೆಯಿರುವುದೇ? ಮುಖ್ಯ-ಮುಖ್ಯ ಸರ್ಪಗಳ ಹೆಸರುಗಳನ್ನು ಹೇಳಿ ಋತ್ವಿಜರು ಅಗ್ನಿಗೆ ಆಹುತಿ ಕೊಡುತ್ತಿದ್ದರು. ಅವುಗಳಲ್ಲಿ ನನ್ನ ಜ್ಞಾಪಕಕ್ಕೆ ಎಷ್ಟು ಹೆಸರುಗಳು ಬರುವುವೋ ಅಷ್ಟು ಹೆಸರುಗಳನ್ನು ಹೇಳುತ್ತಾ ಹೋಗುತ್ತೇನೆ.

ವಾಸುಕಿಯ ಕುಲದಲ್ಲಿ ಹುಟ್ಟಿ ಅಗ್ನಿಯಲ್ಲಿ ದಗ್ಧವಾದ ಸರ್ಪಗಳ ಹೆಸರುಗಳನ್ನು ಪ್ರಥಮತಃ ಹೇಳುತ್ತೇನೆ. ಆ ಸರ್ಪಗಳಲ್ಲಿ ನೀಲವಾದುವೂ, ಬಿಳುಪಾದುವೂ ಇದ್ದುವು. ಅವೆಲ್ಲವೂ ಮಹಾಕಾಯಗಳಾಗಿಯೂ, ಘೋರ ವಾದ ವಿಷವನ್ನು ಹೊಂದಿದುವುಗಳಾಗಿಯೂ ಇದ್ದುವು. ಅವುಗಳೆಲ್ಲವೂ ತಾಯಿಯ ಶಾಪದಿಂದ ಪೀಡಿತವಾಗಿ ಮಂತ್ರದಿಂದ ಆಕೃಷ್ಟವಾದೊಡನೆಯೇ ಪ್ರಜ್ಞೆಯನ್ನು ತೊರೆದು ಬಹಳ ಸಂಕಟದಿಂದ ಅಗ್ನಿಕುಂಡದಲ್ಲಿ ಬೀಳುತ್ತಿದ್ದುವು. ಅವುಗಳಲ್ಲಿ ಮುಖ್ಯವಾದುವೆಂದರೆ : ಕೋಟಿಶ, ಮಾನಸ, ಪೂರ್ಣ, ಶಲ, ಪಾಲ, ಹಲೀಮಕ, ಪಿಚ್ಛಲ, ಕೌಣಪ, ಚಕ್ರ, ಕಾಲವೇಗ,

ಪ್ರಕಾಲನ, ಹಿರಣ್ಯಬಾಹು, ಶರಣ, ಕಕ್ಷಕ, ಕಾಲದಂತಕ–ಇವುಗಳು. ವಾಸುಕಿಯ ವಂಶದಲ್ಲಿ ಹುಟ್ಟಿದ್ದ ಆ ಸರ್ಪಗಳೆಲ್ಲವೂ ಜನಮೇಜಯನ ಸರ್ಪಯಾಗದ ಅಗ್ನಿಕುಂಡದಲ್ಲಿ ಬಿದ್ದುವು. ಆ ಪ್ರಮುಖಸರ್ಪಗಳೇ ಅಲ್ಲದೇ ವಾಸುಕಿಯ ಕುಲದಲ್ಲಿ ಹುಟ್ಟಿದ್ದ ಘೋರರೂಪವನ್ನು ಧರಿಸಿದ್ದ, ಮಹಾಬಲಯುಕ್ತವಾದ ಸಾವಿರಾರು ಹಾವುಗಳು ಯಜ್ಞೇಶ್ವರನಲ್ಲಿ ಬಿದ್ದುವು. ಮುಂದೆ ನಾನು ತಕ್ಷಕನ ಕುಲದಲ್ಲಿ ಹುಟ್ಟಿದ ಸರ್ಪಮುಖ್ಯರ ಹೆಸರುಗಳನ್ನು ಹೇಳುತ್ತೇನೆ, ಕೇಳಿರಿ : ಪುಚ್ಛಾಂಡಕ, ಮಂಡಲಕ, ಪಿಂಡಸೇಕ್ತಾ, ರಭೇಣಕ, ಉಚ್ಛಿಕ, ಶರಭ, ಭಂಗ, ಬಿಲ್ವತೇಜ, ವಿರೋಹಣ, ಶಿಲೀ, ಶಲಕರ, ಮೂಕ, ಸುಕುಮಾರ, ಪ್ರವೇಪನ, ಮುದ್ಗರ, ಶಿಶುರೋಮ, ಸುರೋಮ, ಮಹಾಹನು–ಇವುಗಳೆಲ್ಲವೂ ತಕ್ಷಕನ ಪೀಳಿಗೆಯವು.

ಪಾರಾವತ, ಪಾರಿಜಾತ, ಪಾಂಡರ, ಹರಿಣ, ಕೃಶ, ವಿಹಂಗ, ಶರಭ, ಮೇದ, ಪ್ರಮೋದ, ಸಂಹತಾಪನ–ಇವುಗಳು ಐರಾವತವೆಂಬ ಮಹಾಸರ್ಪದ ಪೀಳಿಗೆಯವು.

ಏರಕ, ಕುಂಡಲ, ವೇಣೀ, ವೇಣೀಸ್ಕಂಧ, ಕುಮಾರಕ, ಬಾಹುಕ, ಶೃಂಗವೇರ, ಧೂರ್ತಕ, ಪ್ರಾತರ, ಆತಕ–ಇವುಗಳು ಕೌರವ್ಯವೆಂಬ ಮಹಾಸರ್ಪದ ಕುಲದಲ್ಲಿ ಹುಟ್ಟಿದುವುಗಳು.

ಶೌನಕರೇ! ಮುಂದೆ ಧೃತರಾಷ್ಟ್ರವೆಂಬ ಮಹಾಸರ್ಪದ ವಂಶದಲ್ಲಿ ಹುಟ್ಟಿ ಅಗ್ನಿಗಾಹುತಿಯಾದ ಸರ್ಪಗಳ ಹೆಸರುಗಳನ್ನು ಹೇಳುತ್ತೇನೆ :

ಶಂಕುಕರ್ಣ, ಪಿಠರಕ, ಕುಠಾರ, ಮುಖಸೇಚಕ, ಪೂರ್ಣಾಂಗದ, ಪೂರ್ಣಮುಖ, ಪ್ರಹಾಸ, ಶಕುನಿ, ದರಿ, ಅಮಾಹಠ, ಕಾಮಠಕ, ಸುಷೇಣ, ಮಾನಸ, ಅವ್ಯಯ, ಭೈರವ, ಮುಂಡವೇದಾಂಗ, ಪಿಶಂಗ, ಉದ್ರಪಾರಕ, ಋಷಭ, ವೇಗವಂತ, ನಾಗ, ಪಿಂಡಾರಕ, ಮಹಾಹನು, ರಕ್ತಾಂಗ, ಸರ್ವಸಾರಂಗ, ಸಮೃದ್ಧ, ಪಟವಾಸಕ, ವರಾಹಕ, ವೀರಣಕ, ಸುಚಿತ್ರ, ಚಿತ್ರವೇಗಿಕ, ಪರಾಶರ, ತರುಣಕ, ಮಣಿ, ಸ್ಕಂಧ, ಆರುಣಿ–ಇವುಗಳು ಧೃತರಾಷ್ಟ್ರನೆಂಬ ಸರ್ಪರಾಜನ ಕುಲದಲ್ಲಿ ಹುಟ್ಟಿ ಜನಮೇಜಯನ ಯಜ್ಞದಲ್ಲಿ ಆಹುತಿಯಾದುವು. ಶೌನಕರೇ! ನಾನೀಗ ಸರ್ಪಗಳಲ್ಲಿನ ಮುಖ್ಯಕುಲಗಳು

ಮತ್ತು ಅವುಗಳಲ್ಲಿ ಅತಿಮುಖ್ಯರೆನಿಸಿದವರ ನಾಮಧೇಯಗಳನ್ನು ಮಾತ್ರವೇ ಹೇಳಿದ್ದೇನೆ. ಆ ಮುಖ್ಯಸರ್ಪಗಳ ಮಕ್ಕಳು, ಮೊಮ್ಮಕ್ಕಳೆಲ್ಲವೂ ಶತ-ಸಹಸ್ರ ಸಂಖ್ಯೆಯಲ್ಲಿ ಜನಮೇಜಯನ ಸರ್ಪಯಾಗದಲ್ಲಿ ಅಗ್ನಿಗೆ ಆಹುತಿಯಾದುವು. ಅವುಗಳಲ್ಲಿ ಮೂರು ಹೆಡೆ ಸರ್ಪಗಳು, ಏಳು ಹೆಡೆ ಸರ್ಪಗಳೂ, ಹತ್ತು ಹೆಡೆ ಸರ್ಪಗಳೂ ಇದ್ದುವು. ಅವುಗಳೆಲ್ಲವೂ ಕಾಲಾಗ್ನಿಗೆ ಸಮಾನವಾದ ವಿಷವನ್ನು ಹೊಂದಿದ್ದುವು. ದೊಡ್ಡ-ದೊಡ್ಡ ಶರೀರವುಳ್ಳವುಗಳಾಗಿಯೂ, ಶೀಘ್ರವಾದ ಗಮನವುಳ್ಳವುಗಳಾಗಿಯೂ, ಪರ್ವತಶಿಖರದಷ್ಟು ಎತ್ತರವಾಗಿಯೂ ಇದ್ದುವು. ಕೆಲವು ಸರ್ಪಗಳು ಯೋಜನದಷ್ಟು ಉದ್ದವಾಗಿಯೂ, ವಿಸ್ತಾರ ವಾಗಿಯೂ, ಕೆಲವು ಎರಡು ಯೋಜನಗಳಷ್ಟು ಉದ್ದವಾಗಿಯೂ ಇದ್ದುವು. ಅವುಗಳಿಗೆ ತಮಗೆ ಬೇಕು-ಬೇಕಾದ ರೂಪಗಳನ್ನು ಹೊಂದುವ ಸಾಮರ್ಥ್ಯ ವಿದ್ದಿತು. ಬಹುಶಕ್ತಿಯುತವಾಗಿದ್ದುವು. ಪ್ರಜ್ವಲಿಸುವ ಯಜ್ಞೇಶ್ವರನಂತೆ ಘೋರವಾದ ವಿಷವನ್ನು ಹೊಂದಿದ್ದುವು. ಆ ಸರ್ಪಗಳೆಲ್ಲವೂ ಬ್ರಹ್ಮದಂಡಕ್ಕೆ ಸದೃಶವಾದ ತಾಯಿಯ ಶಾಪದಿಂದಾಗಿ ಜನಮೇಜಯನ ಸರ್ಪಯಾಗದಲ್ಲಿ ಯಜ್ಞೇಶ್ವರನಲ್ಲಿ ಬಿದ್ದು ಪ್ರಾಣತೊರೆದುವು."

೫೭ನೆಯ ಅಧ್ಯಾಯವು ಮುಗಿಯಿತು.

೫೮ನೆಯ ಅಧ್ಯಾಯ ಆಸ್ತೀಕಪರ್ವ (ಮುಂದುವರಿದಿದೆ.)

## ಯಜ್ಞ ಪರಿಸಮಾಪ್ತಿ: ಆಸ್ತೀಕನಿಗೆ ಸರ್ಪಗಳಿಂದ ವರಪ್ರದಾನ

ಸೌತಿಗಳು ಹೇಳುತ್ತಾರೆ :

**ಇದಮತ್ಯದ್ಭುತಂ ಚಾನ್ಯದಾಸ್ತೀಕಸ್ಯಾನುಶುಶ್ರುಮ ।**
**ತಥಾ ವರೈಶ್ಛನ್ದ್ಯಮಾನೋ ರಾಜ್ಞಾ ಪಾರಿಕ್ಷಿತೇನ ಹಿ ॥೧॥**

"ಶೌನಕರೇ! ಆಸ್ತೀಕನ ಸಂಬಂಧವಾದ ಮತ್ತೊಂದು ಅತ್ಯದ್ಭುತ ಘಟನೆಯನ್ನು ಹೇಳುತ್ತೇನೆ, ಕೇಳಿರಿ : ಇಂದ್ರನಿಂದ ವಿಸೃಷ್ಟನಾದ ತಕ್ಷಕನು ಎಷ್ಟು ಹೊತ್ತಾದರೂ ಯಜ್ಞಕುಂಡದೊಳಗೆ ಬೀಳಲೇ ಇಲ್ಲ. ಅಂತರಿಕ್ಷ ದಲ್ಲಿಯೇ ಸ್ತಬ್ಧನಾಗಿ ನಿಂತುಬಿಟ್ಟನು. ತಕ್ಷಕನು ಯಜ್ಞಕುಂಡದಲ್ಲಿ ಬೀಳದೇ

ಇದ್ದುದು ಜನಮೇಜಯನ ಚಿಂತೆಗೆ ಕಾರಣವಾಯಿತು. ಯಜ್ಞೇಶ್ವರನು ಧಗ-ಧಗನೆ ಪ್ರಜ್ವಲಿಸುತ್ತಿದ್ದನು. ಋತ್ವಿಜರು ವಿಧಿವತ್ತಾಗಿ ತಕ್ಷಕನನ್ನು ಮಂತ್ರ ದಿಂದ ಆಹ್ವಾನಿಸಿ ಸ್ವಾಹಾಕಾರವನ್ನು ಹೇಳಿಬಿಟ್ಟಿದ್ದರು. ಇಷ್ಟೆಲ್ಲ ಕರ್ಮಗಳು ಮುಗಿದಿದ್ದರೂ ಭಯಪೀಡಿತನಾದ ತಕ್ಷಕನು ಯಜ್ಞೇಶ್ವರನಲ್ಲಿ ಬೀಳದೇ ಆಕಾಶದಲ್ಲೇ ಇದ್ದುಬಿಟ್ಟನು."

ಶೌನಕರು ಹೇಳುತ್ತಾರೆ :

**ಕಿಂ ಸೂತ ತೇಷಾಂ ವಿಪ್ರಾಣಾಂ ಮನ್ತ್ರಗ್ರಾಮೋ ಮನೀಷಿಣಾಮ್ ।**
**ನ ಪ್ರತ್ಯಭಾತ್ತದಾಗ್ನೌ ಯತ್ಸ ಪಪಾತ ನ ತಕ್ಷಕಃ ॥೪॥**

"ಸೂತಪುತ್ರ! ಹಾಗಾದರೆ, ತಕ್ಷಕನನ್ನು ಆಕರ್ಷಿಸಿ ಅಗ್ನಿಕುಂಡದಲ್ಲಿ ಬೀಳಿಸುವ ಮಂತ್ರಗ್ರಾಮವು ಮನೀಷಿಗಳಾದ ಆ ಬ್ರಾಹ್ಮಣರಿಗೆ ತಿಳಿದಿರ ಲಿಲ್ಲವೇ? ಅಥವಾ ಅವರು ಮಾಡಿದ ಪ್ರಯೋಗದಲ್ಲಿ ದೋಷವೇನಾದರೂ ಇದ್ದಿತೇ? ಎಲ್ಲ ಸರ್ಪಗಳಂತೆ ತಕ್ಷಕನೂ ಏಕೆ ಅಗ್ನಿಕುಂಡದಲ್ಲಿ ಬೀಳಲಿಲ್ಲ? ನನಗಂತೂ ಇದು ಅತ್ಯಾಶ್ಚರ್ಯವೆನಿಸಿದೆ."

ಸೌತಿಗಳು ಹೇಳುತ್ತಾರೆ :

**ತಮಿನ್ದ್ರಹಸ್ತಾದ್ವಿತ್ರಸ್ತಂ ಸಸಂಜ್ಞಂ ಪನ್ನಗೋತ್ತಮಮ್ ।**
**ಆಸ್ತೀಕಸ್ತಿಷ್ಠ ತಿಷ್ಠೇತಿ ವಾಚಸ್ತ್ರಿಸ್ರೋಽಭ್ಯುದೈರಯತ್ ॥೫॥**

**ವಿತಷ್ಠೇ ಸೋಽನ್ತರಿಕ್ಷೇ ಚ ಹೃದಯೇನ ವಿದೂಯತಾ ।**
**ಯಥಾ ತಿಷ್ಠತಿ ವೈ ಕಶ್ಚಿತ್ಖಂ ಚ ಗಾಂ ಚಾನ್ತರಾ ನರಃ ॥೬॥**

"ಶೌನಕರೇ! ಮಂತ್ರಗ್ರಾಮದ ಮಹತ್ತರಶಕ್ತಿಯನ್ನೂ ಕುಂಠಿತ ಗೊಳಿಸುವಷ್ಟು ಸಾಮರ್ಥ್ಯವಿದ್ದ ಆಸ್ತೀಕನ ಆತ್ಮಶಕ್ತಿಯೇ ಇದಕ್ಕೆ ಮುಖ್ಯ ಕಾರಣ. ಇಂದ್ರನಿಂದ ವಿಸರ್ಜಿತನಾದ ತಕ್ಷಕನು ಪ್ರಜ್ಞಾಹೀನನಾಗಿದ್ದನು. ಮುಂದಿನ ಒಂದೆರಡು ಕ್ಷಣಗಳಲ್ಲಿ ಅವನು ಅಗ್ನಿಯಲ್ಲಿ ಬಿದ್ದು ಭಸ್ಮವಾಗಿ ಹೋಗಿಬಿಡುವನೆಂದಿದ್ದಾಗ ಸತ್ರವನ್ನು ಒಡನೆಯೇ ನಿಲ್ಲಿಸುವಂತೆ ರಾಜ ನಿಂದ ವರವನ್ನು ಕೇಳಿದ ಆಸ್ತೀಕನು ಅಗ್ನಿಕುಂಡದಲ್ಲಿ ಬೀಳುತ್ತಿದ್ದ ತಕ್ಷಕನನ್ನು

ಕುರಿತು ಮೂರು ಬಾರಿ–'ತಿಷ್ಠ! ತಿಷ್ಠ! ತಿಷ್ಠ!' 'ನಿಲ್ಲು-ನಿಲ್ಲು-ನಿಲ್ಲು!'–ಎಂದು ಹೇಳಿದನು.

ಆಸ್ತೀಕನು ಹೀಗೆ ಹೇಳಿದೊಡನೆಯೇ ಭಯಪೀಡಿತನಾಗಿದ್ದ ತಕ್ಷಕನು ಮನುಷ್ಯನೊಬ್ಬನು ಆಕಾಶಕ್ಕೂ ಭೂಮಿಗೂ ಮಧ್ಯದಲ್ಲಿ ನಿಲ್ಲುವಂತೆ–ಆಕಾಶದಲ್ಲಿಯೇ ನಿಂತುಬಿಟ್ಟನು.

ರಾಜನು ಆಸ್ತೀಕನ ಪರಮಾದ್ಭುತವಾದ ಶಕ್ತಿಯನ್ನು ಕಂಡುಕೊಂಡನು. ಆ ಸಮಯಕ್ಕೆ ಸರಿಯಾಗಿ ಸದಸ್ಯರೂ ಆಸ್ತೀಕನ ಆಶಯವನ್ನು



ಪೂರ್ಣಮಾಡುವಂತೆ ರಾಜನನ್ನು ಒತ್ತಾಯಪಡಿಸಿದರು. ಒಡನೆಯೇ ಜನಮೇಜಯನು ಹೇಳಿದನು :

**ಕಾಮಮೇತದ್ಭವೇತ್ವೇವಂ ಯಥಾಸ್ತೀಕಸ್ಯ ಭಾಷಿತಮ್ ।**

**ಸಮಾಪ್ಯತಾಮಿದಂ ಕರ್ಮ ಪನ್ನಗಾಃ ಸನ್ತ್ವನಾಮಯಾಃ ।**
**ಪ್ರೀಯತಾಮಯಮಾಸ್ತೀಕಃ ಸತ್ಯಂ ಸೂತವಚೋಽಸ್ತು ತತ್ ॥೮॥**

"ಆಸ್ತೀಕನು ಅಪೇಕ್ಷಿಸಿದುದನ್ನು ನಾನು ಕೊಟ್ಟುಬಿಟ್ಟಿದ್ದೇನೆ. ಅವನ ಪ್ರಾರ್ಥನೆಯಂತೆ ಈ ಸರ್ಪಯಾಗವು ಇಲ್ಲಿಗೆ ಪರಿಸಮಾಪ್ತಿಯಾಗಲಿ. ಅಳಿದುಳಿದಿರುವ ಸರ್ಪಗಳು ಕುಶಲದಿಂದಿರಲಿ. ಆಸ್ತೀಕನು ಸುಪ್ರೀತನಾಗಲಿ ಮತ್ತು ನಮ್ಮ ಸ್ಥಪತಿಯು ಹೇಳಿದ ಮಾತೂ ಸತ್ಯವಾಗಿ ಪರಿಣಮಿಸಲಿ."

ಜನಮೇಜಯನು ಯಜ್ಞವನ್ನು ನಿಲ್ಲಿಸಿದುದಕ್ಕಾಗಿ ಸಂತೋಷಸೂಚಕವಾದ ಕಲ-ಕಲಾಶಬ್ದಗಳು ಯಜ್ಞಮಂಟಪದಲ್ಲಿ ಕೇಳಿಬಂದುವು. ಜನಮೇಜಯನೂ ಖಿನ್ನನಾಗದೇ ಆಸ್ತೀಕನ ವಿಷಯದಲ್ಲಿ ಸುಪ್ರೀತನಾದನು. ಯಜ್ಞಕ್ಕೆ ಆಗಮಿಸಿದ್ದ ಋತ್ವಿಜರಿಗೂ, ಸದಸ್ಯರಿಗೂ ಯಥೇಚ್ಛವಾಗಿ ದಾನದಕ್ಷಿಣೆಗಳನ್ನು ಕೊಟ್ಟನು. ಯಜ್ಞವು ಪ್ರಾರಂಭವಾಗುವ ಮೊದಲೇ–'ಬ್ರಾಹ್ಮಣನೊಬ್ಬನಿಂದ ಯಾಗವು ಮಧ್ಯದಲ್ಲಿಯೇ ನಿಂತುಹೋಗುವುದು'–ಎಂದು ಭವಿಷ್ಯವನ್ನು ಹೇಳಿದ್ದ ಸ್ಥಪತಿಯಾದ ಲೋಹಿತಾಕ್ಷನಿಗೆ ರಾಜನು ಅಪಾರವಾದ ಸಂಪತ್ತನ್ನು ಬಹುಮಾನವನ್ನಾಗಿ ಕೊಟ್ಟು ಸಮ್ಮಾನಿಸಿದನು.

ಎಲ್ಲರನ್ನೂ ಭೋಜನದಿಂದಲೂ, ಯಥಾಯೋಗ್ಯವಾದ ಸಂಪತ್ತಿನಿಂದಲೂ, ಅಮೂಲ್ಯವಾದ ವಸ್ತ್ರಗಳಿಂದಲೂ ಸಮ್ಮಾನಿಸಿದನಂತರ ಯಥಾವಿಧಿಯಾಗಿ ಯಜ್ಞಕ್ಕೆ ಅವಭೃಥಮಾಡಿದನು.

ಅನಂತರದಲ್ಲಿ ಕೃತಕೃತ್ಯನಾದ, ಮನೀಷಿಯಾದ ಆಸ್ತೀಕನನ್ನೂ ಅವನ ವಿಷಯದಲ್ಲಿ ಸುಪ್ರೀತನಾದ ರಾಜನು ಯಥೋಚಿತವಾಗಿ ಸತ್ಕರಿಸಿ, ಮುಂದೆ ತಾನು ಮಾಡಲಿರುವ ಅಶ್ವಮೇಧಯಾಗಕ್ಕೆ ಸದಸ್ಯನಾಗಿ ದಯಮಾಡಿಸಬೇಕೆಂದು ಅವನನ್ನು ಆಗಲೇ ಆಹ್ವಾನಿಸಿ, ಸರ್ಪಲೋಕಕ್ಕೆ ಬೀಳ್ಕೊಟ್ಟನು.

ಆಸ್ತೀಕನೂ ಹಾಗೆಯೇ ಆಗಲೆಂದು ಆಮಂತ್ರಣವನ್ನು ಸ್ವೀಕರಿಸಿ ರಾಜನನ್ನು ಸಂತೋಷಗೊಳಿಸಿ, ತಾನೂ ಸಂತೋಷಭರಿತನಾಗಿ, ಬಂದ

ಕಾರ್ಯವನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿ, ತನ್ನ ಮಾವನಾದ ವಾಸುಕಿಯ ಬಳಿಗೆ ಧಾವಿಸಿದನು.

ಮಾವನಿಗೂ ಮತ್ತು ತಾಯಿಗೂ ನಮಸ್ಕರಿಸಿ ಆಸ್ತೀಕನು ಜನಮೇಜಯನ ಸರ್ಪಯಾಗದಲ್ಲಿ ನಡೆದ ವೃತ್ತಾಂತವೆಲ್ಲವನ್ನೂ ವಿಶದವಾಗಿ ತಿಳಿಯಪಡಿಸಿದನು. ಆಸ್ತೀಕನ ಮಾತನ್ನು ಕೇಳಿ ಜರತ್ಕಾರುವಿಗೂ, ವಾಸುಕಿಗೂ ಮತ್ತು ಅಲ್ಲಿದ್ದ ಸರ್ಪಗಳಿಗೂ ಬಹುವಾದ ಸಂತೋಷವಾಯಿತು. ಆಸ್ತೀಕನ ವಿಷಯದಲ್ಲಿ ಬಹುಪ್ರೀತರಾದ ನಾಗಶ್ರೇಷ್ಠರು ಅವನನ್ನು ಪದೇ-ಪದೇ ಕೇಳತೊಡಗಿದರು :

**ಕಿಂ ತೇ ಪ್ರಿಯಂ ಕರವಾಮಾದ್ಯ ವಿದ್ವನ್ ।**
**ಪ್ರೀತಾ ವಯಂ ಮೋಕ್ಷಿತಾಶ್ಚೈವ ಸರ್ವಂ**
**ಕಾಮಂ ಕಿಂ ತೇ ಕರವಾಮಾದ್ಯ ವತ್ಸ ॥೨೦॥**

"ಆಸ್ತೀಕ! ನಾವು ನಿನಗೆ ಪ್ರಿಯವಾದ ಯಾವ ಕಾರ್ಯವನ್ನು ಮಾಡಿಕೊಡಬೇಕೆಂಬುದನ್ನು ಹೇಳು. ವಿದ್ವಾಂಸನೇ! ನೀನು ನಮ್ಮೆಲ್ಲರನ್ನೂ ಆಪತ್ತಿನಿಂದ ವಿಮುಕ್ತಿಗೊಳಿಸಿರುವೆ. ಇದರಿಂದ ನಾವು ಸುಪ್ರೀತರಾಗಿದ್ದೇವೆ. ನಿನ್ನ ಯಾವ ಯಾವ ಮನೋರಥಗಳನ್ನು ಪೂರ್ಣಗೊಳಿಸಬೇಕಾಗಿರುವುದೆಂಬುದನ್ನು ಹೇಳು."

ಆಸ್ತೀಕನು ಈ ವರವನ್ನು ಕೇಳಿದನು :

**ಸಾಯಂ ಪ್ರಾತರ್ಯೇ ಪ್ರಸನ್ನಾತ್ಮರೂಪಾ**
**ಲೋಕೇ ವಿಪ್ರಾ ಮಾನವಾ ಯೇ ಪರೇಽಪಿ ।**
**ಧರ್ಮಾಖ್ಯಾನಂ ಯೇ ಪಠೇಯುರ್ಮಮೇದಂ**
**ತೇಷಾಂ ಯುಷ್ಮನ್ನೈವ ಕಿಂಚಿದ್ಭಯಂ ಸ್ಯಾತ್ ॥೨೧॥**

"ಲೋಕದಲ್ಲಿ–ಬ್ರಾಹ್ಮಣರೇ ಆಗಲೀ, ಇತರ ಮಾನವರೇ ಆಗಲೀ–ಈ ನನ್ನ ಧರ್ಮಾಖ್ಯಾನವನ್ನು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಪ್ರಸನ್ನಾತ್ಮರಾಗಿ ( ಏಕಾಗ್ರಚಿತ್ತರಾಗಿ ) ಯಾರು ಪಠನಮಾಡುತ್ತಾರೆಯೋ ಅವರಿಗೆ ನಿಮ್ಮಿಂದ ಯಾವ ವಿಧವಾದ ಭಯವೂ ಇರಕೂಡದು. (ಅಂತಹವರನ್ನು ನೀವು ಯಾವ ಕಾರಣದಿಂದಲೂ ಬಾಧೆಪಡಿಸಬಾರದು )"

ಭಾಗಿನೇಯನು ( ತಂಗಿಯ ಮಗನು ) ಆ ವರವನ್ನು ಕೇಳಿದೊಡನೆಯೇ ಸರ್ಪಗಳಿಗೆ ಮಹಾನಂದವಾಯಿತು. "ಭಾಗಿನೇಯ! ನೀನು ಕೇಳಿದ ಈ ವರವನ್ನು ನಾವು ಖಂಡಿತವಾಗಿಯೂ ವಿನಮ್ರರಾಗಿ ನಡೆಸಿಕೊಡುತ್ತೇವೆ.

ಇಷ್ಟು ಮಾತ್ರವಲ್ಲ :

**ಅಸಿತಂ ಚಾರ್ತಿಮನ್ತಂ ಚ ಸುನೀಥಂ ಚಾಪಿ ಯಃ ಸ್ಮರೇತ್ ।**
**ದಿವಾ ವಾ ಯದಿ ವಾ ರಾತ್ರೌ ನಾಸ್ಯ ಸರ್ಪಭಯಂ ಭವೇತ್ ॥೨೩॥**

ಅಸಿತ, ಆರ್ತಿಮಂತ ಮತ್ತು ಸುನೀಥ–ಈ ನಾಮಗಳನ್ನು ಹಗಲಿನಲ್ಲಿಯೇ ಆಗಲೀ, ರಾತ್ರಿಯಲ್ಲಿಯೇ ಆಗಲೀ ಯಾರು ಪುನಶ್ಚರಣೆಮಾಡುತ್ತಾರೆಯೋ ಅಥವಾ ಸ್ಮರಿಸುತ್ತಾರೆಯೋ ಅವರಿಗೂ ಸಹ ಸರ್ಪಗಳಿಂದ ಭಯವಿರುವುದಿಲ್ಲ.

**ಯೋ ಜರತ್ಕಾರುಣಾ ಜಾತೋ ಜರತ್ಕಾರ್ವಾಂ ಮಹಾಯಶಾಃ ।**
**ಆಸ್ತೀಕಃ ಸರ್ಪಸತ್ರೇ ವಃ ಪನ್ನಗಾನ್ಯೋಽಭ್ಯರಕ್ಷತ ।**
**ತಂ ಸ್ಮರನ್ತಂ ಮಹಾಭಾಗಾ ನ ಮಾಂ ಹಿಂಸಿತುಮರ್ಹಥ ॥೨೪॥**

'ಜರತ್ಕಾರುಮಹರ್ಷಿಯಿಂದ ಜರತ್ಕಾರುವೆಂಬ ನಾಗಕನ್ಯೆಯಲ್ಲಿ ಮಹಾಮಹಿಮನಾದ ಯಾವನು ಜನಿಸಿದನೋ, ಯಾವನು ಸರ್ಪಯಾಗದಲ್ಲಿ ಭಸ್ಮೀಭೂತರಾಗುತ್ತಿದ್ದ ನಿಮ್ಮನ್ನು ಸಂರಕ್ಷಿಸಿದನೋ–ಅಂತಹ ಮಹಾಮಹಿಮನಾದ ಆಸ್ತೀಕನನ್ನು ಸ್ಮರಿಸುತ್ತಿರುವ ನನ್ನನ್ನು ಮಹಾಭಾಗರಾದ ನೀವು ಹಿಂಸಿಸುವುದು ಯೋಗ್ಯವಲ್ಲ' ಹೀಗೆಂದು ಹೇಳಿಕೊಂಡರೂ, ಈ ಶ್ಲೋಕವನ್ನು ಒಂದೆರಡುಬಾರಿ ಉಚ್ಚರಿಸಿದರೂ ಸರ್ಪಗಳು ಹತ್ತಿರವೂ ಸುಳಿಯುವುದಿಲ್ಲ. ಸರ್ಪವು ಕಣ್ಣಿಗೆ ಬಿದ್ದೊಡನೆಯೇ ಹೀಗೆ ಹೇಳಬೇಕು :

**ಸರ್ಪಾಪಸರ್ಪ ಭದ್ರಂ ತೇ ಗಚ್ಛ ಸರ್ಪ ಮಹಾವಿಷ ।**
**ಜನಮೇಜಯಯಜ್ಞಾನ್ತೇ ಆಸ್ತೀಕವಚನಂ ಸ್ಮರ ॥೨೫॥**

"ಮಹಾವಿಷವುಳ್ಳ ಮಹಾಸರ್ಪವೇ! ಅತ್ತ ಸರಿ. ಇಲ್ಲಿಂದ ಹೊರಟು ಹೋಗು, ನಿನಗೆ ಮಂಗಳವಾಗಲಿ. ಜನಮೇಜಯನು ಮಾಡಿದ ಸರ್ಪ

ಯಾಗದ ಅಂತ್ಯದಲ್ಲಿ ಮಹಾಮಹಿಮನಾದ ಆಸ್ತೀಕನು ನಿನ್ನ ಪೂರ್ವಜರನ್ನು ಕುರಿತು ಏನು ಹೇಳಿದ್ದನೆಂಬುದನ್ನು ಸ್ಮರಿಸು"–ಹೀಗೆಂದು ಹೇಳುವವನಿಗೂ ಸರ್ಪಗಳ ಭಯವಿರುವುದಿಲ್ಲ.

**ಆಸ್ತೀಕಸ್ಯ ವಚಃ ಶ್ರುತ್ವಾ ಯಃ ಸರ್ಪೋ ನ ನಿವರ್ತತೇ ।**
**ಶತಧಾ ಭಿದ್ಯತೇ ಮೂರ್ಧ್ನಿ ಶಿಂಶವೃಕ್ಷಫಲಂ ಯಥಾ ॥೨೬॥**

ಆಸ್ತೀಕನು ಹೇಳಿದ ಮಾತುಗಳನ್ನು ಜ್ಞಾಪಕಕ್ಕೆ ತಂದಮೇಲೂ ಯಾವ ಸರ್ಪವು ತನ್ನ ಪಾಡಿಗೆ ತಾನು ಹೊರಟುಹೋಗುವುದಿಲ್ಲವೋ–ಅಂತಹ ಸರ್ಪದ ತಲೆಯು ಶಿಂಶವೃಕ್ಷದ ಫಲದಂತೆ ನೂರಾರು ಹೋಳಾಗುತ್ತದೆ."

ಸರ್ಪಶ್ರೇಷ್ಠರ ಈ ಮಾತುಗಳನ್ನು ಕೇಳಿ ಆಸ್ತೀಕನು ಸುಪ್ರಸನ್ನನಾದನು. ಮಾತುಲನ ಅನುಮತಿಯನ್ನು ಪಡೆದು ತನ್ನ ನಿವಾಸಕ್ಕೆ ತೆರಳಿದನು.

ಶೌನಕರೇ! ಈ ರೀತಿಯಾಗಿ ಆಸ್ತೀಕನು ಜನಮೇಜಯನ ಸರ್ಪ ಯಾಗದ ಸಮಯದಲ್ಲಿ ಆಗುವುದರಲ್ಲಿದ್ದ ಸರ್ಪಗಳ ಸರ್ವನಾಶವನ್ನು ತಪ್ಪಿಸಿ, ಸರ್ಪವಂಶೋದ್ಧಾರಕನೆಂಬ ಖ್ಯಾತಿಯನ್ನೂ ಪಡೆದು, ಜನಮೇ ಜಯನಿಂದಲೂ ಸರ್ಪಗಳಿಂದಲೂ, ಸನ್ಮಾನಿತನಾಗಿ, ವಿವಾಹಿತನಾಗಿ ಪುತ್ರ-ಪೌತ್ರರನ್ನೂ ಪಡೆದು, ಕಾಲನಿಯಮದಂತೆ ಪರಲೋಕವನ್ನೈದಿದನು.

**ಇತ್ಯಾಖ್ಯಾನಂ ಮಯಾಸ್ತೀಕಂ ಯಥಾವತ್ತವ ಕೀರ್ತಿತಮ್ ।**
**ಯತ್ಕೀರ್ತಯಿತ್ವಾ ಸರ್ಪೇಭ್ಯೋ ನ ಭಯಂ ವಿದ್ಯತೇ ಕ್ವಚಿತ್ ॥**

ಬ್ರಾಹ್ಮಣೋತ್ತಮರೇ! ಪುಣ್ಯಪ್ರದವಾದ ಆಸ್ತೀಕನ ಆಖ್ಯಾನವನ್ನು ನಾನು ನಿಮಗೆ ಯಥಾವತ್ತಾಗಿ ಹೇಳಿದ್ದೇನೆ. ಈ ಆಖ್ಯಾನವನ್ನು ಕೇಳುವುದರಿಂದ ಸರ್ಪಗಳ ಸಂಬಂಧವಾದ ಭಯವಿರುವುದಿಲ್ಲ. ಈ ಕಥೆಯನ್ನು ಹಿಂದೆ ನಿಮ್ಮ ಪೂರ್ವಜನಾದ ಮಹರ್ಷಿಯಾದ ಪ್ರಮತಿಯು ತನ್ನ ಮಗನಾದ ರುರುವಿಗೆ ಹೇಳಿದನು. ಆ ಕಥೆಯನ್ನು ನಾನು ಸ್ವಲ್ಪವಾದರೂ ಸಂಕ್ಷೇಪಿಸಿರುವುದಿಲ್ಲ. ಅವನು ಯಾವ ವಾಕ್ಯಗಳಿಂದ ಈ ಕಥೆಯನ್ನು ತನ್ನ ಮಗನಿಗೆ ಹೇಳಿದ್ದನೋ ಅದೇ ವಾಕ್ಯಗಳನ್ನೇ ನಾನು ಇಲ್ಲಿ ಪುನರುಚ್ಚರಿಸಿದ್ದೇನೆ.

ಆಸ್ತೀಕನ ಈ ಧರ್ಮಮಯವಾದ ಉಪಾಖ್ಯಾನ ಶ್ರವಣವು ಪುಣ್ಯವನ್ನು ಹೆಚ್ಚಿಸುತ್ತದೆ. ಡುಂಡುಭನು ರುರುವಿನೊಡನೆ ಮಾಡಿದ ಆಸ್ತೀಕನ ಪ್ರಸ್ತಾಪದಿಂದಾಗಿ ಪ್ರಮತಿಯು ಈ ಕಥೆಯನ್ನು ರುರುವಿಗೆ ಹೇಳಬೇಕಾ ಯಿತು. ಅದೇ ಕಾರಣದಿಂದಲೇ ನಿಮಗೂ ಈ ಕಥೆಯನ್ನು ಕೇಳಬೇಕೆಂದು ಬಹುವಾದ ಕೌತೂಹಲವಿತ್ತಲ್ಲವೇ? ಮಹಾತ್ಮನಾದ ಆಸ್ತೀಕನ ಈ ಪುಣ್ಯ ಕಥೆಯ ಶ್ರವಣದಿಂದ ನಿಮ್ಮ ಮನಸ್ಸಿನ ಕೌತೂಹಲವು ನಿವೃತ್ತವಾಗಲಿ."*

ಖ೮ನೆಯ ಅಧ್ಯಾಯವು ಮುಗಿಯಿತು.

---

* ಆಸ್ತೀಕನ ಪುಣ್ಯಚರಿತ್ರೆಯು ನಮ್ಮ ಭಾರತದೇಶದಲ್ಲಿ ಅನೇಕರಿಗೆ ತಿಳಿಯದಿದ್ದರೂ ಹಾವನ್ನು ಕಂಡಾಗ 'ಆಸ್ತೀಕ, ಆಸ್ತೀಕ' ಎಂದು ಹೇಳುವ ರೂಢಿಯಿದೆ. ಮನೆಗಳಲ್ಲಿ 'ಆಸ್ತೀಕ' ಎಂದೂ ಬರೆದಿರುತ್ತಾರೆ. 'ಆಸ್ತೀಕ' ಎಂದು ನಾಲ್ಕಾರು ಬಾರಿ ಹೇಳಿದೊಡನೆಯೇ ಸರ್ಪವೇನೋ ಹೊರಟುಹೋಗುತ್ತದೆ. ಇಂದಿನವರೆಗೂ ಸರ್ಪಗಳು ಈ ವಿಷಯದಲ್ಲಿ ಕಟ್ಟುನಿಟ್ಟಾದ ನಿಯಮವನ್ನೇ ಪರಿಪಾಲಿಸಿಕೊಂಡು ಬರುತ್ತಿದ್ದು ಅಂದಿನ ನಿಬಂಧನೆಗೆ ವ್ಯತಿರಿಕ್ತವಾಗಿ ನಡೆದುಕೊಂಡಿಲ್ಲವೆಂದೇ ಭಾವಿಸಬಹುದಾಗಿದೆ. ದ್ವಿಜರು ಸಂಧ್ಯಾವಂದನೆಯ ಉಪಸ್ಥಾನದಲ್ಲಿ ಅನುದಿನವೂ ಆಸ್ತೀಕನನ್ನು ಸರ್ಪಭಯದ ಪರಿಹಾರಕ್ಕಾಗಿ ಪ್ರಾರ್ಥಿಸುತ್ತಾರೆ.

**ಜರತ್ಕಾರೋರ್ಜರತ್ಕಾರ್ವಾಂ ಸಮುತ್ಪನ್ನೋ ಮಹಾಯಶಾಃ ।**

**ಆಸ್ತೀಕಃ ಸತ್ಯಸನ್ಧೋ ಮಾಂ ಪನ್ನಗೇಭ್ಯೋಽಭಿರಕ್ಷತು ॥**

ಜರತ್ಕಾರುವಿನಿಂದ ಜರತ್ಕಾರುವಿನಲ್ಲಿ ಸಮುತ್ಪನ್ನನಾದ, ಮಹಾಯಶನಾದ, ಸತ್ಯಸಂಧನಾದ ಆಸ್ತೀಕನು ಹಾವುಗಳಿಂದ ನನ್ನನ್ನು ಸಂರಕ್ಷಿಸಲಿ.

## ಮಹಾಭಾರತದ ಉಪಕ್ರಮ

ಶೌನಕರು ಸೌತಿಗಳನ್ನು ಕೇಳುತ್ತಾರೆ :

"ಸೂತಪುತ್ರ! ಭೃಗುವಂಶದ ಪ್ರಾರಂಭದಿಂದ ಎಲ್ಲ ಉಪಾಖ್ಯಾನ ಗಳನ್ನು ನನಗೆ ಹೇಳಿರುವೆ. ಇದರಿಂದ ನಾನು ಸಂತೋಷಭರಿತನಾಗಿದ್ದೇನೆ. ಆದರೆ ಇಷ್ಟುಮಾತ್ರದಿಂದಲೇ ನನಗೆ ಕಥೆಯನ್ನು ಕೇಳುವ ಆಶೆಯು ಪೂರ್ಣವಾಗಲಿಲ್ಲ. ವೇದ-ವೇದಾಂಗಪಾರಂಗತರಾದ, ಮಹರ್ಷಿಗಳಾದ ವ್ಯಾಸರು ಹೇಳಿರುವ ಕಥೆಗಳೆಲ್ಲವನ್ನೂ ಯಥಾವತ್ತಾಗಿ ನಿನ್ನಿಂದ ಕೇಳುವ ಆಶಯದಿಂದಿರುತ್ತೇನೆ. ಉಗ್ರಶ್ರವ! ದುಷ್ಕರವಾದಂತಹ ಜನಮೇಜಯನ ಸರ್ಪಯಾಗವು ನಡೆಯುತ್ತಿದ್ದ ಸಮಯದಲ್ಲಿ ಸದಸ್ಯರ ದೈನಂದಿನಕರ್ಮಗಳು ಮುಗಿದನಂತರ ವಿರಾಮಕಾಲದಲ್ಲಿ ಯಾವ ಯಾವ ಕಥೆಗಳನ್ನು ಹೇಳುತ್ತಿದ್ದರು? ಮತ್ತು ಯಾರು ಹೇಳುತ್ತಿದ್ದರು? ಎಂಬುದನ್ನೂ ಹೇಳು. ಅದೇ ಕಥೆಗಳನ್ನೇ ನನಗೆ ಸಾಂಗೋಪಾಂಗವಾಗಿ ಹೇಳುವವನಾಗು. ಆಮೂ ಲಾಗ್ರವಾಗಿ ಆ ಕಥೆಗಳನ್ನೂ ನಿನ್ನಿಂದ ಕೇಳಿ ತಿಳಿಯಬೇಕೆಂದಿರುತ್ತೇನೆ. ಆ ಕಥೆಗಳೆಲ್ಲವನ್ನೂ ನೀನು ಅವಶ್ಯವಾಗಿ ಹೇಳು."

ಸೌತಿಗಳು ಹೇಳುತ್ತಾರೆ :

"ಪೂಜ್ಯರೇ! ಒಂದು ಕರ್ಮಕ್ಕೂ ಮತ್ತೊಂದು ಕರ್ಮಕ್ಕೂ ನಡುವೆ ವಿರಾಮವಿದ್ದ ಕಾಲದಲ್ಲಿ ಬ್ರಾಹ್ಮಣರು ವೇದಗಳಲ್ಲಿ ಬರುವ ಉಪಾಖ್ಯಾನ ಗಳನ್ನು ಹೇಳುತ್ತಿದ್ದರು. ಮಹರ್ಷಿಗಳಾದ ವ್ಯಾಸರಾದರೋ ಅತಿವಿಚಿತ್ರವಾದ ಭಾರತವೆಂಬ ಆಖ್ಯಾನವನ್ನು ಹೇಳಿದರು."

"ಉಗ್ರಶ್ರವ! ಜನಮೇಜಯನಿಂದ ಪ್ರಶ್ನಿಸಲ್ಪಟ್ಟ ಕೃಷ್ಣದ್ವೈಪಾಯನರು ಪಾಂಡವರ ಯಶಃಪ್ರತಿಪಾದಕವಾದ ಮಹಾಭಾರತವೆಂಬ ಯಾವ ಆಖ್ಯಾನ ವನ್ನು ವಿರಾಮಕಾಲದಲ್ಲಿ ವಿಧಿವತ್ತಾಗಿ ಹೇಳಿದರೋ—ಪುಣ್ಯಪ್ರದವಾದ ಅದೇ ಆಖ್ಯಾನವನ್ನು ನಾನೂ ಸಹ ವಿಧಿವತ್ತಾಗಿ ನಿನ್ನಿಂದ ಕೇಳಬೇಕೆಂದಿರು ತ್ತೇನೆ. ಶುದ್ಧಾಂತಃಕರಣರಾದ ವ್ಯಾಸಮಹರ್ಷಿಗಳ ಮನಸ್ಸೆಂಬ ಸಾಗರದಿಂದ

ಸಂಭೂತವಾದುದು ಮತ್ತು ಸಕಲವಿಧವಾದ ತತ್ತ್ವರತ್ನಗಳಿಂದಲೂ ಕೂಡಿರು ವುದು ಈ ಮಹಾಭಾರತವೆಂಬ ಆಖ್ಯಾನ. ಸತ್ಪುರುಷರಲ್ಲಿ ಶ್ರೇಷ್ಠ ನಾದವನೇ! ಅಂತಹ ಸರ್ವತತ್ತ್ವಗಳ ಆಕರವಾದ ಮಹಾಭಾರತವನ್ನು ಹೇಳು."

"ಶೌನಕರೇ! ನಾನು ಬಹಳ ಸಂತೋಷದಿಂದ ಕೃಷ್ಣದ್ವೈಪಾಯನರಿಂದ ರಚಿತವಾದ ಮತ್ತು ಉತ್ತಮೋತ್ತಮವಾದ ಆಖ್ಯಾನವೆಂದು ಪ್ರಸಿದ್ಧವಾಗಿರುವ ಮಹಾಭಾರತವನ್ನು ಮೊದಲಿನಿಂದಲೂ ಹೇಳುತ್ತೇನೆ. ನನ್ನಿಂದ ಹೇಳಲ್ಪಡುವ ಈ ಮಹಾಖ್ಯಾನವನ್ನು ಆಮೂಲಾಗ್ರವಾಗಿ ಕೇಳಿರಿ. ಮಹಾಭಾರತವನ್ನು ಹೇಳಲು ನನಗೂ ಬಹಳ ಸಂತೋಷವಾಗುತ್ತದೆ."

೫೯ನೆಯ ಅಧ್ಯಾಯವು ಮುಗಿಯಿತು.

೬೦ನೆಯ ಅಧ್ಯಾಯ ಅಂಶಾವತರಣಪರ್ವ (ಮುಂದುವರಿದಿದೆ.)

## ಜನಮೇಜಯನ ಯಾಗಕ್ಕೆ ವ್ಯಾಸರ ಆಗಮನ : ಅವರಿಗೆ ಸತ್ಕಾರ : ವ್ಯಾಸರ ನಿರ್ದೇಶನದಂತೆ ವೈಶಂಪಾಯನರು ಮಹಾಭಾರತದ ಕಥೆಯನ್ನು ಹೇಳಲು ಉಪಕ್ರಮಿಸಿದುದು

"ಶೌನಕರೇ! ಮಹಾಭಾರತದ ವಿಷಯವಾಗಿ ಕೆಲವು ಸಂಗತಿಗಳು ನಿಮಗೆ ಈಗಾಗಲೇ ತಿಳಿದಿವೆ. ಮಹಾಭಾರತದ ಕರ್ತೃಗಳು ಯಾರು? ಪ್ರಪ್ರಥಮವಾಗಿ ಅದರ ಪ್ರವಚನವು ಎಲ್ಲಿ ನಡೆಯಿತು? ಅದನ್ನು ಮೊದಲ ಬಾರಿಗೆ ಯಾರು ಯಾರಿಗೆ ಹೇಳಿದರು? ಈ ಎಲ್ಲ ವಿಷಯಗಳನ್ನೂ ಕೂಲಂಕಷವಾಗಿ ಹೇಳುತ್ತೇನೆ, ಕೇಳಿರಿ. ಜನಮೇಜಯನು ಸರ್ಪಯಾಗ ವನ್ನು ಮಾಡುವನೆಂಬ ವಾರ್ತೆಯು ತಿಳಿದೊಡನೆಯೇ ಮಹಾವಿದ್ವಾಂಸರಾದ ಶ್ರೀ ಕೃಷ್ಣದ್ವೈಪಾಯನರು ಶಿಷ್ಯರೊಡನೆ ಹಸ್ತಿನಾಪಟ್ಟಣಕ್ಕೆ ಆಗಮಿಸಿದರು. ಕೃಷ್ಣದ್ವೈಪಾಯನರು ಯಾರು?–ಎಂಬುದಾಗಿ ನೀವು ಪ್ರಶ್ನಿಸಬಹುದು. ನಾನೇ ಮೊದಲು ಅವರ ಪರಿಚಯಮಾಡಿಕೊಡುತ್ತೇನೆ. ವ್ಯಾಸರು ಪಾಂಡವರ ಪಿತಾಮಹರು. ಶಕ್ತಿ ಎಂಬ ಮಹರ್ಷಿಯ ಪುತ್ರರು ಪರಾಶರರು. ಪರಾಶರರಿಗೆ ಕನ್ಯೆಯಾದ ಕಾಲಿಯಲ್ಲಿ (ಸತ್ಯವತಿಯಲ್ಲಿ) ಯಮುನಾನದಿಯ ಮಧ್ಯದ

ದ್ವೀಪದಲ್ಲಿ ಹುಟ್ಟಿದವರೇ ಕೃಷ್ಣದ್ವೈಪಾಯನರು. ಅವರು ಹುಟ್ಟಿದೊಡನೆಯೇ ಆತ್ಮಸಂಕಲ್ಪದಿಂದಲೇ ದೊಡ್ಡವರಾದರು. ಹುಟ್ಟುವಾಗಲೇ ಅವರಲ್ಲಿ ಸಾಂಗವಾದ ವೇದಗಳೂ, ಪುರಾಣೇತಿಹಾಸಗಳೂ, ಆಶ್ರಯಮಾಡಿ ಕೊಂಡಿದ್ದುವು. ಅವರು ವೇದ-ವೇದಾಂಗಪಾರಂಗತರಾಗಿದ್ದರಲ್ಲದೇ ಮಹಾ ಜ್ಞಾನಿಗಳೂ ಆಗಿದ್ದರು. ತಪಸ್ಸಿನಲ್ಲಿ, ವೇದಾಧ್ಯಯನದಲ್ಲಿ, ವ್ರತೋಪವಾಸ ಗಳನ್ನು ಮಾಡುವುದರಲ್ಲಿ, ಕ್ಷಮೆಯಲ್ಲಿ, ಯಜನ ಮತ್ತು ಯಾಜನಗಳಲ್ಲಿ ಅವರಿಗೆ ಸಮಾನರಾದವರು ಮತ್ತಾರೂ ಇರಲಿಲ್ಲ.

**ವಿವ್ಯಾಸೈಕಂ ಚತುರ್ಧಾ ಯೋ ವೇದಂ ವೇದವಿದಾಂ ವರಃ ।**
**ಪರಾವರಜ್ಞೋ ಬ್ರಹ್ಮರ್ಷಿಃ ಕವಿಃ ಸತ್ಯವ್ರತಃ ಶುಚಿಃ ॥೫॥**

ಒಂದೇ ಆಗಿದ್ದ ವೇದದ ರಾಶಿಯನ್ನು ಋಗ್ಯಜುಸ್ಸಾಮಾಥರ್ವಣ ಗಳೆಂಬ ನಾಲ್ಕು ವೇದಗಳಾಗಿ ವಿಂಗಡಿಸಿದ, ವೇದವಿದರಲ್ಲಿ ಶ್ರೇಷ್ಠರಾದ ಕೃಷ್ಣ ದ್ವೈಪಾಯನರು ಪರಾ ಮತ್ತು ಅಪರಾ ಎಂಬ ವಿದ್ಯೆಗಳನ್ನು ತಿಳಿದವ ರಾಗಿಯೂ, ಬ್ರಹ್ಮರ್ಷಿಗಳಾಗಿಯೂ, ಸತ್ಯನಿಷ್ಠರಾಗಿಯೂ ಮತ್ತು ಅಂತಃ ಶುದ್ಧಿ-ಬಹಿಃಶುದ್ಧಿಯುಳ್ಳವರಾಗಿಯೂ ಇದ್ದರು. ಪುಣ್ಯಕೀರ್ತಿಗಳಾದ, ಯಶೋವಂತರಾದ ವ್ಯಾಸರು ಶಾಂತನುವಂಶದ ಉದ್ಧಾರಕ್ಕಾಗಿ ಪಾಂಡು, ಧೃತರಾಷ್ಟ್ರ ಮತ್ತು ವಿದುರರಿಗೆ ಜನ್ಮದಾನಮಾಡಿದರು. ಇಂತಹ ಮಹಾತ್ಮರಾದ ವ್ಯಾಸರು ವೇದ-ವೇದಾಂಗಪಾರಂಗತರಾದ ಶಿಷ್ಯರಿಂದ ಪರಿವೃತರಾಗಿ ರಾಜರ್ಷಿಯಾದ ಜನಮೇಜಯನ ಯಜ್ಞಮಂಟಪವನ್ನು ಪ್ರವೇಶಿಸಿದರು. ಪ್ರವೇಶಮಾಡುತ್ತಲೇ—ದೇವತೆಗಳಿಂದ ಪರಿವೃತನಾದ ದೇವೇಂದ್ರನಂತೆ ಪರಿ ಶೋಭಿಸುತ್ತಿದ್ದ—ಸದಸ್ಯರಿಂದ ಆವೃತನಾಗಿದ್ದ ಜನಮೇಜಯನನ್ನು ವೀಕ್ಷಿಸಿ ದರು. ಮೂರ್ಧಾಭಿಷಿಕ್ತರಾಗಿದ್ದ ಅನೇಕರಾಜರೂ ಮತ್ತು ಯಜ್ಞಪ್ರಕ್ರಿಯೆ ಗಳಲ್ಲಿ ಬಹುಕುಶಲರಾದ ಮತ್ತು ಬ್ರಹ್ಮನಿಗೆ ಸಮಾನರಾದ ಅನೇಕ ಋತ್ವಿಜರೂ ಯಜ್ಞಮಂಟಪದಲ್ಲಿ ಉಪಸ್ಥಿತರಾಗಿರುವುದನ್ನು ವ್ಯಾಸರು ನೋಡಿದರು.

ವ್ಯಾಸರು ಯಜ್ಞಮಂಟಪದೊಳಕ್ಕೆ ಸಶಿಷ್ಯರಾಗಿ ಆಗಮಿಸಿದೊಡ ನೆಯೇ ಜನಮೇಜಯನು ಪರಿವಾರಸಮೇತನಾಗಿ ಮೇಲೆದ್ದು, ನಾಲ್ಕು ಹೆಜ್ಜೆ

ಗಳನ್ನು ಮುಂದಿಟ್ಟು, ಮಹರ್ಷಿಗಳನ್ನು ಪ್ರೀತ್ಯಾದರಗಳಿಂದ ಸ್ವಾಗತಿಸಿದನು. ಇಂದ್ರನ ಸಭೆಗೆ ಆಗಮಿಸಿದ ದೇವಗುರುವಾದ ಬೃಹಸ್ಪತಿಗೆ ಸ್ವರ್ಣಮಯವಾದ ಆಸನವನ್ನಿತ್ತು ಇಂದ್ರನು ಗೌರವಿಸುವಂತೆ–ಜನಮೇಜಯನು ಸದಸ್ಯರ ಅನುಮತಿಯನ್ನು ಪಡೆದು ಸ್ವರ್ಣಮಯವಾದ ಆಸನವನ್ನಿತ್ತು ಮಹರ್ಷಿ ಗಳನ್ನು ಗೌರವಿಸಿದನು. ಆಸನದಲ್ಲಿ ಉಪವಿಷ್ಟರಾಗಿದ್ದ, ದೇವರ್ಷಿಗಳಿಂದಲೂ ಸನ್ಮಾನ್ಯರಾದ, ವರದರಾದ ವ್ಯಾಸಮಹರ್ಷಿಗಳನ್ನು ಯಥಾವಿಧಿಯಾಗಿ ಜನಮೇಜಯನು ಸತ್ಕರಿಸಿದನು. ಪಾದ್ಯ-ಆಚಮನೀಯ-ಅರ್ಘ್ಯಗಳನ್ನು ಸಮರ್ಪಿಸಿದನಂತರ ಗೋವನ್ನೂ ಗೋಸಂಬಂಧವಾದ *ಮಧುಪರ್ಕವನ್ನೂ ಪಿತಾಮಹರಾದ, ಮಧುಪರ್ಕವನ್ನು ಸ್ವೀಕರಿಸಲು ಅರ್ಹರಾದ ಕೃಷ್ಣದ್ವೈಪಾಯನರಿಗೆ ಸಮರ್ಪಿಸಿದನು. ವ್ಯಾಸಮಹರ್ಷಿಗಳು ಪಾಂಡು ವಂಶೀಯನಾದ ಜನಮೇಜಯನಿಂದ ಆ ಪೂಜೆಯನ್ನು ಸ್ವೀಕರಿಸಿ, ಹಸುವನ್ನು ಮುಟ್ಟಿ ಆದರಿಸಿ, ಅದನ್ನು ಗೋಶಾಲೆಗೆ ಕಳುಹಿಸಿಕೊಟ್ಟು, ಜನಮೇಜಯನು ಮಾಡಿದ ಪೂಜೆಯಿಂದ ಸುಪ್ರೀತರಾದರು.

ವ್ಯಾಸಮಹರ್ಷಿಗಳು ಜನಮೇಜಯನ ಮುತ್ತಾತಂದಿರಾದುದರಿಂದ ಅವರ ವಿಷಯದಲ್ಲಿ ರಾಜನಿಗೆ ಹೆಚ್ಚಿನ ಸಲಿಗೆಯೂ ಇದ್ದಿತು. ಮಹರ್ಷಿ ಗಳನ್ನು ಯಥಾಯೋಗ್ಯವಾಗಿ ಸತ್ಕರಿಸಿದನಂತರ ಜನಮೇಜಯನು ಋಷಿಗಳ ಸಮೀಪದಲ್ಲಿಯೇ ಕುಳಿತು ಅವರ ಆರೋಗ್ಯವನ್ನು ಕುರಿತು ಪ್ರಶ್ನಿಸಿದನು. ಪರಸ್ಪರ ಕುಶಲಪ್ರಶ್ನೆಗಳಾದನಂತರ ಅಲ್ಲಿ ನೆರೆದಿದ್ದ ಸದಸ್ಯರೂ ವ್ಯಾಸ ಮಹರ್ಷಿಗಳನ್ನು ಯಥೋಚಿತವಾಗಿ ಗೌರವಿಸಿದರು. ಅಂತೆಯೇ ವ್ಯಾಸರೂ ಸದಸ್ಯರನ್ನು ಶ್ಲಾಘನೀಯವಾದ ಮಾತುಗಳಿಂದ ಪ್ರತಿಪೂಜಿಸಿದರು. ಅನಂತರ ಸದಸ್ಯರಿಂದ ಪರಿವೃತನಾದ ಜನಮೇಜಯನು ವ್ಯಾಸರನ್ನು ಪ್ರಶ್ನಿಸಿದನು :

"ದ್ವಿಜಸತ್ತಮರೇ! ಕೌರವ-ಪಾಂಡವರನ್ನು ತಾವು ಪ್ರತ್ಯಕ್ಷವಾಗಿ ಕಂಡಿದ್ದೀರಿ. ಅವರ ಚರಿತ್ರೆಗಳೆಲ್ಲವೂ ನಿಮಗೆ ಸ್ಪಷ್ಟವಾಗಿ ತಿಳಿದಿರುವುದು.

---

* ಮಧುಪರ್ಕದ ವಿಷಯದಲ್ಲಿರುವ ಅನೇಕ ವಿಧವಾದ ಅಭಿಪ್ರಾಯಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

ಆದುದರಿಂದ ತಮ್ಮಿಂದಲೇ ಅವರ ಚರಿತ್ರೆಯನ್ನು ಕೇಳಿ ತಿಳಿಯಬೇಕೆಂದಿರುವೆನು. ಸತ್ಕರ್ಮನಿರತರಾದ ಕೌರವ-ಪಾಂಡವರಲ್ಲಿ ಒಡಕು ಹೇಗುಂಟಾಯಿತು? ಅನೇಕ ಅಕ್ಷೌಹಿಣೀಸೈನಿಕರ ನಾಶಕ್ಕೆ ಕಾರಣವಾದ ಭಾರತಮಹಾಯುದ್ಧವು ಹೇಗೆ ನಡೆಯಿತು? ನನ್ನ ಪಿತಾಮಹರೆಲ್ಲರಿಗೂ ದೈವಪ್ರೇರಣೆಯಿಂದಲೇ ಒಬ್ಬರು ಮತ್ತೊಬ್ಬರನ್ನು ನಾಶಗೊಳಿಸಬೇಕೆನ್ನುವಷ್ಟು ಅನಿಷ್ಟಬುದ್ಧಿಯು ಉತ್ಪನ್ನವಾಯಿತೆಂದು ಭಾವಿಸುತ್ತೇನೆ. ನೀವು ಆ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ಸಂಪೂರ್ಣವಿವರಣೆಗಳೊಡನೆ ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ."

ಶೌನಕರೇ! ಜನಮೇಜಯನು ಹೇಳಿದ ಮಾತುಗಳನ್ನು ಕೇಳಿ ವ್ಯಾಸಮಹರ್ಷಿಗಳು ತಮ್ಮ ಸಮೀಪದಲ್ಲಿಯೇ ಕುಳಿತಿದ್ದ ವೈಶಂಪಾಯನರಿಗೆ ಹೀಗೆ ನಿರ್ದೇಶಿಸಿದರು :

"ವೈಶಂಪಾಯನ! ಕುರುರಾಜಕುಮಾರರಿಗೂ, ಪಾಂಡವರಿಗೂ ಭೇದವು ಉಂಟಾದುದಕ್ಕೆ ಕಾರಣವಾದ ವಿಷಯಗಳೆಲ್ಲವನ್ನೂ ಕೂಲಂಕಷವಾಗಿ ನಿನಗೆ ಹೇಳಿರುತ್ತೇನೆ. ಆ ಸಂಪೂರ್ಣಚರಿತ್ರೆಯನ್ನೇ ನೀನು, ಬಹಳ ಆಕಾಂಕ್ಷೆಯಿಂದ ಕೇಳುತ್ತಿರುವ ಜನಮೇಜಯನಿಗೆ ಹೇಳು."

ಗುರುವರೇಣ್ಯರಾಡಿದ ಮಾತುಗಳನ್ನು ಕೇಳಿ ವಿಪ್ರಶ್ರೇಷ್ಠರಾದ ವೈಶಂಪಾಯನರು ಪುರಾತನವಾದ ಮಹಾಭಾರತದ ಇತಿಹಾಸವನ್ನು ಆಮೂಲಾಗ್ರವಾಗಿ ಹೇಳಿದರು. ಸರ್ಪಯಾಗಕ್ಕೆ ಆಗಮಿಸಿದ್ದ ಸರ್ವಸದಸ್ಯರ, ರಾಜರ ಮತ್ತು ಜನಮೇಜಯನ ಸಮ್ಮುಖದಲ್ಲಿ ಕುರು-ಪಾಂಡವರಲ್ಲಿ ಉಂಟಾದ ಭೇದವನ್ನೂ, ಅದೇ ಕಾರಣದಿಂದಾಗಿ ಉಂಟಾದ ಸರ್ವನಾಶವನ್ನೂ ಸಾಂಗೋಪಾಂಗವಾಗಿ ವಿವರಿಸಿ ಹೇಳಲು ಉಪಕ್ರಮಿಸಿದರು."

೬೦ನೆಯ ಅಧ್ಯಾಯವು ಮುಗಿಯಿತು.

## ಸಮಗ್ರಮಹಾಭಾರತಕಥೆಯ ಸೂಕ್ಷ್ಮಪರಿಚಯ

ಉಗ್ರಶ್ರವಸೌತಿಗಳು ಶೌನಕರಿಗೆ ಹೇಳುತ್ತಾರೆ :

"ಶೌನಕರೇ! ವಿಷ್ಣುಸ್ವರೂಪನಾದ ಗುರುಭಗವಂತನ ಆದೇಶದಂತೆ ವೈಶಂಪಾಯನರು ದೀರ್ಘಪ್ರಣವೋಚ್ಚಾರಣಪೂರ್ವಕವಾಗಿ ಮಹಾ ಭಾರತದ ಕಥೆಯನ್ನು ಹೇಳಲು ಪ್ರಾರಂಭಿಸಿದರು :

"ಮನಸ್ಸು-ಬುದ್ಧಿಗಳನ್ನು ಸಮಾಧಿಯಲ್ಲಿ ಏಕೀಕರಿಸಿ, ಸಚ್ಚಿದಾನಂದ ಸ್ವರೂಪನಾದ ಗುರುಭಗವಂತನನ್ನು ಹೃದಯಕಮಲದಲ್ಲಿ ಧ್ಯಾನಿಸಿ, ಪ್ರತ್ಯಕ್ಷ ರೂಪಿಯಾಗಿರುವ ಅದೇ ಗುರುಭಗವಂತನಿಗೆ ಸಾಷ್ಟಾಂಗಪ್ರಣಾಮಮಾಡಿ ಅಲ್ಲಿ ನೆರೆದಿರುವ ಬ್ರಾಹ್ಮಣೋತ್ತಮರನ್ನೂ, ಇತರ ವಿದ್ವಾಂಸರನ್ನೂ ನಮಸ್ಕರಿಸಿ, ಸರ್ವಲೋಕಗಳಲ್ಲಿಯೂ ವಿಖ್ಯಾತರಾದ, ಮಹಾತ್ಮರಾದ, ಧೀಮಂತರಾದ ವ್ಯಾಸಮಹರ್ಷಿಗಳ ಅಭಿಮತವನ್ನು ( ಅವರಿಂದಲೇ ಕೇಳಿದ ಮಹಾಭಾರತಕಥಾಮೃತವನ್ನು ತಮಗೆ ಹೇಳಬೇಕೆಂಬ ಅವರ ಅಭಿಲಾಷೆ ಯನ್ನು ) ಪೂರ್ಣಗೊಳಿಸುತ್ತೇನೆ. ಮಹಾರಾಜ! ಈ ಭಾರತಕಥೆಯನ್ನು ಕೇಳಲು ನೀನು ಸತ್ಪಾತ್ರನಾಗಿರುವೆ. ಅಂತೆಯೇ ಶ್ರೀಗುರುವಿನ ವಾಕ್ಯದಿಂದ ಪ್ರೇರಿತನಾದ ನಾನೂ ಕಥೆಯನ್ನು ಹೇಳಲು ಬಹಳ ಉತ್ಸುಕನಾಗಿದ್ದೇನೆ. ನಿಮ್ಮೆಲ್ಲರ ಮಧ್ಯದಲ್ಲಿ ಈ ಪುಣ್ಯಕಥಾಪ್ರವಚನವನ್ನು ಮಾಡಬೇಕೆಂದು ನನ್ನ ಮನಸ್ಸು ತವಕಿಸುತ್ತಿದೆ. ಜನಮೇಜಯ! ರಾಜ್ಯದ ವಿಷಯವಾಗಿ ಕೌರವ-ಪಾಂಡವರಲ್ಲಿ ಭೇದವು ಹೇಗೆ ಉಂಟಾಯಿತೆಂಬುದನ್ನೂ, ದ್ಯೂತದ ಕಾರಣ ವನ್ನೂ, ಅದರಿಂದಾಗಿ ಪಾಂಡವರು ಅನುಭವಿಸಿದ ವನವಾಸದ ವಿವರಣೆ ಯನ್ನೂ, ವನವಾಸವು ಕಳೆದನಂತರವೂ ಇಬ್ಬರಲ್ಲಿಯೂ ಸಾಮರಸ್ಯವುಂಟಾ ಗದೇ ಒದಗಿದ ಬಹುಜನಕ್ಷಯಕರವಾದ ಯುದ್ಧದ ವಿವರಣೆಯನ್ನೂ ಯಥಾಶ್ರುತವಾಗಿ ಹೇಳುತ್ತೇನೆ. ವಿಸ್ತಾರವಾಗಿ ಹೇಳುವ ಮೊದಲು, ಮೊದಲಿ ನಿಂದ ಕಡೆಯವರೆಗೂ ನಡೆದ ಘಟನೆಗಳನ್ನು ಸಂಕ್ಷೇಪವಾಗಿ ಹೇಳಿಬಿಡುತ್ತೇನೆ. ಈಗ ನಾನು ಹೇಳುವುದು ಮಹಾಭಾರತಕಥೆಯ ಸಂಕ್ಷಿಪ್ತವೃತ್ತ.

ನಿಮ್ಮ ಮುತ್ತಾತನಾದ ಪಾಂಡುಮಹಾರಾಜನು ಕಾರಣಾಂತರಗಳಿಂದ

ಕಾಡಿನಲ್ಲಿಯೇ ಸ್ವರ್ಗಸ್ಥನಾದನು. ಅವನಿಗೆ ಐವರು ಮಕ್ಕಳಿದ್ದರು. ಆ ಐವರು ಕಾಡಿನಲ್ಲಿಯೇ ಇದ್ದರು. ತಂದೆಯು ದಿವಂಗತನಾದ ನಂತರ ತಾಯಿಯ ಜೊತೆಯಲ್ಲಿ ಅವರೆಲ್ಲರೂ ಹಸ್ತಿನಾಪಟ್ಟಣಕ್ಕೆ ಬಂದರು.

ರಾಜಧಾನಿಗೆ ಆಗಮಿಸಿದ ಸ್ವಲ್ಪಕಾಲದಲ್ಲಿಯೇ ಅವರು ವೇದ-ವೇದಾಂಗಪಾರಂಗತರಾದುದಲ್ಲದೇ ಧನುರ್ವಿದ್ಯೆಯಲ್ಲಿಯೂ ನಿಷ್ಣಾತ ರಾದರು. ಸತ್ತ್ವಸಂಪನ್ನರಾದ, ವೀರ್ಯವಂತರಾದ, ತೇಜಸ್ವಿಗಳಾದ, ಶ್ರೀಮಂತ ರಾದ, ಯಶೋವಂತರಾದ ಪಾಂಡವರನ್ನು ಪಟ್ಟಣಿಗರು ಬಹುವಾಗಿ ಪ್ರೀತಿಸುತ್ತಿದ್ದರು. ಅದು ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳಿಗೆ ಸಹ್ಯವಾಗಲಿಲ್ಲ. ಕ್ರೂರನಾದ ದುರ್ಯೋಧನ, ಕರ್ಣ, ಶಕುನಿ–ಇವರು ಪಾಂಡವರನ್ನು ನಿಗ್ರಹಿಸುವ ಅಥವಾ ದೇಶದಿಂದ ಹೊರದೂಡುವ ಸಲುವಾಗಿ ಅನೇಕವಿಧವಾದ ಪ್ರಯತ್ನಗಳನ್ನು ಮಾಡಿದರು. ದುರ್ಯೋಧನನು–ಭಾರತಸಾಮ್ರಾಜ್ಯಕ್ಕೆ ತಾನೇ ಏಕಚ್ಛತ್ರಾಧಿಪತಿಯಾಗಿ ಉಳಿಯಬೇಕೆಂಬ ದುರಾಸೆಯಿಂದ, ಕುಮತಿಯಾದ ಶಕುನಿಯ ಸಲಹೆಯಂತೆ ನಾನಾವಿಧವಾದ ಉಪಾಯಗಳಿಂದ ಪಾಂಡವರನ್ನು ಪೀಡಿಸತೊಡಗಿದನು. ಒಮ್ಮೆ ಆ ಪಾಪಿಯು ಭೀಮನಿಗೆ ಅನ್ನದಲ್ಲಿ ವಿಷವನ್ನು ಸೇರಿಸಿಕೊಟ್ಟನು. ಆದರೆ ವೀರನಾದ ವೃಕೋದರನು ಅನ್ನದೊಡನೆ ವಿಷವನ್ನೂ ತಿಂದು ಅರಗಿಸಿಕೊಂಡನು. ಮತ್ತೊಮ್ಮೆ ಗಂಗಾತೀರದ 'ಪ್ರಮಾಣಕೋಟಿ' ಎಂಬ ಸ್ಥಳದಲ್ಲಿ ಮಲಗಿ ಗಾಢವಾಗಿ ನಿದ್ರಿಸುತ್ತಿದ್ದ ಭೀಮಸೇನನನ್ನು ದುರ್ಯೋಧನನೂ ಅವನ ಅನು ಯಾಯಿಗಳೂ ಸೇರಿ ಹಗ್ಗದಿಂದ ಬಿಗಿದು ಗಂಗಾನದಿಗೆ ಎಸೆದು ಹೊರಟು ಹೋದರು. ನಿದ್ದೆಯಿಂದ ಎಚ್ಚರವಾದೊಡನೆಯೇ ಭೀಮಸೇನನು ತನ್ನ ಬಂಧನವನ್ನು ಕ್ಷಣಮಾತ್ರದಲ್ಲಿ ಬಿಡಿಸಿಕೊಂಡು ನಿರಾಯಾಸದಿಂದ ಹಸ್ತಿನೆಗೆ ಹಿಂದಿರುಗಿದನು. ಮತ್ತೊಮ್ಮೆ ದುರ್ಯೋಧನನು, ಮಲಗಿ ನಿದ್ರಿಸುತ್ತಿದ್ದ ಭೀಮಸೇನನನ್ನು ಉಗ್ರವಾದ ವಿಷಸರ್ಪಗಳಿಂದ ಕಚ್ಚಿಸಿದನು. ಆ ಸರ್ಪಗಳು ಭೀಮನ ಸರ್ವಾಂಗಗಳನ್ನೂ ಕಚ್ಚಿದರೂ ಶತ್ರುಸಂಹಾರಕನಾದ ಭೀಮ ಸೇನನು ಸಾಯಲಿಲ್ಲ. ಪಾಂಡವರಿಗೆ ದುರ್ಯೋಧನನು ನಾನಾರೀತಿ ಯಲ್ಲಿ ಕೊಡುತ್ತಿದ್ದ ಹಿಂಸೆಗಳೆಲ್ಲವನ್ನೂ ಮೇಧಾವಿಯಾದ ವಿದುರನು ತಿಳಿದು ಕೊಂಡು ಪಾಂಡವರನ್ನು ಅಪಾಯದಿಂದ ತಪ್ಪಿಸಲು ಸರ್ವದಾ ಜಾಗರೂಕ

ನಾಗಿರುತ್ತಿದ್ದನು. ಸ್ವರ್ಗದಲ್ಲಿರುವ ಇಂದ್ರನು ಯಾವ ರೀತಿಯಲ್ಲಿ ಭೂಲೋಕದ ಜನರಿಗೆ ಮಳೆ-ಬೆಳೆಗಳನ್ನು ಕಾಲ-ಕಾಲಕ್ಕೆ ಅನುಗ್ರಹಮಾಡುವುದರ ಮೂಲಕ ಸುಖವನ್ನುಂಟುಮಾಡುವನೋ–ಅಂತೆಯೇ ಶತ್ರುಪಕ್ಷದಲ್ಲಿದ್ದ ವಿದುರನು ಪಾಂಡವರಿಗೆ ಸುಖವನ್ನುಂಟುಮಾಡುತ್ತಿದ್ದನು. ಅವರ ಯೋಗ-ಕ್ಷೇಮ ಗಳಲ್ಲಿಯೇ ಸರ್ವದಾ ನಿರತನಾಗಿರುತ್ತಿದ್ದನು.

ದೇವಕಾರ್ಯವನ್ನು ಪೂರೈಸುವ ಸಲುವಾಗಿ ದೇವತೆಗಳಿಂದಲೇ ಸಂರಕ್ಷಿಸಲ್ಪಡುತ್ತಿದ್ದ ಪಾಂಡವರನ್ನು ಪ್ರತ್ಯಕ್ಷವಾದ ಮತ್ತು ಪರೋಕ್ಷವಾದ ವಿವಿಧೋಪಾಯಗಳಿಂದಲೂ ಸಂಹರಿಸಲು ಕೌರವರಿಗೆ ಸಾಧ್ಯವಾಗಲಿಲ್ಲ. ಪಾಂಡವರಿಗೆ ದೈವದ ಬೆಂಬಲವಿದೆಯೆಂದು ಭಾವಿಸಿದರೂ ದುರ್ಯೋ ಧನನು ತನ್ನ ಪ್ರಯತ್ನವನ್ನು ಕೈಬಿಡಲೂ ಇಲ್ಲ. ಕರ್ಣ-ದುಃಶಾಸನರೇ ಮೊದ ಲಾದ ಅವನ ದುಷ್ಟಸಚಿವರೂ ಪುನಃ-ಪುನಃ ಹೊಸ-ಹೊಸ ಸಲಹೆಗಳನ್ನು ಕೊಡುತ್ತಲೇ ಇದ್ದರು. ಅವರ ಸಲಹೆಗಳಂತೆ ಧೃತರಾಷ್ಟ್ರಮಹಾರಾಜನ ಅನುಮತಿಯನ್ನೂ ಪಡೆದು ಪಾಂಡವರ ನಿರ್ಮೂಲಕ್ಕಾಗಿ ದುರ್ಯೋಧನನು ವಾರಣಾವತದಲ್ಲಿ ಅರಗಿನ ಅರಮನೆಯನ್ನು ಕಟ್ಟಿಸಿದನು. ತನ್ನ ಮಕ್ಕಳಿಗೆ ಪ್ರಿಯವನ್ನುಂಟುಮಾಡಬೇಕೆಂಬ ಆಸೆಯಿಂದಲೂ, ಅಖಂಡ ಸಾಮ್ರಾಜ್ಯವೂ ತನ್ನ ಮಕ್ಕಳಿಗೇ ಸೇರಬೇಕೆಂಬ ದುರಾಸೆಯಿಂದಲೂ ಅಂಬಿಕೆಯ ಮಗನಾದ ಧೃತರಾಷ್ಟ್ರನು ಪಾಂಡವರನ್ನು ವಾರಣಾವತದಲ್ಲಿರುವ ಅರಮನೆಯಲ್ಲಿ ವಾಸಮಾಡಿಕೊಂಡಿರುವಂತೆ ಹೇಳಿ ಕಳುಹಿಸಿಕೊಟ್ಟನು. ಒಡನೆಯೇ ಪಾಂಡವರು ಹಸ್ತಿನಾಪಟ್ಟಣವನ್ನು ಬಿಟ್ಟು ವಾರಣಾವತಕ್ಕೆ ಹೋದರು. ದೈವಯೋಗದಿಂದ ಆ ಸಮಯದಲ್ಲಿಯೂ ವಿದುರನು ಪಾಂಡವರಿಗೆ ಸಹಾಯಕನಾದನು. ಅವನ ಸಲಹೆಯಂತೆ ಪಾಂಡವರು ರಾತ್ರಿಯಲ್ಲಿ ಅರಗಿನ ಮನೆಯಿಂದ ಹೊರಬಿದ್ದು ಅರಣ್ಯವನ್ನು ಸೇರಿದರು.

ಈ ಪ್ರಕರಣವು ಹೀಗೆ ನಡೆಯಿತು, ಮಹಾರಾಜ! ಧೃತರಾಷ್ಟ್ರನ ನಿರ್ದೇಶನದಂತೆ ಪಾಂಡವರು ಹಸ್ತಿನಾಪಟ್ಟಣದಿಂದ ಹೊರಟು ವಾರಣಾ ವತಕ್ಕೆ ಬಂದರು. ಅಲ್ಲಿ ಅವರು ತಮಗಾಗಿಯೇ ಸಿದ್ಧಪಡಿಸಿದ್ದ ಅರಗಿನ ಮನೆಯಲ್ಲಿ ತಾಯಿಯಾದ ಕುಂತಿಯೊಡನೆ ವಾಸಮಾಡುತ್ತಿದ್ದರು. ಅವರನ್ನು ಧ್ವಂಸಮಾಡುವ ಸಲುವಾಗಿಯೇ ನಿಯುಕ್ತನಾಗಿದ್ದ ಪುರೋಚನನ ವಿಷಯ

ದಲ್ಲಿ ಒಂದು ವರ್ಷ ಮುಗಿಯುವವರೆಗೂ ಜಾಗರೂಕತೆಯಿಂದಿದ್ದು, ಆ ಮಧ್ಯದಲ್ಲಿ ವಿದುರನ ಸಲಹೆಯಂತೆ ಅರಮನೆಯ ಒಳಭಾಗದಿಂದ ಅರಣ್ಯ ದವರೆಗೆ ಸುರಂಗವನ್ನು ಸಿದ್ಧಗೊಳಿಸಿದರು. ಸುರಂಗಮಾರ್ಗವು ಸಿದ್ಧವಾಗು ತ್ತಲೇ ಒಂದು ಕಾಳರಾತ್ರಿಯಲ್ಲಿ ತಾವಾಗಿಯೇ ಅರಗಿನ ಮನೆಗೆ ಬೆಂಕಿಯನ್ನು ಹಚ್ಚಿ ಭಯದಿಂದ ಉದ್ವಿಗ್ನರಾದವರಂತೆ ನಟಿಸಿ ತಾಯಿಯೊಡನೆ ಅರಣ್ಯವನ್ನು ಸೇರಿದರು. ಸಮಯನೋಡಿ ಅರಗಿನ ಮನೆಗೆ ಬೆಂಕಿಯನ್ನು ಹಚ್ಚಿ ಪಾಂಡವರನ್ನು ನಿರ್ಮೂಲನಮಾಡಬೇಕೆಂದು ನಿರ್ದೇಶಿತನಾಗಿದ್ದ ಪುರೋ ಚನನೇ ಅರಗಿನ ಮನೆಯಲ್ಲಿ ಭಸ್ಮವಾಗಿ ಹೋದನು. ಅರಣ್ಯದಲ್ಲಿ ಹಿಡಿಂಬ ನೆಂಬ ರಾಕ್ಷಸನನ್ನು ಭೀಮನು ಎದುರಿಸಬೇಕಾಯಿತು. ಭೀಮನು ರಾಕ್ಷಸ ನೊಡನೆ ಯುದ್ಧಮಾಡಿ ಅವನನ್ನು ಸಂಹರಿಸುವ ವೇಳೆಗೆ ಉಳಿದ ಪಾಂಡ ವರು ಎಚ್ಚೆತ್ತು ಭಯದಿಂದ ಉದ್ವಿಗ್ನರಾದರು. ಅನಂತರ ಹಿಡಿಂಬಾ-ಭೀಮರ ಗಾಂಧರ್ವವಿವಾಹವಾಗಿ ಘಟೋತ್ಕಚನು ಹುಟ್ಟಿದನು. ದುರ್ಯೋಧನನ ಅನುಯಾಯಿಗಳು ಹಿಂಬಾಲಿಸಿಯಾರೆಂಬ ಭಯದಿಂದ ಪಾಂಡವರು ಬಹಳ ದೂರದವರೆಗೆ ಪ್ರಯಾಣಮಾಡಿದರು. ಕಠಿನವ್ರತಿಗಳಾದ ಪಾಂಡವರು ವೇದಾಧ್ಯಯನಸಂಪನ್ನರಾದ ಬ್ರಾಹ್ಮಣಬ್ರಹ್ಮಚಾರಿಗಳಂತೆ ವೇಷಮರೆಸಿ ಕೊಂಡು ಮುಂದೆ ಕೆಲವು ಕಾಲ ಏಕಚಕ್ರನಗರಿಯಲ್ಲಿ ಬ್ರಾಹ್ಮಣನೊಬ್ಬನ ಮನೆಯಲ್ಲಿ ವಾಸವಾಗಿದ್ದರು. ಆ ಊರಿನ ಸಮೀಪದಲ್ಲಿ ಬಕನೆಂಬ ನರಭಕ್ಷಕ ನಾದ ರಾಕ್ಷಸನೊಬ್ಬನಿದ್ದನು. ಒಮ್ಮೆ ಮಹಾಬಾಹುವಾದ ಭೀಮಸೇನನು ಹಸಿವಿನಿಂದ ಪರಿತಪಿಸುತ್ತಿದ್ದ ಬಕಾಸುರನ ಸಮೀಪಕ್ಕೆ ಹೋದನು. ಪುರುಷ ವ್ಯಾಘ್ರನಾದ ಪಾಂಡವನು ತನ್ನ ಭುಜಬಲ-ಪರಾಕ್ರಮಗಳಿಂದ ನರಭಕ್ಷಕನಾದ ಬಕಾಸುರನನ್ನು ಸಂಹಾರಮಾಡಿ ಆ ಪಟ್ಟಣದ ಜನರನ್ನು ಭಯರಹಿತರನ್ನಾಗಿ ಮಾಡಿದನು.

ಪಾಂಡವರು ಏಕಚಕ್ರನಗರದಲ್ಲಿದ್ದಾಗಲೇ ದ್ರುಪದರಾಜನ ಪುತ್ರಿಯಾದ ಪಾಂಚಾಲಿಗೆ ಸ್ವಯಂವರವು ನಡೆಯುವುದೆಂಬ ವಾರ್ತೆಯನ್ನು ಕೇಳಿ ಅಲ್ಲಿಗೆ ಪ್ರಯಾಣಮಾಡಿ ದ್ರೌಪದಿಯನ್ನು ತಮ್ಮ ಪತ್ನಿಯನ್ನಾಗಿ ಪಡೆದರು.

ಪಾಂಡವರು ಪಾಂಚಾಲಿಯನ್ನು ಮದುವೆಯಾದರೆಂಬ ವಾರ್ತೆಯು ಸರ್ವತ್ರ ಹರಡಿತು. ಯುಧಿಷ್ಠಿರಾದಿಗಳು ಪಾಂಚಾಲನಗರದಲ್ಲಿಯೇ ಒಂದು

ವರ್ಷಕಾಲ ಇದ್ದು ಅನಂತರ ಹಸ್ತಿನಾಪಟ್ಟಣಕ್ಕೆ ಪುನರಾಗಮಿಸಿದರು. ಧೃತರಾಷ್ಟ್ರನೂ ಮತ್ತು ಭೀಷ್ಮನೂ ಯುಧಿಷ್ಠಿರಾದಿಗಳನ್ನು ಬರಮಾಡಿಕೊಂಡು ಅಣ್ಣ-ತಮ್ಮಂದಿರ ನಡುವೆ ವಿರಸವುಂಟಾಗದಂತೆ–ಪಾಂಡವರು ಜನನಿಬಿಡ ವಾದ ( ಗ್ರಾಮಾದಿಗಳಿಂದ ಕೂಡಿರುವ ), ಸುವ್ಯವಸ್ಥಿತವಾದ ಮಾರ್ಗಗಳಿಂದ ಕೂಡಿರುವ ಇಂದ್ರಪ್ರಸ್ಥವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ವಾಸಮಾಡಬೇಕೆಂದೂ, ಮುಂದೆ ಯಾವ ವಿಧವಾದ ಮಾತ್ಸರ್ಯವನ್ನೂ ಇಟ್ಟುಕೊಳ್ಳಬಾರದೆಂದೂ ಸಲಹೆ ನೀಡಿದರು. ಧೃತರಾಷ್ಟ್ರನ ಸಲಹೆಗೆ ಅನುಸಾರವಾಗಿ ಸುಹೃಜ್ಜನರೊಡನೆ ಪಾಂಡವರು ಧೃತರಾಷ್ಟ್ರನಿತ್ತ ರತ್ನ-ಮಣಿ-ಮಾಣಿಕ್ಯಗಳನ್ನು ತೆಗೆದುಕೊಂಡು ಖಾಂಡವಪ್ರಸ್ಥಕ್ಕೆ ಪ್ರಯಾಣಮಾಡಿದರು. ಅಲ್ಲವರು ಅನೇಕವರ್ಷಗಳವರೆಗೆ ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದರು. ತಮ್ಮ ಭುಜಬಲ-ಸಾಮರ್ಥ್ಯಗಳಿಂದ ಅನೇಕರಾಜರನ್ನು ಸಾಮಂತರನ್ನಾಗಿ ಮಾಡಿಕೊಂಡರು. ಸತ್ಯವ್ರತಪರಾಯಣರಾಗಿ ಧರ್ಮಮೂಲವಾಗಿ ರಾಜ್ಯವಾಳುತ್ತಿದ್ದರು. ಸರ್ವದಾ ಅಪ್ರಮತ್ತರಾಗಿದ್ದು ಕೊಂಡು, ಕ್ಷಮಾಶೀಲರಾಗಿ, ಉಪಟಳಕೊಡುತ್ತಿದ್ದ ಶತ್ರುರಾಜರನ್ನು ಧ್ವಂಸಮಾಡುತ್ತಾ ಪ್ರಜೆಗಳ ಹಿತರಕ್ಷಣೆಯಲ್ಲಿಯೇ ನಿರತರಾಗಿರುತ್ತಿದ್ದರು.

ಒಮ್ಮೆ ವಿಜಯಯಾತ್ರೆಗಾಗಿ ಯುಧಿಷ್ಠಿರನ ಅನುಜರು ಹೊರಟರು. ಯಶೋವಂತನಾದ ಭೀಮನು ಪೂರ್ವದಿಕ್ಕಿನ ರಾಜರೆಲ್ಲರನ್ನೂ ಸೋಲಿಸಿ ಕಪ್ಪ-ಕಾಣಿಕೆಗಳನ್ನು ತಂದನು. ವೀರನಾದ ಅರ್ಜುನನು ಉತ್ತರದಿಕ್ಕಿನ ರಾಜರನ್ನೂ, ನಕುಲನು ಪಶ್ಚಿಮದಿಕ್ಕಿನ ರಾಜರನ್ನೂ, ಸಹದೇವನು ದಕ್ಷಿಣ ದಿಕ್ಕಿನ ರಾಜರನ್ನೂ ಜಯಿಸಿ ಅಪಾರವಾದ ಕಪ್ಪ-ಕಾಣಿಕೆಗಳನ್ನು ತಂದರು. ಈ ರೀತಿಯಾಗಿ ಪಾಂಡವರು ಅಖಂಡಭೂಮಂಡಲವನ್ನೂ ತಮ್ಮ ವಶಮಾಡಿಕೊಂಡರು. ತಮ್ಮ ಶೌರ್ಯ-ಪರಾಕ್ರಮಗಳಿಂದಲೂ, ತೇಜಸ್ಸಿ ನಿಂದಲೂ ಅವರು ಈ ಪೃಥ್ವಿಯಲ್ಲಿ ಐದು ಮಂದಿ ಸೂರ್ಯರಂತೆಯೇ ವಿರಾಜಿಸುತ್ತಿದ್ದರು. ಆಕಾಶದಲ್ಲಿರುವ ಸೂರ್ಯನೂ ಸೇರಿ ಭೂದೇವಿಯು ಆರು ಸೂರ್ಯರಿಂದ ಪ್ರಕಾಶಿತಳಾದಂತೆ ಕಾಣುತ್ತಿದ್ದಳು.

ಮಹಾರಾಜ! ಆ ಮಧ್ಯದಲ್ಲಿ ಯಾವುದೋ ಒಂದು ಕಾರಣಕ್ಕಾಗಿ ತೇಜಸ್ವಿಯಾದ, ಸತ್ಯವಿಕ್ರಮನಾದ ಯುಧಿಷ್ಠಿರನು ತನ್ನ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯನಾಗಿದ್ದ, ಪುರುಷವ್ಯಾಘ್ರನಾದ, ಸಕಲಗುಣಪರಿಪೂರ್ಣನಾದ, ಸ್ಥಿರಚಿತ್ತನಾದ ಸವ್ಯಸಾಚಿಯನ್ನು ಅರಣ್ಯಕ್ಕೆ ಕಳುಹಿಸಬೇಕಾಯಿತು. ಅರ್ಜುನನೂ ಅಣ್ಣನ ಮಾತನ್ನು ಯಾವತ್ತೂ ಮೀರಿದವನಲ್ಲ. ಪರಸ್ಪರವಾಗಿ ಮಾಡಿಕೊಂಡಿದ್ದ ನಿಬಂಧನೆಯಂತೆ ಒಂದು ವರ್ಷ ಮತ್ತು ಒಂದು ತಿಂಗಳ ಪರ್ಯಂತವಾಗಿ ಅರ್ಜುನನು ಅರಣ್ಯದಲ್ಲಿ ವಾಸಮಾಡಿಕೊಂಡಿದ್ದನು. ತೀರ್ಥಯಾತ್ರೆಯನ್ನು ಮಾಡುತ್ತಿದ್ದ ಸಮಯದಲ್ಲಿಯೇ ಅರ್ಜುನನು ನಾಗಕನ್ಯೆಯಾದ ಉಲೂಪಿಯನ್ನೂ, ಪಾಂಡ್ಯದೇಶದ ರಾಜಕುಮಾರಿಯಾದ ಚಿತ್ರಾಂಗದೆಯನ್ನೂ ಮದುವೆಯಾಗಿ ಅವರೊಡನೆ ಸ್ವಲ್ಪಕಾಲವಿದ್ದನು. ಅಲ್ಲಿಂದ ಮುಂದೆ ದ್ವಾರವತಿಗೆ ಹೋಗಿ ವಾಸುದೇವನನ್ನು ಸಂಧಿಸಿದನು. ಅವನ ತಂಗಿಯಾದ ರಾಜೀವಲೋಚನೆಯಾದ ಸುಭದ್ರೆಯನ್ನು ಭಾರ್ಯೆ ಯನ್ನಾಗಿ ಪಡೆದನು. ಅವರ ದಾಂಪತ್ಯವು ಇಂದ್ರಾಣೀ-ಇಂದ್ರರ ಮತ್ತು ಲಕ್ಷ್ಮೀ-ಕೇಶವರ ದಾಂಪತ್ಯಕ್ಕೆ ಅನುರೂಪವಾಗಿದ್ದಿತು. ಸುಭದ್ರೆಯು ಪ್ರೇಮ ಪೂರ್ವಕವಾಗಿ ಅರ್ಜುನನನ್ನು ವರಿಸಿದಳು.

ಮುಂದೆ ವಾಸುದೇವಸಹಿತನಾದ ಅರ್ಜುನನು ಖಾಂಡವವನದಲ್ಲಿ ಯಜ್ಞೇಶ್ವರನಿಗೆ ತೃಪ್ತಿಯನ್ನುಂಟುಮಾಡಿದನು. ಶ್ರೀಕೃಷ್ಣನ ಜೊತೆಯಲ್ಲಿದ್ದ ಅರ್ಜುನನಿಗೆ ಯಾವುದೊಂದು ಕಾರ್ಯವೂ ದುಸ್ಸಾಧ್ಯವಾಗಿ ಅಥವಾ ಬಹು ಗುರುತರವಾಗಿ ಕಾಣುತ್ತಿರಲಿಲ್ಲ. ಸಂಕಲ್ಪಮಾತ್ರಸಹಾಯದಿಂದ ಮಹಾ ವಿಷ್ಣುವು ಶತ್ರುಗಳನ್ನು ಬಹುಸುಲಭವಾಗಿ ಸಂಹರಿಸುತ್ತಿದ್ದಂತೆ–ಶ್ರೀಕೃಷ್ಣನ ಜೊತೆಯಲ್ಲಿದ್ದ ಅರ್ಜುನನು ಮನಸ್ಸುಮಾಡಿದ ಎಲ್ಲ ಕಾರ್ಯಗಳೂ ಅನಾ ಯಾಸವಾಗಿ ನಡೆದುಹೋಗುತ್ತಿದ್ದುವು. ಶತ್ರುಗಳೂ ಪರಾಜಿತರಾಗಿ ಹೋಗು ತ್ತಿದ್ದರು. ಖಾಂಡವವನವನ್ನು ಸ್ವೇಚ್ಛೆಯಿಂದ ಸುಟ್ಟು ಭಸ್ಮಮಾಡಿ ಸುಪ್ರೀತನಾದ ಅಗ್ನಿಯು ಅರ್ಜುನನಿಗೆ ಗಾಂಡೀವವೆಂಬ ಧನುಸ್ಸನ್ನೂ, ಅಕ್ಷಯವಾದ ಬಾಣಗಳಿಂದ ಕೂಡಿದ್ದ ಎರಡು ಬತ್ತಳಿಕೆಗಳನ್ನೂ, ಕಪಿಧ್ವಜವಿದ್ದ ರಥವನ್ನೂ ಪಾರಿತೋಷಿಕರೂಪವಾಗಿ ಕೊಟ್ಟನು. ಖಾಂಡವವನದಲ್ಲಿದ್ದ ಮಯಾ ಸುರನನ್ನು ಅರ್ಜುನನು ಅಗ್ನಿಯ ಬಾಧೆಯಿಂದ ತಪ್ಪಿಸಿದನು. ಕೃತಜ್ಞನಾದ

ಮಯನು ಯುಧಿಷ್ಠಿರನಿಗೆ ರತ್ನಖಚಿತವಾದ ದಿವ್ಯಸಭಾಮಂದಿರವನ್ನು ನಿರ್ಮಿಸಿಕೊಟ್ಟನು. ರಾಜಸೂಯಯಾಗಕ್ಕೆ ಆಹ್ವಾನಿತನಾಗಿ ಬಂದಿದ್ದ, ಮಂದಬುದ್ಧಿಯವನಾದ ದುರ್ಯೋಧನನು ಆ ಸಭಾಮಂದಿರದ ಮೇಲೆ ಮೋಹಗೊಂಡನು. ಸಭಾಮಂದಿರವನ್ನು ತನ್ನದನ್ನಾಗಿ ಮಾಡಿಕೊಳ್ಳಲು ದುರ್ಯೋಧನನು ಶಕುನಿಯ ಸಹಾಯದಿಂದ ಪಗಡೆಯಾಟದಲ್ಲಿ ಯುಧಿಷ್ಠಿರನನ್ನು ವಂಚನೆಯಿಂದ ಗೆದ್ದನು. ಪಂದ್ಯದ ನಿಯಮಕ್ಕೆ ಅನುಸಾರ ವಾಗಿ ಹನ್ನೆರಡು ವರ್ಷಗಳ ವನವಾಸವನ್ನೂ ಮತ್ತು ಒಂದು ವರ್ಷದ ಅಜ್ಞಾತವಾಸವನ್ನೂ ಮಾಡುವ ಸಲುವಾಗಿ ತಮ್ಮಂದಿರೊಡನೆ ಮತ್ತು ಪತ್ನಿ ಯಾದ ದ್ರೌಪದಿಯೊಡನೆ ಯುಧಿಷ್ಠಿರನನ್ನು ಕಾಡಿಗೆ ಕಳುಹಿಸಿದನು.

ಸತ್ಯವ್ರತರಾದ ಪಾಂಡವರು ಹನ್ನೆರಡು ವರ್ಷಗಳ ವನವಾಸವನ್ನೂ ಮತ್ತು ಒಂದು ವರ್ಷದ ಅಜ್ಞಾತವಾಸವನ್ನೂ ಮುಗಿಸಿ, ಹದಿನಾಲ್ಕನೆಯ ವರ್ಷ ತಮ್ಮ ರಾಜ್ಯವನ್ನು ತಮಗೆ ಕೊಡಬೇಕೆಂದು ದುರ್ಯೋಧನನಿಗೆ ಹೇಳಿಕಳುಹಿಸಿದರು. ದುರ್ಯೋಧನನು ಐದು ಗ್ರಾಮಗಳನ್ನು ಕೊಡಲೂ ಒಪ್ಪಲಿಲ್ಲ. ಘೋರವಾದ ಯುದ್ಧವು ಪ್ರಾರಂಭವಾಯಿತು. ಕ್ಷಾತ್ರಧರ್ಮಾನು ಸಾರವಾಗಿ ಪಾಂಡವರು ಕೌರವರೊಡನೆ ಯುದ್ಧಮಾಡಿ ದುರ್ಯೋಧನ ನನ್ನೂ ಮತ್ತು ಅವನ ಅನುಯಾಯಿಗಳನ್ನೂ ನಿರ್ಮೂಲಮಾಡಿ ಸರ್ವ ಸಂಪತ್ಸಮೃದ್ಧವಾದ ಭಾರತಸಾಮ್ರಾಜ್ಯವನ್ನು ಪಡೆದರು.

ಜನಮೇಜಯ! ಎಂತಹ ಅದ್ಭುತಕಾರ್ಯವನ್ನಾದರೂ ಬಹುಸುಲಭ ವಾಗಿ ಮಾಡಿ ಮುಗಿಸುವ ಸಾಮರ್ಥ್ಯವಿದ್ದ ನಿನ್ನ ಪ್ರಪಿತಾಮಹರ ಸೂಕ್ಷ್ಮ ಕಥೆಯಿದು. ಪಾಂಡವ-ಕೌರವರಲ್ಲಿ ಉಂಟಾದ ಭೇದವು ಕೌರವರ ಸರ್ವ ವಿನಾಶಕ್ಕೂ–ಪಾಂಡವರ ವಿಜಯಕ್ಕೂ ಕಾರಣವಾಯಿತು.”

ಅರವತ್ತೊಂದನೆಯ ಅಧ್ಯಾಯವು ಮುಗಿಯಿತು.

೬೨ನೆಯ ಅಧ್ಯಾಯ ಅಂಶಾವತರಣಪರ್ವ (ಮುಂದುವರಿದಿದೆ.)

## ಮಹಾಭಾರತದ ಮಹಿಮೆ

ಜನಮೇಜಯನು ಕೇಳುತ್ತಾನೆ :

“ವೈಶಂಪಾಯನರೇ! ತಾವು ಕುರುವಂಶೀಯರ ಮಹಾಚರಿತ್ರೆಯ

ನ್ನೊಳಗೊಂಡಿರುವ ಮಹಾಭಾರತವನ್ನು ಬಹುಸೂಕ್ಷ್ಮವಾಗಿ ಹೇಳಿರುವಿರಿ. ಆದರೆ ನನಗೆ ಈ ವಿಚಿತ್ರಾರ್ಥದ ಕಥೆಯನ್ನು ವಿಸ್ತಾರವಾಗಿಯೇ ಕೇಳಬೇಕೆನ್ನುವ ಕುತೂಹಲವು ಹುಟ್ಟಿದೆ. ಆದುದರಿಂದ ನೀವು ಈ ಕಥೆಯನ್ನು ವಿಸ್ತಾರವಾಗಿ ಹೇಳಬೇಕು. ನಮ್ಮ ಹಿಂದಿನವರ ಚರಿತ್ರೆಯನ್ನು ಕೇಳುತ್ತಿದ್ದರೆ ನನಗೆ ತೃಪ್ತಿಯೆಂಬುದೇ ಉಂಟಾಗುವುದಿಲ್ಲ. ಕೇಳಿದಷ್ಟೂ ಮತ್ತೂ ಕೇಳಬೇಕೆನ್ನಿಸುತ್ತದೆ. ಧರ್ಮಜ್ಞರಾದ ಪಾಂಡವರು ಅವಧ್ಯರಾದ ಭೀಷ್ಮಾದಿಗಳನ್ನು ಸಂಹರಿಸಿದರು. ಮಾನವರಿದನ್ನು ಪ್ರಶಂಸೆಮಾಡುತ್ತಿದ್ದಾರೆ. ಆದುದರಿಂದ ನಾನು ಊಹಿಸುವುದೇನೆಂದರೆ : ಯುದ್ಧಕ್ಕೆ ಕಾರಣವು ಅಲ್ಪವಾಗಿರಲಾರದು. ಆ ಮಹಾಯುದ್ಧಕ್ಕೆ ಇನ್ನೂ ಮಹತ್ವದ ಅನೇಕ ಕಾರಣಗಳು ಇರಲೇಬೇಕು. ನಮ್ಮ ತಾತಂದಿರು ನರವ್ಯಾಘ್ರರಾಗಿದ್ದರು. ಶಕ್ತಿವಂತರಾಗಿಯೂ, ದೋಷರಹಿತರಾಗಿಯೂ, ಕ್ಷಮಾವಂತರಾಗಿಯೂ ಇದ್ದರು. ಇಂತಹವರೂ ದುರಾತ್ಮರಾದ ದುರ್ಯೋಧನಾದಿಗಳಿಂದ ಒದಗಿದ ಪರಮದಾರುಣವಾದ ಕ್ಲೇಶಗಳನ್ನು ಏಕೆ ಸಹಿಸಿಕೊಂಡರು? ಪಾಂಡವದ್ವಿತೀಯನಾದ ಭೀಮಸೇನನು ಹತ್ತುಸಾವಿರ ಆನೆಗಳ ಬಲವುಳ್ಳವನಾಗಿದ್ದನು. ಇಂತಹವನು ಕ್ಲೇಶಪರಿತಪ್ತನಾಗಿದ್ದರೂ ತನ್ನ ಕೋಪವನ್ನೇಕೆ ಅಡಗಿಸಿಕೊಂಡಿದ್ದನು? ಇಷ್ಟೊಂದು ಕ್ಲೇಶವನ್ನನುಭವಿಸುತ್ತಿದ್ದರೂ ಅವನಿಗೆ ಕೋಪವೇ ಬರಲಿಲ್ಲವೆ? ದುರಾತ್ಮರಾದ ಧೃತರಾಷ್ಟ್ರನ ಮಕ್ಕಳಿಂದ ಕ್ಲೇಶಿತಳಾದ ದ್ರೌಪದಿಯು ಅವರನ್ನು ವೀಕ್ಷಣಮಾತ್ರದಿಂದ ದಹಿಸಿಬಿಡುವಷ್ಟು ಸಮರ್ಥಳಾಗಿದ್ದಳು. ಅಂತಹವಳು ಅಬಲೆಯಂತೆ ಸುಮ್ಮನಿದ್ದಳೇಕೆ? ದುರಾತ್ಮರಾದ ದುರ್ಯೋಧನಾದಿಗಳು ಚುಚ್ಚುಮಾತುಗಳನ್ನಾಡಿ ಬಾಧೆಪಡಿಸುತ್ತಿದ್ದರೂ ಮಾದ್ರಿಯ ಪುತ್ರರಾದ ನಕುಲ-ಸಹದೇವರೂ, ನರವ್ಯಾಘ್ರರಾದ ಭೀಮಾರ್ಜುನರೂ ವ್ಯಸನಿಯಾದ (ದ್ಯೂತದಲ್ಲಿ ಹೆಚ್ಚಿನ ಆಸಕ್ತಿಯುಳ್ಳ) ಯುಧಿಷ್ಠಿರನನ್ನನುಸರಿಸಿ ಕಾಡಿಗೇಕೆ ಹೋದರು? ಚುಚ್ಚುಮಾತುಗಳನ್ನಾಡಿ ಬಾಧೆಪಡಿಸುತ್ತಿದ್ದ ದುರಾತ್ಮರಿಗೆ ತಕ್ಕ ಶಿಕ್ಷೆಯನ್ನು ಮಾಡಬೇಕೆನ್ನುವ ಕೋಪವು ಅವರಲ್ಲಿ ಉಂಟಾಗಲಿಲ್ಲವೇ? ಧರ್ಮಾತ್ಮರಲ್ಲಿ ಶ್ರೇಷ್ಠನೆನಿಸಿದವನೂ, ಸಾಕ್ಷಾತ್ ಯಮಧರ್ಮನ ಪುತ್ರನೂ, ಕ್ಲೇಶಗಳನ್ನು ಅನುಭವಿಸಲು ಅನರ್ಹನೂ ಆಗಿದ್ದ ಯುಧಿಷ್ಠಿರನು ಅಂತಹ ಪರಮದಾರುಣವಾದ ಕ್ಲೇಶಗಳನ್ನು ಹೇಗೆ

ಸಹಿಸಿಕೊಂಡನು? ಅವನ ಕ್ಷಮಾಗುಣಕ್ಕೊಂದು ಮಿತಿಯೇ ಇರಲಿಲ್ಲವೇ? ಅಪಾರವಾದ ಕೌರವಸೇನೆಯನ್ನು ಯಮಲೋಕಕ್ಕೆ ಕಳುಹಿಸಲು ಶ್ರೀಕೃಷ್ಣ ಸಾರಥಿಯಾದ ಅರ್ಜುನನೊಬ್ಬನಿಗೆ ಹೇಗೆ ಸಾಧ್ಯವಾಯಿತು?–ಈ ಎಲ್ಲ ವಿಷಯಗಳನ್ನೂ ನನಗೆ ವಿವರವಾಗಿ ಹೇಳಿರಿ. ಮಹಾರಥರಾದ ನಮ್ಮ ತಾತಂದಿರು ಎಲ್ಲೆಲ್ಲಿ ಏನೇನು ಮಾಡಿದರೆಂಬುದನ್ನೂ ಯಥಾವತ್ತಾಗಿ ತಿಳಿಸಿರಿ."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಈ ಕಥಾಪ್ರವಚನಕ್ಕಾಗಿಯೇ ಒಂದು ಕಾಲವನ್ನು ನಿಯಮಮಾಡು. ಕೃಷ್ಣದ್ವೈಪಾಯನರು ಹೇಳಿರುವ ಕ್ರಮದಲ್ಲಿಯೇ ಈ ಪುಣ್ಯಾಖ್ಯಾನವನ್ನು ಹೇಳಬೇಕಾಗಿದೆ. ಇದು ಬಹಳ ವಿಪುಲವಾದ ಆಖ್ಯಾನ. ಸರ್ವಕಾಲಗಳಲ್ಲಿಯೂ-ಸರ್ವಲೋಕಗಳಿಂದಲೂ ಸಂಪೂಜಿತರಾದ, ಅಮಿತ ತೇಜಸ್ವಿಗಳಾದ ವ್ಯಾಸಮಹರ್ಷಿಗಳಿಂದ ಪ್ರಣೀತವಾದ ಈ ಪುಣ್ಯಾಖ್ಯಾನ ವನ್ನು ವಿಸ್ತಾರವಾಗಿ ಹೇಳುತ್ತೇನೆ. ಸತ್ಯವತಿಯ ಮಕ್ಕಳಾದ, ಮಹಾ ತೇಜಸ್ವಿಗಳಾದ ವ್ಯಾಸರು–ಪುಣ್ಯಕರ್ಮಿಗಳಾದ ಪಾಂಡವರ ಈ ಪುಣ್ಯಕಥೆ ಯನ್ನು ಒಂದು ಲಕ್ಷಶ್ಲೋಕಗಳಲ್ಲಿ ಹೇಳಿರುತ್ತಾರೆ. ಯಾವ ವಿದ್ವಾಂಸರು ಈ ಮಹಾಭಾರತದ ಆಖ್ಯಾನವನ್ನು ಪ್ರವಚನಮಾಡುತ್ತಾರೆಯೋ ಮತ್ತು ಕೇಳುತ್ತಾರೆಯೋ–ಅವರೆಲ್ಲರೂ ಅವಸಾನಾನಂತರದಲ್ಲಿ ಬ್ರಹ್ಮಲೋಕಕ್ಕೆ ಹೋಗಿ ದೇವತೆಗಳಿಗೆ ಸಮಾನರಾಗುತ್ತಾರೆ. ಈ ಆಖ್ಯಾನವನ್ನು ಋಷಿ-ಮಹರ್ಷಿಗಳೂ ಪ್ರಶಂಸಿಸಿದ್ದಾರೆ. ಕೇಳಲು ಅರ್ಹವಾದ ಇತಿಹಾಸಗಳಲ್ಲಿಯೇ ಈ ಇತಿಹಾಸವು ಉತ್ತಮೋತ್ತಮವಾದುದು. ಇದು ವೇದಕ್ಕೆ ಸಮನಾದ ಪವಿತ್ರಗ್ರಂಥವಾಗಿದೆ. ಈ ಇತಿಹಾಸದಲ್ಲಿ ಧರ್ಮಾರ್ಥಗಳ ವಿಷಯಗಳು ಪೂರ್ಣವಾಗಿ ಪ್ರತಿಪಾದಿತವಾಗಿವೆ. ಪುಣ್ಯಪ್ರದವಾದ ಈ ಇತಿಹಾಸದ ಪ್ರವ ಚನದಿಂದ ಬುದ್ಧಿಯು ಅಧ್ಯಾತ್ಮದ ಕಡೆಗೆ ತಿರುಗುತ್ತದೆ. ಕೃಷ್ಣದ್ವೈಪಾಯನ ಪ್ರಣೀತವಾದ ಈ ವೇದವನ್ನು ಕ್ಷುದ್ರರಲ್ಲದವರಿಗೂ, ದಾನಶೀಲರಿಗೂ ಸತ್ಯಶೀಲರಿಗೂ ಹೇಳುವ ವಿದ್ವಾಂಸನು ತನಗೆ ಬೇಕಾದ ಇಷ್ಟಾರ್ಥಗಳೆಲ್ಲ ವನ್ನೂ ಪಡೆಯುತ್ತಾನೆ. ಪುಣ್ಯಪ್ರದವಾದ ಈ ಇತಿಹಾಸವನ್ನು ಕೇಳಿದ್ದೇ ಆದರೆ ಭ್ರೂಣಹತ್ಯಾಪಾಪವೂ ವಿನಾಶವಾಗುವುದು. ರಾಹುವಿನಿಂದ ವಿಮುಕ್ತ

ನಾದ ಚಂದ್ರನಂತೆ–ಮಹಾಭಾರತಕಥಾಶ್ರವಣವನ್ನು ಮಾಡುವವನು ಸಕಲ ಪಾಪಗಳಿಂದ ವಿಮುಕ್ತನಾಗುತ್ತಾನೆ. ಈ ಇತಿಹಾಸಕ್ಕೆ 'ಜಯ' ಎಂದೂ ಹೆಸರಿದೆ. ಶತ್ರುಗಳನ್ನು ಜಯಿಸಲಿಚ್ಛಿಸುವವನು ಈ ಆಖ್ಯಾನವನ್ನು ಕೇಳಿದರೆ ಅಖಂಡಭೂಮಂಡಲವನ್ನೇ ಜಯಿಸಲು ಸಮರ್ಥನಾಗುತ್ತಾನೆ. ಗಂಡುಮಕ್ಕಳನ್ನು ಪಡೆಯಲಪೇಕ್ಷಿಸುವವನು ಇದನ್ನು ಶ್ರವಣಮಾಡಬೇಕು. ಇದನ್ನು ಪ್ರವಚನಮಾಡುವ ಮನೆಗಳಲ್ಲಿ ಸರ್ವದಾ ಸನ್ಮಂಗಳವುಂಟಾಗುತ್ತದೆ.

ಪಟ್ಟದ ರಾಣಿಯೂ ಯುವರಾಜನೂ ಇದನ್ನು ಕೇಳಲೇಬೇಕು. ಪದೇ ಪದೇ ಕೇಳುತ್ತಿರಬೇಕು. ಹಾಗೆ ಕೇಳಿದ್ದೇ ಆದರೆ ಚಕ್ರವರ್ತಿಯಾಗಲು ಯೋಗ್ಯನಾದ ಪುತ್ರನನ್ನಾಗಲೀ, ಚಕ್ರವರ್ತಿನಿಯಾಗಲು ಯೋಗ್ಯಳಾದ ಪುತ್ರಿಯನ್ನಾಗಲೀ ಅವರು ಪಡೆಯುತ್ತಾರೆ. ಜನಮೇಜಯ! ಮಹಾಮತಿಗಳಾದ ವ್ಯಾಸರಿಂದ ಪ್ರಣೀತವಾಗಿರುವ ಈ ಮಹಾಭಾರತದಲ್ಲಿ ಕೇವಲ ಒಂದು ಶಾಸ್ತ್ರಕ್ಕೆ ಮಾತ್ರ ಸಂಬಂಧಿಸಿದ ವಿಷಯಗಳಿರುವುದಿಲ್ಲ. ಧರ್ಮಶಾಸ್ತ್ರ, ಅರ್ಥಶಾಸ್ತ್ರ ಮತ್ತು ಮೋಕ್ಷಶಾಸ್ತ್ರಗಳೂ ಇದರಲ್ಲಿ ಸಾಂಗೋಪಾಂಗವಾಗಿ ಹೇಳಲ್ಪಟ್ಟಿವೆ. ಯಾರು ಈ ಪುಣ್ಯಪ್ರವಚನವನ್ನು ಹೇಳುತ್ತಾರೆಯೋ ಮತ್ತು ಕೇಳುತ್ತಾರೆಯೋ–ಅಂತಹವರ ಮಕ್ಕಳು ಮಾತಾ-ಪಿತೃಗಳನ್ನು ವಿಧೇಯತೆಯಿಂದ ಶುಶ್ರೂಷೆಮಾಡುತ್ತಾರೆ ಮತ್ತು ಅವರ ಸೇವಕರೂ ಅವರಲ್ಲಿ ವಿಧೇಯತೆಯಿಂದಿರುತ್ತಾರೆ. ಮನೋವಾಕ್ಕಾಯಗಳಿಂದ ಮಾಡಿದ ಪಾಪಗಳೆಲ್ಲವೂ ಈ ಪುಣ್ಯಕಥಾಶ್ರವಣವನ್ನು ಮಾಡುವುದರಿಂದ ಪರಿಹಾರವಾಗುತ್ತವೆ. ಅಸೂಯಾರಹಿತರಾಗಿ (ದೋಷೈಕದೃಷ್ಟಿಯಿಲ್ಲದೆ) ಭರತಕುಲಾವತಂಸರಾದ ಪಾಂಡವರ ಜನ್ಮವೃತ್ತಾಂತವನ್ನು ಕೇಳಿದವರಿಗೆ ಈ ಲೋಕದಲ್ಲಿ ರೋಗ- ರುಜಿನಗಳ ಬಾಧೆಯಿರುವುದಿಲ್ಲ. ಮರಣಾನಂತರದಲ್ಲಿ ನರಕದ ಭಯವೂ ಖಂಡಿತವಾಗಿಯೂ ಇರುವುದಿಲ್ಲ.

ಪಾಂಡವರ ಕೀರ್ತಿಯನ್ನು ಹೆಚ್ಚಿಸುವ ಸಲುವಾಗಿ ಮತ್ತು ವಿದ್ಯಾಸಂಪನ್ನರಾದ, ದಾನಿಗಳಾದ, ಪ್ರಖ್ಯಾತರಾದ ಇತರ ಕ್ಷತ್ರಿಯರ ಸುಚರಿತೆಗಳನ್ನು ಪ್ರಪಂಚಕ್ಕೆ ತಿಳಿಸುವ ಸಲುವಾಗಿ ಕೃಷ್ಣದ್ವೈಪಾಯನರು ಈ ಮಹಾಗ್ರಂಥವನ್ನು ರಚಿಸಿದರು. ಇದರ ಪ್ರವಚನವೂ ಮತ್ತು ಶ್ರವಣವೂ ಹೇಳುವವರಿಗೆ ಮತ್ತು ಕೇಳುವವರಿಗೆ ಧನ-ಧಾನ್ಯಸಮೃದ್ಧಿಯನ್ನು ಉಂಟುಮಾಡು

ತ್ತದೆ ; ಯಶಸ್ಸನ್ನು ಕೊಡುತ್ತದೆ ; ಆಯುಷ್ಯವನ್ನು ಹೆಚ್ಚಿಸುತ್ತದೆ ; ಪಾಪ ಗಳನ್ನೆಲ್ಲಾ ತೊಳೆದು ಪುಣ್ಯದಾಯಕವಾಗುತ್ತದೆ ; ಕಡೆಯಲ್ಲಿ ಮೋಕ್ಷಸುಖ ವನ್ನೂ ಕೊಡುತ್ತದೆ. ಪುಣ್ಯದ ಸಂಪಾದನೆಗಾಗಿ ಮಹಾಪುಣ್ಯಪ್ರದವಾದ ಈ ಮಹಾಭಾರತವನ್ನು ಶುಚಿಯಾದ ಬ್ರಾಹ್ಮಣರಿಂದ ಓದಿಸಿ ಕೇಳಬೇಕು. ಅಂತಹವರಿಗೆ ಶಾಶ್ವತವಾದ ಧರ್ಮದ ಪ್ರಾಪ್ತಿಯಾಗುತ್ತದೆ. ಸುಪ್ರಸಿದ್ಧವಾದ ಕುರುವಂಶದ ಚರಿತೆಯನ್ನು ಪಠನಮಾಡುವವನು ಸರ್ವದಾ ಪರಿಶುದ್ಧ ನಾಗಿರುತ್ತಾನೆ. ಅಂತಹವನ ವಂಶವು ಆಚಂದ್ರಾರ್ಕವಾಗಿ ಬೆಳೆಯುತ್ತದೆ. ಅವನು ಲೋಕದಲ್ಲಿ ಪೂಜಿತನಾಗುತ್ತಾನೆ. ಬ್ರಾಹ್ಮಣನು ನಿಯತವ್ರತನಾಗಿ ವರ್ಷಾಕಾಲದಲ್ಲಿ ನಾಲ್ಕು ತಿಂಗಳ ಕಾಲ ಅವಿಚ್ಛಿನ್ನವಾಗಿ ಮಹಾಭಾರತವನ್ನು ಪಾರಾಯಣಮಾಡಿದರೆ ಸರ್ವವಿಧವಾದ ಪಾಪಗಳಿಂದಲೂ ವಿಮುಕ್ತನಾಗು ತ್ತಾನೆ. ಮಹಾಭಾರತವನ್ನು ಪ್ರವಚನಮಾಡುವವನು ವೇದ-ವೇದಾಂಗ ಪಾರಂಗತನೆಂದೇ ಭಾವಿಸಬೇಕು. ಈ ಮಹಾಭಾರತದಲ್ಲಿ ದೇವತೆಗಳು, ರಾಜರ್ಷಿಗಳು, ಪುಣ್ಯವಂತರಾದ, ಪಾಪರಹಿತರಾದ ಬ್ರಹ್ಮರ್ಷಿಗಳು ಕೀರ್ತಿತ ರಾಗಿದ್ದಾರೆ. ನಾರಾಯಣಸ್ವರೂಪಿಯಾದ ಶ್ರೀಕೃಷ್ಣನ ಕೀರ್ತನವೂ ಈ ಮಹಾ ಭಾರತದಲ್ಲಿದೆ. ಭಗವಂತನಾದ ಪರಮೇಶ್ವರನ ಮತ್ತು ಶಿವೆಯ ಕೀರ್ತನ ವಿದೆ. ಷಾಣ್ಮಾತುರನಾದ (ಆರುಮಂದಿ ತಾಯಂದಿರನ್ನು ಹೊಂದಿರುವ) ಕಾರ್ತಿಕೇಯನ (ಷಣ್ಮುಖನ) ಜನ್ಮವೃತ್ತಾಂತವಿದೆ. ಗೋ-ಬ್ರಾಹ್ಮಣರ ಮಾಹಾತ್ಮ್ಯಕೀರ್ತನವೂ ಇದೆ. ಬ್ರಾಹ್ಮಣಸಭೆಯಲ್ಲಿ ಇದನ್ನು ಪ್ರವಚನ ಮಾಡುವವನು ಸಕಲಪಾಪಗಳಿಂದಲೂ ವಿಮುಕ್ತನಾಗಿ, ಸ್ವರ್ಗವನ್ನೂ ಜಯಿಸಿ, ಶಾಶ್ವತವಾದ ಬ್ರಹ್ಮಲೋಕವನ್ನು ಪಡೆಯುತ್ತಾನೆ. ಶ್ರಾದ್ಧಕಾಲದಲ್ಲಿ ಬ್ರಾಹ್ಮಣರಿಗೆ ಮಹಾಭಾರತವನ್ನು ಶ್ರವಣಮಾಡಿಸಬೇಕು. ಒಂದು ಪಾದ ವನ್ನು ಶ್ರವಣಮಾಡಿಸಿದರೂ ಪಿತೃಗಳಿಗೆ ಅಕ್ಷಯವಾದ ಪುಣ್ಯಲೋಕಗಳು ಲಭ್ಯವಾಗುತ್ತವೆ. ಇಂದ್ರಿಯಗಳಿಂದಲೇ ಆಗಲೀ, ಮನಸ್ಸಿನಿಂದಲೇ ಆಗಲೀ, ತಿಳಿದೇ ಆಗಲೀ, ತಿಳಿಯದೇ ಆಗಲೀ–ಪ್ರತಿದಿನದಲ್ಲಿ ಮಾಡಿದ ಪಾಪಗಳು ಮಹಾಭಾರತದ ಆಖ್ಯಾನವನ್ನು ಕೇಳಿದೊಡನೆಯೇ ನಾಶವಾಗಿ ಹೋಗುತ್ತವೆ.

**ಭರತಾನಾಂ ಮಹಜ್ಜನ್ಮ ಮಹಾಭಾರತಮುಚ್ಯತೇ ॥೩೯॥**

ಭರತನ ವಂಶದ ರಾಜರ ಮಹತ್ತರವಾದ ಜನ್ಮವೃತ್ತಾಂತವನ್ನು

ವಿವರಿಸಿ ಈ ಗ್ರಂಥದಲ್ಲಿ ವ್ಯಾಸರು ಹೇಳಿರುವುದರಿಂದ ಇದಕ್ಕೆ 'ಮಹಾಭಾರತ' ಎಂದು ಹೆಸರು ಬಂದಿದೆ. ಮಹಾಭಾರತವೆಂಬ ಹೆಸರಿನ ಈ ನಿರುಕ್ತವನ್ನು (ವ್ಯುತ್ಪತ್ತಿಯನ್ನು ) ತಿಳಿದವನೂ ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಭರತನ ವಂಶೀಯರ ಮಹಾದ್ಭುತವಾದ ಇತಿಹಾಸವಿದು. ಇದನ್ನು ಕೀರ್ತನಮಾಡಿದರೆ ಮನುಷ್ಯನ ಮಹತ್ತರವಾದ ಪಾಪಗಳೂ ಪರಿ ಹಾರವಾಗುತ್ತವೆ. ಕೃಷ್ಣದ್ವೈಪಾಯನರು ಪ್ರತಿನಿತ್ಯವೂ ಬ್ರಾಹ್ಮಮುಹೂರ್ತ ದಲ್ಲೆದ್ದು ಶೌಚ-ಮುಖಮಾರ್ಜನಾದಿಗಳನ್ನು ಮುಗಿಸಿ, ಸ್ನಾನಮಾಡಿ, ನಿತ್ಯ ಕರ್ಮಗಳನ್ನು ಮುಗಿಸಿಕೊಂಡು, ಮೂರು ವರ್ಷಗಳ ಕಾಲ ಅವಿಚ್ಛಿನ್ನವಾಗಿ ಈ ಮಹಾಭಾರತವನ್ನು ಮೊದಲಿನಿಂದ ಕಡೆಯವರೆಗೂ ರಚಿಸಿ ಪೂರೈ ಸಿದರು. ಆದುದರಿಂದ ಕೃಷ್ಣದ್ವೈಪಾಯನರಿಂದ ಪ್ರೋಕ್ತವಾದ ಮಹಾಭಾರತದ ಪುಣ್ಯಕಥೆಯನ್ನು ಬ್ರಾಹ್ಮಣರು ನಿಯಮದಿಂದಲೇ ಕೇಳಬೇಕು. ಈ ಪುಣ್ಯಕಥೆಯನ್ನು ಯಾರು ಹೇಳುತ್ತಾರೆಯೋ ಮತ್ತು ಯಾರು ಕೇಳುತ್ತಾರೆಯೋ ಅವರು ತಮ್ಮ ಪೂರ್ವಾರ್ಜಿತವಾದ ಕರ್ಮಗಳ ಫಲದ ವಿಷಯವಾಗಿ ಶೋಕಿಸುವ ಕಾರಣವಿಲ್ಲ. ದುಷ್ಕರ್ಮದ ಫಲವಿದ್ದರೆ ಅದು ಈ ಕಥಾಶ್ರವಣದಿಂದ ವಿನಾಶವಾಗುತ್ತದೆ. ಸತ್ಕರ್ಮದ ಫಲವಿದ್ದರೆ ಅದು ಇನ್ನೂ ಅಭಿವೃದ್ಧಿಯಾಗುತ್ತದೆ.

ಧರ್ಮಕಾಮಿಯಾದ ಮಾನವನು ಈ ಮಹಾಭಾರತದ ಕಥೆಯನ್ನು ಆಮೂಲಾಗ್ರವಾಗಿ ಕೇಳಲೇಬೇಕು. ಹಾಗೆ ಕೇಳಿದ ಮಾನವರು ಸಕಲಸಿದ್ಧಿ ಗಳನ್ನೂ ಪಡೆಯುತ್ತಾರೆ. ಪುಣ್ಯಕರವಾದ ಮಹಾಭಾರತದ ಕಥೆಯನ್ನು ಮೊದಲಿನಿಂದ ಕೇಳುತ್ತಿರುವವನಿಗೆ ಸ್ವರ್ಗಸುಖವೂ ಬೇಕಾಗುವುದಿಲ್ಲ. ಸ್ವರ್ಗಕ್ಕಿಂತಲೂ ಹೆಚ್ಚಿನ ಆನಂದವನ್ನು ಮಹಾಭಾರತಕಥಾಶ್ರವಣದಿಂದಲೇ ಮಾನವನು ಪಡೆಯುತ್ತಾನೆ. ಯಾವನು ಅದ್ಭುತವಾದ ಈ ಮಹಾಭಾರತ ವನ್ನು ಶ್ರದ್ಧೆಯಿಂದ ಕೇಳುತ್ತಾನೆಯೋ ಮತ್ತು ಇತರರಿಗೂ ಇದನ್ನು ತಿಳಿಯು ವಂತೆ ಹೇಳುತ್ತಾನೆಯೋ–ಅಂತಹ ಮಾನವನು ರಾಜಸೂಯ ಮತ್ತು ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನು ಪಡೆಯುತ್ತಾನೆ. ಸಮುದ್ರ ಮತ್ತು ಮೇರುಪರ್ವತಗಳು ರತ್ನನಿಧಿಗಳೆಂದು ಪ್ರಸಿದ್ಧವಾಗಿರುವಂತೆ– ಮಹಾಭಾರತವೂ ಕೂಡ ತತ್ತ್ವರತ್ನಗಳಿಗೆ ಆಕರವಾಗಿದೆ. ಜನಮೇಜಯ!

ಈ ಮಹಾಭಾರತವು ವೇದಕ್ಕೆ ಸಮಾನವಾದುದು. ಪರಮಪವಿತ್ರವಾದುದು. ಇತಿಹಾಸಗಳಲ್ಲಿ ಉತ್ತಮವಾದುದು. ಸರ್ವಕಾಲಗಳಲ್ಲಿಯೂ ಶ್ರವಣ ಮಾಡಲು ಅರ್ಹವಾದುದು. ಕಿವಿಗಳಿಗೆ ಇಂಪುಕೊಡುವ ಗ್ರಂಥವಿದು. ಇದರ ಶ್ರವಣ ಮತ್ತು ಮನನಗಳಿಂದ ಅಂತಃಕರಣವು ಪಾವನವಾಗುತ್ತದೆ. ಮಾನವನ ಸೌಶೀಲ್ಯವನ್ನು ಇದು ಹೆಚ್ಚಿಸುತ್ತದೆ. ಯಾರು ಈ ಮಹಾಭಾರತವನ್ನು ಬರೆದು ಆ ಗ್ರಂಥವನ್ನು ಮಹಾಭಾರತದ ಪ್ರವಚನಕಾರರಿಗೆ ದಾನಮಾಡುವರೋ–ಅಂತಹವರಿಗೆ ಸಮುದ್ರವನ್ನೇ ಒಡ್ಯಾಣರೂಪವಾಗಿ ಹೊಂದಿರುವ ಈ ಅಖಂಡಭೂಮಂಡಲವನ್ನೇ ದಾನಮಾಡಿದಷ್ಟು ಪುಣ್ಯವು ಲಭಿಸುತ್ತದೆ. ಜನಮೇಜಯ! ಪುಣ್ಯಪ್ರಾಪ್ತಿಗೂ–ಶತ್ರುಗಳ ವಿಜಯಕ್ಕೂ ಸಾಧಕವಾದ, ಬಹುಹರ್ಷಕರವಾದ, ದಿವ್ಯವಾದ, ನನ್ನಿಂದ ಹೇಳಲ್ಪಡುವ ಈ ಮಹಾಭಾರತದ ಕಥೆಯನ್ನು ಆಮೂಲಾಗ್ರವಾಗಿ ತದೇಕಚಿತ್ತನಾಗಿ ಕೇಳುವವನಾಗು. ನಾನು ಹಿಂದೆಯೇ ಒಮ್ಮೆ ಹೇಳಿದ್ದಂತೆ ಈ ಮಹಾಭಾರತದ ಆಖ್ಯಾನವನ್ನು ಕೃಷ್ಣದ್ವೈಪಾಯನರು ಪ್ರತಿದಿನವೂ ಬ್ರಾಹ್ಮಮುಹೂರ್ತದಲ್ಲೆದ್ದು ನಿತ್ಯಕರ್ಮಗಳನ್ನು ಮುಗಿಸಿಕೊಂಡು ಅವಿಚ್ಛಿನ್ನವಾಗಿ ರಚಿಸುತ್ತಾ ಮೂರು ವರ್ಷಗಳ ಅವಧಿಯಲ್ಲಿ ಮುಗಿಸಿದರು.

**ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।**
**ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ಕ್ವಚಿತ್ ॥೫೩॥**

ಧರ್ಮದ ವಿಷಯದಲ್ಲಿಯೇ ಆಗಲೀ, ಅರ್ಥದ ವಿಷಯದಲ್ಲಿಯೇ ಆಗಲೀ, ಕಾಮದ ವಿಷಯದಲ್ಲಿಯೇ ಆಗಲೀ ಮತ್ತು ಮೋಕ್ಷದ ವಿಷಯ ದಲ್ಲಿಯೇ ಆಗಲೀ–ಮಹಾಭಾರತದಲ್ಲಿ ಹೇಳಿರುವುದು ಉಳಿದ ಗ್ರಂಥ ಗಳಲ್ಲಿದೆ. ಆದರೆ ಮಹಾಭಾರತದಲ್ಲಿಲ್ಲದಿರುವ ವಿಷಯಗಳು ಗ್ರಂಥಾಂತರ ಗಳಲ್ಲಿರುವ ಸಾಧ್ಯತೆಯೇ ಇಲ್ಲ."

೬೨ನೆಯ ಅಧ್ಯಾಯವು ಮುಗಿಯಿತು.

೬೩ನೆಯ ಅಧ್ಯಾಯ ಅಂಶಾವತರಣಪರ್ವ (ಮುಂದುವರಿದಿದೆ.)

## ಉಪರಿಚರನ ಚರಿತ್ರೆ: ಸತ್ಯವತೀ, ವ್ಯಾಸ ಮೊದಲಾದವರ ಸಂಕ್ಷೇಪವಾದ ಜನ್ಮಕಥೆ

"ಜನಮೇಜಯ! ಪೂರ್ವದಲ್ಲಿ ಧರ್ಮಿಷ್ಠನಾದ ಉಪರಿಚರನೆಂಬ

ರಾಜನಿದ್ದನು. ಅವನಿಗೆ ಅರಣ್ಯಕ್ಕೆ ಹೋಗಿ ಮೃಗಗಳನ್ನು ಬೇಟೆಯಾಡುವುದು ನಿತ್ಯಕರ್ಮವಾಗಿದ್ದಿತು. ಅವನು ಇಂದ್ರನ ಆದೇಶದಂತೆ ರಮಣೀಯವಾಗಿದ್ದ ಚೇದಿರಾಜ್ಯವನ್ನೂ ತನ್ನದನ್ನಾಗಿ ಮಾಡಿಕೊಂಡು ಆಳುತ್ತಿದ್ದನು."

ಜನಮೇಜಯನು ಕೇಳುತ್ತಾನೆ :

"ಬ್ರಾಹ್ಮಣೋತ್ತಮರೇ! ಇಂದ್ರನು ಉಪರಿಚರನಿಗೆ ಚೇದಿರಾಜ್ಯವನ್ನೇಕೆ ಕೊಟ್ಟನು? ಯಾವ ಸಂದರ್ಭದಲ್ಲಿ ಕೊಟ್ಟನು? ಎಲ್ಲ ವಿಷಯಗಳನ್ನೂ ವಿವರಿಸಿ ಹೇಳಿರಿ."

"ಮಹಾರಾಜ! ಅನುದಿನವೂ ಬೇಟೆಯಲ್ಲಿಯೇ ಕಾಲಕಳೆಯುತ್ತಿದ್ದ ಉಪರಿಚರನಿಗೆ ಕಾಲಾಂತರದಲ್ಲಿ ಬೇಟೆಯ ವಿಷಯವಾಗಿ ಬಹಳ ಜುಗುಪ್ಸೆ ಯುಂಟಾಗಿ ತಾನಿನ್ನು ಮೃಗಗಳನ್ನು ಬೇಟೆಯಾಡಕೂಡದೆಂದು ನಿಶ್ಚಯಿಸಿ, ಶಸ್ತ್ರಾಸ್ತ್ರಗಳನ್ನು ಬದಿಗಿಟ್ಟು ಅರಣ್ಯದಲ್ಲಿಯೇ ಆಶ್ರಮವೊಂದನ್ನು ಕಟ್ಟಿಕೊಂಡು ತಪಸ್ಸುಮಾಡಲು ಉಪಕ್ರಮಿಸಿದನು. ಅವನ ತಪಸ್ಸು ದಿನ-ದಿನಕ್ಕೂ ಉಗ್ರವಾಗಿ ಪರಿಣಮಿಸಿತು. ಇಂದ್ರಪದವಿಯ ಪ್ರಾಪ್ತಿಗಾಗಿ ಉಪರಿ ಚರವಸುವು ಇಷ್ಟು ಘೋರವಾದ ತಪಸ್ಸನ್ನು ಮಾಡುತ್ತಿರುವನೆಂದು ದೇವತೆ ಗಳು ಭಾವಿಸಿದರು. ಒಡನೆಯೇ ಇಂದ್ರಪ್ರಮುಖರಾದ ದೇವತೆಗಳು ರಾಜ ನನ್ನು ಸಮೀಪಿಸಿ ಸಾಂತ್ವವಚನಗಳಿಂದ ಅವನನ್ನು ಸಂತೈಸಿ ಘೋರವಾದ ತಪಸ್ಸಿನಿಂದ ವಿಮುಖನನ್ನಾಗಿ ಮಾಡಿದರು. ಉಪರಿಚರನನ್ನು ತಪಸ್ಸಿನಿಂದ ವಿಮುಖಗೊಳಿಸಲು ಅವನನ್ನು ದೇವತೆಗಳು ಬಹಳವಾಗಿ ಹೊಗಳಿದರು.

"ಲೋಕಕ್ಕೆ ಮತ್ತು ಧರ್ಮಕ್ಕೆ ಎಂತಹ ಅಪಚಾರವನ್ನು ಮಾಡುತ್ತಿರುವೆ, ಮಹಾರಾಜ! ನೀನೇನಾದರೂ ರಾಜ್ಯದ ರಕ್ಷಣೆಯನ್ನು ಸಂಪೂರ್ಣವಾಗಿ ಕೈಬಿಟ್ಟರೆ ಈ ಭೂಮಿಯಲ್ಲಿ ಧರ್ಮವೇ ಲೋಪವಾಗಿಬಿಡುವುದಿಲ್ಲವೇ? ನಿನ್ನಿಂದ ಸಂರಕ್ಷಿತರಾದ ಪ್ರಜೆಗಳು ತಮ್ಮ-ತಮ್ಮ ಧರ್ಮಗಳಲ್ಲಿ ನಿರತ ರಾಗಿರುತ್ತಿದ್ದರು. ದೇಶದಲ್ಲಿ ನಿನ್ನಂತಹ ಧರ್ಮಪರನಾದ ರಾಜನಿಲ್ಲದಿದ್ದರೆ ಅನಾಯಕತ್ವವುಂಟಾಗಿ ಪ್ರಜೆಗಳು ಸ್ವೇಚ್ಛಾಚಾರಿಗಳಾಗುತ್ತಾರೆ. ನಿನ್ನಿಂದ ಸಂರಕ್ಷಿತವಾದ ಧರ್ಮವು ಅಖಂಡಜಗತ್ತನ್ನೇ ಧರಿಸಿರುತ್ತದೆ. ಆದುದರಿಂದ

ನೀನು ಈ ಘೋರತಪಸ್ಸನ್ನು ಇಲ್ಲಿಗೇ ನಿಲ್ಲಿಸಿ ರಾಜ್ಯಕ್ಕೆ ಹಿಂದಿರುಗುವುದು ಯೋಗ್ಯವಾಗಿದೆ."

ದೇವತೆಗಳು ಹೀಗೆ ಹೇಳಿದ ನಂತರ ಇಂದ್ರನು ಉಪರಿಚರನಿಗೆ ಹೇಳಿದನು :

"ಉಪರಿಚರ! ನೀನು ಪುಣ್ಯಲೋಕಗಳ ಪ್ರಾಪ್ತಿಗಾಗಿ ಈ ಘೋರ ವಾದ ತಪಸ್ಸನ್ನು ಮಾಡುತ್ತಿರುವೆಯಾ? ಪುಣ್ಯಲೋಕಗಳ ಪ್ರಾಪ್ತಿಯೇ ನಿನ್ನ ಗುರಿಯಾಗಿರುವುದಾದರೆ ಅವುಗಳನ್ನು ನೀನು ತಪಸ್ಸಿನಿಂದ ಸಾಧಿಸಬೇಕಾ ಗಿಲ್ಲ. ಏಕಾಗ್ರಚಿತ್ತನಾಗಿದ್ದುಕೊಂಡು ಲೋಕದಲ್ಲಿ ಧರ್ಮವನ್ನು ಪರಿಪಾಲಿಸು. ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡು. ಪ್ರಜೆಗಳನ್ನೂ ಧರ್ಮ ನಿರತರನ್ನಾಗಿ ಮಾಡು. ಅದರಿಂದಲೇ ನೀನು ಶಾಶ್ವತವಾದ ಪುಣ್ಯಲೋಕ ಗಳನ್ನು ಪಡೆಯುವೆ. ಸದ್ಯದಲ್ಲಿ ನೀನು ಭೂಮಿಯಲ್ಲಿ ರಾಜನಾಗಿರು. ನಾನು ಸ್ವರ್ಗದಲ್ಲಿ ರಾಜನಾಗಿರುವೆನು. ಇನ್ನು ಮುಂದೆ ನಾನು ನಿನ್ನ ಪ್ರಿಯಮಿತ್ರ ನಾಗಿರುತ್ತೇನೆ. ಈ ಪೃಥ್ವಿಯಲ್ಲಿ ನಿನಗೆ ಯಾವ ದೇಶವು ರಮ್ಯವಾಗಿ ಕಾಣು ವುದೋ ಅಲ್ಲಿಯೇ ನೀನು ವಾಸವಾಗಿರಬಹುದು. ನನ್ನ ಅಭಿಪ್ರಾಯದಲ್ಲಿ ಚೇದಿರಾಜ್ಯದಲ್ಲಿ ಧನ-ಧಾನ್ಯಸಮೃದ್ಧಿಯಿದೆ. ಪಶುಸಮೃದ್ಧಿಯಿದೆ. ರಾಜ್ಯವು ಪುಣ್ಯಭೂಯಿಷ್ಠವಾಗಿದೆ. ಸ್ವರ್ಗದಂತೆಯೇ ಸುರಕ್ಷಿತವಾಗಿದೆ. ಯಾವ ವಿಧ ವಾದ ಏರಿಳಿತಗಳೂ ಇಲ್ಲದ ( ಸೌಮ್ಯವಾದ ) ವಾತಾವರಣವಿದೆ. ಬೆಳೆ ಬೆಳೆ ಯಲು ಯೋಗ್ಯವಾದ ಗುಣಗಳಿಂದ ಕೂಡಿರುವ ಭೂಮಿಯಿದೆ. ಆ ದೇಶದಲ್ಲಿ ಅರ್ಥಸಮೃದ್ಧಿಯಿದೆ. ಅರಮನೆಯ ಬೊಕ್ಕಸದಲ್ಲಿ ಹೇರಳವಾದ ಧನ-ಕನಕವಸ್ತುಗಳಿವೆ. ಭೂಮಿಯು ಐಶ್ವರ್ಯಪೂರ್ಣವಾಗಿದೆ. ಅಂತಹ ಚೇದಿರಾಜ್ಯದಲ್ಲಿ ನೀನು ಇನ್ನು ಮುಂದೆ ವಾಸಮಾಡು. ಚೇದಿದೇಶದ ಪಾಲಕ ನಾಗು. ಅಲ್ಲಿಯ ಪ್ರಜೆಗಳೂ ಧರ್ಮಶೀಲರಾಗಿದ್ದಾರೆ. ಸಾಧು-ಸತ್ಪುರುಷರು ಯಾವಾಗಲೂ ಅಲ್ಲಿ ಸಂತೃಪ್ತಿಯಿಂದ ಸಂತೋಷದಿಂದ ಇರುತ್ತಾರೆ. ಆ ದೇಶದಲ್ಲಿ ಪರಿಹಾಸಕ್ಕಾದರೂ ಜನರು ಸುಳ್ಳು ಹೇಳುವುದಿಲ್ಲ.

ಮಕ್ಕಳು ವಯಸ್ಕರಾದೊಡನೆಯೇ ಆಸ್ತಿಯನ್ನು ವಿಭಾಗಮಾಡಿ ಕೊಡುವಂತೆ ತಂದೆಯನ್ನು ಪೀಡಿಸುವುದಿಲ್ಲ. ಅವರು ಯಾವಾಗಲೂ ತಂದೆ-ತಾಯಿಗಳ ಶುಶ್ರೂಷೆಯಲ್ಲಿಯೇ ನಿರತರಾಗಿರುತ್ತಾರೆ. ಆ ದೇಶದಲ್ಲಿ ನೊಗಕ್ಕೆ

ಹಸುಗಳನ್ನು ಕಟ್ಟುವುದಿಲ್ಲ. ವಯಸ್ಸಾದ ಮತ್ತು ಬಡಕಲಾದ ಹಸುಗಳನ್ನು ಸಂರಕ್ಷಿಸುತ್ತಾರೆ. ನಾಲ್ಕು ವರ್ಣದವರೂ ತಮ್ಮ-ತಮ್ಮ ಧರ್ಮಗಳಲ್ಲಿ ನಿರತ ರಾಗಿರುತ್ತಾರೆ. ಇಂತಹ ರಮಣೀಯವಾದ ಚೇದಿರಾಜ್ಯಕ್ಕೆ ನೀನು ರಾಜ ನಾಗು. ನೀನು ಇದುವರೆಗೆ ಮಾಡಿದ ತಪಸ್ಸು ವ್ಯರ್ಥವಾಗದಂತೆ ನಿನಗೆ ಅಮೋಘವಾದ ವರಗಳನ್ನೂ ಕೊಡುತ್ತೇನೆ. ಸ್ವರ್ಗ-ಮರ್ತ್ಯ-ಪಾತಾಳ ಲೋಕಗಳಲ್ಲಿ ಏನೇ ನಡೆದರೂ, ಯಾವಾಗ ನಡೆದರೂ ಅದು ನಿನಗೆ ತಿಳಿ ಯುತ್ತದೆ. ನಿನಗೆ ತಿಳಿಯದಿರುವ ವಿಷಯವೇ ಯಾವುದೂ ಇರುವುದಿಲ್ಲ. ದೇವೋಪಭೋಗ್ಯವಾದ, ದಿವ್ಯವಾದ, ಸ್ಫಟಿಕಶಿಲಾನಿರ್ಮಿತವಾದ ವಿಮಾನ ವನ್ನು ನಿನಗೆ ಕೊಡುತ್ತೇನೆ. ಅದು ನಿನಗೆ ಸರ್ವದಾ ಆಕಾಶದಲ್ಲಿಯೇ ಉಪ ಸ್ಥಿತವಾಗಿರುತ್ತದೆ. ಈ ಪ್ರಪಂಚದಲ್ಲಿರುವ ಮಾನವಸಮೂಹದಲ್ಲಿ ನೀನೊ ಬ್ಬನೇ ಈ ವಿಮಾನದಲ್ಲಿ ಕುಳಿತುಕೊಳ್ಳಲು ಅರ್ಹನಾಗಿರುವೆ. ನೀನು ಈ ವಿಮಾನದಲ್ಲಿ ಸ್ವೇಚ್ಛೆಯಿಂದ ಸಂಚರಿಸಬಹುದು. ನೀನಿಚ್ಛಿಸಿದ ಲೋಕಗಳಿಗೆ ಈ ವಿಮಾನದಲ್ಲಿ ಕುಳಿತು ಹೋಗಬಹುದು. ಇದರ ಜೊತೆಗೆ ನಿನಗೆ 'ವೈಜಯಂತೀ' ಎಂಬ ಕಮಲಪುಷ್ಪದ ಹಾರವನ್ನೂ ಕೊಡುತ್ತೇನೆ. ಈ ಪುಷ್ಪಮಾಲೆಯು ಯಾವಾಗಲೂ ಬಾಡಿಹೋಗುವುದಿಲ್ಲ ಮತ್ತು ಸಂಗ್ರಾಮ ಕಾಲದಲ್ಲಿ ಇದನ್ನು ಧರಿಸುವುದರಿಂದ ಶಸ್ತ್ರಾಸ್ತ್ರಗಳ ಆಘಾತವೂ ಉಂಟಾಗುವು ದಿಲ್ಲ. ಇದು ಲೋಕದಲ್ಲಿ ಇಂದ್ರಮಾಲೆಯೆಂದೇ ಪ್ರಸಿದ್ಧವಾಗುತ್ತದೆ. ಈ ಮಾಲೆಯಿಂದ ನೀನು ಅನುಪಮವಾದ ಲಕ್ಷಣವನ್ನು ಹೊಂದಿದವನಾಗಿ ಇಂದ್ರನ ಮಾಲೆಯನ್ನು ಧರಿಸಿರುವವನೆಂದೇ ಪ್ರಸಿದ್ಧನಾಗುವೆ." ಇಂದ್ರನು ಹೀಗೆ ಹೇಳಿ ವಿಮಾನ-ವೈಜಯಂತೀಮಾಲೆಗಳನ್ನು ಕೊಟ್ಟನಲ್ಲದೇ ಒಂದು ವೈಣವದಂಡವನ್ನೂ ( ಬಿದಿರಿನ ಕೋಲನ್ನೂ ) ಉಪರಿಚರನಿಗೆ ಕೊಟ್ಟನು. ಆ ದಂಡವು ಕೇಳಿದವರ ಇಷ್ಟಾರ್ಥಗಳನ್ನು ಪೂರೈಸುತ್ತಿತ್ತಲ್ಲದೇ ಶಿಷ್ಟರಾದವರ ರಕ್ಷಣೆಯನ್ನು ಮಾಡುವ ಸಾಮರ್ಥ್ಯದಿಂದಲೂ ಕೂಡಿದ್ದಿತು. ಆ ದಂಡವನ್ನು ಉಪರಿಚರನು ಇಂದ್ರನಿಂದ ಸ್ವೀಕರಿಸಿ ಅದಕ್ಕೆ ಯಥಾವಿಧಿಯಾಗಿ ಪೂಜೆ ಮಾಡಿದನು.*

---

* ಉಪರಿಚರನು ಪ್ರಾರಂಭಿಸಿದ ಯಷ್ಟಿಪೂಜೆಯನ್ನು ರಾಜಮನೆತನದವರು ಈಗಲೂ ಮಾಡುತ್ತಾರೆ. ಹೊಸವರ್ಷದ ಮೊದಲನೆಯ ದಿನ ಯಷ್ಟಿಯೊಂದರಲ್ಲಿ (ಎತ್ತರವಾದ

ಇಂದ್ರನು ವೈಣವದಂಡವನ್ನು ಉಪರಿಚರನಿಗೆ ಕೊಟ್ಟು ಹಂಸರೂಪ ನಾಗಿ ತಾನೇ ಆ ದಂಡದಲ್ಲಿ ಆವಿರ್ಭವಿಸಿದನು. ಉಪರಿಚರನು ಬಹಳ ಭಕ್ತಿಯಿಂದ ಇಂದ್ರನು ದಯಪಾಲಿಸಿದ ಆ ಯಷ್ಟಿಯನ್ನು ಪೂಜೆಮಾಡಿದನು. ರಾಜಮುಖ್ಯನಾದ ಉಪರಿಚರವಸುವು ಮಾಡಿದ ಭಕ್ತಿಪೂರ್ವಕವಾದ ಪೂಜೆಯಿಂದ ಸುಪ್ರೀತನಾದ ಇಂದ್ರನು ಹೇಳಿದನು : "ಚೇದೀದೇಶದ ಅರಸನಾದ ಈ ಉಪರಿಚರವಸುವು ಯಷ್ಟಿಯ ಮೂಲಕವಾಗಿ ನನ್ನನ್ನು ಯಾವ ರೀತಿಯಲ್ಲಿ ಪೂಜಿಸಿರುವನೋ–ಅದೇ ರೀತಿಯಲ್ಲಿ ಪೃಥ್ವಿಯ ಇತರ ರಾಜರೂ ಪೂಜಿಸಿದಲ್ಲಿ ಅವರಿಗೂ ಸಹ ಅತುಲವಾದ ಸಂಪತ್ತೂ ಮತ್ತು ವಿಜಯವೂ ಲಭಿಸುತ್ತದೆ. ಆ ರಾಜರಾಳುವ ದೇಶದ ಪ್ರಜೆಗಳೂ ತೇಜೋಯುಕ್ತರಾಗಿಯೂ, ಸಂಪದ್ಯುಕ್ತರಾಗಿಯೂ ಇರುತ್ತಾರೆ. ಪ್ರಜೆಗಳು ಯಾವಾಗಲೂ ಆನಂದಭರಿತರಾಗಿರುತ್ತಾರೆ"–ಹೀಗೆಂದು ಇಂದ್ರನು ಅನುಗ್ರಹಿಸಿದನು.

ಜನಮೇಜಯ! ಉಪರಿಚರನು ಮಾಡುತ್ತಿದ್ದ ತಪಸ್ಸನ್ನು ತಪ್ಪಿಸಲು ಇಂದ್ರನು ವಿಮಾನ, ಮಾಲೆ, ವೈಣವದಂಡ–ಇವೆಲ್ಲವನ್ನೂ ಕೊಟ್ಟು ಉಪರಿಚರನನ್ನು ಸತ್ಕರಿಸಿದನು. ಈಗಲೂ ಯಷ್ಟಿಯ ಮೂಲಕವಾಗಿ ಇಂದ್ರನ ಉತ್ಸವವನ್ನು ಭೂ-ರತ್ನಾದಿ ದಾನಗಳಿಂದ ಯಾರು ಮಾಡುತ್ತಾರೆಯೋ–ಅವರು ಎಲ್ಲ ಕಾಲಗಳಲ್ಲಿಯೂ ಲೋಕದಲ್ಲಿ ಪೂಜ್ಯರಾಗುತ್ತಾರೆ.

ಇಂದ್ರನು ಹೇಳಿದಂತೆ ಉಪರಿಚರನು ಚೇದೀದೇಶದಲ್ಲಿಯೇ ಇದ್ದುಕೊಂಡು ಇಂದ್ರನ ಆ ವರದಾನದಿಂದಲೂ, ಯಜ್ಞ-ಯಾಗಾದಿಗಳಿಂದಲೂ, ಇಂದ್ರೋತ್ಸವದಿಂದಲೂ ಈ ಪೃಥ್ವಿಯನ್ನು ಧರ್ಮದಿಂದ ಬಹುಕಾಲದವರೆಗೆ ಪರಿಪಾಲಿಸುತ್ತಿದ್ದನು. ಇಂದ್ರನ ಪ್ರೀತಿಗಾಗಿ ರಾಜನು ಪ್ರತಿವರ್ಷವೂ ಇಂದ್ರೋತ್ಸವವನ್ನು ವಿಜೃಂಭಣೆಯಿಂದ ಆಚರಿಸುತ್ತಿದ್ದನು. ಅವನಿಗೆ ಅಮಿತೌಜಸ್ವಿಗಳಾದ ಐವರು ಪುತ್ರರಿದ್ದರು. ಆ ಐವರನ್ನೂ ಉಪರಿಚರನು ಒಂದೊಂದು ರಾಜ್ಯಕ್ಕೆ ಅಧಿಪತಿಗಳನ್ನಾಗಿ ಮಾಡಿದನು. ಮಹಾರಥನಾದ ಬೃಹದ್ರಥನೆಂಬ ಮಗನನ್ನು ಮಗಧರಾಜ್ಯದ ಸಿಂಹಾಸನದಲ್ಲಿ ಕುಳ್ಳಿರಿಸಿ

---

ಕೋಲಿನಲ್ಲಿ ) ಹಂಸರೂಪಿಯಾದ ಇಂದ್ರನನ್ನು ಆವಾಹನೆಮಾಡಿ ಅದನ್ನು ನೂತನವಸ್ತ್ರಗಳಿಂದ ಅಲಂಕರಿಸಿ ಯಥಾವಿಧಿಯಾಗಿ ಪೂಜಿಸುತ್ತಾರೆ.

ಪಟ್ಟಾಭಿಷೇಕಮಾಡಿದನು. ಪ್ರತ್ಯಗ್ರಹ, ಕುಶಾಂಬ ಅಥವಾ ಮಣಿವಾಹನ, ಮಾವೇಲ್ಲ ಮತ್ತು ಯದು ಎಂಬುವರು ರಾಜನ ಉಳಿದ ನಾಲ್ವರು ಮಕ್ಕಳು. ಉಪರಿಚರನು ಆ ನಾಲ್ವರ ಹೆಸರನ್ನೇ ನಾಲ್ಕು ದೇಶಗಳಿಗೂ ಇಟ್ಟು ಆ ದೇಶಗಳಿಗೆ ಅವರನ್ನು ರಾಜರನ್ನಾಗಿ ಮಾಡಿದನು. ಕ್ರಮೇಣ ಆ ಐವರು ರಾಜಕುಮಾರರ ಪ್ರತ್ಯೇಕ-ಪ್ರತ್ಯೇಕವಾದ ವಂಶವೇ ಬೆಳೆಯಿತು.

ಉಪರಿಚರರಾಜನು ಭೂಮಿಯನ್ನು ತನ್ನ ಐವರು ಪುತ್ರರಿಗೂ ಹಂಚಿ ಕೊಟ್ಟು, ತಾನು ಇಂದ್ರನು ಕೊಟ್ಟಿದ್ದ ಸ್ಫಟಿಕಶಿಲಾವಿಮಾನದಲ್ಲಿಯೇ ಯಾವಾಗಲೂ ಇದ್ದುಬಿಡುತ್ತಿದ್ದನು. ಆ ವಿಮಾನದಲ್ಲಿದ್ದಾಗ ಅವನನ್ನು ಗಂಧರ್ವಾಪ್ಸರೆಯರು ಸಂಸೇವಿಸುತ್ತಿದ್ದರು. ಮೊದಲು ಕೇವಲ ವ್ಯಾವಹಾರಿಕ ವಾಗಿದ್ದ ಅವನ ಹೆಸರು ಅನಂತರದಲ್ಲಿ ಅನ್ವರ್ಥನಾಮವಾಗಿ ಪರಿಣಮಿಸಿತು. 'ಉಪರಿಚರ' (ಯಾವಾಗಲೂ ಅಂತರಿಕ್ಷದಲ್ಲಿಯೇ ಸಂಚರಿಸತಕ್ಕವನು) ಎಂದೇ ಅವನು ಸರ್ವತ್ರ ಪ್ರಸಿದ್ಧನಾದನು.

ಒಮ್ಮೆ ವಸುಮಹಾರಾಜನು ಆಕಾಶದಲ್ಲಿ ಸ್ವೇಚ್ಛೆಯಿಂದ ಸಂಚರಿಸು ತ್ತಿದ್ದಾಗ ತನ್ನ ದೇಶದ ಒಂದೆಡೆಯಲ್ಲಿ ಹರಿಯುತ್ತಿದ್ದ ಶುಕ್ತಿಮತಿಯೆಂಬ ನದಿಯು ಸ್ತಬ್ಧಳಾಗಿ ನಿಂತಿರುವುದನ್ನು ಕಂಡನು. ಹತ್ತಿರಕ್ಕೆ ಹೋಗಿ ನೋಡಲಾಗಿ, ಕೋಲಾಹಲನೆಂಬ ಪರ್ವತರಾಜನು ನದಿಗೆ ಅಡ್ಡಲಾಗಿ ನಿಂತು ಶುಕ್ತಿಮತಿಯನ್ನು ಬಲಾತ್ಕಾರದಿಂದ ತಡೆದಿರುವ ವಿಷಯವು ತಿಳಿಯಿತು. ವಸುವು ಅದನ್ನು ನೋಡಿ ಪರಸ್ತ್ರೀಯನ್ನು ತಡೆಹಿಡಿದಿರುವನೆಂಬ ಕ್ರೋಧ ದಿಂದ ಕೋಲಾಹಲನನ್ನು ಮೆಟ್ಟಿದನು. ಅವನ ಪದಾಘಾತದಿಂದ ಕೋಲಾಹಲನ ಎದೆಯು ಸೀಳಿಹೋಯಿತು. ಶುಕ್ತಿಮತಿಯು, ಸೀಳಿಹೋದ ಅವನ ಎದೆಯ ಮೂಲಕ ನಿಧಾನವಾಗಿ ಪ್ರವಹಿಸತೊಡಗಿದಳು.* ರಾಜನು ಮಾಡಿದ ಉಪಕಾರಕ್ಕಾಗಿ—ಕೋಲಾಹಲನ ಸಂಪರ್ಕದಿಂದ ಜನಿಸಿದ ಇಬ್ಬರು ಮಕ್ಕಳನ್ನೂ ಶುಕ್ತಿಮತಿಯು ರಾಜನಿಗೆ ಕಾಣಿಕೆಯಾಗಿ ಕೊಟ್ಟು ತನ್ನ ನಿಜಪತಿ ಯಾದ ಸಾಗರವನ್ನು ಸೇರಲು ಆತುರದಿಂದ ಹೊರಟುಹೋದಳು.

ಶುಕ್ತಿಮತಿಯು ಕೊಟ್ಟ ಮಕ್ಕಳಾಗಲೇ ಪ್ರಾಪ್ತವಯಸ್ಕರಾಗಿದ್ದರು.

---

* ಇಲ್ಲಿ ನದೀ-ಪರ್ವತಗಳ ಅಧಿದೇವತೆಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗಿದೆ.

ವಸುವು ಯುವಕನನ್ನು ತನ್ನ ರಾಜ್ಯದ ಸೇನಾನಾಯಕನನ್ನಾಗಿಯೂ ಯುವತಿಯನ್ನು ತನ್ನ ಮಡದಿಯನ್ನಾಗಿಯೂ ಮಾಡಿಕೊಂಡನು. ಕೋಮಲಾಂಗಿಯಾದ ಗಿರಿಕೆಯಲ್ಲಿ ಉಪರಿಚರನು ಬಹಳ ಅನುರಕ್ತನಾಗಿದ್ದನು. ಅವಳ ವಿರಹವನ್ನು ಕ್ಷಣಮಾತ್ರವೂ ರಾಜನು ಸಹಿಸುತ್ತಿರಲಿಲ್ಲ. ರಾಜ್ಯಾಡಳಿತವನ್ನು ಅಮಾತ್ಯರೇ ನೋಡಿಕೊಳ್ಳುತ್ತಿದ್ದರು.

ಒಮ್ಮೆ ಗಿರಿಕೆಯು ಋತುಸ್ನಾತೆಯಾಗಿ ಪರಿಶುದ್ಧಳಾಗಿ ಪುತ್ರಕಾಮನೆಯಿಂದ ಪತಿಯೊಡನೆ ಸಮಾಗಮವನ್ನು ಆಶಿಸಿದಳು. ಅದೇ ಸಮಯದಲ್ಲಿ ವಸುಮಹಾರಾಜನ ಪಿತೃದೇವತೆಗಳು ಅರಮನೆಗೆ ಆಗಮಿಸಿ "ನಾವಿಂದು ಪ್ರತ್ಯಕ್ಷವಾಗಿಯೇ ಶ್ರಾದ್ಧಭೋಜನವನ್ನು ಸ್ವೀಕರಿಸಲು ಬಂದಿದ್ದೇವೆ. ಜಿಂಕೆಯನ್ನು ತಂದು ಭೋಜನಕ್ಕೆ ಸಿದ್ಧಗೊಳಿಸು"–ಎಂದು ಹೇಳಿದರು. ರಾಜನು ಕಾಮಮೋಹಿತನಾಗಿದ್ದರೂ ಪಿತೃಗಳ ಆಜ್ಞೆಯನ್ನು ನಿರ್ಲಕ್ಷಿಸದೇ ಕಡು ಚೆಲುವೆಯಾಗಿದ್ದ, ಬೇರೊಬ್ಬ ಲಕ್ಷ್ಮೀದೇವಿಯಂತೆಯೇ ಕಂಗೊಳಿಸುತ್ತಿದ್ದ ಗಿರಿಕೆಯನ್ನು ಸ್ಮರಿಸುತ್ತಾ ಜಿಂಕೆಗಳ ಬೇಟೆಗಾಗಿ ಕಾಡಿಗೆ ಹೋದನು.

ಪಿತೃದೇವತೆಗಳನ್ನು ಯಥೋಚಿತವಾದ ಆಸನಗಳಲ್ಲಿ ಕುಳ್ಳಿರಿಸಿ, ಉಪರಿಚರನು ಆಯುಧಪಾಣಿಯಾಗಿ ಅರಣ್ಯಕ್ಕೆ ಹೋದನು. ವಸಂತಕಾಲವಾದುದರಿಂದ ರಾಜನ ಆ ವನವು ಕುಬೇರನ ಚೈತ್ರರಥವನದಂತೆಯೇ ಕಾಣುತ್ತಿದ್ದಿತು. ಆ ದಿವ್ಯವನವು ಅಶೋಕ, ಸಂಪಿಗೆ, ಮಾವು, ಅತಿಮುಕ್ತಕ, ಪುನ್ನಾಗ, ಕರ್ಣಿಕಾರ, ಬಕುಲ, ಪಟಲ, ದಿವ್ಯಪಟಲ, ತೆಂಗು, ಚಂದನ, ಅರ್ಜುನ–ಇವೇ ಮುಂತಾದ ರಮ್ಯವಾದ ಫಲಪುಷ್ಪಭರಿತವಾದ ಮಹಾವೃಕ್ಷಗಳಿಂದ ಕಂಗೊಳಿಸುತ್ತಿದ್ದಿತು. ಗಿಡ-ಬಳ್ಳಿಗಳೆಲ್ಲವೂ ಹೂಗಳಿಂದ ಕೂಡಿ ಗಿರಿಕೆಯ ನವತಾರುಣ್ಯದ ಅವಸ್ಥೆಯನ್ನು ಪ್ರದರ್ಶಿಸುತ್ತಿವೆಯೋ ಎಂಬಂತೆ ತೋರುತ್ತಿದ್ದುವು. ಕೋಗಿಲೆಗಳ ಮೃದುವಾದ ದನಿಗೆ ಹಿಮ್ಮೇಳದಂತೆ 'ಸುಯ್' ಎಂದು ಶಬ್ದಮಾಡುತ್ತಾ ಮಕರಂದವನ್ನು ಸವಿಯಲು ಪುಷ್ಪಗಳ ಮೇಲೆ ಕುಳಿತಿರುವ ದುಂಬಿಗಳನ್ನು ನೋಡಿ ರಾಜನಿಗೆ ನಿಜವಾಗಿಯೂ ಮಾತ್ಸರ್ಯವೇ ಉಂಟಾಯಿತು. ನಡೆದು ಬಂದ ಆಯಾಸದಿಂದಲೂ ಮತ್ತು ಮಾನಸಿಕಕ್ಲೇಶದಿಂದಲೂ ಬೇಸತ್ತಿದ್ದ ರಾಜನು ಪುಷ್ಪಭರಿತವಾಗಿದ್ದ ಅಶೋಕ

ವೃಕ್ಷದಡಿಯಲ್ಲಿ ಪವಡಿಸಿದನು. ನಾನಾಪುಷ್ಪಗಳ ಸಂಪರ್ಕದಿಂದ ಸುಗಂಧ ವನ್ನು ಹೊತ್ತುತಂದಿದ್ದ ಮಂದಮಾರುತದ ಸ್ಪರ್ಶದಿಂದ ರಾಜನಿಗೆ ರತಿಸುಖದಲ್ಲಿ ಮನಸ್ಸುಂಟಾಯಿತು. ಇಂದ್ರನ ವರಪ್ರಭಾವದಿಂದ ಗಿರಿಕೆಯ ಹಾವ-ಭಾವಗಳನ್ನು ಕಾಣುತ್ತಿದ್ದ ರಾಜನ ರೇತಸ್ಸು ಸ್ಖಲಿಸಿತು. ರಾಜನು ಮರುಕ್ಷಣದಲ್ಲಿಯೇ ತನ್ನ ರೇತಸ್ಸು ವ್ಯರ್ಥವಾಗಬಾರದೆಂದು ವೃಕ್ಷದ ಎಲೆ ಯಲ್ಲಿ ಅದನ್ನು ಸಂಗ್ರಹಿಸಿಟ್ಟನು. "ನನ್ನ ರೇತಸ್ಸೂ ವ್ಯರ್ಥವಾಗಬಾರದು ; ನನ್ನ ಪತ್ನಿಯಾದ ಗಿರಿಕೆಯ ಋತುಕಾಲವೂ ಮೀರಿಹೋಗಬಾರದು"–ಹೀಗೆ ಯೋಚಿಸಿ, ತನ್ನ ಪತ್ನಿಯಲ್ಲಿ ರೇತಸ್ಥಾಪನೆಗೆ ಇದು ಸಕಾಲವಾಗಿರುವುದೆಂದೂ ಭಾವಿಸಿ ಉಪರಿಚರನು ಆ ರೇತಸ್ಸನ್ನು ಅಭಿಮಂತ್ರಿಸಿ ತನ್ನ ಸಮೀಪದಲ್ಲೇ ಇದ್ದ ಗಿಡಗಪಕ್ಷಿಯನ್ನು ಕರೆದು ಹೇಳಿದನು :

"ಸೌಮ್ಯನೇ! ನನಗೆ ಪ್ರೀತಿಯನ್ನುಂಟುಮಾಡುವ ಸಲುವಾಗಿ ನೀನೀಗಲೇ ಈ ನನ್ನ ವೀರ್ಯವನ್ನು ತೆಗೆದುಕೊಂಡು ಹೋಗಿ ಅರಮನೆ ಯಲ್ಲಿರುವ ಗಿರಿಕೆಗೆ ಕೊಡು. ಇದು ಅವಳ ಋತುಕಾಲವಾಗಿದೆ." ರಾಜನು ಹೀಗೆ ಹೇಳುತ್ತಲೇ ಗಿಡಗವು ರಾಜನು ಕೊಟ್ಟ ವಸ್ತುವನ್ನು ಜೋಪಾನವಾಗಿ ಪಂಜದಲ್ಲಿ ಹಿಡಿದುಕೊಂಡು ಅಂತರಿಕ್ಷದಲ್ಲಿ ಅತಿವೇಗವಾಗಿ ಹಾರಿಹೋಗು ತ್ತಿತ್ತು. ಗಿಡಗದ ಪಂಜದಲ್ಲಿದ್ದ ಪದಾರ್ಥವನ್ನು ಕಂಡು ಮಾಂಸವೆಂದೆಣಿಸಿ ಮತ್ತೊಂದು ಗಿಡಗವು ಅದನ್ನಪಹರಿಸಲು ರಾಜನು ಕಳುಹಿಸಿದ್ದ ಗಿಡಗಕ್ಕೆ ಎದುರಾಗಿ ಬಂದು ದಾಳಿನಡೆಸಿತು. ರಾಜನು ಕಳುಹಿಸಿದ್ದ ಗಿಡಗವು ತನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕೆಂಬ ಭಾವನೆಯಿಂದಲೂ ಮತ್ತು ರಾಜನಿತ್ತಿ ರುವ ವಸ್ತುವನ್ನು ಗಿರಿಕೆಗೆ ಕೊಡಬೇಕೆಂಬ ಆತುರದಿಂದಲೂ ಎದುರಾಳಿ ಯನ್ನೊಮ್ಮೆ ಪಂಜದಿಂದ ಹೊಡೆಯಲು ಹೋದಾಗ ಗಿಡಗನಿಗೆ ತಿಳಿಯ ದಂತೆಯೇ ಪಂಜದಲ್ಲಿದ್ದ ರೇತಸ್ಸು ಕೆಳಗೆ ಬಿದ್ದುಹೋಯಿತು. ಆದರೆ ಆ ರೇತಸ್ಸು ಭೂಮಿಯ ಮೇಲೆ ಬೀಳದೇ ಯಮುನೆಯಲ್ಲಿ ಬಿದ್ದಿತು. ಆ ರೇತಸ್ಸಿಗಾಗಿಯೇ ನೂರಾರು ವರ್ಷಗಳಿಂದ ಹಾತೊರೆಯುತ್ತಾ ಶಾಪಗ್ರಸ್ತಳಾಗಿ ಮೀನಿನ ರೂಪದಲ್ಲಿದ್ದ ಅದ್ರಿಕೆಯೆಂಬ ಅಪ್ಸರೆಯು–ರೇತಸ್ಸು ನೀರಿನಲ್ಲಿ ಬಿದ್ದೊಡನೆಯೇ ಸಂತೋಷದಿಂದ ವಿಶ್ವಾಸಪೂರ್ವಕವಾಗಿ ಧಾರಣೆಮಾಡಿ

ಗರ್ಭಧರಿಸಿದಳು. ನವಮಾಸಗಳು ತುಂಬಿದೊಡನೆಯೇ ವಿಧಿಯ ನಿಯ ಮಾನುಸಾರ ಗರ್ಭಿಣಿಯಾಗಿದ್ದ ಮೀನಿನ ರೂಪದಲ್ಲಿದ್ದ ಅಪ್ಸರೆಯು ಬೆಸ್ತರ ಬಲೆಯೊಳಗೆ ಸಿಕ್ಕಿಬಿದ್ದಳು. ಮೀನಿನ ವಿಚಿತ್ರಸ್ವರೂಪವನ್ನು ನೋಡಿ ಆಶ್ಚರ್ಯಹೊಂದಿದ ಬೆಸ್ತರು ಬಹಳ ಜೋಪಾನವಾಗಿ ಮೀನಿನ ಹೊಟ್ಟೆ ಯನ್ನು ಸೀಳಲು ಬೆಳದಿಂಗಳ ಕಾಂತಿಯನ್ನು ಹೊರಸೂಸುತ್ತಾ ದಿವ್ಯರೂಪ ವನ್ನು ಧರಿಸಿದ್ದ ಎರಡು ಶಿಶುಗಳು ಹೊರಗೆ ಬಂದುವು. ಬ್ರಾಹ್ಮಣನೊಬ್ಬನ (ಬ್ರಹ್ಮನ ) ಶಾಪದಿಂದ ಮೀನಿನ ರೂಪದಲ್ಲಿದ್ದ ಅಪ್ಸರೆಯು ನಿಜರೂಪವನ್ನು ಧರಿಸಿ, ಶಿಶುಗಳನ್ನು ಹರಸಿ, ಸ್ವರ್ಗಾರೋಹಣಮಾಡಿದಳು.

ಬೆಸ್ತರು ಮೀನಿನ ಹೊಟ್ಟೆಯಲ್ಲಿ ಹುಟ್ಟಿದ ಆ ಮಕ್ಕಳು ಅಸಾಧಾರಣ ವಾದ ಮಕ್ಕಳೆಂದು ಭಾವಿಸಿ ರಾಜನಲ್ಲಿಗೆ ಹೋಗಿ ನಡೆದ ವೃತ್ತಾಂತವನ್ನು ತಿಳಿಸಿದರು. ರಾಜನು ಅವುಗಳಲ್ಲಿ ಗಂಡುಮಗುವನ್ನು ಮಾತ್ರ ತಾನು ಸ್ವೀಕರಿಸಿ ಹೆಣ್ಣುಮಗುವನ್ನು ಸಾಕಿಕೊಳ್ಳುವಂತೆ ಬೆಸ್ತರ ರಾಜನಿಗೇ ಕೊಟ್ಟುಬಿಟ್ಟನು.

ಆ ಗಂಡುಮಗುವೇ ಮುಂದೆ ಮತ್ಸ್ಯರಾಜನೆಂಬ ಅಭಿಧಾನದಿಂದ ಪ್ರಸಿದ್ಧಿಹೊಂದಿದನು. ಬೆಸ್ತರ ನಾಯಕನಿಗೆ ಸೇರಿದ ಹೆಣ್ಣುಮಗಳು ಕೆಲವು ಕಾಲದವರೆಗೆ 'ಮತ್ಸ್ಯಗಂಧಾ' ಎಂದು ಪ್ರಸಿದ್ಧಳಾಗಿದ್ದಳು. ಬಾಲೆಯಾದ ಅವಳು ರೂಪ, ಸತ್ತ್ವ ಮತ್ತು ಗುಣಗಳಿಂದ ಕೂಡಿದವಳಾಗಿದ್ದಳು. ದಾಶದಂಪತಿಗಳು ಅವಳನ್ನು 'ಸತ್ಯವತೀ' ಎಂದು ಕರೆಯುತ್ತಿದ್ದರು. ಶುಕ್ಲ ಪಕ್ಷದ ಚಂದ್ರನಂತೆ ಹೆಣ್ಣುಮಗಳು ದಿನ-ದಿನಕ್ಕೂ ಅಭಿವೃದ್ಧಿಹೊಂದುತ್ತಿದ್ದಳು. ಬಾಲ್ಯಾವಸ್ಥೆಯು ಕಳೆದು ಕುಮಾರಿಯಾದ ಸತ್ಯವತಿಯು ದೋಣಿಯಲ್ಲಿ ಯಮುನೆಯ ಒಂದು ದಂಡೆಯಿಂದ ಮತ್ತೊಂದು ದಂಡೆಗೆ ಒಬ್ಬೊಬ್ಬರನ್ನೇ ದಾಟಿಸುತ್ತಿದ್ದಳು. ಪ್ರಯಾಣಿಕರು ಕುಮಾರಿಯ ಸಾಮರ್ಥ್ಯವನ್ನು ಮೆಚ್ಚಿ ಕೊಡುತ್ತಿದ್ದ ಹಣವನ್ನು ತಂದೆಗೆ ಕೊಡುತ್ತಿದ್ದಳು.

ತೀರ್ಥಯಾತ್ರೆಯಲ್ಲಿದ್ದ ಮಹರ್ಷಿಗಳಾದ ಪರಾಶರರಿಗೂ ಒಂದು

ದಿನ ನದಿಯನ್ನು ದಾಟುವ ಪ್ರಸಂಗವೊದಗಿತು. ಆ ಸಮಯದಲ್ಲಿ ಸತ್ಯವತಿಯಲ್ಲದೇ ಮತ್ತಾರೂ ದೋಣಿಯ ಸಮೀಪದಲ್ಲಿರಲಿಲ್ಲ. ತನ್ನ ರೂಪ-ಲಾವಣ್ಯಸಂಪತ್ತಿನಿಂದ ಸಿದ್ಧಪುರುಷರಿಗೂ ಕಾಮ್ಯಳಾಗಿದ್ದ, ಬಾಳೆಯ ಗಿಡದಂತೆ ತೊಡೆಗಳನ್ನು ಹೊಂದಿದ್ದ, ಸುಕುಮಾರಿಯಾದ, ದಿವ್ಯಕನ್ಯೆಯಾದ ಅವಳಲ್ಲಿ ಪರಾಶರರಿಗೆ ಅನುರಾಗವುಂಟಾಯಿತು. ಅವಳು ದಿವ್ಯಕನ್ಯೆಯೆಂಬುದೂ ಅವರ ಮನಸ್ಸಿಗೆ ತಿಳಿಯಿತು. ಆಕೆಯೊಡನೆ ಸಮಾಗಮ ಮಾಡುವ ಬಯಕೆಯನ್ನು ತಿಳಿಸಿದರು.

**'ಸಂಗಮಂ ಮಮ ಕಲ್ಯಾಣಿ ಕುರುಷ್ವ'**–'ಕಲ್ಯಾಣಿಯೇ! ನನ್ನೊಡನೆ ಸಮಾಗಮಮಾಡು'–ಎಂದು ಪರಾಶರರು ಹೇಳಿದರು. ಇದಕ್ಕೆ ಉತ್ತರವಾಗಿ ಸತ್ಯವತಿಯು ಹೇಳಿದಳು :

**ಪಶ್ಯ ಭಗವನ್ಪಾರಾವಾರೇ ಸ್ಥಿತಾನೃಷೀನ್ ।**
**ಆವಯೋರ್ದೃಷ್ಟಯೋರೇಭಿಃ ಕಥಂ ತು ಸ್ಯಾತ್ಸಮಾಗಮಃ ॥೭೩॥**

"ಮಹರ್ಷಿಗಳೇ! ಈ ನದಿಯ ಎರಡು ದಂಡೆಗಳಲ್ಲಿಯೂ ಹಲವಾರು ಋಷಿಗಳಿದ್ದಾರೆ. ಅವರೆಲ್ಲರೂ ನಮ್ಮಿಬ್ಬರನ್ನೂ ನೋಡುತ್ತಿರುವಾಗ ನಮ್ಮ ಸಮಾಗಮವು ಹೇಗೆ ಸಾಧ್ಯ?"

ಪರಾಶರರು ತಮ್ಮ ತಪಃಶಕ್ತಿಯಿಂದ ದೋಣಿಯ ಸುತ್ತಲೂ ಮಂಜು ಕವಿಯುವಂತೆ ಮಾಡಿದರು. ಆ ಎಲ್ಲ ಪ್ರದೇಶವೂ ಕತ್ತಲಿನಿಂದ ಕವಿದಿರು ವಂತೆ ಕಾಣುತ್ತಿದ್ದಿತು. ಮಹರ್ಷಿಗಳು ಹೀಗೆ ಹಿಮವನ್ನು ಸೃಷ್ಟಿಸಿದುದನ್ನು ನೋಡಿ ಸತ್ಯವತಿಯು ಆಶ್ಚರ್ಯಚಕಿತಳಾದಳು. ಅವಳಿಗೆ ನಾಚಿಕೆಯೂ ಉಂಟಾಯಿತು. ಆ ಅಪ್ಸರಕನ್ಯೆಯು ಕೈಜೋಡಿಸಿಕೊಂಡು ಹೇಳಿದಳು :

**ವಿದ್ಧಿ ಮಾಂ ಭಗವನ್ಕನ್ಯಾಂ ಸದಾ ಪಿತೃವಶಾನುಗಾಮ್ ।**
**ತ್ವತ್ಸಂಯೋಗಾಚ್ಚ ದುಷ್ಯೇತ ಕನ್ಯಾಭಾವೋ ಮಮಾನಘ ।**
**ಕನ್ಯಾತ್ವೇ ದೂಷಿತೇ ವಾಪಿ ಕಥಂ ಶಕ್ಷ್ಯೇ ದ್ವಿಜೋತ್ತಮ ॥೭೬॥**

**ಗೃಹಂ ಗನ್ತುಮೃಷೇ ಚಾಹಂ ಧೀಮನ್ನ ಸ್ಥಾತುಮುತ್ಸಹೇ ।**
**ಏತತ್ಸಂಚಿನ್ತ್ಯ ಭಗವನ್ವಿಧತ್ಸ್ವ ಯದನನ್ತರಮ್ ॥೭೭॥**

"ಮಹರ್ಷಿಗಳೇ! ತಮ್ಮ ಪ್ರಭಾವವು ಅಸಾಧಾರಣವಾದುದು. ನಿಮ್ಮ ಮಾತನ್ನು ಉಲ್ಲಂಘಿಸುವ ಶಕ್ತಿಯು ನನಗಿಲ್ಲ. ಆದರೂ ನಾನು ಕನ್ಯಾವಸ್ಥೆಯಲ್ಲಿದ್ದೇನೆ. ಅದೂ ಅಲ್ಲದೇ ನಾನು ನಮ್ಮ ತಂದೆಯ ಅಧೀನ ದಲ್ಲಿರತಕ್ಕವಳು.

ನಿಷ್ಪಾಪರೇ! ನಿಮ್ಮೊಡನೆ ಸಮಾಗಮಮಾಡಿದರೆ ನನ್ನ ಕನ್ಯಾಭಾವವು ದೂಷ್ಯವಾಗುತ್ತದೆ. ಕನ್ಯಾವಸ್ಥೆಗೆ ಕುಂದುಂಟಾದರೆ ಮನೆಗೂ ಹೋಗಲಾರೆನು; ಜೀವಿಸಿಯೂ ಇರಲಾರೆನು–ಇದನ್ನು ಚೆನ್ನಾಗಿ ಯೋಚಿಸಿ ಹೇಗೆ ಉಚಿತವೋ ಹಾಗೆ ನಡೆದುಕೊಳ್ಳಬಹುದಾಗಿದೆ."

ಸತ್ಯವತಿಯು ಹೇಳಿದ ಮಾತನ್ನು ಕೇಳಿ ಮುನಿಶ್ರೇಷ್ಠರಾದ ಪರಾಶರರು ಪ್ರಸನ್ನರಾಗಿ ಹೇಳಿದರು : **'ಮತ್ಪ್ರಿಯಂ ಕೃತ್ವಾ ಕನ್ಯೈವ ತ್ವಂ ಭವಿಷ್ಯಸಿ'**–'ನನಗೆ ಪ್ರಿಯವನ್ನುಂಟುಮಾಡಿದನಂತರ (ನನ್ನೊಡನೆ ಸಮಾಗಮಮಾಡಿದ ನಂತರ) ನೀನು ಪುನಃ ಕನ್ಯಾವಸ್ಥೆಯನ್ನೇ ಪಡೆಯುವೆ.'

ಸಾಮಾನ್ಯಮಾನವಿಯಂತೆ ನೀನು ಗರ್ಭಧಾರಣೆಯನ್ನೂ ಮಾಡ ಬೇಕಾಗಿಲ್ಲ. ನನ್ನ ಅನುಗ್ರಹದಿಂದ ತೇಜಸ್ವಿಯಾದ, ಮಹಾತಪಸ್ವಿಯಾದ ಮಗನನ್ನು ಈಗಲೇ ಪಡೆಯುವೆ ಮತ್ತು ಒಡನೆಯೇ ನಿನಗೆ ಪುನಃ ಕನ್ಯಾವಸ್ಥೆಯೂ ಪ್ರಾಪ್ತವಾಗುವುದು.

ಇಷ್ಟು ಮಾತ್ರವಲ್ಲ. ಮತ್ತೇನಾದರೂ ವರವನ್ನು ಕೇಳು, ಭಾಮಿನಿ! ನನ್ನ ಅನುಗ್ರಹವು ಸುಲಭಸಾಧ್ಯವಲ್ಲ. ಅಭೂತಪೂರ್ವವಾದುದು. ಇದು ವ್ಯರ್ಥವಾಗದಂತೆ ಯಾವುದಾದರೂ ವರವನ್ನು ಕೇಳು ; ಕೊಡುವೆನು."

ಸತ್ಯವತಿಯು ಕ್ಷಣಕಾಲ ಯೋಚಿಸಿ ಆಜನ್ಮಸಿದ್ಧವಾಗಿ ಬಂದಿದ್ದ ಮೀನಿನ ಸಂಬಂಧವಾದ ಶರೀರದ ದುರ್ಗಂಧವು ಹೋಗುವಂತೆ ಕರುಣಿಸಬೇಕೆಂದು ಋಷಿಗಳನ್ನು ಪ್ರಾರ್ಥಿಸಿದಳು. ಮಹರ್ಷಿಗಳ ಅನುಗ್ರಹದಿಂದಾಗಿ ದುರ್ಗಂಧವು ಹೋದುದು ಮಾತ್ರವಲ್ಲದೇ ಅವಳ ಶರೀರದಿಂದ ಸುಗಂಧವೇ ಹೊರಸೂಸಿತು.

ಅವಳ ಶರೀರದ ಸುಗಂಧವು ಯೋಜನದವರೆಗೂ ವ್ಯಾಪಿಸಿತು. ಅಂದಿನಿಂದವಳು–'ಯೋಜನಗಂಧಾ'–ಎಂಬ ಹೆಸರನ್ನೂ ಪಡೆದಳು. ಸತ್ಯ

ವತಿಯ ಆನಂದಕ್ಕೆ ಪಾರವೇ ಇರಲಿಲ್ಲ. ಮಹರ್ಷಿಗಳ ಭಸ್ಮಲೇಪಿತವಾಗಿದ್ದ ತೋಳಿನೊಳಗೆ ಸೇರಿಕೊಂಡಳು. ಪರಾಶರರ ಮಾತಿನಂತೆಯೇ ಎಲ್ಲವೂ ನಡೆಯಿತು. ಮಹಾತೇಜಸ್ವಿಯಾದ ಬಾಲಕನು ಯಮುನಾನದಿಯ ಮಧ್ಯದಲ್ಲಿದ್ದ ದ್ವೀಪದಲ್ಲಿಯೇ ಹುಟ್ಟಿದನು. ಹುಟ್ಟಿದೊಡನೆಯೇ ಬಾಲಕನು ತಾಯಿಗೆ ಸಾಷ್ಟಾಂಗಪ್ರಣಾಮಮಾಡಿ ತಪಸ್ಸುಮಾಡಲು ಅನುಜ್ಞೆಯನ್ನು ಬೇಡಿದನು. ತಾಯಿಯ ಅನುಜ್ಞೆಯನ್ನು ಪಡೆದು, ಸ್ಮರಿಸಿದಾಗ ಬರುವೆನೆಂದು ಅವಳಿಗೆ ಹೇಳಿ ಹೊರಟುಹೋದನು. ಆ ಬಾಲಕನೇ ಮುಂದೆ ಲೋಕಪ್ರಸಿದ್ಧನಾದ ಮಹರ್ಷೀ ಶ್ರೀಕೃಷ್ಣದ್ವೈಪಾಯನನಾದನು.

**ನ್ಯಸ್ತೋ ದ್ವೀಪೇ ಸ ಯದ್ಬಾಲಸ್ತಸ್ಮಾದ್ದ್ವೈಪಾಯನಃ ಸ್ಮೃತಃ ॥**

ಸತ್ಯವತಿಯು ಅವನನ್ನು ನದಿಯ ಮಧ್ಯದಲ್ಲಿದ್ದ ದ್ವೀಪದಲ್ಲಿ ಇಟ್ಟಿಳಾದ್ದರಿಂದ ಅವನಿಗೆ ದ್ವೈಪಾಯನನೆಂದು ಅನ್ವರ್ಥನಾಮವಾಯಿತು.

ನಾಲ್ಕು ಪಾದಗಳುಳ್ಳ ಧರ್ಮವು ಒಂದೊಂದು ಯುಗಕ್ಕೂ ಒಂದೊಂದು ಪಾದವನ್ನು ಕಳೆದುಕೊಳ್ಳುತ್ತಿರುವುದನ್ನೂ, ಮನುಷ್ಯರ ಆಯುಷ್ಯವನ್ನೂ ಮತ್ತು ಅವರ ಶಕ್ತಿಯನ್ನೂ, ಯುಗದ ವೈಪರೀತ್ಯವನ್ನೂ ದಿವ್ಯವಾದ ಅಂತಶ್ಚಕ್ಷುಸ್ಸಿನಿಂದ ನೋಡಿದ ಕೃಷ್ಣದ್ವೈಪಾಯನರು ವೇದಗಳಿಗೂ ಮತ್ತು ಬ್ರಾಹ್ಮಣರಿಗೂ ಒಳ್ಳೆಯದನ್ನು ಮಾಡುವ ಆಕಾಂಕ್ಷೆಯಿಂದ ಅಖಂಡವಾದ ವೇದವನ್ನು ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಿದರು.

**ವಿವ್ಯಾಸ ವೇದಾನ್ಯಸ್ಮಾತ್ಸ ತಸ್ಮಾದ್ವ್ಯಾಸ ಇತಿ ಸ್ಮೃತಃ ॥೮೮॥**

* ಕೃಷ್ಣದ್ವೈಪಾಯನರು ವೇದಗಳನ್ನು ವಿಭಾಗಿಸಿದ್ದರಿಂದ ಅವರಿಗೆ ವ್ಯಾಸರೆಂಬ ಮತ್ತೊಂದು ಅನ್ವರ್ಥನಾಮವೂ ಬಂದಿತು.

---

* ಅನನ್ತಾ ವೈ ವೇದಾಃ–ವೇದಗಳು ಅನಂತವಾಗಿವೆ. ಅವು ಎಷ್ಟಿವೆ ಎಂಬುದನ್ನು ಹೇಳಲು ಸಾಧ್ಯವಿಲ್ಲ. ಮೂರು ಬೆಟ್ಟಗಳ ರೂಪದಲ್ಲಿ ಮೂರು ವೇದಗಳೂ ಇವೆಯೆಂದು ವೇದದಲ್ಲಿಯೇ ಹೇಳಿದೆ. ಈ ಸಮಗ್ರವೇದವನ್ನೂ ಕೃತಯುಗದಲ್ಲಿ ತಿಳಿದುಕೊಳ್ಳುವ ಸಾಧ್ಯತೆಯಿದ್ದಿತು. ಕೃತಯುಗದಲ್ಲಿ ಧರ್ಮವು ನಾಲ್ಕು ಪಾದಗಳಿಂದಲೂ ಕೂಡಿ ವಿಜೃಂಭಿಸುತ್ತಿದ್ದಿತು. ಬ್ರಾಹ್ಮಣರು ಸದಾ ಬ್ರಹ್ಮನಿಷ್ಠರಾಗಿರುತ್ತಿದ್ದರು. ಬೇರೆಯ ಹವ್ಯಾಸವೇ ಇರಲಿಲ್ಲ. ಬ್ರಾಹ್ಮಣರು ಸ್ವೇಚ್ಛಾಮರಣಿಗಳಾಗಿದ್ದರು. ತ್ರೇತಾಯುಗದಲ್ಲಿ

ಪ್ರಭುಗಳಾದ, ವರದರಾದ ವೇದವ್ಯಾಸರು ತಾವು ವಿಭಾಗಿಸಿದ ವೇದ ಗಳನ್ನೂ ಮತ್ತು ತಾವೇ ರಚಿಸಿದ ಐದನೆಯ ವೇದವಾದ ಮಹಾಭಾರತವನ್ನೂ ತಮ್ಮ ಶಿಷ್ಯರಾದ ಸುಮಂತು, ಜೈಮಿನಿ, ಪೈಲ, ವೈಶಂಪಾಯನ– ಇವರಿಗೂ ಮತ್ತು ತಮ್ಮ ಮಗನಾದ ಶುಕನಿಗೂ ಉಪದೇಶಿಸಿದರು.

ಅನಂತರದಲ್ಲಿ ಶಾಂತನು ಮತ್ತು ಗಂಗಾದೇವಿಯರ ಸಮಾಗಮದಿಂದ ಅಷ್ಟವಸುಗಳ ಅಂಶದಿಂದ ಕೂಡಿ, ಮಹಾವೀರ್ಯನಾದ ಮತ್ತು ಮಹಾ ಯಶಸ್ವಿಯಾದ ಭೀಷ್ಮನು ಹುಟ್ಟಿದನು. ಯಮಧರ್ಮನು ಪೃಥ್ವಿಯಲ್ಲಿ ವಿದುರನಾಗಿ ಜನ್ಮತಾಳಿದನು. ಜನಮೇಜಯ! ಇದಕ್ಕೆ ಕಾರಣವನ್ನು ಸೂಕ್ಷ್ಮ ವಾಗಿ ಹೇಳುವೆನು ; ಕೇಳು. ವೇದಾರ್ಥವಿದನಾದ ಮಹಾಯಶೋವಂತ ನಾದ ಒಬ್ಬಾನೊಬ್ಬ ಮಹರ್ಷಿಯು ತನ್ನಷ್ಟಕ್ಕೆ ತಾನು ತಪಸ್ಸುಮಾಡಿಕೊಂಡಿ ದ್ದನು. ವಸ್ತುತಃ ಕಳ್ಳನಲ್ಲದಿದ್ದರೂ ಕಳ್ಳತನದ ಆಪಾದನೆಯನ್ನು ಹೊರಿಸಿ ಆ ಮಹರ್ಷಿಯನ್ನು, ಆ ದೇಶದ ರಾಜನು ಶೂಲಕ್ಕೇರಿಸಿದನು. ತನಗೆ ಕೊಟ್ಟ ಶಿಕ್ಷೆಗಾಗಿ ಋಷಿಯು ರಾಜನ ಮೇಲೆ ಕೋಪಗೊಳ್ಳಲಿಲ್ಲ. ಅಣಿಮಾಂಡವ್ಯ ನೆಂದು ವಿಖ್ಯಾತನಾಗಿದ್ದ ಆ ಋಷಿಯು ಪಾಪ-ಪುಣ್ಯಗಳ ಫಲದಾಯಕನಾದ ಯಮಧರ್ಮನನ್ನೇ ತನ್ನ ಸಮೀಪಕ್ಕೆ ಕರೆದು ಕೇಳಿದನು :

“ಯಮಧರ್ಮನೇ! ನಾನು ಬಾಲ್ಯದಲ್ಲಿ ಹುಡುಗಾಟಿಕೆಯ ಕಾರಣ ದಿಂದ ಒಂದು ದಿನ ಮರಿಹಕ್ಕಿಯನ್ನು ಹಿಡಿದು ಅದಕ್ಕೆ ಕಡ್ಡಿಯನ್ನು ಚುಚ್ಚಿ ದ್ದುಂಟು. ಅದು ಹೊರತಾಗಿ ನನ್ನ ಜನ್ಮದಲ್ಲಿ ನಾನು ಬೇರೆ ಯಾವ ಪಾಪ ಮಾಡಿದ ಸ್ಮರಣೆಯೂ ನನಗಿಲ್ಲ. ಅಲ್ಲಿಂದ ಮುಂದೆ ನಾನು ಬಹುವಾಗಿ ತಪ

---

ಧರ್ಮವು ಮೂರು ಪಾದಗಳಿಂದ ಕೂಡಿದ್ದಿತು. ದ್ವಾಪರಯುಗದಲ್ಲಿ ಧರ್ಮವು ಎರಡು ಪಾದಗಳಿಂದ ಕೂಡಿದ್ದಿತು. ಕಲಿಯುಗದಲ್ಲಿ ಒಂದು ಪಾದ ಮಾತ್ರವಿದೆ.

ಮನುಷ್ಯರ ಆಯುಷ್ಯವೂ ಕ್ಷೀಣಿಸುತ್ತಾ ಬಂದಿತು. ಅನಂತವಾದ ವೇದಗಳನ್ನು ಅಧ್ಯಯನಮಾಡುವ ಸಾಧ್ಯತೆಯಿಲ್ಲದೇ ಹೋಯಿತು. ಈ ಎಲ್ಲ ಪರಿಸ್ಥಿತಿಗಳನ್ನೂ ನೋಡಿ ವ್ಯಾಸರು ಅನಂತವಾಗಿದ್ದ ವೇದವನ್ನು ವಿಭಾಗಿಸಿದರು. ಒಂದೊಂದು ವೇದದಲ್ಲಿಯೂ ಎಷ್ಟೆಷ್ಟೋ ಶಾಖೆಗಳಿವೆ. ಸಾಮವೇದದಲ್ಲಿ ಸಹಸ್ರಶಾಖೆಗಳಿವೆಯೆನ್ನುತ್ತಾರೆ. ಕಲಿಯುಗದಲ್ಲಿ ಎಲ್ಲ ಶಾಖೆಗಳನ್ನೂ ಒಳಗೊಂಡ ಒಂದು ವೇದವನ್ನು ಅಧ್ಯಯನಮಾಡುವ ಸಾಧ್ಯತೆಯೂ

ಶ್ಚರಣೆಯನ್ನು ಮಾಡಿರುವೆನು. ನಾನು ಮಾಡಿರುವ ಮಹತ್ತರವಾದ ತಪಸ್ಸು ಬಾಲ್ಯದಲ್ಲಿ ತಿಳಿಯದೇ ಮಾಡಿದ ಒಂದು ಸಣ್ಣ ಪಾಪವನ್ನು ಹೋಗಲಾಡಿಸಲು ಸಮರ್ಥವಾಗಲಿಲ್ಲವೇ? ನೀನು ಯಾವ ವಿಧವಾದ ವಿವೇಚನೆಯೂ ಇಲ್ಲದೇ ನನಗೆ ಈ ಶಿಕ್ಷೆಯನ್ನು ಕೊಟ್ಟಿರುವೆ. ನಾನೀಗ ವಧ್ಯಸ್ಥಾನದಲ್ಲಿದ್ದೇನೆ. ನನ್ನ ವಧೆಗೆ ನೀನೇ ಕಾರಣನಾಗಿರುವೆ. ನಿನಗೆ ತಿಳಿದಿರುವಂತೆ–

**ಗರೀಯಾನ್ಬ್ರಾಹ್ಮಣವಧಃ ಸರ್ವಭೂತವಧಾದ್ಯತಃ |**
**ತಸ್ಮಾತ್ತ್ವಂ ಕಿಲ್ಬಿಷೀ ಧರ್ಮ ಶೂದ್ರಯೋನೌ ಜನಿಷ್ಯಸಿ ||೬೫||**

ಎಲ್ಲ ವಧೆಗಳಿಗಿಂತಲೂ ಬ್ರಾಹ್ಮಣನ ವಧೆಯು ಮಹಾಪಾಪಕರವಾದುದು. ನನ್ನ ವಧೆಗೆ ಕಾರಣನಾಗಿರುವ ನೀನೀಗ ಪಾಪಭೂಯಿಷ್ಠನಾಗಿರುವೆ. ನೀನು ಭೂಮಿಯಲ್ಲಿ ಶೂದ್ರನಾಗಿ ಜನ್ಮತಾಳುವೆ"–ಎಂದು ಶಾಪಕೊಟ್ಟನು. ಆ ಶಾಪದ ಕಾರಣದಿಂದಾಗಿ ಯಮಧರ್ಮನೂ ಭೂಮಿಯಲ್ಲಿ ಶೂದ್ರಯೋನಿಯಲ್ಲಿ ಜನ್ಮವನ್ನು ಪಡೆಯಬೇಕಾಯಿತು. ವಿದುರನೆಂಬ ಹೆಸರಿನಿಂದ ಯಮಧರ್ಮನು ಭೂಮಿಯಲ್ಲಿ ಜನ್ಮತಾಳಿದನು. ಯದ್ಯಪಿ ಶೂದ್ರಸ್ತ್ರೀಯಲ್ಲಿ ಹುಟ್ಟಿದವನಾದರೂ ವಿದುರನು ವಿದ್ಯಾವಂತನಾಗಿಯೂ, ಧರ್ಮಮೂರ್ತಿಯಾಗಿಯೂ, ಪಾಪರಹಿತನಾಗಿಯೂ ಇದ್ದನು. ಅದೇ ಸಮಯದಲ್ಲಿ ಗವಲ್ಗಣನಿಂದ ಋಷಿಸದೃಶನಾದ ಸಂಜಯನೆಂಬ ಸೂತನು ಹುಟ್ಟಿದನು. ಕುಂತಿಯಿನ್ನೂ ಕನ್ಯೆಯಾಗಿದ್ದಾಗಲೇ ಸೂರ್ಯನ ಸಮಾಗಮದಿಂದ ಮಹಾಬಲನಾದ ಕರ್ಣನನ್ನು ಪಡೆದಳು. ಅವನು ಹುಟ್ಟುವಾಗಲೇ ಕವಚವನ್ನೂ ಕರ್ಣಕುಂಡಲಗಳನ್ನೂ ಧರಿಸಿದ್ದನು. ಕರ್ಣ

---

ಇಲ್ಲ. ಎಷ್ಟು ಶಾಖೆಗಳಿವೆ? ಯಾವ-ಯಾವ ಶಾಖೆಗಳು ಎಲ್ಲೆಲ್ಲಿ ಪ್ರಚಲಿತವಾಗಿವೆ? ಎಂಬುದೂ ಸಹ ತಿಳಿಯದು. ಋಗ್ವೇದದಲ್ಲಿ ಒಂದು ಶಾಖೆಮಾತ್ರ ಪ್ರಚಲಿತವಾಗಿದೆ. ಯಜುರ್ವೇದದಲ್ಲಿ ಶುಕ್ಲ ಮತ್ತು ಕೃಷ್ಣ ಎಂಬ ಎರಡು ವಿಭಾಗಗಳಿದ್ದು ಎರಡರಲ್ಲಿಯೂ ಎರಡೆರಡು ಶಾಖೆಗಳು ಸದ್ಯದಲ್ಲಿ ಉಪಲಬ್ಧವಾಗಿವೆ. ಒಂದೊಂದು ಶಾಖೆಯನ್ನೇ ಅಧ್ಯಯನಮಾಡಬೇಕಾದರೆ ಇಂದಿನ ಅಧ್ಯಾಪನದ ಪ್ರಕಾರ, ಸುಮಾರು ಹನ್ನೆರಡು ವರ್ಷಗಳು ಬೇಕಾಗುತ್ತವೆ. ಭಾಷ್ಯಸಹಿತವಾಗಿ ಒಂದು ಶಾಖೆಯನ್ನು ಅಧ್ಯಯನಮಾಡಬೇಕಾದರೆ ಕಡೆಯಪಕ್ಷ ಇಪ್ಪತ್ತು ವರ್ಷಗಳಾದರೂ ಬೇಕಾಗುವುದು. ಇದರಿಂದ ವೇದಗಳ ಅಗಾಧತೆಯು ಎಷ್ಟೆಂಬುದನ್ನು ನಾವು ಊಹಿಸಬಹುದಾಗಿದೆ.

ಕುಂಡಲಗಳಿಂದ ಅವನ ಮುಖವು ಬಹಳ ಪ್ರಕಾಶಮಾನವಾಗಿ ಕಾಣುತ್ತಿದ್ದಿತು. ಸಕಲಲೋಕಗಳ ಕಲ್ಯಾಣಾರ್ಥವಾಗಿ ಸಕಲಲೋಕನಮಸ್ಕೃತನಾದ ಯಶೋವಂತನಾದ ವಿಷ್ಣುವು ದೇವಕೀ-ವಸುದೇವರ ಪುತ್ರನಾಗಿ ಅವತರಿಸಿದನು.

**ಅನಾದಿನಿಧನೋ ದೇವಃ ಸ ಕರ್ತಾ ಜಗತಃ ಪ್ರಭುಃ ।**
**ಅವ್ಯಕ್ತಮಕ್ಷರಂ ಬ್ರಹ್ಮ ಪ್ರಧಾನಂ ತ್ರಿಗುಣಾತ್ಮಕಮ್ ॥೧೦೦॥**

**ಆತ್ಮಾನಮವ್ಯಯಂ ಚೈವ ಪ್ರಕೃತಿಂ ಪ್ರಭವಂ ಪ್ರಭುಮ್ ।**
**ಪುರುಷಂ ವಿಶ್ವಕರ್ಮಾಣಂ ಸತ್ತ್ವಯೋಗಂ ಧ್ರುವಾಕ್ಷರಮ್ ॥೧೦೧॥**

**ಅನನ್ತಮಚಲಂ ದೇವಂ ಹಂಸಂ ನಾರಾಯಣಂ ಪ್ರಭುಮ್ ।**
**ಧಾತಾರಮಜಮವ್ಯಕ್ತಂ ಯಮಾಹುಃ ಪರಮವ್ಯಯಮ್ ॥೧೦೨॥**

**ಕೈವಲ್ಯಂ ನಿರ್ಗುಣಂ ವಿಶ್ವಮನಾದಿಮಜಮವ್ಯಯಮ್ ।**
**ಪುರುಷಃ ಸ ವಿಭುಃ ಕರ್ತಾ ಸರ್ವಭೂತಪಿತಾಮಹಃ ॥೧೦೩॥**

**ಧರ್ಮಸಂವರ್ಧನಾರ್ಥಾಯ ಪ್ರಜಜ್ಞೇಽನ್ಧಕವೃಷ್ಣಿಷು ।**

ಯಾವನು ಆದ್ಯಂತರಹಿತನೋ, ಸಂಪೂರ್ಣಜಗತ್ತಿಗೂ ಪ್ರಭುವೂ ಮತ್ತು ಜಗತ್ತಿನ ಕರ್ತೃವೂ ಆಗಿರುವನೋ, ಯಾವನನ್ನು ಆತ್ಮಸ್ವರೂಪ, ಅವ್ಯಯ, ಪ್ರಕೃತಿಸ್ವರೂಪ, ಉತ್ಪತ್ತಿಗೆ ಮೂಲಕಾರಣ, ಪರಮಪುರುಷ, ವಿಶ್ವಕರ್ಮ, ಸತ್ತ್ವ-ರಜಸ್ತಮಸ್ಸುಗಳ ಏಕಸ್ವರೂಪ, ಪ್ರಣವಸ್ವರೂಪ, ಅನಂತ, ಸ್ಥಿರ, ಹಂಸರೂಪಿ, ಪ್ರಭು, ಹುಟ್ಟು-ಸಾವುಗಳಿಲ್ಲದವ, ಅವ್ಯಕ್ತ, ವ್ಯಕ್ತರಹಿತ, ಕೈವಲ್ಯ, ಗುಣರಹಿತ, ವಿಶ್ವರೂಪ, ಅನಾದಿ, ಸರ್ವಲೋಕಪಿತಾಮಹ ಮುಂತಾಗಿ ಕರೆಯುವರೋ–ಅಂತಹ ಪುರುಷೋತ್ತಮನೂ, ವಿಭುವೂ ಆಗಿರುವ ಶ್ರೀಮನ್ನಾರಾಯಣನು ಪೃಥ್ವಿಯಲ್ಲಿ ಧರ್ಮಸಂಸ್ಥಾಪನಾರ್ಥವಾಗಿ ಅಂಧಕ-ವೃಷ್ಣಿಗಳ ವಂಶದಲ್ಲಿ ಶ್ರೀಕೃಷ್ಣನಾಗಿ ಅವತರಿಸಿದನು. ಶ್ರೀಕೃಷ್ಣನ ಅವತಾರವನ್ನನುಸರಿಸಿ ಸತ್ಯಕನಿಂದ ಸಾತ್ಯಕಿಯೂ, ಹೃದೀಕನಿಂದ ಕೃತವರ್ಮನೂ ಜನಿಸಿದರು. ಸಾತ್ಯಕಿ-ಕೃತವರ್ಮರು ಸಕಲಶಸ್ತ್ರಾಸ್ತ್ರ ಪಾರಂಗತರಾಗಿಯೂ, ಮಹಾವೀರ್ಯರಾಗಿಯೂ ಇದ್ದರು. ಉಗ್ರತಪಸ್ವಿ

ಯಾದ ಭರದ್ವಾಜನ ದಿವ್ಯರೇತಸ್ಸು ದ್ರೋಣಿಯಲ್ಲಿ ( ಪರ್ವತದ ಗುಹೆ ಅಥವಾ ಒಂದು ಪಾತ್ರೆಯಲ್ಲಿ ) ಬಿದ್ದು ಅದು ಅಲ್ಲಿಯೇ ಅಭಿವೃದ್ಧಿಹೊಂದಿ ಶಿಶುವಾಗಿ ಬೆಳೆಯಿತು. ದ್ರೋಣಿಯಲ್ಲಿ ಹುಟ್ಟಿದ ಆ ಮಗುವಿಗೆ ದ್ರೋಣ ನೆಂದೇ ಹೆಸರಾಯಿತು. ಮತ್ತೊಂದು ಸಮಯದಲ್ಲಿ ಮಹರ್ಷಿಯಾದ ಗೌತಮನ ರೇತಸ್ಸು ಜೊಂಡುಹುಲ್ಲಿನ ಪೊದೆಯಲ್ಲಿ ಬಿದ್ದು ಅದರಿಂದ ಒಂದು ಗಂಡು ಮಗುವೂ ಮತ್ತು ಒಂದು ಹೆಣ್ಣುಮಗುವೂ ಹುಟ್ಟಿದುವು. ಗಂಡುಮಗುವಿಗೆ ಕೃಪನೆಂದೂ ಹೆಣ್ಣುಮಗುವಿಗೆ ಕೃಪೀ ಎಂದೂ ಹೆಸರಿಡ ಲಾಯಿತು. ಪ್ರಾಪ್ತವಯಸ್ಕಳಾದ ಕೃಪಿಯನ್ನು ದ್ರೋಣರು ಮದುವೆಯಾದರು. ಕೃಪನು ಮಹಾಬಲಶಾಲಿಯೆನಿಸಿ ಧನುರ್ವಿದ್ಯೆಯಲ್ಲಿ ಪ್ರವೀಣನಾದನು. ಕೃಪೀ-ದ್ರೋಣಾಚಾರ್ಯರ ವಿವಾಹದ ಫಲರೂಪವಾಗಿ ಅಶ್ವತ್ಥಾಮನು ಜನಿಸಿದನು. ಸಾಕ್ಷಾತ್ ಯಜ್ಞೇಶ್ವರನಂತೆಯೇ ತೇಜಃಪುಂಜಯುಕ್ತನಾಗಿದ್ದ ಧೃಷ್ಟದ್ಯುಮ್ನನು–ದ್ರುಪದರಾಜನು ಯಜ್ಞಮಾಡುತ್ತಿದ್ದ ಸಮಯದಲ್ಲಿ ಯಜ್ಞೇಶ್ವರನ ಮಧ್ಯದಿಂದ ಹುಟ್ಟಿದನು. ದ್ರೋಣರನ್ನು ವಿನಾಶಮಾಡುವ ಸಲುವಾಗಿ ಅವನು ಹುಟ್ಟುವಾಗಲೇ ಧನುಷ್ಪಾಣಿಯಾಗಿಯೇ ಹುಟ್ಟಿದನು. ತೇಜಸ್ವಿನಿಯಾದ, ಶುಭಾಂಗಿನಿಯಾದ ಕೃಷ್ಣೆಯು–ಜಾಜ್ವಲ್ಯಮಾನವಾದ ಶರೀರದಿಂದಲೂ, ನಯನಮನೋಹರವಾದ ರೂಪಿನಿಂದಲೂ ಕೂಡಿದವಳಾಗಿ ಧೃಷ್ಟದ್ಯುಮ್ನನು ಹುಟ್ಟಿದ ಯಜ್ಞವೇದಿಕೆಯಿಂದಲೇ ಹುಟ್ಟಿ ದಳು. ಪ್ರಹ್ಲಾದನ ಶಿಷ್ಯನಾದ 'ನಗ್ನಜಿತ್' ಎಂಬ ಅಸುರನು ಮನುಷ್ಯ ಲೋಕದಲ್ಲಿ ಸುಬಲನೆಂಬ ರಾಜನಾಗಿ ಹುಟ್ಟಿದನು. ದೇವತೆಗಳ ಶಾಪ ದಿಂದಾಗಿ ಅವನ ಮಗನು ಧರ್ಮನಾಶಕನಾದನು. ಅವನೇ ಗಾಂಧಾರರಾಜ ನಾದ ಶಕುನಿಯು. ಸುಬಲನಿಗೆ ಗಾಂಧಾರಿಯೆಂಬ ಮಗಳೂ ಹುಟ್ಟಿದಳು. ಶಕುನಿ-ಗಾಂಧಾರಿಯರಿಬ್ಬರೂ ಅರ್ಥಶಾಸ್ತ್ರದಲ್ಲಿ ಬಹಳ ನಿಪುಣರಾಗಿದ್ದರು. ಆ ಗಾಂಧಾರಿಯೇ ಮುಂದೆ ದುರ್ಯೋಧನನಿಗೂ ಮತ್ತು ಅವನ ತೊಂಬ ತ್ತೊಂಬತ್ತು ಮಂದಿ ತಮ್ಮಂದಿರಿಗೂ ತಾಯಿಯಾದಳು. ವಿಚಿತ್ರವೀರ್ಯನ ಪತ್ನಿಯಾದ ಅಂಬಿಕೆಯಲ್ಲಿ ಕೃಷ್ಣದ್ವೈಪಾಯನರ ಅನುಗ್ರಹದಿಂದ ಧೃತರಾಷ್ಟ್ರನೂ, ಅಂಬಾಲಿಕೆಯಲ್ಲಿ ಮಹಾಬಲನಾದ ಪಾಂಡುವೂ ಹುಟ್ಟಿದರು. ಧರ್ಮಾರ್ಥಕುಶಲನೂ, ಧೀಮಂತನೂ, ಮೇಧಾವಿಯೂ, ಪಾಪರಹಿತನೂ

ಆದ ವಿದುರನು ಕೃಷ್ಣದ್ವೈಪಾಯನರ ಅನುಗ್ರಹದಿಂದ ಶೂದ್ರಯುವತಿಯಲ್ಲಿ ಹುಟ್ಟಿದನು. ಪಾಂಡುವಿನ ಇಬ್ಬರು ಪತ್ನಿಯರಲ್ಲಿ ದೇವತೆಗಳಿಗೆ ಸಮಾನರಾದ ಐವರು ಪುತ್ರರು ಜನಿಸಿದರು. ಐವರಲ್ಲಿ ಜ್ಯೇಷ್ಠನೇ ಸರ್ವಗುಣಸಂಪನ್ನನಾದ ಯುಧಿಷ್ಠಿರನು. ಐವರೂ ದೇವಾಂಶಸಂಭೂತರು. ಯಮಧರ್ಮನ ಅಂಶ ದಿಂದ ಯುಧಿಷ್ಠಿರನೂ, ವಾಯುವಿನ ಅಂಶದಿಂದ ಭೀಮನೂ, ಇಂದ್ರನ ಅಂಶದಿಂದ ಶಸ್ತ್ರಜ್ಞರಲ್ಲಿ ಶ್ರೇಷ್ಠನಾದ ಅರ್ಜುನನೂ, ಅಶ್ವಿನೀದೇವತೆಗಳ ಅಂಶಗಳಿಂದ ರೂಪಸಂಪನ್ನರಾದ, ಗುರುಶುಶ್ರೂಷಾಪರಾಯಣರಾದ ನಕುಲ-ಸಹದೇವರೂ ಹುಟ್ಟಿದರು. ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ದುರ್ಯೋಧನನೇ ಮೊದಲಾದ ನೂರು ಮಕ್ಕಳೂ, ವೈಶ್ಯಪತ್ನಿಯಲ್ಲಿ 'ಯುಯುತ್ಸು' ಎಂಬುವನೂ ಹುಟ್ಟಿದನು. ಧೃತರಾಷ್ಟ್ರನ ಮಕ್ಕಳಲ್ಲಿ ದುರ್ಯೋಧನ, ದುಃಶಾಸನ, ದುಃಸಹ, ದುರ್ಮರ್ಷಣ, ವಿಕರ್ಣ, ಚಿತ್ರಸೇನ, ವಿವಿಂಶತಿ, ಜಯ, ಸತ್ಯವ್ರತ, ಪುರುಮಿತ್ರ–ಈ ಹತ್ತು ಮಂದಿ ರಾಜಪುತ್ರರೂ ಮತ್ತು ವೈಶ್ಯಸ್ತ್ರೀಯಲ್ಲಿ ಹುಟ್ಟಿದ *ಯುಯುತ್ಸುವೂ ಮಹಾರಥರೆಂದು ಪ್ರಸಿದ್ಧರಾದರು.

ಅರ್ಜುನನಿಗೆ ಸುಭದ್ರೆಯಲ್ಲಿ ಮಹಾವೀರ್ಯನಾದ ಅಭಿಮನ್ಯುವು ಹುಟ್ಟಿದನು. ಅವನು ಶ್ರೀಕೃಷ್ಣನ ಸೋದರಳಿಯನು. ಮಹಾತ್ಮನಾದ ಪಾಂಡುವಿನ ಮೊಮ್ಮಗನು. ಐವರು ಪಾಂಡವರಿಗೂ ದ್ರೌಪದಿಯಲ್ಲಿ ರೂಪ ಸಂಪನ್ನರಾದ ಮತ್ತು ಸರ್ವಶಸ್ತ್ರವಿಶಾರದರಾದ ಐವರು ಮಕ್ಕಳು ಹುಟ್ಟಿದರು. ಯುಧಿಷ್ಠಿರನಿಂದ ಪ್ರತಿವಿಂಧ್ಯನೂ, ಭೀಮನಿಂದ ಸುತಸೋಮನೂ, ಅರ್ಜುನನಿಂದ ಶ್ರುತಕೀರ್ತಿಯೂ, ನಕುಲನಿಂದ ಶತಾನೀಕನೂ ಮತ್ತು ಸಹ ದೇವನಿಂದ ಶ್ರುತಸೇನನೂ ದ್ರೌಪದಿಯಲ್ಲಿ ಅನುಕ್ರಮವಾಗಿ ಹುಟ್ಟಿದರು. ಹಿಂದೆಯೇ ಹೇಳಿದಂತೆ ಭೀಮನಿಗೆ ಹಿಡಿಂಬೆಯಲ್ಲಿ ಘಟೋತ್ಕಚನು ಅರಣ್ಯ ದಲ್ಲಿ ಹುಟ್ಟಿದನು. ದ್ರುಪದನಿಗೆ ಯಜ್ಞಾಗ್ನಿಯಿಂದ ಹುಟ್ಟಿದ ಧೃಷ್ಟದ್ಯುಮ್ನ-ದ್ರೌಪದಿಯರಲ್ಲದೇ–'ಶಿಖಂಡಿ' ಎಂಬ ಹೆಣ್ಣುಮಗಳೂ ಇದ್ದಳು. ಆದರೆ ಆ

---

* ವೈಶ್ಯಾಯಾಂ ಕ್ಷತ್ರಿಯಾಜ್ಜಾತಃ ಕರಣಃ ಪರಿಕೀರ್ತಿತಃ = ಕ್ಷತ್ರಿಯಪುರುಷನಿಂದ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು ಕರಣನೆನಿಸಿಕೊಳ್ಳುತ್ತಾನೆ. ಇದರಿಂದಾಗಿ ಯುಯುತ್ಸುವನ್ನು ಕರಣನೆಂದೂ ಕರೆಯುವುದುಂಟು.

ಹೆಣ್ಣಿಗೆ ಪ್ರಿಯವನ್ನುಂಟುಮಾಡಬೇಕೆಂಬ ಆಶಯದಿಂದ ಸ್ಥೂಣನೆಂಬ ಯಕ್ಷನು ಶಿಖಂಡಿಯನ್ನು ಪುರುಷನನ್ನಾಗಿ ಪರಿವರ್ತನೆಗೊಳಿಸಿದನು. ಹೀಗೆ ದ್ರುಪದನ ಪುತ್ರಿಯಾಗಿದ್ದ ಶಿಖಂಡಿಯು ಪುಂಸ್ತ್ವವನ್ನು ಹೊಂದಿದಳು. ದ್ರುಪದನಿಗೆ ಪುತ್ರನಾದಳು.

ಜನಮೇಜಯ! ಕೌರವ-ಪಾಂಡವರ ನಡುವೆ ಘೋರಯುದ್ಧವಾದಾಗ ಸಾವಿರಾರು ಮಂದಿ ರಾಜರು ಪಕ್ಷ-ಪ್ರತಿಪಕ್ಷಗಳನ್ನು ಸೇರಿಕೊಂಡು ಯುದ್ಧಮಾಡಿದರು. ಅಪರಿಮಿತವಾದ ಆ ರಾಜರ ನಾಮಧೇಯಗಳನ್ನು ಅನೇಕ ಸಹಸ್ರವರ್ಷಗಳವರೆಗೆ ಹೇಳಿದರೂ ಮುಗಿಯುವುದಿಲ್ಲ. ಪಕ್ಷ-ಪ್ರತಿ ಪಕ್ಷಗಳಲ್ಲಿ ಬಹುಮುಖ್ಯರಾದವರ ನಾಮಧೇಯಗಳನ್ನು ಮಾತ್ರವೇ ನಾನೀಗ ಹೇಳಿರುವೆನು."

೬೩ನೆಯ ಅಧ್ಯಾಯವು ಮುಗಿಯಿತು.

೬೪ನೆಯ ಅಧ್ಯಾಯ — ಅಂಶಾವತರಣಪರ್ವ (ಮುಂದುವರಿದಿದೆ.)

## ಬ್ರಾಹ್ಮಣರಿಂದ ಕ್ಷತ್ರಿಯವಂಶದ ಉತ್ಪತ್ತಿ: ಆ ಕಾಲದ ಧರ್ಮರಾಜ್ಯದ ವರ್ಣನೆ : ಅಸುರರ ಉತ್ಪತ್ತಿ: ಭೂಭಾರದಿಂದಾಗಿ ಪೀಡಿತಳಾದ ಭೂದೇವಿಯು ಬ್ರಹ್ಮನನ್ನು ಶರಣುಹೋದುದು : ತಮ್ಮ ತಮ್ಮ ಅಂಶಗಳಿಂದ ಪೃಥ್ವಿಯಲ್ಲಿ ಅವತರಿಸುವಂತೆ ಬ್ರಹ್ಮನು ದೇವತೆಗಳನ್ನು ನಿರ್ದೇಶಿಸಿದುದು

ಜನಮೇಜಯನು ವೈಶಂಪಾಯನರನ್ನು ಕೇಳುತ್ತಾನೆ :

"ವೈಶಂಪಾಯನರೇ! ನೀವು ಈಗ ಹೇಳಿರುವ ರಾಜರ ಮತ್ತು ಹೇಳ ದಿರುವ ಸಾವಿರಾರು ರಾಜರ ಸಂಪೂರ್ಣವಾದ ಇತಿಹಾಸಗಳನ್ನೂ ವಿವರ ವಾಗಿಯೇ ಕೇಳಬೇಕೆನ್ನುವ ಆಶಯದಿಂದಿರುತ್ತೇನೆ. ದೇವಸದೃಶರಾದ ಆ ರಾಜರು ಪೃಥ್ವಿಯಲ್ಲಿ ಏಕೆ ಅವತರಿಸಿದರು? ಈ ರಹಸ್ಯವಿಷಯವನ್ನೂ ನನಗೆ ಯಥಾವತ್ತಾಗಿ ಹೇಳುವ ಕೃಪೆಮಾಡಿರಿ."

"ಜನಮೇಜಯ! ನೀನು ಕೇಳಿರುವ ಈ ವಿಷಯವು ದೇವತೆಗಳ

ರಹಸ್ಯವೆಂದು ನಾನು ಕೇಳಿದ್ದೇನೆ. ಚತುರ್ಮುಖನಿಗೆ ನಮಸ್ಕರಿಸಿ ಈ ರಹಸ್ಯ ವನ್ನು ನಿನಗೆ ತಿಳಿಸುತ್ತೇನೆ.

ಭಗವಾನ್ ಪರಶುರಾಮನು ಭೂಮಿಯ ಮೇಲಿದ್ದ ಕ್ಷತ್ರಿಯರ ಮೇಲೆ ಇಪ್ಪತ್ತೊಂದು ಬಾರಿ ದಾಳಿನಡೆಸಿ ದುಷ್ಟರಾದ ಮತ್ತು ಮದಾಂಧರಾದ ಕ್ಷತ್ರಿಯರೆಲ್ಲರನ್ನೂ ಸಂಹರಿಸಿ, ತಪಸ್ಸುಮಾಡಲು ಪರ್ವತಶ್ರೇಷ್ಠವಾದ ಮಹೇಂದ್ರಪರ್ವತಕ್ಕೆ ಹೊರಟುಹೋದನು. ಪರಶುರಾಮನು ಭೂಮಿಯನ್ನು ಕ್ಷತ್ರಿಯರಹಿತವನ್ನಾಗಿಯೇ ಮಾಡಿಬಿಟ್ಟಿದ್ದನು. ಕ್ಷತ್ರಿಯವಂಶವೇ ಅಳಿದುಹೋಗುವುದರಲ್ಲಿದ್ದಾಗ ಆಪದ್ಧರ್ಮವನ್ನನುಸರಿಸಿ ಕ್ಷತ್ರಿಯಸ್ತ್ರೀಯರು ಬ್ರಾಹ್ಮಣರ ಬಳಿಗೆ ಪುತ್ರಾರ್ಥಿಗಳಾಗಿ ಹೋದರು.* ಹೀಗೆ ಅನೇಕ ಕ್ಷತ್ರಿಯಸ್ತ್ರೀಯರು ಗರ್ಭವತಿಯರಾಗಿ ವೀರ್ಯವಂತರಾದ ಮತ್ತು ರೂಪ ವತಿಯರಾದ ಸಾವಿರಾರು ರಾಜಕುಮಾರರನ್ನೂ ಮತ್ತು ರಾಜಕುಮಾರಿಯ ರನ್ನೂ ಕ್ಷತ್ರಿಯಕುಲದ ಅಭಿವೃದ್ಧಿಗಾಗಿ ಪ್ರಸವಿಸಿದರು. ಈ ರೀತಿಯಲ್ಲಿ ತಪಸ್ವಿ ಗಳಾದ ಬ್ರಾಹ್ಮಣರಿಂದ ಕ್ಷತ್ರಿಯಸ್ತ್ರೀಯರಲ್ಲಿ ಕ್ಷತ್ರಿಯವಂಶವು ಧರ್ಮದ ಹಿನ್ನೆಲೆಯಲ್ಲಿ ಪುನಃ ಆವಿರ್ಭೂತವಾಗಿ ಅಭಿವೃದ್ಧಿಹೊಂದಿ ಸುದೀರ್ಘವಾಗಿ ಬೆಳೆಯಿತು. ಬ್ರಹ್ಮ-ಕ್ಷತ್ರ-ವೈಶ್ಯ-ಶೂದ್ರರೆಂಬ ನಾಲ್ಕು ವರ್ಣಗಳು ಪುನಃ ವ್ಯವಸ್ಥಿತವಾದುವು.

ಜನಮೇಜಯ! ಅಂದಿನ ಕಾಲದಲ್ಲಿ ಪತ್ನಿಯು ಋತುಸ್ನಾತೆಯಾದ ಕಾಲದಲ್ಲಿ ಮಾತ್ರವೇ ಪುರುಷರು ಅವಳ ಸಂಗಮಾಡುತ್ತಿದ್ದರು. ಬೇರೆಯ ಕಾಲದಲ್ಲಿ ಕಾಮೇಚ್ಛೆಯಿಂದ ಸ್ತ್ರೀಸಂಗಮಾಡುತ್ತಿರಲಿಲ್ಲ. ಇದು ಕೇವಲ ಮನುಷ್ಯರಲ್ಲಿ ಮಾತ್ರವಲ್ಲ ; ಪಶು-ಪಕ್ಷಿಗಳೂ ಈ ನಿಯಮವನ್ನನುಸರಿಸು ತ್ತಿದ್ದುವು. ಗಿಡ-ಮರಗಳು ಆಯಾ ಋತುಕಾಲದಲ್ಲಿ ಪುಷ್ಪ-ಫಲಗಳನ್ನು

---

* ಮಕ್ಕಳಿಲ್ಲದವರು ಹತ್ತು ವಿಧವಾದ ಮಕ್ಕಳನ್ನು ಪಡೆಯಬಹುದೆಂದು ಸ್ಮೃತಿಕಾರರು ಹೇಳುತ್ತಾರೆ ಮತ್ತು ಮಕ್ಕಳನ್ನು ಪಡೆಯಲು ಅನುಸರಿಸಬೇಕಾದ ನಿಯಮಗಳನ್ನೂ ಹೇಳಿರುತ್ತಾರೆ. ಸ್ಮೃತಿವಾಕ್ಯಗಳ ನಿಯಮಾನುಸಾರವಾಗಿ ಕಠಿನವ್ರತಿಗಳಾದ ಬ್ರಾಹ್ಮಣರು ಕ್ಷತ್ರಿಯಸ್ತ್ರೀಯರ ಸಂಗವನ್ನು ಅವರು ಋತುಸ್ನಾತೆಯರಾದ ಕಾಲದಲ್ಲಿ ಮಾತ್ರವೇ ಮಾಡುತ್ತಿದ್ದರು. ಬೇರೆಯ ಕಾಲದಲ್ಲಿ ಕಾಮೇಚ್ಛೆಯಿಂದ ಅವರೊಡನೆ ಸೇರುತ್ತಿರಲಿಲ್ಲ.

ಪಡೆಯುತ್ತಿದ್ದವು. ಈ ವಿಧವಾದ ಧರ್ಮಾನುಸರಣೆಯಿಂದ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಧರ್ಮಿಷ್ಠರಾದ ಪ್ರಜೆಗಳು ಹುಟ್ಟಿದರು. ಪ್ರಜೆಗಳೆಲ್ಲರೂ ಸದ್ಧರ್ಮಪರಾಯಣರಾಗಿದ್ದರು. ಅವರಿಗೆ ಶರೀರದ ವ್ಯಾಧಿಯಾಗಲೀ, ಮಾನಸಿಕವ್ಯಾಧಿಯಾಗಲೀ ಇರುತ್ತಿರಲಿಲ್ಲ. ಆಧಿ-ವ್ಯಾಧಿಗಳಿಂದ ವಿಮುಕ್ತ ರಾಗಿದ್ದರು. ಗಜರಾಜನ ಗಮನವುಳ್ಳವನೇ! ಜನಮೇಜಯ! ಸಾಗರಾಂತೆ ಯಾದ ಮತ್ತು ಪರ್ವತ-ದುರ್ಗಗಳಿಂದ ಸುಶೋಭಿಸುವ ಈ ಭೂದೇವಿಯು ಪುನಃ ಕ್ಷತ್ರಿಯರಾಜರ ಅಧೀನಳಾದಳು.

ಆ ಕ್ಷತ್ರಿಯರಾಜರು ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿರ ಲಾಗಿ, ಬ್ರಾಹ್ಮಣ-ವೈಶ್ಯ-ಶೂದ್ರರು ಸಂತೋಷಭರಿತರಾಗಿದ್ದರು. ಕಾಮ-ಕ್ರೋಧಗಳಿಂದ ಉಂಟಾಗಬಹುದಾದ ದ್ವೇಷವನ್ನು ಸಂಪೂರ್ಣವಾಗಿ ತೊಡೆದುಹಾಕಿ ಧರ್ಮಾನುಸಾರವಾಗಿ ದುಷ್ಟರನ್ನು ಮಾತ್ರವೇ ಶಿಕ್ಷಿಸುತ್ತಾ ಶಿಷ್ಟರನ್ನು ಪರಿಪಾಲನೆಮಾಡುತ್ತಾ ಕ್ಷತ್ರಿಯರು ರಾಜ್ಯವಾಳುತ್ತಿದ್ದರು. ಧರ್ಮಭೂಯಿಷ್ಠವಾಗಿದ್ದ ಈ ಭೂಮಿಯಲ್ಲಿ ಇಂದ್ರನೂ ಕಾಲ-ಕಾಲಕ್ಕೆ ಮಳೆಗರೆದು ಪ್ರಜೆಗಳನ್ನು ಪಾಲನೆಮಾಡುತ್ತಿದ್ದನು.

**ನ ಬಾಲ ಏವ ಮ್ರಿಯತೇ ತದಾ ಕಶ್ಚಿಜ್ಜನಾಧಿಪ ।**
**ನ ಚ ಸ್ತ್ರಿಯಂ ಪ್ರಜಾನಾತಿ ಕಶ್ಚಿದಪ್ರಾಪ್ತಯೌವನಃ ॥೧೭॥**

ತಂದೆಯು ಜೀವಿಸಿರುವಾಗ ಮಕ್ಕಳು ಸಾಯುವುದೆಂಬುದು ಆಗಿನ ಕಾಲದಲ್ಲಿರಲೇ ಇಲ್ಲ. ಪ್ರಾಪ್ತವಯಸ್ಕನಾಗುವವರೆಗೂ ಪುರುಷನಿಗೆ 'ಸ್ತ್ರೀ' ಎಂದರೆ ಏನೆಂಬುದೂ ತಿಳಿಯುತ್ತಿರಲಿಲ್ಲ. (ಸ್ತ್ರೀಸುಖದ ಅನುಭವವನ್ನು ಹೊಂದುತ್ತಿರಲಿಲ್ಲ) ಈ ರೀತಿಯಲ್ಲಿ ಧರ್ಮಿಷ್ಠರಾದ ಮತ್ತು ದೀರ್ಘಾ ಯುಷ್ಮಂತರಾದ ಪ್ರಜೆಗಳಿಂದ ಪೃಥ್ವಿಯು ತುಂಬಿಹೋಗಿದ್ದಿತು. ಕ್ಷತ್ರಿಯರು ಬಹುದಕ್ಷಿಣಾಕವಾದ ಮಹಾಯಜ್ಞಗಳನ್ನು ಮಾಡುತ್ತಿದ್ದರು. ಬ್ರಾಹ್ಮಣರು ಉಪನಿಷತ್ಸಹಿತವಾದ ವೇದಗಳನ್ನು ಸಾಂಗೋಪಾಂಗವಾಗಿ ಅಧ್ಯಯನ ಮಾಡುತ್ತಿದ್ದರು.

ಆಗಿನ ಕಾಲದಲ್ಲಿ ಬ್ರಾಹ್ಮಣರು ವೇದವಿಕ್ರಯವನ್ನು ಮಾಡುತ್ತಿರಲಿಲ್ಲ. (ಅಧ್ಯಾಪನವನ್ನು ಜೀವಿಕೆಗಾಗಿ ಉಪಯೋಗಿಸಿಕೊಳ್ಳುತ್ತಿರಲಿಲ್ಲ.) ಶೂದ್ರರ

ಸಮೀಪದಲ್ಲಿ ವೇದಗಳನ್ನು ಉಚ್ಚರಿಸುತ್ತಿರಲಿಲ್ಲ. ವೈಶ್ಯರು ಎತ್ತುಗಳಿಂದ ಬೇಸಾಯ ಮಾಡುತ್ತಿದ್ದರೇ ಹೊರತು ಯಾವಾಗಲೂ ಹಸುಗಳನ್ನು ನೊಗಕ್ಕೆ ಕಟ್ಟುತ್ತಿರಲಿಲ್ಲ. ಕೃಶವಾದ ಮತ್ತು ಮುದಿಯಾದ ಎತ್ತು-ಹಸುಗಳನ್ನು ಉದಾಸೀನಮಾಡದೇ ಪೋಷಿಸುತ್ತಿದ್ದರು.

**ಫೇನಪಾಂಶ್ಚ ತಥಾ ವತ್ಸಾನ್ನ ದುಹನ್ತಿ ಸ್ಮ ಮಾನವಾಃ ।**
**ನ ಕೂಟಮಾನೈರ್ವಣಿಜಃ ಪಣ್ಯಂ ವಿಕ್ರೀಣತೇ ತದಾ ॥೨೨॥**

ಎಂದಿನವರೆಗೆ ಹುಟ್ಟಿದ ಕರುವು ತನ್ನ ತಾಯಿಯ ಹಾಲನ್ನೇ ಕುಡಿಯು ತ್ತಿರುವುದೋ ( ಚಿಗುರುಹುಲ್ಲನ್ನು ತಿನ್ನಲಾಗುತ್ತಿರಲಿಲ್ಲವೋ ) ಅಂದಿನ ವರೆಗೂ ಹಸುವಿನ ಹಾಲನ್ನು ಕರೆದುಕೊಳ್ಳುತ್ತಿರಲಿಲ್ಲ. ಮೋಸದ ಅಳತೆಯ ಪಾತ್ರೆಗಳನ್ನು ಅಥವಾ ತೂಕದ ಕಲ್ಲುಗಳನ್ನಿಟ್ಟುಕೊಂಡು ವೈಶ್ಯರು ಪದಾರ್ಥ ಗಳ ವ್ಯಾಪಾರಮಾಡುತ್ತಿರಲಿಲ್ಲ. ಧರ್ಮಿಷ್ಠರಾದ ಅಂದಿನ ಪ್ರಜೆಗಳು ಧರ್ಮ ದಿಂದ ಕೂಡಿದ ಕಾರ್ಯಗಳನ್ನು ಧರ್ಮೈಕದೃಷ್ಟಿಯಿಂದ ಮಾಡುತ್ತಿದ್ದರು. ಎಲ್ಲ ವರ್ಣದವರೂ ತಮ್ಮ-ತಮ್ಮ ವರ್ಣಾಶ್ರಮೋಕ್ತವಾದ ಧರ್ಮಗಳಲ್ಲಿ ಸದಾ ನಿರತರಾಗಿರುತ್ತಿದ್ದರು. ಈ ಕಾರಣಗಳಿಂದಾಗಿ ಆ ಕಾಲದಲ್ಲಿ ಧರ್ಮಕ್ಕೆ ಸ್ವಲ್ಪವಾದರೂ ಲೋಪವಿರಲಿಲ್ಲ.

ಈ ರೀತಿಯಲ್ಲಿ ಕೃತಯುಗವು ಕಳೆಯುತ್ತಿರುವ ಸಮಯದಲ್ಲಿ ಪ್ರಪಂಚವೆಲ್ಲವೂ ಮನುಷ್ಯರಾದಿಯಾಗಿ ಸಕಲವಿಧವಾದ ಪ್ರಾಣಿಗಳಿಂದಲೂ ತುಂಬಿಹೋಯಿತು. ಪ್ರಪಂಚದಲ್ಲಿ ಹುಟ್ಟಿದ ಮಾನವರೆಲ್ಲರೂ ಸಂತೋಷ ದಿಂದಿರುತ್ತಿರಲಾಗಿ ಕ್ಷತ್ರಿಯಸ್ತ್ರೀಯರಲ್ಲಿ ಅಸುರರು ಹುಟ್ಟಲು ಉಪಕ್ರಮಿ ಸಿದರು. ಆಗಿಂದಾಗ್ಗೆ ನಡೆಯುತ್ತಿದ್ದ ದೇವಾಸುರಯುದ್ಧಗಳಲ್ಲಿ ದೇವತೆಗಳು ದೈತ್ಯರನ್ನು ಹಲವು ಬಾರಿ ಪರಾಜಯಗೊಳಿಸಿದರು. ಹೀಗೆ ವಿಧ್ವಸ್ತರಾದ, ಸ್ವರ್ಗದ ಸುಖೋಪಭೋಗಗಳಿಂದ ವಂಚಿತರಾದ ದೈತ್ಯರು ಭೂಮಿಯಲ್ಲಿ ಅವತರಿಸಿದರು. ಭೂಮಿಯಲ್ಲಾದರೂ ಹುಟ್ಟಿ ಪ್ರಭುತ್ವವನ್ನು ಸಾಧಿಸ ಬೇಕೆಂಬ ಇಚ್ಛೆಯಿಂದಾಗಿ ಅಸುರರು ಮನುಷ್ಯರಲ್ಲಿಯೂ ಮತ್ತು ಇತರ ಪ್ರಾಣಿಗಳಲ್ಲಿಯೂ ಜನ್ಮತಾಳಿದರು. ಹಸುಗಳಾಗಿ, ಕುದುರೆಗಳಾಗಿ, ಕತ್ತೆ ಗಳಾಗಿ, ಒಂಟೆಗಳಾಗಿ, ಎಮ್ಮೆಗಳಾಗಿ, ಮಾಂಸವನ್ನೇ ತಿನ್ನುವ ಕ್ರೂರಮೃಗ

ಗಳಾಗಿ, ಜಿಂಕೆಗಳಾಗಿ–ದೈತ್ಯರು ಜನ್ಮತಾಳಿದರು. ಹೀಗೆ ಹುಟ್ಟಿದ ಮತ್ತು ಹುಟ್ಟುತ್ತಿದ್ದ ಕೋಟ್ಯನುಕೋಟಿ ಪ್ರಾಣಿಗಳ ಭಾರವನ್ನು ಭೂಮಾತೆಯು ಸಹಿಸದವಳಾದಳು. ಜನಮೇಜಯ! ನಾನು ಈ ಹಿಂದೆ ಹೇಳಿದಂತೆ ಸ್ವರ್ಗದಿಂದ ಚ್ಯುತರಾದ ಅನೇಕ ದೈತ್ಯ-ದಾನವರು ರಾಜರಾಗಿ ಪೃಥ್ವಿಯಲ್ಲಿ ಹುಟ್ಟಿದರು. ಅವರು ಮಾನವರಂತೆಯೇ ಕಾಣುತ್ತಿದ್ದರೂ ರಾಕ್ಷಸರಲ್ಲಿದ್ದ ದುರಭಿಮಾನ, ಅಹಂಕಾರಗಳು ಅವರನ್ನು ಬಿಟ್ಟಿರಲಿಲ್ಲ. ವೀರ್ಯವಂತ ರಾಗಿಯೂ, ಬಲವಂತರಾಗಿಯೂ ಇದ್ದು ಭೂಮಿಯ ಎಲ್ಲೆಡೆಗಳಲ್ಲಿಯೂ ಸ್ವೇಚ್ಛೆಯಿಂದ ಸಂಚರಿಸುತ್ತಾ ತಮಗೆ ಶತ್ರುಗಳಾದವರನ್ನು ಧ್ವಂಸಮಾಡುತ್ತಾ ಕಾಲಕಳೆಯುತ್ತಿದ್ದರು.

ಧರ್ಮಿಷ್ಠರಾಗಿರುತ್ತಿದ್ದ ಬ್ರಹ್ಮ-ಕ್ಷತ್ರ-ವೈಶ್ಯ-ಶೂದ್ರರೆಂಬ ನಾಲ್ಕು ವರ್ಣದವರನ್ನೂ ಅವರು ಪೀಡಿಸುತ್ತಿದ್ದುದಲ್ಲದೇ ಪ್ರಾಣಿಗಳನ್ನೂ ನಿಷ್ಕರುಣೆ ಯಿಂದ ಹಿಂಸಿಸುತ್ತಿದ್ದರು. ಎದುರಿಗೆ ಸಿಕ್ಕಿದ ಯಾವ ಪ್ರಾಣಿಯನ್ನೇ ಆಗಲೀ, ಮನುಷ್ಯನನ್ನೇ ಆಗಲೀ–ಬೆದರಿಸುವುದು ಮತ್ತು ಸಂಹರಿಸುವುದೇ ಅವರ ದೈನಂದಿನ ಕೆಲಸವಾಗಿದ್ದಿತು. ಈ ರೀತಿಯಾಗಿ ಅವರು ಭೂಮಿ ಯನ್ನೆಲ್ಲಾ ಸಾವಿರಾರು ಬಾರಿ ಪರ್ಯಟನಮಾಡುತ್ತಿದ್ದರು. ಬ್ರಾಹ್ಮಣವಿರೋಧಿಗಳಾದ, ವೇದವಿರೋಧಿಗಳಾದ ಅವರು ವೀರ್ಯದಿಂದಲೂ, ಬಲದಿಂದಲೂ ಮದಿಸಿದವರಾಗಿ ಆಶ್ರಮದಲ್ಲಿರುತ್ತಿದ್ದ ಋಷಿ-ಮಹರ್ಷಿಗಳನ್ನೂ ಆಗಿಂದಾಗ್ಗೆ ಬೆದರಿಸಿ, ಅವರ ಆಶ್ರಮಗಳನ್ನೂ ಧ್ವಂಸಮಾಡುತ್ತಿದ್ದರು. ಈ ರೀತಿಯಾಗಿ ವೀರ್ಯ-ಬಲಗಳಿಂದ ಕೊಬ್ಬಿಹೋಗಿದ್ದ ಅಸುರರಿಂದ ಸತತವಾಗಿ ಮತ್ತು ಪ್ರಯತ್ನಪೂರ್ವಕವಾಗಿ ಪೀಡಿತಳಾದ ಭೂದೇವಿಯು ತನ್ನ ಕಷ್ಟಪರಿಹಾರಕ್ಕಾಗಿ ಚತುರ್ಮುಖನಲ್ಲಿ ಮೊರೆಯಿಡಲು ನಿಶ್ಚಯಿಸಿದಳು. ಮಾನವರೂಪಿಗಳಾದ ದೈತ್ಯರಿಂದ ತುಂಬಿಹೋಗಿದ್ದ ಗಿರಿ-ದುರ್ಗ-ಪರ್ವತಗಳಿಂದ ಕೂಡಿದ್ದ ಈ ವಿಶ್ವವನ್ನು ಧರಿಸಲು ಕೂರ್ಮ, ದಿಗ್ಗಜಗಳೂ ಮತ್ತು ಆದಿಶೇಷನೂ ಅಸಮರ್ಥರಾದರು. ಅಧಿಕವಾದ ಭಾರದಿಂದಲೂ ಮತ್ತು ಭಯದಿಂದಲೂ ಪೀಡಿತಳಾದ ಭೂದೇವಿಯು ಸರ್ವಭೂತಪಿತಾಮಹನಾದ ಬ್ರಹ್ಮನಿಗೆ ಶರಣುಹೋದಳು.

ದೇವ-ದ್ವಿಜ-ಮಹರ್ಷಿಗಳಿಂದ ಪರಿವೃತನಾದ, ಲೋಕಕರ್ತನಾದ, ಕ್ಷಯರಹಿತನಾದ ಬ್ರಹ್ಮನನ್ನು ಭೂದೇವಿಯು ಸಂದರ್ಶಿಸಿ ಸಂತೋಷಭರಿತ ನಾಗಿದ್ದ, ದೇವಕಾರ್ಯದಲ್ಲಿ ಸರ್ವದಾ ನಿರತನಾಗಿದ್ದ, ಗಂಧರ್ವಾಪ್ಸರೆಯ ರಿಂದ ಸರ್ವದಾ ವಂದ್ಯಮಾನನಾದ ಭಗವಂತನನ್ನು ಅಭಿನಂದಿಸಿದಳು. ಶರಣಾರ್ಥಿನಿಯಾದ ಭೂದೇವಿಯು ಎಲ್ಲ ಲೋಕಪಾಲರ ಸಮ್ಮುಖದಲ್ಲಿ, ಬ್ರಹ್ಮನ ಸನ್ನಿಧಿಯಲ್ಲಿ ತನ್ನ ಕಷ್ಟವನ್ನು ನಿವೇದಿಸಿಕೊಂಡಳು. ಜಗತ್ಸೃಷ್ಟಿಗೆ ಪ್ರಧಾನಕಾರಣನಾದ ಪರಮೇಷ್ಠಿಗೆ, ಭೂದೇವಿಗೊದಗಿರುವ ಕಷ್ಟ ಮತ್ತು ಅದಕ್ಕೆ ಮಾಡಬೇಕಾಗಿರುವ ಪರಿಹಾರ–ಇವುಗಳು ಆ ಮೊದಲೇ ವೇದ್ಯ ವಾಗಿದ್ದುವು. ಸಕಲಜಗತ್ತುಗಳನ್ನೂ, ದೇವ-ದೈತ್ಯ-ಮಾನವರನ್ನೂ, ಸಕಲ ಪ್ರಾಣಿಗಳನ್ನೂ ಸಂಕಲ್ಪಮಾತ್ರದಿಂದಲೇ ಸೃಷ್ಟಿಸಿದ ಬ್ರಹ್ಮನಿಗೆ ತಾನು ಸೃಷ್ಟಿಸಿದ ಜಗತ್ತಿನ ಯಾವ ಭಾಗದಲ್ಲಿ ಏನು ನಡೆಯುತ್ತಿದೆಯೆಂಬುದು ತಿಳಿದಿದ್ದುದರಲ್ಲಿ ಆಶ್ಚರ್ಯವೇನಿದೆ? ಜನಮೇಜಯ! ಅವನಿಗಲ್ಲದೇ ಮತ್ತಾ ರಿಗೆ ತಾನೇ ಈ ವಿಷಯವು ತಿಳಿದಿರಲು ಸಾಧ್ಯವಾಗುವುದು? ಭೂದೇವಿಯ ಪ್ರಾರ್ಥನೆಯನ್ನು ಕೇಳಿದನಂತರ ಭೂಮಿಪತಿಯಾದ, ಪ್ರಭುವಾದ, ಪ್ರಭವನಾದ, ಸರ್ವಭೂತಗಳಿಗೂ ಈಶನಾದ, ಶಂಭುವಾದ, ಪ್ರಜಾಪತಿಯಾದ ಚತುರ್ಮುಖನು ಅವಳನ್ನು ಕುರಿತು ಹೇಳಿದನು : "ವಸುಂಧರೇ! ನೀನು ಯಾವ ಕಾರ್ಯದ ನಿಮಿತ್ತವಾಗಿ ನನ್ನ ಬಳಿಗೆ ಬಂದಿರುವೆಯೋ ಅದೇ ಕಾರ್ಯದ ನಿಮಿತ್ತವಾಗಿ ನಾನು ಈ ಎಲ್ಲ ದೇವತೆಗಳನ್ನೂ ನಿಯೋಜಿ ಸುತ್ತೇನೆ. (ದೈತ್ಯರಿಂದ ಭೂಭಾರವು ಹೆಚ್ಚಿರುವುದನ್ನು ಹೇಳಿಕೊಳ್ಳಲು ನೀನು ಬಂದಿರುವೆ. ಭೂಭಾರವನ್ನು ಕಡಿಮೆಮಾಡಲು ನಾನು ದೇವತೆಗಳನ್ನು ಕಳುಹಿಸುತ್ತೇನೆ.)"

ಹೀಗೆ ಹೇಳಿ ಭೂದೇವಿಯನ್ನು ಸಂತೈಸಿ ಕಳುಹಿಸಿಕೊಟ್ಟನಂತರ ಬ್ರಹ್ಮದೇವನು ದೇವತೆಗಳನ್ನು ಕುರಿತು ಹೇಳಿದನು : "ದೇವತೆಗಳೇ! ಈ ಭೂದೇವಿಯ ಭಾರವನ್ನು ಕಡಿಮೆಮಾಡುವ ಸಲುವಾಗಿ ನೀವೆಲ್ಲರೂ ನಿಮ್ಮ ನಿಮ್ಮ ಅಂಶಗಳಿಂದ ಭೂಮಿಯಲ್ಲಿ ಮಾನವರಾಗಿ ಹುಟ್ಟಿರಿ."

ಬ್ರಹ್ಮನು ದೇವತೆಗಳಿಗೆ ಹೀಗೆ ಹೇಳಿದನಂತರ ಗಂಧರ್ವಾಪ್ಸರೆಯ

ರನ್ನೂ ಕರೆದು, ಅವರವರ ಅಂಶಗಳಿಂದಲೂ ಮಾನವಲೋಕದಲ್ಲಿ ದೈತ್ಯರ ಸಂಹಾರಕ್ಕಾಗಿ ಮಾನವರನ್ನು ಸೃಷ್ಟಿಸುವಂತೆ ಹೇಳಿದನು. ಜನಮೇಜಯ! ಇಂದ್ರಾದಿ ದೇವತೆಗಳು ಸತ್ಯವೂ, ದೇವಕಾರ್ಯಸಾಧಕವೂ ಮತ್ತು ಹಿತಕರವೂ ಆದ ಬ್ರಹ್ಮನ ಮಾತನ್ನು ಪುರಸ್ಕರಿಸಿದರು. ಅನಂತರದಲ್ಲಿ ದೇವತೆಗಳು ತಮ್ಮ-ತಮ್ಮ ಅಂಶಗಳಿಂದ ಭೂಮಿಯಲ್ಲಿ ನರರಾಗಿ ಅವತರಿಸಲು ನಿಶ್ಚಯಿಸಿ, ಶತ್ರುಸಂಹಾರಕನಾದ ನಾರಾಯಣನನ್ನು ಸಂದರ್ಶಿಸಲು ವೈಕುಂಠಕ್ಕೆ ತೆರಳಿದರು.

ಶಂಖ-ಚಕ್ರ-ಗದಾಪಾಣಿಯಾದ, ಪೀತಾಂಬರವನ್ನು ಧರಿಸಿದ್ದ, ಶ್ಯಾಮಾಂಗನಾದ, ಪದ್ಮನಾಭನಾದ, ಶತ್ರುಗಳ ಸಂಹಾರಕನಾದ, ವಿಶಾಲವಾಗಿಯೂ, ಮನೋಹರವಾಗಿಯೂ ಇರುವ ಕಣ್ಣುಗಳನ್ನು ಹೊಂದಿದ್ದ, ಬ್ರಹ್ಮನಿಗೂ ಒಡೆಯನಾದ, ದೇವತೆಗಳ ನಾಥನಾದ, ಮಹಾಬಲನಾದ, ಶ್ರೀವತ್ಸಾಂಕಿತನಾದ, ಹೃಷೀಕೇಶನಾದ, ಸರ್ವದೇವತೆಗಳಿಂದಲೂ ಪೂಜಿತನಾದ ಶ್ರೀಮನ್ನಾರಾಯಣನನ್ನು ಕುರಿತು ಇಂದ್ರನು ಹೇಳಿದನು :

"ಪ್ರಭುವೇ! ಭೂಭಾರದ ಹರಣಾರ್ಥವಾಗಿ ನೀನು ನಿನ್ನ ಅಂಶದಿಂದ ಭೂಮಿಯಲ್ಲಿ ಅವತರಿಸುವ ಕೃಪೆಮಾಡಬೇಕು"

ದಯಾಮಯನಾದ ಕೃಪಾವಿಷ್ಟನಾದ ಶ್ರೀಮಹಾವಿಷ್ಣುವು ಅಭಯ ಮುದ್ರೆಯೊಡನೆ 'ತಥಾಸ್ತು' ಎಂದನು."

೬೪ನೆಯ ಅಧ್ಯಾಯವು ಮುಗಿಯಿತು.

೬೫ನೆಯ ಅಧ್ಯಾಯ ಸಂಭವಪರ್ವ

## ಮರೀಚ್ಯಾದಿ ಮಹರ್ಷಿಗಳ ಮತ್ತು ಅದಿತಿಯೇ ಮೊದಲಾದ ದಕ್ಷಕನ್ಯೆಯರ ವಂಶವಿವರಣೆ

"ಜನಮೇಜಯ! ಈ ರೀತಿಯಲ್ಲಿ ಇಂದ್ರನೇ ಮೊದಲಾದ ದೇವತೆಗಳೂ, ಶ್ರೀಮನ್ನಾರಾಯಣನೂ ತಮ್ಮ-ತಮ್ಮ ಅಂಶಗಳಿಂದ ಭೂಮಿಯಲ್ಲಿ ಅವತರಿಸಲು ನಿಶ್ಚಯಿಸಿದರು. ಶ್ರೀಮನ್ನಾರಾಯಣನು ಅವತರಿಸಲು ಒಪ್ಪಿದನಂತರ ಇಂದ್ರನು–ತಮ್ಮ-ತಮ್ಮ ಅಂಶಗಳಿಂದ ಸಾಧ್ಯವಾದಷ್ಟು ಬೇಗ

ಅವತರಿಸಬೇಕೆಂದು ಎಲ್ಲ ದೇವತೆಗಳಿಗೂ ಪುನಃ ನಿರ್ದೇಶನವನ್ನು ನೀಡಿ ವೈಕುಂಠದಿಂದ ಸ್ವರ್ಗಲೋಕಕ್ಕೆ ತೆರಳಿದನು.

ಅನಂತರದಲ್ಲಿ ಸರ್ವಲೋಕದ ಹಿತಕ್ಕಾಗಿಯೂ ಮತ್ತು ದೈತ್ಯರ ವಿನಾಶಕ್ಕಾಗಿಯೂ ದೇವತೆಗಳು ತಮ್ಮ-ತಮ್ಮ ಅಂಶಗಳಿಂದ ಭೂಮಿಯಲ್ಲಿ ಹುಟ್ಟತೊಡಗಿದರು. ಇಚ್ಛಾನುಸಾರವಾಗಿ ಬ್ರಹ್ಮರ್ಷಿಗಳ ಮತ್ತು ರಾಜರ್ಷಿಗಳ ಕುಲದಲ್ಲಿ ದೇವತೆಗಳು ಅವತರಿಸಿದರು. ಮಾನವರೂಪದಲ್ಲಿ ಅವತರಿಸಿದ ದೇವತೆಗಳು-ದಾನವರನ್ನೂ, ರಾಕ್ಷಸರನ್ನೂ, ದುಷ್ಟಗಂಧರ್ವರನ್ನೂ, ಪನ್ನಗ ರನ್ನೂ, ನರಭಕ್ಷಕಪ್ರಾಣಿಗಳನ್ನೂ, ಅನೇಕಪ್ರಕಾರವಾಗಿ ಹಲವಾರು ಬಾರಿ ಸಂಹರಿಸಿದರು. ದೇವತಾಂಶದಿಂದ ಹುಟ್ಟಿದ, ಬಾಲಕರಾಗಿದ್ದಾಗಲೇ ಬಲಿಷ್ಠರಾಗಿದ್ದ ಅವರನ್ನು ಸಂಹರಿಸಲು ದೈತ್ಯ-ದಾನವ-ದುಷ್ಟಗಂಧರ್ವ-ಪನ್ನಗರಿಗೆ ಸಾಧ್ಯವಾಗಲಿಲ್ಲ."

"ಬ್ರಾಹ್ಮಣೋತ್ತಮರೇ! ದೇವ-ದಾನವ-ಯಕ್ಷ-ರಾಕ್ಷಸ-ಗಂಧರ್ವಾಪ್ಸರೆಯರೆಲ್ಲರ ಹುಟ್ಟನ್ನು ಮೊದಲಿನಿಂದಲೂ ಕೇಳುವ ಇಚ್ಛೆಯಿಂದಿರುತ್ತೇನೆ. ಸರ್ವಪ್ರಾಣಿಗಳ ಹುಟ್ಟನ್ನೂ ತಮ್ಮಿಂದ ಕೇಳಿ ತಿಳಿಯಬೇಕೆಂದಿರುತ್ತೇನೆ. ದಯಮಾಡಿ ದೇವತೆಗಳೇ ಮೊದಲಾದವರ ಸಂಭವದ ವಿಷಯವನ್ನು ವಿಸ್ತಾರವಾಗಿಯೇ ಹೇಳಿರಿ."

"ಹಾಗೆಯೇ ಆಗಲಿ, ಮಹಾರಾಜ! ನಿನ್ನ ಆಶಯದಂತೆ ದೇವತೆಗಳೇ ಆದಿಯಾಗಿ ಎಲ್ಲರ ಉತ್ಪತ್ತಿಯ ರಹಸ್ಯವನ್ನೂ ಚತುರ್ಮುಖನಾದ ಬ್ರಹ್ಮನಿಗೆ ನಮಸ್ಕರಿಸಿ ಹೇಳುತ್ತೇನೆ :

ಸುಪ್ರಸಿದ್ಧರಾದ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು—ಈ ಆರು ಮಹರ್ಷಿಗಳು ಬ್ರಹ್ಮನ ಮಾನಸಪುತ್ರರು. ಅವರಲ್ಲಿ ಮೊದಲನೆಯವನಾದ ಮರೀಚಿಮಹರ್ಷಿಯ ಪುತ್ರನೇ ಕಶ್ಯಪನು. ಕಶ್ಯಪ ನಿಂದಲೇ ಮುಂದಕ್ಕೆ ಈ ಪ್ರಜಾಕೋಟಿಯು ಉತ್ಪತ್ತಿಯಾಯಿತು. ದಕ್ಷಬ್ರಹ್ಮ ನಿಗೆ ಐವತ್ತು ಮಂದಿ ಹೆಣ್ಣುಮಕ್ಕಳು. ಅವರಲ್ಲಿ ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ, ಕ್ರೋಧಾ ( ಕ್ರೂರಾ ), ಪ್ರಾಧಾ, ವಿಶ್ವಾ, ವಿನತಾ,

ಕಪಿಲಾ, ಮುನಿ ಮತ್ತು ಕದ್ರೂ–ಎಂಬ ಹದಿಮೂರು ಹೆಣ್ಣುಮಕ್ಕಳು ಮರೀಚಿಯ ಮಗನಾದ ಕಶ್ಯಪನನ್ನು ಮದುವೆಯಾಗಿ ಅಸಂಖ್ಯಾತರಾದ ಪುತ್ರ-ಪೌತ್ರರನ್ನು ಪಡೆದರು.

ಕಶ್ಯಪನಿಗೆ ಅದಿತಿಯಿಂದ ಭುವನೇಶ್ವರರಾದ ದ್ವಾದಶಾದಿತ್ಯರು ಹುಟ್ಟಿದರು. ಅವರೆಲ್ಲರ ನಾಮಧೇಯಗಳನ್ನೂ ಹೇಳುವೆನು ; ಕೇಳು, ಮಹಾ ರಾಜ! ಧಾತಾ,ಮಿತ್ರ, ಅರ್ಯಮಾ, ಶಕ್ರ, ವರುಣ, ಅಂಶ, ಭಗ, ವಿವಸ್ವಂತ, ಪೂಷಾ, ಸವಿತಾ, ತ್ವಷ್ಟಾ, ವಿಷ್ಣು–ಇವರೇ ದ್ವಾದಶಾದಿತ್ಯರು. ಅವರಲ್ಲಿ ಕಿರಿಯವನಾದ ವಿಷ್ಣುವು ಎಲ್ಲರಿಗಿಂತಲೂ ಹೆಚ್ಚು ಗುಣವಂತನಾಗಿದ್ದನು. ಎರಡನೆಯವಳಾದ ದಿತಿಗೆ ಕಶ್ಯಪರಿಂದ ಒಬ್ಬನೇ ಒಬ್ಬ ಮಗನು ಹುಟ್ಟಿದನು. ಅವನ ಹೆಸರು ಹಿರಣ್ಯಕಶಿಪು. ಹಿರಣ್ಯಕಶಿಪುವಿಗೆ ಸುವಿಖ್ಯಾತರಾದ ಐವರು ಮಕ್ಕಳಿದ್ದರು. ಅವರಲ್ಲಿ ಪ್ರಹ್ರಾದನೇ ಜ್ಯೇಷ್ಠಪುತ್ರನು. ಅವನನ್ನನುಸರಿಸಿ ಸಂಹ್ರಾದ, ಅನುಹ್ರಾದ, ಶಿಬಿ, ಬಾಷ್ಕಲ–ಇವರು ಹುಟ್ಟಿದರು.

ಪ್ರಹ್ರಾದನಿಗೆ ವಿರೋಚನ, ಕುಂಭ, ನಿಕುಂಭ–ಎಂಬ ಮೂವರು ಮಕ್ಕಳಿದ್ದರು. ಅವರೆಲ್ಲರೂ ಮಹಾಪರಾಕ್ರಮಿಗಳಾಗಿದ್ದರು. ವಿರೋಚನನ ಏಕಮಾತ್ರಪುತ್ರ ಪ್ರತಾಪಶಾಲಿಯಾದ ಬಲಿ. ಬಲಿಯ ಮಗನು ಸುಪ್ರಸಿದ್ಧನಾದ ಬಾಣಾಸುರ. ಅವನು ರುದ್ರನಿಗೆ ಅನುಚರನೂ, ಪರಮಭಕ್ತನೂ ಆಗಿದ್ದನು. ಅವನು ಮಹಾಕಾಲನೆಂದೂ ಪ್ರಸಿದ್ಧನಾಗಿದ್ದನು. ದಿತಿಯ ಮಕ್ಕಳೆಲ್ಲರಿಗೂ ದೈತ್ಯರೆಂದು ಹೆಸರಾಯಿತು.

ಕಶ್ಯಪನಿಗೆ ದನುವಿನಲ್ಲಿ ಮೂವತ್ತುನಾಲ್ಕು ಮಂದಿ ಮಕ್ಕಳು ಹುಟ್ಟಿದರು. ಅವರಲ್ಲಿ ಮೊದಲನೆಯವನು ರಾಜಾ ವಿಪ್ರಚಿತ್ತಿ. ಅನಂತರ ಶಂಬರ, ನಮುಚಿ, ಪುಲೋಮಾ, ಅಸಿಲೋಮಾ, ಕೇಶೀ, ದುರ್ಜಯ, ಅಯಃಶಿರ, ಅಶ್ವಶಿರ, ಪರಾಕ್ರಮಿಯಾದ ಅಶ್ವಶಂಕು, ಗಗನಮೂರ್ಧಾ, ವೇಗವಂತ, ಕೇತುಮಂತ, ಸ್ವರ್ಭಾನು, ಅಶ್ವ, ಅಶ್ವಪತಿ, ವೃಷಪರ್ವಾ, ಅಜಕ, ಅಶ್ವಗ್ರೀವ, ಸೂಕ್ಷ್ಮ, ತುಹುಣ್ಡ, ಇಷುಪಾದ, ಏಕಚಕ್ರ, ವಿರೂಪಾಕ್ಷ, ಹರ, ಅಹರ, ನಿಚಂದ್ರ, ನಿಕುಂಭ, ಕುಪಟ, ಕಪಟ, ಶರಭ, ಶಲಭ, ಸೂರ್ಯ ಮತ್ತು

ಚಂದ್ರ–ಇವರು ಹುಟ್ಟಿದರು. ಇವರೇ ದಾನವಪ್ರಮುಖರಾದ ಮೂವತ್ತು ನಾಲ್ಕುಮಂದಿ ದನುವಿನ ಮಕ್ಕಳು.

ಜನಮೇಜಯ! ದನುವಿನ ಮಕ್ಕಳಲ್ಲಿಯೂ ಸೂರ್ಯ ಮತ್ತು ಚಂದ್ರ ರೆಂಬುವರಿದ್ದಾರೆ. ದೇವತೆಗಳಲ್ಲಿಯೂ ಸೂರ್ಯ ಮತ್ತು ಚಂದ್ರರೆಂಬುವರಿ ದ್ದಾರೆ. ಅವರು ದಾನವರು. ಇವರು ದೇವತೆಗಳು. ದಾನವರೆಲ್ಲರೂ ಮಹಾ ಬಲರಾಗಿಯೂ ಸತ್ತ್ವಸಂಪನ್ನರಾಗಿಯೂ ಇದ್ದರು. ಮುಂದೆ ಹೇಳುವ ಹತ್ತು ಮಂದಿ ದಾನವರು ದಾನವಕುಲದಲ್ಲಿಯೇ ಬಹಳ ಪ್ರಸಿದ್ಧರಾದವರು. ಏಕಾಕ್ಷ, ಮೃತಪಾ, ಪ್ರಲಂಬ, ನರಕ, ವಾತಾಪೀ, ಶತ್ರುತಪನ, ಶಠ, ಗವಿಷ್ಠ, ವನಾಯು, ದೀರ್ಘಜಿಹ್ವ–ಇವರುಗಳೇ ಆ ಹತ್ತುಮಂದಿ ದಾನವ ಪ್ರಮುಖರು.

ಅವರೆಲ್ಲರಿಗೂ ಅಸಂಖ್ಯಾತರಾದ ಪುತ್ರ-ಪೌತ್ರರೂ ಹುಟ್ಟಿದರು.

ಕಶ್ಯಪನಿಗೆ ಸಿಂಹಿಕೆಯಲ್ಲಿ ಸೂರ್ಯ-ಚಂದ್ರರಿಗೆ ಸರ್ವದಾ ಉಪಟಳ ಕೊಡುವ ರಾಹು, ಸುಚಂದ್ರ, ಚಂದ್ರಹರ್ತ್ಯ, ಚಂದ್ರಪ್ರಮರ್ದನ–ಎಂಬ ನಾಲ್ವರು ಮಕ್ಕಳು ಹುಟ್ಟಿದರು. ಕಶ್ಯಪನಿಗೆ ಕ್ರೂರಸ್ವಭಾವವುಳ್ಳ ಕ್ರೋಧಾ (ಕ್ರೂರಾ ) ಎಂಬ ದಕ್ಷಕನ್ಯೆಯಲ್ಲಿ ಅನೇಕ ಪುತ್ರರೂ ಪೌತ್ರರೂ ಹುಟ್ಟಿದರು. ಕ್ರೂರಕರ್ಮಗಳಲ್ಲಿಯೇ ಆಸಕ್ತಿಯಿದ್ದ, ಶತ್ರುಹಂತಕರಾದ ಕ್ರೋಧವಶರೆಂಬ ರಾಕ್ಷಸಗಣವೂ ಕ್ರೂರಾ ಎಂಬ ಕನ್ಯೆಯಲ್ಲಿ ಜನ್ಮತಾಳಿತು.

ಕಶ್ಯಪನಿಗೆ ದನಾಯುವಿನಲ್ಲಿ ವಿಕ್ಷರ, ಬಲ, ವೀರ, ವೃತ್ರ–ಎಂಬ ನಾಲ್ವರು ಅಸುರಪುಂಗವರು ಹುಟ್ಟಿದರು. ಕಾಲಾ ಎಂಬುವಳಲ್ಲಿ ಸುಪ್ರಸಿದ್ಧ ರಾದ, ಕಾಲಸದೃಶರಾದ, ಮಹಾವೀರ್ಯವಂತರಾದ ವಿನಾಶನ, ಕ್ರೋಧ, ಕ್ರೋಧಹಂತಾ, ಕ್ರೋಧಶತ್ರು–ಎಂಬ ನಾಲ್ವರು ಮಕ್ಕಳು ಹುಟ್ಟಿದರು. ಕಾಲಕೇಯರೆಂಬ ರಾಕ್ಷಸರೂ ಕಾಲಾ ಎಂಬ ದಕ್ಷಕನ್ಯೆಯಲ್ಲಿಯೇ ಹುಟ್ಟಿದರು.

ಭೃಗುಮಹರ್ಷಿಯ ಮಗನಾದ ಶುಕ್ರನು ಅಸುರರಿಗೆ ಪುರೋಹಿತ ನಾದನು. ಅವನಿಗೆ ಉಶನಸನೆಂಬ ನಾಮಧೇಯವೂ ಇದ್ದಿತು. ಅವನಿಗೆ ನಾಲ್ವರು ಮಕ್ಕಳು. ಅವರೂ ಸಹ ಅಸುರರ ಪುರೋಹಿತರೇ ಆಗಿದ್ದರು. ಅವರಲ್ಲಿ ತ್ವಷ್ಟಾಧರ ಮತ್ತು ಅತ್ರಿ–ಎಂಬಿಬ್ಬರನ್ನು ಬಿಟ್ಟು ಉಳಿದಿಬ್ಬರು

ಕ್ರೂರಕರ್ಮಿಗಳಾಗಿದ್ದರು. ನಾಲ್ವರೂ ತೇಜಸ್ಸಿನಲ್ಲಿ ಸೂರ್ಯನಿಗೆ ಸದೃಶ ರಾಗಿದ್ದರು.

ಜನಮೇಜಯ! ಸುರಾಸುರರ ವಂಶಾವಳಿಯನ್ನು ನಾನು ಪುರಾಣದಲ್ಲಿ ಕೇಳಿದ್ದಂತೆ ಹೇಳಿದ್ದೇನೆ. ಆದರೆ ಅವರ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳೆಲ್ಲರ ನಾಮಧೇಯಗಳನ್ನೂ ಹೇಳುವ ಸಾಧ್ಯತೆಯೇ ಇಲ್ಲ. ಅವರ ಪೀಳಿಗೆಗಳು ಅಸಂಖ್ಯಾತವಾಗಿ ಬೆಳೆದು ಹೋಗಿವೆ. ಇದುವರೆಗೆ ನಾನು ದಕ್ಷಕನ್ಯೆಯರಾದ ಅದಿತಿ, ದಿತಿ, ದನು, ಸಿಂಹಿಕಾ, ಕ್ರೋಧಾ, ದನಾಯು, ಕಾಲಾ–ಇವರ ಮಕ್ಕಳ ವಿಷಯವನ್ನು ಹೇಳಿದೆನು. ಉಳಿದವರ ಮಕ್ಕಳ ನಾಮಧೇಯಗಳನ್ನು ಹೇಳುವೆನು ; ಕೇಳು.

ಕಶ್ಯಪನಿಗೆ ವಿನತೆಯಲ್ಲಿ ತಾರ್ಕ್ಷ್ಯ, ಅರಿಷ್ಟನೇಮಿ, ಗರುಡ, ಅರುಣ, ಆರುಣಿ, ವಾರುಣಿ–ಎಂಬ ಆರು ಮಕ್ಕಳು ಹುಟ್ಟಿದರು. ಶೇಷ, ಅನಂತ, ವಾಸುಕಿ, ತಕ್ಷಕ, ಕೂರ್ಮ, ಕುಲಿಕ–ಇವರೇ ಮೊದಲಾದವರು ಕಶ್ಯಪನಿಗೆ ಕದ್ರುವಿನಲ್ಲಿ ಹುಟ್ಟಿದ ಮಕ್ಕಳು.

ಕಶ್ಯಪನಿಗೆ 'ಮುನಿ' ಎಂಬ ದಕ್ಷಕನ್ಯೆಯಲ್ಲಿ ಭೀಮಸೇನ, ಉಗ್ರಸೇನ, ಸುಪರ್ಣ, ವರುಣ, ಗೋಪತಿ, ಧೃತರಾಷ್ಟ್ರ , ಸೂರ್ಯವರ್ಚಸ, ಸತ್ಯವಾಕ್, ಅರ್ಕಪರ್ಣ, ವಿಖ್ಯಾತನಾದ ಪ್ರಯುತ, ಭೀಮ, ಚಿತ್ರರಥ, ವಿಖ್ಯಾತನಾದ ಸರ್ವಜ್ಞನಾದ ಜಿತೇಂದ್ರಿಯನಾದ ಶಾಲಿಶಿರಸ, ಪರ್ಜನ್ಯ, ಕಲಿ, ನಾರದ–ಈ ಹದಿನಾರು ಮಂದಿ ಮಕ್ಕಳು ಹುಟ್ಟಿದರು, ಅವರಿಗೆ ದೇವಗಂಧರ್ವರೆಂದೂ ಮೌನೇಯರೆಂದೂ ಹೆಸರು. ಮುಂದೆ ಕಶ್ಯಪರಿಗೆ 'ಪ್ರಾಧಾ' ಎಂಬ ದಕ್ಷಕನ್ಯೆ ಯಲ್ಲಿ ಹುಟ್ಟಿದವರ ಹೆಸರುಗಳನ್ನು ಹೇಳುತ್ತೇನೆ. ಜನಮೇಜಯ! ಅನವದ್ಯಾ, ಅರೂಪಾ, ಮನು, ವಂಶಾ, ಅಸುರಾ, ಮಾರ್ಗಣಪ್ರಿಯಾ, ಸುಭಗಾ, ಭಾಸೀ–ಈ ಎಂಟು ಕನ್ಯೆಯರು ಪ್ರಾಧಾ ಎಂಬುವಳಲ್ಲಿ ಹುಟ್ಟಿದರು. ಈ ಎಂಟು ಹೆಣ್ಣುಮಕ್ಕಳಲ್ಲದೇ ಸಿದ್ಧ, ಪೂರ್ಣ, ಬರ್ಹಿ, ಪೂರ್ಣಾಯು, ಬ್ರಹ್ಮ ಚಾರೀ, ರತಿಗುಣ, ಸುಪರ್ಣ, ವಿಶ್ವಾವಸು, ಭಾನು, ಸುಚಂದ್ರ–ಎಂಬ ಹತ್ತು ಗಂಡುಮಕ್ಕಳೂ ಕೂಡ ಪ್ರಾಧಾ ಎಂಬುವಳಲ್ಲಿಯೇ ಜನಿಸಿದರು. ಈ ದೇವಗಂಧರ್ವರು ಪ್ರಾಧೇಯರೆಂದೂ ಪ್ರಸಿದ್ಧರಾಗಿದ್ದಾರೆ. ಪುಣ್ಯಲಕ್ಷಣ

ಯುಕ್ತವಾದ ಅಪ್ಸರೆಯರ ವಂಶವು ಕಶ್ಯಪ ಮತ್ತು ವಿಶ್ವಾ ಇವರ ಸಮಾಗಮದಿಂದ ಪ್ರಾದುರ್ಭೂತವಾಯಿತು. ಅಲಂಬುಷಾ, ಮಿಶ್ರಕೇಶೀ, ವಿದ್ಯುತ್ಪರ್ಣಾ, ತಿಲೋತ್ತಮಾ, ಅರುಣಾ, ರಕ್ಷಿತಾ, ರಂಭಾ, ಮನೋರಮಾ, ಕೇಶಿನೀ, ಸುಬಾಹು, ಸುರತಾ, ಸುರಜಾ, ಸುಪ್ರಿಯಾ–ಈ ಹದಿಮೂರು ಅಪ್ಸರೆಯರೂ ಮತ್ತು ಅತಿಬಾಹು, ಹಾಹಾ, ಹೂಹೂ ಮತ್ತು ತುಂಬುರು ಎಂಬ ನಾಲ್ವರು ಗಂಧರ್ವರೂ 'ವಿಶ್ವಾ' ಎಂಬ ದಕ್ಷಕನ್ಯೆಯಲ್ಲಿ ಹುಟ್ಟಿದರು.

ಕಶ್ಯಪರಿಗೆ ಕಪಿಲಾ ಎಂಬುವಳಲ್ಲಿ ಅಮೃತವೂ, ಬ್ರಾಹ್ಮಣರೂ, ಹಸುಗಳೂ, ಗಂಧರ್ವಾಪ್ಸರೆಯರೂ ಹುಟ್ಟಿದರೆಂದು ಪುರಾಣಗಳಲ್ಲಿ ಉಕ್ತವಾಗಿದೆ. ( ಬ್ರಾಹ್ಮಣರಿಗೂ ಗೋವುಗಳಿಗೂ ನಿಕಟವಾದ ಸಂಬಂಧವಿದೆ. ಬ್ರಾಹ್ಮಣರೂ ಮತ್ತು ಹಸುಗಳೂ ಒಂದೇ ತಾಯಿಯ ಮಕ್ಕಳು.)

ಜನಮೇಜಯ! ಸರ್ವಪ್ರಾಣಿಗಳ ಮತ್ತು ಮನುಷ್ಯರ ಸಂಭವದ ರಹಸ್ಯವನ್ನು ನಾನೀಗ ನಿನಗೆ ಹೇಳಿದ್ದೇನೆ. ಗಂಧರ್ವಾಪ್ಸರೆಯರು, ಭುಜಂಗಗಳು, ಪಕ್ಷಿಗಳು, ರುದ್ರರು, ಮರುತ್ತುಗಳು, ಗೋವುಗಳು, ಶ್ರೀಮಂತರಾದ ಮತ್ತು ಪುಣ್ಯಕರ್ಮಿಗಳಾದ ಬ್ರಾಹ್ಮಣರು–ಈ ಎಲ್ಲರ ಉತ್ಪತ್ತಿಯ ರಹಸ್ಯವನ್ನೂ ಹೇಳಿದ್ದೇನೆ.

ದೇವ-ದಾನವ-ದೈತ್ಯ-ಮಾನವ-ಪಶು-ಪಕ್ಷಿಗಳ ಸಂಭವರಹಸ್ಯವನ್ನು ಕೇಳುವುದೂ ಮತ್ತು ಹೇಳುವುದೂ ಬಹುಪುಣ್ಯಪ್ರದವಾದುದು.

**ಆಯುಷ್ಯಶ್ಚೈವ ಪುಣ್ಯಶ್ಚ ಧನ್ಯಃ ಶ್ರುತಿಸುಖಾವಹಃ ।**
**ಶ್ರೋತವ್ಯಶ್ಚೈವ ಸತತಂ ಶ್ರಾವ್ಯಶ್ಚೈವಾನಸೂಯತಾ ॥೫೫॥**

ಜನಮೇಜಯ! ಈ ಪ್ರಸಂಗವು ಆಯುರ್ವರ್ಧಕವಾದುದು, ಪುಣ್ಯಪ್ರದವಾದುದು ಮತ್ತು ಪ್ರಶಂಸನೀಯವಾದುದು. ಕಿವಿಗೆ ಕೇಳಲು ಬಹು ಇಂಪಾದುದು. ಅಸೂಯಾರಹಿತನಾಗಿ ಈ ಪ್ರಕರಣವನ್ನು ನಿತ್ಯವೂ ಕೇಳಬೇಕು ; ಮತ್ತೊಬ್ಬರಿಗೂ ತಿಳಿಸಬೇಕು.

ಇಮಂ ತು ವಂಶಂ ನಿಯಮೇನ ಯಃ ಪಠೇ-
ನ್ಮಹಾತ್ಮನಾಂ ಬ್ರಾಹ್ಮಣದೇವಸಂನಿಧೌ ।

ಅಪತ್ಯಲಾಭಂ ಲಭತೇ ಸ ಪುಷ್ಕಲಂ
ಶ್ರಿಯಂ ಯಶಃ ಪ್ರೇತ್ಯ ಚ ಶೋಭನಾಂ ಗತಿಮ್ ॥

ಜನಮೇಜಯ! ಮಹಾತ್ಮರ ಈ ವಂಶಾವಳಿಯನ್ನು ಮಹಾತ್ಮರಾದ ಬ್ರಾಹ್ಮಣರ ಮತ್ತು ದೇವರ ಸನ್ನಿಧಿಯಲ್ಲಿ ನಿಯಮದಿಂದ ಯಾವ ಮಾನವನು ಅನುದಿನವೂ ಪಾರಾಯಣಮಾಡುತ್ತಾನೆಯೋ–ಅಂತಹವನಿಗೆ ಬಹುಪುತ್ರರು ಹುಟ್ಟುತ್ತಾರೆ. ಅವನು ಇಹದಲ್ಲಿ ಸಂಪತ್ತನ್ನೂ ಯಶಸ್ಸನ್ನೂ ಅವಸಾನಾನಂತರದಲ್ಲಿ ಸದ್ಗತಿಯನ್ನೂ ಪಡೆಯುತ್ತಾನೆ."

೬೫ನೆಯ ಅಧ್ಯಾಯವು ಮುಗಿಯಿತು.

೬೬ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಕಶ್ಯಪರ ಸಂತಾನಪರಂಪರೆ

"ಜನಮೇಜಯ! ನಾನು ಈ ಹಿಂದೆ ನಿನಗೆ ಬ್ರಹ್ಮನ ಮಾನಸಪುತ್ರರಾದ ಆರು ಜನ ಮಹರ್ಷಿಗಳ ಹೆಸರುಗಳನ್ನು ಹೇಳಿದ್ದೇನಲ್ಲವೇ? ಏಳನೆ ಯವನಾದ ಸ್ಥಾಣುವಿಗೆ ಹನ್ನೊಂದು ಮಕ್ಕಳು. ಮೃಗವ್ಯಾಧ, ಸರ್ಪ, ಮಹಾಯಶಸ್ವಿಯಾದ ನಿರ್‌ಋತಿ, ಅಜೈಕಪಾದ, ಅಹಿರ್ಬುಧ್ನ್ಯ, ಶತ್ರು ಸಂತಾಪಕನಾದ ಪಿನಾಕೀ, ದಹನ, ಈಶ್ವರ, ಕಾಂತಿಮಂತನಾದ ಕಪಾಲಿ, ಸ್ಥಾಣು, ಭವ–ಇವರೇ ಆ ಹನ್ನೊಂದು ಮಂದಿ ಮಕ್ಕಳು. ಇವರಿಗೆ ಏಕಾದಶ ರುದ್ರರೆಂದೂ ಹೆಸರಿದೆ. ಮರೀಚೀ, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು–ಈ ಆರು ಮಂದಿ ವೀರ್ಯವಂತರಾದ ಮಹರ್ಷಿಗಳು ಬ್ರಹ್ಮನ ಮಕ್ಕಳು. ಮರೀಚಿಗೆ ಕಶ್ಯಪನು ಒಬ್ಬ ಮಗನೆಂದು ಹಿಂದೆಯೇ ಹೇಳಿದ್ದೇನೆ. ಅಂಗಿರಸನಿಗೆ ಬೃಹಸ್ಪತಿ, ಉತಥ್ಯ ಮತ್ತು ಸಂವರ್ತ–ಎಂಬ ಮೂವರು ಮಕ್ಕಳಿದ್ದರು. ಅವರೆಲ್ಲರೂ ವೇದವಿದರಾಗಿಯೂ, ಸಿದ್ಧರಾಗಿಯೂ, ಶಾಂತಾತ್ಮರಾಗಿಯೂ ಇದ್ದರು.

ಮೂರನೆಯವನಾದ ಅತ್ರಿಗೆ ಬಹುಮಂದಿ ಪುತ್ರರಿದ್ದರು. ಅವರೆಲ್ಲರೂ ವೇದವಿದರಾಗಿಯೂ ಶಾಂತಾತ್ಮರಾಗಿಯೂ ಇದ್ದರು. ರಾಕ್ಷಸ-ವಾನರ-ಕಿನ್ನರ-ಯಕ್ಷರು ಪುಲಸ್ತ್ಯಮಹರ್ಷಿಯ ಮಕ್ಕಳಾಗಿದ್ದರು. ಶರಭ

ಗಳು, ಸಿಂಹಗಳು, ಕಿಂಪುರುಷರು, ವ್ಯಾಘ್ರಗಳು, ಕರಡಿಗಳು, ಈಹಾಮೃಗ ಗಳು ಪುಲಹನ ಮಕ್ಕಳೆಂದು ಪ್ರಸಿದ್ಧವಾಗಿವೆ. ಕ್ರತುವಿನ ಮಕ್ಕಳು ಕ್ರತುವಿಗೆ (ಯಜ್ಞಕ್ಕೆ) ಸಮಾನರಾದವರು ; ಇವರು ಪವಿತ್ರತಮರು ; ಸತ್ಯವ್ರತ ಪರಾಯಣರು ; ಮೂರು ಲೋಕಗಳಲ್ಲಿಯೂ ಪ್ರಸಿದ್ಧರಾದವರು ; ಸೂರ್ಯನೊಡನೆಯೇ ಯಾವಾಗಲೂ ಸಂಚರಿಸತಕ್ಕವರು. ಇವರಿಗೆ ವಾಲಖಿಲ್ಯರೆಂದು ಹೆಸರು. ಬ್ರಹ್ಮನ ಬಲಗಾಲಿನ ಅಂಗುಷ್ಠದಿಂದ ಶಾಂತಾತ್ಮ ನಾದ ಮಹಾತಪಸ್ವಿಯಾದ ದಕ್ಷನು ಹುಟ್ಟಿದನು. ಬ್ರಹ್ಮನ ಎಡಗಾಲಿನ ಅಂಗುಷ್ಠದಿಂದ ದಕ್ಷನ ಭಾರ್ಯೆಯು ಹುಟ್ಟಿದಳು. ದಕ್ಷನು ತನ್ನ ಪತ್ನಿಯ ಗರ್ಭದಲ್ಲಿ ಐವತ್ತು ಹೆಣ್ಣುಮಕ್ಕಳನ್ನು ಪಡೆದನು. ಆ ಹೆಣ್ಣುಮಕ್ಕಳೆಲ್ಲರೂ ಕಮಲಲೋಚನೆಯರಾಗಿಯೂ ರೂಪ-ಲಾವಣ್ಯವತಿಯರಾಗಿಯೂ ಇದ್ದರು. ದಕ್ಷಬ್ರಹ್ಮನಿಗೆ ಗಂಡುಮಕ್ಕಳಿರಲಿಲ್ಲ. ಆದುದರಿಂದ ತನ್ನ ಹೆಣ್ಣುಮಕ್ಕಳನ್ನೇ ದಕ್ಷನು * ಪುತ್ರಿಕೆಯರನ್ನಾಗಿ ಮಾಡಿಕೊಂಡನು.

ದಕ್ಷಬ್ರಹ್ಮನು ತನ್ನ ಹತ್ತು ಹೆಣ್ಣುಮಕ್ಕಳನ್ನು ಧರ್ಮನಿಗೆ ಮದುವೆ ಮಾಡಿಕೊಟ್ಟನು. ಇಪ್ಪತ್ತೇಳು ಹೆಣ್ಣುಮಕ್ಕಳನ್ನು ಚಂದ್ರನಿಗೂ, ಉಳಿದ ಹದಿಮೂರು ಹೆಣ್ಣುಮಕ್ಕಳನ್ನು ಕಶ್ಯಪನಿಗೂ ಮದುವೆಮಾಡಿಕೊಟ್ಟನು. ದಕ್ಷನು ಧರ್ಮನಿಗೆ ಮದುವೆಮಾಡಿಕೊಟ್ಟ ಹೆಣ್ಣುಮಕ್ಕಳ ಹೆಸರುಗಳನ್ನು ಹೇಳುವೆನು; ಕೇಳು, ಜನಮೇಜಯ! ಕೀರ್ತಿ, ಲಕ್ಷ್ಮೀ, ಧೃತಿ, ಮೇಧಾ,

---

* ಗಂಡುಮಕ್ಕಳಿಲ್ಲದೇ ಹೆಣ್ಣುಮಕ್ಕಳೇ ಇರುವವರಿಗೆ ಮರಣಾನಂತರ ಸಂಸ್ಕಾರ- ಶ್ರಾದ್ಧಾದಿ ಕರ್ಮಗಳನ್ನು ಮಾಡಲು ಕರ್ತೃವೇ ಇಲ್ಲದಂತಾಗುವುದನ್ನು ನಿವಾರಿಸಲು ಹೆಣ್ಣುಮಕ್ಕಳಲ್ಲಿ ಹುಟ್ಟುವ ಗಂಡುಮಕ್ಕಳಿಗೆ ಮಾತಾಮಹರ ಶ್ರಾದ್ಧಾದಿಗಳನ್ನು ಮಾಡುವ ಅರ್ಹತೆಗಾಗಿ– 'ಪುತ್ರಿಕಾ' ಎಂಬುದೊಂದು ವಿಧಿಯು ಸ್ಮೃತಿಯಲ್ಲಿ ಉಕ್ತವಾಗಿದೆ.

**ಅಪುತ್ರೋಽನೇನ ವಿಧಿನಾ ಸುತಾಂ ಕುರ್ವೀತ ಪುತ್ರಿಕಾಮ್ ।**
**ಯದಪತ್ಯಂ ಭವೇದಸ್ಯಾಂ ತನ್ಮಮ ಸ್ಯಾತ್ಸ್ವಧಾಕರಮ್ ॥**

ಮನುಸ್ಮೃತಿ-ಅಧ್ಯಾಯ ೧ ಶ್ಲೋಕ ೧೨೭

ಅಪುತ್ರವಂತನು ಈ ವಿಧಿಯನ್ನನುಸರಿಸಿ ಪುತ್ರಿಯನ್ನು ಪುತ್ರಿಕೆಯನ್ನಾಗಿ ಮಾಡಿಕೊಳ್ಳಬೇಕು. ಅವಳಲ್ಲಿ ಹುಟ್ಟುವ ಮಗನು ತನ್ನ ಶ್ರಾದ್ಧಾದಿಗಳನ್ನು ಮಾಡಲು ಅರ್ಹನಾಗುವಂತೆ ಮಾಡುವುದೇ ಪುತ್ರಿಯನ್ನು ಪುತ್ರಿಕೆಯನ್ನಾಗಿ ಮಾಡಿಕೊಳ್ಳುವ ಉದ್ದೇಶ.

ಪುಷ್ಟಿ, ಶ್ರದ್ಧಾ, ಕ್ರಿಯಾ, ಬುದ್ಧಿ, ಲಜ್ಜಾ ಮತ್ತು ಮತಿ–ಈ ಹತ್ತು ಕನ್ಯೆಯರು ಧರ್ಮನ ಪತ್ನಿಯರಾದರು. ಧರ್ಮಮೂರ್ತಿಯ ಸಂದರ್ಶನಕ್ಕೆ ಅವನ ಪತ್ನಿಯರೇ ಮಾರ್ಗದರ್ಶಕರೆಂದು ಬ್ರಹ್ಮನೇ ನಿಶ್ಚಯಿಸಿದ್ದಾನೆ. ಚಂದ್ರನ ಇಪ್ಪತ್ತೇಳು ಮಂದಿ ಪತ್ನಿಯರು ಲೋಕವಿಖ್ಯಾತರಾದರು. ಶುಚಿವ್ರತೆಯರಾದ ಸೋಮನ ಪತ್ನಿಯರು ಕಾಲದ ನಯನದಲ್ಲಿ (ಗತಿಯಲ್ಲಿ) ಸರ್ವದಾ ನಿಯುಕ್ತರಾಗಿರುತ್ತಾರೆ. ಲೋಕವ್ಯವಹಾರದ ನಿರ್ವಹಣಾರ್ಥವಾಗಿ ಇವರೆಲ್ಲ ರಿಗೂ ನಕ್ಷತ್ರಗಳೆಂಬ ಅಭಿಧಾನವಿದೆ. ಬ್ರಹ್ಮನ ಮತ್ತೊಬ್ಬ ಮಗ ಮನು. ಮನುವಿನ ಮಗ ಪ್ರಜಾಪತಿ. ಪ್ರಜಾಪತಿಗೆ ಎಂಟು ಜನ ಮಕ್ಕಳು. ಧರ, ಧ್ರುವ, ಸೋಮ, ಅಹಸ್ಸು, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ–ಇವರೇ ಅಷ್ಟವಸುಗಳು. ಪ್ರಜಾಪತಿಗೆ 'ಧೂಮ್ರಾ' ಎಂಬ ಪತ್ನಿಯಲ್ಲಿ ಧರನೆಂಬ ವಸುವೂ, ಬ್ರಹ್ಮವಿದ್ಯಾವಿದನಾದ ಧ್ರುವನೆಂಬುವನೂ, ಮನಸ್ವಿನಿಯಲ್ಲಿ ಚಂದ್ರನೂ, ಶ್ವಾಸಾ ಎಂಬುವಳಲ್ಲಿ ಶ್ವಸನನೂ (ಅನಿಲನೂ), ರತಾ ಎಂಬುವಳಲ್ಲಿ ಅಹಸ್ಸೂ, ಶಾಂಡಿಲ್ಯಾ ಎಂಬುವಳಲ್ಲಿ ಅನಲನೂ ಮತ್ತು ಪ್ರಭಾತ ಎಂಬುವಳಲ್ಲಿ ಪ್ರತ್ಯೂಷ-ಪ್ರಭಾಸರೂ ಜನಿಸಿದರು. ಅವರಲ್ಲಿ ಮೊದಲನೆಯವನಾದ ಧರನಿಗೆ ದ್ರವಿಣ, ಹುತಹವ್ಯವಹರೆಂಬ ಇಬ್ಬರು ಮಕ್ಕಳು. ಧ್ರುವನ ಮಗ ಲೋಕವಿಧ್ವಂಸಕನಾದ ಭಗವಾನ್ ಕಾಲ. ಸೋಮನ ಮಗನ ಹೆಸರು ವರ್ಚಸ. ವರ್ಚಸನ ಮಗ ವರ್ಚಸ್ವೀ. ವರ್ಚಸ್ವಿಗೆ ಮನೋಹರೆಯೆಂಬ ಪತ್ನಿಯಲ್ಲಿ ಶಿಶಿರ, ಪ್ರಾಣ, ರಮಣ–ಎಂಬ ಮೂವರು ಮಕ್ಕಳು ಹುಟ್ಟಿದರು. ಅಹಸ್ ಎಂಬುವನಿಗೆ ಜ್ಯೋತಿ, ಶಮ, ಶಾಂತ ಮತ್ತು ಮುನಿ–ಎಂಬ ನಾಲ್ವರು ಮಕ್ಕಳು. ಅನಲ ಅಥವಾ ಅಗ್ನಿಯ ಮಗ ಶರವಣಭವನಾದ ಕುಮಾರನು. ಶಾಖ, ವಿಶಾಖ ಮತ್ತು ನೈಗಮೇಯರು ಅಗ್ನಿಯ ಇತರ ಮೂವರು ಮಕ್ಕಳು. ಅಗ್ನಿಯ ಹಿರಿಯಮಗನಾದ ಕುಮಾರ ನನ್ನು ಕಾರ್ತಿಕೇಯನೆಂದೂ ಕರೆಯುತ್ತಾರೆ.

**ಕೃತ್ತಿಕಾಭ್ಯುಪಪತ್ತೇಶ್ಚ ಕಾರ್ತಿಕೇಯ ಇತಿ ಸ್ಮೃತಃ ॥೨೪॥**

ಕೃತ್ತಿಕಾನಕ್ಷತ್ರಗಳನ್ನು ತನ್ನ ತಾಯಿಯರೆಂದು ಕುಮಾರನು ಅಂಗೀ ಕರಿಸಿದ್ದರಿಂದ ಅವನಿಗೆ ಕಾರ್ತಿಕೇಯನೆಂದೂ ಹೆಸರಾಯಿತು. ಅನಿಲನ

ಭಾರ್ಯೆಯ ಹೆಸರು ಶಿವಾ. ಶಿವೆಯಲ್ಲಿ ಮನೋರಮಾ, ಅವಿಜ್ಞಾತಗತಿ ಎಂಬಿಬ್ಬರು ಮಕ್ಕಳು ಹುಟ್ಟಿದರು. ಪ್ರತ್ಯೂಷನ ಮಗ ಸುಪ್ರಸಿದ್ಧನಾದ ದೇವಲನೆಂಬ ಹೆಸರಿನ ಮಹರ್ಷಿಯು. ದೇವಲನಿಗೂ ಇಬ್ಬರು ಮಕ್ಕಳಿದ್ದರು. ಅವರಿಬ್ಬರೂ ಕ್ಷಮಾವಂತರಾಗಿದ್ದರು. ಅಂಗಿರಸನ ಮಗನಾದ ಬೃಹಸ್ಪತಿಗೆ ಬ್ರಹ್ಮವಾದಿನಿಯೂ, ಯೋಗಾಸಕ್ತಳೂ, ಪ್ರಾಪಂಚಿಕವ್ಯವಹಾರಗಳಲ್ಲಿ ಅನಾಸಕ್ತಳೂ ಆದ ತಂಗಿಯಿದ್ದಳು. ಅವಳು ವಸುಗಳಲ್ಲಿ ಎಂಟನೆಯವನಾದ ಪ್ರಭಾಸ ಎಂಬುವನನ್ನು ಮದುವೆಯಾಗಿದ್ದಳು. ಅವರಿಬ್ಬರ ವಿವಾಹದ ಫಲವಾಗಿ ವಿಶ್ವಕರ್ಮನು ಹುಟ್ಟಿದನು. ಅವನು ಶಿಲ್ಪವಿದ್ಯೆಗೆ ಪ್ರಜಾಪತಿ ಯಾಗಿದ್ದನು. ತನ್ನಿಂದ ಊರ್ಜಿತಗೊಳಿಸಲ್ಪಟ್ಟ ಶಿಲ್ಪವಿದ್ಯಾನುಸಾರವಾಗಿ ನಯನಮನೋಹರವಾದ ಸಾವಿರಾರು ದೇವಮಂದಿರಗಳನ್ನೂ–ವಿಮಾನ ಗಳನ್ನೂ ನಿರ್ಮಿಸಿದನು. ಶಿಲ್ಪಶಾಸ್ತ್ರವನ್ನು ತಿಳಿದಿದ್ದವರಲ್ಲಿ ಸರ್ವಶ್ರೇಷ್ಠನಾದ ವಿಶ್ವಕರ್ಮನು ದೇವತೆಗಳ ಭೂಷಣಗಳನ್ನು (ಒಡವೆ-ವಸ್ತುಗಳನ್ನು) ನಿರ್ಮಿಸುತ್ತಿದ್ದನಲ್ಲದೇ, ದೇವತೆಗಳಿಗೆ ನಾನಾವಿಧವಾದ, ಅಸಂಖ್ಯಾತವಾದ, ದಿವ್ಯವಾದ ವಿಮಾನಗಳನ್ನೂ ತಯಾರಿಸಿಕೊಟ್ಟನು. ವಿಶ್ವಕರ್ಮನ ಶಿಲ್ಪವಿದ್ಯೆಯನ್ನು ಅಲ್ಪ-ಸ್ವಲ್ಪ ಕಲಿತು ಈ ಮನುಷ್ಯಲೋಕದಲ್ಲಿ ಕೆಲವು ಮಾನವರು ಅದರಿಂದಲೇ ತಮ್ಮ ಜೀವನನಿರ್ವಹಣೆಮಾಡುತ್ತಿದ್ದಾರೆ. ಕ್ಷಯ ರಹಿತನಾದ ದೇವಶಿಲ್ಪಿಯಾದ ವಿಶ್ವಕರ್ಮನನ್ನು ಅವರು ಅನುದಿನವೂ ಪೂಜಿಸುತ್ತಾರೆ.

ಈ ಹಿಂದೆ ನಾನು ದಕ್ಷನು ತನ್ನ ಹತ್ತು ಹೆಣ್ಣುಮಕ್ಕಳನ್ನು ಧರ್ಮನಿಗೆ ಕೊಟ್ಟು ಮದುವೆಮಾಡಿದನೆಂದು ಹೇಳಿ ಅವರ ನಾಮಧೇಯಗಳನ್ನೂ ಹೇಳಿದ್ದೆನು. ಆದರೆ ಈ ಧರ್ಮಮೂರ್ತಿಯು ಯಾರು? ಎಲ್ಲಿಂದ ಹುಟ್ಟಿ ದನು? ಎಂಬ ಅಂಶವನ್ನು ಹೇಳಲಿಲ್ಲ, ಅಲ್ಲವೇ?

**ಸ್ತನಂ ತು ದಕ್ಷಿಣಂ ಭಿತ್ತ್ವಾ ಬ್ರಹ್ಮಣೋ ನರವಿಗ್ರಹಃ ।**
**ನಿಃಸೃತೋ ಭಗವಾನ್ಧರ್ಮಃ ಸರ್ವಲೋಕಸುಖಾವಹಃ ॥೩೧॥**

ಬ್ರಹ್ಮನ ಬಲಗಡೆಯ ಸ್ತನವನ್ನು ಭೇದಿಸಿಕೊಂಡು ನರರೂಪಿಯಾಗಿ ಸಕಲಲೋಕಸುಖಾವಹನಾದ ಭಗವಾನ್ ಧರ್ಮನು ಹೊರಗೆ ಬಂದನು. ಧರ್ಮನಿಗೆ ಶ್ರೇಷ್ಠರಾದ ಶಮ, ಕಾಮ, ಹರ್ಷ–ಎಂಬ ಮೂವರು ಮಕ್ಕ

ಳಿದ್ದರು. ಅವರು ಸರ್ವಪ್ರಾಣಿಗಳ ಹಿತದಲ್ಲಿಯೇ ಆಸಕ್ತಿಯುಳ್ಳವರಾಗಿಯೂ, ತಮ್ಮ ತೇಜಸ್ಸಿನಿಂದ ಲೋಕಗಳನ್ನೇ ಧರಿಸಿದವರಾಗಿಯೂ ಇದ್ದರು. ಕಾಮನ ಹೆಂಡತಿಯ ಹೆಸರು ರತಿ. ಶಮನ ಹೆಂಡತಿಯ ಹೆಸರು ಪ್ರಾಪ್ತಿ. ಹರ್ಷನ ಹೆಂಡತಿ ನಂದಾ ಎಂಬುವಳು. ಸಕಲಲೋಕವೂ ಈ ಮೂವರಲ್ಲಿಯೇ ಇಂದು ಅಡಕವಾಗಿದೆ. ಮರೀಚಿಯ ಮಗ ಕಶ್ಯಪನೆಂಬುದನ್ನು ಹಿಂದೆಯೇ ಹೇಳಿದ್ದೇನೆ. ಸುರಾಸುರರಿಬ್ಬರೂ ಕಶ್ಯಪನ ಮಕ್ಕಳೇ ಆಗಿದ್ದಾರೆ. ಈ ಪ್ರಪಂಚದ ಉತ್ಪತ್ತಿಗೆ ಕಶ್ಯಪನೇ ಮೂಲಪುರುಷನು. ಕಶ್ಯಪನಿಗೆ ಅದಿತಿಯಲ್ಲಿ ದ್ವಾದಶಾದಿತ್ಯರು ಹುಟ್ಟಿದರೆಂದೂ, ಅವರಲ್ಲಿ ಹತ್ತನೆಯವನು ಸವಿತೃವೆಂದೂ ಹಿಂದೆಯೇ ಹೇಳಿದ್ದೇನೆ. ತ್ವಷ್ಟೃವಿನ ಪುತ್ರಿಯಾದ ಸಂಜ್ಞಾ ಎಂಬುವಳು ಸವಿತೃವಿನ ಭಾರ್ಯೆ. ಅವಳು ಕುದುರೆಯ ರೂಪವನ್ನು ಧರಿಸಿ ದವಳಾಗಿದ್ದಳು.

ಸೂರ್ಯನೊಡನೆ ಮಾಡಿದ ಸಮಾಗಮದಿಂದಾಗಿ ಅವಳು ಅಂತರಿಕ್ಷ ದಲ್ಲಿಯೇ ಇಬ್ಬರು ಮಕ್ಕಳಿಗೆ ಜನ್ಮವಿತ್ತಳು. ಆ ಕುಮಾರರು ಕುದುರೆಯ ರೂಪದಲ್ಲಿದ್ದ ಸಂಜ್ಞಾದೇವಿಯಲ್ಲಿ ಹುಟ್ಟಿದವರಾದ್ದರಿಂದ ಅಶ್ವಿನೀಕುಮಾರ ರೆಂದೇ ಪ್ರಸಿದ್ಧರಾದರು. ಅದಿತಿಗೆ ಇಂದ್ರಪ್ರಮುಖರಾದ ಹನ್ನೆರಡು ಮಂದಿ ದೇವತೆಗಳೂ ಕಶ್ಯಪರಿಂದ ಹುಟ್ಟಿದರು. ಅವರಲ್ಲಿ ಕಿರಿಯನು ವಿಷ್ಣು. ಅವ ನಲ್ಲಿಯೇ ಎಲ್ಲ ಲೋಕಗಳೂ ಪ್ರತಿಷ್ಠಿತವಾಗಿವೆ. ಜನಮೇಜಯ! ಮೂವತ್ತು ಮೂರು ಸಂಖ್ಯೆಯ ದೇವಪ್ರಮುಖರಿದ್ದಾರೆ–( ಏಕಾದಶರುದ್ರರು, ದ್ವಾದಶಾ ದಿತ್ಯರು, ಅಷ್ಟವಸುಗಳು, ಪ್ರಜಾಪತಿ ಮತ್ತು ವಷಟ್ಕಾರ. ) ಇವರುಗಳ ಪಕ್ಷ, ಕುಲ, ಗುಣಗಳನ್ನು ವಿಭಾಗಿಸಿ ನಿನಗೆ ಹೇಳುತ್ತೇನೆ. ಏಕಾದಶರುದ್ರರದ್ದೇ ಒಂದು ಪಕ್ಷ ಅಥವಾ ಒಂದು ಗಣ. ಸಾಧ್ಯರು, ಮರುತ್ತುಗಳು, ವಸುಗಳು ಇವರದ್ದೂ ಪ್ರತ್ಯೇಕ-ಪ್ರತ್ಯೇಕವಾದ ಪಕ್ಷಗಳಿವೆ. ಭಾರ್ಗವರದ್ದೂ ವಿಶ್ವೇ ದೇವತೆಗಳದ್ದೂ ಪ್ರತ್ಯೇಕಗಣಗಳಲ್ಲಿ ಸೇರುತ್ತವೆ. ಮೊದಲು ಅದಿತಿಯ ಮಕ್ಕಳಾದ ಆದಿತ್ಯರಲ್ಲಿ ( ಆದಿತ್ಯಗಣದಲ್ಲಿ ) ಯಾರು ಸೇರುತ್ತಾರೆಂಬುದನ್ನು ನೋಡೋಣ. ವೈನತೇಯ ( ಗರುಡ ), ಬಲಿಷ್ಠನಾದ ಅರುಣ, ಬೃಹಸ್ಪತಿ– ಇವರು ಆದಿತ್ಯರಲ್ಲಿ ಸೇರುತ್ತಾರೆ. ಅಶ್ವಿನೀದೇವತೆಗಳನ್ನೂ, ಸಕಲೌಷಧಿ ಗಳನ್ನೂ, ಪಶುಗಳನ್ನೂ ಗುಹ್ಯಕಗಣಕ್ಕೆ ಸೇರಿದುವುಗಳೆಂದು ತಿಳಿಯುವವ

ನಾಗು. ನಾನೀಗ ದೇವಗಣಗಳನ್ನು ಆನುಪೂರ್ವಿಯಾಗಿ ಹೇಳಿದ್ದೇನೆ. ಈ ದೇವಗಣಗಳ ಉಚ್ಚಾರಣೆಯಿಂದಲೇ ಮಾನವನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

ಮಹಾರಾಜ! ಭೃಗು ಮತ್ತು ಭಾರ್ಗವರ ವಿಷಯವನ್ನು ಹೇಳುವೆನು; ಕೇಳು. ಬ್ರಹ್ಮನ ಹೃದಯವನ್ನು ಭೇದಿಸಿಕೊಂಡು ಭೃಗುಮಹರ್ಷಿಯು ಹೊರಗೆ ಬಂದನು. ಭೃಗುವಿನ ಮಗನ ಹೆಸರು ಕವಿ. ವಿದ್ವಾಂಸನಾದ ಕವಿಯ ಮಗ ಶುಕ್ರ. ಅವನು ಬ್ರಹ್ಮನ ನಿರ್ದೇಶನದಂತೆ ಮೂರು ಲೋಕಗಳ ರಕ್ಷಣಾರ್ಥ ವಾಗಿ ಗ್ರಹವಾಗಿ ಪರಿವರ್ತನಹೊಂದಿ ಲೋಕದ ಜನರಿಗೆ ಅತಿವೃಷ್ಟಿ-ಅನಾವೃಷ್ಟಿ ಮತ್ತು ಸುವೃಷ್ಟಿಗಳನ್ನೂ, ಭಯವನ್ನೂ ಮತ್ತು ಅಭಯವನ್ನೂ ಕಾಲಾನುಗುಣವಾಗಿ ದಯಪಾಲಿಸುತ್ತಾ ಪ್ರಪಂಚದ ಸುತ್ತಲೂ ತಿರುಗುತ್ತಿರು ತ್ತಾನೆ. ಯೋಗಾಚಾರ್ಯನಾದ ಮಹಾಬುದ್ಧಿವಂತನಾದ ಶುಕ್ರನು ದೈತ್ಯರಿಗೆ ಗುರುವಾದನು. ಮೇಧಾವಿಯಾದ, ಬ್ರಹ್ಮಚಾರಿಯಾದ, ವ್ರತನಿಷ್ಠನಾದ ಇವನು (ಬೃಹಸ್ಪತಿಯ ರೂಪದಲ್ಲಿ) ದೇವತೆಗಳಿಗೂ ಗುರುವಾದನು. ಭೃಗುಮಹರ್ಷಿಯು ತನ್ನ ಮೊಮ್ಮಗನಾದ ಶುಕ್ರನನ್ನು ಪ್ರಪಂಚದ ಯೋಗ ಕ್ಷೇಮಕ್ಕಾಗಿ ನಿಯಮಿಸಿದ ಮೇಲೆ ದೋಷರಹಿತನಾದ, ಮಹಾತೇಜಸ್ವಿ ಯಾದ, ಧರ್ಮಾತ್ಮನಾದ, ಯಶೋವಂತನಾದ ಚ್ಯವನನೆಂಬ ಪುತ್ರನನ್ನು ಪಡೆದನು. ತಾಯಿಯನ್ನು ಅಪಾಯದಿಂದ ತಪ್ಪಿಸುವ ಸಲುವಾಗಿ ಗರ್ಭದಲ್ಲಿ ದ್ದವನು ರೋಷದಿಂದ ಕೆಳಗೆ ಜಾರಿದನು. ಅಂತಹ ಮಹಾನುಭಾವನು– ಚ್ಯವನ ಮಹರ್ಷಿಯು ಗರ್ಭದಿಂದ 'ಚ್ಯುತ' (ಜಾರಿದ)ನಾದ್ದರಿಂದಲೇ ಅವನಿಗೆ ಚ್ಯವನನೆಂದು ಹೆಸರಾಯಿತು. ಮನುವಿನ ಮಗಳಾದ ಆರುಷೀ ಎಂಬುವಳು ಚ್ಯವನನ ಪತ್ನಿಯಾದಳು. ತಾಯಿಯ ಊರುವನ್ನು (ತೊಡೆ ಯನ್ನು) ಭೇದಿಸಿ ಕೊಂಡು ಹುಟ್ಟಿದ ಚ್ಯವನನ ಮಗನಿಗೆ 'ಔರ್ವ' ಎಂದೇ ಹೆಸರನ್ನಿಟ್ಟರು. ಔರ್ವನು ಬಾಲ್ಯದಲ್ಲಿಯೇ ಮಹಾತೇಜಸ್ವಿಯಾಗಿಯೂ, ವೀರ್ಯವಂತ ನಾಗಿಯೂ, ಸಕಲಸದ್ಗುಣಸಂಪನ್ನನಾಗಿಯೂ ಇದ್ದನು. ಪ್ರಾಪ್ತವಯಸ್ಕನಾಗಿ ವಿವಾಹಿತನಾದ ಔರ್ವನಿಗೆ ಋಚೀಕನೆಂಬ ಮಗನು ಹುಟ್ಟಿದನು. ಋಚೀಕನ ಮಗನ ಹೆಸರು ಜಮದಗ್ನಿ. ಜಮದಗ್ನಿಗೆ ನಾಲ್ವರು

ಮಕ್ಕಳಿದ್ದರು. ಪರಶುರಾಮನು ನಾಲ್ವರಲ್ಲಿ ಕನಿಷ್ಠನಾಗಿದ್ದರೂ ಗುಣದಲ್ಲಿ, ವೀರ್ಯ- ಸಾಹಸಗಳಲ್ಲಿ ಕನಿಷ್ಠನಾಗಿರಲಿಲ್ಲ. ಸರ್ವಶ್ರೇಷ್ಠನಾಗಿದ್ದನು. ಸರ್ವಾಸ್ತ್ರ ಗಳಲ್ಲಿಯೂ ಕುಶಲನಾದ, ಜಿತೇಂದ್ರಿಯನಾದ ಅವನು ಕ್ಷತ್ರಿಯಕುಲಕ್ಕೇ ಯಮಪ್ರಾಯನಾಗಿದ್ದನು. ಔರ್ವನಿಗೆ ( ಋಚೀಕನಿಗೆ ) ಜಮದಗ್ನಿಯೇ ಮೊದಲಾದ ನೂರುಮಂದಿ ಮಕ್ಕಳಿದ್ದರು. ಅವರಿಗೆ ಪುತ್ರ-ಪೌತ್ರರು ಸಹಸ್ರಸಂಖ್ಯೆಯಲ್ಲಿ ಹುಟ್ಟಿ ಭೃಗುವಂಶವು ವಿಸ್ತರವಾಗಿ ಬೆಳೆಯಿತು. ಬ್ರಹ್ಮನಿಗೆ ಧಾತಾ, ವಿಧಾತಾ ಎಂಬ ಮತ್ತಿಬ್ಬರು ಮಕ್ಕಳಿದ್ದಾರೆ. ಆ ಇಬ್ಬರಲ್ಲಿಯೇ ಈ ಪ್ರಪಂಚದ ಆಗು-ಹೋಗುಗಳೆಲ್ಲವೂ ಅಡಗಿವೆ. ಅವರು ಯಾವಾಗಲೂ ಮನುವಿನೊಡನೆಯೇ ಇದ್ದುಬಿಟ್ಟಿದ್ದಾರೆ. ಅವರ ತಂಗಿಯೇ ಪದ್ಮಾಲಯೆಯಾದ ಶುಭಾಂಗಿಯಾದ ಲಕ್ಷ್ಮೀದೇವಿ. ಅಂತರಿಕ್ಷದಲ್ಲಿ ಸಂಚರಿಸುವ ಕುದುರೆಗಳು ಲಕ್ಷ್ಮೀದೇವಿಯ ಮಾನಸಪುತ್ರರು. ಶುಕ್ರನ ಮಗಳಾದ ಜ್ಯೇಷ್ಠಾದೇವಿಯು ವರುಣನ ಭಾರ್ಯೆ. ಅವಳು ವರುಣನಿಂದ ಇಬ್ಬರು ಮಕ್ಕಳನ್ನು ಪಡೆದಳು. ಇಬ್ಬರಲ್ಲಿ ಒಂದು ಗಂಡು, ಒಂದು ಹೆಣ್ಣು. ಗಂಡಿನ ಹೆಸರು ಬಲ, ಹೆಣ್ಣಿನ ಹೆಸರು ಸುರಾ. ಸುರೆಯು ದೇವತೆಗಳಿಗೆ ಆನಂದದಾಯಕಳಾಗಿದ್ದಾಳೆ. ಕಾಲವು ಕಳೆದುಹೋದಂತೆ ಒಂದು ಸಮಯ ದಲ್ಲಿ ಪ್ರಪಂಚದಲ್ಲಿ ಕ್ಷಾಮವು ತಲೆದೋರಿತು. ಆಹಾರಾಭಾವದಿಂದಾಗಿ ಮನುಷ್ಯರೇ ಮನುಷ್ಯರನ್ನು ತಿಂದು ಜೀವಿಸುವ ಪರಿಸ್ಥಿತಿಯುಂಟಾಯಿತು. ಸರ್ವಪ್ರಾಣಿಗಳನ್ನೂ ವಿನಾಶಮಾಡುವ ಅಧರ್ಮದೇವತೆಯ ಪ್ರಾದುರ್ಭಾವ ವಾಯಿತು. ಅಧರ್ಮದೇವತೆಗೆ 'ನಿರ್‌ಋತಿ' ಎಂಬುವಳು ಭಾರ್ಯೆ ಯಾದಳು. ಅವಳಲ್ಲಿ ಹುಟ್ಟಿದ ರಾಕ್ಷಸರು ನೈರ್‌ಋತರೆಂದು ವಿಖ್ಯಾತರಾದರು. ಅವಳ ಮಕ್ಕಳಲ್ಲಿ ಭಯ, ಮಹಾಭಯ, ಮೃತ್ಯು–ಎಂಬುವರು ಮುಖ್ಯರು. ಅವರಲ್ಲಿ ಮೃತ್ಯುವು ಸಮಸ್ತಪ್ರಾಣಿಗಳ ಅಂತ್ಯಕ್ಕೆ ಕಾರಣನಾಗಿದ್ದಾನೆ. ಮೃತ್ಯುವು ಸರ್ವಪ್ರಾಣಿಗಳ ಅಂತಕನಾದ್ದರಿಂದ ಅವನಿಗೆ ಪತ್ನಿಯಾಗಲೀ, ಪುತ್ರರಾಗಲೀ ಇಲ್ಲ.

ತಾಮ್ರಾದೇವಿಯು ಕಾಕೀ, ಶ್ಯೇನೀ, ಭಾಸೀ, ಧೃತರಾಷ್ಟ್ರೀ ಮತ್ತು ಶುಕೀ–ಎಂಬ ಐವರು ಹೆಣ್ಣುಮಕ್ಕಳನ್ನು ಪಡೆದಳು. ಕಾಕೀ ಎಂಬ ಕನ್ಯೆಯು ಉಲೂಕಗಳಿಗೆ ( ಗೂಬೆಗಳಿಗೆ ) ಜನ್ಮವಿತ್ತಳು. ಶ್ಯೇನಿಯು ಗಿಡಗಗಳಿಗೂ– ಭಾಸಿಯು ಹುಂಜಗಳಿಗೂ ಮತ್ತು ರಣಹದ್ದುಗಳಿಗೂ–ಧೃತರಾಷ್ಟ್ರಿಯು

ಹಂಸಗಳಿಗೂ, ಕಲಹಂಸಗಳಿಗೂ ಮತ್ತು ಚಕ್ರವಾಕಪಕ್ಷಿಗಳಿಗೂ–ಯಶಸ್ವಿನಿಯಾದ ಕಲ್ಯಾಣಗುಣಸಂಪನ್ನಳಾದ, ಸರ್ವಲಕ್ಷಣಯುಕ್ತಳಾದ ಶುಕಿಯು ನಯನಮನೋಹರವಾದ ಗಿಣಿಗಳಿಗೂ ಜನ್ಮವಿತ್ತರು. ಕ್ರೋಧಾ ಎಂಬುವಳು ಒಂಬತ್ತು ಮಂದಿ ಕ್ರೋಧಾವಿಷ್ಟರಾದ ಹೆಣ್ಣುಮಕ್ಕಳನ್ನು ಪ್ರಸವಿಸಿದಳು. ಮೃಗೀ, ಮೃಗಮಂದಾ, ಹರೀ, ಭದ್ರಮನಾ, ಮಾತಂಗೀ, ಶಾರ್ದೂಲೀ, ಶ್ವೇತಾ, ಸುರಭಿ ಮತ್ತು ಸರ್ವಲಕ್ಷಣಸಂಪನ್ನಳಾದ ಸುರಸಾ–ಇವರೇ ಒಂಬತ್ತುಮಂದಿ ಹೆಣ್ಣುಮಕ್ಕಳು. ಮೃಗಿಯಿಂದ ಜಿಂಕೆಗಳೂ, ಮೃಗಮಂದಾ ಎಂಬುವಳಿಂದ ಕರಡಿಗಳೂ, ಭದ್ರಮನಾ ಎಂಬುವಳಿಂದ ಐರಾವತ ಎಂಬ ಗಜರಾಜನೂ ಹುಟ್ಟಿದರು. ಐರಾವತನು ದೇವನಾಗ ಅಥವಾ ದೇವಲೋಕದ ಆನೆಯಾದನು. ಕುದುರೆಗಳು, ವಾನರರು, ಗೋಲಾಂಗೂಲಗಳು ಹರೀ ಎಂಬುವಳ ಮಕ್ಕಳು. ಶಾರ್ದೂಲೀ ಎಂಬುವಳಲ್ಲಿ ಸಿಂಹಗಳು, ವ್ಯಾಘ್ರಗಳು, ಚಿರತೆಗಳು–ಇವೇ ಮುಂತಾದ ಬಲಶಾಲಿಗಳಾದ ಪ್ರಾಣಿಗಳು ಹುಟ್ಟಿದುವು. ಮಾತಂಗಿಯಲ್ಲಿ ಆನೆಗಳು ಹುಟ್ಟಿದುವು. ಶ್ವೇತಾ ಎಂಬುವಳು ಶ್ವೇತನೆಂಬ ದಿಗ್ಗಜಕ್ಕೆ ಜನ್ಮವಿತ್ತಳು. ಸುರಭಿಗೆ ರೋಹಿಣೀ ಮತ್ತು ಗಂಧರ್ವೀ ಎಂಬ ಇಬ್ಬರು ಹೆಣ್ಣುಮಕ್ಕಳು ಜನಿಸಿದರು. ಈ ಇಬ್ಬರಲ್ಲದೇ ಸುರಭಿಗೆ ವಿಮಲಾ ಮತ್ತು ಅನಲಾ ಎಂಬ ಇನ್ನೂ ಇಬ್ಬರು ಹೆಣ್ಣುಮಕ್ಕಳಿದ್ದರು.

ರೋಹಿಣಿಯಲ್ಲಿ ಹಸುಗಳೂ, ಗಂಧರ್ವಿಯಲ್ಲಿ ಕುದುರೆಗಳೂ ಹುಟ್ಟಿದುವು. ಏಳು ವಿಧವಾದ ಪಿಂಡರೂಪದ ( ಉಂಡೆಯಾದ ) ಫಲನೀಡುವ ವೃಕ್ಷಗಳು 'ಅನಲಾ' ಎಂಬುವಳಲ್ಲಿ ಹುಟ್ಟಿದುವು. ಅನಲಾ ಎಂಬುವಳಲ್ಲಿ ಶುಕಿಯು ಪುತ್ರಿಯಾಗಿ ಹುಟ್ಟಿತು. ಕಂಕನೆಂಬುವನು ಸುರಸೆಯ ಮಗನಾಗಿ ಹುಟ್ಟಿದನು. ಅರುಣನ ಭಾರ್ಯೆಯ ಹೆಸರು ಶ್ಯೇನೀ. ಶ್ಯೇನಿಯಲ್ಲಿ ಅರುಣನಿಂದ ವೀರ್ಯವಂತರಾದ ಜಟಾಯು ಮತ್ತು ಸಂಪಾತಿಗಳು ಹುಟ್ಟಿದರು. ಸುರಸಾ ಎಂಬುವಳು ನಾಗಗಳನ್ನೂ ಕದ್ರೂ ಎಂಬುವಳು ಸರ್ಪಗಳನ್ನೂ ಮಕ್ಕಳನ್ನಾಗಿ ಪಡೆದರು. ವಿನತೆಯ ಇಬ್ಬರು ಮಕ್ಕಳು ಸುಪ್ರಸಿದ್ಧರಾದ ಗರುಡ ಮತ್ತು ಅರುಣರು.

ಮನುಜೇಶ್ವರನೇ! ಸರ್ವಪ್ರಾಣಿಗಳ ಹುಟ್ಟನ್ನೂ ನಾನು ನಿನಗೆ ವಿಸ್ತಾರ

ವಾಗಿ ಹೇಳಿದ್ದೇನೆ. ಸರ್ವಪ್ರಾಣಿಗಳೂ ಹುಟ್ಟಿದ ಈ ರಹಸ್ಯವನ್ನು ಕೇಳುವುದು ಬಹಳ ಪುಣ್ಯದಾಯಕವಾದುದು.

**ಯಂ ಶ್ರುತ್ವಾ ಪುರುಷಃ ಸಮ್ಯಙ್ಮುಕ್ತೋ ಭವತಿ ಪಾಪ್ಮನಃ ।**
**ಸರ್ವಜ್ಞತಾಂ ಚ ಲಭತೇ ಗತಿಮಗ್ರ್ಯಾಂ ಚ ವಿನ್ದತಿ ॥೭೨॥**

ಸರ್ವಪ್ರಾಣಿಗಳ ಸಂಭವದ ಈ ರಹಸ್ಯವನ್ನು ಯಾವನು ಕೇಳುತ್ತಾನೆಯೋ–ಅವನು ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಸರ್ವಜ್ಞತ್ವವನ್ನು ಹೊಂದುತ್ತಾನೆ ಮತ್ತು ಅವಸಾನಾನಂತರದಲ್ಲಿ ಸದ್ಗತಿಯನ್ನೂ ಪಡೆಯುತ್ತಾನೆ.”

೬೬ನೆಯ ಅಧ್ಯಾಯವು ಮುಗಿಯಿತು.

೬೭ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದೇವ-ದಾನವರ ಅಂಶಾವತಾರದಿಗ್ದರ್ಶನ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

“ಬ್ರಾಹ್ಮಣೋತ್ತಮರೇ! ಬ್ರಹ್ಮನಿಂದ ಪ್ರಾಣಿಗಳ ಸೃಷ್ಟಿಯು ಹೇಗಾಯಿತೆಂಬ ವಿವರವನ್ನು ನಾನು ತಮ್ಮಿಂದ ಕೇಳಿದೆನು. ಈಗ ನಾನು ತಮ್ಮಿಂದ ಮತ್ತೊಂದು ರಹಸ್ಯವಿಷಯವನ್ನು ಕೇಳಿ ತಿಳಿಯಬೇಕೆಂದಿರುವೆನು. ದೇವತೆಗಳು, ದಾನವರು, ಗಂಧರ್ವರು, ರಾಕ್ಷಸರು, ಸಿಂಹ-ವ್ಯಾಘ್ರ-ಮೃಗಗಳು, ಸರ್ಪಗಳು ಮತ್ತು ಪಕ್ಷಿಗಳು ಮತ್ತು ಉಳಿದೆಲ್ಲ ಪ್ರಾಣಿಗಳೂ ಮನುಷ್ಯಲೋಕದಲ್ಲಿ ಯಾವ ಅಭಿಧಾನದಿಂದ ಅವತರಿಸಿದರು? ಇದನ್ನು ವಿವರವಾಗಿ ಕೇಳಲಿಚ್ಛಿಸಿದ್ದೇನೆ. ಅವರೆಲ್ಲರೂ ಎಲ್ಲೆಲ್ಲಿ ಜನ್ಮತಾಳಿದರು ಮತ್ತು ಯಾವ ಯಾವ ಕಾರ್ಯಗಳನ್ನು ಮಾಡುತ್ತಿದ್ದರು? ಇವೆಲ್ಲವನ್ನೂ ಮೊದಲಿನಿಂದಲೂ ದಯಮಾಡಿ ಹೇಳಿರಿ.”

“ಮನುಷ್ಯೇಂದ್ರ! ಮನುಷ್ಯಲೋಕದಲ್ಲಿ ಯಾವ ಯಾವ ದೇವತೆಗಳು ಮತ್ತು ದಾನವರು ಯಾವ ಯಾವ ಅಭಿಧಾನದಿಂದ ಹುಟ್ಟಿದರೆಂಬುದನ್ನು ವಿವರವಾಗಿ ಹೇಳುವೆನು. ಸುವಿಖ್ಯಾತನಾದ ವಿಪ್ರಚಿತ್ತಿ ಎಂಬ ದಾನವನು ಭೂಲೋಕದಲ್ಲಿ ಜರಾಸಂಧನಾಗಿ ಹುಟ್ಟಿದನು. ದಿತಿಯ ಮಗನಾದ

ಹಿರಣ್ಯಕಶಿಪುವು ಮನುಷ್ಯಲೋಕದಲ್ಲಿ ಶಿಶುಪಾಲನಾಗಿ ಹುಟ್ಟಿದನು. ಪ್ರಹ್ಲಾದನ ಅನುಜನಾದ ಸಂಹ್ರಾದನು ಬಾಹ್ಲೀಕಪುಂಗವನಾದ ಶಲ್ಯನಾಗಿ ಹುಟ್ಟಿದನು. ಅನುಹ್ರಾದನೆಂಬ ಮತ್ತೊಬ್ಬ ತಮ್ಮನು ಧೃಷ್ಟಕೇತುವೆಂಬ ಅಭಿಧಾನದಿಂದ ಹುಟ್ಟಿದನು. ಶಿಬಿ ಎಂಬ ಸುಪ್ರಸಿದ್ಧನಾದ ದೈತ್ಯನು ದ್ರುಮ ನೆಂಬ ಪ್ರಸಿದ್ಧರಾಜನಾಗಿ ಹುಟ್ಟಿದನು. ಅಸುರಶ್ರೇಷ್ಠನೆನಿಸಿದ್ದ ಬಾಷ್ಕಲ ನೆಂಬುವನು ಭಗದತ್ತನಾಗಿ ಹುಟ್ಟಿದನು.

ಅಯಃಶಿರಸ, ಅಶ್ವಶಿರ, ಅಯಃಶಂಕು, ಗಗನಮೂರ್ಧಾ, ವೇಗವಂತ– ಈ ಐವರು ಅಸುರಶ್ರೇಷ್ಠರು ಕೇಕಯದೇಶದಲ್ಲಿ ಐವರು ರಾಜಕುಮಾರರಾಗಿ ಹುಟ್ಟಿದರು. ಕೇತುಮಂತನೆಂಬ ಮತ್ತೊಬ್ಬ ಅಸುರನು ಅಮಿತೌಜಸನೆಂಬ ರಾಜನಾಗಿ ಹುಟ್ಟಿದನು. ಅವನು ಉಗ್ರವಾದ ಕಾರ್ಯಗಳನ್ನು ಮಾಡುವವ ನಾಗಿದ್ದನು. ಸ್ವರ್ಭಾನು ಎಂಬ ಅಸುರನು ಉಗ್ರಸೇನನೆಂಬ ರಾಜನಾಗಿ ಹುಟ್ಟಿದನು. ಅಶ್ವನು ಅಶೋಕನಾದನು. ಅವನ ತಮ್ಮನಾದ ಅಶ್ವಪತಿಯು ಹಾರ್ದಿಕ್ಯರಾಜನಾದನು. ವೃಷಪರ್ವನೆಂಬ ಮಹಾಸುರನು ದೀರ್ಘಪ್ರಜ್ಞ ನೆಂಬ ರಾಜನಾದನು. ವೃಷಪರ್ವನ ತಮ್ಮನಾದ ಅಜಕನು ಶಾಲ್ವನಾಗಿ ಹುಟ್ಟಿದನು. ಅಶ್ವಗ್ರೀವನೆಂಬ ಅಸುರನು ರೋಚಮಾನನೆಂಬ ರಾಜನಾದನು. ಬುದ್ಧಿವಂತ ನಾದ ಮತ್ತು ಯಶೋವಂತನಾದ ಸೂಕ್ಷ್ಮನೆಂಬ ಅಸುರನು ಬೃಹದ್ರಥನೆಂಬ ರಾಜನಾದನು. ತುಹುಂಡನೆಂಬ ಅಸುರನು ಸೇನಾಬಿಂದು ವೆಂದು ಭೂಮಿಯಲ್ಲಿ ಪ್ರಸಿದ್ಧನಾದನು. ಮಹಾಬಲಿಷ್ಠನಾದ ಇಷುಪಾದನೆಂಬ ಅಸುರನು ನಗ್ನಜಿತನೆಂಬ ರಾಜನಾಗಿ ಹುಟ್ಟಿದನು. ಏಕಚಕ್ರನೆಂಬ ಅಸುರನು ಪ್ರತಿವಿಂಧ್ಯ ನಾಗಿ ಹುಟ್ಟಿದನು. ಚಿತ್ರಯುದ್ಧದಲ್ಲಿ ನಿಪುಣನಾಗಿದ್ದ ವಿರೂಪಾಕ್ಷನೆಂಬ ದೈತ್ಯನು ಚಿತ್ರಧರ್ಮ ಎಂಬ ಹೆಸರಿನಿಂದ ಭೂಮಿಯಲ್ಲಿ ಪ್ರಸಿದ್ಧನಾದನು. ಹರನೆಂಬ ದಾನವಶ್ರೇಷ್ಠನು ಸುಬಾಹುವೆಂಬ ರಾಜನಾಗಿ ಹುಟ್ಟಿದನು. ಶತ್ರು ಪಕ್ಷಕ್ಷಯಂಕರನಾದ ಅಹರನೆಂಬ ರಾಕ್ಷಸನು ಬಾಹ್ಲೀಕನೆಂಬ ಹೆಸರಿನಿಂದ ಭೂಮಿಯಲ್ಲಿ ಪ್ರಸಿದ್ಧಿಹೊಂದಿದನು. ಚಂದ್ರನಿಗೆ ಸಮಾನವಾದ ಮುಖ ಕಾಂತಿಯನ್ನು ಹೊಂದಿದ್ದ ನಿಚಂದ್ರನೆಂಬ ರಾಕ್ಷಸನು ಭೂಮಿಯಲ್ಲಿ ಮುಂಜಕೇಶನಾದನು. ಯುದ್ಧದಲ್ಲಿ ಅಪರಾಜಿತನಾಗಿದ್ದ ನಿಕುಂಭನೆಂಬ ರಾಕ್ಷಸನು ದೇವಾಧಿಪನೆಂಬ ಹೆಸರಿನಿಂದ ಪ್ರಸಿದ್ಧಿಹೊಂದಿದನು.

ದೈತ್ಯಶ್ರೇಷ್ಠನಾದ ಶರಭನೆಂಬ ರಾಕ್ಷಸನು ಪೌರವನೆಂಬ ಹೆಸರಿನ ರಾಜರ್ಷಿಯಾಗಿ ಹುಟ್ಟಿದನು. ಕ್ರಥನೆಂಬ ದಾನವನು ಪಾರ್ವತೇಯನೆಂಬ ರಾಜರ್ಷಿಯಾಗಿ ಹುಟ್ಟಿದನು. ಅವನು ಮೇರುಪರ್ವತಸದೃಶನಾಗಿದ್ದನು. ಕುಪಟನೆಂಬ ಮಹಾಸುರನು ಸುಪಾರ್ಶ್ವನೆಂಬ ರಾಜನಾಗಿ ಹುಟ್ಟಿದನು. ಎರಡನೆಯ ಶಲಭನೆಂಬ ರಾಕ್ಷಸನು ಬಾಹ್ಲೀಕವಂಶದಲ್ಲಿ ಪ್ರಹ್ರಾದನೆಂಬ ರಾಜನಾಗಿ ಹುಟ್ಟಿದನು. ತಾರಾಧಿಪನಾದ ಚಂದ್ರನಿಗೆ ಸಮಾನನೆನಿಸಿದ್ದ ಚಂದ್ರನೆಂಬ ದೈತ್ಯನು ಕಾಂಬೋಜರಾಜ್ಯಕ್ಕೆ ಚಂದ್ರ ವರ್ಮನೆಂಬ ಅಭಿಧಾನದಿಂದ ರಾಜನಾದನು. ಅರ್ಕನೆಂಬ ದಾನವಪುಂಗವನು ಋಷಿಕನೆಂಬ ಹೆಸರಿನ ರಾಜನಾಗಿ ಹುಟ್ಟಿದನು. ಮೃತಪಾ ಎಂಬ ಅಸುರನು ಪಶ್ಚಿಮಾನೂಪಕನೆಂಬ ಹೆಸರಿನ ರಾಜನಾಗಿ ಉದಯಿಸಿದನು. ಗವಿಷ್ಠನೆಂಬ ಅಸುರನು ದ್ರುಮಸೇನನೆಂಬ ಹೆಸರಿನಿಂದ ವಿಖ್ಯಾತನಾದನು. ಮಯೂರನೆಂಬ ಮಹಾಸುರನು ವಿಶ್ವನೆಂಬ ರಾಜನಾದನು. ಮಯೂರಾ ಸುರನ ತಮ್ಮನಾದ ಸುಪರ್ಣನೆಂಬ ಅಸುರನು ಭೂಮಿಯಲ್ಲಿ ಕಾಲಕೀರ್ತಿ ಯೆಂಬ ರಾಜನಾಗಿ ಹುಟ್ಟಿದನು. ಚಂದ್ರಹಂತೃವೆಂಬ ಹೆಸರಿನ ಶ್ರೇಷ್ಠನಾದ ಅಸುರನು ಶುನಕನೆಂಬ ರಾಜರ್ಷಿಯಾಗಿ ಹುಟ್ಟಿದನು. ಚಂದ್ರವಿನಾಶನ ಎಂಬ ಹೆಸರಿನ ಮಹಾಸುರನು ಜಾನಕಿ ಎಂಬ ಹೆಸರಿನ ಸುಪ್ರಸಿದ್ಧರಾಜನಾದನು. ದೀರ್ಘಜಿಹ್ವನೆಂಬ ಮಹಾಸುರನು ಕಾಶಿರಾಜನೆಂಬ ಹೆಸರಿನಿಂದ ಭೂಮಿಯಲ್ಲಿ ಪ್ರಸಿದ್ಧನಾದನು. ಸಿಂಹಿಕೆಯು ಅರ್ಕೇಂದುಮರ್ದನನಾದ ಯಾವ ಗ್ರಹವನ್ನು ಪ್ರಸವಿಸಿದಳೋ ಆ ಗ್ರಹವು ( ರಾಹುವೆಂಬ ಅಸುರನು) ಭೂಮಿಯಲ್ಲಿ ಕ್ರಾಥ ಎಂಬ ಹೆಸರಿನ ರಾಜನಾದನು. ದನಾಯುವಿನ ನಾಲ್ವರು ಪುತ್ರರಲ್ಲಿ ಜ್ಯೇಷ್ಠನಾದ ವಿಕ್ಷರನೆಂಬ ದೈತ್ಯನು ಭೂಮಿಯಲ್ಲಿ ವಸುಮಿತ್ರನೆಂಬ ರಾಜನಾದನು. ವಿಕ್ಷರನ ಮೊದಲನೆಯ ತಮ್ಮನು ಪಾಂಡ್ಯರಾಷ್ಟ್ರಾಧಿಪತಿಯೆಂದು ಪ್ರಸಿದ್ಧನಾದನು.

ಮಹಾಬಲಿಷ್ಠನಾದ ವೀರನೆಂಬ ಹೆಸರಿನ ರಾಕ್ಷಸನು ಭೂಮಿಯಲ್ಲಿ ಪೌಂಡ್ರಮಾತ್ಸ್ಯಕನಾಗಿ ಹುಟ್ಟಿದನು. ವೃತ್ರನೆಂಬ ಹೆಸರಿನ ಮಹಾಸುರನು ಮಣಿಮಂತನೆಂಬ ರಾಜರ್ಷಿಯಾಗಿ ಜನಿಸಿದನು. ವೃತ್ರಾಸುರನ ತಮ್ಮನ ಹೆಸರು ಕ್ರೋಧಹಂತಾ. ಅವನು ಭೂಮಿಯಲ್ಲಿ ದಂಡ ಎಂಬ ಅಭಿಧಾನ

ದಿಂದ ಹುಟ್ಟಿದನು. ವೃತ್ರನ ಮತ್ತೊಬ್ಬ ತಮ್ಮನಾದ ಕ್ರೋಧವರ್ಧನನು ದಂಡಧಾರನೆಂಬ ಹೆಸರಿನಿಂದ ಪೃಥ್ವಿಯಲ್ಲಿ ಹುಟ್ಟಿದನು. ಕಾಲೇಯರಲ್ಲಿ ಶಾರ್ದೂಲಕ್ಕೆ ಸಮಾನವಾದ ಪರಾಕ್ರಮವುಳ್ಳ ಎಂಟುಮಂದಿ ಭೂಮಿಯಲ್ಲಿ ರಾಜರಾಗಿ ಅವತರಿಸಿದರು. ಅವರಲ್ಲಿ ಹಿರಿಯನು ಮಗಧದೇಶದಲ್ಲಿ ಜಯತ್ಸೇನನೆಂಬ ಹೆಸರಿನಿಂದ ಹುಟ್ಟಿದನು. ಇಂದ್ರನಿಗೆ ಸಮಾನನೆನಿಸಿದ್ದ ಕಾಲೇಯ ದ್ವಿತೀಯನು ಅಪರಾಜಿತನೆಂಬ ಹೆಸರಿನಿಂದ ಭೂಮಿಯಲ್ಲಿ ಹುಟ್ಟಿ ರಾಜನಾದನು. ಮಹಾಮಾಯಾವಿಯಾದ, ಮಹಾಸುರನಾದ ಕಾಲೇಯ ತೃತೀಯನು ನಿಷಾದಾಧಿಪತಿಯಾಗಿ ಹುಟ್ಟಿದನು. ಕಾಲೇಯ ಚತುರ್ಥನು ಭೂಮಿಯಲ್ಲಿ ಶ್ರೇಣಿಮಂತನೆಂಬ ಹೆಸರಿನಿಂದ ಪ್ರಸಿದ್ಧನಾದನು. ಕಾಲೇಯ ಪಂಚಮನು ಮಹೌಜಸನೆಂದು ವಿಖ್ಯಾತನಾದನು. ಆರನೆಯವನು ರಾಜರ್ಷಿಶ್ರೇಷ್ಠನಾದ ಅಭೀರು ಎಂಬ ಹೆಸರಿನಿಂದ ಪ್ರಸಿದ್ಧನಾದನು. ಕಾಲೇಯ ಸಪ್ತಮನು ಸಮುದ್ರಸೇನನೆಂದು ಪ್ರಸಿದ್ಧನಾದನು. ಧರ್ಮಾರ್ಥ ತತ್ತ್ವವಿದನಾದ ಅವನ ಕೀರ್ತಿಯು ಸಮುದ್ರಾಂತವಾಗಿ ಹರಡಿದ್ದಿತು. ಅವನು ಸರ್ವಪ್ರಾಣಿಗಳ ಹಿತದಲ್ಲಿಯೇ ಸರ್ವದಾ ನಿರತನಾಗಿರುತ್ತಿದ್ದು ಧರ್ಮಾತ್ಮ ನಾಗಿದ್ದನು. ಕುಕ್ಷಿ ಎಂಬ ದಾನವಶ್ರೇಷ್ಠನು ಪಾರ್ವತೀಯನೆಂಬ ಹೆಸರಿನಿಂದ ಭೂಮಿಯಲ್ಲಿ ಜನ್ಮತಾಳಿದನು. ಅವನು ಮೇರುಪರ್ವತದಂತೆ ಮಹಾ ತೇಜಸ್ವಿಯಾಗಿದ್ದನು.

ಕ್ರಥನನೆಂಬ ಮಹಾಸುರನು ಭೂಮಿಯಲ್ಲಿ ಸೂರ್ಯಾಕ್ಷನೆಂಬ ರಾಜ ನಾಗಿ ಹುಟ್ಟಿದನು. ಶ್ರೀಮಂತನಾದ ಸೂರ್ಯನೆಂಬ ಮಹಾಸುರನು ದರದ ನೆಂಬ ಹೆಸರಿನಿಂದ ಬಾಹ್ಲೀಕದೇಶದ ರಾಜನಾದನು. ಅವನು ರಾಜರುಗಳ ಲ್ಲೆಲ್ಲಾ ಶ್ರೇಷ್ಠನೆನಿಸಿದ್ದನು. ಕ್ರೋಧವಶರೆಂಬ ರಾಕ್ಷಸರು ಪ್ರಪಂಚದಲ್ಲಿ ವೀರರಾದ ರಾಜರಾಗಿ ಹುಟ್ಟಿದರು. ಮದ್ರಕ, ಕರ್ಣವೇಷ್ಟಿ, ಸಿದ್ಧಾರ್ಥ, ಕೀಟಕ, ಸುವೀರ, ಸುಬಾಹು, ಮಹಾವೀರ, ಬಾಹ್ಲಿಕ, ಕ್ರಥ, ವಿಚಿತ್ರ, ಸುರಥ, ಶ್ರೀಮಂತನಾದ ನೀಲ, ಚೀರವಾಸ, ಭೂಮಿಪಾಲ, ದಂತವಕ್ತ್ರ, ದುರ್ಜಯ, ರುಕ್ಮೀ, ಜನಮೇಜಯ, ಆಷಾಢ, ವಾಯುವೇಗ, ಭೂರಿತೇಜಸ, ಏಕಲವ್ಯ, ಸುಮಿತ್ರ, ವಾಟಧಾನ, ಗೋಮುಖ, ಕಾರೂಷಕರು, ಕ್ಷೇಮಧೂರ್ತಿ,

ಶ್ರುತಾಯುಷ, ಉದ್ವಹ, ಬೃಹತ್ಸೇನ, ಕ್ಷೇಮೋಗ್ರತೀರ್ಥ, ಕಲಿಂಗೇಶನಾದ ಕುಹರ, ಬುದ್ಧಿವಂತನಾದ ಈಶ್ವರ–ಇವರೆಲ್ಲರೂ ಹಿಂದೆ ಕ್ರೋಧವಶರೆಂಬ ರಾಕ್ಷಸರಾಗಿದ್ದರು. ಜನಮೇಜಯ! ಆ ರಾಜರೆಲ್ಲರೂ ಕೀರ್ತಿಮಂತ ರಾಗಿಯೂ, ಮಹಾಬಲಿಷ್ಠರಾಗಿಯೂ ಇದ್ದರು. ದಾನವರಲ್ಲಿ ಖ್ಯಾತನಾಗಿದ್ದ, ಮಹಾಬಲಿಷ್ಠನಾಗಿದ್ದ, 'ಕಾಲನೇಮಿ' ಎಂಬುವನು ಉಗ್ರಸೇನನ ಮಗನಾಗಿ ಹುಟ್ಟಿ ಕಂಸನೆಂಬ ಹೆಸರಿನಿಂದ ವಿಖ್ಯಾತನಾದನು. ಇಂದ್ರನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ದೇವಕನೆಂಬ ರಾಜನು ಹಿಂದೆ ಗಂಧರ್ವಪ್ರಮುಖ ನಾಗಿದ್ದನು. ಅಯೋನಿಜನಾದ ದ್ರೋಣನು ಮಹಾಕೀರ್ತಿಮಂತನಾದ ದೇವರ್ಷಿಯಾದ ಬೃಹಸ್ಪತಿಯ ಅಂಶದಿಂದ ಭರದ್ವಾಜನ ಮಗನಾಗಿ ಹುಟ್ಟಿದನು. ಅವನು ಸರ್ವಾಸ್ತ್ರಗಳಲ್ಲಿ ಪಾರಂಗತನಾಗಿಯೂ, ಕೀರ್ತಿಮಂತ ನಾಗಿಯೂ, ಮಹಾತೇಜಸ್ವಿಯಾಗಿಯೂ ಇದ್ದನು. ಅತ್ಯಾಶ್ಚರ್ಯಕರವಾದ ಕಾರ್ಯಗಳನ್ನು ಮಾಡುವುದರಲ್ಲಿ ಸಮರ್ಥನಾಗಿದ್ದ, ಸ್ವಕುಲಸಂವರ್ಧಕನಾದ ದ್ರೋಣನು ಧನುರ್ವೇದದಲ್ಲಿಯೇ ಆಗಲೀ, ವೇದ-ವೇದಾಂಗಗಳಲ್ಲಿಯೇ ಆಗಲೀ–ಅಪ್ರತಿಮನೆಂದು ವೇದವಿದರು ಭಾವಿಸಿದ್ದರು. ಮಹಾದೇವನ ಮತ್ತು ಯಮರಾಜನ ಅಂಶಗಳಿಂದಲೂ, ಕಾಮ-ಕ್ರೋಧಗಳ ಅಂಶ ಗಳಿಂದಲೂ ಕೂಡಿದ್ದ, ಶತ್ರುತಾಪಕನಾದ, ಮಹಾಶೂರನಾದ, ಮಹಾ ವೀರ್ಯನಾದ, ಶತ್ರುಪಕ್ಷಭಯಂಕರನಾದ, ಕಮಲಪತ್ರಾಕ್ಷನಾದ ಅಶ್ವತ್ಥಾಮ ನೆಂಬುವನು ದ್ರೋಣನಿಗೆ ಪುತ್ರನಾಗಿ ಜನಿಸಿದನು. ವಸಿಷ್ಠಮಹರ್ಷಿಯ ಶಾಪದಿಂದಲೂ, ಇಂದ್ರನ ಆದೇಶದಿಂದಲೂ ಅಷ್ಟವಸುಗಳು ಶಾಂತನು-ಗಂಗೆಯರ ಸಮಾಗಮದಿಂದ ಭೂಮಿಯಲ್ಲಿ ಜನ್ಮತಾಳಿದರು. ಆದರೆ ಅವ ರಲ್ಲಿ ಭೂಮಿಯಲ್ಲಿ ಜೀವಿಸಿದ್ದವನು ಎಂಟನೆಯ ವಸುವು ಒಬ್ಬನೇ. ಅವನೇ ಭೀಷ್ಮನೆಂದು ಪ್ರಸಿದ್ಧನಾದವನು. ಭೀಷ್ಮನು ಬುದ್ಧಿವಂತನಾಗಿಯೂ, ವೇದ ವಿದನಾಗಿಯೂ, ಶತ್ರುಪಕ್ಷದ ಕ್ಷಯಕರನಾಗಿಯೂ ಇದ್ದನು. ಸರ್ವಶಸ್ತ್ರಾಸ್ತ್ರ ಗಳಲ್ಲಿಯೂ ಪಾರಂಗತನಾದ ಭೀಷ್ಮನು ಒಮ್ಮೆ ಮಹಾತ್ಮನಾದ ಪರಶುರಾಮ ನೊಡನೆಯೂ ಯುದ್ಧಮಾಡಿದನು. ಮಹಾಪೌರುಷದಿಂದ ಕೂಡಿದ್ದ ಬ್ರಹ್ಮರ್ಷಿಯಾದ ಕೃಪನು ರುದ್ರಗಣಗಳ ಅಂಶದಿಂದ ಹುಟ್ಟಿದವನಾಗಿದ್ದನು. ದ್ವಾಪರನು ಮಹಾರಥನಾದ ಶಕುನಿಯಾಗಿ ಜನ್ಮತಾಳಿದನು. ಸತ್ಯಸಂಧನಾದ

ವೃಷ್ಣಿಕುಲೋತ್ಪನ್ನನಾದ ಸಾತ್ಯಕಿಯು ಮರುತ್ತುಗಳ ಅಂಶದಿಂದಲೇ ಜನ್ಮ ತಾಳಿದನು. ದ್ರುಪದ, ಕೃತವರ್ಮಾ, ವಿರಾಟ–ಇವರೂ ಸಪ್ತಮರುತ್ತುಗಳ ಅಂಶಸಂಭೂತರು. 'ಅರಿಷ್ಟಾ' ಎಂಬುವಳ ಮಗನಾದ, ಗಂಧರ್ವರಾಜ ನಾದ ಹಂಸನೆಂಬುವನು ಕುರುವಂಶಪ್ರದೀಪನಾದ ಧೃತರಾಷ್ಟ್ರನಾಗಿ ಹುಟ್ಟಿದನು. ಅವನು ಕೃಷ್ಣದ್ವೈಪಾಯನರ ಮಗನು. ದೀರ್ಘಬಾಹುವೂ ಮಹಾ ತೇಜಸ್ವಿಯೂ ಆಗಿದ್ದ ಅವನು 'ಪ್ರಜ್ಞಾಚಕ್ಷು'. ಹೊರಗಿನ ವಸ್ತುಗಳನ್ನು ನೋಡಲು ಅಸಮರ್ಥನಾಗಿದ್ದನು. ತಾಯಿಯ ದೋಷದಿಂದಲೂ, ಮಹರ್ಷಿಯ ಕೋಪದ ಕಾರಣದಿಂದಲೂ ಧೃತರಾಷ್ಟ್ರನು ಹುಟ್ಟುಕುರುಡ ನಾಗಿಯೇ ಹುಟ್ಟಿದನು. ಹಂಸನೆಂಬ ಗಂಧರ್ವನ ತಮ್ಮನೇ ಮುಂದೆ ಧೃತ ರಾಷ್ಟ್ರನ ತಮ್ಮನಾಗಿ ಹುಟ್ಟಿದನು. ಅವನೇ ಮಹಾಬಲನಾದ, ಮಹಾಸತ್ತ್ವನಾದ ಪಾಂಡುವು. ಅವನು ಸತ್ಯ ಮತ್ತು ಧರ್ಮಗಳಲ್ಲಿ ನಿರತನಾಗಿಯೂ, ಶುಚಿಯಾಗಿಯೂ ಇದ್ದನು. ಬುದ್ಧಿವಂತರಲ್ಲಿ, ಪುತ್ರವಂತರಲ್ಲಿ ಶ್ರೇಷ್ಠನೆನಿಸಿದ ವಿದುರನನ್ನು ಅತ್ರಿಯ ( ಸೂರ್ಯನ ) ಪುತ್ರನಾದ ಯಮಧರ್ಮನೆಂದು ತಿಳಿ. ಕುರುಕುಲಕಳಂಕನೂ, ದುರ್ಬುದ್ಧಿಯವನೂ, ದುರ್ಮತಿಯೂ ಆದ ದುರ್ಯೋಧನನು ಕಲಿಯ ಅಂಶಸಂಭೂತನು. ಕಲಿಪುರುಷನ ಅಪರಾವತಾರವೇ ಆಗಿದ್ದ ದುರ್ಯೋಧನನು ಎಲ್ಲರ ದ್ವೇಷಕ್ಕೂ ಪಾತ್ರ ನಾಗಿದ್ದನು. ಪೃಥ್ವಿಯ ಎಲ್ಲ ರಾಜರೊಡನೆಯೂ ಪದೇ-ಪದೇ ಯುದ್ಧ ಮಾಡುತ್ತಿದ್ದನು. ಅವನ ಹೃದಯದಲ್ಲಿ ಉದ್ದೀಪನಗೊಂಡ ವೈರವೆಂಬ ಕಾಡು ಗಿಚ್ಚು ಲಕ್ಷೋಪಲಕ್ಷ ಮಾನವರ ವಿನಾಶದಲ್ಲಿ ಪರ್ಯವಸಾನಹೊಂದಿತು. ಪೌಲಸ್ತ್ಯರೆಂಬ ರಾಕ್ಷಸರು ದುರ್ಯೋಧನನ ತಮ್ಮಂದಿರಾಗಿ ಹುಟ್ಟಿದರು. ದುಃಶಾಸನ, ದುರ್ಮುಖ, ದುಃಸಹರೇ ಮೊದಲಾದ ನೂರುಮಂದಿ ತಮ್ಮಂದಿರು ದುರ್ಯೋಧನನಿಗಿದ್ದರು. ಅವರೆಲ್ಲರೂ ಕ್ರೂರಕರ್ಮಿಗಳಾ ಗಿಯೂ ದುರ್ಯೋಧನನು ಮಾಡುತ್ತಿದ್ದ ಕುತ್ಸಿತಕಾರ್ಯಗಳಿಗೆ ಪ್ರೇರಕ ರಾಗಿಯೂ ಇದ್ದರು. ಧೃತರಾಷ್ಟ್ರನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಯುಯುತ್ಸುವು ನೂರೊಂದನೆಯವನಾಗಿದ್ದನು."

"ವೈಶಂಪಾಯನರೇ! ನನಗೆ ಧೃತರಾಷ್ಟ್ರನ ನೂರು ಮಕ್ಕಳ ಹೆಸರು ಗಳನ್ನೂ ಅನುಕ್ರಮವಾಗಿ ಕೇಳಿ ತಿಳಿದುಕೊಳ್ಳಬೇಕೆಂಬ ಆಶಯವಿದೆ, ದಯಮಾಡಿ ಹೇಳಿರಿ."

ವೈಶಂಪಾಯನರು ಧೃತರಾಷ್ಟ್ರನ ದುರ್ಯೋಧನಾದಿ ನೂರುಮಂದಿ ಮಕ್ಕಳ ನಾಮಾವಳಿಯನ್ನು ಹೇಳಲು ಉಪಕ್ರಮಿಸಿದರು :

"ದುರ್ಯೋಧನ, ಯುಯುತ್ಸು, ದುಃಶಾಸನ, ದುಃಸಹ, ದುಃಶಲ, ದುರ್ಮುಖ, ವಿವಿಂಶತಿ, ವಿಕರ್ಣ, ಜಲಸಂಧ, ಸುಲೋಚನ, ವಿಂದ, ಅನುವಿಂದ, ದುರ್ಧರ್ಷ, ಸುಬಾಹು, ದುಷ್ಪ್ರಧರ್ಷಣ, ದುರ್ಮರ್ಷಣ, ದುರ್ಮುಖ, ದುಷ್ಕರ್ಣ, ಕರ್ಣ, ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರು, ಚಿತ್ರಾಂಗದ, ದುರ್ಮದ, ದುಷ್ಪ್ರಧರ್ಷ, ವಿವಿತ್ಸು, ವಿಕಟ, ಸಮ, ಊರ್ಣ ನಾಭ, ಪದ್ಮನಾಭ, ನಂದ, ಉಪನಂದ, ಸೇನಾಪತಿ, ಸುಷೇಣ, ಕುಂಡೋ ದರ, ಮಹೋದರ, ಚಿತ್ರಬಾಹು, ಚಿತ್ರವರ್ಮಾ, ಸುವರ್ಮಾ, ದುರ್ವಿ ರೋಚನ, ಅಯೋಬಾಹು, ಮಹಾಬಾಹು, ಚಿತ್ರಚಾಪ, ಸುಕುಂಡಲ, ಭೀಮವೇಗ, ಭೀಮಬಲ, ಬಲಾಕೀ, ಭೀಮ, ವಿಕ್ರಮ, ಉಗ್ರಾಯುಧ, ಭೀಮಶರ, ಕನಕಾಯು, ದೃಢಾಯುಧ, ಧೃಢವರ್ಮಾ, ದೃಢಕ್ಷತ್ರ, ಸೋಮ ಕೀರ್ತಿ, ಅನೂದರ, ಜರಾಸಂಧ, ದೃಢಸಂಧ, ಸತ್ಯಸಂಧ, ಸಹಸ್ರವಾಕ್, ಉಗ್ರಶ್ರವಸ, ಉಗ್ರಸೇನ, ಕ್ಷೇಮಮೂರ್ತಿ, ಅಪರಾಜಿತ, ಪಂಡಿತಕ, ವಿಶಾಲಾಕ್ಷ, ದುರಾಧನ, ದೃಢಹಸ್ತ, ಸುಹಸ್ತ, ವಾತವೇಗ, ಸುವರ್ಚಸ, ಆದಿತ್ಯಕೇತು, ಬಹ್ವಾಶೀ, ನಾಗದತ್ತ, ಅನುಯಾಯೀ, ಕವಚೀ, ನಿಷಂಗೀ, ದಂಡೀ, ದಂಡಧಾರ, ಧನುರ್ಗ್ರಹ, ಉಗ್ರ, ಭೀಮರಥ, ವೀರ, ವೀರಬಾಹು, ಅಲೋಲುಪ, ಅಭಯ, ರೌದ್ರಕರ್ಮಾ, ದೃಢರಥ, ಅನಾಧೃಷ್ಯ, ಕುಂಡ ಭೇದೀ, ವಿರಾವೀ, ದೀರ್ಘಲೋಚನ, ದೀರ್ಘಬಾಹು, ಮಹಾಬಾಹು, ವ್ಯೂಢೋರು, ಕನಕಾಂಗದ, ಕುಂಡಜ ಮತ್ತು ಚಿತ್ರಕ–ಇವರೇ ಧೃತರಾಷ್ಟ್ರನ ನೂರು ಮಕ್ಕಳು. ನೂರೊಂದನೆಯವನು ವೈಶ್ಯಸ್ತ್ರೀಯ ಮಗನಾದ ಯುಯುತ್ಸು. ಈ ನೂರೊಂದು ಮಂದಿ ಮಕ್ಕಳಲ್ಲದೇ ಧೃತರಾಷ್ಟ್ರನಿಗೆ ದುಃಶಲೆಯೆಂಬ ಒಬ್ಬ ಹೆಣ್ಣುಮಗಳೂ ಇದ್ದಳು. ಜನಮೇಜಯ! ನಾನು ಈಗ ಹೇಳಿರುವ ಆನುಪೂರ್ವಿಗೆ ಅನುಸಾರವಾಗಿ ದುರ್ಯೋಧನಾದಿಗಳು ಜ್ಯೇಷ್ಠಾನುಜ್ಯೇಷ್ಠಕ್ರಮದಲ್ಲಿ ಹುಟ್ಟಿದರು. ಅವರೆಲ್ಲರೂ ಅತಿರಥರಾಗಿಯೂ, ಯುದ್ಧವಿಶಾರದರಾಗಿಯೂ ಇದ್ದರು. ವೇದವಿದರಾಗಿಯೂ, ಶಾಸ್ತ್ರಗಳಲ್ಲಿ ಪಾರಂಗತರಾಗಿಯೂ, ಸಂಗ್ರಾಮವಿದ್ಯೆಯಲ್ಲಿ ನಿಷ್ಣಾತರಾಗಿಯೂ ಇದ್ದರು.

ಅವರು ತಮ್ಮ ವಿದ್ಯೆಯಿಂದಲೂ ಮತ್ತು ಉತ್ತಮಕುಲದಿಂದಲೂ ಸುಶೋಭಿತರಾಗಿದ್ದರು. ಆ ರಾಜಕುಮಾರರೆಲ್ಲರೂ ಪ್ರಾಪ್ತವಯಸ್ಕರಾದೊಡನೆಯೇ, ಧೃತರಾಷ್ಟ್ರನು ಸತ್ಕುಲಪ್ರಸೂತೆಯರಾದ ಹೆಣ್ಣುಗಳನ್ನು ತಂದು ಅವರಿಗೆ ಮದುವೆಮಾಡಿದನು. ಸೌಬಲನಿಂದ ಪ್ರೇರಿತನಾದ ಧೃತರಾಷ್ಟ್ರನು ತನ್ನ ಒಬ್ಬಳೇ ಮಗಳಾದ ದುಃಶಲೆಯನ್ನು ಸಿಂಧುರಾಜನಾದ ಜಯದ್ರಥನಿಗೆ ಕೊಟ್ಟು ಮದುವೆಮಾಡಿದನು. ನಾನು ಹಿಂದೆಯೇ ಒಮ್ಮೆ ಹೇಳಿದಂತೆ ಯುಧಿಷ್ಠಿರನು ಯಮಧರ್ಮನ ಅಂಶದಿಂದ ಹುಟ್ಟಿದವನು. ಭೀಮನು ವಾಯುವಿನ ಅಂಶದಿಂದಲೂ, ಅರ್ಜುನನು ಇಂದ್ರನ ಅಂಶದಿಂದಲೂ, ನಕುಲ-ಸಹದೇವರು ಅಶ್ವಿನೀದೇವತೆಗಳ ಅಂಶಗಳಿಂದಲೂ ಹುಟ್ಟಿದವರು.

ಚಂದ್ರನಿಗೆ ವರ್ಚಸನೆಂಬ ಮಗನಿದ್ದನು. ಆ ವರ್ಚಸನೇ ಅರ್ಜುನನ ಮಗನಾಗಿ ಅಭಿಮನ್ಯುವಾಗಿ ಹುಟ್ಟಿದನು. ವರ್ಚಸನು ಅಭಿಮನ್ಯುವಾಗಿ ಅವತರಿಸುವ ಸಮಯದಲ್ಲಿ ದೇವತೆಗಳೊಡನೆ ಸೋಮನು ಹೀಗೆ ಹೇಳಿದನು:

**ನಾಹಂ ದದ್ಯಾಂ ಪ್ರಿಯಂ ಪುತ್ರಂ ಮಮ ಪ್ರಾಣೈರ್ಗರೀಯಸಮ್ ।**
**ಸಮಯಃ ಕ್ರಿಯತಾಮೇಷ ನ ಶಕ್ಯಮತಿವರ್ತಿತುಮ್ ॥೧೧೪॥**

“ನನ್ನ ಪ್ರಾಣಗಳಿಗಿಂತಲೂ ಹೆಚ್ಚು ಪ್ರಿಯನಾದ ನನ್ನ ಮಗನನ್ನು ನಾನು ಕಳುಹಿಸಿಕೊಡಲು ಇಷ್ಟಪಡುವುದಿಲ್ಲ. ನೀವೆಲ್ಲರೂ ನನ್ನನ್ನು ಬಹುವಾಗಿ ಒತ್ತಾಯಿಸುವುದರಿಂದ ಸ್ವಲ್ಪಕಾಲದವರೆಗೆ ಮಾತ್ರ ನಾನಿವನಿಂದ ಬೇರೆಯಾಗಲು ಒಪ್ಪುತ್ತೇನೆ. ಇಷ್ಟೇ ಕಾಲದೊಳಗಾಗಿ ಇವನು ನನ್ನ ಬಳಿಗೆ ಬಂದು ಸೇರುವನೆಂಬುದನ್ನು ನೀವೆಲ್ಲರೂ ನಿರ್ಧರಿಸಿ ಹೇಳಿರಿ. ಪರಿಮಿತ ವಾದ ಆ ಕಾಲವನ್ನು ಖಂಡಿತವಾಗಿಯೂ ಮೀರಲಾಗದು. ಈ ನಿಬಂಧನೆಯ ಮೇಲೆ ನನ್ನ ಮಗನು ಭೂಮಿಯಲ್ಲಿ ಅವತರಿಸುವುದನ್ನು ನಾನು ಒಪ್ಪುತ್ತೇನೆ. ದೇವತೆಗಳ ಕಾರ್ಯವು ನನಗೂ ಸಂಬಂಧಿಸಿರುವುದರಿಂದ ಸುರಕಾರ್ಯದ ಸಾಧನೆಗಾಗಿ ನನ್ನ ಮಗನನ್ನು ನಾನು ಕಳುಹಿಸುವುದಿಲ್ಲವೆಂದು ಹೇಳಲಾರೆನು. ಭೂಮಿಯಲ್ಲಿ ಮಾನವರಾಗಿ ಅವತರಿಸಿರುವ ಅಸುರರ ವಧೆಯಾಗಲೇ ಬೇಕು. ಅದಕ್ಕಾಗಿಯೇ ನಾನು ನನ್ನ ಮಗನು ಭೂಮಿಯಲ್ಲಿ ಅವತರಿಸಲು

ಸಮ್ಮತಿಸುತ್ತೇನೆ. ಆದರೆ ಅವನು ಅಲ್ಲಿ ಹೆಚ್ಚು ಕಾಲ ಇರುವಂತಿಲ್ಲ. ತನ್ನ ಕಾರ್ಯವನ್ನು ಮುಗಿಸಿ ಒಡನೆಯೇ ಹಿಂದಿರುಗಬೇಕು."

ಚಂದ್ರನು ಮುಂದುವರಿದು ಹೇಳುತ್ತಾ, ತನ್ನ ಮಗನು ಎಲ್ಲಿ ಯಾರಾಗಿ ಹುಟ್ಟಬೇಕೆಂಬ ನಿಬಂಧನೆಯನ್ನೂ ಮಾಡಿದನು.

"ಇಂದ್ರನ ಅಂಶದಿಂದ ನರನು ಹುಟ್ಟುತ್ತಾನೆ. ಅವನು ನಾರಾಯಣನ ಸಖನಾಗಿರುತ್ತಾನೆ. ಪಾಂಡುವಿನ ಪುತ್ರನಾಗಿ ಭೂಮಿಯಲ್ಲಿ ಅರ್ಜುನನೆಂಬ ಅಭಿಧಾನದಿಂದ ಪ್ರಖ್ಯಾತನಾಗುತ್ತಾನೆ. ಈ ನನ್ನ ಮಗ ವರ್ಚಸನು ಆ ಅರ್ಜುನನಿಗೆ ಮಗನಾಗಿ ಹುಟ್ಟುತ್ತಾನೆ. ಮಹಾವೀರನಾದ ಅವನು ಬಾಲ್ಯ ದಲ್ಲಿಯೇ ಮಹಾರಥನೆಂದು ಖ್ಯಾತನಾಗುತ್ತಾನೆ. ಹದಿನಾರು ವರ್ಷಗಳು ಮಾತ್ರವೇ ಇವನು ಧರೆಯಲ್ಲಿರುತ್ತಾನೆ. ಇವನಿಗೆ ಹದಿನಾರನೆಯ ವರ್ಷವು ತುಂಬುವ ವೇಳೆಗೆ ಸರಿಯಾಗಿ ಪಾಂಡವ-ಕೌರವರ ನಡುವೆ ಘೋರವಾದ ಸಂಗ್ರಾಮವು ಪ್ರಾರಂಭವಾಗುತ್ತದೆ. ಆ ಮಹಾಯುದ್ಧದಲ್ಲಿ ನಿಮ್ಮ ಅಂಶ ಭೂತರಾದ ರಾಜರು ತಮ್ಮ-ತಮ್ಮ ಶಕ್ತಿ-ಪರಾಕ್ರಮಗಳನ್ನು ಶತ್ರುಗಳ (ದೈತ್ಯ-ದಾನವರ ) ವಿಧ್ವಂಸನದ ಮೂಲಕವಾಗಿ ತೋರಿಸುತ್ತಾರೆ. ಘೋರ ವಾದ ಯುದ್ಧವು ನಡೆಯುತ್ತಿರುವ ಸಮಯದಲ್ಲಿ ನರ-ನಾರಾಯಣರು ಕಾರಣಾಂತರಗಳಿಂದ ರಣರಂಗದಲ್ಲಿರುವುದಿಲ್ಲ. ಅದೇ ಸಮಯದಲ್ಲಿ ಶತ್ರು ಪಕ್ಷದವರು ಚಕ್ರವ್ಯೂಹವನ್ನು ರಚಿಸಿ, ( ಮಾನವರೂಪಿಗಳಾದ ) ನಿಮ್ಮೊಡನೆ ಯುದ್ಧಮಾಡಲು ಅನುವಾಗುತ್ತಾರೆ. ಆ ಸಮಯದಲ್ಲಿ ನನ್ನ ಈ ಮಗನು ಶೌರ್ಯದಿಂದ ಕಾದಾಡಿ ಶತ್ರುಗಳನ್ನು ಹಿಮ್ಮೆಟ್ಟಿಸುವುದಲ್ಲದೇ, ಅಭೇದ್ಯ ವೆನಿಸಿದ ಚಕ್ರವ್ಯೂಹವನ್ನೂ ಪ್ರವೇಶಿಸಿ ವಾಯುವೇಗ-ಮನೋವೇಗಗಳಲ್ಲಿ ಅತ್ತಿಂದಿತ್ತ ಸಂಚರಿಸುತ್ತಾ, ಶತ್ರುಸೈನ್ಯವನ್ನು ನಿರ್ಮೂಲನಗೊಳಿಸುತ್ತಾನೆ. ವೀರರಾದ ಮಹಾರಥರೊಡನೆ ಏಕಾಕಿಯಾಗಿ ಸೆಣೆಸುತ್ತಾನೆ. ಅಪಾರವಾದ ಆ ಶತ್ರುಸೇನೆಯಲ್ಲಿ ನಾಲ್ಕನೆಯ ಒಂದು ಭಾಗದಷ್ಟು ಸೇನೆಯನ್ನು ಇವ ನೊಬ್ಬನೇ ಕೇವಲ ಅರ್ಧದಿನದ ಅವಧಿಯಲ್ಲಿ ಯಮಲೋಕಕ್ಕೆ ಕಳುಹಿಸು ತ್ತಾನೆ. ದಿನವು ಕ್ಷಯಿಸುತ್ತಿರಲಾಗಿ ( ಸಾಯಂಕಾಲವಾಗುತ್ತಿರಲಾಗಿ ) ಅನೇಕಾನೇಕ ಮಹಾರಥರೊಡನೆ ಹೋರಾಡಿ ಮಡಿದು ಅವತಾರವನ್ನು ಮುಗಿಸಿ ನನ್ನನ್ನು ಬಂದು ಸೇರುತ್ತಾನೆ. ಹದಿನಾರನೆಯ ವರ್ಷದಲ್ಲಿಯೇ

ಇವನ ಅವತಾರವು ಮುಗಿಯುವುದಾದರೂ ಇವನು ವಂಶೋದ್ಧಾರಕನಾದ ಒಬ್ಬನೇ ಪುತ್ರನನ್ನು ಆ ವೇಳೆಗೆ ಪಡೆಯುತ್ತಾನೆ. ಆ ಪುತ್ರನಿಂದಲೇ ನಷ್ಟವಾಗಿ ಹೋಗುವುದರಲ್ಲಿದ್ದ ಭರತವಂಶವು ಉದ್ಧಾರವಾಗುತ್ತದೆ."

ಜನಮೇಜಯ! ಚಂದ್ರನು ಹೇಳಿದ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ–'ಹಾಗೆಯೇ ಆಗಲಿ'–ಎಂದು ಹೇಳಿ ಅವನನ್ನು ಯಥೋಚಿತವಾಗಿ ಸಂಪೂಜಿಸಿದರು. ಇದು ನಿನ್ನ ಅಜ್ಜನ ಜನ್ಮಕಥೆಯಾಗಿರುವುದು.

ಮಹಾರಥನಾದ ಧೃಷ್ಟದ್ಯುಮ್ನನನ್ನು ನೀನು ಅಗ್ನಿಯ ಅಂಶಸಂಭೂತನೆಂದು ತಿಳಿಯುವವನಾಗು. ದ್ರುಪದನ ಮಗನಾದ ಶಿಖಂಡಿಯು ಮೊದಲು ಸ್ತ್ರೀಯಾಗಿದ್ದು ಅನಂತರ ಪುರುಷನಾಗಿ ಪರಿವರ್ತಿತನಾದನು. ಅವನು ರಾಕ್ಷಸಾಂಶಸಂಭೂತನು. ದ್ರೌಪದೇಯರಾದ ಪ್ರತಿವಿಂಧ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನ–ಈ ಐವರು ವಿಶ್ವೇದೇವತೆಗಳ ಅಂಶಸಂಭವರು. ಶ್ರೀಕೃಷ್ಣನ ತಾತನಾದ, ವಸುದೇವನ ತಂದೆಯಾದ ಶೂರನೆಂಬ ಯದುಶ್ರೇಷ್ಠನಿಗೆ 'ಪೃಥಾ' ಎಂಬ ಮಗಳು ಇದ್ದಳು. ಅರ್ಥಾತ್ ಪೃಥೆಯು ಶ್ರೀಕೃಷ್ಣನ ಸೋದರತ್ತೆ. ಅವಳು ರೂಪ-ಲಾವಣ್ಯಗಳಲ್ಲಿ ಅಪ್ರತಿಮಳಾಗಿ ದ್ದಳು. ಆದರೆ ಶೂರಸೇನನು ಪೃಥೆಯು ಹುಟ್ಟುವ ಮೊದಲೇ ತನ್ನ ತಂದೆಯ ತಂಗಿಯ ಮಗನಾದ (ಸೋದರತ್ತೆಯ ಮಗನಾದ) ಕುಂತಿಭೋಜನಿಗೆ ತನ್ನ ಮೊದಲನೆಯ ಸಂತಾನವು ಹೆಣ್ಣೇ ಆಗಲೀ, ಗಂಡೇ ಆಗಲೀ–ಕೊಟ್ಟುಬಿಡುತ್ತೇನೆಂದು ಪ್ರತಿಜ್ಞೆಮಾಡಿಕೊಟ್ಟಿದ್ದನಾದ್ದರಿಂದ, ತನ್ನ ಹಿರಿಯ ಮಗಳಾಗಿ ಹುಟ್ಟಿದ ಪೃಥೆಯನ್ನು ಕುಂತಿಭೋಜನಿಗೆ ಕೊಟ್ಟುಬಿಟ್ಟನು.

ಕುಂತಿಭೋಜನಿಗೆ ಹಿತವನ್ನುಂಟುಮಾಡುವುದೇ ಶೂರಸೇನನ ಮುಖ್ಯೋದ್ದೇಶವಾಗಿದ್ದಿತು. ಸಾಕುತಂದೆಯಾದ ಕುಂತಿಭೋಜನು ಪೃಥೆಗೆ ಬ್ರಾಹ್ಮಣರನ್ನು ಮತ್ತು ಅತಿಥಿಗಳನ್ನು ಸತ್ಕರಿಸುವ ಕಾರ್ಯವನ್ನು ವಹಿಸಿಕೊಟ್ಟಿದ್ದನು. ಒಮ್ಮೆ ಕುಂತಿಭೋಜನ ಅರಮನೆಗೆ ಮಹಾಕೋಪಿಷ್ಠನಾದ, ಕಠಿನವ್ರತಿಯಾದ, ಧರ್ಮದ ರಹಸ್ಯವನ್ನು ಸಂಪೂರ್ಣವಾಗಿ ತಿಳಿದಿದ್ದ ದುರ್ವಾಸನು ಆಗಮಿಸಿದನು. ಆ ಮಹಾತ್ಮನ ಅತಿಥಿಸತ್ಕಾರದ ಹೊಣೆಯನ್ನೂ ರಾಜನು ಮಗಳಿಗೇ ಬಿಟ್ಟುಕೊಟ್ಟನು. ಅಂತಹವನನ್ನು ಕ್ಷಮಾ

ಸ್ವರೂಪಳಾದ ಪೃಥೆಯು ಸರ್ವಪ್ರಯತ್ನಗಳಿಂದಲೂ ಸತ್ಕರಿಸಿ, ಅವನ ಅನು ಗ್ರಹಕ್ಕೆ ಪಾತ್ರಳಾದಳು. ಕುಂತಿಯ ಸತ್ಕಾರದಿಂದ ಪರಮಪ್ರೀತನಾದ ದುರ್ವಾಸನು ಅವಳನ್ನು ಕುರಿತು ಹೇಳಿದನು : "ಸುಭಗೇ! ನಿನ್ನ ವಿಷಯ ದಲ್ಲಿ ನಾನು ಬಹಳ ಸುಪ್ರೀತನಾಗಿರುತ್ತೇನೆ."

ಹೀಗೆಂದು ಹೇಳಿ ಪ್ರಯೋಗವಿಧಿಸಹಿತವಾದ ಮಹಾಮಂತ್ರವನ್ನು ಕುಂತಿಗೆ ಉಪದೇಶಿಸಿ ಪುನಃ ಹೇಳಿದನು :

**ಯಂ ಯಂ ದೇವಂ ತ್ವಮೇತೇನ ಮನ್ತ್ರೇಣಾವಾಹಯಿಷ್ಯಸಿ ।**
**ತಸ್ಯ ತಸ್ಯ ಪ್ರಸಾದಾತ್ತ್ವಂ ದೇವಿ ಪುತ್ರಾಞ್ಜನಿಷ್ಯಸಿ ॥೧೩೫॥**

"ದೇವಿ! ಈ ಮಹಾಮಂತ್ರವನ್ನು ಪುನಶ್ಚರಣೆಮಾಡಿ ನಿನಗಿಷ್ಟವಾದ ಯಾವ ದೇವತೆಯನ್ನು ಆಹ್ವಾನಿಸುವೆಯೋ ಆ ದೇವತೆಯ ಅನುಗ್ರಹದಿಂದ ನೀನು ಆಯಾ ದೇವತೆಗಳ ಅಂಶಸಂಭೂತರಾದ ಪುತ್ರರನ್ನು ಪಡೆಯುವೆ." ಹೀಗೆ ಹೇಳಿ ಹೊರಟುಹೋದನು.

ಮಹರ್ಷಿಯು ಹೇಳಿದ ಮಾತುಗಳನ್ನು ಸ್ಮರಿಸಿ ಕುಂತಿಗೆ ಕುತೂಹಲ ವುಂಟಾಯಿತು. ಋಷಿಯು ಉಪದೇಶಿಸಿದ ಮಂತ್ರದ ಮಹತ್ತ್ವವನ್ನು ಪರೀ ಕ್ಷಿಸಬೇಕೆಂಬ ಚಪಲವುಂಟಾಯಿತು. ಒಡನೆಯೇ ಅವಳು ಮಹರ್ಷಿಯು ಉಪದೇಶಿಸಿದ್ದ ರೀತಿಯಲ್ಲಿ ಮಂತ್ರವನ್ನು ಪುನಶ್ಚರಣೆಮಾಡಿ ದೇವದೇವನಾದ ಸೂರ್ಯನನ್ನು ಆಹ್ವಾನಿಸಿದಳು. ಆಗ ಕುಂತಿಯಿನ್ನೂ ಕನ್ಯಾವಸ್ಥೆಯಲ್ಲಿಯೇ ಇದ್ದಳು. ಆದರೆ ಭಗವದನುಗ್ರಹಕ್ಕೆ ಅದಾವುದೂ ಅಡ್ಡಿಬರಲಿಲ್ಲ. ಮಂತ್ರದಿಂದ ಆಹ್ವಾನಿತನಾದ ಸೂರ್ಯನು ಆಗಮಿಸಿದನು. ಸೂರ್ಯದೇವನ ಸಮಾಗಮದಿಂದಾಗಿ ಕುಂತಿಯು ಗರ್ಭವತಿಯಾದಳು. ಸರ್ವಶಸ್ತ್ರವಿದರಿಗೂ ಶ್ರೇಷ್ಠನೆನಿಸಿದ ಪುತ್ರನಿಗೆ ಕೂಡಲೇ ಜನ್ಮವಿತ್ತಳು. ಶಿಶುವು ಸಾಮಾನ್ಯವಾದ ಶಿಶುವಾಗಿರಲಿಲ್ಲ. ಸಾಕ್ಷಾತ್ ಸೂರ್ಯಪುತ್ರನೇ ಅಲ್ಲವೇ? ಹುಟ್ಟುವಾಗಲೇ ಕರ್ಣಕುಂಡಲಗಳನ್ನೂ, ಕವಚವನ್ನೂ ಧರಿಸಿದ್ದಿತು. ದೇವಶಿಶುವಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದಿತು. ಸೂರ್ಯನಂತೆಯೇ ದೇದೀಪ್ಯಮಾನವಾಗಿ ಬೆಳಗುತ್ತಿದ್ದಿತು. ಆ ಶಿಶುವಿನ ಎಲ್ಲ ಅವಯವಗಳೂ ಸುಮನೋಹರವಾಗಿದ್ದುವು. ಆದರೆ ವಿಧಿನಿಯಮವು ವಿಚಿತ್ರವಾಗಿತ್ತು.

ಅಂತಹ ದಿವ್ಯಶಿಶುವನ್ನು ಪಡೆದರೂ ಅದನ್ನು ತನ್ನ ಹತ್ತಿರದಲ್ಲಿಯೇ ಇಟ್ಟು ಕೊಂಡು ಸಾಕಿಸಲಹಿ ಮುದ್ದಾಡುವ ಅದೃಷ್ಟವು ಕುಂತಿಗಿಲ್ಲವಾಯಿತು.

ತಾನಿನ್ನೂ ಕನ್ಯಾವಸ್ಥೆಯಲ್ಲಿಯೇ ಇದ್ದುದರಿಂದ ಕುಂತಿಯು ಜನಾಪ ವಾದಕ್ಕೆ ಹೆದರಿದಳು. ಗಟ್ಟಿಮನಸ್ಸುಮಾಡಿ ಯಶೋವಂತನಾದ ಸೂರ್ಯ ಕುಮಾರನನ್ನು ನದಿಯಲ್ಲಿ ತೇಲಿಬಿಟ್ಟಳು. ಸೂರ್ಯಪುತ್ರನಿದ್ದ ಪೆಟ್ಟಿಗೆಯು ತೇಲುತ್ತಾ ಹೋಗಿ ಅಧಿರಥನೆಂಬ ಸೂತನಿಗೆ ಸಿಕ್ಕಿತು. ಅಪಾರವಾದ ಸಂತೋಷದಿಂದ ಸೂತನು ಮಗುವನ್ನೆತ್ತಿಕೊಂಡು ಹೋಗಿ ತನ್ನ ಭಾರ್ಯೆ ಯಾದ ರಾಧೆಯ ಮಡಿಲಿನಲ್ಲಿ ಹಾಕಿದನು. ಅಂದಿನಿಂದ ಆ ಸೂತದಂಪತಿ ಗಳು ಸೂರ್ಯಪುತ್ರನನ್ನು ತಮ್ಮ ಮಗನೆಂದೇ ಭಾವಿಸಿದರು. ಶಿಶುವು ಕರ್ಣಕುಂಡಲಗಳನ್ನೂ, ವಜ್ರಕವಚವನ್ನೂ ಧರಿಸಿತ್ತಾದ್ದರಿಂದ ಅದಕ್ಕೆ ವಸು ಷೇಣನೆಂಬುದಾಗಿ ಸೂತದಂಪತಿಗಳು ನಾಮಕರಣಮಾಡಿದರು. ಮುಂದೆ ಅವನು ಇದೇ ಹೆಸರಿನಿಂದ ಸರ್ವತ್ರ ಪ್ರಸಿದ್ಧನಾದನು. ವಸುಷೇಣನು ಶುಕ್ಲ ಪಕ್ಷದ ಚಂದ್ರನಂತೆ ಪ್ರವರ್ಧಮಾನನಾಗುತ್ತಾ ಅಸ್ತ್ರವಿದ್ಯೆಯಲ್ಲಿ ಶ್ರೇಷ್ಠನೆನಿ ಸಿದನು. ವೇದ-ವೇದಾಂಗಗಳನ್ನೂ ಅಧ್ಯಯನಮಾಡಿದನು. ಅವನು ಮಹಾ ಬುದ್ಧಿವಂತನಾಗಿಯೂ, ಸತ್ಯನಿಷ್ಠನಾಗಿಯೂ, ಪರಾಕ್ರಮಿಯಾಗಿಯೂ ಇದ್ದನು. ಅವನು ಜಪಮಾಡುತ್ತಿದ್ದ ಕಾಲದಲ್ಲಿ ಬ್ರಾಹ್ಮಣರಿಗೆ ಕೊಡ ಬಾರದೆನ್ನುವ ವಸ್ತುವೇ ಇಲ್ಲವೆಂಬುದು ಅವನ ದೃಢನಿಶ್ಚಯವಾಗಿತ್ತು. ವಸುಷೇಣನ ಈ ಉದಾರತೆಯನ್ನೂ, ಧರ್ಮನಿಷ್ಠೆಯನ್ನೂ ಇಂದ್ರನು ತನ್ನ ಮಗನ ( ಅರ್ಜುನನ ) ಹಿತಾರ್ಥವಾಗಿ ಉಪಯೋಗಿಸಿಕೊಂಡನು. ಬ್ರಾಹ್ಮಣ ವೇಷವನ್ನು ಧರಿಸಿ, ವಸುಷೇಣನು ಸೂರ್ಯನನ್ನು ಕುರಿತು ಜಪಮಾಡುತ್ತಿದ್ದ ಸಮಯದಲ್ಲಿ ಅವನ ಬಳಿಗೆ ಹೋಗಿ ಅವನಿಗೆ ಜನ್ಮತಃ ಪ್ರಾಪ್ತವಾಗಿದ್ದ ಕರ್ಣಕುಂಡಲಗಳನ್ನೂ, ಕವಚವನ್ನೂ ದಾನವಾಗಿ ಬೇಡಿದನು. ಬ್ರಾಹ್ಮಣ ನಾಗಿ ಬಂದಿರುವವನು ಇಂದ್ರನೇ ಆಗಿರುವನೆಂಬ ವಿಷಯವು ವಸುಷೇಣ ನಿಗೆ ಸುಸ್ಪಷ್ಟವಾಗಿ ತಿಳಿದಿತ್ತಾದರೂ ದಾನಶೌಂಡನಾದ ಕರ್ಣನು ತನ್ನ ಸತ್ಯಸಂಕಲ್ಪದಂತೆ ಕರ್ಣಕುಂಡಲಗಳನ್ನೂ ಮತ್ತು ಕವಚವನ್ನೂ ಶರೀರ ದಿಂದ ಕತ್ತರಿಸಿ ಬ್ರಾಹ್ಮಣರೂಪಿಯಾದ ಇಂದ್ರನಿಗೆ ದಾನಮಾಡಿದನು.

ಅವನ ಆ ಅದ್ಭುತಕಾರ್ಯದಿಂದ ವಿಸ್ಮಿತನಾದ ಇಂದ್ರನು ತಾನು ಪಡೆದ ದಾನಕ್ಕೆ ಪ್ರತಿಯಾಗಿ ಶಕ್ತ್ಯಾಯುಧವನ್ನು ಅನುಗ್ರಹಿಸುತ್ತಾ ಕರ್ಣನಿಗೆ ಹೇಳಿದನು :

**ದೇವಾಸುರಮನುಷ್ಯಾಣಾಂ ಗನ್ಧರ್ವೋರಗರಕ್ಷಸಾಮ್ ।**
**ಯಸ್ಮಿನ್ ಕ್ಷೇಪ್ಸ್ಯಸಿ ದುರ್ಧರ್ಷ ಸ ಏಕೋ ನ ಭವಿಷ್ಯತಿ ॥೧೪೬॥**

"ದುರ್ಧರ್ಷನೇ! ದೇವಾಸುರ-ಮನುಷ್ಯ-ಗಂಧರ್ವ-ರಾಕ್ಷಸರುಗಳಲ್ಲಿ ಯಾವನೊಬ್ಬನ ಮೇಲೆ ಈ ಶಕ್ತ್ಯಾಯುಧವನ್ನು ಪ್ರಯೋಗಿಸುವೆಯೋ ಅವನು ಖಂಡಿತವಾಗಿಯೂ ಉಳಿಯಲಾರನು".

ಹೀಗೆ ಹೇಳಿ ಇಂದ್ರನು ಹೊರಟುಹೋದನು.

ಜನಮೇಜಯ! ಅದುವರೆಗೂ ರಾಧೇಯನು ವಸುಷೇಣನೆಂದೇ ಪ್ರಸಿದ್ಧನಾಗಿದ್ದನು. ಕವಚ-ಕುಂಡಲಗಳನ್ನು ದಾನಕೊಟ್ಟನಂತರದಲ್ಲಿ ತನ್ನ ಈ ಕರ್ಮದಿಂದ ಸೂರ್ಯಪುತ್ರನು ವೈಕರ್ತನನೆಂದು ಪ್ರಸಿದ್ಧನಾದನು.

ಕವಚವನ್ನೂ, ಕರ್ಣಕುಂಡಲಗಳನ್ನೂ ಹುಟ್ಟುವಾಗಲೇ ಧರಿಸಿದ್ದ ಪೃಥೆಯ ಮೊದಲನೆಯ ಮಗನಾದ ವಸುಷೇಣನು ಪ್ರಾಪ್ತವಯಸ್ಕನಾಗುವ ವರೆಗೂ ಸೂತನ ಮನೆಯಲ್ಲಿಯೇ ಅಭಿವೃದ್ಧಿಹೊಂದಿದನು. ಮೇಲೆ ಹೇಳಿದ ಕಾರಣಗಳಿಂದ ದುರ್ಯೋಧನನ ಮಿತ್ರನೂ, ಸಚಿವನೂ, ಶತ್ರುವಿನಾಶ ಕನೂ, ಸರ್ವಜ್ಞರಲ್ಲಿ ಶ್ರೇಷ್ಠನೂ, ನರವ್ಯಾಘ್ರನೂ ಆದ ಕರ್ಣನು ಸೂರ್ಯನ ಅಂಶಸಂಭೂತನೆಂಬುದನ್ನು ತಿಳಿ.

ಪ್ರತಾಪವಂತನಾದ ಶ್ರೀಕೃಷ್ಣನು ದೇವದೇವನಾದ, ಸನಾತನನಾದ ಶ್ರೀಮನ್ನಾರಾಯಣನ ಅಂಶಸಂಭೂತನು. ಶ್ರೀಕೃಷ್ಣನ ಅಣ್ಣನಾದ ಬಲ ರಾಮನು ಶೇಷನೆಂಬ ನಾಗರಾಜನ ಅಂಶಸಂಭೂತನು. ಸನತ್ಕುಮಾರನು ಪ್ರದ್ಯುಮ್ನನಾಗಿ ಜನ್ಮತಾಳಿದನು. ಇದೇ ರೀತಿಯಲ್ಲಿ ವಸುದೇವನ ಕುಲದಲ್ಲಿ ಹುಟ್ಟಿದ ಅನೇಕರಾಜರು ದೇವಾಂಶಸಂಭೂತರಾಗಿದ್ದರು. ಅವರೆಲ್ಲರೂ ವೃಷ್ಣಿವಂಶವರ್ಧಕರಾಗಿದ್ದರು. ನಾನು ಈ ಹಿಂದೆ ಅಪ್ಸರೆಯರಲ್ಲಿ ಮುಖ್ಯರಾದ ವರ ಹೆಸರುಗಳನ್ನೂ ಅವರ ವಂಶಾವಳಿಯನ್ನೂ ಹೇಳಿದೆನಲ್ಲವೇ? ಅವ ರೆಲ್ಲರೂ ಇಂದ್ರನಿಂದ ನಿರ್ದೇಶಿತರಾಗಿ ಭೂಮಿಯಲ್ಲಿ ತಮ್ಮ ತಮ್ಮ ಅಂಶ

ಗಳಿಂದ ಜನ್ಮತಾಳಿದರು. ಹದಿನಾರುಸಾವಿರ ಅಪ್ಸರೆಯರು ಭೂಮಿಯಲ್ಲಿ ಜನ್ಮತಾಳಿ ಎಲ್ಲರೂ ಸನಾತನನಾದ ಶ್ರೀಕೃಷ್ಣನ ಪತ್ನಿಯರಾದರು. ಶ್ರೀಮನ್ನಾರಾಯಣನು ಶ್ರೀಕೃಷ್ಣನಾಗಿ ಭೂಮಿಯಲ್ಲಿ ಅವತರಿಸಿದನಂತರ ಮಹಾಲಕ್ಷ್ಮಿಯೂ ಪತಿಯನ್ನು ಬಿಟ್ಟಿರಲಾರದವಳಾಗಿ ಪತಿಯೊಡನೆ ಸೇರಲು ಭೀಷ್ಮಕನೆಂಬ ರಾಜನ ಅರಮನೆಯಲ್ಲಿ ರುಕ್ಮಿಣಿಯೆಂಬ ಅಭಿಧಾನದಿಂದ ಜನ್ಮತಾಳಿದಳು. ದ್ರುಪದನ ಯಜ್ಞಕುಂಡದಲ್ಲಿ ಉತ್ಪನ್ನಳಾದ ಕಳಂಕ ರಹಿತಳಾದ ದ್ರೌಪದಿಯು ಇಂದ್ರನ ಪತ್ನಿಯಾದ ಶಚಿಯ ಅಂಶಸಂಭೂತಳು. ದ್ರೌಪದಿಯು ಬಹಳ ಎತ್ತರವಾಗಿಯೂ ಇರಲಿಲ್ಲ ; ಕುಬ್ಜೆಯಾಗಿಯೂ ಇರ ಲಿಲ್ಲ. ಅವಳ ಶರೀರದಿಂದ ನೀಲೋತ್ಪಲದ ಸುಗಂಧವು ಹೊರಸೂಸು ತ್ತಿದ್ದಿತು. ಪದ್ಮದಂತೆ ವಿಶಾಲವಾದ ಕಣ್ಣುಗಳುಳ್ಳವಳಾಗಿದ್ದಳು. ಅವಳ ನಿತಂಬವು ಸುಮನೋಹರವಾಗಿದ್ದಿತು. ತಲೆಯ ಮುಂಭಾಗವು ಗುಂಗುರು ಕೂದಲುಗಳಿಂದ ಕೂಡಿದ್ದಾಗಿ ಬಹಳ ಶೋಭಾಯಮಾನವಾಗಿ ಕಾಣು ತ್ತಿದ್ದಿತು. ದ್ರೌಪದಿಯು ಸರ್ವಲಕ್ಷಣಸಂಪನ್ನೆಯಾಗಿದ್ದಳು. ವೈಡೂರ್ಯ ಮಣಿಯಂತೆ ಪ್ರಕಾಶಮಾನಳಾಗಿದ್ದಳು. ಸೌಂದರ್ಯಖನಿಯಾದ ದ್ರೌಪದಿ ಯನ್ನು ಸ್ಮರಿಸಿದೊಡನೆಯೇ ಇಂದ್ರೋಪಮರಾದ ಅವಳ ಐವರು ಪತಿಗಳ ಮನಸ್ಸೂ ಅಲ್ಲೋಲಕಲ್ಲೋಲವಾಗುತ್ತಿತ್ತು. ಪಂಚಪಾಂಡವರ ತಾಯಿಯ ರಾದ ಕುಂತೀ-ಮಾದ್ರಿಯರು 'ಸಿದ್ಧಿ ಮತ್ತು ಸ್ಮೃತಿ' ಎಂಬ ದೇವತೆಗಳ ಅಂಶಸಂಭೂತರು. ಗಾಂಧಾರಿಯು 'ಮತಿ' ಎಂಬ ದೇವತೆಯ ಅಂಶದಿಂದ ಹುಟ್ಟಿದವಳು.

ಜನಮೇಜಯ! ಈಗ ನಾನು ನಿನಗೆ ದೇವಾಸುರ-ಗಂಧರ್ವ- ರಾಕ್ಷಸರ ಅಂಶಾವತರಣವನ್ನು ಹೇಳಿದ್ದೇನೆ. ದೇವ-ದಾನವ-ಯಕ್ಷ-ರಾಕ್ಷಸರಲ್ಲಿ ಯಾರು ಯಾರಾಗಿ ಮನುಷ್ಯಲೋಕದಲ್ಲಿ ಅವತರಿಸಿದರೆಂಬ ವಿಷಯವನ್ನೂ ಆಮೂಲಾಗ್ರವಾಗಿ ವಿಸ್ತಾರವಾಗಿ ಹೇಳಿದ್ದೇನೆ. ಯದುವಂಶದಲ್ಲಿ ಹುಟ್ಟಿದವರ ನಾಮಧೇಯಗಳನ್ನೂ ಹೇಳಿದ್ದೇನೆ. ಬ್ರಾಹ್ಮಣ-ವೈಶ್ಯ-ಶೂದ್ರ ರಾಗಿ ಹುಟ್ಟಿದ ದೇವತೆಗಳ ನಾಮಧೇಯಗಳನ್ನೂ ತಿಳಿಸಿದ್ದೇನೆ.

ಈ ಸಂಭವಪರ್ವದ ಅಥವಾ ಅಂಶಾವತರಣಪರ್ವದ ಪಠನವು ಶ್ರೇಯಸ್ಕರವಾದುದು.

**ಧನ್ಯಂ ಯಶಸ್ಯಂ ಪುತ್ರೀಯಮಾಯುಷ್ಯಂ ವಿಜಯಾವಹಮ್ ।**
**ಇದಮಂಶಾವತರಣಂ ಶ್ರೋತವ್ಯಮನಸೂಯಯಾ ॥೧೬೩॥**

ಧನ-ಧಾನ್ಯಸಮೃದ್ಧಿಕರವಾದ, ಯಶಸ್ಕರವಾದ, ಪುತ್ರಪ್ರಾಪ್ತಿಕರವಾದ, ಆಯುಷ್ಕಾರಕವಾದ, ವಿಜಯಕಾರಕವಾದ ಈ ಅಂಶಾವತರಣಪರ್ವವನ್ನು ಅನಸೂಯನಾಗಿ (ಮಹಾತ್ಮರ ಜನ್ಮವೃತ್ತಾಂತದಲ್ಲಿ ಯಾವ ವಿಧವಾದ ದೋಷವನ್ನೂ ಎಣಿಸದೇ) ಕೇಳಬೇಕು.

**ಅಂಶಾವತರಣಂ ಶ್ರುತ್ವಾ ದೇವಗನ್ಧರ್ವರಕ್ಷಸಾಮ್ ।**
**ಪ್ರಭವಾಪ್ಯಯವಿತ್ಪ್ರಾಜ್ಞೋ ನ ಕೃಚ್ಛ್ರೇಷ್ವವಸೀದತಿ ॥೧೬೪॥**

ದೇವ-ಗಂಧರ್ವ-ರಾಕ್ಷಸರ ಈ ಅಂಶಾವತರಣವನ್ನು ಕೇಳಿ, ವಿಶ್ವದ ಉತ್ಪತ್ತಿ ಮತ್ತು ಪ್ರಲಯಗಳಿಂದ ಅಧಿಷ್ಠಾನಭೂತನಾದ ಪರಮಾತ್ಮನ ಸ್ವರೂಪವನ್ನು ತಿಳಿಯುವವನು ವಿಪತ್ತುಗಳಿಗೆ ಸಿಲುಕಿ ದುಃಖಪಡಬೇಕಾಗುವುದಿಲ್ಲ. (ಅಂತಹವನಿಗೆ ಒದಗುವ ಸರ್ವವಿಪತ್ತುಗಳೂ ಪರಿಹಾರವಾಗುವುವು.)"

ಅಂತೆಯೆ ೬೭ನೆಯ ಅಧ್ಯಾಯವು ಮುಗಿಯಿತು.

೬೮ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದುಷ್ಯಂತನ ರಾಜ್ಯಾಡಳಿತ

ಜನಮೇಜಯನು ವೈಶಂಪಾಯನರನ್ನು ಕೇಳುತ್ತಾನೆ :

"ವೈಶಂಪಾಯನರೇ! ತಮ್ಮಿಂದ ನಾನು ದೇವ-ದಾನವ-ರಾಕ್ಷಸ-ಗಂಧರ್ವಾಪ್ಸರೆಯರ ಅಂಶಾವತರಣವನ್ನು ವಿಸ್ತಾರವಾಗಿ ಕೇಳಿದೆನು. ಈ ವಿಪ್ರರ್ಷಿಗಳ ಸಭೆಯಲ್ಲಿ ನಾನು ತಮ್ಮಿಂದ ನಮ್ಮ ಮೂಲಪುರುಷನಾದ ಭರತನ ಜನ್ಮವೃತ್ತಾಂತವನ್ನೂ, ದುಷ್ಯಂತ-ಶಕುಂತಲೆಯರ ವೃತ್ತಾಂತವನ್ನೂ ಮೊದಲಿನಿಂದಲೂ ಕೇಳುವ ಆಶಯದಿಂದಿರುತ್ತೇನೆ. ದಯಮಾಡಿ ಹೇಳಿರಿ."

"ಭರತಸತ್ತಮನೇ! ಪುರುವಂಶದ ವರ್ಧಕನೇ ಮಹಾವೀರ್ಯವಂತನಾದ ದುಷ್ಯಂತನೆಂಬುವನು. ಅವನು ಚತುಃಸಾಗರಪರ್ಯಂತವಾದ ಭೂಮಿಯನ್ನು ಧರ್ಮದಿಂದ ಆಳುತ್ತಿದ್ದನು. ಭೂಮಿಯನ್ನು ನಾಲ್ಕು ಭಾಗಗಳನ್ನಾಗಿ

ವಿಂಗಡಿಸಿದ್ದನು. ಸಮುದ್ರದ ತೀರದಲ್ಲಿದ್ದ ದೇಶಗಳನ್ನೂ ಗೆದ್ದು ತನ್ನದನ್ನಾಗಿ ಮಾಡಿಕೊಂಡಿದ್ದನು. ಅವನ ರಾಜ್ಯದ ಗಡಿಯು ಯವನರ ರಾಜ್ಯದವರೆಗೂ ವ್ಯಾಪಿಸಿದ್ದಿತು. ರತ್ನಗಳಿಗೆ ಆಕರವಾದ ಸಮುದ್ರಪರ್ಯಂತವಾಗಿ, ಚಾತು ರ್ವರ್ಣ್ಯದವರಿಂದ ಪರಿವೃತವಾಗಿದ್ದ ದೇಶಗಳನ್ನು ದುಷ್ಯಂತನು ಧರ್ಮದಿಂದ ಆಳುತ್ತಿದ್ದನು. ಅವನ ರಾಜ್ಯದಲ್ಲಿ ವರ್ಣಸಂಕರವನ್ನು ಯಾರೂ ಮಾಡುತ್ತಿರಲಿಲ್ಲ. (ಅನುಲೋಮ-ವಿಲೋಮ ವಿವಾಹಾದಿಗಳು ನಡೆಯುತ್ತಿರ ಲಿಲ್ಲ.) ವ್ಯವಸಾಯಮಾಡದೇ ಬೆಳೆಗಳಾಗುತ್ತಿದ್ದುವು. ಅವನ ರಾಜ್ಯದಲ್ಲಿ ಯಾರೊಬ್ಬರೂ ಪಾಪಕಾರ್ಯಗಳನ್ನು ಮಾಡುತ್ತಿರಲಿಲ್ಲ.

ದುಷ್ಯಂತನ ರಾಜ್ಯದಲ್ಲಿದ್ದ ಜನರು ಸರ್ವದಾ ಧರ್ಮದಲ್ಲಿಯೇ ನಿರತ ರಾಗಿರುತ್ತಿದ್ದು ಧರ್ಮಾರ್ಥಗಳನ್ನು ಪಡೆಯುತ್ತಿದ್ದರು. ಅವನ ರಾಜ್ಯದಲ್ಲಿ ಕಳ್ಳಕಾಕರ ಭಯವಿರಲಿಲ್ಲ. ಆಹಾರದ ಕೊರತೆಯಿರಲಿಲ್ಲ. ರೋಗ-ರುಜಿನ ಗಳ ಭಯವೂ ಇರಲಿಲ್ಲ. ನಾಲ್ಕು ವರ್ಣದವರೂ ತಮ್ಮ ತಮ್ಮ ವರ್ಣಾಶ್ರಮ ಗಳಿಗೆ ಉಕ್ತವಾದ ಕರ್ಮಗಳಲ್ಲಿಯೇ ನಿರತರಾಗಿರುತ್ತಿದ್ದರು. ಯಾವ ವಿಧ ವಾದ ಕಾಮನೆಗಳೂ ಇಲ್ಲದೇ ಸಂಕಲ್ಪರಹಿತರಾಗಿ ದೇವತಾಪ್ರೀತ್ಯರ್ಥವಾಗಿ ದೇವತಾರಾಧನೆಗಳನ್ನು ಮಾಡುತ್ತಿದ್ದರು. ದುಷ್ಯಂತಮಹಾರಾಜನನ್ನು ಆಶ್ರಯಿಸಿದ್ದ ಪ್ರಜೆಗಳಿಗೆ ಯಾವ ವಿಧವಾದ ಭಯವೂ ಇರಲಿಲ್ಲ. ಬ್ರಾಹ್ಮ ಣರು ಸ್ವಕರ್ಮನಿರತರಾಗಿರುತ್ತಿದ್ದರು. ಸುಳ್ಳೆಂಬುದು ಅವರ ಹತ್ತಿರವೂ ಸುಳಿಯುತ್ತಿರಲಿಲ್ಲ. (ಎಲ್ಲರೂ ಸತ್ಯವಾದಿಗಳಾಗಿಯೂ, ಸತ್ಯನಿಷ್ಠರಾಗಿಯೂ ಇದ್ದರು.) ದುಷ್ಯಂತಮಹಾರಾಜನು ನವಯುವಕನಾಗಿದ್ದನು. ಅದ್ಭುತವಾದ ಮತ್ತು ಮಹತ್ತರವಾದ ಪರಾಕ್ರಮವು ಅವನಲ್ಲಿದ್ದಿತು. ಅವನ ಶರೀರವು ವಜ್ರಕ್ಕೆ ಸಮಾನವಾಗಿದ್ದಿತು. (ವಜ್ರಕಾಯನಾಗಿದ್ದನು.) ವನ-ಕಾನನೋಪೇತವಾದ ಮಂದರಪರ್ವತವನ್ನು ತನ್ನೆರಡು ಕೈಗಳಿಂದಲೂ ಎತ್ತುವಷ್ಟು ಸಮರ್ಥನಾಗಿದ್ದನು. ಪ್ರಕ್ಷೇಪ (ದೂರದಲ್ಲಿರುವ ಶತ್ರುವಿಗೆ ಗದೆಯಿಂದ ಗುರಿಯಿಟ್ಟು ಹೊಡೆಯುವುದು), ವಿಕ್ಷೇಪ (ಹತ್ತಿರದಲ್ಲಿರುವ ಶತ್ರುವನ್ನು ಗದೆಯಿಂದ ಪ್ರಹರಿಸುವುದು), ಪರಿಕ್ಷೇಪ (ಗದೆಯನ್ನು ಸುತ್ತಲೂ ತಿರುಗಿಸಿ ಶತ್ರುವಿನ ಮೇಲೆ ಪ್ರಹರಿಸುವುದು), ಅಭಿಕ್ಷೇಪ (ಗದೆಯ ಮುಂಭಾಗದಿಂದ ಶತ್ರುವನ್ನು ಪ್ರಹರಿಸಿ ಕೊಲ್ಲುವುದು)–ಈ ನಾಲ್ಕು ವಿಧವಾದ ಗದಾಯುದ್ಧ

ಗಳಲ್ಲಿಯೂ ದುಷ್ಯಂತನು ನಿಷ್ಣಾತನಾಗಿದ್ದನು. ಅಸ್ತ್ರ-ಶಸ್ತ್ರಗಳ ವಿದ್ಯೆಯಲ್ಲಿ ಪಾರಂಗತನಾಗಿದ್ದನು. ಗಜನಯನ ಮತ್ತು ಅಶ್ವನಯನಗಳಲ್ಲಿ ಚತುರನಾಗಿದ್ದನು. ಬಲದಲ್ಲಿ ಆತನು ಮಹಾವಿಷ್ಣುವಿಗೆ ಸಮಾನನಾಗಿದ್ದನು. ಸೂರ್ಯನಿಗೆ ಸಮಾನವಾದ ತೇಜಸ್ಸನ್ನು ಹೊಂದಿದವನಾಗಿದ್ದನು. ಪ್ರಶಾಂತತೆಯಲ್ಲಿ ಸಮುದ್ರನಿಗೆ ಸಮಾನನೆನಿಸಿದ್ದನು. ಸಹಿಷ್ಣುತೆಯಲ್ಲಿ ಭೂದೇವಿಗೆ ಸಮಾನನೆನಿಸಿದ್ದನು. ಯಾವ ವಿಧವಾದ ಕಷ್ಟ-ಕಾರ್ಪಣ್ಯಗಳೂ ಇಲ್ಲದೇ ಸುಖವಾಗಿದ್ದ, ಪುರ-ನಗರ-ಪಟ್ಟಣಗಳಿಗೆ ಅಧಿಪತಿಯಾಗಿದ್ದ ದುಷ್ಯಂತನು ಸರ್ವಸಮ್ಮತನಾಗಿದ್ದನು. ಅವನ ಪ್ರಜೆಗಳೆಲ್ಲರೂ ಅವನನ್ನು ಬಹುವಾಗಿ ಸಮ್ಮಾನಿಸುತ್ತಿದ್ದರು. ಧರ್ಮಪರವಾದ ಭಾವನೆಗಳನ್ನೇ ಹೊಂದಿರುತ್ತಿದ್ದ, ಸರ್ವದಾ ಸಂತುಷ್ಟರಾಗಿರುತ್ತಿದ್ದ ಮುದಿತರಾದ ಪ್ರಜೆಗಳನ್ನು *ಆನಂದಪೂರ್ಣನಾದ ದುಷ್ಯಂತನು ಆಳುತ್ತಿದ್ದನು."

ಅರವತ್ತೆಂಟನೆಯ ಅಧ್ಯಾಯವು ಮುಗಿಯಿತು.

ಅರವತ್ತೊಂಬತ್ತನೆಯ ಅಧ್ಯಾಯ — ಸಂಭವಪರ್ವ (ಮುಂದುವರಿದಿದೆ.)

## ದುಷ್ಯಂತನ ಮೃಗಯಾವಿಹಾರ

"ಬ್ರಾಹ್ಮಣೋತ್ತಮರೇ! ನಾನೀಗ ನಮ್ಮ ಮೂಲಪುರುಷನಾದ ಭರತನ ಚರಿತ್ರೆಯನ್ನೂ ಮತ್ತು ಅವನ ತಾಯಿಯಾದ ಶಕುಂತಲೆಯ ಜನ್ಮವೃತ್ತಾಂತವನ್ನೂ ತಿಳಿಯಲು ಕುತೂಹಲಿಯಾಗಿದ್ದೇನೆ. ದಯಮಾಡಿ ಹೇಳಿರಿ. ವೀರನಾದ ದುಷ್ಯಂತನಿಗೆ ಶಕುಂತಲೆಯು ಹೇಗೆ ಲಭಿಸಿದಳು– ಎಂಬುದನ್ನೂ, ಪುರುಷಸಿಂಹನಾದ ದುಷ್ಯಂತನ ನಿಖಿಲವೃತ್ತಾಂತವನ್ನೂ

---

* ಮನುಷ್ಯನಿಗಿರಬೇಕಾದ ಪೂರ್ಣಾನಂದವು ದುಷ್ಯಂತನಿಗಿದ್ದಿತು. ಮನುಷ್ಯನ ಆನಂದವನ್ನು ಉಪನಿಷತ್ಕಾರರು ಹೀಗೆ ಹೇಳಿದ್ದಾರೆ : ಯುವಾಸ್ಯಾತ್ಸಾಧು ಯುವಾಧ್ಯಾಯಿಕಃ । ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ। ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್ । ಸ ಏಕೋ ಮಾನುಷ ಆನನ್ದಃ = ಯುವಕನಾಗಿರಬೇಕು ; ಸಾಧುವಾಗಿರಬೇಕು ; ವಿದ್ಯಾವಂತನಾಗಿರಬೇಕು; ಶಿಷ್ಠನಾಗಿಯೂ, ನೀರೋಗದೃಢಕಾಯನಾಗಿಯೂ, ಬಲಿಷ್ಠನಾಗಿಯೂ ಇರಬೇಕು. ಅವನಾಳುವ ದೇಶವು ಸರ್ವಸಂಪತ್ಸಮೃದ್ಧವಾಗಿರಬೇಕು. ಇದಕ್ಕೆ ಒಂದು ಮನುಷ್ಯಾನಂದವೆಂದು ಹೆಸರು.

ತತ್ತ್ವಜ್ಞರಾದ, ಮತಿವಂತರಲ್ಲಿ ಶ್ರೇಷ್ಠರಾದ ನೀವು ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ತಿಳಿಸಲು ಸಮರ್ಥರಾಗಿರುವಿರಿ."

ವೈಶಂಪಾಯನರು ಶಕುಂತಲೋಪಾಖ್ಯಾನವನ್ನು ಹೇಳಲು ಉಪಕ್ರಮಿಸಿದರು :

"ಜನಮೇಜಯ! ಒಮ್ಮೆ ಮಹಾಬಾಹುವಾದ ದುಷ್ಯಂತನು ಬೇಟೆಯಾಡಲು ಚತುರಂಗಬಲಸಮೇತನಾಗಿ ಗಹನವಾದ ಅರಣ್ಯಕ್ಕೆ ಹೊರಟನು. ಅವನ ಯೋಧರು ಖಡ್ಗ, ಶಕ್ತ್ಯಾಯುಧ, ಗದೆ, ಮುಸಲ, ಪ್ರಾಸ, ತೋಮರ ಮುಂತಾದ ಆಯುಧಗಳನ್ನು ಧರಿಸಿದ್ದರು. ಯೋಧರು ಮಾಡುತ್ತಿದ್ದ ಸಿಂಹನಾದಗಳಿಂದಲೂ, ಶಂಖ-ದುಂದುಭಿಗಳ ಶಬ್ದಗಳಿಂದಲೂ, ರಥಚಕ್ರಗಳ ಕಿರ-ಕಿರಾಶಬ್ದಗಳಿಂದಲೂ, ಆನೆ-ಕುದುರೆಗಳು ಮಾಡುತ್ತಿದ್ದ ಘೀಂಕಾರ ಶಬ್ದಗಳಿಂದಲೂ, ನಾನಾವಿಧವಾದ ಆಯುಧಗಳನ್ನು ಮತ್ತು ನಾನಾವಿಧವಾದ ವೇಷಗಳನ್ನೂ ಧರಿಸಿ ನಡೆದುಹೋಗುತ್ತಿದ್ದ ಕಾಲಾಳುಗಳ ಕಾಲುಸಪ್ಪಳಗಳಿಂದ ಉಂಟಾದ ಕಿಲ-ಕಿಲಾಶಬ್ದಗಳಿಂದಲೂ ರಾಜಮಾರ್ಗವು ತುಂಬಿ ಹೋಯಿತು. ಶೂರನಾದ ಮತ್ತು ಯಶಸ್ಸನ್ನು ಸರ್ವಪ್ರಕಾರದಿಂದಲೂ ಹೆಚ್ಚಿಸಿಕೊಳ್ಳುತ್ತಿದ್ದ ದುಷ್ಯಂತನನ್ನು ಪ್ರಾಸಾದಗಳ ಶಿಖರಗಳಲ್ಲಿ ಸಾಲಂಕೃತರಾಗಿ ಕುಳಿತಿದ್ದ ಸ್ತ್ರೀಯರು ಎವೆಯಿಕ್ಕದೇ ನೋಡುತ್ತಿದ್ದರು.

ಇಂದ್ರೋಪಮನಾದ, ಶತ್ರುನಾಶಕನಾದ, ಶತ್ರುಗಳೆಂಬ ಆನೆಗಳಿಗೆ ಸಿಂಹರೂಪನಾದ ದುಷ್ಯಂತನನ್ನು ನೋಡಿದ ಆ ಸ್ತ್ರೀಯರು ಅವನನ್ನು ಸಾಕ್ಷಾತ್ ಶಚೀಪತಿಯೆಂದೇ ಭಾವಿಸಿ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು :

"ಗೆಳತಿ! ನಮ್ಮ ಮಹಾರಾಜನು ಬರುತ್ತಿರುವ ರೀತಿಯನ್ನಾದರೂ ನೋಡು! ಇವನೊಬ್ಬ ಪುರುಷವ್ಯಾಘ್ರನೇ ಸರಿ."

"ಯುದ್ಧದಲ್ಲಿವನು ಮಹಾಪರಾಕ್ರಮದಿಂದ ಶತ್ರುಗಳೊಡನೆ ಹೋರಾಡುತ್ತಾನೆ."

"ವಸುಗಳಿಗಿರುವ ಪರಾಕ್ರಮವು ಇವನಲ್ಲಿರುವುದು. ಇವನೊಡನೆ ಯುದ್ಧಮಾಡಲು ಬರುವ ಶತ್ರುಗಳಿಗೆ ಖಂಡಿತವಾಗಿಯೂ ಉಳಿಗಾಲವಿಲ್ಲ."

"ಇಂತಹ ಧಾರ್ಮಿಕನಾದ ಪರಾಕ್ರಮಿಯಾದ, ರಾಜನನ್ನು ಪಡೆ ದಿರುವ ನಾವೇ ಧನ್ಯರು."

ಹೀಗೆಲ್ಲ ಮಾತನಾಡಿಕೊಳ್ಳುತ್ತಾ ಪೌರನಾರಿಯರು ರಾಜನನ್ನು ಪ್ರೇಮ ಪೂರ್ವಕವಾದ ಕಣ್ಣುಗಳಿಂದ ನೋಡುತ್ತಾ, ಸ್ತೋತ್ರಮಾಡುತ್ತಾ ಅವನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸುತ್ತಿದ್ದರು. ಮಧ್ಯಮಾರ್ಗದಲ್ಲಿ ಬ್ರಾಹ್ಮಣ ಪ್ರಮುಖರೂ ಅಲ್ಲಲ್ಲಿ ಸೇರಿ ರಾಜನಿಗೆ ಮಂಗಳಾಶಾಸನವನ್ನು ಮಾಡುತ್ತಿದ್ದರು. ಪರಮಪ್ರೀತ ನಾದ ರಾಜನು ಎಲ್ಲರನ್ನೂ ಪ್ರೀತಿಸೂಚಕವಾದ ನೋಟದಿಂದಲೂ, ಮುಖ ಭಾವದಿಂದಲೂ ಸಂತೈಸುತ್ತಾ ಬೇಟೆಗಾಗಿ ಅರಣ್ಯಕ್ಕೆ ಪ್ರಯಾಣಮಾಡಿದನು.

ಪಟ್ಟದಾನೆಯ ಮೇಲೆ ಕುಳಿತು ಪ್ರಯಾಣಮಾಡುತ್ತಿದ್ದ, ದೇವರಾಜ ಸದೃಶನಾದ ದುಷ್ಯಂತನನ್ನು ದ್ವಿಜ-ಕ್ಷತ್ರಿಯ-ವೈಶ್ಯ-ಶೂದ್ರರು ಅನುಸರಿಸಿ ಪ್ರಯಾಣಮಾಡಿದರು. ಆಶೀರ್ವಾದಗಳಿಂದಲೂ, ಗಗನದಲ್ಲಿ ಪ್ರತಿಧ್ವನಿಸು ತ್ತಿದ್ದ ಜಯಕಾರಗಳಿಂದಲೂ ರಾಜನನ್ನೇ ಅನುಸರಿಸಿ ಹೋಗುತ್ತಿರುವವರ ಸಂಖ್ಯೆಯು ವರ್ಧಿಸುತ್ತಿರುವಂತೆ ಕಾಣುತ್ತಿದ್ದಿತು. ಪಟ್ಟಣಿಗರು ಬಹಳ ದೂರ ರಾಜನ ಹಿಂದೆಯೇ ಪ್ರಯಾಣಮಾಡಿದನಂತರ ದುಷ್ಯಂತನು ಅವರನ್ನು ಮುಂದೆ ಬರಬಾರದೆಂದು ಪ್ರಾರ್ಥಿಸಿದನು. ರಾಜನ ಅನುಜ್ಞೆಯನ್ನು ಪಡೆದು ಪಟ್ಟಣಿಗರೆಲ್ಲರೂ ಹಿಂದಿರುಗಿದರು. ಅನಂತರ ರಾಜನು ಗರುಡನಿಗೆ ಸಮಾನ ವಾದ ವೇಗದಿಂದ ಕೂಡಿದ್ದ ರಥದಲ್ಲಿ ಕುಳಿತು, ರಥಚಕ್ರಗಳ ಧ್ವನಿಯಿಂದ ಭೂಮಿಯನ್ನೂ ಮತ್ತು ಸ್ವರ್ಗವನ್ನೂ ತುಂಬಿಬಿಟ್ಟನು. ಅವನ ರಥಚಕ್ರಗಳ ಶಬ್ದವು ಆಕಾಶದಲ್ಲಿಯೂ ಪ್ರತಿಧ್ವನಿತವಾಯಿತು. ರಾಜನು ಹೀಗೆಯೇ ಮುಂದೆ ಪ್ರಯಾಣಮಾಡುತ್ತಿದ್ದಾಗ ಬಿಲ್ವ, ಅರ್ಕ, ಖದಿರ, ಕಪಿತ್ಥ, ಧವ– ಇವೇ ಮುಂತಾದ ವೃಕ್ಷಗಳಿಂದ ಸಮಾಕುಲವಾಗಿದ್ದ ನಂದನವನಸದೃಶ ವಾಗಿದ್ದ ಅರಣ್ಯವನ್ನು ನೋಡಿದನು. ಹಳ್ಳ-ತಿಟ್ಟುಗಳಿಂದ ಕೂಡಿದ್ದ, ಪರ್ವತ ದಿಂದ ಉರುಳಿ ಕೆಳಗೆ ಬಿದ್ದಿರುವ ಅನೇಕ ಕಲ್ಲುಬಂಡೆಗಳಿಂದ ಪರಿಶೋಭಿಸು ತ್ತಿದ್ದ, ಜಲರಹಿತವಾದ ಮತ್ತು ಮನುಷ್ಯರಹಿತವಾದ, ಬಹುಯೋಜನ ವಿಸ್ತಾರವಾದ ಅರಣ್ಯವನ್ನು ನೋಡಿದನು. ಸಿಂಹ-ವ್ಯಾಘ್ರಾದಿ ದುಷ್ಟಮೃಗ ಗಳಿಂದಲೂ, ಜಿಂಕೆಯೇ ಮೊದಲಾದ ಸಾಧುಪ್ರಾಣಿಗಳಿಂದಲೂ ನಿಬಿಡ

ವಾಗಿದ್ದ ಆ ವನಪ್ರದೇಶವನ್ನು ಮನುಜವ್ಯಾಘ್ರನಾದ ದುಷ್ಯಂತನು ಸಭೃತ್ಯ ವಾಹನನಾಗಿ ಪ್ರವೇಶಿಸಿ ಅಲ್ಲೋಲ-ಕಲ್ಲೋಲವಾಗುವಂತೆ ಮಾಡಿದನು. ಗಾಬರಿಗೊಂಡು ಗುಹೆಗಳಿಂದ ಹೊರಬಂದ ಪ್ರಾಣಿಗಳನ್ನು ಬೇಟೆಯಾಡಲು ಪ್ರಾರಂಭಿಸಿದನು. ಬಾಣದ ಲಕ್ಷ್ಯಕ್ಕೆ ಸಿಕ್ಕುತ್ತಿದ್ದ ಹುಲಿ-ಚಿರತೆಗಳನ್ನು ರಾಜನು ಕ್ಷಣಮಾತ್ರದಲ್ಲಿ ವಿಧ್ವಂಸನಗೊಳಿಸಿದನು. ದೂರದಲ್ಲಿ ಓಡಿಹೋಗುತ್ತಿದ್ದ ಪ್ರಾಣಿಗಳನ್ನು ಬಾಣಗಳಿಂದ ಭೇದಿಸಿದನು. ಹತ್ತಿರದಲ್ಲಿಯೇ ಸಿಕ್ಕುತ್ತಿದ್ದ ಮೃಗಗಳನ್ನು ಕತ್ತಿಯಿಂದ ಕತ್ತರಿಸಿದನು. ಶಕ್ತಿವಂತರಲ್ಲಿ ಶ್ರೇಷ್ಠನಾದ ದುಷ್ಯಂತನು ಕೆಲವು ಜಿಂಕೆಗಳನ್ನು ಶಕ್ತ್ಯಾಯುಧದಿಂದ ಬೇಟೆಯಾಡಿದನು. ಗದೆಯನ್ನು ತಿರುಗಿಸಿ ಪ್ರಹರಿಸುವ ಕೌಶಲವಿದ್ದ ದುಷ್ಯಂತನು ಕಾಡಾನೆಗಳನ್ನು ಗದೆಯ ಪ್ರಹಾರಗಳಿಂದಲೇ ಸಂಹರಿಸುತ್ತಿದ್ದನು. ತೋಮರ, ಕತ್ತಿ, ಗದೆ, ಮುಸಲ– ಮುಂತಾದ ಆಯುಧಗಳನ್ನು ವರಸೆ-ವರಸೆಯಾಗಿ ತಿರುಗಿಸುತ್ತಾ ಕೊಬ್ಬಿದ ಕಾಡಾನೆಗಳನ್ನು ವಿಧ್ವಂಸನಗೊಳಿಸುತ್ತಿದ್ದನು. ಮಹಾವೀರ್ಯವಂತನಾದ ರಾಜನಿಂದಲೂ, ಯುದ್ಧಪ್ರಿಯರಾದ ಯೋಧರಿಂದಲೂ ಅಲ್ಲೋಲ-ಕಲ್ಲೋಲವಾಗಿ ಮಾಡಲ್ಪಟ್ಟ ಆ ಅರಣ್ಯದಲ್ಲಿದ್ದ ಸಿಂಹ-ವ್ಯಾಘ್ರಗಳು ಅರಣ್ಯವನ್ನು ಪರಿತ್ಯಜಿಸಿ ಹೊರಟುಹೋದುವು. ಓಡಿ ಹೋಗುತ್ತಿದ್ದ ಸಮೂಹದಲ್ಲಿ ಯೂಥಪತಿಯು ಬಾಣಾಘಾತದಿಂದ ಸತ್ತು ಹೋಗಲಾಗಿ ಉಳಿದುವು ಗಾಬರಿಯಿಂದ ಕೂಗಿಕೊಳ್ಳುತ್ತಾ ಇತ್ತಲಿಂದತ್ತ ಓಡಾಡುತ್ತಿದ್ದುವು. ಬಳಲಿ ಬಾಯಾರಿ ನೀರು ಕುಡಿಯಲು ನದಿಗೆ ಹೋದರೆ ಅಲ್ಲಿ ನೀರು ಸಿಕ್ಕದೇ ನಿರಾಶೆಯಿಂದಲೂ, ಹಸಿವಿನಿಂದಲೂ, ಬಹುವಾದ ಬಳಲಿಕೆಯಿಂದಲೂ, ಭಯದಿಂದಲೂ ಪ್ರಾಣಿಗಳು ಮೂರ್ಛಿತವಾಗಿ ಕೆಳಗೆ ಬಿದ್ದು ಅತ್ಯಲ್ಪಕಾಲದಲ್ಲಿಯೇ ಪ್ರಾಣಬಿಡುತ್ತಿದ್ದುವು. ಈ ರೀತಿಯಲ್ಲಿ ಸತ್ತು ಹೋದ ಪ್ರಾಣಿಗಳನ್ನು ಹಸಿವಿನಿಂದ ಬಳಲಿದ ಕೆಲವು ಯೋಧರು ಕತ್ತರಿಸಿ ಅವುಗಳ ಮಾಂಸವನ್ನು ತಿನ್ನುತ್ತಿದ್ದರು. ಮತ್ತೆ ಕೆಲವರು ಬೆಂಕಿಯಲ್ಲಿ ಪ್ರಾಣಿಗಳ ಮಾಂಸವನ್ನು ಪಕ್ವಮಾಡಿ ತಿನ್ನುತ್ತಿದ್ದರು. ಬಾಣಗಳಿಂದ ಗಾಯಗೊಂಡಿದ್ದ ಕೆಲವು ಆನೆಗಳು ಭಯದಿಂದ ಸೊಂಡಿಲುಗಳನ್ನು ಸಂಕೋಚಿಸಿ ಕೊಂಡು (ಕಾಲುಗಳ ನಡುವೆ ಸೇರಿಕೊಂಡು) ಓಡಿಹೋಗುತ್ತಿದ್ದುವು. ಹೀಗೆ

ಓಡಿಹೋಗುತ್ತಿದ್ದಾಗ ಅವುಗಳು ದಾರಿಯುದ್ದಕ್ಕೂ ಮೂತ್ರ-ಪುರೀಷಗಳನ್ನು ಉತ್ಸರ್ಜನೆಮಾಡುತ್ತಾ ರಕ್ತವನ್ನು ಸುರಿಸುತ್ತಾ ಹೋಗುತ್ತಿದ್ದುವು. ಮತ್ತೆ ಕೆಲವು ಕಾಡಾನೆಗಳು ಯೋಧರ ಮೇಲೆಯೇ ನುಗ್ಗಿಹೋಗಿ ನೂರಾರು ಯೋಧರನ್ನು ಕಾಲುಗಳಿಂದ ತುಳಿದು ಧ್ವಂಸಮಾಡುತ್ತಿದ್ದುವು. ಆ ಅರಣ್ಯವು ಮೋಡಗಳು ಒಂದೇ ಸಮನೆ ಧಾರಾಕಾರವಾಗಿ ಮಳೆಯನ್ನು ಸುರಿಸುವಂತೆ ನಿರಂತರವಾಗಿ ಬಾಣಗಳನ್ನು ಪ್ರಯೋಗಿಸುತ್ತಿದ್ದ ಯೋಧರ ಬಾಣವರ್ಷಕ್ಕೆ ಗುರಿಯಾಯಿತು. ಸಾವಿರಾರು ಮೃಗಗಳಿಂದ ತುಂಬಿಹೋಗಿದ್ದ ಆ ಅರಣ್ಯವು ರಾಜಾ ದುಷ್ಯಂತನ ಬೇಟೆಯಿಂದಾಗಿ ಸಿಂಹ-ಶಾರ್ದೂಲಾದಿ ಮೃಗರಾಜರಿಂದಲೂ, ಜಿಂಕೆಗಳಿಂದಲೂ ವಿಹೀನವಾಯಿತು."

೬೯ನೆಯ ಅಧ್ಯಾಯವು ಮುಗಿಯಿತು.

೭೦ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಕಣ್ವಾಶ್ರಮದ ವರ್ಣನೆ: ದುಷ್ಯಂತನ ಪ್ರವೇಶ

"ಚತುರಂಗಬಲಸಮೇತನಾದ ದುಷ್ಯಂತರಾಜನು ತಾನು ಮೊದಲು ಪ್ರವೇಶಿಸಿದ ಅರಣ್ಯದಲ್ಲಿ ಸಾವಿರಾರು ಪ್ರಾಣಿಗಳನ್ನು ಬೇಟೆಯಾಡಿದನಂತರ ಬೇಟೆಯನ್ನು ಮುಂದುವರಿಸುತ್ತಾ ಒಂದು ಜಿಂಕೆಯನ್ನು ಹಿಂಬಾಲಿಸುವ ಪ್ರಸಂಗದಿಂದ ಮತ್ತೊಂದು ಅರಣ್ಯಕ್ಕೆ ಹೊರಟನು. ಉತ್ತಮವಾದ ಚತುರಂಗಬಲವನ್ನು ಹೊಂದಿದ್ದರೂ ಬಲಿಷ್ಠನಾದ ರಾಜನು ಆ ಸಮಯದಲ್ಲಿ ಏಕಾಕಿಯಾಗಿದ್ದನು. ಹಸಿವು-ಬಾಯಾರಿಕೆಗಳು ಅವನನ್ನು ಪೀಡಿಸತೊಡಗಿದುವು. ಆ ಅರಣ್ಯವನ್ನೂ ದಾಟಿ ಮರಳುಗಾಡಿಗೆ ರಾಜನು ತೆರಳಿದನು. ಆ ಮರಳುಗಾಡನ್ನೂ ದಾಟಿದನಂತರ ಅತ್ಯುತ್ತಮವಾದ ಆಶ್ರಮವಿದ್ದ ತಪೋವನವನ್ನು ತಲುಪಿದನು. ಆ ಆಶ್ರಮಭೂಮಿಯನ್ನು ಪ್ರವೇಶಿಸುತ್ತಲೇ ರಾಜನ ಮನಸ್ಸಿಗೆ ಆಹ್ಲಾದವುಂಟಾಯಿತು. ವೃಕ್ಷ-ಲತಾ-ಗುಲ್ಮಗಳಿಂದ ಕೂಡಿ ಸುಮನೋಹರವಾಗಿದ್ದ ಆ ಅರಣ್ಯವು ಕಣ್ಣುಗಳಿಗೆ ಹಬ್ಬವನ್ನುಂಟು ಮಾಡುವುದಾಗಿದ್ದಿತು. ವಾತಾವರಣವು ಶೀತಲವಾಗಿದ್ದು ರಾಜನ ಆಯಾಸವೆಲ್ಲವೂ ಕ್ಷಣಮಾತ್ರದಲ್ಲಿ ಪರಿಹಾರವಾಯಿತು. ಅಂತಹ ಅರಣ್ಯವನ್ನು ದುಷ್ಯಂತನು ಪ್ರವೇಶಿಸಿದನು. ಅಲ್ಲಿಯ ವೃಕ್ಷಗಳು ಪುಷ್ಪಭರಿತವಾಗಿದ್ದುವು.

ನೆಲದ ಮೇಲೆ ಹಚ್ಚನೆಯ ಗರಿಕೆಯ ಹುಲ್ಲು ದಟ್ಟವಾಗಿ ಬೆಳೆದಿತ್ತು. ಆ ಹಚ್ಚನೆಯ ಹುಲ್ಲು ರಾಜನ ಕಾಲುಗಳಿಗೆ ಸುಖಾವಹವಾಗಿದ್ದಿತು. ನಾಲ್ಕೂ ದಿಕ್ಕುಗಳಲ್ಲಿದ್ದ ಕುಸುಮಿತವಾದ ವೃಕ್ಷಗಳಿಂದ ಗಂಡುಕೋಗಿಲೆಗಳ, ಇತರ ಪಕ್ಷಿಗಳ ಮತ್ತು ಮಿಡತೆಗಳ ಮಧುರವಾದ ಧ್ವನಿಯು ಕೇಳಿಬರುತ್ತಿದ್ದಿತು. ಆ ಅರಣ್ಯದಲ್ಲಿ ಎತ್ತರವಾಗಿ ಬೆಳೆದಿದ್ದ, ದೊಡ್ಡ ಕೊಂಬೆಗಳುಳ್ಳ, ತಂಪಾದ ನೆರಳಿನಿಂದ ಕೂಡಿದ್ದ ಅನೇಕವೃಕ್ಷಗಳಿದ್ದುವು. ಆ ವೃಕ್ಷಗಳಲ್ಲಿ ವಿಕಸಿತವಾಗಿದ್ದ ಪುಷ್ಪಗಳ ಮೇಲೆ ದುಂಬಿಗಳು ಕುಳಿತು ಝೇಂಕರಿಸುತ್ತಿದ್ದುವು. ಆ ಅರಣ್ಯದಲ್ಲಿ ಪುಷ್ಪಗಳಿಲ್ಲದ ಅಥವಾ ಫಲಗಳಿಲ್ಲದ ವೃಕ್ಷಗಳೇ ಇರಲಿಲ್ಲ. ಆ ವೃಕ್ಷಗಳಲ್ಲಿ ಮುಳ್ಳುಗಳಿರಲಿಲ್ಲ. ದುಂಬಿಗಳಿಲ್ಲದ ವೃಕ್ಷಗಳೂ ಸಹ ಆ ಅರಣ್ಯದಲ್ಲಿರಲಿಲ್ಲ. ಆ ಅರಣ್ಯದಲ್ಲಿದ್ದ ವೃಕ್ಷಗಳೆಲ್ಲವೂ ಅನೇಕಾನೇಕ ಪಕ್ಷಿಗಳಿಂದ ನಿನಾದಿತವಾಗಿದ್ದುವು. ನೂರಾರು ಪಕ್ಷಿಗಳು ಒಂದೊಂದು ವೃಕ್ಷದಲ್ಲಿಯೂ ಗೂಡುಮಾಡಿಕೊಂಡಿದ್ದುವು. ಪುಷ್ಪಭರಿತವಾಗಿದ್ದ ಎಲ್ಲ ವೃಕ್ಷಗಳೂ ಪುಷ್ಪ ಗಳಿಂದ ಅಲಂಕರಿಸಲ್ಪಟ್ಟಿವೆಯೋ ಎಂಬಂತೆ ಕಾಣುತ್ತಿದ್ದುವು. ಎಲ್ಲ ಋತು ಗಳಲ್ಲಿಯೂ ಪುಷ್ಪಭರಿತವಾಗಿರುತ್ತಿದ್ದ ವೃಕ್ಷಗಳು ಆ ಅರಣ್ಯದಲ್ಲಿ ಅನೇಕ ವಿದ್ದುವು. ಆ ವೃಕ್ಷಗಳ ಛಾಯೆಯು ಆಯಾಸಗೊಂಡವನಿಗೆ ಅತ್ಯಂತಸುಖ ದಾಯಕವಾಗಿದ್ದಿತು. ಮಹಾಧನುರ್ಧರನಾದ ದುಷ್ಯಂತನು ನಯನಮನೋ ಹರವಾದ ಆ ವನವನ್ನು ಪ್ರವೇಶಿಸಿದನು. ದುಷ್ಯಂತನು ವನರಾಜಿಯನ್ನು ನೋಡುತ್ತಾ ಮೆಲ್ಲ-ಮೆಲ್ಲನೆ ಹೆಜ್ಜೆಯಿಡುತ್ತಿದ್ದಂತೆ, ಪುಷ್ಪಭರಿತವಾಗಿದ್ದ ವೃಕ್ಷ ಗಳ ರೆಂಬೆಗಳು ಮಾರುತನ ಪ್ರಸ್ಪಂದನದಿಂದಾಗಿ-ಕಾನನದ ಸೊಬಗನ್ನೇ ಎವೆಯಿಕ್ಕದೇ ನೋಡುತ್ತಾ ಹೋಗುತ್ತಿದ್ದ ರಾಜನ ಮೇಲೆ ಪುಷ್ಪವೃಷ್ಟಿಯನ್ನು ಕರೆಯುತ್ತಿದ್ದುವು. ಸುಮಧುರವಾಗಿ ಧ್ವನಿಮಾಡುತ್ತಿದ್ದ ಪಕ್ಷಿಗಳಿಂದ ಕೂಡಿದ್ದ ಗಗನಚುಂಬಿಗಳಾಗಿದ್ದ ಆ ವೃಕ್ಷಗಳು ಹೆಚ್ಚಾಗಿ ಶೋಭಿಸುತ್ತಿದ್ದುವು.

ಕುಸುಮಭರಿತವಾಗಿದ್ದ ಅರಣ್ಯದ ವೃಕ್ಷಗಳನ್ನು ನೋಡಿದರೆ ಆ ವೃಕ್ಷ ಗಳು ಚಿತ್ರ-ವಿಚಿತ್ರವಾದ ಬಣ್ಣಗಳಿಂದ ಕೂಡಿರುವ ಬಟ್ಟೆಗಳನ್ನೇನಾದರೂ ಹೊದ್ದಿವೆಯೋ ಎಂಬಂತೆ ಕಾಣುತ್ತಿದ್ದಿತು. ಪುಷ್ಪಗಳ ಭಾರದಿಂದ ಬಗ್ಗಿದ್ದ ರೆಂಬೆಗಳಲ್ಲಿ ಕುಳಿತು ಪುಷ್ಪರಸವನ್ನು ಕುಡಿಯುವ ಆಸೆಯುಳ್ಳ ದುಂಬಿ ಗಳು ಝೇಂಕಾರಮಾಡುತ್ತಿದ್ದುವು. ಆ ಅರಣ್ಯದಲ್ಲಿದ್ದ, ವನಕುಸುಮಗಳಿಂದ

ಅಲಂಕೃತವಾದ ಪ್ರದೇಶಗಳನ್ನೂ ಮತ್ತು ಅಲ್ಲಲ್ಲಿಯೇ ಇದ್ದ, ಮನಸ್ಸಿನ ಪ್ರೀತಿಯನ್ನು (ಆಹ್ಲಾದವನ್ನು) ಹೆಚ್ಚಿಸುವ, ನಯನಮನೋಹರವಾದ ಲತಾಗೃಹಗಳನ್ನೂ ನೋಡುತ್ತಾ ಮಹಾತೇಜಸ್ವಿಯಾದ ದುಷ್ಯಂತನು ಸಂತೋಷಭರಿತನಾದನು. ಪುಷ್ಪಭರಿತವಾಗಿದ್ದ ಲತೆಗಳಿಂದ ಆಲಿಂಗಿಸ ಲ್ಪಟ್ಟಿದ್ದ ಗಗನಚುಂಬಿಗಳಾದ ಆ ಅರಣ್ಯದಲ್ಲಿನ ವೃಕ್ಷಗಳು ಇಂದ್ರನ ಧ್ವಜ ಗಳಂತೆಯೇ ಪ್ರಕಾಶಿಸುತ್ತಿದ್ದುವು. ಇಂತಹ ಸುಮನೋಹರವಾದ ಅರಣ್ಯವನ್ನು ಸಿದ್ಧ-ಚಾರಣ-ಗಂಧರ್ವಾಪ್ಸರೆಯರು ಸಂಸೇವಿಸುತ್ತಿದ್ದರು. (ವಿಹಾರಕ್ಕಾಗಿ ಆ ಅರಣ್ಯಕ್ಕೆ ಬಂದು ಹೋಗುತ್ತಿದ್ದರು.) ವಾನರ-ಕಿನ್ನರರೂ ಅಲ್ಲಿ ವಾಸ ವಾಗಿದ್ದರು. ಸುಖಕರವಾಗಿಯೂ, ಶೀತಲವಾಗಿಯೂ, ಸುಗಂಧಮಯ ವಾಗಿಯೂ, ಕುಸುಮಿತವಾದ ಪುಷ್ಪಗಳ ರೇಣುಗಳನ್ನು ಒಯ್ಯುತ್ತಲೂ ಇದ್ದ ವಾಯುವು ವೃಕ್ಷಗಳೊಡನೆ ವಿಹರಿಸಲು ಇಚ್ಛಿಸಿರುವನೋ ಎಂಬಂತೆ ಆ ಅರಣ್ಯದ ಸುತ್ತಲೂ ಬೀಸುತ್ತಿದ್ದನು. ಅರಣ್ಯದ ಶೋಭೆಯನ್ನು ಮತ್ತಷ್ಟು ಹೆಚ್ಚಿಸಲೋ ಎಂಬಂತೆ ಆ ಅರಣ್ಯದ ಮಧ್ಯದಲ್ಲಿ ಒಂದು ನದಿಯು ಹರಿಯುತ್ತಿದ್ದಿತು. ಅದರ ತೀರಪ್ರದೇಶದಲ್ಲಿ ಎತ್ತರವಾದ ವೃಕ್ಷಗಳು ಬೆಳೆದಿದ್ದು ಇಂದ್ರನನ್ನು ಗೌರವಿಸುವ ಸಲುವಾಗಿ ಸ್ಥಾಪಿತವಾದ ಇಂದ್ರಧ್ವಜಗಳಂತೆ ಕಾಣುತ್ತಿದ್ದುವು.

ಆ ಅರಣ್ಯವು ಸಂಪ್ರಹೃಷ್ಟವಾದ ನಾನಾಜಾತಿಯ ಪಕ್ಷಿಗಳಿಂದ ತುಂಬಿ ಹೋಗಿದ್ದಿತು. ಇಂತಹ ಸುಮನೋಹರವಾದ ಅರಣ್ಯದ ಸೊಬಗನ್ನು ನೋಡಿ ಆನಂದಿಸುತ್ತಾ ಮೆಲ್ಲ-ಮೆಲ್ಲನೆ ಹೆಜ್ಜೆಯಿಡುತ್ತಾ ಹೋಗುತ್ತಿದ್ದ ರಾಜನು ಬಹುರಮ್ಯವಾಗಿದ್ದ, ಸುಮನೋಹರವಾಗಿದ್ದ ಮತ್ತು ಎಲ್ಲ ಆಶ್ರಮಗಳಿಗೂ ಶ್ರೇಷ್ಠವೆನಿಸಿದ್ದ ಆಶ್ರಮವೊಂದನ್ನು ಅಲ್ಲಿ ಕಂಡನು.

ನಾನಾವಿಧವಾದ ವೃಕ್ಷಗಳಿಂದ ಆವೃತವಾಗಿದ್ದ, ಪ್ರಜ್ವಲಿತನಾದ ಯಜ್ಞೇಶ್ವರನಿಂದ ಕೂಡಿದ್ದ, ಅಪ್ರತಿಮವಾದ ಆ ಆಶ್ರಮವನ್ನು ಶ್ರೀಮಂತ ನಾದ ದುಷ್ಯಂತನು ಮನಸ್ಸಿನಲ್ಲಿಯೇ ಬಹುವಾಗಿ ಶ್ಲಾಘಿಸಿದನು. ಯತಿ ಗಳಿಂದಲೂ, ವಾಲಖಿಲ್ಯರಿಂದಲೂ, ಮುನಿಗಳಿಂದಲೂ ಆ ಆಶ್ರಮವು ತುಂಬಿಹೋಗಿದ್ದಿತು. ಅಗ್ನಿಹೋತ್ರ, ವೈಶ್ವದೇವಾದಿಗಳನ್ನು ಮಾಡಲು ಆ ಆಶ್ರಮದಲ್ಲಿ ಅನೇಕಾನೇಕ ಅಗ್ನಿಗೃಹಗಳಿದ್ದುವು. ಆಶ್ರಮದ ಸುತ್ತಲೂ ಇದ್ದ

ವೃಕ್ಷಗಳಿಂದ ಹೂಗಳು ಭೂಮಿಯ ಮೇಲೆ ದಟ್ಟವಾಗಿ ಬಿದ್ದಿದ್ದು ರಾಜನನ್ನು ಸ್ವಾಗತಿಸಲು ಹಾಸಿರುವ ರತ್ನಗಂಬಳಿಯಂತೆ ಕಾಣುತ್ತಿದ್ದಿತು. ಎತ್ತರವಾದ ಅನೇಕ ಶಾಖೆಗಳಿಂದ ಕೂಡಿದ್ದ ವೃಕ್ಷಗಳಿಂದ ಪರಿವೃತವಾದ ಆಶ್ರಮವು ಬಹುಶೋಭಾಯಮಾನವಾಗಿದ್ದಿತು. ಸಮೀಪದಲ್ಲಿ ಹರಿಯುತ್ತಿದ್ದ ಸುಖೋ ದಕಳಾದ ಮಾಲಿನೀನದಿಯಿಂದ ಆಶ್ರಮವು ಮತ್ತಷ್ಟು ವಿರಾಜಮಾನವಾಗಿ ಕಾಣುತ್ತಿದ್ದಿತು. ಹಲವು ನೀರುಹಕ್ಕಿಗಳು ಮಾಲಿನೀನದಿಯಲ್ಲಿದ್ದುವು. ಆ ನದಿಯ ತೀರಪ್ರದೇಶದಲ್ಲಿದ್ದ ಮಹೋನ್ನತವೃಕ್ಷಗಳಲ್ಲಿ ಕುಳಿತು ಕಲ-ಕಲನೆ ಶಬ್ದಮಾಡುತ್ತಿದ್ದ ಸಾವಿರಾರು ಪಕ್ಷಿಗಳು ಆಶ್ರಮದ ಶೋಭೆಯನ್ನು ಮತ್ತಷ್ಟು ಹೆಚ್ಚಿಸುತ್ತಿದ್ದುವು.

ಆಶ್ರಮದ ಸಮೀಪದಲ್ಲಿ ಸರ್ಪಗಳೂ, ಹುಲಿಯೇ ಮೊದಲಾದ ದುಷ್ಟಪ್ರಾಣಿಗಳೂ ಸಾಧುಭಾವದಿಂದಿದ್ದುವು. ಆ ವಿಚಿತ್ರದೃಶ್ಯವನ್ನು ನೋಡಿ ರಾಜನ ಮನಸ್ಸು ಆನಂದಭರಿತವಾಯಿತು. ಅಪ್ರತಿರಥನಾದ, ಶ್ರೀಮಂತ ನಾದ ದುಷ್ಯಂತನು–ಎಲ್ಲ ಕಡೆಗಳಿಂದಲೂ ನೋಡಲು ಸುಮನೋಹರವಾಗಿ ಕಾಣುತ್ತಿದ್ದ, ದೇವಲೋಕಸದೃಶವಾಗಿದ್ದ ಆಶ್ರಮವನ್ನು ಪ್ರವೇಶಿಸಿದನು. ಮಾಲಿನೀನದಿಯು ಆಶ್ರಮಕ್ಕೆ ಸೇರಿಕೊಂಡಂತೆಯೇ ಇದ್ದಿತು. ಪುಣ್ಯಜಲೋ ಪೇತಳಾದ, ತನ್ನ ತೀರದಲ್ಲಿದ್ದ ಸರ್ವಪ್ರಾಣಿಗಳಿಗೂ ತಾಯಿಯಂತೆ ಜೀವನಕ್ಕೆ ಆಧಾರಭೂತಳಾದ ಮಾಲಿನೀನದಿಯನ್ನು ರಾಜನು ನೋಡಿದನು. ನದಿಯ ತೀರದ ಮರಳುದಿಣ್ಣೆಗಳಲ್ಲಿ ನದಿಯ ದಂಡೆಗಳಲ್ಲಿದ್ದ ವೃಕ್ಷಗಳಿಂದ ಪುಷ್ಪಗಳು ಉದುರಿ ಅವುಗಳು ಪ್ರವಾಹದಲ್ಲಿ ಸೇರಿಹೋಗುತ್ತಿದ್ದುವು. ನದಿಯ ವೇಗ ದಿಂದಾಗಿ ನೊರೆಯು ಉದ್ಭವಿಸಿ ಬಿಳುಪಾದ ಆ ನೊರೆಯು ಪುಷ್ಪಗಳೊಡನೆ ಸೇರಿ ಪ್ರವಾಹದಲ್ಲಿ ಹೋಗುತ್ತಿದ್ದಿತು. ಆ ನದಿಯ ದಂಡೆಗಳಲ್ಲಿ ಕಿನ್ನರರು ವಾಸಮಾಡುತ್ತಿದ್ದರು. ಕಪಿಗಳೂ, ಕರಡಿಗಳೂ ಆ ನದಿಯ ಸಮೀಪದಲ್ಲಿ ವಾಸವಾಗಿದ್ದುವು. ಅಧ್ಯಯನಾಧ್ಯಾಪನಗಳಲ್ಲಿ ನಿರತರಾದ ಅನೇಕಮಹರ್ಷಿ ಗಳ ವೇದಘೋಷವು ಕೇಳಿಬರುತ್ತಿತ್ತು. ಎರಡು ದಂಡೆಗಳಲ್ಲಿಯೂ ಇದ್ದ ಬಿಳುಪಾದ ಮಳಲಿನ ರಾಶಿಯಿಂದ ನದಿಯು ಪರಿಶೋಭಿಸುತ್ತಿದ್ದಿತು. ಮದಿ ಸಿದ ಆನೆಗಳೂ, ಹುಲಿಗಳೂ, ಸರ್ಪಗಳೂ ಆ ನದಿಯನ್ನಾಶ್ರಯಿಸಿ ಜೀವಿಸು ತ್ತಿದ್ದುವು.

ಮಾಲಿನೀನದಿಯ ತೀರದಲ್ಲಿ, ಅನೇಕ ಋಷಿ-ಮಹರ್ಷಿಗಳಿಂದ

ಸಂಸೇವಿತರಾಗಿದ್ದ ಮಹಾತ್ಮರಾದ ಕಣ್ವರ ಪುಣ್ಯಾಶ್ರಮವಿದ್ದಿತು. ಸುಮನೋಹರವಾದ ಆಶ್ರಮ ಮತ್ತು ಆಶ್ರಮಕ್ಕೆ ಸೇರಿಕೊಂಡಂತೆಯೇ ಇದ್ದ ಶುಭಜಲವಾದ ನದಿ–ಇವುಗಳನ್ನು ನೋಡಿ ಪುಳಕಿತನಾದ ದುಷ್ಯಂತನು ಆಶ್ರಮವನ್ನು ಪ್ರವೇಶಿಸಲು ಮನಸ್ಸುಮಾಡಿದನು. ಮಾಲಿನೀನದಿಯ ಮಧ್ಯದಲ್ಲೊಂದು ದ್ವೀಪವಿದ್ದಿತು. ದ್ವೀಪವತಿಯಾದ ಮಾಲಿನಿಯಿಂದ ಆ ಪ್ರದೇಶವು ಅಲಂಕೃತವಾಗಿದ್ದಿತು. ಆಶ್ರಮ ಮತ್ತು ನದಿಗಳನ್ನು ನೋಡಿದರೆ ನರ-ನಾರಾಯಣರು ತಪಸ್ಸುಮಾಡುತ್ತಿದ್ದ ಗಂಗಾನದಿಯ ತೀರವು ಸ್ಮರಣೆಗೆ ಬರುತ್ತಿದ್ದಿತು. ಕುಬೇರನ ಚೈತ್ರರಥವೆಂಬ ಉದ್ಯಾನವನಕ್ಕೆ ಸಮಾನವಾಗಿದ್ದ ಮತ್ತು ಮದಿಸಿದ ನವಿಲುಗಳಿಂದ ನಿನಾದಿತವಾಗಿದ್ದ ಆ ಅರಣ್ಯವನ್ನು ( ಆಶ್ರಮಭೂಮಿಯನ್ನು) ಪ್ರವೇಶಿಸಿದನಂತರ ದುಷ್ಯಂತನು–ಸದ್ಗುಣಸಂಪನ್ನರಾದ, ಅಮಿತವಾದ ವರ್ಚಸ್ಸಿನಿಂದ ಕೂಡಿದ್ದ, ಕಶ್ಯಪನ ವಂಶೋತ್ಪನ್ನರಾದ, ತಪೋಧನರಾದ ಕಣ್ವಮಹರ್ಷಿಗಳನ್ನು ನೋಡುವ ಸಲುವಾಗಿ ಗಜ-ರಥ-ತುರಗ-ಪದಾತಿಗಳಿಂದ ಯುಕ್ತವಾಗಿದ್ದ ಚತುರಂಗಬಲವನ್ನು ತಪೋವನವನ್ನು ಪ್ರವೇಶಿಸುವ ಮಹಾದ್ವಾರದ ಬಳಿಯಲ್ಲಿ ನಿಲ್ಲಿಸಿ, ಸೈನಿಕರಿಗೆ ಹೇಳಿದನು :

"ರಜಸ್ತಮೋಗುಣಗಳಿಂದ ವಿಹೀನರಾದ, ತಪೋಧನರಾದ, ಕಶ್ಯಪ ವಂಶೋದ್ಭವರಾದ ಕಣ್ವಮಹರ್ಷಿಗಳನ್ನು ಸಂದರ್ಶಿಸುವ ಸಲುವಾಗಿ ನಾನು ಆಶ್ರಮದೊಳಗೆ ಹೋಗುತ್ತೇನೆ. ನಾನು ಮಹರ್ಷಿಗಳನ್ನು ಸಂದರ್ಶಿಸಿ ಹಿಂದಿರುಗುವವರೆಗೂ ನೀವೆಲ್ಲರೂ ಇಲ್ಲಿಯೇ ಬಿಡಾರಮಾಡಿರಿ."

ಹೀಗೆಂದು ಆಜ್ಞೆಮಾಡಿ ರಾಜನು ವನವನ್ನು ಪ್ರವೇಶಮಾಡಿದನು. ದೇವಲೋಕದ ನಂದನವನಕ್ಕೆ ಸಮಾನವಾಗಿದ್ದ ಕಣ್ವರ ಆಶ್ರಮವಿದ್ದ ವನದೊಳಗೆ ಪ್ರವೇಶಿಸಿದೊಡನೆಯೇ ರಾಜನಿಗಿದ್ದ ಹಸಿವು-ಬಾಯಾರಿಕೆಗಳೆಲ್ಲವೂ ಮಾಯವಾಗಿ ಹೋದುವು. ರಾಜನ ಮನಸ್ಸು ಬಹುವಾದ ಆಹ್ಲಾದವನ್ನು ಹೊಂದಿತು. ದುಷ್ಯಂತನು ಮಹರ್ಷಿಗಳನ್ನು ಸಂದರ್ಶಿಸುವ ಸಲುವಾಗಿ ಮಕುಟ-ಮಣಿಮುಕ್ತಾಹಾರಗಳೆಲ್ಲವನ್ನೂ ತೆಗೆದಿರಿಸಿ, ಸಾಧಾರಣವಾದ ಉಡುಪನ್ನು ಧರಿಸಿ, ಮಂತ್ರಿ ಮತ್ತು ಪುರೋಹಿತರೊಡನೆ ಆಶ್ರಮಕ್ಕೆ ತೆರಳಿದನು. ತಪೋರಾಶಿಯಾದ, ಅಮೃತಸ್ವರೂಪರಾದ ಮಹರ್ಷಿಗಳನ್ನು ಸಂದರ್ಶಿಸಲು ಇಚ್ಛಿಸಿದ ದುಷ್ಯಂತನು ಬ್ರಹ್ಮಲೋಕಸದೃಶವಾಗಿದ್ದ ಆಶ್ರಮ

ವನ್ನು ವೀಕ್ಷಿಸಿದನು. ಹಿಂದೆಯೇ ಹೇಳಿದಂತೆ ಆ ದಿವ್ಯಾಶ್ರಮದ ಸುತ್ತಲೂ ಇದ್ದ ವೃಕ್ಷಗಳಲ್ಲಿನ ಕುಸುಮಗಳ ಮಧುವನ್ನು ಹೀರಲು ಅಡಿಗಡಿಗೂ ಪುಷ್ಪಗಳ ಮೇಲೆ ಹೋಗಿ ಕುಳಿತುಕೊಳ್ಳುತ್ತಿದ್ದ ದುಂಬಿಗಳ ಝೇಂಕಾರಧ್ವನಿಯಿಂದ ಆಶ್ರಮವು ಶಬ್ದಾಯಮಾನವಾಗಿದ್ದಿತು. ನಾನಾವಿಧವಾದ, ನಾನಾವರ್ಣಗಳ ಪಕ್ಷಿಗಳು ಆ ಆಶ್ರಮದ ಸುತ್ತಲೂ ಚಿಲಿ-ಪಿಲಿಗುಟ್ಟುತ್ತಾ ಹಾರಾಡುತ್ತಿದ್ದುವು. ಆಶ್ರಮದ ಒಂದೆಡೆಯಲ್ಲಿ ಪದ-ಕ್ರಮಗಳಿಂದ ಕೂಡಿದ ಋಕ್ಕುಗಳನ್ನು ಬ್ರಾಹ್ಮಣರು ಸುಸ್ವರವಾಗಿ ಹೇಳುತ್ತಿದ್ದುದನ್ನು ದುಷ್ಯಂತನು ಕೇಳಿದನು. ಯಜ್ಞಗಳ ಪ್ರಯೋಗ-ಪ್ರಕ್ರಿಯೆಗಳನ್ನು ಸಂಪೂರ್ಣವಾಗಿ ತಿಳಿದಿದ್ದ ಯಜುರ್ವೇದವಿದರಾದ ಬ್ರಾಹ್ಮಣರಿಂದ ಕೂಡಿ ಸುಶೋಭಿತವಾಗಿದ್ದ ಯಜ್ಞಮಂಟಪವನ್ನು ನೋಡಿದನು. ನಿಯತವ್ರತರಾದ ಋಷಿಗಳು ಮಾಡುತ್ತಿದ್ದ ಸುಶ್ರಾವ್ಯವಾದ ಸಾಮಗಾನವನ್ನು ದುಷ್ಯಂತನು ಆಲಿಸಿ ಕೇಳಿ ದನು. ಭಾರುಂಡವೆಂಬ ಸಾಮವನ್ನು ಗಾಯನಮಾಡುತ್ತಿದ್ದ ಋಷಿ ಗಳಿಂದಲೂ, ಅಥರ್ವಶಿರಸ್ಸನ್ನು ಸ್ವರಸಹಿತವಾಗಿ ಹೇಳುತ್ತಿದ್ದ ಬ್ರಾಹ್ಮಣ ರಿಂದಲೂ, ಜಿತೇಂದ್ರಿಯರಿಂದಲೂ, ವ್ರತಿಗಳಿಂದಲೂ ಆ ಆಶ್ರಮವು ಬಹು ಶೋಭಾಯಮಾನವಾಗಿ ಕಾಣುತ್ತಿದ್ದಿತು. ಅಥರ್ವವೇದದಲ್ಲಿ ಅಧ್ಯಾಪಕರಾದ ವರು ಅಥರ್ವವೇದವನ್ನೂ, ಸಾಮವೇದದ ವಿದ್ವಾಂಸರು ಪೂಗಯಜ್ಞಿಯ ವೆಂಬ ಸಾಮವನ್ನೂ, ಋಗ್ಯಜುರ್ವೇದಿಗಳು ಪದ-ಕ್ರಮಯುಕ್ತವಾದ ಸಂಹಿತೆಯನ್ನೂ ಆ ಆಶ್ರಮದ ಒಂದೊಂದು ಭಾಗಗಳಲ್ಲಿ ಕುಳಿತು ಪಾರಾಯಣಮಾಡುತ್ತಿದ್ದರು. ಮತ್ತೊಂದೆಡೆಯಲ್ಲಿ ಬ್ರಾಹ್ಮಣರು ಶಬ್ದ-ಸಂಸ್ಕಾರಯುಕ್ತವಾದ ವಾಕ್ಯಾರ್ಥಗಳನ್ನು ಮಾಡುತ್ತಿದ್ದರು. ಇಂತಹ ವೇದ ಘೋಷಗಳಿಂದ ಕೂಡಿದ್ದ ಕಣ್ವರ ಆಶ್ರಮದಲ್ಲಿ ಶ್ರೌತವನ್ನು ತಿಳಿದ ವಿದ್ವಾಂಸರಿದ್ದರು. ಕ್ರಮ-ಶಿಕ್ಷಾ-ವಿದ್ಯೆಗಳ ಪಾರಂಗತರಿದ್ದರು. ನ್ಯಾಯತತ್ತ್ವ-ಆತ್ಮವಿಜ್ಞಾನಸಂಪನ್ನರಿದ್ದರು. ವೇದಪಾರಂಗತರಿದ್ದರು. ಉಪಾಸನಾದಿ ವಿಶೇಷವಿಷಯಗಳನ್ನು ತಿಳಿದವರಿದ್ದರು. ಮೋಕ್ಷಧರ್ಮಪರಾಯಣರಿದ್ದರು. ಸಿದ್ಧಾಂತಸ್ಥಾಪನೆ ಮತ್ತು ಸಿದ್ಧಾಂತದ ಮೇಲೆ ಬರಬಹುದಾದ ಆಕ್ಷೇಪ–ಇವೆಲ್ಲವನ್ನೂ ಪರಿಹರಿಸಿ ಪುನಃ ಸಿದ್ಧಾಂತದ ಪ್ರತಿಪಾದನೆಯನ್ನು ಮಾಡುವ ಪರಮಾರ್ಥಜ್ಞರಾದ ವಿದ್ವಾಂಸರಿದ್ದರು. ಶಬ್ದ, ಛಂದಸ್ಸು, ನಿರುಕ್ತಗಳನ್ನು ತಿಳಿದವರನೇಕರಿದ್ದರು. ಕಾಲಜ್ಞಾನವಿಶಾರದರಿದ್ದರು. ಯಾವ-ಯಾವ

ಕರ್ಮಕ್ಕೆ ಯಾವ-ಯಾವ ದ್ರವ್ಯಗಳು ಎಷ್ಟೆಷ್ಟು ಬೇಕೆಂಬುದನ್ನು ಖಚಿತವಾಗಿ ಹೇಳುವ ಪಂಡಿತರಿದ್ದರು. ಕಾರ್ಯ ಮತ್ತು ಕಾರಣಗಳನ್ನು ಸಮೀಚೀನವಾಗಿ ತಿಳಿದಿದ್ದ ವಿದ್ವಾಂಸರಿದ್ದರು. ಪಕ್ಷಿಗಳ ಮತ್ತು ಕಪಿಯೇ ಮುಂತಾದ ಪ್ರಾಣಿಗಳ ಧ್ವನಿಯನ್ನು ಅರ್ಥಮಾಡಿಕೊಳ್ಳುವ ತಜ್ಞರಿದ್ದರು. ಗ್ರಂಥಗಳನ್ನು ಆಶ್ರಯಿಸಿ ವೇದಾರ್ಥವನ್ನು ಪಾಠ ಹೇಳುವ ಮಹಾಪಂಡಿತರಿದ್ದರು. ನಾನಾಶಾಸ್ತ್ರಗಳಲ್ಲಿ ಪ್ರವೀಣರಾದವರಿದ್ದರು. ಅವರೆಲ್ಲರೂ ಹೇಳುತ್ತಿದ್ದ ದಿವ್ಯವಾಣಿಗಳನ್ನು ದುಷ್ಯಂತನು ಕೇಳಿದನು.

ಉತ್ತಮಹಾಸ್ಯಜ್ಞರಾದವರೂ ಆ ಮಹರ್ಷಿಗಳ ಆಶ್ರಮದಲ್ಲಿದ್ದರು. ಅಲ್ಲಲ್ಲಿ ವ್ರತನಿಷ್ಠರಾದ ಮತ್ತು ಕಠಿನವ್ರತಿಗಳಾದ ಬ್ರಾಹ್ಮಣರು ಜಪ-ಹೋಮಾದಿಗಳಲ್ಲಿ ನಿರತರಾಗಿರುವುದನ್ನು ದುಷ್ಯಂತನು ನೋಡಿದನು. ಪ್ರಯತ್ನ ಪೂರ್ವಕವಾಗಿ ತಯಾರಿಸಿದ್ದ ಚಿತ್ರ-ವಿಚಿತ್ರವಾದ ನಯನಮನೋಹರವಾದ ಆಸನಗಳನ್ನು ನೋಡಿ ರಾಜನು ಆಶ್ಚರ್ಯಭರಿತನಾದನು. ಬ್ರಾಹ್ಮಣರು ಪೂಜೆಮಾಡಿದ್ದ ಆಲಯಗಳಲ್ಲಿದ್ದ ದೇವತೆಗಳನ್ನು ನೋಡಿ ಮುಗ್ಧನಾದ ರಾಜನು–ತಾನು ಬ್ರಹ್ಮಲೋಕದಲ್ಲಿಯೇ ಇರುವೆನೋ! ಅಥವಾ ಇದು ದೇವ ಲೋಕವೇ ಆಗಿರುವುದೋ!–ಎಂಬುದಾಗಿ ಭಾವಿಸಿದನು. ಮಹರ್ಷಿಗಳಾದ ಕಣ್ವರ ತಪಸ್ಸಿನಿಂದಲೇ ಸಂರಕ್ಷಿತವಾಗಿದ್ದ, ತಪೋವನಕ್ಕಿರ ಬೇಕಾದ ಸರ್ವಗುಣಗಳಿಂದಲೂ ಪರಿಪೂರ್ಣವಾಗಿದ್ದ ಕಣ್ವರ ಆಶ್ರಮವನ್ನು ಎಷ್ಟು ಬಾರಿ ನೋಡಿದರೂ ದುಷ್ಯಂತನಿಗೆ ತೃಪ್ತಿಯಿಲ್ಲದೇ ಹೋಯಿತು. ಮಹಾತ್ಮರಿಂದಲೂ ಋಷಿ-ಮಹರ್ಷಿಗಳಿಂದಲೂ, ತಪೋಧನರಿಂದಲೂ ವ್ಯಾಪ್ತವಾಗಿದ್ದ ಮಂಗಲಮಯವಾದ, ಏಕಾಂತಸ್ಥಾನವಾದ, ಶುಭಾವಹವಾದ ಕಣ್ವರ ಆಶ್ರಮವನ್ನು ಶತ್ರುಹಂತಕನಾದ ದುಷ್ಯಂತನು ಪುರೋಹಿತರು ಮತ್ತು ಅಮಾತ್ಯರೊಡನೆ ಪ್ರವೇಶಿಸಿದನು.”

೭೦ನೆಯ ಅಧ್ಯಾಯವು ಮುಗಿಯಿತು.

೭೧ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದುಷ್ಯಂತ-ಶಕುಂತಲೆಯರ ಸಂಭಾಷಣೆ : ಶಕುಂತಲೆಯು ತನ್ನ ಜನ್ಮವೃತ್ತಾಂತವನ್ನು ದುಷ್ಯಂತನಿಗೆ ಹೇಳಿದುದು : ವಿಶ್ವಾಮಿತ್ರರ ತಪೋಭಂಗಕ್ಕಾಗಿ ಇಂದ್ರನು ಮೇನಕೆಯನ್ನು ಕಳುಹಿಸಿದುದು

“ಜನಮೇಜಯ! ಮಹಾಬಾಹುವಾದ ದುಷ್ಯಂತನು ಆಶ್ರಮದೊಳಕ್ಕೆ

ಹೋಗುವಾಗ ಅಮಾತ್ಯ-ಪುರೋಹಿತರನ್ನೂ ಹೊರಗಡೆಯೇ ಇರುವಂತೆ ಹೇಳಿ ತಾನೊಬ್ಬನೇ ಏಕಾಕಿಯಾಗಿ ಆಶ್ರಮದೊಳಗೆ ಪ್ರವೇಶಿಸಿದನು. ಆದರೆ ಆ ಸಮಯದಲ್ಲಿ ಕಣ್ವಮಹರ್ಷಿಗಳು ಆಶ್ರಮದಲ್ಲಿರಲಿಲ್ಲ. ಮಹರ್ಷಿಗಳಾದ ಕಣ್ವರಿಲ್ಲದೆ ಶೂನ್ಯವಾಗಿ ಕಾಣುತ್ತಿದ್ದ ಆಶ್ರಮದ ಒಳಭಾಗದಲ್ಲಿ ನಿಂತು ದುಷ್ಯಂತನು ಗಟ್ಟಿಯಾಗಿ ಪ್ರತಿಧ್ವನಿಯು ಬರುವ ರೀತಿಯಲ್ಲಿ–'ಇಲ್ಲಿ ಯಾರಿದ್ದಾರೆ?'–ಎಂದು ಕೂಗಿದನು. ರಾಜನ ಕೂಗನ್ನು ಕೇಳಿ ರೂಪಿನಲ್ಲಿ ಮಹಾಲಕ್ಷ್ಮಿಯಂತೆ ಕಾಣುತ್ತಿದ್ದ ತಾಪಸೀವೇಷಧಾರಿಣಿಯಾದ ಕನ್ಯೆಯೊಬ್ಬಳು ಆಶ್ರಮದ ಒಳಾಂಗಣದಿಂದ ಹೊರಕ್ಕೆ ಬಂದಳು. ದುಷ್ಯಂತರಾಜನನ್ನು ನೋಡಿದೊಡನೆಯೇ ಕಪ್ಪಾದ ಕಣ್ಣುಗಳಿಂದ ಕೂಡಿದ್ದ ಆ ಕನ್ಯೆಯು–



'ನಿಮಗೆ ಸ್ವಾಗತಬಯಸುತ್ತೇನೆ. ಒಳಗೆ ಬಂದು ವಿಶ್ರಮಿಸಿಕೊಳ್ಳಿರಿ'–ಎಂದು ಹೇಳಿ ಗೌರವಿಸಿದಳು. ರಾಜನಿಗೆ ಕುಳಿತುಕೊಳ್ಳಲು ಉಚಿತವಾದ ಆಸನವನ್ನಿತ್ತು, ಪಾದ್ಯ ಮತ್ತು ಅರ್ಘ್ಯಗಳನ್ನು ಕೊಟ್ಟು, ತಿನ್ನಲು ಹಣ್ಣು-ಹಂಪಲು

ಗಳನ್ನೂ ಕೊಟ್ಟು ಯಥೋಚಿತವಾಗಿ ಸತ್ಕರಿಸಿದನಂತರ ರಾಜನ ಕುಶಲ ಪ್ರಶ್ನೆಮಾಡಿದಳು. ಪರಸ್ಪರ ಕುಶಲಪ್ರಶ್ನೆಗಳಾದನಂತರ ಋಷಿಕನ್ಯೆಯು ನಸುನಗುತ್ತಾ ದುಷ್ಯಂತನನ್ನು ಪ್ರಶ್ನಿಸಿದಳು :

"ಮಹಾರಾಜ! ನಿನಗೆ ನಮ್ಮಿಂದ ಯಾವ ಕಾರ್ಯವು ಆಗ ಬೇಕಾಗಿದೆ?"

ಯಥೋಚಿತವಾಗಿ ಪುರಸ್ಕೃತನಾದ ದುಷ್ಯಂತನು ಕಳಂಕರಹಿತಳಾದ ಶಕುಂತಲೆಯನ್ನು ನೋಡಿ ಮಧುರಭಾಷಿಣಿಯಾದ ಅವಳನ್ನು ಕುರಿತು ಹೇಳಿದನು :

"ಭದ್ರೇ! ನಾನಿಲ್ಲಿಗೆ ಮಹಾಭಾಗರಾದ ಕಣ್ವಮಹರ್ಷಿಗಳನ್ನು ಸಂದರ್ಶಿಸಿ ಗೌರವಿಸುವ ಸಲುವಾಗಿ ಆಗಮಿಸಿರುವೆನು. ಈಗ ಭಗವಾನ್ ಕಣ್ವಮಹರ್ಷಿಗಳು ಎಲ್ಲಿ ಹೋಗಿದ್ದಾರೆ?"

"ಮಹಾರಾಜ! ನನ್ನ ತಂದೆಯವರು ಫಲ-ಪುಷ್ಪಾದಿಗಳನ್ನು ತರುವ ಸಲುವಾಗಿ ಆಶ್ರಮದಿಂದ ಹೊರಗೆ ಹೋಗಿದ್ದಾರೆ. ನೀನಿಲ್ಲಿ ಮುಹೂರ್ತಕಾಲ ಇರುವೆಯಾದರೆ ನೀನವರನ್ನು ಸಂದರ್ಶಿಸಬಹುದು."

ಜನಮೇಜಯ! ಆಶ್ರಮದಲ್ಲಿ ದುಷ್ಯಂತನು ಕಣ್ವಮಹರ್ಷಿಗಳನ್ನು ಕಾಣಲಿಲ್ಲ. ಶಕುಂತಲೆಯು ಕಣ್ವರು ಆಶ್ರಮದಿಂದ ಹೊರಗೆ ಹೋಗಿರುವುದನ್ನು ಹೇಳಿದಳು. ಶ್ರೀಮತಿಯಾದ, ಚಾರುಹಾಸಿನಿಯಾದ, ವರಾರೋಹೆಯಾದ, ತಪಸ್ಸಿನಿಂದಲೂ–ಜಿತೇಂದ್ರಿಯತೆಯಿಂದಲೂ ಉಜ್ಜ್ವಲವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ, ರೂಪ-ಯೌವನಸಂಪನ್ನಳಾದ ಶಕುಂತಲೆಯನ್ನು ಕೇಳಿದನು :

"ಕಲ್ಯಾಣಿ! ಈ ಋಷ್ಯಾಶ್ರಮದಲ್ಲಿರುವ ನೀನು ಯಾರು? ಇಲ್ಲಿಗೇಕೆ ಬಂದಿರುವೆ? ಇಷ್ಟೊಂದು ಸುಂದರಿಯಾಗಿರುವ ನೀನು ಎಲ್ಲಿಯವಳು? ನಿನ್ನ ದರ್ಶನಮಾತ್ರದಿಂದಲೇ ನನ್ನ ಮನಸ್ಸನ್ನು ಅಪಹರಿಸಿಬಿಟ್ಟಿರುವೆ. ಆದುದರಿಂದ ನೀನಾರೆಂಬುದನ್ನು ನಾನು ಯಥಾವತ್ತಾಗಿ ತಿಳಿಯಬಯಸುತ್ತೇನೆ."

ದುಷ್ಯಂತನಿಂದ ಈ ರೀತಿ ಪೃಷ್ಟಳಾದ ಶಕುಂತಲೆಯು ಮುಗುಳ್ನಗೆಯನ್ನು ಬೀರುತ್ತಾ ಮಧುರಾಕ್ಷರಯುಕ್ತವಾದ ಈ ಮಾತುಗಳನ್ನು ಹೇಳಿದಳು:

"ಮಹಾರಾಜ! ನಾನು ಭಗವಂತರಾದ, ಮಹಾತ್ಮರಾದ, ಧರ್ಮಜ್ಞ ರಾದ, ತಪಸ್ವಿಗಳಾದ, ವ್ರತನಿಷ್ಠರಾದ ಕಣ್ವಮಹರ್ಷಿಗಳ ಮಗಳು."

"ಕಲ್ಯಾಣಿ! ಲೋಕಪೂಜಿತರಾದ, ಮಹಾಭಾಗರಾದ, ಭಗವಾನ್ ಕಣ್ವಮಹರ್ಷಿಗಳು ಊರ್ಧ್ವರೇತಸ್ಕರೆಂಬುದನ್ನು ನಾನು ಕೇಳಿದ್ದೇನೆ. ಧರ್ಮದೇವತೆಯಾದರೂ ಒಳ್ಳೆಯ ವೃತ್ತವನ್ನು (ನಡತೆಯನ್ನು) ಮೀರ ಬಹುದು. ಕಠಿನವ್ರತಿಗಳಾದ ಕಣ್ವರು ಮಾತ್ರ ತಮ್ಮ ನಿಷ್ಠೆಯಿಂದ ವಿಚಲಿತ ರಾಗಲಾರರು. ಹೀಗಿರುವಾಗ ವರವರ್ಣಿನಿಯಾದ ನೀನು ಅವರ ಮಗ ಳಾದುದಾದರೂ ಹೇಗೆ? ನನಗೆ ಈ ವಿಷಯದಲ್ಲಿ ಸಂಶಯವುಂಟಾಗಿದೆ. ಎಲ್ಲ ವಿಷಯಗಳನ್ನೂ ವಿವರವಾಗಿ ತಿಳಿಸಿ ನನ್ನ ಸಂಶಯವನ್ನು ನಿವಾರಣೆ ಮಾಡುವುದು ಸೂಕ್ತವಾಗಿದೆ."

"ಮಹಾರಾಜ! ನಾನು ಇಲ್ಲಿಗೆ ಹೇಗೆ ಬಂದೆ? ಹಿಂದೆ ಏನಾಯಿತು? ನಾನು ಕಣ್ವಮಹರ್ಷಿಗಳ ಮಗಳು ಹೇಗಾದೆನು?–ಎಂಬುದೆಲ್ಲವನ್ನೂ ಯಥಾವತ್ತಾಗಿ ಹೇಳುವೆನು, ಕೇಳು. ಈ ವಿಷಯವನ್ನು ನಾನು ನನ್ನ ತಂದೆಯಿಂದ ಕೇಳಿ ತಿಳಿದುಕೊಳ್ಳಲಿಲ್ಲ. ಒಮ್ಮೆ ನಮ್ಮ ಆಶ್ರಮಕ್ಕೆ ಮಹರ್ಷಿ ಗಳೊಬ್ಬರು ಆಗಮಿಸಿದ್ದರು. ಅವರೂ ಸಹ ಈಗ ನೀನು ನನ್ನನ್ನು ಕೇಳಿದ ಪ್ರಶ್ನೆಯನ್ನೇ ನನ್ನ ತಂದೆಯನ್ನು ಕೇಳಿದರು. ಅದಕ್ಕುತ್ತರವಾಗಿ ನನ್ನ ತಂದೆಯವರು ನನ್ನ ಜನ್ಮವೃತ್ತಾಂತವನ್ನು ಯಥಾವತ್ತಾಗಿ ಆ ಮಹರ್ಷಿ ಗಳೊಡನೆ ಹೇಳಿದರು. ಆಶ್ರಮದ ಒಳಾಂಗಣದಲ್ಲಿದ್ದ ನಾನು ಆಗಲೇ ನನ್ನ ಜನ್ಮವೃತ್ತಾಂತವನ್ನು ಪೂರ್ಣವಾಗಿ ತಿಳಿದುಕೊಂಡೆನು.

ಮಹಾರಾಜ! ನಮ್ಮ ತಂದೆಯವರು ಮಹರ್ಷಿಗಳಿಗೆ ಹೀಗೆ ಹೇಳಿ ದರು: "ಮಹರ್ಷೇ! ವಿಶ್ವಾಮಿತ್ರರೊಮ್ಮೆ ಮಹತ್ತರವಾದ ಮತ್ತು ಸುಘೋರವಾದ ತಪಸ್ಸನ್ನು ಮಾಡುತ್ತಿದ್ದರು. ಅವರು ತಮ್ಮ ತಪಸ್ಸಿನಿಂದ ಸ್ವರ್ಗದಲ್ಲಿದ್ದ ಇಂದ್ರನಿಗೂ ತಾಪವನ್ನುಂಟುಮಾಡಿದರು. ಇಂದ್ರನಿಗೆ ವಿಶ್ವಾ ಮಿತ್ರರು ಮಾಡುತ್ತಿದ್ದ ತಪಸ್ಸಿನ ವಿಷಯವಾಗಿ ಬಹಳ ಭಯವುಂಟಾಯಿತು. ತನ್ನ ಇಂದ್ರಪದವಿಯನ್ನೇ ವಿಶ್ವಾಮಿತ್ರರು ಆಕ್ರಮಿಸಲು ಆಶಿಸಿದ್ದಾರೆಂದು

ಇಂದ್ರನು ಭಾವಿಸಿದನು. ಆ ತಪಸ್ಸನ್ನು ನಿಲ್ಲಿಸುವ ಸಲುವಾಗಿ ಇಂದ್ರನು ಮೇನಕೆಯನ್ನು ಕರೆದು ಹೇಳಿದನು :

"ಮೇನಕೆ! ನೀನು ನಿನ್ನ ಗುಣವಿಶೇಷದಿಂದ ಅಪ್ಸರೆಯರಲ್ಲೆಲ್ಲಾ ಶ್ರೇಷ್ಠಳೆನಿಸಿರುವೆ. ಇಂದು ನೀನು ನನಗೆ ಶ್ರೇಯಸ್ಸನ್ನುಂಟುಮಾಡಬೇಕಾಗಿದೆ. ನನ್ನ ಮಾತಿನಂತೆ ನೀನು ನಡೆದುಕೊಳ್ಳಬೇಕು. ಆದಿತ್ಯಸದೃಶನಾದ, ಮಹಾತಪಸ್ವಿಯಾದ ವಿಶ್ವಾಮಿತ್ರನು ನನ್ನ ಮನಸ್ಸು ತಲ್ಲಣಿಸುವಂತೆ ಘೋರ ವಾದ ತಪಸ್ಸನ್ನು ಮಾಡುತ್ತಿದ್ದಾನೆ. ವಿಶ್ವಾಮಿತ್ರನನ್ನು ಅವನು ಮಾಡುತ್ತಿರುವ ತಪಸ್ಸಿನಿಂದ ವಿಮುಖನನ್ನಾಗಿ ಮಾಡುವುದರ ಮೂಲಕ ನನ್ನ ಮನಸ್ಸಿ ನಲ್ಲಿರುವ ಭಯವನ್ನು ಹೋಗಲಾಡಿಸುವುದು ಇಂದಿನ ನಿನ್ನ ಕರ್ತವ್ಯವಾಗಿದೆ. ವಿಶ್ವಾಮಿತ್ರನು ಶುದ್ಧಾತ್ಮನು. ಜಯಿಸಲು ಅಶಕ್ಯನಾದವನು. ಅಂತಹವನನ್ನು ನೀನು ನಿನ್ನ ರೂಪಿನಿಂದ ಪ್ರಲೋಭಿಸಿ ನನ್ನ ಸ್ಥಾನಕ್ಕೆ ಚ್ಯುತಿಯು ಬಾರದಂತೆ ಮಾಡಬೇಕಾಗಿದೆ. ಅವನ ತಪಸ್ಸಿಗೆ ವಿಘ್ನವನ್ನುಂಟುಮಾಡುವುದರ ಮೂಲಕವಾಗಿ ನನ್ನ ಇಂದ್ರಪದವಿಗೆ ಬರಬಹುದಾದ ವಿಪತ್ತನ್ನು ವಿನಾಶಗೊಳಿಸು. ಭಾಮಿನಿ! ರೂಪ, ಯೌವನ, ಮಾತಿನ ಮಾಧುರ್ಯ, ಹಾವ-ಭಾವಗಳು, ಮುಗುಳ್ನಗೆ, ಯುಕ್ತಿಯುಕ್ತವಾದ ಮಾತು–ಇವುಗಳಿಂದ ಅವನನ್ನು ಪ್ರಲೋಭಿಸಿ ಅವನು ಈ ಘೋರವಾದ ತಪಸ್ಸಿನಿಂದ ಪರಾಙ್ಮುಖನಾಗುವಂತೆ ಮಾಡು."

"ಪೂಜ್ಯನೇ! ಮಹೇಂದ್ರ! ನಿನ್ನ ಸೇವಕಳಾದ ನಾನು ನೀನು ಆಜ್ಞಾ ಪಿಸಿದಂತೆ ನಡೆಯುವುದು ಯುಕ್ತವೇ ಸರಿ. ಆದರೆ ಮಹಾತೇಜಸ್ವಿಗಳಾದ ಭಗವಾನ್ ವಿಶ್ವಾಮಿತ್ರರು ಮಹಾತಪಸ್ವಿಗಳೆಂಬುದೂ, ಮಹಾಕೋಪಿಷ್ಠ ರೆಂಬುದೂ ನಿನಗೆ ತಿಳಿಯದ ವಿಷಯವಲ್ಲ. ಅವರ ತೇಜಸ್ಸಿನಿಂದಲೂ, ತಪಸ್ಸಿನಿಂದಲೂ ಮತ್ತು ಅವರಲ್ಲಿರುವ ಕೋಪದಿಂದಲೂ ನೀನೇ ಉದ್ವಿಗ್ನ ನಾಗಿರುವಾಗ ನನ್ನ ಪಾಡೇನು?

ವಿಶ್ವಾಮಿತ್ರರು ತಮ್ಮ ಕೋಪದ ಮತ್ತು ತಪಸ್ಸಿನ ಬಲದಿಂದಾಗಿ ಮಹಾಭಾಗರಾದ ವಸಿಷ್ಠರನ್ನೂ ಪ್ರಿಯಪುತ್ರರಿಂದ ವಿಯೋಗಗೊಳಿಸಿದರು. ಕ್ಷತ್ರಿಯರಾಗಿದ್ದ ಅವರು ತಪಸ್ಸಿನ ಬಲದಿಂದಲೇ ಬ್ರಾಹ್ಮಣರಾದರು. ಶೌಚ-ಮುಖಮಾರ್ಜನ-ಸ್ನಾನಗಳಿಗಾಗಿಯೇ ವಿಶ್ವಾಮಿತ್ರರು ದುರ್ಗಮವಾದ

ಒಂದು ನದಿಯನ್ನೇ ಸೃಷ್ಟಿಮಾಡಿರುವರು. ಬಹುಜಲಯುಕ್ತವಾದ ಪುಣ್ಯ ತಮವಾದ ಆ ನದಿಯು ಲೋಕದಲ್ಲಿ 'ಕೌಶಿಕೀ' ಎಂದೇ ಪ್ರಸಿದ್ಧಿಹೊಂದಿದೆ. ಹಿಂದೊಮ್ಮೆ ಬಹಳ ಕಷ್ಟಪರಿಸ್ಥಿತಿಯು ಒದಗಿದ್ದಾಗ (ಕ್ಷಾಮಕಾಲದಲ್ಲಿ) ವಿಶ್ವಾಮಿತ್ರರ ಹೆಂಡತಿಯನ್ನು ರಾಜರ್ಷಿಯಾದ ಧರ್ಮಾತ್ಮನಾದ ಮತಂಗ ನೆಂಬ ರಾಜನು ಆಶ್ರಯವಿತ್ತು ಸಂರಕ್ಷಿಸಿದ್ದನು. ಮುಂದೆ ಆ ಮತಂಗನು ಬ್ರಾಹ್ಮಣನೊಬ್ಬನ ಶಾಪದಿಂದಾಗಿ ವ್ಯಾಧನಾದನು. ದುರ್ಭಿಕ್ಷಕಾಲವು ಕಳೆದ ನಂತರ ವಿಶ್ವಾಮಿತ್ರರು ಆಶ್ರಮಕ್ಕೆ ಹಿಂದಿರುಗಿ ಆಶ್ರಮದ ಸಮೀಪದಲ್ಲಿದ್ದ ನದಿಗೆ 'ಪಾರಾ' ಎಂದು ಹೆಸರಿಟ್ಟರು. ವ್ಯಾಧನಾಗಿದ್ದ ಮತಂಗನಿಂದಲೇ ಯಾಗವನ್ನೂ ಮಾಡಿಸಿದರು. ವಿಶ್ವಾಮಿತ್ರರ ಭಯದಿಂದಾಗಿ ವ್ಯಾಧನು ಮಾಡಿದ ಯಜ್ಞದಲ್ಲಿಯೇ ಸೋಮಪಾನಮಾಡಲು ನೀನು ಹೋಗಲಿಲ್ಲವೇ, ಸುರೇಶ್ವರ! ವಿಶ್ವಾಮಿತ್ರರ ಪ್ರಭಾವದ ವಿಷಯವಾಗಿ ಮತ್ತೊಂದು ನಿದರ್ಶನವನ್ನೂ ಕೊಡುವೆನು ; ಕೇಳು. ಇವುಗಳಾವುವೂ ನಿನಗೆ ತಿಳಿಯದೇ ಇರತಕ್ಕ ವಿಷಯಗಳಲ್ಲ. ಹಿಂದೊಮ್ಮೆ ತ್ರಿಶಂಕುರಾಜನು ಗುರುಶಾಪಗ್ರಸ್ತ ನಾಗಿದ್ದನು. ಅವನು ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕೆಂದಾಶಿಸಿ ವಿಶ್ವಾ ಮಿತ್ರರ ಮರೆಹೊಕ್ಕನು. ತ್ರಿಶಂಕುವು ಗುರುಶಾಪದಿಂದ ದೂಷಿತನಾಗಿರುವ ವಿಷಯವು ವಿಶ್ವಾಮಿತ್ರರಿಗೆ ತಿಳಿದಿತ್ತು. ಆದರೂ ಮಹಾತಪಸ್ವಿಗಳಾದ ವಿಶ್ವಾ ಮಿತ್ರರು ತ್ರಿಶಂಕುವಿಗೆ ಅಭಯಪ್ರದಾನಮಾಡಿ ಅವನಿಂದ ಯಜ್ಞಮಾಡಿಸಿ ಸ್ವರ್ಗಕ್ಕೆ ಕಳುಹಿಸಿದರು. ನೀನವನನ್ನು ಸ್ವರ್ಗದಿಂದ ಕೆಳಕ್ಕೆ ತಳ್ಳಿಬಿಟ್ಟಾಗ ಕುಪಿತರಾದ ವಿಶ್ವಾಮಿತ್ರರು ತಮ್ಮ ತಪಃಪ್ರಭಾವದಿಂದ ಬೇರೆಯ ಸ್ವರ್ಗವನ್ನೇ ನಿರ್ಮಿಸಿದರು. ಶ್ರವಣನಕ್ಷತ್ರವನ್ನು ಮೊದಲುಮಾಡಿ ನಕ್ಷತ್ರಗಳ ರಾಶಿಯನ್ನೇ ಸೃಷ್ಟಿಸಿದರು. ಅವರ ಅನೇಕಸಾಹಸಕಾರ್ಯಗಳಲ್ಲಿ ಕೆಲವನ್ನು ಮಾತ್ರವೇ ನಾನಿಲ್ಲಿ ಉದಾಹರಿಸಿದ್ದೇನೆ. ಅಂತಹವರ ಬಳಿಗೆ ಅವರು ಮಾಡುತ್ತಿರುವ ತಪಸ್ಸಿಗೆ ವಿಘ್ನವುಂಟುಮಾಡಲು ನನ್ನನ್ನು ಹೋಗುವಂತೆ ಹೇಳುತ್ತಿರುವೆ. ಅವರ ವಿಷಯವಾಗಿ ನಿನ್ನ ಮನಸ್ಸಿನಲ್ಲಿರುವ ಭಯವು ನನ್ನ ಮನಸ್ಸಿ ನಲ್ಲಿಯೂ ಇರುವುದು. ಕ್ರುದ್ಧರಾದ ಅವರು ನನ್ನನ್ನು ಭಸ್ಮಮಾಡಿಬಿಡ ಕೂಡದು. ಆ ರೀತಿಯಲ್ಲಿ ನನಗೆ ಆಜ್ಞಾಪಿಸು. ಅವರು ತಮ್ಮ ತಪಃಶಕ್ತಿ ಯಿಂದ ಸಾಧಿಸಲಾಗದ ಕಾರ್ಯವೇ ಇಲ್ಲ. ತಮ್ಮ ಅಪಾರವಾದ ತೇಜಸ್ಸಿ

ನಿಂದ ಸಕಲಲೋಕಗಳನ್ನೂ ಕ್ಷಣಮಾತ್ರದಲ್ಲಿ ಭಸ್ಮಮಾಡಿಬಿಡಬಲ್ಲರು. ಕಾಲಿನಿಂದ ಮೆಟ್ಟಿ ಈ ಭೂಮಿಯನ್ನೇ ಕಂಪನಗೊಳಿಸಬಲ್ಲರು. ಮಹಾಮೇರುವನ್ನು ತಮ್ಮ ತಪಃಶಕ್ತಿಯಿಂದ ಸಣ್ಣದೊಂದು ಗುಡ್ಡವನ್ನಾಗಿ ಮಾಡಿಬಿಡಬಲ್ಲರು. ಈ ನಾಲ್ಕು ದಿಕ್ಕುಗಳನ್ನೂ ಹತ್ತಾರುಬಾರಿ ತಮ್ಮ ತಪಃಶಕ್ತಿಯಿಂದ ತಿರುಗಿಸಬಲ್ಲರು. ಅಂತಹ ತಪಃಶಕ್ತಿಯನ್ನು ಪಡೆದಿರುವ, ಯಜ್ಞೇಶ್ವರನಂತೆ ಸರ್ವದಾ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿರುವ, ಜಿತೇಂದ್ರಿಯರಾದ ವಿಶ್ವಾಮಿತ್ರರನ್ನು ನಮ್ಮಂತಹ ಸ್ತ್ರೀಯರು ಸ್ಪರ್ಶಿಸಲು ತಾನೇ ಸಮರ್ಥರಾಗುವೆವೇ? ದೇವದೇವನೇ! ವಿಶ್ವಾಮಿತ್ರರ ಮುಖವು ಯಜ್ಞೇಶ್ವರನಂತೆ ಸರ್ವದಾ ತೇಜಸ್ಸಿನಿಂದ ಧಗ-ಧಗಿಸುತ್ತಿರುತ್ತದೆ. ಅವರ ಕಣ್ಣುಗಳಾದರೋ ಸೂರ್ಯ-ಚಂದ್ರರಂತೆ ಥಳ-ಥಳನೆ ಹೊಳೆಯುತ್ತಿರುತ್ತವೆ. ಅವರ ನಾಲಿಗೆಯು ಕಾಲನಿಗೆ ಸಮಾನವಾಗಿದೆ. ಅಂತಹವರನ್ನು ನಮ್ಮಂತಹವರು ಹೇಗೆ ತಾನೇ ಸ್ಪರ್ಶಿಸಲು ಸಮರ್ಥರಾಗುತ್ತಾರೆ?

ಯಮ, ಸೋಮ, ಮಹರ್ಷಿಗಳು, ಸಾಧ್ಯರು, ವಿಶ್ವೇದೇವತೆಗಳು, ವಾಲಖಿಲ್ಯರು–ಇವರುಗಳೂ ಕೂಡ ವಿಶ್ವಾಮಿತ್ರರ ವಿಷಯದಲ್ಲಿ ಭೀತ-ಭೀತರಾಗಿರುತ್ತಾರೆ. ಹೀಗಿರುವಾಗ ನಮ್ಮಂತಹವರು ಹೇಗೆ ತಾನೇ ಭಯಪಡದಿರಲು ಸಾಧ್ಯ?

ಆದರೆ ನಿನ್ನ ಸೇವಕಳಾಗಿರುವ ನಾನು ನಿನ್ನ ಆಜ್ಞೆಯನ್ನು ಪರಿಪಾಲಿಸಬೇಕು. ನೀನು ಮಹರ್ಷಿಯ ಸಮೀಪಕ್ಕೆ ಹೋಗುವಂತೆ ಆಜ್ಞೆಮಾಡಿದ ಮೇಲೆ ನಾನು ಹೋಗುವುದಿಲ್ಲವೆಂದು ಹೇಗೆತಾನೇ ಹೇಳಲಿ? ಹೋಗಿಯೇ ಹೋಗುತ್ತೇನೆ. ಆದರೆ ನನ್ನ ರಕ್ಷಣೆಯ ವಿಷಯವನ್ನು ಚಿಂತಿಸು. ನಿನ್ನ ಸಲುವಾಗಿ ಅಲ್ಲಿಗೆ ಹೋಗಲಿರುವ ನಾನು ಯಾವ ವಿಧವಾದ ಅಪಾಯಕ್ಕೂ ಒಳಗಾಗದೇ ಅವರ ಸಮೀಪದಲ್ಲಿ ಸಂಚರಿಸುವಂತಾಗಬೇಕು. ಇದಕ್ಕೆ ತಕ್ಕ ಉಪಾಯವನ್ನು ಯೋಚಿಸು, ದೇವರಾಜ! ನಾನು ಪ್ರಾರ್ಥಿಸುವ ಈ ಸಹಾಯಸಂಪತ್ತುಗಳನ್ನೂ ಒದಗಿಸಿಕೊಡು. ದೇವೇಂದ್ರ! ನಾನು ಮಹರ್ಷಿಗಳ ಸಮೀಪಕ್ಕೆ ಹೋಗಿ ಸ್ವೇಚ್ಛೆಯಿಂದ ನರ್ತಿಸುವಾಗ ಸಮಯ ನೋಡಿ ಮಾರುತನು ನನ್ನ ವಸ್ತ್ರಗಳನ್ನು ಮೇಲಕ್ಕೆ ಹಾರಿಸಲಿ. ನನ್ನ ಸಹಾಯಕ್ಕೆ ನೀನು ಮನ್ಮಥನನ್ನೂ ಕಳುಹಿಸಬೇಕು. ಮಾರುತನು ಸೀರೆಯನ್ನು ಹಾರಿಸಿದಾಗ

ಮನ್ಮಥನು ವಿಶ್ವಾಮಿತ್ರರ ಮೇಲೆ ಪುಷ್ಪಬಾಣಗಳನ್ನು ಪ್ರಯೋಗಿಸಿದರೆ ನಮ್ಮ ಕಾರ್ಯದ ಸಿದ್ಧಿಯಾದರೂ ಆಗಬಹುದು. ನಾನೊಬ್ಬಳೇ ನನ್ನ ಸೌಂದರ್ಯ ದಿಂದ ಮಹರ್ಷಿಗಳನ್ನು ಪ್ರಲೋಭಿಸುವ ಸಾಧ್ಯತೆಯಿಲ್ಲ. ಇದಕ್ಕೆ ಅನುಕೂಲವಾದ ವಾತಾವರಣವು ಅತ್ಯಾವಶ್ಯಕ. ಮಹರ್ಷಿಗಳನ್ನು ನಾನು ನನ್ನ ಸೌಂದರ್ಯದಿಂದಲೂ ಹಾವ-ಭಾವಗಳಿಂದಲೂ ಪ್ರಲೋಭನಮಾಡು ತ್ತಿರುವಾಗ ಮಾರುತನು ವನಕುಸುಮಗಳ ಮೇಲೆ ಬೀಸಿ ಸುಗಂಧವನ್ನು ಹೊತ್ತುತಂದು ವಿಶ್ವಾಮಿತ್ರರು ತಪಸ್ಸುಮಾಡುತ್ತಿರುವ ಪ್ರದೇಶವನ್ನೆಲ್ಲಾ ಸುವಾಸಿತವನ್ನಾಗಿ ಮಾಡಲಿ."

ಕಣ್ವರು ಮುಂದುವರಿದು ಹೇಳಿದರು : "ಮೇನಕೆಯು ಹೇಳಿದ ಮಾತಿಗೆ ಇಂದ್ರನು '**ತಥಾಸ್ತು**' ಎಂದು ಹೇಳಿ ಮೇನಕೆಯು ಅಪೇಕ್ಷಿಸಿದು ದೆಲ್ಲವನ್ನೂ ಸಿದ್ಧಗೊಳಿಸಿಕೊಟ್ಟು ಹೊರಟುಹೋದನು. ಮೇನಕೆಯು ವಿಶ್ವಾಮಿತ್ರ ಮಹರ್ಷಿಯ ತಪೋವನದತ್ತ ಧಾವಿಸಿದಳು."

ಎ೧ನೆಯ ಅಧ್ಯಾಯವು ಮುಗಿಯಿತು.

೭೨ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಮೇನಕಾ-ವಿಶ್ವಾಮಿತ್ರರ ಸಮಾಗಮ : ಕನ್ಯೋತ್ಪತ್ತಿ : ಪಕ್ಷಿಗಳಿಂದ ಶಿಶುವಿನ ರಕ್ಷಣೆ: ಕಣ್ವರು ಆ ಶಿಶುವನ್ನು ಕರೆತಂದು ಶಕುಂತಲಾ ಎಂದು ನಾಮಕರಣಮಾಡಿದುದು

"ಮಹಾರಾಜ! ನನ್ನ ತಂದೆಯವರು ಮುಂದುವರಿದು ಮಹರ್ಷಿ ಯೊಡನೆ ಹೇಳಿದರು :

"ಮೇನಕೆಯು ಹೇಳಿದಂತೆ ಇಂದ್ರನು ಅವಳೊಡನೆ ವಿಶ್ವಾಮಿತ್ರನ ತಪೋಭೂಮಿಗೆ ಹೋಗಲು ವಾಯುದೇವನಿಗೆ ಹೇಳಿದನು. ಮೇನಕೆಯು ವಾಯುದೇವನೊಡನೆ ವಿಶ್ವಾಮಿತ್ರನ ತಪೋಭೂಮಿಗೆ ತೆರಳಿದಳು. ಭಯ ಗ್ರಸ್ತಳಾದ ಮೇನಕೆಯು ಆಶ್ರಮದಲ್ಲಿ ತಪಸ್ಸುಮಾಡುತ್ತಿದ್ದ ಪಾಪರಹಿತನಾದ ವಿಶ್ವಾಮಿತ್ರನನ್ನು ನೋಡಿದಳು. ಮೊದಲು ಮಹರ್ಷಿಗೆ ನಮಸ್ಕರಿಸಿ, ಅನಂತರದಲ್ಲಿ ಮಹರ್ಷಿಯ ಸಮ್ಮುಖದಲ್ಲಿ ನಾಟ್ಯವಾಡಲು ಉಪಕ್ರಮಿ

ಸಿದಳು. ನಯನಮನೋಹರವಾದ ಭಂಗಿಯಲ್ಲಿ ಮೇನಕೆಯು ನರ್ತಿಸು ತ್ತಿದ್ದಾಗ ಬೆಳದಿಂಗಳಿನಂತೆ ಶುಭ್ರವಾಗಿದ್ದ ಅವಳ ಸೀರೆಯನ್ನು ವಾಯು ದೇವನು ಹಾರಿಸಿಬಿಟ್ಟನು. ವಾಯುವಿನ ಪ್ರಭಾವದಿಂದ ಆ ವಸ್ತ್ರವು ಸ್ವಲ್ಪ ದೂರದಲ್ಲಿ ಹೋಗಿ ಬಿದ್ದಿತು. ಮೇನಕೆಯು ಸ್ತ್ರೀಸಹಜವಾದ ನಾಚಿಕೆಯನ್ನು ವ್ಯಕ್ತಪಡಿಸುತ್ತಾ, ಮಾರುತನು ಮಾಡಿದ ಕಾರ್ಯಕ್ಕಾಗಿ ಹುಸಿನಗೆಯನ್ನು ಬೀರುತ್ತಾ, ವಸ್ತ್ರವನ್ನು ತೆಗೆದುಕೊಳ್ಳಲು ಅದು ಬಿದ್ದಿದ್ದ ಕಡೆಗೆ ಶೀಘ್ರವಾಗಿ ಧಾವಿಸಿದಳು. ಇತ್ತಲಾಗಿ ಮನ್ಮಥನು ಸಮಯವರಿತು ಮಹರ್ಷಿಯ ಮೇಲೆ ಪುಷ್ಪಬಾಣಗಳನ್ನು ಪ್ರಯೋಗಿಸಿದನು.

ವಿಶ್ವಾಮಿತ್ರನೇನೋ ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಪ್ರಜ್ವಲಿಸು ತ್ತಿದ್ದುದು ನಿಜ. ಆದರೆ ಬಹುಸಂದಿಗ್ಧಸ್ಥಿತಿಯಲ್ಲಿದ್ದ, ವಸ್ತ್ರಕ್ಕಾಗಿ ಜಿಂಕೆಯಂತೆ ಅತ್ತಿತ್ತ ಓಡಾಡುತ್ತಿದ್ದ, ಭ್ರಾಂತಳಾಗಿದ್ದ, ಅತ್ಯದ್ಭುತವಾದ ರೂಪ-ಲಾವಣ್ಯ ಗಳಿಂದಲೂ–ಯೌವನದಿಂದಲೂ ಕೂಡಿದ್ದ, ನಗ್ನಳಾಗಿದ್ದ ಮೇನಕೆಯನ್ನು ನೋಡಿ ಸುಗಂಧಿತವಾದ ವಾತಾವರಣದ ಸಂಸರ್ಗದಿಂದಲೂ–ಕಾಮ ದೇವನ ಬಾಣಪ್ರಯೋಗದಿಂದಲೂ ವಿಶ್ವಾಮಿತ್ರಮಹರ್ಷಿಯು ಕಾಮಪರ ವಶನಾದನು. ಕಾಮಾಧೀನನಾದ ವಿಶ್ವಾಮಿತ್ರನು ಮೇನಕೆಯನ್ನು ತನ್ನ ಹತ್ತಿರಕ್ಕೆ ಕರೆದನು. ಮೇನಕೆಯು ಒಲಿದು ವಿಶ್ವಾಮಿತ್ರನ ಬಳಿಗೆ ಹೋದಳು. ಅನೇಕದಿನಗಳವರೆಗೆ ವಿಶ್ವಾಮಿತ್ರ-ಮೇನಕೆಯರು ಸುಖದಿಂದ ಕಾಲಕಳೆದರು. ಮಹರ್ಷಿಗೆ ಮೇನಕೆಯಲ್ಲಿ ಒಬ್ಬ ಮಗಳು ಹುಟ್ಟಿದಳು. ಹಿಮವತ್ಪರ್ವತದ ತಪ್ಪಲಿನಲ್ಲಿ ಮಾಲಿನೀನದಿಯ ಸಮೀಪದಲ್ಲಿ ಮೇನಕೆಯು ಹೆಣ್ಣುಮಗುವಿಗೆ ಜನ್ಮವಿತ್ತು, ಕೃತಕೃತ್ಯಳಾಗಿ ಇಂದ್ರನ ಸಮೀಪಕ್ಕೆ ಹೊರಟುಹೋದಳು. ವಿಶ್ವಾಮಿತ್ರನೂ ತಾನು ಮಾಡಿದ ಕಾರ್ಯಕ್ಕೆ ಪಶ್ಚಾತ್ತಾಪಪಟ್ಟು ಪುನಃ ತಪಸ್ಸಿಗೆ ಹೊರಟುಹೋದನು. ಸಿಂಹ-ವ್ಯಾಘ್ರಗಳಿಂದ ಆವೃತವಾಗಿದ್ದ, ನಿರ್ಜನವಾಗಿದ್ದ ಸ್ಥಳದಲ್ಲಿ ಶಿಶುವು ಮಲಗಿರುವುದನ್ನು ಕಂಡು, ಮಾಂಸಾ ಹಾರಿಗಳಾದ ಮೃಗಗಳು ಆ ಶಿಶುವನ್ನು ಹಿಂಸೆಮಾಡದಿರಲೆಂಬ ಆಶಯದಿಂದ ಪಕ್ಷಿಗಳು ರೆಕ್ಕೆಗಳಿಂದ ಮಗುವಿನ ಸುತ್ತಲೂ ಆವರಣವನ್ನು ಮಾಡಿ ಜೋಪಾನವಾಗಿ ಸಂರಕ್ಷಿಸುತ್ತಿದ್ದುವು. ಆ ಸಮಯಕ್ಕೆ ಸರಿಯಾಗಿ ನಾನು ಉಪಸ್ಪರ್ಶನ (ಸ್ನಾನ) ಮಾಡಲು ಮಾಲಿನೀನದಿಯ ಸಮೀಪಕ್ಕೆ ಹೋದೆನು.

ನಿರ್ಜನವಾದ ಮತ್ತು ರಮ್ಯವಾದ ಆ ಅರಣ್ಯದಲ್ಲಿ ಪಕ್ಷಿಗಳಿಂದ ಸಂರಕ್ಷಿತ ವಾಗಿದ್ದ ಹೆಣ್ಣುಮಗುವನ್ನು ಕಂಡೆನು. ಆ ಸ್ತ್ರೀಶಿಶುವನ್ನು ಕರೆತಂದು ನನ್ನ ಮಗಳೆಂದೇ ಭಾವಿಸಿ ಸಂರಕ್ಷಿಸಿದೆನು.

**ಶರೀರಕೃತ್ಪ್ರಾಣದಾತಾ ಯಸ್ಯ ಚಾನ್ನಾನಿ ಭುಞ್ಜತೇ ।**
**ಕ್ರಮೇಣೈತೇ ತ್ರಯೋಽಪ್ಯುಕ್ತಾಃ ಪಿತರೋ ಧರ್ಮಶಾಸನೇ ॥೧೫॥**

ಗರ್ಭಾಧಾನದ ಮೂಲಕವಾಗಿ ಶರೀರಕ್ಕೆ ಕಾರಣನಾದವನು, ಪ್ರಾಣಾ ಪಾಯಸಮಯದಲ್ಲಿ ಸಂರಕ್ಷಿಸುವವನು, ಅನ್ನಕೊಟ್ಟು ಪೋಷಣೆಮಾಡು ವವನು–ಈ ಮೂವರೂ ಪಿತೃಗಳಾಗುವರೆಂದು ಧರ್ಮಶಾಸ್ತ್ರದಲ್ಲಿ ಹೇಳಿದೆ. ( ಆದುದರಿಂದ ವಿಶ್ವಾಮಿತ್ರ, ಪಕ್ಷಿಗಳು ಮತ್ತು ನಾನು (ಕಣ್ವ ) ಈ ಮೂವರೂ ಶಕುಂತಲೆಯ ಪಿತೃಸ್ಥಾನದಲ್ಲಿದ್ದೇವೆ. )

ಶಕುಂತಗಳು ( ಪಕ್ಷಿಗಳು ) ಮಾಡಿದ ಉಪಕಾರವನ್ನು ಸ್ಮರಿಸುವ ಸಲುವಾಗಿ ನನ್ನ ಮಗಳಿಗೆ ಶಕುಂತಲೆಯೆಂದೇ ನಾಮಕರಣವನ್ನು ಮಾಡಿ ದೆನು.

**ನಿರ್ಜನೇ ತು ವನೇ ಯಸ್ಮಾಚ್ಛಕುನ್ತೈಃ ಪರಿವಾರಿತಾ ।**
**ಶಕುನ್ತಲೇತಿ ನಾಮಾಸ್ಯಾಃ ಕೃತಂ ಚಾಪಿ ತತೋ ಮಯಾ ॥೧೬॥**

ನಿರ್ಜನವಾದ ವನಪ್ರದೇಶದಲ್ಲಿ ಶಕುಂತಗಳು (ಪಕ್ಷಿಗಳು) ಆ ಹೆಣ್ಣು ಮಗುವಿಗೆ ಯಾವ ವಿಧವಾದ ಅಪಾಯವೂ ಉಂಟಾಗದ ರೀತಿಯಲ್ಲಿ ಆವರಣಮಾಡಿ ಸಂರಕ್ಷಿಸಿದುವು. ಆದುದರಿಂದ ನಾನು ಶಿಶುವಿಗೆ 'ಶಕುಂತಲಾ' ಎಂದೇ ನಾಮಕರಣಮಾಡಿದೆನು. ಬ್ರಾಹ್ಮಣೋತ್ತಮನೇ! ಈ ರೀತಿಯಲ್ಲಿ ಶಕುಂತಲೆಯು ನನ್ನ ಮಗಳಾದಳು. ನಿಷ್ಕಳಂಕಳಾದ ಶಕುಂತಲೆಯೂ ನನ್ನನ್ನು ನಿಜವಾದ ತಂದೆಯೆಂದೇ ಭಾವಿಸಿದ್ದಾಳೆ."

ಎಂದು ಹೇಳಿ ನಮ್ಮ ತಂದೆಯವರು ಮಹರ್ಷಿಯನ್ನು ಕಳುಹಿಸಿ ಕೊಟ್ಟರು.

ಮಹಾರಾಜ! ನನ್ನ ಜನ್ಮವೃತ್ತಾಂತವನ್ನು ಕೇಳಿದ ಮಹರ್ಷಿಗೆ ನನ್ನ

ತಂದೆಯವರು ಹೇಳಿದ ನನ್ನ ಜನ್ಮಕಥೆಯಿದು. ಅವರು ಯಾವ ರೀತಿಯಲ್ಲಿ ಮಹರ್ಷಿಗೆ ನನ್ನ ಜನ್ಮಕಥೆಯನ್ನು ಹೇಳಿದರೋ–ಅದೇ ರೀತಿಯಲ್ಲಿಯೇ ನಾನೂ ನನ್ನ ಜನ್ಮಕಥೆಯನ್ನು ನಿನ್ನ ಮುಂದಿಟ್ಟಿದ್ದೇನೆ. ಈ ಕಾರಣದಿಂದ ನಾನು ಕಣ್ವರ ಮಗಳಾಗಿರುವೆನು. ನನಗೆ ನನ್ನ ನಿಜವಾದ ತಂದೆಯು ಯಾರೆಂಬುದೇ ಬಹುಕಾಲ ತಿಳಿದಿರಲಿಲ್ಲ."

೭೨ನೆಯ ಅಧ್ಯಾಯವು ಮುಗಿಯಿತು.

೭೩ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಶಕುಂತಲಾ-ದುಷ್ಯಂತರ ಗಾಂಧರ್ವವಿವಾಹ : ಕಣ್ವರಿಂದ ಅನುಮೋದನೆ

"ಶಕುಂತಲೆಯ ಜನ್ಮವೃತ್ತಾಂತವನ್ನು ಕೇಳಿದನಂತರ ದುಷ್ಯಂತನಿಗೆ ತಾನು ಶಕುಂತಲೆಯನ್ನು ಪತ್ನಿಯನ್ನಾಗಿ ಪರಿಗ್ರಹಿಸುವುದು ಅಧರ್ಮವೆನಿಸ ಲಿಲ್ಲ. ವಿಶ್ವಾಮಿತ್ರರಾಜನ ಮಗಳು ನಿಶ್ಚಯವಾಗಿಯೂ ಕ್ಷತ್ರಿಯಕನ್ಯೆಯೇ ಅಲ್ಲವೇ? ದುಷ್ಯಂತನು ಶಕುಂತಲೆಗೆ ಹೇಳಿದನು :

**ಸುವ್ಯಕ್ತಂ ರಾಜಪುತ್ರೀ ತ್ವಂ ಯಥಾ ಕಲ್ಯಾಣಿ ಭಾಷಸೇ ।**
**ಭಾರ್ಯಾ ಮೇ ಭವ ಸುಶ್ರೋಣಿ ಬ್ರೂಹಿ ಕಿಂ ಕರವಾಣಿ ತೇ ॥೧॥**

"ಕಲ್ಯಾಣಿ! ನೀನು ಹೇಳಿದ ಆತ್ಮಕಥೆಯಿಂದಾಗಿ ನೀನು ರಾಜಪುತ್ರೀ ಎಂಬುದು ಸುವ್ಯಕ್ತವಾಯಿತು. ನೀನು ನನ್ನ ಭಾರ್ಯೆಯಾಗಲು ಅರ್ಹ ಳಾಗಿರುವೆ. ನಿನ್ನನ್ನು ನಾನು ನನ್ನ ಧರ್ಮಪತ್ನಿಯನ್ನಾಗಿ ಪರಿಗ್ರಹಿಸಲು ಅಪೇಕ್ಷಿಸುತ್ತೇನೆ. ಇದಕ್ಕಾಗಿ ನಾನು ಏನು ಮಾಡಬೇಕೆಂಬುದನ್ನು ಹೇಳು.

ನಯನಮನೋಹರವಾದ ಸುವರ್ಣಮಾಲೆಗಳು, ಅಮೂಲ್ಯವಸ್ತ್ರ ಗಳು, ಸ್ವರ್ಣಮಯವಾದ ಕರ್ಣಕುಂಡಲಗಳು, ನಾನಾದೇಶಗಳಲ್ಲಿ ಸಿಕ್ಕುವ ಶುಭ್ರವಾದ ಮಣಿರತ್ನಗಳು, ಸುವರ್ಣನಾಣ್ಯಗಳು, ಮೃಗಚರ್ಮಗಳು–ಇವು ಗಳೆಲ್ಲವನ್ನೂ ಈಗಲೇ ನಿನಗಾಗಿ ತರುತ್ತೇನೆ. ನನ್ನ ರಾಜ್ಯದ ಸರ್ವಸಂಪತ್ತೂ ನಿನ್ನದೇ ಆಗಲಿ. ದೇವಿ! ನೀನು ನನ್ನ ಭಾರ್ಯೆಯಾಗು. ವಿವಾಹಮಾಡಿ

ಕೊಳ್ಳುವುದು ಹೇಗೆ? ಎಲ್ಲಿ? ಯಾರು ಮಾಡಿಕೊಡುತ್ತಾರೆ? ಎಂಬುದಾವುದನ್ನೂ ನೀನು ಯೋಚಿಸಬೇಕಾಗಿಲ್ಲ. ಸುಂದರಿ! ಗಾಂಧರ್ವ ವಿವಾಹದ ಮೂಲಕವಾಗಿ ನನ್ನನ್ನು ನೀನು ವರಿಸುವವಳಾಗು.

**ವಿವಾಹಾನಾಂ ಹಿ ರಮ್ಭೋರು ಗಾನ್ಧರ್ವಃ ಶ್ರೇಷ್ಠ ಉಚ್ಯತೇ ॥೪॥**

ವಿವಾಹಗಳಲ್ಲಿ ಗಾಂಧರ್ವವಿವಾಹವೇ ಶ್ರೇಷ್ಠವಾದುದೆಂದು ಹೇಳಲ್ಪಟ್ಟಿರುವುದು."

ಶಕುಂತಲೆಯು ಹೇಳುತ್ತಾಳೆ :

"ಮಹಾರಾಜ! ನೀನು ನನ್ನನ್ನು ಭಾರ್ಯೆಯನ್ನಾಗಿ ವರಿಸಲಿಚ್ಛಿಸುವುದಾದರೆ ನಮ್ಮ ತಂದೆಯವರೂ ಅದಕ್ಕೆ ಸಮ್ಮತಿಸಿಯೇ ಸಮ್ಮತಿಸುವರು. ಫಲಾದಿಗಳನ್ನು ತರುವ ಸಲುವಾಗಿ ಅವರು ಆಶ್ರಮದಿಂದ ಹೊರಗೆ ಹೋಗಿರುವರು. ಮುಹೂರ್ತಕಾಲ ಪ್ರತೀಕ್ಷೆಮಾಡು, ರಾಜೇಂದ್ರ! ಅವರು ಬಂದೊಡನೆಯೇ ನಿನಗೆ ನನ್ನನ್ನು ಕೊಟ್ಟು ವಿಧ್ಯುಕ್ತವಾಗಿ ವಿವಾಹ ಮಾಡುವರು."

ದುಷ್ಯಂತನು ಹೇಳುತ್ತಾನೆ :

"ವರಾರೋಹೇ! ನಿನ್ನ ಶೀಲ-ಸ್ವಭಾವಗಳು ಪ್ರಶಂಸನೀಯವಾಗಿವೆ. ನಿನ್ನ ವಿವಾಹದ ವಿಷಯವನ್ನು ನೀನೇ ನಿರ್ಧರಿಸಬೇಕೆಂಬುದು ನನ್ನ ಅಭಿಪ್ರಾಯವಾಗಿದೆ. ನಾನು ನಿನ್ನ ಸಲುವಾಗಿಯೇ ಇಲ್ಲಿಗೆ ಬಂದಿರುವೆನು ಮತ್ತು ನಿನ್ನಲ್ಲಿಯೇ ನನ್ನ ಮನಸ್ಸು ಐಕ್ಯವಾಗಿಹೋಗಿದೆ."

ದುಷ್ಯಂತನು ಮುಂದುವರಿದು ಹೇಳುತ್ತಾನೆ :

*** ಆತ್ಮನೋ ಬನ್ಧುರಾತ್ಮೈವ ಗತಿರಾತ್ಮೈವ ಚಾತ್ಮನಃ ।**

---

* ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬನ್ಧುರಾತ್ಮೈವ ರಿಪುರಾತ್ಮನಃ ॥೫॥
ಬನ್ಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥೬॥
(ಗೀತಾ, ಅಧ್ಯಾಯ ೬)

'ಮನುಷ್ಯನು ಸಂಸಾರಸಾಗರದಲ್ಲಿ ಮುಳುಗಿದ ತನ್ನನ್ನು ತಾನೇ ಮೇಲೆತ್ತಿ ಯೋಗಾ

**ಆತ್ಮನೋ ಮಿತ್ರಮಾತ್ಮೈವ ತಥಾತ್ಮಾ ಚಾತ್ಮನಃ ಪಿತಾ ।**
**ಆತ್ಮನೈವಾತ್ಮನೋ ದಾನಂ ಕರ್ತುಮರ್ಹಸಿ ಧರ್ಮತಃ ॥೭॥**

ಬೇರೊಬ್ಬರನ್ನು ಅವಲಂಬಿಸದೇ ತನ್ನ ಅದೃಷ್ಟವನ್ನು ತಾನೇ ರೂಪಿಸಿಕೊಳ್ಳಬೇಕು. ನಮಗೆ ಬಂಧುಗಳು ನಾವೇ. ನಮ್ಮ ಆತ್ಮವೇ ನಮಗೆ ಗತಿ. ನಮ್ಮ ಆತ್ಮವೇ ನಮಗೆ ಮಿತ್ರ. ತಂದೆಯೂ ಸಹ ನಮ್ಮ ಆತ್ಮನೇ ಆಗಿದ್ದಾನೆ. ಆದುದರಿಂದ, ಶಕುಂತಲೇ! ಬೇರೆಯವರಿಂದ ದಾನಮಾಡಿಸಿಕೊಳ್ಳದೇ ನಿನ್ನನ್ನು ನೀನೇ ಸ್ವತಃ ಧರ್ಮದ ಮೂಲಕವಾಗಿ ಅರ್ಪಿಸಿಕೊಳ್ಳುವುದೇ ಸಾಧುವಾಗಿದೆ.

**ಅಷ್ಟಾವೇವ ಸಮಾಸೇನ ವಿವಾಹಾ ಧರ್ಮತಃ ಸ್ಮೃತಾಃ ।**
**ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ ॥೮॥**

**ಗಾನ್ಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮಃ ಸ್ಮೃತಃ ।**
**ತೇಷಾಂ ಧರ್ಮ್ಯಾನ್ಯಥಾಪೂರ್ವಂ ಮನುಃ**
**ಸ್ವಾಯಮ್ಭುವೋಽಬ್ರವೀತ್ ॥೯॥**

ಶಕುಂತಲೇ! ಧರ್ಮಶಾಸ್ತ್ರದ ದೃಷ್ಟಿಯಿಂದ ಎಂಟು ಪ್ರಕಾರವಾಗಿ ವಿವಾಹವಾಗುವ ಸಾಧ್ಯತೆಯಿದೆ. ವಸ್ತ್ರಾಭರಣಗಳಿಂದ ಅಲಂಕೃತೆಯಾದ ಕನ್ಯೆಯನ್ನು ಸ್ವಜಾತಿಯಲ್ಲಿ ಯೋಗ್ಯನಾದ ವರನನ್ನು ಹುಡುಕಿ ಪಾಣಿಗ್ರಹಣ

---

ರೂಢನಾಗಬೇಕು. ತನ್ನನ್ನು ಇನ್ನೂ ಸಂಸಾರದಲ್ಲಿ ಮುಳುಗಿಸಿಕೊಳ್ಳುತ್ತಾ ಹೋಗಬಾರದು. ತನಗೆ ತಾನೇ ಬಂಧುವು. ತನಗೆ ತಾನೇ ಶತ್ರುವು. ಯಾವ ಆತ್ಮನಿಂದ (ಮನಸ್ಸಿನಿಂದ) ಆತ್ಮವು (ಇಂದ್ರಿಯಸಂಘಾತರೂಪವಾದ ಮನಸ್ಸು ) ಜಯಿಸಲ್ಪಡುವುದೋ ಆ ಆತ್ಮವೇ ತನಗೆ ಬಂಧು. ಇಂದ್ರಿಯಗಳನ್ನು ಜಯಿಸದವನಿಗೆ ಆತ್ಮವು ಬಾಹ್ಯಶತ್ರುವಿನಂತೆ ಶತ್ರುವಾಗಿಯೇ ಇರುವುದು. ಇದು ಶ್ರೀಕೃಷ್ಣನು ಅರ್ಜುನನಿಗೆ ಗೀತೆಯಲ್ಲಿ ಮಾಡಿರುವ ಉಪದೇಶ.

ಆತ್ಮನೋ ಬನ್ಧುರಾತ್ಮೈವ-ದುಷ್ಯಂತನು ಹೇಳುವ ಮಾತು. ಆತ್ಮೈವ ಹ್ಯಾತ್ಮನೋ ಬನ್ಧುಃ – ಶ್ರೀಕೃಷ್ಣನು ಹೇಳುವ ಮಾತು. ಆತ್ಮಕ್ಕೆ ಆತ್ಮನೇ ಬಂಧು. ಅರ್ಥಾತ್ ತನಗೆ ತಾನೇ ಬಂಧು–ಎಂಬುದರಲ್ಲಿ ಇಬ್ಬರ ಅಭಿಪ್ರಾಯವೂ ಒಂದೇ ಆಗಿದೆ. ಆದರೆ ದುಷ್ಯಂತನದು ಪ್ರವೃತ್ತಿಮಾರ್ಗದ ಉಪದೇಶ. ಶ್ರೀಕೃಷ್ಣನದು ನಿವೃತ್ತಿಮಾರ್ಗದ ಉಪದೇಶ. ನಿನ್ನ ಆಗು-ಹೋಗುಗಳನ್ನು ನೀನೇ ಕಲ್ಪಿಸಿಕೊಳ್ಳಬೇಕೇ ಹೊರತು ನಿನ್ನ

ಮಾಡಿಕೊಡುವುದಕ್ಕೆ ಬ್ರಾಹ್ಮವಿವಾಹವೆಂದೂ, ದೇವತೆಗಳ ಸಂಬಂಧವಾದ ಯಜ್ಞಮಾಡಿ ಯಜ್ಞದ ಕೊನೆಯಲ್ಲಿ ಋತ್ವಿಜರಿಗೆ ಕನ್ಯೆಯನ್ನು ದಾನವಾಗಿ ಕೊಡುವುದಕ್ಕೆ ದೈವವಿವಾಹವೆಂದೂ, ವರನಿಂದ ಒಂದು ಹಸು ಅಥವಾ ಒಂದು ಎತ್ತನ್ನು ಕನ್ಯಾಶುಲ್ಕವನ್ನಾಗಿ ಪಡೆದು ಕನ್ಯಾದಾನಮಾಡುವುದಕ್ಕೆ ಆರ್ಷವಿವಾಹವೆಂದೂ, ವಧೂ-ವರರು ಜೊತೆಯಲ್ಲಿದ್ದು ಧರ್ಮಚಾರಿಗಳಾಗಿರಬೇಕೆಂಬ ಸಂಕಲ್ಪದಿಂದ ಕನ್ಯಾದಾನಮಾಡುವುದಕ್ಕೆ ಪ್ರಾಜಾಪತ್ಯವೆಂದೂ, ಕನ್ಯೆಗೆ ಇಷ್ಟು ಮೌಲ್ಯವೆಂಬುದನ್ನು ನಿರ್ಧರಿಸಿ ಅಷ್ಟು ಮೌಲ್ಯವನ್ನು ವಿಕ್ರಯ ರೂಪವಾಗಿ ಪಡೆದು ಮಾಡುವ ವಿವಾಹಕ್ಕೆ ಆಸುರವಿವಾಹವೆಂದೂ, ಯುವ-ಯುವತಿಯರು ಸ್ವೇಚ್ಛೆಯಿಂದ ಮಾಡಿಕೊಳ್ಳುವ ವಿವಾಹಕ್ಕೆ ಗಾಂಧರ್ವ ವಿವಾಹವೆಂದೂ, ಯುದ್ಧಮಾಡಿ ಕನ್ಯೆಯ ಬಂಧು-ಬಾಂಧವರನ್ನು ಸಂಹರಿಸಿ ಕನ್ಯೆಯೂ, ಅವಳ ತಂದೆ-ತಾಯಿಗಳೂ ಮತ್ತು ಅಣ್ಣ-ತಮ್ಮಂದಿರೂ ರೋದನ ಮಾಡುತ್ತಿರುವ ಸಮಯದಲ್ಲಿ ಕನ್ಯೆಯನ್ನು ಎತ್ತಿಕೊಂಡುಬಂದು ವಿವಾಹವಾಗುವುದಕ್ಕೆ ರಾಕ್ಷಸವಿವಾಹವೆಂದೂ, ಮನೆಯಲ್ಲಿ ಎಲ್ಲರೂ ಮಲಗಿರುವ ಸಮಯದಲ್ಲಿ ಅಥವಾ ಅಜಾಗರೂಕರಾಗಿರುವ ಸಮಯದಲ್ಲಿ ಕನ್ಯೆಯನ್ನು ಕದ್ದುಕೊಂಡು ಹೋಗಿ ವಿವಾಹವಾಗುವುದಕ್ಕೆ ಪೈಶಾಚವಿವಾಹ ವೆಂದೂ–ಸ್ವಾಯಂಭುವಮನುವು ಯಥಾಕ್ರಮವಾಗಿ ಮೇಲೆ ಹೇಳಿರುವಂತೆ ಹೇಳಿ, ಅವುಗಳಲ್ಲಿ ಯಾರಿಗೆ ಯಾವುದು ಧರ್ಮವೆಂಬುದನ್ನೂ ವಿವರಿಸಿ ಹೇಳಿದ್ದಾನೆ.

---

ಅದೃಷ್ಟದ ನಿರ್ಧಾರವನ್ನು ಮತ್ತೊಬ್ಬರಿಗೆ ಬಿಡಬಾರದು. ನಿನಗೆ ನೀನೇ ಬಂಧು, ನಿನಗೆ ನೀನೇ ಮಿತ್ರ, ನಿನಗೆ ನೀನೇ ತಂದೆ, ನಿನಗೆ ನೀನೇ ದಿಕ್ಕು. ಈಗ ಸಾರ್ವಭೌಮನಾದ ನಾನು ನಿನ್ನನ್ನು ಭಾರ್ಯೆಯನ್ನಾಗಿ ಪರಿಗ್ರಹಿಸಲು ಅಪೇಕ್ಷಿಸಿದ್ದೇನೆ. ಈ ಸಮಯದಲ್ಲಿ ತೆಗೆದುಕೊಳ್ಳಬೇಕಾದ ನಿರ್ಧಾರವನ್ನು ನೀನೇ ತೆಗೆದುಕೊಳ್ಳಬೇಕೇ ಹೊರತು ಬೇರೆಯವರ ನಿರ್ಧಾರಕ್ಕೆ ಬಿಡಬಾರದು. ಕಣ್ವರು ಒಪ್ಪಿದರಂತೂ ಸರಿ. ಒಪ್ಪದಿದ್ದರೆ ನೀನಾಗಲೀ–ನಾನಾಗಲೀ ಅವರ ಮಾತನ್ನು ತಿರಸ್ಕರಿಸಿ ನಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. ಆಗ ನಿನಗೆ ಈಗ ಒದಗಿಬಂದಿರುವ ಅದೃಷ್ಟವು ವ್ಯತ್ಯಾಸವಾಗಲೂಬಹುದು. ಈ ಕಾರಣಗಳಿಂದ ನಿನ್ನ ಹಿತವನ್ನು ನೀನೇ ನಿರ್ಧರಿಸಿ ಕಾರ್ಯಮಾಡುವುದು ಸರ್ವಥಾ ಯೋಗ್ಯವಾಗಿದೆ –ಎಂಬುದು ದುಷ್ಯಂತನ ಅಭಿಪ್ರಾಯವಾಗಿದೆ. ದುಷ್ಯಂತನು ಈ ಮಾತುಗಳನ್ನು ಧರ್ಮದ ಹಿನ್ನೆಲೆಯಲ್ಲಿಯೇ ಹೇಳಿದ್ದಾನೆ. **ಆತ್ಮನೈವಾತ್ಮನೋ ದಾನಂ ಕರ್ತುಮರ್ಹಸಿ ಧರ್ಮತಃ** ಧರ್ಮಕ್ಕೆ ವಿರೋಧವಾಗದಂತೆ ನಿನ್ನ ಆತ್ಮವನ್ನು ನನಗೆ ದಾನವಾಗಿ ಕೊಡಬಹುದು–ಎಂದು ಸ್ಪಷ್ಟವಾಗಿ ಹೇಳಿದ್ದಾನೆ.

**ಪ್ರಶಸ್ತಾಂಶ್ಚತುರಃ ಪೂರ್ವಾನ್ಬ್ರಾಹ್ಮಣಸ್ಯೋಪಧಾರಯ ।**
**ಷಡಾನುಪೂರ್ವ್ಯಾ ಕ್ಷತ್ರಸ್ಯ ವಿದ್ಧಿ ಧರ್ಮ್ಯಾನನಿನ್ದಿತೇ ॥೧೦॥**

ಅನಿಂದಿತಳೇ! ಸ್ವಾಯಂಭುವಮನುವು ಹೇಳಿರುವ ಎಂಟು ರೀತಿಯ ವಿವಾಹಗಳಲ್ಲಿ ಮೊದಲನೆಯ ನಾಲ್ಕು ವಿವಾಹಗಳು ಬ್ರಾಹ್ಮಣರಿಗೆ ಪ್ರಶಸ್ತವಾದುವುಗಳು. ಇದೇ ಕ್ರಮದಲ್ಲಿ ಕ್ಷತ್ರಿಯರಿಗೆ ಆರು ವಿಧವಾದ ವಿವಾಹಗಳು ಪ್ರಶಸ್ತವೆಂದು ಹೇಳಲ್ಪಟ್ಟಿವೆ. ಅರ್ಥಾತ್ ಬ್ರಾಹ್ಮಣರಿಗೆ ಬ್ರಾಹ್ಮ, ದೈವ, ಆರ್ಷ ಮತ್ತು ಪ್ರಾಜಾಪತ್ಯವಿವಾಹಗಳೂ–ಕ್ಷತ್ರಿಯನಿಗೆ ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವವಿವಾಹಗಳೂ ಉಕ್ತವಾಗಿವೆ.

**ರಾಜ್ಞಾಂ ತು ರಾಕ್ಷಸೋಽಪ್ಯುಕ್ತೋ**
**ವಿಟ್‌ಶೂದ್ರೇಷ್ವಾಸುರಃಸ್ಮೃತಃ ।**
**ಪಞ್ಚಾನಾಂ ತು ತ್ರಯೋ ಧರ್ಮ್ಯಾ**
**ಅಧರ್ಮ್ಯೌ ದ್ವೌ ಸ್ಮೃತಾವಿಹ ।**
**ಪೈಶಾಚ ಆಸುರಶ್ಚೈವ ನ ಕರ್ತವ್ಯೌ ಕದಾಚನ ॥೧೨॥**

ಕ್ಷತ್ರಿಯರಾಜರು ರಾಕ್ಷಸವಿವಾಹವನ್ನಾದರೂ ಮಾಡಿಕೊಳ್ಳಬಹುದೆನ್ನುವುದಕ್ಕೆ ಶಾಸ್ತ್ರಾಧಾರವಿದೆ. ವೈಶ್ಯ-ಶೂದ್ರರು ಆಸುರವಿವಾಹವನ್ನು ಮಾಡಿಕೊಳ್ಳಬಹುದು. ಅವರಿಗೆ ಕಡೆಯ ಐದು ರೀತಿಯ ವಿವಾಹಗಳಲ್ಲಿ ( ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚಗಳಲ್ಲಿ) ಮೊದಲನೆಯ ಮೂರು ವಿವಾಹಗಳು ಧರ್ಮಸಮ್ಮತವಾಗಿವೆ. ( ಆಸುರವಿವಾಹದ ವಿಷಯದಲ್ಲಿ ವಿಕಲ್ಪವೆಂದು ಭಾವಿಸಬಹುದು. ) ಆದರೆ ಕ್ಷತ್ರಿಯರಾದವರು ಪೈಶಾಚ ಮತ್ತು ಆಸುರ ವಿವಾಹಗಳನ್ನೆಂದಿಗೂ ಮಾಡಿಕೊಳ್ಳಬಾರದು. ಈ ವಿಧವಾದ ವಿಧಿಯನ್ನನುಸರಿಸಿ ವಿವಾಹವಾಗಬೇಕು. ಧರ್ಮದ ಮಾರ್ಗವೂ ಸಹ ಇದೇ ಆಗಿರುತ್ತದೆ.

**ಗಾನ್ಧರ್ವರಾಕ್ಷಸೌ ಕ್ಷತ್ರೇ ಧರ್ಮ್ಯೌ ತೌ ಮಾ ವಿಶಙ್ಕಿಥಾಃ ।**
**ಪೃಥಗ್ವಾ ಯದಿ ವಾ ಮಿಶ್ರೌ ಕರ್ತವ್ಯೌ ನಾತ್ರ ಸಂಶಯಃ ॥೧೦॥**

ಗಾಂಧರ್ವ ಅಥವಾ ರಾಕ್ಷಸವಿವಾಹವನ್ನು ಕ್ಷತ್ರಿಯರು ಮಾಡಿಕೊಳ್ಳಲು ಅವಕಾಶವಿದೆ. ಕ್ಷತ್ರಿಯರ ವಿಷಯದಲ್ಲಿ ಇದು ಅಧರ್ಮವೆನಿಸು

ವುದಿಲ್ಲ. ಈ ವಿಷಯದಲ್ಲಿ ನೀನು ಸ್ವಲ್ಪವಾದರೂ ಸಂಶಯಿಸುವ ಕಾರಣ ವಿಲ್ಲ. ಈ ಪದ್ಧತಿಗಳೆರಡನ್ನೂ ಸೇರಿಸಿಯಾದರೂ ವಿವಾಹವಾಗಬಹುದು. ಪ್ರತ್ಯೇಕವಾಗಿ ಗಾಂಧರ್ವರೀತಿಯಲ್ಲಿ ಅಥವಾ ರಾಕ್ಷಸರೀತಿಯಲ್ಲಾದರೂ ಕ್ಷತ್ರಿಯನು ವಿವಾಹವಾಗಬಹುದು.

ನಾವಿಬ್ಬರೂ ಗಾಂಧರ್ವರೀತಿಯ ವಿವಾಹಕ್ಕೆ ಯೋಗ್ಯರಾಗಿದ್ದೇವೆಂದು ನಾನು ಭಾವಿಸಿದ್ದೇನೆ. ಯುವ-ಯುವತಿಯರು ಪರಸ್ಪರವಾಗಿ ಮೆಚ್ಚಿಕೊಂಡು ವಿವಾಹವಾಗುವುದು ಗಾಂಧರ್ವವಿವಾಹದ ಪದ್ಧತಿ. ಶಕುಂತಲೇ! ಪ್ರಕೃತ ದಲ್ಲಿ, ನಾನು ನಿನ್ನ ವಿಷಯದಲ್ಲಿ ಅನುರಾಗವುಳ್ಳವನಾಗಿದ್ದೇನೆ. ನೀನೂ ಸಹ ನನ್ನನ್ನು ಪ್ರೇಮಿಸಿರುವೆಯೆಂದೂ ಭಾವಿಸಿದ್ದೇನೆ. ಆದುದರಿಂದ ನಮ್ಮಿಬ್ಬರಿಗೂ ಗಾಂಧರ್ವರೀತಿಯಲ್ಲಿ ವಿವಾಹವಾಗುವುದು ಸೂಕ್ತವಾಗಿದೆ. ಗಾಂಧರ್ವ ವಿವಾಹದ ಮೂಲಕವಾಗಿ ನೀನು ನನ್ನ ಭಾರ್ಯೆಯಾಗಲು ಅರ್ಹಳಾಗಿರುವೆ."

ಶಕುಂತಲೆಯು ಹೇಳುತ್ತಾಳೆ :

"ಮಹಾರಾಜ! ನೀನು ಹೇಳುವುದು ಧರ್ಮಮಾರ್ಗವಾಗಿದ್ದರೆ, ನನಗೆ ನನ್ನ ಆತ್ಮವೇ ಪ್ರಭು (ಒಡೆಯ) ಎಂಬುದು ನಿಶ್ಚಯವಾಗಿದ್ದರೆ–ನನ್ನ ಆತ್ಮವನ್ನು ಪ್ರದಾನಮಾಡುವೆನು. ಆದರೆ ಈ ಆತ್ಮಪ್ರದಾನದಲ್ಲಿ ಒಂದು ನಿಬಂಧನೆಯಿದೆ. ಆ ನಿಬಂಧನೆಯೇನೆಂಬುದನ್ನು ಕೇಳು :

**ಸತ್ಯಂ ಮೇ ಪ್ರತಿಜಾನೀಹಿ ಯಥಾ ವಕ್ಷ್ಯಾಮ್ಯಹಂ ರಹಃ ।**
**ಮಯಿ ಜಾಯೇತ ಯಃ ಪುತ್ರಃ ಸ ಭವೇತ್ತ್ವದನನ್ತರಃ ॥೧೬॥**

**ಯುವರಾಜೋ ಮಹಾರಾಜ ಸತ್ಯಮೇತದ್ಬ್ರವೀಮಿ ತೇ ।**
**ಯದ್ಯೇತದೇವಂ ದುಷ್ಯನ್ತ ಅಸ್ತು ಮೇ ಸಙ್ಗಮಸ್ತ್ವಯಾ ॥೧೭॥**

ನಿನ್ನೊಡನೆ ಏಕಾಂತದಲ್ಲಿ ಈಗ ನಾನು ಏನು ಹೇಳುವೆನೋ ಅದನ್ನು ನೀನು ಪೂರ್ಣಮಾಡಿಕೊಡುವುದಾಗಿ ಭಾಷೆಯನ್ನು ನೀಡಬೇಕು. ನಮ್ಮಿಬ್ಬರ ಸಮಾಗಮದ ಫಲವಾಗಿ ನನ್ನಲ್ಲಿ ಹುಟ್ಟುವ ಪುತ್ರನೇ ನಿನಗೆ ಉತ್ತರಾಧಿಕಾರಿ ಯಾಗಬೇಕು. ಅವನು ಯುವರಾಜನಾಗಬೇಕು. ಈ ನಿಬಂಧನೆಗೆ ನೀನು

ಒಪ್ಪಿ ನನ್ನ ಈ ಪ್ರಾರ್ಥನೆಯನ್ನು ನಡೆಸಿಕೊಡುವೆನೆಂದು ಪ್ರತಿಜ್ಞೆಮಾಡುವುದಾದರೆ ಮಾತ್ರವೇ ನಾನು ಗಾಂಧರ್ವವಿವಾಹಕ್ಕೆ ಒಪ್ಪಿ ನನ್ನ ಆತ್ಮವನ್ನು ನಿನಗೆ ಸಮರ್ಪಣೆ ಮಾಡುವೆನು. ನಿನ್ನೊಡನೆ ಸಮಾಗಮಕ್ಕೆ ಒಪ್ಪುವೆನು."

(ಪುರುಷನು ಕಾಮದಿಂದ ಉದ್ದೀಪ್ತನಾಗಿರುವಾಗ ಕಾಮಿನಿಯು ಏನೇ ಕೇಳಿದರೂ ಕೊಟ್ಟುಬಿಡುವುದಾಗಿ ಹೇಳುತ್ತಾನೆ. ಸಾಧ್ಯಾಸಾಧ್ಯತೆಯ ವಿಚಾರ ಮಾಡಲೂ ಹೋಗುವುದಿಲ್ಲ. ಇಂತಹ ಪ್ರತಿಜ್ಞೆಮಾಡಿದರೆ ಮುಂದೇನಾದೀತೆಂಬುದನ್ನು ನಿಮಿಷಕಾಲವಾದರೂ ತರ್ಕಿಸಲು ಯತ್ನಿಸುವುದಿಲ್ಲ. 'ಎಂದೋ! ಯಾವಾಗಲೋ! ನೋಡಿಕೊಳ್ಳೋಣ' ಎಂಬ ಧೋರಣೆಯೇ ಇರುತ್ತದೆ. ಕಾಲವು ಸನ್ನಿಹಿತವಾದಾಗ ದಶರಥನಂತೆ ನರಳಬೇಕಾಗುವುದು ಅಥವಾ ಕಾಮಕೇಳಿಯ ಸಮಯದಲ್ಲಿ ಸುಳ್ಳುಹೇಳಿದರೂ ದೋಷವಿಲ್ಲವೆಂಬ ನೀತಿವಾಕ್ಯದ ಮರೆಹೊಗಬೇಕಾಗುವುದು. ಆದರೂ ಪರಿಣಾಮವು ಯಾವುದಾದರೂ ರೀತಿಯಲ್ಲಿ ವೈಪರೀತ್ಯಕ್ಕೇ ತಿರುಗುವುದು. ವಿಚಾರ ಮಾಡದೆಯೇ ಕಾಮದಿಂದ ಉದ್ದೀಪ್ತನಾಗಿ ಶಕುಂತಲೆಯ ಪ್ರಾರ್ಥನೆಯನ್ನು ನಡೆಸಿಕೊಡುವೆನೆಂದು ಹೇಳಿದ ದುಷ್ಯಂತನೂ ಇದಕ್ಕೆ ಹೊರತಾಗಿಲ್ಲ. ವ್ಯಾಸರಿದನ್ನು ಸ್ಪಷ್ಟವಾಗಿಯೇ ಹೇಳಿದ್ದಾರೆ.)

**ಏವಮಸ್ತ್ವಿತಿ ತಾಂ ರಾಜಾ ಪ್ರತ್ಯುವಾಚಾವಿಚಾರಯನ್ ।**
**ಅಪಿ ಚ ತ್ವಾಂ ಹಿನೇಷ್ಯಾಮಿ ನಗರಂ ಸ್ವಂ ಶುಚಿಸ್ಮಿತೇ ॥೧೮॥**

ದುಷ್ಯಂತನು ಸ್ವಲ್ಪವೂ ವಿಚಾರಮಾಡದೆಯೇ ಶಕುಂತಲೆಯ ಪ್ರಾರ್ಥನೆಗೆ ಉತ್ತರವಾಗಿ–'ಏವಮಸ್ತು'–ಎಂದು ಉತ್ತರಿಸಿದನು. ಆ ಸಮಯದಲ್ಲಿ ಅವಳನ್ನು ಮತ್ತಷ್ಟು ಸಂತೋಷಗೊಳಿಸುವ ಇಚ್ಛೆಯಿಂದ ರಾಜನು ಮುಂದುವರಿದು ಹೇಳಿದನು :

"ಶುಭ್ರವಾದ ಮಂದಹಾಸವುಳ್ಳವಳೇ! ನೀನು ಕೇಳಿರುವುದನ್ನು ಖಂಡಿತವಾಗಿಯೂ ನಡೆಸಿಕೊಡುವೆನು. ಅದೂ ಅಲ್ಲದೇ ನಿನ್ನನ್ನು ನನ್ನ ಪಟ್ಟಣಕ್ಕೂ ಕರೆದೊಯ್ಯುವೆನು. ರೂಪ-ಲಾವಣ್ಯ-ಯೌವನಗಳಿಂದ ದೇವತೆಗಳಿಗೆ ಅನುರೂಪಳಾಗಿರುವ ನೀನು ಅರಮನೆಯ ಅಂತಃಪುರದಲ್ಲಿರಲು ಯೋಗ್ಯಳಾಗಿರುವೆಯಲ್ಲದೇ ಈ ಅರಣ್ಯದಲ್ಲಿ ಋಷಿಗಳ ಮಧ್ಯ

ದಲ್ಲಿರಲು ಖಂಡಿತವಾಗಿಯೂ ಅರ್ಹಳಲ್ಲ. ಆದುದರಿಂದ ಸತ್ಯವಾಗಿಯೂ ತಕ್ಕ ರೀತಿಯಲ್ಲಿ ನಿನ್ನನ್ನು ಕರೆದೊಯ್ಯುತ್ತೇನೆ. ಸತ್ಯವಾಗಿಯೂ ನಿನ್ನ ಮಗನಿಗೇ ಯುವರಾಜಪದವಿಯನ್ನು ಕೊಡುತ್ತೇನೆ."

ಗಾಂಧರ್ವರೀತಿಯಲ್ಲಿ ದುಷ್ಯಂತನು ಸನ್ಮಾರ್ಗವರ್ತಿನಿಯಾದ ಶಕುಂತಲೆಯ ಪಾಣಿಗ್ರಹಣಮಾಡಿದನು. ಏಕಾಂತದಲ್ಲಿಯೇ ಸ್ವಲ್ಪಕಾಲ ದಂಪತಿಗಳು ಸುಖವಾಗಿ ಕಾಲಕಳೆದರು. ದುಷ್ಯಂತನು ಶಕುಂತಲೆಯನ್ನು ಬಹುವಾಗಿ ನಂಬಿಸಿದನು. ಅವಳಿಗೆ ತನ್ನ ವಿಷಯದಲ್ಲಿ ಸ್ವಲ್ಪವಾದರೂ ಸಂಶಯವು ಹುಟ್ಟದಂತೆ ನಡೆದುಕೊಂಡನು. ತಾನು ಹೆಚ್ಚುಕಾಲ ಅಲ್ಲಿಯೇ ನಿಲ್ಲುವಂತಿರಲಿಲ್ಲ. ಆಶ್ರಮದ ಹೊರಭಾಗದಲ್ಲಿ ಚತುರಂಗಸೇನೆಯೂ ಮಂತ್ರಿ-ಪುರೋಹಿತರೂ ರಾಜನಿಗಾಗಿ ಕಾಯುತ್ತಿದ್ದರು. ಆದುದರಿಂದ ರಾಜನು ಶಕುಂತಲೆಯನ್ನು ಬಿಟ್ಟು ಹೊರಡುವುದು ಅನಿವಾರ್ಯವಾಯಿತು. ಹೊರಡುವಾಗ ಪುನಃ ಪುನಃ ಹೇಳಿದನು :

**ಪ್ರೇಷಯಿಷ್ಯೇ ತವಾರ್ಥಾಯ ವಾಹಿನೀಂ ಚತುರಙ್ಗಿಣೀಮ್ ।**
**ತಯಾ ತ್ವಾ ನಾಯಯಿಷ್ಯಾಮಿ ನಿವಾಸಂ ಸ್ವಂ ಶುಚಿಸ್ಮಿತೇ ॥೨೧॥**

"ಶುಚಿಸ್ಮಿತೇ! ನನ್ನ ಪಟ್ಟದರಸಿಯಾಗಿರುವ ನಿನ್ನನ್ನು ಸಾಧಾರಣ ರೀತಿಯಲ್ಲಿ ನನ್ನ ಪಟ್ಟಣಕ್ಕೆ ಕರೆದೊಯ್ಯುವೆನೇ? ಎಂದಿಗೂ ಇಲ್ಲ. ಮಹಾರಾಣಿಯಾದವಳಿಗೆ ಸಲ್ಲಬೇಕಾದ ಮರ್ಯಾದೆಗಳೆಲ್ಲವೂ ಸಾಂಗೋಪಾಂಗವಾಗಿ ಸಲ್ಲಲೇಬೇಕು. ನಾನು ಪಟ್ಟಣಕ್ಕೆ ಹೋದೊಡನೆಯೇ ತಳಿರು-ತೋರಣಗಳಿಂದ ಪಟ್ಟಣವನ್ನು ಅಲಂಕರಿಸುವಂತೆ ಆಜ್ಞಾಪಿಸಿ, ನಿನ್ನನ್ನು ಕರೆತರುವ ಸಲುವಾಗಿ ಮಂತ್ರಿ-ಪುರೋಹಿತರನ್ನು ಚತುರಂಗಬಲದೊಡನೆ ಕಳುಹಿಸುವೆನು. ಪಟ್ಟದಾನೆಯ ಮೇಲೆ ಅಥವಾ ದಿವ್ಯವಾದ ರಥದ ಮೇಲೆ ಕುಳಿತು ರಾಜಧಾನಿಗೆ ಬರುವ ನಿನ್ನನ್ನು ಆದರದಿಂದ ನನ್ನ ಬಂಧು-ಮಿತ್ರರೊಡನೆ ಸ್ವಾಗತಿಸಿ, ಅರಮನೆಯೊಳಕ್ಕೆ ಕರೆದುಕೊಂಡು ಹೋಗುತ್ತೇನೆ." ಹೀಗೆ ಆಕೆಗೆ ಭರವಸೆಕೊಟ್ಟು ರಾಜನು ಹೊರಟುಬಿಟ್ಟನು.

ಶಕುಂತಲೆಯೊಡನೆ ಸುಮಧುರವಾದ ಮಾತುಗಳನ್ನಾಡಿ ತನ್ನ ಮನಸ್ಸಿನ ಕಾಮನೆಯನ್ನು ಪೂರೈಸಿಕೊಂಡರೂ ದುಷ್ಯಂತನ ಮನಸ್ಸಿನಲ್ಲಿ

ಕಣ್ವಮಹರ್ಷಿಗಳ ವಿಷಯವಾಗಿ ಭಯವಿದ್ದೇ ಇದ್ದಿತು. ಮಹಾತಪಸ್ವಿಗಳಾದ ಕಣ್ವರು ಗಾಂಧರ್ವವಿವಾಹದ ವಾರ್ತೆಯನ್ನು ಕೇಳಿದೊಡನೆಯೇ ಏನು ಮಾಡಬಹುದು? ಸೌಜನ್ಯವನ್ನು ತೋರುವರೇ? ಅಥವಾ ಕುಪಿತರಾಗಿ ಬಿಡುವರೋ?–ಹೀಗೆ ಚಿಂತಿಸುತ್ತಲೇ ರಾಜನು ಚತುರಂಗಬಲಸಮೇತನಾಗಿ ತನ್ನ ಅರಮನೆಯನ್ನು ಸೇರಿದನು.

ದುಷ್ಯಂತನು ಹೊರಟುಹೋಗಿ ಮುಹೂರ್ತಕಾಲ ಕಳೆದನಂತರ ಕಣ್ವ ಮಹರ್ಷಿಗಳು ಆಶ್ರಮಕ್ಕೆ ಹಿಂದಿರುಗಿದರು. ಶಕುಂತಲೆಯು ನಾಚಿಕೆಯಿಂದ ಅವರ ಬಳಿಗೆ ಹೋಗಲಿಲ್ಲ. ಆಗ ಆಶ್ರಮದಲ್ಲಿ ತಾವಿಲ್ಲದಿದ್ದ ಸಮಯದಲ್ಲಿ ಏನೇನು ನಡೆಯಿತೆಂಬುದನ್ನು ದಿವ್ಯಜ್ಞಾನದಿಂದ ತಿಳಿದುಕೊಂಡ ಮಹಾ ತಪಸ್ವಿಗಳಾದ ಕಣ್ವರು ಸ್ವಲ್ಪವಾದರೂ ಕೋಪಿಸಿಕೊಳ್ಳದೇ ಪ್ರೀತಿಯಿಂದಲೇ ಮಗಳಿಗೆ ಹೇಳಿದರು :

**ತ್ವಯಾದ್ಯ ಭದ್ರೇ ರಹಸಿ ಮಾಮನಾದೃತ್ಯ ಯಃ ಕೃತಃ ।**
**ಪುಂಸಾ ಸಹ ಸಮಾಯೋಗೋ ನ ಸ ಧರ್ಮೋಪಘಾತಕಃ ॥೨೬॥**

"ಮಂಗಳಾಂಗಿಯೇ! ನೀನಿಂದು ನನ್ನನ್ನು ನಿರ್ಲಕ್ಷಿಸಿ ಪುರುಷನೊಬ್ಬ ನೊಡನೆ ಮಾಡಿರುವ ಸಮಾಗಮವು ಧರ್ಮವಿನಾಶಕವಾದ ಕಾರ್ಯ ವಾಗಿಲ್ಲ.

**ಕ್ಷತ್ರಿಯಸ್ಯ ಹಿ ಗಾನ್ಧರ್ವೋ ವಿವಾಹಃ ಶ್ರೇಷ್ಠ ಉಚ್ಯತೇ ।**
**ಸಕಾಮಾಯಾಃ ಸಕಾಮೇನ ನಿರ್ಮನ್ತ್ರೋ ರಹಸಿ ಸ್ಮೃತಃ ॥೨೭॥**

ಕ್ಷತ್ರಿಯನಾದವನಿಗೆ ಗಾಂಧರ್ವರೀತಿಯ ವಿವಾಹವೇ ಶ್ರೇಷ್ಠವೆಂದು ಹೇಳಲ್ಪಟ್ಟಿದೆ. ಸ್ತ್ರೀ-ಪುರುಷರಿಬ್ಬರೂ ಅನ್ಯೋನ್ಯವಾಗಿ ಪ್ರೀತಿಸಿ ಮಂತ್ರವಿಲ್ಲದೇ ರಹಸ್ಯದಲ್ಲಿ ಮಾಡಿಕೊಳ್ಳುವ ವಿವಾಹಕ್ಕೆ ಗಾಂಧರ್ವವಿವಾಹವೆಂದು ಹೆಸರು. ಮೇಲಾಗಿ ರಹಸ್ಯದಲ್ಲಿ ನಿನ್ನನ್ನು ಮದುವೆಯಾಗಿರುವ ದುಷ್ಯಂತನು ಸಾಮಾನ್ಯನಲ್ಲ. ಅವನು ಧರ್ಮಾತ್ಮನೂ, ಮಹಾತ್ಮನೂ, ಪುರುಷೋತ್ತ ಮನೂ ಆಗಿರುತ್ತಾನೆ. ನಿನ್ನನ್ನು ಭಾರ್ಯೆಯನ್ನಾಗಿ ಪಡೆಯಬೇಕೆಂದು ಅವನು ಬಹಳ ಕಾತರನಾಗಿದ್ದನು. ಅಂತಹವನನ್ನೇ ನೀನು ಮದುವೆಯಾಗಿರುವೆ.

**ಮಹಾತ್ಮಾ ಜನಿತಾ ಲೋಕೇ ಪುತ್ರಸ್ತವ ಮಹಾಬಲಃ ।**
**ಯ ಇಮಾಂ ಸಾಗರಾಪಾಙ್ಗೀಂ ಕೃತ್ಸ್ನಾಂ ಭೋಕ್ಷ್ಯತಿ**
**ಮೇದಿನೀಮ್ ॥೨೮॥**

**ಪರಂ ಚಾಭಿಪ್ರಯಾತಸ್ಯ ಚಕ್ರಂ ತಸ್ಯ ಮಹಾತ್ಮನಃ ।**
**ಭವಿಷ್ಯತ್ಯಪ್ರತಿಹತಂ ಸತತಂ ಚಕ್ರವರ್ತಿನಃ ॥೨೯॥**

ಅವನಿಂದ ನಿನ್ನಲ್ಲಿ ಮಹಾಬಲನಾದ ಮಗನೊಬ್ಬನು ಹುಟ್ಟುವನು. ಅವನು ಸಾಗರಾಂತವಾದ ಈ ಅಖಂಡಭೂಮಂಡಲಕ್ಕೂ ರಾಜನಾಗುವನು. ಶತ್ರುರಾಜರ ಮೇಲೆ ಆಕ್ರಮಣನಡೆಸುವ ಅವನ ಸೇನೆಯು ಅಪ್ರತಿಹತ ವಾಗಿರುತ್ತದೆ. ಅವನ ಚತುರಂಗಬಲವನ್ನು ಎದುರಿಸಿ ಯುದ್ಧಮಾಡುವ ಸಾಮರ್ಥ್ಯವು ಯಾರಿಗೂ ಇರುವುದಿಲ್ಲ. ಭೂಮಂಡಲದಲ್ಲಿನ ಎಲ್ಲ ರಾಜ ರನ್ನೂ ಅವನು ಆಶ್ರಿತರನ್ನಾಗಿ ಮಾಡಿಕೊಂಡು 'ಚಕ್ರವರ್ತೀ' ಎನಿಸಿಕೊಳ್ಳು ತ್ತಾನೆ."

ಕಣ್ವಮಹರ್ಷಿಗಳು ಸುಮುಖರಾಗಿ ಸೌಜನ್ಯದಿಂದ ಇಷ್ಟು ಮಾತು ಗಳನ್ನು ಹೇಳಿದನಂತರ, ನಾಚಿಕೆಯಿಂದ ಒಳಭಾಗದಲ್ಲಿಯೇ ಇದ್ದ ಶಕುಂತಲೆಯು ಹೊರಗೆ ಬಂದು ಕಣ್ವರ ಕೈಲಿದ್ದ ಫಲ-ಪುಷ್ಪಾದಿಗಳನ್ನೂ ಸಮಿತ್ತನ್ನೂ ತೆಗೆದುಕೊಂಡು ಅವುಗಳನ್ನು ಆಯಾ ಸ್ಥಳಗಳಲ್ಲಿರಿಸಿದಳು. ಮಹರ್ಷಿಗಳೂ ಕೈ-ಕಾಲು ತೊಳೆದುಕೊಂಡು ವಿಶ್ರಮಿಸಿಕೊಳ್ಳುತ್ತಿದ್ದಾಗ ಶಕುಂತಲೆಯು ಅವರ ಸಮೀಪದಲ್ಲಿ ಕುಳಿತು ಹೇಳಿದಳು :

"ಅಪ್ಪ! ನಾನು ಪುರುಷೋತ್ತಮನಾದ ದುಷ್ಯಂತಮಹಾರಾಜನನ್ನು ನನ್ನ ಪತಿಯನ್ನಾಗಿ ಪರಿಗ್ರಹಿಸಿದೆನು. ಮಂತ್ರಿಸಹಿತನಾದ ಅವನ ವಿಷಯದಲ್ಲಿ ನೀನು ಕೃಪೆದೋರಲು ಅರ್ಹನಾಗಿರುವೆ. ( ದುಷ್ಯಂತನನ್ನೂ ಮತ್ತು ಅವನ ರಾಜ್ಯ-ಕೋಶಾದಿಗಳನ್ನೂ ಅನುಗ್ರಹಿಸುವುದು ಸಾಧುವಾಗಿದೆ. )"

ಕಣ್ವರು ಸುಮುಖರಾಗಿಯೇ ಉತ್ತರಿಸಿದರು :

"ವರವರ್ಣಿನಿಯೇ! ನಿನ್ನ ಸಲುವಾಗಿ ನಾನು ರಾಜನ ವಿಷಯದಲ್ಲಿ ಪ್ರಸನ್ನನಾಗಿಯೇ ಇದ್ದೇನೆ. ನನ್ನಿಂದ ನಿನಗೇನು ವರವು ಬೇಕೋ ಕೇಳು, ಮಗಳೇ! ಕೊಡುತ್ತೇನೆ."

ಸಾಧ್ವಿಯಾದ ಶಕುಂತಲೆಯು ತನ್ನ ಪತಿಯು ಯಾವಾಗಲೂ ಧರ್ಮಿಷ್ಠನಾಗಿರಬೇಕೆಂದೂ, ರಾಜಪದವಿಯಿಂದ ಯಾವಾಗಲೂ ಚ್ಯುತ ನಾಗಬಾರದೆಂದೂ ಕೇಳಿಕೊಂಡಳು. ಪ್ರಜೆಗಳಿಗೂ ಮತ್ತು ತನ್ನ ಪತಿಯಾದ ದುಷ್ಯಂತನಿಗೂ ಹಿತವನ್ನುಂಟುಮಾಡುವುದೇ ಅವಳ ಪರಮೋದ್ದೇಶ ವಾಗಿದ್ದಿತು. ಜನಮೇಜಯ!

ಮಹರ್ಷಿ ಕಣ್ವರು 'ತಥಾಸ್ತು' ಎಂದರು."

ಌೞನೆಯ ಅಧ್ಯಾಯವು ಮುಗಿಯಿತು.

ಌೞನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಶಕುಂತಲೆಗೆ ಪುತ್ರಜನನ : ದುಷ್ಯಂತನ ಅರಮನೆಗೆ ಪುತ್ರಸಹಿತಳಾದ ಶಕುಂತಲೆಯ ಆಗಮನ : ದುಷ್ಯಂತ-ಶಕುಂತಲೆಯರ ಸಂವಾದ : ಅಶರೀರವಾಣಿಯಂತೆ ದುಷ್ಯಂತನು ಶಕುಂತಲೆಯನ್ನು ಪರಿಗ್ರಹಿಸಿ ಭರತನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದುದು

"ಪಾರಿಕ್ಷಿತ! ಪಟ್ಟಣಕ್ಕೆ ಕರೆಸಿಕೊಳ್ಳುವೆನೆಂದು ಪ್ರತಿಜ್ಞೆಮಾಡಿ ದುಷ್ಯಂತನು ತನ್ನ ರಾಜಧಾನಿಗೆ ಹೊರಟುಹೋದನು. ದಿನಗಳು ಕಳೆದುವು. ಪಕ್ಷಗಳು ಕಳೆದುಹೋದುವು. ಮಾಸಗಳೂ ಉರುಳಿದುವು. ಶಕುಂತಲೆಯನ್ನು ಕರೆದೊಯ್ಯಲು ಯಾವ ಚತುರಂಗಬಲವೂ ಬರಲಿಲ್ಲ. ಮೊದಲು ಮೊದಲಲ್ಲಿ ರಾಜಕಾರ್ಯದಿಂದಾಗಿ ಸಾವಕಾಶವಾಗಿರಬಹುದೆಂದು ಶಕುಂತಲೆಯು ಭಾವಿಸಿದಳು. ದಿನಗಳು ಕಳೆಯುತ್ತಿದ್ದಂತೆ ದುಷ್ಯಂತನ ಔದಾಸೀನ್ಯಕ್ಕೆ ಕಾರಣವನ್ನು ಅವಳು ತಿಳಿಯದಾದಳು.

ಶಕುಂತಲೆಯು ಗರ್ಭವತಿಯಾಗಿದ್ದಳು. ಆದರೆ ಅದು ನವಮಾಸಗಳ ಗರ್ಭವಾಗಿರಲಿಲ್ಲ. ಮೂವತ್ತಾರು ಮಾಸಗಳ ಪೂರ್ಣಗರ್ಭವಾಗಿದ್ದಿತು. ಮೂರು ವರ್ಷಗಳು ತುಂಬಿದನಂತರ ಶುಭಾಂಗಿಯಾದ ಶಕುಂತಲೆಯು ಯಜ್ಞೇಶ್ವರನಂತೆ ಜಾಜ್ವಲ್ಯಮಾನವಾದ ತೇಜಸ್ಸಿನಿಂದ ಕೂಡಿದ್ದ, ರೂಪ ವಂತನಾಗಿದ್ದ, ಔದಾರ್ಯಾದಿ ಗುಣಗಳಿಂದ ಯುಕ್ತನಾಗಿದ್ದ, ಅಮಿತಪರಾ

ಕ್ರಮಿಯಾದ ದೌಷ್ಯಂತಿಯನ್ನು ಪ್ರಸವಿಸಿದಳು. ಧೀಮಂತನಾದ ದೌಷ್ಯಂತಿಗೆ ಹುಟ್ಟಿದೊಡನೆಯೇ ಮಾಡಬೇಕಾಗಿದ್ದ ಜಾತಕರ್ಮಾದಿಸಂಸ್ಕಾರಗಳನ್ನು ವಿಧಿವತ್ತಾಗಿ ಕಣ್ವರೇ ನೆರವೇರಿಸಿದರು. ಶಕುಂತಲೆಯ ಮಗನು ಶುಕ್ಲಪಕ್ಷದ ಚಂದ್ರನಂತೆ ದಿನ-ದಿನಕ್ಕೂ ಅಭಿವೃದ್ಧಿಹೊಂದುತ್ತಿದ್ದನು. ಅವನ ಹಲ್ಲುಗಳು ಮುತ್ತಿನ ಸರದಂತೆ ಬಿಳುಪಾಗಿಯೂ, ಚೂಪಾಗಿಯೂ ಇದ್ದುವು. ಮೈಕಟ್ಟು ಸಿಂಹದಂತೆಯೇ ಇದ್ದಿತು. ಹಸ್ತದಲ್ಲಿ ಚಕ್ರದ ಚಿಹ್ನೆಯಿದ್ದಿತು. ಅವನಿಗೆ



ದೊಡ್ಡದಾದ ತಲೆಯಿದ್ದಿತು. ಮಹಾಬಲಿಷ್ಠನಾಗಿದ್ದನು. ದೇವಶಿಶುವಿನಂತೆ ಪ್ರಕಾಶಮಾನನಾಗಿದ್ದನು. ಕೇವಲ ಆರು ವರ್ಷ ವಯಸ್ಸಿನವನಾಗಿದ್ದಾಗಲೇ ಅವನು ಸಿಂಹ, ವ್ಯಾಘ್ರ, ವರಾಹ, ಕಾಡೆಮ್ಮೆ ಮತ್ತು ಆನೆಗಳನ್ನು ಹಿಡಿದು ಕಣ್ವರ ಆಶ್ರಮದ ಸುತ್ತಲೂ ಇದ್ದ ವೃಕ್ಷಗಳಲ್ಲಿ ಕಟ್ಟಿಹಾಕುತ್ತಿದ್ದನು.

ಸಿಂಹವೇ ಆಗಲೀ, ಶಾರ್ದೂಲವೇ ಆಗಲೀ–ದೌಷ್ಯಂತಿಯು ಅವುಗಳ ಮೇಲೆ ಹತ್ತಿ ಕುಳಿತುಕೊಳ್ಳುತ್ತಿದ್ದನು. ಅವುಗಳೇನಾದರೂ ರೋಷಗೊಂಡು ಬಾಯ್ದೆರೆದು ಅವನ ಮೇಲೆ ಬೀಳಲು ಬಂದರೆ ಅವುಗಳ ಎರಡು ದವಡೆಗಳನ್ನೂ ತನ್ನೆರಡು ಕೈಗಳಿಂದಲೂ ಜಗ್ಗಿ ಹಿಡಿದು ಅವುಗಳ ಸೊಕ್ಕನ್ನು ಮುರಿಯುತ್ತಿದ್ದನು. ಆ ದುಷ್ಟಮೃಗಗಳೂ ಅವನು ಹೇಳಿದಂತೆ ಕೇಳಬೇಕಾಗಿದ್ದಿತು. ಯಾವ ಪ್ರಾಣಿಯನ್ನು ಕಂಡರೂ ಅವನಿಗೆ ಲಕ್ಷ್ಯವಿರಲಿಲ್ಲ. ಅವನ ಶೌರ್ಯ-ಪರಾಕ್ರಮಗಳನ್ನೂ, ದುಷ್ಟಪ್ರಾಣಿಗಳನ್ನವನು ದಮನ ಮಾಡುತ್ತಿದ್ದುದನ್ನೂ ಕಂಡು ಕಣ್ವಾಶ್ರಮನಿವಾಸಿಗಳು ಅವನಿಗೆ–'ಸರ್ವದಮನ'–ಎಂದೇ ನಾಮಕರಣಮಾಡಿದರು.

**ಅಸ್ತ್ವಯಂ ಸರ್ವದಮನಃ ಸರ್ವಂ ಹಿ ದಮಯತ್ಯಸೌ ।**
**ಸ ಸರ್ವದಮನೋ ನಾಮ ಕುಮಾರಃ ಸಮಪದ್ಯತ ॥೮॥**

'ಎಲ್ಲ ಪ್ರಾಣಿಗಳನ್ನೂ ಅವನು ದಮನಮಾಡುವವನಾದ್ದರಿಂದ ಇವನು ಸರ್ವದಮನನೆಂದೇ ಪ್ರಸಿದ್ಧನಾಗಲಿ'–ಎಂದು ಋಷಿಪುಂಗವರು ಶಕುಂತಲಾ ಪುತ್ರನಿಗೆ ಅನ್ವರ್ಥನಾಮವನ್ನಿಟ್ಟರು. ಅವನನ್ನು ಮುಂದೆ ಎಲ್ಲರೂ ಸರ್ವದಮನನೆಂಬ ಹೆಸರಿನಿಂದಲೇ ಕರೆಯುತ್ತಿದ್ದರು. ಸರ್ವದಮನನ ಅತಿಮಾನುಷವಾದ ಸಾಹಸಕಾರ್ಯಗಳನ್ನು ನೋಡಿ ಮಹರ್ಷಿಗಳಾದ ಕಣ್ವರು ಇವನು ಯುವರಾಜನಾಗಲು ಈಗಲೇ ಅರ್ಹನಾಗಿದ್ದಾನೆಂದು ಶಕುಂತಲೆಯೊಡನೆ ಹೇಳುತ್ತಿದ್ದರು. ಬಾಲಕನ ಪರಾಕ್ರಮವೆಷ್ಟೆಂಬುದನ್ನು ತಿಳಿದಿದ್ದ ಕಣ್ವರು ತಮ್ಮ ಶಿಷ್ಯರನ್ನು ನಿರ್ದೇಶಿಸಿದರು :

"ನೀವುಗಳು ಪುತ್ರಸಹಿತಳಾದ, ಸರ್ವಲಕ್ಷಣಸಂಪನ್ನೆಯಾದ ಶಕುಂತಲೆಯನ್ನು ನಮ್ಮ ಆಶ್ರಮದಿಂದ ಕರೆದುಕೊಂಡು ಅವಳ ಗಂಡನ ಮನೆಯಲ್ಲಿ ಬಿಟ್ಟುಬನ್ನಿರಿ.

**ನಾರೀಣಾಂ ಚಿರವಾಸೋ ಹಿ ಬಾನ್ಧವೇಷು ನ ರೋಚತೇ ।**
**ಕೀರ್ತಿಚಾರಿತ್ರಧರ್ಮಘ್ನಸ್ತಸ್ಮಾನ್ನಯತ ಮಾ ಚಿರಮ್ ॥೧೨॥**

ವಿವಾಹಿತೆಯರಾದ ಸ್ತ್ರೀಯರು ತಂದೆಯ ಮನೆಯಲ್ಲಿ ಹೆಚ್ಚು ಕಾಲ

ಇರುವುದು ಕೀರ್ತಿಗೆ ಕಳಂಕವನ್ನು ತರುತ್ತದೆ. ಅವರ ಚಾರಿತ್ರ್ಯವು ಕಲುಷಿತ ವಾಗುತ್ತದೆ. ತಂದೆಯ ಮನೆಯಲ್ಲಿಯೇ ಇರುವುದು ಧರ್ಮಸಮ್ಮತವೂ ಆಗುವುದಿಲ್ಲ. ಈ ಕಾರಣಗಳಿಂದಾಗಿ ನೀವೀಗಲೇ ಇವಳನ್ನು ದುಷ್ಯಂತನ ಬಳಿಗೆ ಕರೆದುಕೊಂಡು ಹೋಗಿರಿ."

ಮಹಾತೇಜಸ್ವಿಗಳಾದ ಋಷಿಕುಮಾರರು ಹಾಗೆಯೇ ಆಗಲೆಂದು ಹೇಳಿ ಶಕುಂತಲೆಯನ್ನೂ ಅವಳ ಮಗನಾದ ಸರ್ವದಮನನನ್ನೂ ಮುಂದು ಮಾಡಿಕೊಂಡು ದುಷ್ಯಂತನ ಪಟ್ಟಣಕ್ಕೆ ಪ್ರಯಾಣಮಾಡಿದರು.

ದೇವಬಾಲನಂತೆ ಪ್ರಕಾಶಮಾನನಾಗಿದ್ದ, ಕಮಲಲೋಚನನಾದ ಪುತ್ರ ನನ್ನು ಕರೆದುಕೊಂಡು ಚಿರಪರಿಚಿತವಾಗಿದ್ದ ಅರಣ್ಯದಿಂದ ಶಕುಂತಲೆಯು ದುಷ್ಯಂತನ ಪಟ್ಟಣಕ್ಕೆ ಋಷಿಕುಮಾರರೊಡನೆ ಆಗಮಿಸಿದಳು. ಶಕುಂತಲೆಯು ದ್ವಾರಪಾಲಕರೊಡನೆ ತಾನು ಬಂದಿರುವ ವೃತ್ತಾಂತವನ್ನು ರಾಜನಿಗೆ ಹೇಳಿಕಳುಹಿಸಿ, ಬಾಲಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಿದ್ದ ಸರ್ವದಮನನೊಡನೆ ಅರಮನೆಯನ್ನು ಪ್ರವೇಶಿಸಿದಳು.

ಋಷಿಕುಮಾರರು ರಾಜನಿಗೆ ಯಥೋಚಿತವಾಗಿ ಆಶೀರ್ವದಿಸಿ, ಕಣ್ವರು ಹೇಳಿಕಳುಹಿಸಿದ್ದ ಮಾತುಗಳನ್ನೂ ಹೇಳಿ, ಶಕುಂತಲೆಯನ್ನೂ–ಸರ್ವದಮನನನ್ನೂ ರಾಜನಿಗೊಪ್ಪಿಸಿ ಆಶ್ರಮಕ್ಕೆ ಹಿಂದಿರುಗಿದರು. ಶಕುಂತ ಲೆಯೂ ರಾಜನಿಗೆ ಯಥೋಚಿತವಾದ ಗೌರವವನ್ನು ಸಲ್ಲಿಸಿ ಹೇಳಿದಳು :

**ಅಯಂ ಪುತ್ರಸ್ತ್ವಯಾ ರಾಜನ್ಯೌವರಾಜ್ಯೇಽಭಿಷಿಚ್ಯತಾಮ್ ।**
**ತ್ವಯಾ ಹ್ಯಯಂ ಸುತೋ ರಾಜನ್ಮಯ್ಯುತ್ಪನ್ನಃ ಸುರೋಪಮಃ ।**
**ಯಥಾಸಮಯಮೇತಸ್ಮಿನ್ವರ್ತಸ್ವ ಪುರುಷೋತ್ತಮ ॥೧೭॥**

"ಪುರುಷೋತ್ತಮನೇ! ಈ ಸರ್ವದಮನನು ನಿನ್ನಿಂದ ನನ್ನಲ್ಲಿ ಹುಟ್ಟಿರುವ ಸುಪುತ್ರನು. ಸುರಸುತೋಪಮನಾಗಿದ್ದಾನೆ. ಹಿಂದೆ ನೀನು ನನಗಿತ್ತಿದ್ದ ಸತ್ಯವಚನದಂತೆ ಇವನನ್ನು ಇಂದು ಯೌವರಾಜ್ಯದ ಸಿಂಹಾಸನ ದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡುವುದು ಸಾಧುವಾಗಿದೆ."

ಋಷಿಗಳ ಮಧ್ಯದಲ್ಲಿ ಬೆಳೆದ, ಕಪಟವೆಂಬುದನ್ನೇ ಅರಿಯದ, ನಿಷ್ಕ

ಲಂಕ-ನಿರ್ಮಲಜೀವನವನ್ನು ನಡೆಸುತ್ತಿದ್ದ ಶಕುಂತಲೆಯು ಕಣ್ವರ ಆಶ್ರಮ ದಿಂದ ಹೊರಟಾಗ ತನ್ನನ್ನು ತಾನೇ ರಾಜನಿಗೆ ಪರಿಚಯಮಾಡಿಕೊಡ ಬೇಕಾಗುವುದೆಂದು ಭಾವಿಸಿರಲಿಲ್ಲ. ದುಷ್ಯಂತನು ಒಡನೆಯೇ ಕರೆಸಿ ಕೊಳ್ಳುವೆನೆಂದು ಹೇಳಿ ಆರೆಂಟು ವರ್ಷಗಳವರೆಗೂ ಅತ್ತಕಡೆ ಸುಳಿಯ ದಿದ್ದರೂ–ಸಾಧ್ವಿಯಾದ ಶಕುಂತಲೆಯು, ರಾಜಕಾರ್ಯದಿಂದ ತನ್ನನ್ನು ಕರೆದುಕೊಂಡು ಹೋಗಲು ಸಾಧ್ಯವಾಗದಿರಬಹುದೆಂದು ಭಾವಿಸಿದ್ದಳು. ತನ್ನನ್ನು ಕಂಡೊಡನೆಯೇ ರಾಜನು ಬಹಳ ಆದರದಿಂದ ಪುರಸ್ಕರಿಸುವನೆಂಬ ಭಾವನೆಯು ಶಕುಂತಲೆಗಿದ್ದುದು ಸ್ವಾಭಾವಿಕ. ಆದರೆ ತನ್ನ ಪರಿಚಯ ಮಾಡಿಕೊಟ್ಟನಂತರವೂ ರಾಜನು ಏನನ್ನೂ ತಿಳಿಯದವನಂತೆ ಸ್ತಬ್ಧನಾಗಿ ಕುಳಿತಿರುವುದನ್ನು ಕಂಡು ಚಕಿತಳಾದ ಶಕುಂತಲೆಯು ಪುನಃ ಹೇಳತೊಡಗಿದಳು:

"ಮಹಾರಾಜ! ಅಂದು ಕಣ್ವಮಹರ್ಷಿಗಳ ಆಶ್ರಮದಲ್ಲಿ ನಾನು ಏಕಾಕಿನಿಯಾಗಿದ್ದಾಗ ನೀನು ಬಂದು ನನ್ನನ್ನು ಗಾಂಧರ್ವರೀತಿಯಿಂದ ಮದುವೆಯಾಗಲು ಒಪ್ಪಿಸಿ, ನನ್ನ ಪ್ರಾರ್ಥನೆಗೆ ಅನುಸಾರವಾಗಿ ಅಥವಾ ನನ್ನ ನಿಬಂಧನೆಗೆ ಅನುಸಾರವಾಗಿ ನನ್ನಲ್ಲಿ ಹುಟ್ಟುವ ಮಗನಿಗೇ ರಾಜ್ಯದ ಪಟ್ಟ ಕಟ್ಟುವೆನೆಂದು ಮಾತುಕೊಟ್ಟಿದ್ದನ್ನು ಸ್ಮರಿಸು."

ದುಷ್ಯಂತನು ಶಕುಂತಲೆಯು ಹೇಳಿದ ಮಾತುಗಳನ್ನು ಕೇಳಿದನು. ಅವನು ಅವಳಿಗೆ ಕೊಟ್ಟಿದ್ದ ಭಾಷೆಯು ಅವನ ನೆನಪಿನಲ್ಲಿದ್ದಿತು. ಆದರೂ ಶಕುಂತಲೆಯನ್ನು ತನ್ನ ಜೀವಮಾನದಲ್ಲಿಯೇ ನೋಡಿಲ್ಲವೋ ಎಂಬ ಮುಖಭಾವದಿಂದ ಅವಳನ್ನು ಕುರಿತು ಹೇಳಿದನು :

"ನಿನ್ನ ಸಂಗವೇ? ನಿನಗೆ ನಾನು ಮಾತುಕೊಟ್ಟಿರುವೆನೇ? ನೀನು ವೇಷದಲ್ಲಿ ತಾಪಸಿಯಾಗಿದ್ದರೂ ದುಷ್ಟಭಾವದಿಂದ ಕೂಡಿರುವಂತೆ ಕಾಣು ತ್ತಿರುವೆ. ನಿನ್ನನ್ನು ನೋಡಿದ ಸ್ಮರಣೆಯೂ ಇಲ್ಲ. ನಿನಗೆ ಮಾತುಕೊಟ್ಟ ಸ್ಮರಣೆಯೂ ಇಲ್ಲ. ಹೀಗಿರುವಾಗ ಧರ್ಮ-ಕಾಮಾರ್ಥಗಳ ಸಂಬಂಧವಿರಲು ಹೇಗೆ ತಾನೇ ಸಾಧ್ಯವಾದೀತು? ನಿನ್ನೊಡನೆ ಮಾಡಿದ ಸಂಬಂಧವೂ ನನ್ನ ಸ್ಮರಣೆಯಲ್ಲಿಲ್ಲ. ಆದುದರಿಂದ ಈ ರಾಜಸಭೆಯಲ್ಲಿ ಇಲ್ಲಸಲ್ಲದ ಮಾತು

ಗಳನ್ನಾಡದೇ ಹೊರಟುಹೋಗುವುದು ಉಚಿತವಾಗಿದೆ ಅಥವಾ ನಿನಗಿಚ್ಛೆ ಬಂದಂತೆ ಮಾಡಬಹುದು."

ದುಷ್ಯಂತನ ಮಾತುಗಳನ್ನು ಕೇಳಿ ಶಕುಂತಲೆಯು ಬಹುವಾಗಿ ನಾಚಿದಳು. ಅವಳಿಗೆ ಅತಿಯಾದ ದುಃಖವುಂಟಾಯಿತು. ಪ್ರಜ್ಞಾಹೀನಳಂತಾದಳು. ಕಂಬದಂತೆ ಕ್ಷಣಕಾಲ ಹಾಗೆಯೇ ನಿಂತಿದ್ದಳು.

ಶಕುಂತಲೆಯ ದುಃಖವು ಕೋಪದಲ್ಲಿ ಪರ್ಯವಸಾನಹೊಂದಿತು. ಕಣ್ಣುಗಳು ಕೆಂಪಾದುವು. ತುಟಿಗಳು ಅದುರುತ್ತಿದ್ದುವು. ಕಟಾಕ್ಷವೀಕ್ಷಣದಿಂದಲೇ ಎಲ್ಲರನ್ನೂ ದಹಿಸಿಬಿಡುವಳೋ ಎಂಬಂತೆ ಕಾಣುತ್ತಿದ್ದಳು. ಅದೇ ದೃಷ್ಟಿಯಿಂದ ರಾಜನ ಕಡೆಗೊಮ್ಮೆ ಓರೆಯಾಗಿ ನೋಡಿದಳು. ಅರಮನೆಯನ್ನೇ ದಹಿಸಲಿಚ್ಛಿಸಿರುವ ಚಂಡಿಯಂತೆ ಘೋರರೂಪಿಣಿಯಾದಳು.

ತಪಸ್ವಿನಿಯಾದ ಶಕುಂತಲೆಗೆ ರಾಜನನ್ನು ದಹಿಸಿಬಿಡುವ ಶಕ್ತಿಯಿದ್ದಿತು. ಶಾಪಕೊಡುವ ಸಾಮರ್ಥ್ಯವೂ ಇದ್ದಿತು. ಆದರೂ ಸ್ವಲ್ಪ ತಾಳ್ಮೆಯನ್ನು ತಂದುಕೊಂಡಳು. ಕೋಪದಿಂದ ಉದ್ರಿಕ್ತವಾಗಿದ್ದ ತನ್ನ ಮನಸ್ಸನ್ನು ಸ್ವಲ್ಪ ತಡೆಹಿಡಿದಳು. ತಪಸ್ಸಿನಿಂದ ಸಂಚಿತವಾಗಿದ್ದ ತೇಜಸ್ಸನ್ನು ಕೋಪದ ಕಾರಣದಿಂದಾಗಿ ವ್ಯಯಿಸಲು ಇಚ್ಛಿಸಲಿಲ್ಲ. ಕುಪಿತಳಾಗಿ ಗಂಡನನ್ನೊಮ್ಮೆ ದುರದುರನೆ ನೋಡಿ ಹೇಳಿದಳು :

**ಜಾನನ್ನಪಿ ಮಹಾರಾಜ ಕಸ್ಮಾದೇವಂ ಪ್ರಭಾಷಸೇ ।**
**ನ ಜಾನಾಮೀತಿ ನಿಃಶಙ್ಕಂ ಯಥಾನ್ಯಃ ಪ್ರಾಕೃತೋ ಜನಃ ॥೨೫॥**

"ಮಹಾರಾಜ! ನಿನಗೆ ನಾನಾರೆಂಬುದು ಚೆನ್ನಾಗಿ ತಿಳಿದಿದ್ದರೂ ಹೀಗೇಕೆ ಮಾತನಾಡುತ್ತಿರುವೆ? 'ನ ಜಾನಾಮಿ' 'ನ ಸ್ಮರಾಮಿ' 'ನೀನು ಯಾರೆಂಬುದು ತಿಳಿಯದು ; ನಿನ್ನೊಡನೆ ಇದ್ದ ಜ್ಞಾಪಕವಿಲ್ಲ' ಎಂದು ಹೇಳುವಾಗ ನಿನಗೆ ಸ್ವಲ್ಪವಾದರೂ ಸಂಕೋಚವಾಗಲಿಲ್ಲವೇ? ಕೈಹಿಡಿದ ಹೆಂಡತಿಯ ಸ್ಮರಣೆಯೇ ಇಲ್ಲವೆಂದು ಸಾಧಾರಣಮನುಷ್ಯರೂ ಹೇಳಲಾರರು. ಒಂದುವೇಳೆ ಅವರು ಹಾಗೆ ಹೇಳಿದರೆ ಅದಕ್ಕೆ ವಿನಾಯಿತಿಯಿದೆ. ಆದರೆ ಪ್ರಜೆಗಳನ್ನು ಪರಿಪಾಲಿಸುವ

ರಾಜನು ಹೀಗೆ ಹೇಳಬಹುದೇ? ಹೀಗೆ ಹೇಳಲು ನಿನಗೆ ಗಂಟಲು ಹಿಡಿಯುವುದಿಲ್ಲವೇ? ಪಾಪದ ಭೀತಿಯೇ ಇಲ್ಲದೇ ನಿಸ್ಸಂಕೋಚವಾಗಿ 'ನ ಜಾನಾಮಿ' 'ನ ಸ್ಮರಾಮಿ' ಎಂದು ಹೇಳಿಬಿಟ್ಟೆಯಲ್ಲವೇ?

**ಅತ್ರ ತೇ ಹೃದಯಂ ವೇದ ಸತ್ಯಸ್ಯೈವಾನೃತಸ್ಯ ಚ ।**
**ಕಲ್ಯಾಣಂ ವದ ಸಾಕ್ಷ್ಯೇಣ ಮಾತ್ಮಾನಮವಮನ್ಯಥಾಃ ॥೨೬॥**

ಮಹಾರಾಜ! ನೀನು ನಿನ್ನ ಬಾಯಿಂದ ಏನೇ ಹೇಳಿದರೂ ವಿಷಯದ ಸತ್ಯಾಸತ್ಯತೆಯು ನಿನ್ನ ಹೃದಯಕ್ಕೆ ತಿಳಿದಿದೆ. ಹೃದಯಸಾಕ್ಷಿಯಾಗಿ ಮಾತನಾಡು. ಆತ್ಮಸಾಕ್ಷಿಯಾಗಿ ನನ್ನ ಪರಿಚಯವು ನಿನಗೆ ಇರುವುದೋ ಇಲ್ಲವೋ ಎಂಬುದನ್ನು ಹೇಳು. ಆತ್ಮದ್ರೋಹವನ್ನು ಮಾಡಿಕೊಳ್ಳಬೇಡ. ಆತ್ಮವೊಂದು ಹೇಳುತ್ತಿದ್ದರೆ ಬಾಯಿಂದ ಬೇರೊಂದನ್ನು ಹೇಳಬೇಡ. ಆತ್ಮದ್ರೋಹಿಯು ಎಸಗದ ಪಾಪಗಳೇ ಇಲ್ಲ. ಅಂತಹವನು ಎಂತಹ ಪಾಪಮಾಡಲೂ ಹಿಂದೆಗೆಯುವುದಿಲ್ಲ.

**ಯೋಽನ್ಯಥಾ ಸನ್ತಮಾತ್ಮಾನಮನ್ಯಥಾ ಪ್ರತಿಪದ್ಯತೇ ।**
**ಕಿಂ ತೇನ ನ ಕೃತಂ ಪಾಪಂ ಚೌರೇಣಾತ್ಮಾಪಹಾರಿಣಾ ॥೨೭॥**

ತನ್ನ ಆತ್ಮದಲ್ಲಿರುವುದನ್ನು ಮುಚ್ಚಿಟ್ಟು ಅದಕ್ಕೆ ವಿರೋಧವಾದುದನ್ನು ಹೇಳುವ ಸ್ವಭಾವವುಳ್ಳವನು ಆತ್ಮಾಪಹಾರಿಯಾದ, ಆತ್ಮಕ್ಕೆ ವಂಚಿಸುವ, ಆತ್ಮಕ್ಕೆ ದ್ರೋಹವೆಸಗುವ ಚೋರನೆಂದೇ ಹೇಳಬೇಕು. ಅಂತಹವನು ಎಂತಹ ಮಹಾಪಾಪಗಳನ್ನು ಮಾಡಲೂ ಹೇಸುವುದಿಲ್ಲ.*

---

* ಮನುಷ್ಯನ ಆತ್ಮವು ಯಾವಾಗಲೂ ಒಳ್ಳೆಯದು ಯಾವುದು? ಕೆಟ್ಟುದು ಯಾವುದು? ಎಂಬುದನ್ನು ಹೇಳುತ್ತಲೇ ಇರುತ್ತದೆ. ಸುಳ್ಳು ಹೇಳುತ್ತಿದ್ದರೆ–'ನೀನು ಹೇಳುತ್ತಿರುವುದು ಸುಳ್ಳು'–ಎಂದು ಆತ್ಮವು ಎಚ್ಚರಿಸುತ್ತದೆ. ಮನುಷ್ಯನು ಯಾವಾಗಲೂ ಸತ್ಯಕ್ಕೆ ಭಯಪಡುತ್ತಾನೆ. ಮನಸ್ಸಿಗೂ, ಆತ್ಮಕ್ಕೂ ಅಥವಾ ಬುದ್ಧಿಗೂ ಸತ್ಯದ ವಿಷಯವಾಗಿ ತರ್ಕ-ವಿತರ್ಕಗಳು ಆಗುತ್ತಲೇ ಇರುತ್ತವೆ. ಆತ್ಮನಲ್ಲಿರುವ ಸತ್ಯವನ್ನು ಹೊರಗೆಡಹಬೇಕೆಂದು ಬುದ್ಧಿಯು ಪ್ರಯತ್ನಿಸಿದರೆ ಸತ್ಯಾಂಶವನ್ನು ಹೊರಗೆಡಹುವುದರಿಂದ ಉಂಟಾಗುವ ಪರಿಣಾಮಗಳನ್ನು ಕುರಿತು ಮನಸ್ಸು ತರ್ಕಿಸುತ್ತದೆ. ಎಷ್ಟೇ ಕಷ್ಟವಾದರೂ ಸತ್ಯವನ್ನು ಎತ್ತಿಹಿಡಿಯಬೇಕೆಂದು ಬುದ್ಧಿಯು ಹೇಳಿದರೆ

**ಏಕೋಽಹಮಸ್ಮೀತಿ ಚ ಮನ್ಯಸೇ ತ್ವಂ**
**ನ ಹೃಚ್ಛಯಂ ವೇತ್ಸಿ ಮುನಿಂ ಪುರಾಣಮ್ ।**
**ಯೋ ವೇದಿತಾ ಕರ್ಮಣಃ ಪಾಪಕಸ್ಯ**
**ತಸ್ಯಾನ್ತಿಕೇ ತ್ವಂ ವೃಜಿನಂ ಕರೋಷಿ ॥೨೮॥**

ಮಹಾರಾಜ! ಒಬ್ಬನೇ ಇದ್ದಾಗ ನಡೆದುದಕ್ಕೆ ಸಾಕ್ಷಿಗಳಾರೂ ಇಲ್ಲವೆಂಬ ಭ್ರಾಂತಿಯಿಂದ ಹೀಗೆ ಮಾತನಾಡುತ್ತಿರುವೆಯಾ? ನೀನೂ ಹಾಗೆಯೇ ಭಾವಿಸಿ–'ನೀನಾರೆಂಬುದು ನನಗೆ ಗೊತ್ತಿಲ್ಲ! ನಿನ್ನನ್ನು ನೋಡಿದ ಸ್ಮರಣೆಯಿಲ್ಲ'–ಎಂದು ಹೇಳುತ್ತಿರಬಹುದು. ಆದರೆ ನಿನ್ನ ಈ ಭಾವನೆಯು ತಪ್ಪು. ಮುನಿಯಾದ, ಪುರಾಣನಾದ, ವೇದಸಾರನಾದ, ಜ್ಯೋತಿಃಸ್ವರೂಪ ನಾದ ಪರಮಾತ್ಮನು ಎಲ್ಲ ಕಾರ್ಯಗಳಿಗೂ ಸಾಕ್ಷಿಯಾಗಿ ಎಲ್ಲರ ಹೃದಯಾಂತರಾಳದಲ್ಲಿಯೂ ಸರ್ವದಾ ಪವಡಿಸಿರುತ್ತಾನೆ. ಅವನಿಗೆ ಪ್ರಾಣಿಯು ಮಾಡುವ ಎಲ್ಲ ಪಾಪ-ಪುಣ್ಯಕರ್ಮಗಳೂ ತಿಳಿಯುತ್ತಿರುತ್ತವೆ. ನಿನ್ನ ಕರ್ಮಗಳಿಗೆ ಸಾಕ್ಷೀಭೂತನಾದಂತಹ ಪರಮಾತ್ಮನನ್ನು ನಿನ್ನ ಹೃದಯದಲ್ಲಿ ಅಡಗಿಸಿಕೊಂಡು ನೀನು ಪಾಪಕರ್ಮವನ್ನು ಮಾಡುತ್ತಿರುವೆ. ನೀನು ಏಕಾಂತದಲ್ಲಿ ಎಲ್ಲಿಯೂ ಯಾವಾಗಲೂ ಇರಲಾರೆ. ಆತ್ಮನನ್ನು ವಂಚಿಸಿ ಅವನಿಗೆ ತಿಳಿಯದ ರೀತಿಯಲ್ಲಿ ನೀನು ಕಾರ್ಯಮಾಡಲಾರೆ. ಆದರೆ ಅವನಿರುವುದನ್ನೇ ಅನಾದರಣೆಮಾಡಿ ನೀನು ಕಾರ್ಯಮಾಡಲು ಸಾಧ್ಯವಿದೆ. ಅದನ್ನೇ ನೀನೀಗ ಮಾಡುತ್ತಿರುವೆ. ಅವನ ಸಮಕ್ಷದಲ್ಲಿಯೇ ಮಹಾ ಪಾಪಕಾರ್ಯವನ್ನು ಮಾಡುತ್ತಿರುವೆ.

---

ಮನಸ್ಸು ಅದನ್ನು ಒಪ್ಪುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಸಾಮಾನ್ಯವಾಗಿ ಮನಸ್ಸಿನ ಪ್ರಾಬಲ್ಯವೇ ಹೆಚ್ಚಾಗುತ್ತದೆ. ಮನಸ್ಸಿನಂತೆ ನಡೆದುದು ಆತ್ಮವಂಚನೆಯಾಯಿತೆಂದು ಮನಸ್ಸಿಗೆ ಆಗಾಗ ಸ್ಫುರಣೆಯಾದರೂ ತರ್ಕ-ವಿತರ್ಕಗಳಲ್ಲಿಯೇ ಸರ್ವದಾ ಲೀನವಾದ ಮನಸ್ಸು–'ಹಾಗೆ ಮಾಡದಿದ್ದರೆ ಎಷ್ಟು ತೊಂದರೆಯಾಗುತ್ತಿತ್ತು?'–ಎಂದು ಪ್ರತಿಯೊಂದು ಸನ್ನಿವೇಶದಲ್ಲಿಯೂ ಸಮಾಧಾನಪಟ್ಟುಕೊಳ್ಳುತ್ತದೆ. ಮನಸ್ಸಿನ ಪ್ರಾಬಲ್ಯವು ಹೆಚ್ಚುತ್ತಾ ಹೋದಂತೆಲ್ಲಾ ಆತ್ಮನ ಅಥವಾ ಬುದ್ಧಿಯ ಪ್ರಾಬಲ್ಯವು ಕುಂಠಿತವಾಗಿ ಮಾನವನು ಹೃದಯಶೂನ್ಯನಾಗುತ್ತಾನೆ.

**ಮನ್ಯತೇ ಪಾಪಕಂ ಕೃತ್ವಾ ನ ಕಶ್ಚಿದ್ವೇತ್ತಿ ಮಾಮಿತಿ ।**
**ವಿದನ್ತಿ ಚೈನಂ ದೇವಾಶ್ಚ ಯಶ್ಚೈವಾನ್ತರಪೂರುಷಃ ॥೨೯॥**

ಪಾಪಕಾರ್ಯವನ್ನು ಮಾಡಿ–'ನಾನು ಆ ಕಾರ್ಯವನ್ನು ಮಾಡಿದಾಗ ಯಾರೂ ಅಲ್ಲಿ ಇರಲಿಲ್ಲ ; ಬದುಕಿಬಿಟ್ಟೆ ; ಯಾರಿಗೂ ತಿಳಿಯದ ರೀತಿಯಲ್ಲಿ ಬಹುಬುದ್ಧಿವಂತಿಕೆಯಿಂದ ಕಾರ್ಯವನ್ನು ಮಾಡಿಬಿಟ್ಟಿದ್ದೇನೆ ; ಇದನ್ನು ನಾನೇ ಮಾಡಿದೆನೆಂದು ಯಾರಿಂದಲೂ ಪತ್ತೆಹಚ್ಚಲು ಸಾಧ್ಯವೇ ಇಲ್ಲ'–ಇವೇ ಮುಂತಾಗಿ ಭ್ರಮಿಸುವವನು ನಿಶ್ಚಯವಾಗಿಯೂ ಮೂಢನೇ ಸರಿ. ನಾನು ಹಿಂದೆಯೇ ಹೇಳಿದಂತೆ, ಮಹಾರಾಜ! ಹೃದಯಕಮಲಮಧ್ಯದಲ್ಲಿರುವ ಪರಮಾತ್ಮನು ಪ್ರತಿಯೊಂದು ಕಾರ್ಯಕ್ಕೂ ಸಾಕ್ಷೀಭೂತನಾಗಿರುವುದು ಮಾತ್ರವಲ್ಲದೇ ಎಲ್ಲ ದೇವತೆಗಳೂ ಮಾನವನು ಅಥವಾ ಪ್ರಾಣಿಯು ಮಾಡುವ ಪಾಪ-ಪುಣ್ಯಕಾರ್ಯಗಳನ್ನು ಎಲ್ಲ ಕಾಲಗಳಲ್ಲಿಯೂ ನೋಡುತ್ತಲೇ ಇರುತ್ತಾರೆ.

**ಆದಿತ್ಯಚನ್ದ್ರಾವನಿಲಾನಲೌ ಚ**
**ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ।**
**ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ**
**ಧರ್ಮಶ್ಚ ಜಾನಾತಿ ನರಸ್ಯ ವೃತ್ತಮ್ ॥೩೦॥**

ಸೂರ್ಯ, ಚಂದ್ರ, ವಾಯು, ಅಗ್ನಿ, ಅಂತರಿಕ್ಷ, ಭೂಮಿ, ಜಲ, ಹೃದಯ ( ಆತ್ಮ ), ಯಮ, ಹಗಲು-ರಾತ್ರಿಗಳು, ಎರಡು ಸಂಧ್ಯೆಗಳು ಮತ್ತು ಧರ್ಮ–ಇವರೆಲ್ಲರೂ ಮನುಷ್ಯನು ಮಾಡುವ ಎಲ್ಲ ಕಾರ್ಯಗಳನ್ನೂ ಎಲ್ಲ ಸಮಯಗಳಲ್ಲಿಯೂ ತಿಳಿಯುತ್ತಿರುತ್ತಾರೆ.

ಪ್ರಾಣಿಗಳಿಗೆ ಆಯಾ ಕರ್ಮಗಳಿಗೆ ಅನುಸಾರವಾದ ಶಿಕ್ಷೆ ಅಥವಾ ಸದ್ಗತಿಗಳನ್ನು ಕೊಡುವ ಯಮಧರ್ಮನಿಗೂ ಮತ್ತು ಸರ್ವಪ್ರಾಣಿಗಳ ಹೃದಯಮಂದಿರದಲ್ಲಿ ಪವಡಿಸಿರುವ ಪರಮಾತ್ಮನಿಗೂ ನಿಕಟಸಂಬಂಧವಿದೆ.

**ಯಮೋ ವೈವಸ್ವತಸ್ತಸ್ಯ ನಿರ್ಯಾತಯತಿ ದುಷ್ಕೃತಮ್ ।**
**ಹೃದಿ ಸ್ಥಿತಃ ಕರ್ಮಸಾಕ್ಷೀ ಕ್ಷೇತ್ರಜ್ಞೋ ಯಸ್ಯ ತುಷ್ಯತಿ ॥೩೧॥**

ಹೃತ್ಕಮಲದಲ್ಲಿರುವ, ಕರ್ಮಸಾಕ್ಷಿಯಾದ, ಕ್ಷೇತ್ರಜ್ಞನಾದ ಪರಮ

ಪುರುಷನು ಯಾರ ವಿಷಯದಲ್ಲಿ ಸಂತುಷ್ಟನಾಗಿರುವನೋ–ಅಂತಹವನ ಎಲ್ಲ ಪಾಪಗಳನ್ನೂ ಸೂರ್ಯಪುತ್ರನಾದ ಯಮರಾಜನು ಹೋಗಲಾಡಿಸುತ್ತಾನೆ. ಅರ್ಥಾತ್ ಅಂತಹವನಿಗೆ ಯಮಧರ್ಮನಿಂದ ಭಯವಿರುವುದಿಲ್ಲ."

ಶಕುಂತಲೆಯು ಮುಂದುವರಿದು ಹೇಳುತ್ತಾಳೆ :

**ನ ತು ತುಷ್ಯತಿ ಯಸ್ಯೈಷ ಪುರುಷಸ್ಯ ದುರಾತ್ಮನಃ ।**
**ತಂ ಯಮಃ ಪಾಪಕರ್ಮಾಣಂ ನಿಯಾತಯತಿ ದುಷ್ಕೃತಮ್ ॥೩೨॥**

"ಅಂತರಾತ್ಮನು ಯಾರ ವಿಷಯದಲ್ಲಿ ಸಂತುಷ್ಟನಾಗಿರುವುದಿಲ್ಲವೋ–ಅಂತರಾತ್ಮನನ್ನು ಯಾರು ಕಡೆಗಾಣಿಸಿ, ತಿರಸ್ಕರಿಸಿ, ಅವನ ಇರುವಿಕೆಯನ್ನೇ ಅರಿತುಕೊಳ್ಳದೇ ಪಾಪಮಾಡುತ್ತಿರುತ್ತಾರೆಯೋ–ಅಂತಹ ದುರಾತ್ಮರನ್ನು ಯಮಧರ್ಮನೆಂದಿಗೂ ಕ್ಷಮಿಸಲಾರನು. ಅವರಿಗೆ ಸರಿಯಾದ ಶಿಕ್ಷೆಯನ್ನೇ ಕೊಡುತ್ತಾನೆ.

**ಯೋಽವಮನ್ಯಾತ್ಮನಾತ್ಮಾನಮನ್ಯಥಾ ಪ್ರತಿಪದ್ಯತೇ ।**
**ನ ತಸ್ಯ ದೇವಾಃ ಶ್ರೇಯಾಂಸೋ ಯಸ್ಯಾತ್ಮಾಪಿ ನ ಕಾರಣಮ್ ॥೩೩॥**

ಯಾವನು ಅಂತರಾತ್ಮನು ಹೇಳುತ್ತಿರುವುದನ್ನೂ ಅನಾದರಣೆಮಾಡಿ ಅದಕ್ಕೆ ವಿರುದ್ಧವಾಗಿ ಮಾತನಾಡುತ್ತಾನೆಯೋ–ಅಂತಹವನ ವಿಷಯದಲ್ಲಿ ದೇವತೆಗಳೂ ಅನುಗ್ರಹಬುದ್ಧಿಯುಳ್ಳವರಾಗುವುದಿಲ್ಲ. ಅವನಿಗೆ ಶ್ರೇಯಸ್ಸೂ ಉಂಟಾಗುವುದಿಲ್ಲ ಮತ್ತು ಆತ್ಮನೂ ಅವನ ವಿಷಯದಲ್ಲಿ ಸಂತುಷ್ಟನಾಗಿರುವುದಿಲ್ಲ. ಕರೆಸಿಕೊಳ್ಳದೇ ನಾನಾಗಿಯೇ ಬಂದುದಕ್ಕೇನಾದರೂ ಈ ರೀತಿಯಲ್ಲಿ ನನ್ನನ್ನು ತಿರಸ್ಕರಿಸುವೆಯಾ, ಮಹಾರಾಜ! ಚತುರಂಗಬಲವನ್ನು ಕಳುಹಿಸಿ ಕರೆಸಿಕೊಳ್ಳುತ್ತೇನೆಂದು ಹೇಳಿದ ನೀನು ನಾಲ್ಕಾರು ವರ್ಷಗಳು ಕಳೆದರೂ ಬಾರದಿರುವುದನ್ನು ಕಂಡು, ನನ್ನ ತಂದೆಯವರೇ ನಿನ್ನ ಬಳಿಗೆ ನನ್ನನ್ನು ಕಳುಹಿಸಿಕೊಟ್ಟಿದ್ದಾರೆ. ನಿನ್ನ ಮನೆಯ ಬಾಗಿಲಿಗೆ ಬಂದಿರುವ ಪತಿವ್ರತೆಯಾದ ನನ್ನನ್ನು ಅಪಮಾನಗೊಳಿಸುವುದು ಖಂಡಿತವಾಗಿಯೂ ನಿನಗೆ ಯೋಗ್ಯವಲ್ಲ. ಧರ್ಮಪತ್ನಿಯಾದ ಮತ್ತು ಪುರಸ್ಕರಿಸಲು ಯೋಗ್ಯಳಾಗಿರುವ ನನ್ನನ್ನು ನೀನು ಪುರಸ್ಕರಿಸುವುದಂತಿರಲಿ ; ಹೀನವಾದ ಮಾತುಗಳನ್ನಾಡಿ ನೀಚಪುರುಷನಂತೆ ಅವಮಾನಗೊಳಿಸುತ್ತಿರುವೆ."

ಶಕುಂತಲೆಯು ಕ್ಷಣಕಾಲ ಸುಮ್ಮನಿದ್ದಳು. ರಾಜನಿಂದ ಉತ್ತರವೇನೂ ಬರಲಿಲ್ಲ. ತನಗೇನೂ ತಿಳಿಯದೆಂಬ ಮುಖಭಾವದಿಂದಲೇ ಕುಳಿತಿದ್ದನು.

**ನ ಖಲ್ವಹಮಿದಂ ಶೂನ್ಯೇ ರೌಮಿ ಕಿಂ ನ ಶೃಣೋಷಿ ಮೇ ॥೩೫॥**

"ನಾನು ಜನಶೂನ್ಯವಾದ ಅರಣ್ಯಪ್ರದೇಶದಲ್ಲಿ ಕೂಗಿಕೊಳ್ಳುತ್ತಿಲ್ಲ ತಾನೇ? ನಾನು ಮಾತನಾಡುತ್ತಿರುವುದು ನಿನಗೆ ಕೇಳುತ್ತಿರುವುದಲ್ಲವೇ?

**ಯದಿ ಮೇ ಯಾಚಮಾನಾಯಾ ವಚನಂ ನ ಕರಿಷ್ಯಸಿ ।**
**ದುಷ್ಯನ್ತ ಶತಧಾ ಮೂರ್ಧಾ ತತಸ್ತೇಽದ್ಯ ಸ್ಫುಟಿಷ್ಯತಿ ॥೩೬॥**

ನಿನ್ನನ್ನು ನಾನು ಪರಿ-ಪರಿಯಾಗಿ ಯಾಚಿಸುತ್ತಿರುವೆನು. ನೀನು ನಿನ್ನ ಪ್ರತಿಜ್ಞಾವಚನದಂತೆ ನಡೆದುಕೊಳ್ಳುವುದಿಲ್ಲವಾದರೆ ನಿನ್ನ ತಲೆಯು ನುಚ್ಚು ನೂರಾಗಿ ( ನೂರು ಪಾಲಾಗಿ ) ಒಡೆದು ಹೋದೀತು, ದುಷ್ಯಂತ! ನಾನು ಹೇಳುತ್ತಿರುವ ಮಾತುಗಳನ್ನು ತಿರಸ್ಕರಿಸಲು ಯತ್ನಿಸಬೇಡ. ಪತ್ನಿಯಾದವ ಳನ್ನು 'ಜಾಯಾ' ಎಂದು ಕರೆಯುವರು. ಜಾಯಾಶಬ್ದದ ನಿರುಕ್ತಿಯಾದರೂ ನಿನಗೆ ತಿಳಿದಿರುವುದೇ?

**ಭಾರ್ಯಾಂ ಪತಿಃ ಸಮ್ಪ್ರವಿಶ್ಯ ಸ ಯಸ್ಮಾಜ್ಜಾಯತೇ ಪುನಃ ।**
**ಜಾಯಾಯಾಸ್ತದ್ಧಿ ಜಾಯಾತ್ವಂ ಪೌರಾಣಾಃ ಕವಯೋ ವಿದುಃ ॥೩೭॥**

ಪತಿಯು ಭಾರ್ಯೆಯ ಗರ್ಭಾಂಬುಧಿಯನ್ನು ಶುಕ್ಲರೂಪವಾಗಿ ಪ್ರವೇಶಿಸಿ ಮಗನೆಂಬ ಅಭಿಧಾನದಿಂದ ಪುನಃ ಅವಳಲ್ಲಿಯೇ ಹುಟ್ಟುತ್ತಾನೆ. ಈ ಕಾರಣದಿಂದಲೇ ಪತ್ನಿಗೆ ಜಾಯಾಶಬ್ದವು ಸಿದ್ಧವಾಗುವುದೆಂದು ಹಿಂದಿನ ವಿದ್ವಾಂಸರ ಅಭಿಮತವಾಗಿದೆ. ಗರ್ಭಾಧಾನಾದಿ ಸಂಸ್ಕಾರಗಳಿಂದ ಸಂಸ್ಕೃತನಾಗಿ ಪುರುಷನಿಗೆ ಹುಟ್ಟುವ ಇಂತಹ ಸಂತಾನವು (ಪುತ್ರನು) ಪ್ರೇತರೂಪದಲ್ಲಿರುವ (ಹಿಂದೆ ಸತ್ತಿರುವ) ಪಿತಾಮಹ-ಪ್ರಪಿತಾಮಹರ ಉದ್ಧಾರಕನಾಗುತ್ತಾನೆ.

**ಪುನ್ನಾಮ್ನೋ ನರಕಾದ್ಯಸ್ಮಾತ್ಪಿತರಂ ತ್ರಾಯತೇ ಸುತಃ ।**
**ತಸ್ಮಾತ್ಪುತ್ರ ಇತಿ ಪ್ರೋಕ್ತಃ ಸ್ವಯಮೇವ ಸ್ವಯಮ್ಭುವಾ ॥೩೮॥**

ಮಹಾರಾಜ! ಪುತ್ರನಿಲ್ಲದವನಿಗೆ ' ಪುತ್ ' ಎಂಬ ಹೆಸರಿನ ನರಕವು

ಪ್ರಾಪ್ತವಾಗುವುದು. ಮಗನು ಹುಟ್ಟಿ ಅಂತಹ 'ಪುತ್' ಎಂಬ ಹೆಸರಿನ ನರಕದಿಂದ ತಂದೆಯನ್ನು ಪಾರುಮಾಡುವನಾದ್ದರಿಂದ ಅವನು ಪುತ್ರನೆಂದು ಪ್ರಸಿದ್ಧನಾಗುತ್ತಾನೆಂದು ಸ್ವಯಂಭುವೇ ಹೇಳಿದ್ದಾನೆ. ಆದರೆ ನಿನ್ನೆದುರಿನಲ್ಲಿಯೇ ಅಂತಹ ಪುತ್ರನು ನಿಂತಿದ್ದರೂ ನೀನು ಏನೂ ತಿಳಿಯದವನಂತೆ ನಟಿಸುತ್ತಿರುವೆ.

ನಾನು ನಿನ್ನ ಧರ್ಮಪತ್ನೀ, ಭಾರ್ಯೆ. ಭಾರ್ಯೆಯ ಮಹತ್ತ್ವವೇನೆಂಬುದನ್ನಾದರೂ ತಿಳಿದಿರುವೆಯಾ? ಅದನ್ನು ಅರಿತಿದ್ದರೆ, ಅಂತಹ ಭಾರ್ಯೆಯನ್ನು ನೀನಿಂದು ಈ ತುಂಬಿದ ಸಭೆಯಲ್ಲಿ ಅವಮಾನಗೊಳಿಸುತ್ತಿರಲಿಲ್ಲ.

**ಸಾ ಭಾರ್ಯಾ ಯಾ ಗೃಹೇ ದಕ್ಷಾ ಸಾ ಭಾರ್ಯಾ ಯಾ ಪ್ರಜಾವತೀ ।**
**ಸಾ ಭಾರ್ಯಾ ಯಾ ಪತಿಪ್ರಾಣಾ ಸಾ ಭಾರ್ಯಾ ಯಾ ಪತಿವ್ರತಾ ॥**

ಗೃಹಕೃತ್ಯಗಳಲ್ಲಿ ದಕ್ಷಳಾಗಿರಬೇಕು. ಪುತ್ರವತಿಯಾಗಿರಬೇಕು. ಪತಿಯೇ ತನ್ನ ಪ್ರಾಣಗಳೆಂದು ಭಾವಿಸಿರಬೇಕು. ಪತಿಯು ಮಾಡುವ ಕೆಲಸ-ಕಾರ್ಯಗಳಿಗೆ ಅನುಕೂಲಳಾಗಿರಬೇಕು. ಇವು ಭಾರ್ಯೆಯಾದವಳ ಮುಖ್ಯ ಲಕ್ಷಣಗಳು.

**ಅರ್ಧಂ ಭಾರ್ಯಾ ಮನುಷ್ಯಸ್ಯ ಭಾರ್ಯಾ ಶ್ರೇಷ್ಠತಮಃ ಸಖಾ ।**
**ಭಾರ್ಯಾ ಮೂಲಂ ತ್ರಿವರ್ಗಸ್ಯ ಭಾರ್ಯಾ ಮೂಲಂ ತರಿಷ್ಯತಃ ॥**

ಭಾರ್ಯೆಯು ಮನುಷ್ಯನ ಅರ್ಧಾಂಗಿಯು. ಭಾರ್ಯೆಯು ಶ್ರೇಷ್ಠತಮಳಾದ ಮಿತ್ರಸ್ವರೂಪಳು. ಧರ್ಮಾರ್ಥ-ಕಾಮಗಳ ಪ್ರಾಪ್ತಿಗೆ ಭಾರ್ಯೆಯೇ ಕಾರಣಳಾಗುತ್ತಾಳೆ. ಸಂಸಾರಸಾಗರವನ್ನು ದಾಟಲಿಚ್ಛಿಸುವವನು ಭಾರ್ಯೆಯ ನೆರವನ್ನು ಪಡೆಯಲೇಬೇಕು.

**ಭಾರ್ಯಾವನ್ತಃ ಕ್ರಿಯಾವನ್ತಃ ಸಭಾರ್ಯಾ ಗೃಹಮೇಧಿನಃ ।**
**ಭಾರ್ಯಾವನ್ತಃ ಪ್ರಮೋದನ್ತೇ ಭಾರ್ಯಾವನ್ತಃ ಶ್ರಿಯಾನ್ವಿತಾಃ ॥೪೨॥**

ಸಪತ್ನೀಕರಾಗಿದ್ದರೆ ಮಾತ್ರವೇ ಯಜ್ಞ-ಯಾಗಾದಿಗಳನ್ನು ಮಾಡಲು ಅರ್ಹರಾಗುತ್ತಾರೆ. (ಅಥವಾ ಮದುವೆಮಾಡಿಕೊಂಡು ಹೆಂಡತಿಯನ್ನು

ಸಾಕಬೇಕಾದ ಹೊಣೆಗಾರಿಕೆಯು ಬಿದ್ದಾಗಲೇ ಮನುಷ್ಯನು ಕಾರ್ಯೋನ್ಮುಖ ನಾಗುತ್ತಾನೆ.) ಸಪತ್ನೀಕರು ಮಾತ್ರವೇ ಗೃಹಸ್ಥರೆಂಬ ಹೆಸರು ಪಡೆಯುತ್ತಾರೆ. (ಮನೆಯಲ್ಲಿ ವಾಸಮಾಡುವವರೆಲ್ಲರಿಗೂ ಗೃಹಸ್ಥರೆಂಬ ಹೆಸರು ಬರು ವುದಿಲ್ಲ.) ಸಪತ್ನೀಕನಾದವನು ಮಾತ್ರವೇ ಸುಖ-ಸಂತೋಷಗಳನ್ನು ಅನುಭವಿಸುತ್ತಾನೆ. (ಬೇರೆಯವರಿಗೆ ಸುಖ-ಸಂತೋಷಗಳು ಇಲ್ಲವೆಂದಲ್ಲ. ಭಾರ್ಯಾವಂತರಲ್ಲದವರಿಗೆ ಕಷ್ಟಬಂದಾಗ ಹೇಳುವವರೂ–ಕೇಳುವವರೂ ಇಲ್ಲದೇ ಇರಬಹುದು. ಆದರೆ ಭಾರ್ಯಾವಂತರಿಗೆ ಕಷ್ಟಬಂದರೆ ಭಾರ್ಯೆ ಯಾದವಳು ಸೇವೆಯಿಂದ ಸವಿಮಾತುಗಳಿಂದ ಪತಿಗೆ ಸುಖದಾಯಕಳಾಗು ವಳು. ಆದುದರಿಂದ ಭಾರ್ಯಾವಂತರು ಎಲ್ಲ ಕಾಲಗಳಲ್ಲಿಯೂ ಸುಖ ವಾಗಿಯೇ ಇರುತ್ತಾರೆ. ಸಂತೋಷಕ್ಕೆ ಮೂಲವೇ ಭಾರ್ಯೆ.) ಭಾರ್ಯಾ ವಂತರೇ ಶ್ರೀಸಂಪನ್ನರಾಗುತ್ತಾರೆ.

**ಸಖಾಯಃ ಪ್ರವಿವಿಕ್ತೇಷು ಭವನ್ತ್ಯೇತಾಃ ಪ್ರಿಯಂವದಾಃ ।**
**ಪಿತರೋ ಧರ್ಮಕಾರ್ಯೇಷು ಭವನ್ತ್ಯಾರ್ತಸ್ಯ ಮಾತರಃ ॥೪೩॥**

ಪತ್ನಿಯಾದವಳು ತಂದೆ, ತಾಯಿ, ಮಿತ್ರ, ದಾಸೀ–ಈ ಎಲ್ಲರ ಪಾತ್ರ ವನ್ನೂ ವಹಿಸುತ್ತಾಳೆ. ಏಕಾಂತದಲ್ಲಿ ಭಾರ್ಯೆಯು ಸನ್ಮಿತ್ರನಂತೆ ಪತಿಗೆ ಪ್ರಿಯವಾದ ಮಾತುಗಳನ್ನೇ ಹೇಳುತ್ತಾಳೆ. ಧರ್ಮಕಾರ್ಯಗಳಲ್ಲಿ ತಂದೆಯು ಮಗನಿಗೆ ಹೇಳುವಂತೆ–ಹಿತವಾದವನ್ನು ಹೇಳುವವಳೂ ಭಾರ್ಯೆಯೇ. ರೋಗಾದಿಗಳು ಬಂದಾಗ ಭಾರ್ಯೆಯಾದವಳು ಸಾಕ್ಷಾತ್ ತಾಯಿಯಂತೆಯೇ ಉಪಚರಿಸುತ್ತಾಳೆ.

**ಕಾನ್ತಾರೇಷ್ವಪಿ ವಿಶ್ರಾಮೋ ಜನಸ್ಯಾಧ್ವನಿಕಸ್ಯ ವೈ ।**
**ಯಃ ಸದಾರಃ ಸ ವಿಶ್ವಾಸ್ಯಸ್ತಸ್ಮಾದ್ದಾರಾಃ ಪರಾ ಗತಿಃ ॥೪೪॥**

ತೀರ್ಥಯಾತ್ರೆಯನ್ನಾಗಲೀ ಪರದೇಶಯಾತ್ರೆಯನ್ನಾಗಲೀ ಮಾಡುವ ಕಾಲದಲ್ಲಿಯೂ, ಅರಣ್ಯದ ಮೂಲಕ ಹೋಗಬೇಕಾದ ಸಮಯಗಳ ಲ್ಲಿಯೂ ಭಾರ್ಯೆಯಾದವಳು ಪತಿಯನ್ನು ಉಪಚರಿಸುತ್ತಾಳೆ. ಮೇಲಾಗಿ ಹಾದಿಯಲ್ಲಿ ಸಿಕ್ಕುವ ನಗರ-ಗ್ರಾಮಗಳಲ್ಲಿಯೂ ಭಾರ್ಯೆಯೊಡನೆ ಹೋಗು

ವವನಿಗೆ ಜನರು ತಂಗಲು ಆಶ್ರಯವನ್ನು ನೀಡುತ್ತಾರೆ. ಅಂತಹವನ ವಿಷಯ ದಲ್ಲಿ ಮನುಷ್ಯರು ವಿಶ್ವಾಸವಿಡುತ್ತಾರೆ. (ನಂಬುತ್ತಾರೆ.) ಈ ಎಲ್ಲ ಕಾರಣ ಗಳಿಂದಲೂ ಪತ್ನಿಯೇ ಪತಿಗೆ ದಿಕ್ಕು. (ಸಾಯುವವರೆಗೂ ಸಂಸಾರ ; ಸತ್ತಮೇಲೆ ತನಗೂ ಮತ್ತು ಇತರರಿಗೂ ಸಂಬಂಧವಿಲ್ಲವೆಂಬ ಹಿರಿಯರ ಮಾತು-ಭಾರ್ಯೆಯಾದವಳಿಗೆ ; ಪತಿವ್ರತೆಯಾದವಳಿಗೆ ಅನ್ವಯಿಸುವು ದಿಲ್ಲ.)

**ಸಂಸರನ್ತಮಪಿ ಪ್ರೇತಂ ವಿಷಮೇಷ್ವೇಕಪಾತಿನಮ್ ।**
**ಭಾರ್ಯೈವಾನ್ವೇತಿ ಭರ್ತಾರಂ ಸತತಂ ಯಾ ಪತಿವ್ರತಾ ॥೪೫॥**

ಸಂಸಾರದಲ್ಲಿದ್ದರೂ ಭಾರ್ಯೆಯು ಪತಿಯ ಜೊತೆಯಲ್ಲಿಯೇ ಇರು ತ್ತಾಳೆ. ಪತಿಯು ಪರಲೋಕವನ್ನೈದಿದರೂ ಸತಿಯಾದವಳು ಅಲ್ಲಿಗೂ ಅವನನ್ನೇ ಅನುಸರಿಸಿ ಹೋಗುತ್ತಾಳೆ. ಕಷ್ಟಸಮಯದಲ್ಲಿಯೂ ಎಲ್ಲರೂ ಕೈಬಿಟ್ಟ ಸಮಯದಲ್ಲಿಯೂ ಸತಿಯಾದವಳು ಮಾತ್ರವೇ ಪತಿಯ ಜೊತೆ ಯಲ್ಲಿದ್ದು ಪತಿಯ ಕಷ್ಟದಲ್ಲಿ ಸಹಭಾಗಿನಿಯಾಗುತ್ತಾಳೆ.

**ಪ್ರಥಮಂ ಸಂಸ್ಥಿತಾ ಭಾರ್ಯಾ ಪತಿಂ ಪ್ರೇತ್ಯ ಪ್ರತೀಕ್ಷತೇ ।**
**ಪೂರ್ವಂ ಮೃತಂ ಚ ಭರ್ತಾರಂ ಪಶ್ಚಾತ್ಸಾಧ್ವ್ಯನುಗಚ್ಛತಿ ॥೪೬॥**

ಭಾರ್ಯೆಯಾದವಳು ಗಂಡನಿಗಿಂತಲೂ ಮೊದಲೇ ಪರಲೋಕ ವನ್ನೈದಿದರೆ ಅಲ್ಲಿ ಗಂಡನ ಪ್ರತೀಕ್ಷೆಯನ್ನು ಮಾಡುತ್ತಲೇ ಇರುತ್ತಾಳೆ. ಗಂಡ ನೇನಾದರೂ ತನಗಿಂತಲೂ ಮೊದಲೇ ಮೃತನಾದರೆ ಸಾಧ್ವಿಯಾದವಳು ಅವನನ್ನೇ ಅನುಸರಿಸಿ ಪರಲೋಕಕ್ಕೂ ಹೊರಟುಹೋಗುತ್ತಾಳೆ. ಆದುದ ರಿಂದ ಸತಿ-ಪತಿಯರ ಸಂಬಂಧವು ಶಾಶ್ವತವಾದುದು ಮತ್ತು ನಿತ್ಯವಾದುದು.

**ಏತಸ್ಮಾತ್ಕಾರಣಾದ್ರಾಜನ್ಪಾಣಿಗ್ರಹಣಮಿಷ್ಯತೇ ।**
**ಯದಾಪ್ನೋತಿ ಪತಿರ್ಭಾರ್ಯಾಮಿಹಲೋಕೇ ಪರತ್ರ ಚ ॥೪೭॥**

ಮಹಾರಾಜ! ಇಹ-ಪರಗಳೆರಡರಲ್ಲಿಯೂ ಭಾರ್ಯೆಯು ಪತಿ ಯನ್ನನುಸರಿಸಿಕೊಂಡಿದ್ದು ಅವನ ಹಿತದಲ್ಲಿಯೇ ಆಸಕ್ತಳಾಗಿರುವ ಕಾರಣ ಮನುಷ್ಯರು ಸದ್ಗುಣಸಂಪನ್ನೆಯಾದ ವಧುವಿನ ಪಾಣಿಗ್ರಹಣವನ್ನು ಅಪೇಕ್ಷಿ ಸುತ್ತಾರೆ.

**ಆತ್ಮಾSSತ್ಮನೈವ ಜನಿತಃ ಪುತ್ರ ಇತ್ಯುಚ್ಯತೇ ಬುಧೈಃ ।**
**ತಸ್ಮಾದ್ಭಾರ್ಯಾಂ ನರಃ ಪಶ್ಯೇನ್ಮಾತೃವತ್ಪುತ್ರಮಾತರಮ್ ॥೪೮॥**

ಪತಿಯಾದವನು ಪತ್ನಿಯ ಗರ್ಭಾಂಬುಧಿಯಲ್ಲಿ ಪುನಃ ಹುಟ್ಟುತ್ತಾನೆ. ಪುನಃ ಹುಟ್ಟಿದ ಅವನನ್ನೇ ವಿದ್ವಾಂಸರು 'ಪುತ್ರ' ಎಂದು ಕರೆಯುತ್ತಾರೆ. ಮಂತ್ರದ ಮೂಲಕವಾಗಿ ತಂದೆಯಾದವನೂ ಇದನ್ನೇ ಉಚ್ಚರಿಸುತ್ತಾನೆ. 'ಆತ್ಮಾ ವೈ ಪುತ್ರನಾಮಾಸಿ'–'ನೀನೂ ನನ್ನ ಆತ್ಮಸ್ವರೂಪನೇ. ಆದರೆ ನೀನು ನನ್ನ ಪುತ್ರನೆಂದು ಕರೆಯಲ್ಪಡುವೆ.' ಮಹಾರಾಜ! ಈ ಕಾರಣದಿಂದಾಗಿ ಮನುಷ್ಯನಾದವನು ತನ್ನ ಭಾರ್ಯೆಯನ್ನು ಅಥವಾ ತನ್ನ ಪುತ್ರನ ತಾಯಿಯನ್ನು ತಾಯಿಯಂತೆಯೇ ಗೌರವಿಸಬೇಕು.

**ಭಾರ್ಯಾಯಾಂ ಜನಿತಂ ಪುತ್ರಮಾದರ್ಶೇಷ್ವಿವ ಚಾನನಮ್ ।**
**ಹ್ಲಾದತೇ ಜನಿತಾ ಪ್ರೇಕ್ಷ್ಯ ಸ್ವರ್ಗಂ ಪ್ರಾಪ್ಯೇವ ಪುಣ್ಯಕೃತ್ ॥೪೯॥**

ಧರ್ಮಪತ್ನಿಯಲ್ಲಿ ಹುಟ್ಟಿದ, ತನ್ನ ಮುಖವು ಕನ್ನಡಿಯಲ್ಲಿ ಹೇಗೆ ಕಾಣುವುದೋ ಹಾಗೆಯೇ ಇರುವ ಮುಖಲಕ್ಷಣದಿಂದ ಕೂಡಿರುವ (ಕನ್ನಡಿಯಲ್ಲಿ ಕಾಣುವ ತನ್ನ ಮುಖದಂತಿರುವ ) ಮಗನನ್ನು ನೋಡಿದೊಡನೆಯೇ ತಂದೆಯಾದವನು–ಪುಣ್ಯಮಾಡಿದವನೊಬ್ಬನು ಸ್ವರ್ಗವನ್ನು ಪಡೆಯುವುದರಿಂದ ಎಷ್ಟೊಂದು ಆನಂದವನ್ನು ಅನುಭವಿಸುತ್ತಾನೆಯೋ–ತತ್ಸಮವಾದ ಆನಂದವನ್ನೇ ಅನುಭವಿಸುತ್ತಾನೆ.

**ದಹ್ಯಮಾನಾ ಮನೋದುಃಖೈರ್ವ್ಯಾಧಿಭಿಶ್ಚಾತುರಾ ನರಾಃ ।**
**ಹ್ಲಾದನ್ತೇ ಸ್ವೇಷು ದಾರೇಷು ಘರ್ಮಾರ್ತಾಃ ಸಲಿಲೇಷ್ವಿವ ॥೫೦॥**

ಮನುಷ್ಯರು ಮನೋರೋಗದಿಂದ ಪೀಡಿತರಾಗಿರಬಹುದು ; ವ್ಯಾಧಿಯಿಂದ ನರಳುತ್ತಿರಬಹುದು ; ದಾರಿದ್ರ್ಯದ ಬೇಗೆಯಿಂದ ಬೇಯುತ್ತಲೂ ಇರಬಹುದು. ಅಂತಹ ಸಮಯಗಳಲ್ಲಿಯೂ ಭಾರ್ಯೆಯಾದವಳು ಸೈರಣೆಯಿಂದಲೂ ಕ್ಷಮೆಯಿಂದಲೂ ಇದ್ದು ಪತಿಯ ಶುಶ್ರೂಷೆಮಾಡುತ್ತಾ ಹಿತೋಕ್ತಿಗಳನ್ನು ಹೇಳುತ್ತಾ–ಬಿಸಿಲಿನಿಂದ ಬಳಲಿದವರಿಗೆ ನೀರು ಆನಂದವನ್ನುಂಟುಮಾಡುವಂತೆ–ಪತಿಗೆ ಆನಂದದಾಯಕಳಾಗಿರುತ್ತಾಳೆ. ಪತಿವ್ರತೆಯರಾದ ಭಾರ್ಯೆಯರನ್ನು ಪಡೆದವರು ಎಂತಹ ಕಷ್ಟದಲ್ಲಿಯೇ ಆದರೂ

ಪರಿತಪಿಸುವ ಕಾರಣವಿರುವುದಿಲ್ಲ. ಈ ಕಾರಣಗಳಿಂದಾಗಿ, ಮನುಷ್ಯನು ಯಾವ ಕಾರಣದಿಂದಲೇ ಆಗಲೀ ಎಷ್ಟೇ ಕೋಪಗೊಂಡಿದ್ದರೂ ಪತ್ನಿಯ ವಿಷಯದಲ್ಲಿ ಬಹಳ ಸೌಜನ್ಯದಿಂದಿರಬೇಕು.

**ಸುಸಂರಬ್ಧೋಽಪಿ ರಾಮಾಣಾಂ ನ ಕುರ್ಯಾದಪ್ರಿಯಂ ನರಃ ।**
**ರತಿಂ ಪ್ರೀತಿಂ ಚ ಧರ್ಮಂ ಚ ತಾಸ್ವಾಯತ್ತಮವೇಕ್ಷ್ಯ ಹಿ ॥೫೧॥**

ರತಿ, ಪ್ರೀತಿ ಮತ್ತು ಧರ್ಮಗಳು ಭಾರ್ಯೆಯನ್ನೇ ಅವಲಂಬಿಸಿವೆ ಯಾದುದರಿಂದ ಮನುಷ್ಯನು-ಯದ್ಯಪಿ ಯಾವ ಕಾರಣದಿಂದಲಾದರೂ ಕುಪಿತನಾಗಿದ್ದರೂ ಸಹ ಭಾರ್ಯೆಯ ವಿಷಯದಲ್ಲಿ ಅಪ್ರಿಯವನ್ನು ಎಂದಿಗೂ ಮಾಡಬಾರದು. ಸ್ತ್ರೀ ಎಂಬುವಳೇ ಪ್ರಪಂಚದ ಉತ್ಪತ್ತಿಗೆ ಕಾರಣಳು.

**ಆತ್ಮನೋ ಜನ್ಮನಃ ಕ್ಷೇತ್ರಂ ಪುಣ್ಯಂ ರಾಮಾಃ ಸನಾತನಮ್ ।**
**ಋಷೀಣಾಮಪಿ ಕಾ ಶಕ್ತಿಃ ಸ್ರಷ್ಟುಂ ರಾಮಾಮೃತೇ ಪ್ರಜಾಮ್ ॥೫೨॥**

ಸ್ತ್ರೀಯು ಮಾನವನ ಜನ್ಮಕ್ಷೇತ್ರ. ಜನ್ಮಭೂಮಿಯು ಪವಿತ್ರವಾದು ದೆನ್ನುವುದಾದರೆ ಜನ್ಮಕ್ಷೇತ್ರವು ಪವಿತ್ರತಮವಾದುದು. ಆದುದರಿಂದಲೇ ಸ್ತ್ರೀಯರು ತಮ್ಮ ಪತಿಗಳಿಗೆ ಸನಾತನವಾದ ಪುಣ್ಯಕ್ಷೇತ್ರವೂ ಆಗಿದ್ದಾರೆ. ಋಷಿ-ಮಹರ್ಷಿಗಳು ಮಹಾತಪಸ್ವಿಗಳಾಗಿರಬಹುದು. ಅಘಟಿತಘಟನಾ ಸಾಮರ್ಥ್ಯವುಳ್ಳವರಾಗಿಯೂ ಆಗಿರಬಹುದು. ಅವರಾದರೂ ಸ್ತ್ರೀಯಿಂದ ಹೊರತಾಗಿ ಪ್ರಜೋತ್ಪತ್ತಿಯನ್ನು ಮಾಡಲಾರರು. ಎಂತಹ ತಪಸ್ಸಿನಿಂದಲೂ ಅವರಿಗೆ ಆ ಶಕ್ತಿಯು ಪ್ರಾಪ್ತವಾಗುವುದಿಲ್ಲ. ಮೇಲಾಗಿ ಎಲ್ಲ ಋಷಿ-ಮಹರ್ಷಿಗಳೂ ಸ್ತ್ರೀಯರಿಂದಲೇ ಜನ್ಮತಾಳಿದವರಾಗಿದ್ದಾರೆ.

ಮಹಾರಾಜ! ಮಕ್ಕಳ ಸುಖವೆಂದರೇನು? ಮಕ್ಕಳಿಂದ ಹೇಗೆ ಸುಖಪಡೆಯುವುದು? ತಂದೆಯಾದವನು ತನ್ನ ಚಿಕ್ಕಮಕ್ಕಳಿಂದ ಹೇಗೆ ಸುಖ ಪಡೆಯುತ್ತಾನೆ?–ಎಂಬ ಈ ವಿಷಯಗಳು ನಿನಗೆ ತಿಳಿಯದೆಂದೇ ತೋರು ತ್ತದೆ.

**ಪ್ರತಿಪದ್ಯ ಯದಾ ಸೂನುರ್ಧರಣೀರೇಣುಗುಣ್ಠಿತಃ ।**
**ಪಿತುರಾಶ್ಲಿಷ್ಯತೇಽಙ್ಗಾನಿ ಕಿಮಸ್ತ್ಯಭ್ಯಧಿಕಂ ತತಃ ॥೫೩॥**

ಹೊರಗೆ ಹೋಗಿದ್ದ ತಂದೆಯು ಮನೆಗೆ ಬಂದ ವೇಳೆಯಲ್ಲಿ ಅಪ್ಪನು ಬಂದನೆಂಬ ವಾರ್ತೆಯನ್ನು ತಾಯಿಯಿಂದ ಕೇಳಿದೊಡನೆಯೇ ಮಣ್ಣಿನಲ್ಲಿ ಆಟವಾಡುತ್ತಿದ್ದ ಬಾಲನು ಪುಟ್ಟ-ಪುಟ್ಟ ಹೆಜ್ಜೆಗಳನ್ನಿಟ್ಟುಕೊಂಡು–"ಅಪ್ಪ, ಅಪ್ಪ"–ಎಂದು ತೊದಲ್ನುಡಿಗಳಿಂದ ತಂದೆಯನ್ನು ಕೂಗುತ್ತಾ ಅಪ್ಪನ ತೊಡೆಯ ಮೇಲೆ ಬಿದ್ದು ಹೊರಳಾಡುತ್ತಿರುವಾಗ ತಂದೆಗುಂಟಾಗುವ ಆನಂದವು ಅವರ್ಣನೀಯವಾದುದು. ಕೇವಲ ಅನುಭವೈಕವೇದ್ಯವಾದುದು. ಅಂತಹ ಪುತ್ರನಿಂದು ನಿನ್ನೆದುರಿನಲ್ಲಿ ನಿಂತಿದ್ದಾನೆ. ನಿನ್ನ ತೊಡೆಯ ಮೇಲೆ ಕುಳಿತುಕೊಳ್ಳುವ ಆಸೆಯಿಂದಿದ್ದಾನೆ. ಇಂತಹ ನಿನ್ನ ನಿಜಸ್ವರೂಪನಾದ ಈ ಪುತ್ರನನ್ನೇಕೆ ಅನಾದರಣೆಮಾಡುತ್ತಿರುವೆ?

**ಅಣ್ಡಾನಿ ಬಿಭ್ರತಿ ಸ್ವಾನಿ ನ ಭಿನ್ದನ್ತಿ ಪಿಪೀಲಿಕಾಃ ।**
**ನ ಭರೇಥಾಃ ಕಥಂ ನು ತ್ವಂ ಧರ್ಮಜ್ಞಃ ಸನ್ಸ್ವಮಾತ್ಮಜಮ್ ॥೫೪॥**

ಇರುವೆಗಳು ಕೂಡ ತಾವಿಟ್ಟ ಮೊಟ್ಟೆಗಳನ್ನು ಜೋಪಾನವಾಗಿಟ್ಟು ಮರಿಗಳನ್ನು ಮಾಡಿ ಮುದ್ದಾಡುತ್ತವೆ. ಮೊಟ್ಟೆಗಳನ್ನು ಯಾವ ಕಾರಣ ದಿಂದಲೂ ಒಡೆದುಹಾಕುವುದಿಲ್ಲ. ಹೀಗಿರುವಾಗ ಧರ್ಮಜ್ಞನಾದ ನೀನು ನಿನ್ನ ಸ್ವಂತ ಮಗನನ್ನು ಎತ್ತಿಕೊಂಡು ಮುದ್ದಾಡುವುದಿಲ್ಲವೇಕೆ?

**ನ ವಾಸಸಾಂ ನ ರಾಮಾಣಾಂ ನಾಪಾಂ ಸ್ಪರ್ಶಸ್ತಥಾವಿಧಃ ।**
**ಶಿಶೋರಾಲಿಙ್ಗ್ಯಮಾನಸ್ಯ ಸ್ಪರ್ಶಃ ಸೂನೋರ್ಯಥಾ ಸುಖಃ ॥೫೫॥**

ಮಹಾರಾಜ! ಮನುಷ್ಯನಿಗೆ ಸ್ಪರ್ಶಸುಖವನ್ನು ಕೊಡತಕ್ಕುವುಗಳು ಹಲವಾರಿವೆ. ಅವುಗಳಲ್ಲಿ ಮುಖ್ಯವಾದುವುಗಳೆಂದರೆ ಸ್ತ್ರೀ, ಬಟ್ಟೆ ಮತ್ತು ನೀರು. ಆದರೆ ಧೂಳಿನಿಂದ ಆವೃತವಾದ ಮಗುವನ್ನು ತಬ್ಬಿ ಆಲಿಂಗನೆ ಮಾಡಿಕೊಳ್ಳುವುದರಿಂದ ಲಭ್ಯವಾಗುವ ಸ್ಪರ್ಶಸುಖಕ್ಕೆ ಇವುಗಳಾವುವೂ ಸಮಾನವಾಗಲಾರವು. ಪುತ್ರನ ಆಲಿಂಗನವು ಅಷ್ಟೊಂದು ಆನಂದದಾಯಕ ವಾದುದು. ಆರ್ಯಪುತ್ರ! ಆನಂದದಾಯಕವಾದುದು ಮಾತ್ರವಲ್ಲದೇ ಶ್ರೇಷ್ಠವಾದುದೆಂದೂ ಹೇಳುತ್ತಾರೆ.

**ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ಗೌರ್ವರಿಷ್ಠಾ ಚತುಷ್ಪದಾಮ್ ।**
**ಗುರುರ್ಗರೀಯಸಾಂ ಶ್ರೇಷ್ಠಃ ಪುತ್ರಃ ಸ್ಪರ್ಶವತಾಂ ವರಃ ॥೫೬॥**

ಎರಡು ಕಾಲುಗಳ ಪ್ರಾಣಿಗಳಲ್ಲಿ ಬ್ರಾಹ್ಮಣನು ಶ್ರೇಷ್ಠನಾದವನು. ನಾಲ್ಕು ಕಾಲುಗಳ ಪ್ರಾಣಿಗಳಲ್ಲಿ ಹಸುವು ಶ್ರೇಷ್ಠವಾದುದು. ಪೂಜಾರ್ಹರಲ್ಲಿ ಗುರುವು ಶ್ರೇಷ್ಠನೆನಿಸುತ್ತಾನೆ. ಗುರುವಿಗೆ ಪ್ರಣಾಮಮಾಡಿ ಆಶೀರ್ವಾದವನ್ನು ಪಡೆದನಂತರವೇ ಮುಂದಿನ ಕಾರ್ಯಗಳನ್ನು ಆರಂಭಿಸಬೇಕು. ಸ್ಪರ್ಶ ಮಾಡಲು ಯೋಗ್ಯರಾದವರಲ್ಲಿ ಮಗನು ಶ್ರೇಷ್ಠನೆನಿಸುತ್ತಾನೆ.

**ಸ್ಪೃಶತು ತ್ವಾಂ ಸಮಾಶ್ಲಿಷ್ಯ ಪುತ್ರೋಽಯಂ ಪ್ರಿಯದರ್ಶನಃ ।**
**ಪುತ್ರಸ್ಪರ್ಶಾತ್ಸುಖತರಃ ಸ್ಪರ್ಶೋ ಲೋಕೇ ನ ವಿದ್ಯತೇ ॥೫೮॥**

ನೋಡಲು ಪ್ರಿಯವಾದ ದರ್ಶನವುಳ್ಳ ಈ ಮಗನು ನಿನ್ನನ್ನು ಆಲಿಂಗಿಸಿ ಸ್ಪರ್ಶಿಸಲಿ. ಪುತ್ರಸ್ಪರ್ಶಕ್ಕಿಂತಲೂ ಸುಖಕರವಾದ ಸ್ಪರ್ಶವು ಲೋಕದಲ್ಲಿಯೇ ಮತ್ತೊಂದಿಲ್ಲ.

ಅರಿಂದಮನೇ! ಇನ್ನೂ ಮಾತನಾಡುವುದಿಲ್ಲವೇಕೆ? ನಿನ್ನಿಂದ ಗರ್ಭ ವತಿಯಾದ ನಾನು ಮೂರು ವರ್ಷಗಳ ಪರ್ಯಂತವಾಗಿ ಗರ್ಭಧಾರಣೆ ಮಾಡಿ ನಿನ್ನ ಶೋಕವಿನಾಶಕನಾದ ಈ ಸುಪುತ್ರನನ್ನು ಪಡೆದಿರುವೆನು. ನಾನಿನ್ನೂ ಹತ್ತು ದಿನಗಳ ಜಾತಾಶೌಚದಲ್ಲಿದ್ದಾಗಲೇ ಅಶರೀರವಾಣಿಯು– 'ಈ ಶಿಶುವು ಮುಂದೆ ನೂರು ಅಶ್ವಮೇಧಯಾಗಗಳನ್ನು ಮಾಡುವುದು'– ಎಂಬುದಾಗಿ ಹೇಳಿತು.

**ನನು ನಾಮಾಙ್ಕಮಾರೋಪ್ಯ ಸ್ನೇಹಾದ್ಗ್ರಾಮಾನ್ತರಂ ಗತಾಃ ।**
**ಮೂರ್ಧ್ನಿ ಪುತ್ರಾನುಪಾಘ್ರಾಯ ಪ್ರತಿನನ್ದನ್ತಿ ಮಾನವಾಃ ॥೬೧॥**

ಗ್ರಾಮಾಂತರಗಳಿಗೆ ಹೋದವರು ಮನೆಗೆ ಬಂದೊಡನೆಯೇ ತಮ್ಮ ಪ್ರೇಮಪುತ್ರನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಬಾಲಕನ ಕೆನ್ನೆಗೆ ಮುತ್ತಿಟ್ಟು, ನೆತ್ತಿಯನ್ನು ಆಘ್ರಾಣಿಸಿ ಅನಿರ್ವಚನೀಯವಾದ ಆನಂದವನ್ನು ಅನುಭವಿಸುತ್ತಾರೆ.

ಪುತ್ರನೆಂದರೆ ಯಾರು? ಅವನ ನಿಜಸ್ವರೂಪವೇನು? ಎಂಬ ವಿಷಯಗಳು ವೇದಗಳಲ್ಲಿಯೂ ಉಲ್ಲೇಖಿತವಾಗಿವೆ. ಬ್ರಾಹ್ಮಣರು ವೇದಗಳ ಲ್ಲಿರುವ ಇದೇ ಮಂತ್ರಸಮುದಾಯವನ್ನು ಮಕ್ಕಳಿಗೆ ಜಾತಕರ್ಮಸಂಸ್ಕಾರ

ವನ್ನು ಮಾಡುವ ವೇಳೆಯಲ್ಲಿ ಹೇಳುತ್ತಾರೆ. ಈ ಮಂತ್ರವು ಯಾವುದೆಂಬುದು ಸರ್ವಜ್ಞನಾದ ನಿನಗೂ ತಿಳಿದಿರುವುದು.

**ಅಙ್ಗಾದಙ್ಗಾತ್ಸಮ್ಭವಸಿ ಹೃದಯಾದಧಿಜಾಯಸೇ ।**
**ಆತ್ಮಾ ವೈ ಪುತ್ರನಾಮಾಸಿ ಸ ಜೀವ ಶರದಃ ಶತಮ್ ॥೬೩॥**

ಆ ಮಹಾಮಂತ್ರವೇ ಇದು, ಮಹಾರಾಜ! ಹುಟ್ಟಿದೊಡನೆಯೇ ತಂದೆಯಾದವನು ಮಗುವಿಗೆ ಜಾತಕರ್ಮಸಂಸ್ಕಾರವನ್ನು ಮಾಡುತ್ತಾನೆ. "ಬಾಲಕನೇ! ನನ್ನ ಅಂಗಾಂಗಗಳಿಂದಲೂ ಹೃದಯದಿಂದಲೂ ನೀನು ಹುಟ್ಟಿರುವೆ. ಅರ್ಥಾತ್ ನೀನು ನನ್ನ ಆತ್ಮವೇ ಆಗಿರುವೆ. ಆದರೆ ಪುತ್ರನೆಂಬ ಹೆಸರು ಪಡೆದಿರುವೆ. ನೀನು ನೂರು ವರ್ಷಗಳ ಪರ್ಯಂತವಾಗಿ ಜೀವಿಸಿರು."

**ಜೀವಿತಂ ತ್ವದಧೀನಂ ಮೇ ಸಂತಾನಮಪಿ ಚಾಕ್ಷಯಮ್ ।**
**ತಸ್ಮಾತ್ತ್ವಂ ಜೀವ ಮೇ ಪುತ್ರ ಸುಸುಖೀ ಶರದಾಂ ಶತಮ್ ॥೬೪॥**

ತಂದೆಯಾದವನು ಮಗನನ್ನು ಕುರಿತು ಪುನಃ ಹೇಳುತ್ತಾನೆ : 'ನನ್ನ ಜೀವಿತವೂ ಮತ್ತು ಕ್ಷಯರಹಿತವಾದ ಸಂತಾನವೂ ನಿನ್ನನ್ನೇ ಅವಲಂಬಿಸಿವೆ. ಆದುದರಿಂದ, ಪುತ್ರನೇ! ನೀನು ನೂರು ವರ್ಷಗಳ ಪರ್ಯಂತವಾಗಿ ಜೀವಿಸಿರು.' ಮಹಾರಾಜ! ಹೀಗೆಯೇ ನೀನು ಈ ನಿನ್ನ ಪುತ್ರನಿಗೂ ಹೇಳಬೇಕು. ಈ ಬಾಲಕನು ನಿನ್ನ ಅಂಗಾಂಗಗಳಿಂದಲೂ ಆತ್ಮನಿಂದಲೂ ಸಂಭೂತನಾಗಿರುತ್ತಾನೆ. ಒಬ್ಬ ಮಹಾಪುರುಷನಿಂದ ಮತ್ತೊಬ್ಬ ಮಹಾಪುರುಷನು ಹುಟ್ಟಿದ್ದಾನೆ. ಸ್ವಚ್ಛವಾದ ನೀರಿನಲ್ಲಿ ನಿನ್ನ ಪ್ರತಿಬಿಂಬವು ಸುಸ್ಪಷ್ಟವಾಗಿ ಕಾಣುವಂತೆ–ನಿನ್ನ ಪ್ರತಿಕೃತಿಯಾಗಿರುವ, ನಿನಗೆ ಎರಡನೆಯವನಾಗಿರುವ ಈ ನಿನ್ನ ಪುತ್ರನನ್ನು ನೋಡು, ಮಹಾರಾಜ!

**ಯಥಾ ಹ್ಯಾಹವನೀಯೋಗ್ನಿರ್ಗಾರ್ಹಪತ್ಯಾತ್ಪ್ರಣೀಯತೇ ।**
**ತಥಾ ತ್ವತ್ತಃ ಪ್ರಸೂತೋಽಯಂ ತ್ವಮೇಕಃ ಸನ್ ದ್ವಿಧಾಕೃತಃ ॥೬೬॥**

ಗಾರ್ಹಪತ್ಯಾಗ್ನಿಯಿಂದ ಆಹವನೀಯಾಗ್ನಿಯು ಸಿದ್ಧವಾಗಿರುವಂತೆ–ನಿನ್ನಿಂದಿವನು ಹುಟ್ಟಿದ್ದಾನೆ. ಗಾರ್ಹಪತ್ಯಾಗ್ನಿಯಿಂದ ಆಹವನೀಯಾಗ್ನಿಯು ಹುಟ್ಟಿದರೂ ಎರಡು ಅಗ್ನಿಗಳಿಗೂ ಯಾವ ವಿಧವಾದ

ವ್ಯತ್ಯಾಸವೂ ಇರದಂತೆ–ನಿನಗೂ ನಿನ್ನ ಮಗನಿಗೂ ಯಾವ ವಿಧವಾದ ವ್ಯತ್ಯಾಸವೂ ಇರುವುದಿಲ್ಲ. ನೀನೇ ನಿನ್ನ ಆತ್ಮವನ್ನು ಎರಡಾಗಿ ಮಾಡಿ ಕೊಂಡಿರುವೆ."

ಶಕುಂತಲೆಯು ಮಾತನಾಡಿ ದಣಿದಳು. ರಾಜನ ಮುಖದಲ್ಲಿ ಯಾವ ವಿಧವಾದ ವ್ಯತ್ಯಾಸವೂ ಕಂಡುಬರಲಿಲ್ಲ. ಶಿಲಾವಿಗ್ರಹದಂತೆ ಕುಳಿತಿದ್ದನು. ಶಕುಂತಲೆಯ ಧರ್ಮಪ್ರವಚನವು ಅವನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡಲಿಲ್ಲ.

ಶಕುಂತಲೆಯು ಪುನಃ ಹೇಳಿದಳು :

"ಮಹಾರಾಜ! ಹಿಂದೆ ನಡೆದ ನಮ್ಮಿಬ್ಬರ ಸಮಾಗಮವನ್ನು ಪುನಃ ಸ್ಮರಣೆಗೆ ತರುತ್ತೇನೆ.

ನೀನೊಮ್ಮೆ ಬೇಟೆಯಾಡುವ ಸಲುವಾಗಿ ಅರಣ್ಯಕ್ಕೆ ಪರಿವಾರದೊಡನೆ ಬಂದಿದ್ದೆ. ದೈವವಶದಿಂದ ಅಲ್ಲಿಂದ ನೀನು ನಮ್ಮ ತಂದೆಯವರ ಆಶ್ರಮಕ್ಕೂ ಆಗಮಿಸಿದೆ. ಆ ಸಮಯದಲ್ಲಿ ನಾನೊಬ್ಬಳೇ ಆಶ್ರಮದಲ್ಲಿದ್ದೆನು. ನನ್ನ ಪೂರ್ವವೃತ್ತಾಂತವನ್ನೂ ನಾನು ಆ ಸಮಯದಲ್ಲಿ ನಿನ್ನೊಡನೆ ಹೇಳಿದೆನು. ಈಗ ಅದನ್ನೇ ಸಂಕ್ಷೇಪವಾಗಿ ಪುನಃ ಹೇಳುತ್ತೇನೆ. ಉರ್ವಶೀ, ಪೂರ್ವಚಿತ್ತಿ, ಸಹಜನ್ಯಾ, ಮೇನಕಾ, ವಿಶ್ವಾಚೀ ಮತ್ತು ಘೃತಾಚೀ–ಎಂಬ ಆರು ಮಂದಿ ಅಪ್ಸರೆಯರು ಅಪ್ಸರೆಯರಲ್ಲಿಯೇ ಶ್ರೇಷ್ಠರೆಂದು ಪರಿಗಣಿತರಾಗಿದ್ದಾರೆ. ಆ ಆರು ಮಂದಿ ಅಪ್ಸರೆಯರಲ್ಲಿಯೂ ಬ್ರಹ್ಮನ ಮಾನಸಪುತ್ರಿಯಾದ ಮೇನಕೆಯು ಪರಮಶ್ರೇಷ್ಠಳು. ಅವಳೊಮ್ಮೆ ಕಾರಣಾಂತರದಿಂದ ಸ್ವರ್ಗದಿಂದ ಭೂಮಿಗೆ ಬಂದು ವಿಶ್ವಾಮಿತ್ರಮಹರ್ಷಿಯನ್ನು ನೃತ್ಯ-ಗೀತಗಳಿಂದ ಸಂಸೇವಿಸಿದಳು.

ಅವರಿಬ್ಬರ ಸಮಾಗಮದಿಂದಾಗಿ ನಾನು ಹುಟ್ಟಿದೆನು. ಅವಳು ನನ್ನನ್ನು ಹಿಮವತ್ಪರ್ವದ ತಪ್ಪಲಿನಲ್ಲಿ ಪ್ರಸವಿಸಿದಳು. ನಿರ್ದಯಳಾದ ಅವಳು ಹುಟ್ಟಿದ ಹಸುಗೂಸನ್ನು–ಕೆಟ್ಟಚಾಳಿಯವಳು ಬೇರೆಯವರಿಂದ ತನ್ನಲ್ಲಿ ಹುಟ್ಟಿದ ಮಗುವನ್ನು ತ್ಯಜಿಸುವಂತೆ–ಬಿಟ್ಟುಹೋದಳು. ಈಗ ನೀನು ನನ್ನ ವಿಷಯದಲ್ಲಿ ಔದಾಸೀನ್ಯದಿಂದಿರುವುದನ್ನು ನೋಡಿದರೆ ನನ್ನ ಈ ಜನ್ಮದ

ಅದೃಷ್ಟವೇ ಹೀಗಿರುವುದೆಂದು ತೋರುತ್ತದೆ. ನಾನು ಹಿಂದಿನ ಜನ್ಮದಲ್ಲಿ ಯಾವುದೋ ಅಶುಭಕರ್ಮವನ್ನು (ಪಾಪವನ್ನು) ಮಾಡಿರಬೇಕು. ಹಾಗಿರದಿದ್ದರೆ ಇಂತಹ ದುರವಸ್ಥೆಯನ್ನು ಅನುಭವಿಸಬೇಕಾದ ಪರಿಸ್ಥಿತಿ ಯುಂಟಾಗುತ್ತಿರಲಿಲ್ಲ.

ಶೈಶವದಲ್ಲಿಯೇ ನನ್ನ ತಂದೆ-ತಾಯಿಗಳಿಬ್ಬರೂ ನನ್ನನ್ನು ಪರಿತ್ಯಜಿಸಿ ಹೊರಟುಹೋದರು. ಈಗ ನಿನ್ನಿಂದಲೂ ನಾನು ಪರಿತ್ಯಕ್ತಳಾಗಿದ್ದೇನೆ. ನನ್ನನ್ನು ಪರಿತ್ಯಜಿಸಿದರೂ ಚಿಂತೆಯಿಲ್ಲ. ನಿನ್ನಿಂದ ಪರಿತ್ಯಕ್ತಳಾದ ನಾನು ನನ್ನ ತಂದೆಯ ಆಶ್ರಮಕ್ಕೆ ಹೊರಟುಹೋಗುತ್ತೇನೆ. ಆದರೆ ನಿನ್ನ ಆತ್ಮಜನಾದ ಈ ಬಾಲಕನನ್ನು ಮಾತ್ರ ನೀನು ಪರಿತ್ಯಾಗಮಾಡುವುದು ಸಾಧುವಲ್ಲ."

ಅದಕ್ಕೆ ದುಷ್ಯಂತನು ಹೇಳುತ್ತಾನೆ :

**ನ ಪುತ್ರಮಭಿಜಾನಾಮಿ ತ್ವಯಿ ಜಾತಂ ಶಕುನ್ತಲೇ ।**
**ಅಸತ್ಯವಚನಾ ನಾರ್ಯಃ ಕಸ್ತೇ ಶ್ರದ್ಧಾಸ್ಯತೇ ವಚಃ ॥೭೩॥**

"ಶಕುಂತಲೇ! ನಿನ್ನ ಹೊಟ್ಟೆಯಲ್ಲಿ ಹುಟ್ಟಿರುವ ಪುತ್ರನ ವಿಷಯವಾಗಿ ನನಗೆ ಏನೂ ತಿಳಿಯದು. ಸಾಮಾನ್ಯವಾಗಿ ಹೆಂಗಸರೆಲ್ಲರೂ ಸುಳ್ಳನ್ನೇ ಹೇಳು ತ್ತಾರೆ. ಹೀಗಿರುವಾಗ ಅವರ ಮಾತಿನಲ್ಲಿ ಯಾರು ತಾನೇ ಶ್ರದ್ಧೆಯನ್ನಿಡುತ್ತಾರೆ? (ನಿನ್ನ ಈ ಮಾತನ್ನು ಯಾರು ತಾನೇ ನಂಬುತ್ತಾರೆ?) ಮೇಲಾಗಿ ನಿನ್ನ ಚಾರಿತ್ರ್ಯವೇನೆಂಬುದನ್ನು ನಿನ್ನ ಹುಟ್ಟಿನಿಂದಲೇ ನಾವು ಊಹಿಸಬಹುದಾಗಿದೆ.

**ಮೇನಕಾ ನಿರನುಕ್ರೋಶಾ ಬನ್ಧಕೀ ಜನನೀ ತವ ।**
**ಯಥಾ ಹಿಮವತಃ ಪೃಷ್ಠೇ ನಿರ್ಮಾಲ್ಯಮಿವ ಚೋಜ್ಝಿತಾ ॥೭೪॥**

ನಿರ್ದಯಳಾದ, ವೇಶ್ಯೆಯಾದ ಮೇನಕೆಯು ನಿನ್ನ ತಾಯಿ. ನಿರ್ಮಾಲ್ಯವನ್ನು ತೆಗೆದೆಸೆಯುವಂತೆ–ನಿನ್ನನ್ನವಳು ಹಿಮವತ್ಪರ್ವತದ ತಪ್ಪಲಿನಲ್ಲಿ ವಿಸರ್ಜಿಸಿ ಹೊರಟುಹೋದಳು.

**ನ ಚಾಪಿ ನಿರನುಕ್ರೋಶಃ ಕ್ಷತ್ರಯೋನಿಃ ಪಿತಾ ತವ ।**
**ವಿಶ್ವಾಮಿತ್ರೋ ಬ್ರಾಹ್ಮಣತ್ವೇ ಲುಬ್ಧಃ ಕಾಮವಶಂ ಗತಃ ॥೭೫॥**

ನಿನ್ನ ತಂದೆಯಾದರೋ ನಿರ್ದಯನಾದ ಕ್ಷತ್ರಿಯನು. ಬ್ರಾಹ್ಮಣ ನಾಗಬೇಕೆಂದು ತಪಸ್ಸನ್ನು ಮಾಡುತ್ತಿದ್ದನು. ಮೇನಕೆಯನ್ನು ನೋಡಿದೊಡನೆಯೇ ತಪಸ್ಸಿಗೂ ತಿಲಾಂಜಲಿಯನ್ನಿತ್ತು ಕಾಮಾಭಿಭೂತನಾದನು. ಅಂತಹವನ ಮಗಳ ಸ್ವಭಾವವಾದರೂ ಹೇಗೆ ತಾನೇ ಇದ್ದೀತು? ಅದನ್ನು ನಾನಿಲ್ಲಿ ಪ್ರತ್ಯಕ್ಷವಾಗಿಯೇ ಕಾಣುತ್ತಿದ್ದೇನೆ. ಸಂಬಂಧವಿಲ್ಲದೆಯೇ ಸಂಬಂಧವನ್ನು ಕಲ್ಪಿಸಲು ಪ್ರಯತ್ನಿಸುತ್ತಿರುವೆ.

**ಮೇನಕಾಪ್ಸರಸಾಂ ಶ್ರೇಷ್ಠಾ ಮಹರ್ಷೀಣಾಂ ಪಿತಾ ಚ ತೇ ।**
**ತಯೋರಪತ್ಯಂ ಕಸ್ಮಾತ್ತ್ವಂ ಪುಂಶ್ಚಲೀವ ಪ್ರಭಾಷಸೇ ॥೭೬॥**

ಒಂದು ವೇಳೆ ನಿನ್ನ ಅಭಿಪ್ರಾಯದಂತೆ ಮೇನಕೆಯು ಅಪ್ಸರೆಯರಲ್ಲಿ ಶ್ರೇಷ್ಠಳೆಂದೇ ಇಟ್ಟುಕೊಳ್ಳೋಣ. ನಿನ್ನ ತಂದೆಯೂ ಮಹರ್ಷಿಗಳಲ್ಲಿ ಶ್ರೇಷ್ಠನೆಂದೇ ಭಾವಿಸೋಣ. ಅವರಿಬ್ಬರ ಸಮಾಗಮದಿಂದ ಹುಟ್ಟಿದ ನೀನೇಕೆ ಪುಂಶ್ಚಲಿಯಂತೆ (ವ್ಯಭಿಚಾರಿಣಿಯಂತೆ) ವರ್ತಿಸುತ್ತಿರುವೆ? ಸುಳ್ಳನ್ನೇಕೆ ಹೇಳುತ್ತಿರುವೆ?

**ಅಶ್ರದ್ಧೇಯಮಿದಂ ವಾಕ್ಯಂ ಕಥಯನ್ತೀ ನ ಲಜ್ಜಸೇ ।**
**ವಿಶೇಷತೋ ಮತ್ಸಕಾಶೇ ದುಷ್ಟತಾಪಸಿ ಗಮ್ಯತಾಮ್ ॥೭೭॥**

ನನ್ನೊಡನೆ ನಿನಗೆ ಸಂಬಂಧವಿದೆಯೆಂಬ ಯಾರಿಂದಲೂ ನಂಬಲಸಾಧ್ಯವಾದ ಮಾತನ್ನು, ಅದರಲ್ಲೂ ನನ್ನೆದುರಿನಲ್ಲಿಯೇ ಹೇಳಲು ನಿನಗೆ ನಾಚಿಕೆಯೂ ಆಗುವುದಿಲ್ಲವೇ? ತಾಪಸಿಯ ವೇಷವನ್ನು ಧರಿಸಿರುವ ಸ್ವೈರಿಣಿಯೇ! ಇಲ್ಲಿಂದ ಈಗಲೇ ಹೊರಟುಹೋಗು. ನಿನಗಿಲ್ಲಿ ಸ್ಥಾನವಿಲ್ಲ. ನಿನ್ನ ಜನ್ಮಕಥೆಯೂ ನಂಬಲಸಾಧ್ಯವಾಗಿದೆ.

**ಕ್ವ ಮಹರ್ಷಿಃ ಸ ಚೈವಾಗ್ರ್ಯಃ ಸಾಪ್ಸರಾಃ ಕ್ವ ಚ ಮೇನಕಾ ।**
**ಕ್ವ ಚ ತ್ವಮೇವಂ ಕೃಪಣಾ ತಾಪಸೀವೇಷಧಾರಿಣೀ ॥೭೮॥**

ಮಹರ್ಷಿಯ ಮಗಳೆಂದರೆ ಮಹರ್ಷಿಗಿರುವ ಒಂದಾದರೂ ಗುಣವು ನಿನ್ನಲ್ಲಿರಬೇಡವೇ? ಮುನಿಗಳಲ್ಲಿಯೇ ಶಿರೋಮಣಿಯಾದ ಆ ಮಹರ್ಷಿಯೆಲ್ಲಿ? ಹೀನಸ್ವಭಾವದವಳಾದ ನೀನೆಲ್ಲಿ? ಮೇನಕೆಯು ನಿನ್ನ

ತಾಯಿಯೆಂದು ಬೇರೆ ಹೇಳುತ್ತಿರುವೆ. ಅಪ್ಸರೆಯರಲ್ಲಿ ಶ್ರೇಷ್ಠಳಾದ ಮೇನಕೆಗೂ, ತಾಪಸವೇಷ ಧಾರಿಣಿಯಾದ ನಿನಗೂ ತಿಲಾಂಶವಾದರೂ ಹೋಲಿಕೆಯು ಇರುವುದೇ? ಶ್ರೇಷ್ಠಳಾದ ಅವಳೆಲ್ಲಿ? ಕೃಪಣಳಾದ ನೀನೆಲ್ಲಿ? ಸುಳ್ಳುಹೇಳಿದರೂ ನಂಬು ವಂತಿರಬೇಕು.

**ಅತಿಕಾಯಶ್ಚ ತೇ ಪುತ್ರೋ ಬಾಲೋಽತಿಬಲವಾನಯಮ್ ।**
**ಕಥಮಲ್ಪೇನ ಕಾಲೇನ ಶಾಲಸ್ತಮ್ಭ ಇವೋದ್ಗತಃ ॥೭೯॥**

ಈ ನಿನ್ನ ಮಗನಾದರೂ ಅತ್ಯಂತ ಸ್ಥೂಲಕಾಯನು. ಬಾಲನಾಗಿದ್ದರೂ ಮಹಾಬಲಿಷ್ಠನಂತೆ ಕಾಣುತ್ತಿದ್ದಾನೆ. ಅತ್ಯಲ್ಪಕಾಲದಲ್ಲಿ ಇವನು ಸರ್ಜವೃಕ್ಷದ ಸ್ತಂಭದಂತೆ ಬೆಳೆದುದಾದರೂ ಹೇಗೆ?

ನೀನು ಹೇಳುತ್ತಿರುವ ನಮ್ಮ ಸಮಾಗಮದ ಕಾಲವನ್ನೂ ಮತ್ತು ಇವನ ಬೆಳವಣಿಗೆಯನ್ನೂ ನೋಡಿದರೆ ನೀನು ಹೇಳುವುದರಲ್ಲಿ ಸತ್ಯಾಂಶವೇ ಇಲ್ಲವೆಂಬುದು ಮತ್ತೂ ಸ್ಪಷ್ಟವಾಗುತ್ತದೆ. ಕೇವಲ ಆರೆಂಟು ವರ್ಷಗಳಲ್ಲಿ ಇಷ್ಟು ಮಹಾಕಾಯನಾಗಲೂ, ಬಲಿಷ್ಠನಾಗಲೂ ಸಾಧ್ಯವಾಗುವುದೇ?

**ಸುನಿಕೃಷ್ಟಾ ಚ ತೇ ಯೋನಿಃ ಪುಂಶ್ಚಲೀವ ಪ್ರಭಾಷಸೇ ।**
**ಯದೃಚ್ಛಯಾ ಕಾಮರಾಗಾಜ್ಜಾತಾ ಮೇನಕಯಾ ಹ್ಯಸಿ ॥೮೦॥**

ನಿನ್ನ ನಡೆ-ನುಡಿಗಳನ್ನು ನೋಡಿದರೆ ನೀನು ಮೇನಕೆಯಲ್ಲಿ ಹುಟ್ಟಿ ದವಳೆಂದು ಒಪ್ಪಿಕೊಳ್ಳಬೇಕಾಗುವುದು. ವೇಶ್ಯಾಪುತ್ರಿಯಲ್ಲಿರಬೇಕಾದ ಗುಣಗಳೆಲ್ಲವೂ ನಿನ್ನಲ್ಲಿವೆ. ನಿನ್ನ ಜನ್ಮಸ್ಥಾನವು ಬಹುನಿಂದ್ಯವೆಂಬುದು ಇದರಿಂದಲೇ ಸ್ಪಷ್ಟವಾಗಿದೆ. ವೇಶ್ಯೆಯಂತೆಯೇ ಮಾತನಾಡುತ್ತಿರುವೆ. ಹೆಸರಿಗೆ ನೀನು ವಿಶ್ವಾಮಿತ್ರನ ಪುತ್ರಿಯಾಗಿದ್ದರೂ ಕಾಮಾಭಿಭೂತೆಯಾದ, ವೇಶ್ಯೆಯಾದ ಮೇನಕೆಯಲ್ಲಿ ಹುಟ್ಟಿರುವೆಯಾದ್ದರಿಂದ ಅವಳಿಗೆ ಅನುರೂಪ ವಾದ ಗುಣ-ಕರ್ಮಗಳಿಂದ ಕೂಡಿರುವೆ. ಮೇಲಾಗಿ ನಿನ್ನ ಆತ್ಮೀಯವಿಷಯ ಗಳು ನನಗೆ ಸಂಬಂಧಿಸಿದ್ದಲ್ಲ. ನಿನ್ನೊಡನೆ ನನ್ನ ಸಂಬಂಧವಿರುವುದೆಂದು ಹೇಳಿಕೊಂಡಿದ್ದರಿಂದ ಇಷ್ಟೊಂದು ಮಾತನಾಡಬೇಕಾಯಿತು. ನೀನು ಹೇಳಿದ ವಿಷಯಗಳೆಲ್ಲವೂ ನನಗೆ ಪರೋಕ್ಷವಾದುವುಗಳು. ಪ್ರತ್ಯಕ್ಷದಲ್ಲಿ ನಡೆದುವುಗಳಲ್ಲ. ನೀನಾರೆಂಬುದು ನನಗೆ ತಿಳಿಯದು. ನಿನ್ನ ಇಚ್ಛೆಯಿದ್ದೆಡೆ ಹೋಗಬಹುದು."

ರಾಜನು ಹೇಳಿದ ಚುಚ್ಚುಮಾತುಗಳಿಗೆ ಅನುರೂಪವಾಗಿಯೇ ಶಕುಂತಲೆಯೂ ಉತ್ತರಿಸಿದಳು :

**ರಾಜನ್ಸರ್ಷಪಮಾತ್ರಾಣಿ ಪರಿಚ್ಛಿದ್ರಾಣಿ ಪಶ್ಯಸಿ ।**
**ಆತ್ಮನೋ ಬಿಲ್ವಮಾತ್ರಾಣಿ ಪಶ್ಯನ್ನಪಿ ನ ಪಶ್ಯಸಿ ॥೮೨॥**

"ಮಹಾರಾಜ! ಬೇರೆಯವರಲ್ಲಿರುವ ಸಾಸುವೆಕಾಳಿಗೆ ಸಮನಾದ ದೋಷವನ್ನು ದೊಡ್ಡದುಮಾಡಿ ಹೇಳುತ್ತಿರುವೆ. ನಿನ್ನಲ್ಲಿರುವ ಬಿಲ್ವಫಲದಷ್ಟು ಮಹತ್ತರವಾದ ದೋಷವನ್ನು–ಆ ಮಹತ್ತರವಾದ ದೋಷವು ನಿನ್ನಲ್ಲಿಯೇ ಇರುವುದೆಂಬುದನ್ನು ನೀನೇ ತಿಳಿದಿದ್ದರೂ–ಬಚ್ಚಿಟ್ಟುಕೊಂಡು ತಿಳಿಯದವನಂತೆ ವರ್ತಿಸುತ್ತಿರುವೆ. ಇದು ಕೇವಲ ನೀಚರ ಸ್ವಭಾವ. ದುಷ್ಯಂತ! ನೀನು ನನ್ನ ತಾಯಿಯನ್ನು ವೇಶ್ಯೆಯೆಂದು ತೆಗಳಿದೆ. ಚಿಂತೆಯಿಲ್ಲ.

**ಮೇನಕಾ ತ್ರಿದಶೇಷ್ವೇವ ತ್ರಿದಶಾಶ್ಚಾನು ಮೇನಕಾಮ್ ।**
**ಮಮೈವೋದ್ರಿಚ್ಯತೇ ಜನ್ಮ ದುಷ್ಯನ್ತ ತವ ಜನ್ಮನಃ ॥೮೩॥**

ಅವಳು ಸ್ವರ್ಗದಲ್ಲಿರತಕ್ಕವಳೆಂಬುದನ್ನು ಮರೆಯಬೇಡ. ದೇವತೆ ಗಳೂ ಅವಳನ್ನು ಪುರಸ್ಕರಿಸುತ್ತಾರೆ. ನಾನು ಅಂತಹ ಸ್ವರ್ಗವಾಸಿನಿಯಾದ ಮೇನಕೆಯಿಂದ ಜನ್ಮತಾಳಿದವಳು. ನೀನಾದರೋ ಭೂಮಿಯಲ್ಲಿ ಜನ್ಮತಾಳಿ ದವನು. ಇಷ್ಟರಿಂದಲೇ ನಿನ್ನ ಜನ್ಮಕ್ಕಿಂತಲೂ ನನ್ನ ಜನ್ಮವು ಅತ್ಯುಚ್ಚ ವೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

**ಕ್ಷಿತಾವಟಸಿ ರಾಜೇನ್ದ್ರ ಅನ್ತರಿಕ್ಷೇ ಚರಾಮ್ಯಹಮ್ ।**
**ಆವಯೋರನ್ತರಂ ಪಶ್ಯ ಮೇರುಸರ್ಷಪಯೋರಿವ ॥೮೪॥**

ಅಪ್ಸರೆಯ ಕುವರಿಯಾದ ನಾನು ಅಂತರಿಕ್ಷದಲ್ಲಿ ಸಂಚರಿಸಬಲ್ಲೆನು. ನೀನು ಭೂಮಿಯಲ್ಲಿ ಮಾತ್ರವೇ ಅಲೆದಾಡಲು ಸಾಧ್ಯವಿದೆ. ಈ ಒಂದ ರಿಂದಲೇ ನಿನಗೂ ಮತ್ತು ನನಗೂ ಇರುವ ಅಂತರವನ್ನು ನೀನು ಕಾಣ ಬಹುದಾಗಿದೆ. ಮೇರುವಿಗೂ-ಸಾಸುವೆಕಾಳಿಗೂ ಇರುವ ಅಂತರವೇ ನನಗೂ ಮತ್ತು ನಿನಗೂ ಇರುವುದೆಂದರೆ ಅತಿಶಯೋಕ್ತಿಯಲ್ಲ. ನಾನೀಗಲೇ ಈ

ಸ್ಥಿತಿಯಲ್ಲಿಯೇ ಮಹೇಂದ್ರನ ಲೋಕಕ್ಕೆ ಹೋಗಬಲ್ಲೆನು. ಕುಬೇರನ ಲೋಕಕ್ಕೆ ಹಾರಬಲ್ಲೆನು. ಯಮ ಮತ್ತು ವರುಣರ ಲೋಕಗಳಿಗೂ ಧಾವಿಸಬಲ್ಲೆನು. ನನ್ನ ಪ್ರಭಾವವೆಷ್ಟೆಂಬುದನ್ನು ಈಗಲಾದರೂ ಮನಗಂಡೆಯಾ? ನನ್ನಲ್ಲಿರುವ ಸಾಮರ್ಥ್ಯದ ಹಿರಿಮೆಯ ಅರ್ಧದಷ್ಟು ಸಾಮರ್ಥ್ಯವಾಗಲೀ ಹಿರಿಮೆಯಾಗಲೀ ನಿನಗಿರುವುದಿಲ್ಲ. ಲೋಕದಲ್ಲಿ ಒಂದು ಪ್ರವಾದವಿದೆ (ನಾಣ್ಣುಡಿಯಿದೆ.) ಆ ಪ್ರವಾದವು ಸತ್ಯವಾದುದು. ಅದನ್ನು ನಿದರ್ಶನಾರ್ಥ ವಾಗಿ ನಿನ್ನ ಮುಂದೆ ಹೇಳುತ್ತೇನೆ. ದ್ವೇಷದಿಂದ ಅದನ್ನು ನಿನಗೆ ಹೇಳುತ್ತಿಲ್ಲ. ಆ ಮಾತು ನಿನ್ನ ಮನಸ್ಸಿಗೆ ನೋವನ್ನುಂಟುಮಾಡಿದರೆ ನನ್ನನ್ನು ಕ್ಷಮಿಸಿಬಿಡು.

**ವಿರೂಪೋ ಯಾವದಾದರ್ಶೇ ನಾತ್ಮನಃ ಪಶ್ಯತೇ ಮುಖಮ್ ।**
**ಮನ್ಯತೇ ತಾವದಾತ್ಮಾನಮನ್ಯೇಭ್ಯೋ ರೂಪವತ್ತರಮ್ ॥೮೭॥**

**ಯದಾ ಸ್ವಮುಖಮಾದರ್ಶೇ ವಿಕೃತಂ ಸೋಽಭಿವೀಕ್ಷತೇ ।**
**ತದಾನ್ತರಂ ವಿಜಾನೀತೇ ಆತ್ಮಾನಂ ಚೇತರಂ ಜನಮ್ ॥೮೮॥**

ಕನ್ನಡಿಯಲ್ಲಿ ತನ್ನ ವಿಕೃತಸ್ವರೂಪವನ್ನು ಕಂಡುಕೊಳ್ಳುವವರೆಗೂ ವಿರೂಪನಾದ ಮನುಷ್ಯನು ತಾನು ಎಲ್ಲರಿಗಿಂತಲೂ ರೂಪವಂತನೆಂದೇ ಭಾವಿಸಿರುತ್ತಾನೆ. ಆದರೆ ಯಾವಾಗ ಅವನು ತನ್ನ ವಿಕೃತಮುಖವನ್ನು ಕನ್ನಡಿ ಯಲ್ಲಿ ನೋಡಿಕೊಳ್ಳುತ್ತಾನೆಯೋ–ಆಗಿನಿಂದ ತನ್ನ ರೂಪಿಗೂ ಮತ್ತು ಇತರರ ರೂಪಿಗೂ ಇರುವ ವ್ಯತ್ಯಾಸವನ್ನು ಕಂಡುಕೊಳ್ಳುತ್ತಾನೆ. ಕುರೂಪಿಯಾದವನು ತನ್ನ ರೂಪವನ್ನು ಕನ್ನಡಿಯಲ್ಲಿ ಕಂಡುಕೊಂಡ ಮೇಲೂ ಸುಮ್ಮನಿರುವನೆಂದು ಹೇಳಲಾಗುವುದಿಲ್ಲ. ಸುರೂಪವಂತನಲ್ಲಿರಬಹುದಾದ ದೋಷಗಳನ್ನೇ ಹುಡುಕುತ್ತಿರುತ್ತಾನೆ.

**ಅತೀವರೂಪಸಮ್ಪನ್ನೋ ನ ಕಿಞ್ಚಿದವಮನ್ಯತೇ ।**
**ಅತೀವ ಜಲ್ಪನ್ದುರ್ವಾಚೋ ಭವತೀಹ ವಿಹೇಠಕಃ ॥೮೯॥**

ಬಹುರೂಪಸಂಪನ್ನನಾಗಿರುವವನು ತನ್ನನ್ನು ರೂಪವಂತನೆಂದು ಹೇಳಿಕೊಳ್ಳುವುದೂ ಇಲ್ಲ; ಯಾರನ್ನೂ ಕುರೂಪಿಗಳೆಂದು ಜರೆಯು

ವುದಕ್ಕೂ ಹೋಗುವುದಿಲ್ಲ. ಕುರೂಪಿಯಾದವನು ಮಾತ್ರ ತಾನು ಕುರೂಪಿಯೆಂದು ತಿಳಿದಿದ್ದರೂ ಇನ್ನೊಬ್ಬರ ವಿಷಯದಲ್ಲಿ ಕೆಟ್ಟಮಾತುಗಳನ್ನಾಡುತ್ತಾ ಸತ್ಪುರುಷರನ್ನು ಪೀಡಿಸುತ್ತಿರುತ್ತಾನೆ.

**ಮೂರ್ಖೋ ಹಿ ಜಲ್ಪತಾಂ ಪುಂಸಾಂ ಶ್ರುತ್ವಾ ವಾಚಃ ಶುಭಾಶುಭಾಃ ।**
**ಅಶುಭಂ ವಾಕ್ಯಮಾದತ್ತೇ ಪುರೀಷಮಿವ ಸೂಕರಃ ॥೯೦॥**

ಮಾತನಾಡುವವರು ಸಾಮಾನ್ಯವಾಗಿ ಶುಭವಾದ ಮತ್ತು ಅಶುಭ ವಾದ ಮಾತುಗಳನ್ನಾಡುತ್ತಿರುತ್ತಾರೆ. ಮೂರ್ಖನಾದವನ ಸ್ವಭಾವವೇನೆಂದರೆ ಅವರಾಡುವ ನೀತಿಬೋಧಕಗಳಾದ, ಶುಭಕರವಾದ ಮಾತುಗಳನ್ನು ಬಿಟ್ಟು ಅಶುಭಕರವಾದ ಮಾತುಗಳನ್ನೇ ಆರಿಸಿಕೊಂಡು ಅವರನ್ನು ತೆಗಳುತ್ತಾನೆ. ಮೂರ್ಖನಾದವನು ಹಂದಿಯಂತೆ. ಹಂದಿಯು ಏನು ಮಾಡುವುದೆಂಬುದು ಗೊತ್ತಿರುವುದೇ? ದುಷ್ಯಂತ! ಅದರ ಮುಂದೆ ಹಣ್ಣು-ಹಂಪಲುಗಳನ್ನೂ, ಶುಚಿ-ರುಚಿಯಾದ ಭಕ್ಷ್ಯ-ಭೋಜ್ಯಗಳನ್ನಿಟ್ಟರೂ ಅವುಗಳನ್ನು ತಿನ್ನುವುದಿಲ್ಲ. ಮನುಷ್ಯನ ಮಲವನ್ನೇ ಹುಡುಕಿಕೊಂಡು ಹೋಗುತ್ತದೆ.

ಇದಕ್ಕೆ ಪ್ರತಿಯಾಗಿ ಪ್ರಾಜ್ಞರಾದವರು ಏನು ಮಾಡುತ್ತಾರೆಂಬುದನ್ನು ಹೇಳುವೆನು, ಕೇಳು :

**ಪ್ರಾಜ್ಞಸ್ತು ಜಲ್ಪತಾಂ ಪುಂಸಾಂ ಶ್ರುತ್ವಾ ವಾಚಃ ಶುಭಾಶುಭಾಃ ।**
**ಗುಣವದ್ವಾಕ್ಯಮಾದತ್ತೇ ಹಂಸಃ ಕ್ಷೀರಮಿವಾಮ್ಭಸಃ ॥೯೧॥**

ಪ್ರಾಜ್ಞನಾದವನು–ನೀರು ಬೆರೆಸಿಟ್ಟ ಹಾಲಿನಲ್ಲಿ ಹಂಸಪಕ್ಷಿಯು ನೀರನ್ನು ಪ್ರತ್ಯೇಕವಾಗುಳಿಸಿ ಬರಿಯ ಹಾಲನ್ನೇ ಕುಡಿಯುವಂತೆ–ತನ್ನೊಡನೆ ಮಾತನಾಡಿದವನ ಶುಭಾಶುಭಗಳಾದ ಮಾತುಗಳಲ್ಲಿ ಶುಭವಾದುದನ್ನು ಗುಣಯುಕ್ತವಾದುದನ್ನು ಮಾತ್ರವೇ ಗ್ರಹಿಸಿ ಅವನನ್ನು ಪ್ರಶಂಸೆಮಾಡುತ್ತಾನೆ. ಆದರೆ ನಿನ್ನನ್ನು ಹಂದಿ ಎಂದು ಕರೆಯುವ ಉದ್ದೇಶದಿಂದ ನಾನು ಈ ಮಾತುಗಳನ್ನಾಡಿರುವುದಿಲ್ಲ. ದೊಡ್ಡವರು ಹೇಳಿದ ನಿದರ್ಶನದ ಮಾತುಗಳನ್ನು ಮಾತ್ರವೇ ಉದಾಹರಣೆಯಾಗಿ ಹೇಳುತ್ತಿದ್ದೇನೆ. ದುಷ್ಟರಿಗೂ ಸಾಧುಗಳಿಗೂ ಇರುವ ವ್ಯತ್ಯಾಸವಿಷ್ಟೇ, ಮಹಾರಾಜ!

**ಅನ್ಯಾನ್ಪರಿವದನ್ಸಾಧುರ್ಯಥಾ ಹಿ ಪರಿತಪ್ಯತೇ ।**
**ತಥಾ ಪರಿವದನ್ನನ್ಯಾಂಸ್ತುಷ್ಟೋ ಭವತಿ ದುರ್ಜನಃ ॥೯೨॥**

ಸತ್ಪುರುಷರಾದವರು ಪರನಿಂದೆಯನ್ನು ಎಂದಿಗೂ ಮಾಡುವುದಿಲ್ಲ. ಪರನಿಂದೆಯನ್ನು ಕೇಳಿದರೇ ದುಃಖಿತರಾಗುತ್ತಾರೆ. ಇದಕ್ಕೆ ಪ್ರತಿಯಾಗಿ ದುರ್ಜನರು ಯಾವಾಗಲೂ ಪರನಿಂದೆಯನ್ನು ಮಾಡುತ್ತಿರುವುದರಿಂದಲೇ ಸಂತುಷ್ಟರಾಗುತ್ತಾರೆ.

**ಅಭಿವಾದ್ಯ ಯಥಾ ವೃದ್ಧಾನ್ಸನ್ತೋ ಗಚ್ಛನ್ತಿ ನಿರ್ವೃತಿಮ್ ।**
**ಏವಂ ಸಜ್ಜನಮಾಕ್ರುಶ್ಯ ಮೂರ್ಖೋ ಭವತಿ ನಿರ್ವೃತಃ ॥೯೩॥**

ಸತ್ಪುರುಷನಾದವನು ವೃದ್ಧರ ಸೇವೆಮಾಡಿ, ಅವರ ಕಾಲುಗಳಿಗೆ ನಮಸ್ಕರಿಸಿ, ಅವರುಗಳಿಂದ ಹಿತವಚನಗಳನ್ನು ಕೇಳಿ ಆನಂದಭರಿತನಾಗುತ್ತಾನೆ. ಇದಕ್ಕೆ ಪ್ರತಿಯಾಗಿ ಮೂರ್ಖನಾದವನು ಸಜ್ಜನರನ್ನು ಬಹುವಾಗಿ ತೆಗಳಿ, ಅವರಿಗೆ ಸಂಕಟವನ್ನುಂಟುಮಾಡಿ, ಅದರಿಂದ ಅಮಿತವಾದ ಆನಂದವನ್ನು ಪಡೆಯುತ್ತಾನೆ.

**ಸುಖಂ ಜೀವನ್ತ್ಯದೋಷಜ್ಞಾ ಮೂರ್ಖಾ ದೋಷಾನುದರ್ಶಿನಃ ।**
**ಯತ್ರ ವಾಚ್ಯಾಃ ಪರೈಃ ಸನ್ತಃ ಪರಾನಾಹುಸ್ತಥಾವಿಧಾನ್ ॥೯೪॥**

ಸಾಧುಗಳು ಇತರರಲ್ಲಿರುವ ದೋಷಗಳನ್ನು ತಿಳಿಯದೇ ಇರುವುದರಿಂದಲೇ ಸುಖಿಗಳಾಗಿರುತ್ತಾರೆ. ಮೂರ್ಖರಾದವರು ಇತರರಲ್ಲಿರುವ ದೋಷಗಳನ್ನು ಎತ್ತಿ ಆಡುವುದರಿಂದಲೇ ಸುಖಿಗಳಾಗುತ್ತಾರೆ. ದುರ್ಜನರಾದವರ ಮತ್ತೊಂದು ಸ್ವಭಾವವೇನೆಂದರೆ : ಅವರು ತಾವೇ ನಿಂದ್ಯರಾಗಿದ್ದರೂ ಬೇರೆಯವರನ್ನೇ ನಿಂದ್ಯರೆಂದು ಹೇಳುತ್ತಾರೆ.

ಮಹಾರಾಜ! ನೀನು ನನ್ನನ್ನು ತೆಗಳಿದ್ದರಿಂದ, ವಂಚಕೀ ಎಂದು ಆರೋಪಿಸಿದ್ದರಿಂದ ನಾನು ಕೋಪಿಸಿಕೊಳ್ಳುವ ಕಾರಣವೇ ಇಲ್ಲ. ನನಗೆ ಇದೊಂದು ಹಾಸ್ಯವಾಗಿ ಕಾಣುತ್ತಿದೆ. ಇದಕ್ಕಿಂತಲೂ ವಿನೋದವನ್ನುಂಟು ಮಾಡುವ ಹಾಸ್ಯಪ್ರಧಾನವಾದ ಸಂಗತಿಯೇ ಮತ್ತೊಂದಿಲ್ಲವೆಂದು ಭಾವಿಸಿದ್ದೇನೆ.

**ಅತೋ ಹಾಸ್ಯತರಂ ಲೋಕೇ ಕಿಂಚಿದನ್ಯನ್ನ ವಿದ್ಯತೇ ।**
**ಯತ್ರ ದುರ್ಜನಮಿತ್ಯಾಹ ದುರ್ಜನಃ ಸಜ್ಜನಂ ಸ್ವಯಮ್ ॥೯೫॥**

ದುಷ್ಟನೊಬ್ಬನು ತಾನೇ ದುರ್ಜನನಾಗಿ, ಆತ್ಮದ್ರೋಹಿಯಾಗಿ, ವಂಚಕನಾಗಿದ್ದುಕೊಂಡು ಸಜ್ಜನರನ್ನು ದುರ್ಜನರೆಂದು ಹೇಳುತ್ತಾನೆ. ಇದಕ್ಕಿಂತಲೂ ಹಾಸ್ಯತರವಾದುದು ಮತ್ತೇನಿದೆ?

**ಸತ್ಯಧರ್ಮಚ್ಯುತಾತ್ಪುಂಸಃ ಕ್ರುದ್ಧಾದಾಶೀವಿಷಾದಿವ ।**
**ಅನಾಸ್ತಿಕೋಽಪ್ಯುದ್ವಿಜತೇ ಜನಃ ಕಿಂ ಪುನರಾಸ್ತಿಕಃ ॥೯೬॥**

ಕೋಪಗೊಂಡಿರುವ ವಿಷಸರ್ಪಕ್ಕಿಂತಲೂ ಹೆಚ್ಚಾಗಿ–ಸತ್ಯ ಮತ್ತು ಧರ್ಮಗಳಿಂದ ಚ್ಯುತನಾಗಿರುವ ಮನುಷ್ಯನ ವಿಷಯದಲ್ಲಿ ಜನರು ಭಯಪಡುತ್ತಾರೆ. ಸತ್ಯ ಮತ್ತು ಧರ್ಮಗಳನ್ನು ತ್ಯಜಿಸಿದವನು ಸರ್ಪಕ್ಕಿಂತಲೂ ದುಷ್ಟನಾಗಿರುತ್ತಾನೆ. ವಿಷಸರ್ಪವು ತನಗೆ ತೊಂದರೆಮಾಡಿದವರನ್ನು ಮಾತ್ರವೇ ಕಚ್ಚುವುದು. ಬೇರೆಯವರನ್ನು ಕಚ್ಚುವುದಿಲ್ಲ. ಆದರೆ ಧರ್ಮವಿಹೀನನಾದವನು, ಸತ್ಯದಿಂದ ಚ್ಯುತನಾದವನು ತೊಂದರೆಕೊಡದಿದ್ದವರಿಗೂ ಉಪಟಳವನ್ನು ಕೊಡುತ್ತಲೇ ಇರುತ್ತಾನೆ. ಅವನಿಗೆ ಪಾಪದ ಭೀತಿಯು ಸ್ವಲ್ಪವಾದರೂ ಇರುವುದಿಲ್ಲ. ಇಂತಹವರನ್ನು ಕಂಡರೆ ನಾಸ್ತಿಕರೂ ಭಯಪಡುತ್ತಾರೆ. ಹೀಗಿರುವಾಗ ಆಸ್ತಿಕರು ಭಯಪಡುವುದರಲ್ಲಿ ಆಶ್ಚರ್ಯವೇನಿದೆ?

ಪುತ್ರನ ಜನ್ಮಕ್ಕೆ ತಾನೇ ಕಾರಣನಾಗಿ, ತನ್ನ ಪ್ರತಿರೂಪನಾದ ಮಗನು ಎದುರಿನಲ್ಲಿ ನಿಂತಿರುವಾಗ–ಯಾವನು ಈ ಸತ್ಯವನ್ನು ನಿರಾಕರಿಸಲು ಪ್ರಯತ್ನಿಸುತ್ತಾನೆಯೋ–ಅವನ ಸಕಲೈಶ್ವರ್ಯಗಳನ್ನೂ ದೇವತೆಗಳು ಧ್ವಂಸ ಮಾಡುತ್ತಾರೆ. ಅಂತಹವನಿಗೆ ಉತ್ತಮಲೋಕಗಳೆಂದಿಗೂ ಲಭಿಸುವುದಿಲ್ಲ.

**ಕುಲವಂಶಪ್ರತಿಷ್ಠಾಂ ಹಿ ಪಿತರಃ ಪುತ್ರಮಬ್ರುವನ್ ।**
**ಉತ್ತಮಂ ಸರ್ವಧರ್ಮಾಣಾಂ ತಸ್ಮಾತ್ಪುತ್ರಂ ನ ಸನ್ತ್ಯಜೇತ್ ॥೯೮॥**

ಪಿತೃದೇವತೆಗಳು ಪುತ್ರನ ವಿಷಯವಾಗಿ ಹೇಳುವಾಗ–ಪುತ್ರನು ಕುಲ ಮತ್ತು ವಂಶಗಳ ವರ್ಧಕನೆಂದೂ ಆದುದರಿಂದ ಪುತ್ರನನ್ನು ಪಡೆಯುವುದು

ಶ್ರೇಷ್ಠವಾದ ಧರ್ಮವೆಂದೂ ಹೇಳಿದ್ದಾರೆ. ಆದುದರಿಂದ ಯಾವ ಕಾರಣ ದಿಂದಲೂ ಪುತ್ರನನ್ನು ಪರಿತ್ಯಜಿಸಕೂಡದು.

**ಸ್ವಪತ್ನೀಪ್ರಭವಾನ್ಪಞ್ಚ ಲಬ್ಧಾನ್ಕ್ರೀತಾನ್ವಿವರ್ಧಿತಾನ್ ।**
**ಕೃತಾನನ್ಯಾಸು ಚೋತ್ಪನ್ನಾನ್ಪುತ್ರಾನ್ವೈ ಮನುರಬ್ರವೀತ್ ॥೯೯॥**

ಧರ್ಮಪತ್ನಿಯಲ್ಲಿ ಹುಟ್ಟಿದವನು, ಅನ್ಯಸ್ತ್ರೀಯಲ್ಲಿ ಹುಟ್ಟಿದ್ದು ದಾನ ರೂಪವಾಗಿ ಕೊಡಲ್ಪಟ್ಟವನು ಅಥವಾ ಅಯಾಚಿತವಾಗಿ ಸಿಕ್ಕಿದವನು, ಮೌಲ್ಯವಿನಿಮಯದಿಂದ ಬಂದವನು, ಸಾಕುಮಗನು ಮತ್ತು ಉಪನಯ ನಾದಿ ಸಂಸ್ಕಾರಗಳಿಂದ ಸಂಸ್ಕೃತನಾದವನು–ಈ ಐವರನ್ನೂ ಮನುವು ಪುತ್ರ ರೆಂದೇ ಪರಿಗಣಿಸಿದ್ದಾನೆ.

**ಧರ್ಮಕೀರ್ತ್ಯಾವಹಾ ನೄಣಾಂ ಮನಸಃ ಪ್ರೀತಿವರ್ಧನಾಃ ।**
**ತ್ರಾಯನ್ತೇ ನರಕಾಜ್ಜಾತಾಃ ಪುತ್ರಾ ಧರ್ಮಪ್ಲವಾಃ ಪಿತೄನ್ ॥೧೦೦॥**

ಪುತ್ರರು ಮಾತಾ-ಪಿತೃಗಳ ಧರ್ಮ ಮತ್ತು ಕೀರ್ತಿಗಳ ಪ್ರಾಪ್ತಿಗೆ ಸಾಧಕರಾಗುತ್ತಾರೆ. ಮನಸ್ಸಿನ ಪ್ರೀತಿಯನ್ನು (ಸಂತೋಷವನ್ನು) ಹೆಚ್ಚಿಸು ತ್ತಾರೆ. ಮಕ್ಕಳು ಹುಟ್ಟಿದೊಡನೆಯೇ ಧರ್ಮವೆಂಬ ನಾವೆಯ ಮೂಲಕವಾಗಿ 'ಪುತ್' ಎಂಬ ನರಕದಿಂದ ತಂದೆಯನ್ನು ಪಾರುಮಾಡುತ್ತಾರೆ. ಇಂತಹ ಪುತ್ರರನ್ನು ಪರಿತ್ಯಜಿಸುವುದು ಖಂಡಿತವಾಗಿಯೂ ಯೋಗ್ಯವಲ್ಲ. ಅಖಂಡ ಭೂಮಂಡಲವನ್ನು ಸತ್ಯದಿಂದಲೂ ಧರ್ಮದಿಂದಲೂ ಪರಿಪಾಲಿಸುತ್ತಿರುವ ನೀನು ಈ ಸಂದರ್ಭದಲ್ಲಿ 'ಕಪಟಿ', 'ವಂಚಕ' ಎಂಬ ದುಷ್ಕೀರ್ತಿಯನ್ನು ಪಡೆಯುವುದು ಖಂಡಿತವಾಗಿಯೂ ಸಾಧುವಲ್ಲ. ಎಂತಹ ಸಂದರ್ಭ ದಲ್ಲಿಯೂ ಸತ್ಯವನ್ನು ಪರಿತ್ಯಜಿಸಬಾರದು. ರಾಜೇಂದ್ರ! ಸತ್ಯಕ್ಕೆ ಸಮಾನ ವಾದ ಧರ್ಮವೇ ಬೇರೊಂದಿಲ್ಲ.

**ವರಂ ಕೂಪಶತಾದ್ವಾಪೀ ವರಂ ವಾಪೀಶತಾತ್ಕ್ರತುಃ ।**
**ವರಂ ಕ್ರತುಶತಾತ್ಪುತ್ರಃ ಸತ್ಯಂ ಪುತ್ರಶತಾದ್ವರಮ್ ॥೧೦೨॥**

ನೂರು ಹಳ್ಳಗಳಿರುವುದಕ್ಕಿಂತಲೂ ಒಂದು ಬಾವಿಯಿರುವುದೇ ಲೇಸು. ನೂರು ಬಾವಿಗಳನ್ನು ತೋಡಿಸುವುದಕ್ಕಿಂತಲೂ ಒಂದು ಯಜ್ಞ ಮಾಡುವುದು ಶ್ರೇಷ್ಠವಾದುದು. ನೂರು ಯಜ್ಞಮಾಡುವುದಕ್ಕಿಂತಲೂ ಒಬ್ಬ

ಸತ್ಪುತ್ರನನ್ನು ಪಡೆಯುವುದು ಶ್ರೇಷ್ಠವಾದುದು. ನೂರು ಜನ ಸತ್ಪುತ್ರರನ್ನು ಪಡೆಯುವುದರಿಂದ ಪ್ರಾಪ್ತವಾಗುವ ಫಲವು ಸತ್ಯನಿಷ್ಠೆಯಿಂದ ಪ್ರಾಪ್ತವಾಗುತ್ತದೆ. ಆದುದರಿಂದ ಸತ್ಯವನ್ನೆಂದಿಗೂ ಪರಿತ್ಯಜಿಸಬಾರದು.

**ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಮ್ ।**
**ಅಶ್ವಮೇಧಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ॥೧೦೩॥**

ನೂರು ಅಶ್ವಮೇಧಗಳನ್ನು ಮಾಡಿದ ಫಲವನ್ನು ತಕ್ಕಡಿಯ ಒಂದು ತಟ್ಟೆಯಲ್ಲಿಯೂ–ಸತ್ಯನಿಷ್ಠೆಯಿಂದ ಪ್ರಾಪ್ತವಾಗಬಹುದಾದ ಫಲವನ್ನು ಮತ್ತೊಂದು ತಟ್ಟೆಯಲ್ಲಿಯೂ ಇಟ್ಟು ತೂಗಿದರೆ–ಸತ್ಯನಿಷ್ಠೆಯಿಂದ ಪ್ರಾಪ್ತ ವಾದ ಫಲವಿರುವ ತಟ್ಟೆಯೇ ಭಾರದಿಂದ ಕೆಳಗೆ ಕುಳಿತುಕೊಳ್ಳುತ್ತದೆ.

**ಸರ್ವವೇದಾಧಿಗಮನಂ ಸರ್ವತೀರ್ಥಾವಗಾಹನಮ್ ।**
**ಸತ್ಯಂ ಚ ವಚನಂ ರಾಜನ್ಸಮಂ ವಾ ಸ್ಯಾನ್ನ ವಾ ಸಮಮ್ ॥೧೦೪॥**

ಸರ್ವವೇದಗಳ ಅಧ್ಯಯನವೂ, ಸರ್ವತೀರ್ಥಗಳಲ್ಲಿಯ ಸ್ನಾನವೂ ಸತ್ಯನಿಷ್ಠಾಧರ್ಮಕ್ಕೆ ಸಮನಾಗಬಹುದು : ಸಮನಾಗದೆಯೂ ಇರಬಹುದು, ಮಹಾರಾಜ!

**ನಾಸ್ತಿ ಸತ್ಯಸಮೋ ಧರ್ಮೋ ನ ಸತ್ಯಾದ್ವಿದ್ಯತೇ ಪರಮ್ ।**
**ನ ಹಿ ತೀವ್ರತರಂ ಕಿಂಚಿದನೃತಾದಿಹ ವಿದ್ಯತೇ ॥೧೦೫॥**

ಸತ್ಯನಿಷ್ಠೆಗೆ ಸಮಾನವಾದ ಧರ್ಮವೇ ಬೇರೊಂದಿಲ್ಲ. ಸತ್ಯಕ್ಕಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ. ಅಂತೆಯೇ ಸುಳ್ಳುಹೇಳುವುದಕ್ಕಿಂತಲೂ ಪಾಪಕರವಾದ ಕಾರ್ಯವೂ ಬೇರೊಂದಿಲ್ಲ.

**ರಾಜನ್ಸತ್ಯಂ ಪರಂ ಬ್ರಹ್ಮ ಸತ್ಯಂ ಚ ಸಮಯಃ ಪರಃ ।**
**ಮಾ ತ್ಯಾಕ್ಷೀಃ ಸಮಯಂ ರಾಜನ್ಸತ್ಯಂ ಸಂಗತಮಸ್ತು ತೇ ॥೧೦೬॥**

ಮಹಾರಾಜ! ಸತ್ಯವೇ ಪರಬ್ರಹ್ಮವಸ್ತುವು. ಸತ್ಯಪ್ರತಿಜ್ಞೆಯೇ ಸರ್ವ ಶ್ರೇಷ್ಠವಾದ ವ್ರತವು. ಆದುದರಿಂದ ನೀನು ಮಾಡಿರುವ ಸತ್ಯಪ್ರತಿಜ್ಞೆಯನ್ನು ಪರಿತ್ಯಜಿಸಬೇಡ. ಸತ್ಯವು ಯಾವಾಗಲೂ ನಿನ್ನ ಜೀವನದಲ್ಲಿ ಸೇರಿರಲಿ. ದುಷ್ಯಂತ! ನಿನಗೆ ಸುಳ್ಳಿನಲ್ಲಿಯೇ ಆಸಕ್ತಿಯಿರುವುದಾದರೆ, ನನ್ನ ಮಾತಿನಲ್ಲಿ

ನಿನಗೆ ವಿಶ್ವಾಸವಿಲ್ಲವಾದರೆ ನಿನ್ನಂತಹವನ ಸಹವಾಸವೇ ನನಗೆ ಬೇಡ. ಮಹಾರಾಜ! ನಾನು ಹೊರಟೇಹೋಗುತ್ತೇನೆ. ಈ ಒಂದು ಕಡೆಯ ಮಾತನ್ನೂ ನಿನ್ನೊಡನೆ ಹೇಳಿಹೋಗುತ್ತೇನೆ. ನಿನ್ನ ಸಂಬಂಧವೇ ನನ್ನ ಪುತ್ರನಿಗಿಲ್ಲದಿದ್ದರೂ ಈ ನನ್ನ ಪುತ್ರನು ಹಿಮವತ್ಪರ್ವತದಿಂದ ಸುಶೋಭಿತವಾಗಿರುವ, ಚತುಃಸಾಗರಪರ್ಯಂತವಾಗಿರುವ ಈ ಅಖಂಡ ಭೂಮಂಡಲವನ್ನೂ ಪರಿಪಾಲಿಸುತ್ತಾನೆಂಬುದರಲ್ಲಿ ಸಂದೇಹವೇ ಇಲ್ಲ."

ಹೀಗೆ ತುಂಬಿದ ಸಭೆಯಲ್ಲಿ ಶಕುಂತಲೆಯು ಉದ್ಘೋಷಿಸಿ ಹೊರಡಲನುವಾದಳು. ಆ ಸಮಯಕ್ಕೆ ಸರಿಯಾಗಿ ಋತ್ವಿಜರು, ಪುರೋಹಿತರು, ಆಚಾರ್ಯರು ಮತ್ತು ಮಂತ್ರಿಗಳಿಂದ ಪರಿವೃತನಾಗಿದ್ದ ದುಷ್ಯಂತನನ್ನು ಸಂಬೋಧಿಸಿ ಅಶರೀರವಾಣಿಯು ಹೀಗೆ ಹೇಳಿತು :

**ಭಸ್ತ್ರಾ ಮಾತಾ ಪಿತುಃ ಪುತ್ರೋ ಯೇನ ಜಾತಃ ಸ ಏವ ಸಃ ।**
**ಭರಸ್ವ ಪುತ್ರಂ ದುಷ್ಯನ್ತ ಮಾವಮಂಸ್ಥಾಃ ಶಕುನ್ತಲಾಮ್ ॥೧೧೦॥**

"ಮಾನವನು ಪುತ್ರನೆಂಬ ಅಭಿಧಾನದಿಂದ ಪುನರವತರಿಸುವುದಕ್ಕೆ ತಾಯಿಯ ಗರ್ಭಕೋಶವೆಂಬುದು ಕಾರಣವಾಗುತ್ತದೆ. ತನ್ನದೇ ಆದ ರೇತಸ್ಸಿನ ಮೂಲಕವಾಗಿ ಪತ್ನಿಯ ಗರ್ಭಕೋಶದಲ್ಲಿ ಪ್ರವೇಶಿಸಿ ಪುನಃ ತಾನೇ ಪುತ್ರರೂಪನಾಗಿ ಮಾನವನು ಹೊರಬರುತ್ತಾನೆ. ಆದುದರಿಂದ ಪತ್ನಿಯಾದವಳು ತಾಯಿಗೆ ಸಮಾನಳು. ದುಷ್ಯಂತ! ನಿನ್ನ ಪ್ರತಿಕೃತಿಯಂತಿರುವ ಪುತ್ರನನ್ನು ಪಾಲನೆಮಾಡು. ಶಕುಂತಲೆಯನ್ನು ಅವಮಾನಗೊಳಿಸಬೇಡ.

**ರೇತೋಧಾಃ ಪುತ್ರ ಉನ್ನಯತಿ ನರದೇವ ಯಮಕ್ಷಯಾತ್ ।**
**ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುನ್ತಲಾ ।**
**ಜಾಯಾ ಜನಯತೇ ಪುತ್ರಮಾತ್ಮನೋಽಙ್ಗ ದ್ವಿಧಾ ಕೃತಮ್ ॥೧೧೨॥**

ನಿನ್ನ ರೇತಸ್ಸಿನಿಂದಲೇ ಉತ್ಪನ್ನನಾದ ಈ ನಿನ್ನ ಪುತ್ರನು ನಿನ್ನ ಪಿತೃದೇವತೆಗಳನ್ನು ನರಕದಿಂದ ಉದ್ಧರಿಸುತ್ತಾನೆ. ಶಕುಂತಲೆಯು ಹೇಳಿದುದು ಸತ್ಯವಾದುದು. ಈ ಪುತ್ರನು ಹುಟ್ಟಲು ಕಾರಣನು ನೀನೇ ಆಗಿರುವೆ. ಭಾರ್ಯೆಯಾದವಳು ಪತಿಯನ್ನು ಎರಡು ಭಾಗಗಳನ್ನಾಗಿ ವಿಂಗಡಿಸುವ ಸಾಮರ್ಥ್ಯವನ್ನು ಹೊಂದಿರುತ್ತಾಳೆ. ಆ ಎರಡು ಭಾಗಗಳೂ ಪೂರ್ಣರೂಪ

ದಲ್ಲಿಯೇ ಇರುತ್ತವೆ. ಒಂದು ಭಾಗಕ್ಕೆ ಪುತ್ರನೆಂಬ ಅಭಿಧಾನವಿರುತ್ತದೆ. ಮತ್ತೊಂದು ಭಾಗವು ಪತಿಯೆಂಬ ಅಭಿಧಾನದಿಂದಲೇ ಉಳಿದಿರುತ್ತದೆ.

**ತಸ್ಮಾದ್ಭರಸ್ವ ದುಷ್ಯನ್ತ ಪುತ್ರಂ ಶಾಕುನ್ತಲಂ ನೃಪ ।**
**ಅಭೂತಿರೇಷಾ ಯತ್ತ್ಯಕ್ತ್ವಾ ಜೀವೇಜ್ಜೀವನ್ತಮಾತ್ಮಜಮ್ ।**
**ಶಾಕುನ್ತಲಂ ಮಹಾತ್ಮಾನಂ ದೌಷ್ಯನ್ತಿಂ ಭರ ಪೌರವ ॥೧೧೩॥**

ಆದುದರಿಂದ ದುಷ್ಯಂತ! ಶಕುಂತಲೆಯಲ್ಲಿ ನಿನ್ನಿಂದ ಹುಟ್ಟಿರುವ ಈ ಪುತ್ರನನ್ನು ಆದರದಿಂದ ಸ್ವೀಕರಿಸಿ ಪಾಲನೆಮಾಡು. ಜೀವಂತನಾದ ಸರ್ವ ಲಕ್ಷಣಸಂಪನ್ನನಾದ ಪುತ್ರನನ್ನು ಪರಿತ್ಯಾಗಮಾಡಿ ಜೀವಿಸುವುದು ನಿಶ್ಚಯ ವಾಗಿಯೂ ದೌರ್ಭಾಗ್ಯವೇ ಸರಿ. ಶಕುಂತಲಾಪುತ್ರನಾದ ಮಹಾತ್ಮನಾದ ದೌಷ್ಯಂತಿಯನ್ನು ನೀನು ಭರಿಸುವವನಾಗು. (ಪರಿಪಾಲಿಸು.)

**ಭರ್ತವ್ಯೋಽಯಂ ತ್ವಯಾ ಯಸ್ಮಾದಸ್ಮಾಕಂ ವಚನಾದಪಿ ।**
**ತಸ್ಮಾದ್ಭವತ್ವಯಂ ನಾಮ್ನಾ ಭರತೋ ನಾಮ ತೇ ಸುತಃ ॥೧೧೪॥**

ನಮ್ಮ ಮಾತಿನಿಂದ ನೀನು ಈ ಶಾಕುಂತಲನನ್ನು ಭರಿಸುವೆಯಾದ್ದರಿಂದ (ಪೋಷಣೆಮಾಡುವೆಯಾದ್ದರಿಂದ) ಇವನು ಮುಂದೆ 'ಭರತ'ನೆಂಬ ಹೆಸರಿನಿಂದಲೇ ಪ್ರಸಿದ್ಧನಾಗುತ್ತಾನೆ."

ಈ ಮಾತುಗಳನ್ನು ಕೇಳಿದೊಡನೆಯೇ ರಾಜನು ಆನಂದಬಾಷ್ಪಗಳನ್ನು ಸುರಿಸುತ್ತಾ ಮಂತ್ರಿ-ಪುರೋಹಿತರನ್ನೂ, ಪೌರರನ್ನೂ ಕುರಿತು ಹೇಳಿದನು :

"ಪ್ರಜೆಗಳೇ! ದೇವದೂತನು ಹೇಳುತ್ತಿರುವ ಮಾತನ್ನು ನೀವೆಲ್ಲರೂ ಕೇಳಿಕೊಳ್ಳಿರಿ :

ಇವನು ನನ್ನ ಮಗನೆಂಬುದೂ, ಶಕುಂತಲೆಯು ನನ್ನ ಧರ್ಮಪತ್ನಿ ಯೆಂಬುದೂ ನನಗೆ ಗೊತ್ತು. ಆದರೆ ಶಕುಂತಲೆಯ ಮಾತಿನ ಮೇಲೆ ವಿಶ್ವಾಸತೋರಿ ನಾನಿವನನ್ನು ಪರಿಗ್ರಹಿಸಿದ್ದರೆ ಜನತೆಯು ಈ ಬಾಲಕನನ್ನು ಸಂಶಯಗ್ರಸ್ತವಾದ ದೃಷ್ಟಿಯಿಂದ ನೋಡುತ್ತಿದ್ದಿತು. ಮತ್ತು ಇವನು ಪರಿಶುದ್ಧನೆಂದು ಭಾವಿಸುತ್ತಿರಲಿಲ್ಲ."

ವೈಶಂಪಾಯನರು ಹೇಳುತ್ತಾರೆ :

ಜನಮೇಜಯ! ಹೀಗೆ ದುಷ್ಯಂತನು ದೇವದೂತನ ಮಾತಿನ ಮೂಲಕವಾಗಿ ತನ್ನ ಮಗನ ಪಾವಿತ್ರ್ಯವನ್ನು ಪ್ರಮಾಣೀಕರಿಸಿ ಹೃಷ್ಟನಾಗಿ ಮತ್ತು ಆನಂದಭರಿತನಾಗಿ ಶಾಕುಂತಲನನ್ನು ಪ್ರತಿಗ್ರಹಿಸಿದನು.

ಅನಂತರ ರಾಜನು ಸಂತೋಷದಿಂದ ಆ ಕುಮಾರನಿಗೆ ತಂದೆಯು ಮಾಡಬೇಕಾದ ಮಂಗಳಕಾರ್ಯಗಳನ್ನು ಮಾಡಿದನು. ಅವನ ತಲೆಯನ್ನು ಆಘ್ರಾಣಿಸಿ ಆಲಿಂಗಿಸಿಕೊಂಡನು. ಬ್ರಾಹ್ಮಣರಿಂದಲೂ ವಂದಿ-ಮಾಗಧರಿಂದಲೂ ಹೊಗಳಲ್ಪಟ್ಟ ಮಗನ ಸ್ಪರ್ಶಸುಖವನ್ನನುಭವಿಸಿದನು.

ದುಷ್ಯಂತನು ಶಕುಂತಲೆಯನ್ನೂ ಚೆನ್ನಾಗಿ ಗೌರವಿಸಿದನು. ಆಕೆಯನ್ನು ಸಮಾಧಾನಪಡಿಸುತ್ತಾ–"ನಮ್ಮ ಸಂಬಂಧವು ಲೋಕಕ್ಕೆ ತಿಳಿಯದೆ ಗುಟ್ಟಾಗಿ ನಡೆದಿತ್ತು. ಆದ್ದರಿಂದ ನಾನೂ, ನೀನೂ ಮತ್ತು ನಿನ್ನ ಪುತ್ರನೂ ಶುದ್ಧರೆಂಬುದನ್ನು ಸಿದ್ಧಪಡಿಸಲು ಹೀಗೆ ಮಾಡಿದೆನು. ನಾನು ಹೀಗೆ ಮಾಡದೆ ನಿಮ್ಮನ್ನು ಪ್ರತಿಗ್ರಹಿಸಿದ್ದರೆ ಜನತೆಯು ಸ್ತ್ರೀಸಹಜವಾದ ಕಾಮುಕತೆಯಿಂದ ನನ್ನೊಡನೆ ನಿನ್ನ ಸಮಾಗಮವಾಗಿರುವುದೆಂದೂ ನಾನು ಕೂಡ ಕಾಮವಶನಾಗಿ ನಿನ್ನ ಮಗನಿಗೆ ರಾಜ್ಯದ ಪಟ್ಟಗಟ್ಟಿದೆನೆಂದೂ ಹೇಳುತ್ತಿದ್ದಿತು. ನಮ್ಮಿಬ್ಬರಿಗೂ ಧಾರ್ಮಿಕವಾದ ರೀತಿಯಲ್ಲಿ ವಿವಾಹಸಂಬಂಧವು ನಡೆದಿರುವುದೆಂಬುದನ್ನು ನಂಬುತ್ತಿರಲಿಲ್ಲ. ಅದನ್ನು ಯೋಚಿಸಿಯೇ ನಾನು ಹೀಗೆ ಮಾಡಿದೆನು, ಶಕುಂತಲೇ! ಕೋಪಗೊಂಡ ನೀನು ಆಡಿದ ಅಪ್ರಿಯವಾದ ಮಾತುಗಳನ್ನು ನಾನು ಕ್ಷಮಿಸಿದ್ದೇನೆ."

ಹೀಗೆ ಹೇಳಿ ದುಷ್ಯಂತನು ಪ್ರಿಯಮಹಿಷಿಯನ್ನು ವಸ್ತ್ರಾಭರಣ ಗಳಿಂದಲೂ ಅನ್ನ-ಪಾನಗಳಿಂದಲೂ ಉಪಚರಿಸಿದನು.

ಅನಂತರದಲ್ಲಿ ದುಷ್ಯಂತನು ಭರತನಿಗೆ ಯೌವರಾಜ್ಯದ ಪಟ್ಟಾಭಿಷೇಕ ಮಾಡಿದನು. ಭರತನಲ್ಲಿ ದೈವದತ್ತವಾದ, ಸುಪ್ರಸಿದ್ಧವಾದ, ಕಾಂತಿಯುಕ್ತ ವಾದ, ಅಪ್ರತಿಹತವಾದ ಚಕ್ರವಿದ್ದಿತು. ಆ ಚಕ್ರದ ಸಹಾಯದಿಂದ ಭರತನು

ಪ್ರಪಂಚದ ಎಲ್ಲ ರಾಜರನ್ನೂ ತನ್ನ ಸಾಮಂತರನ್ನಾಗಿ ಮಾಡಿಕೊಂಡನು. ಸತ್ಪುರುಷರು ಅನುಸರಿಸುವ ಧರ್ಮಮಾರ್ಗದಲ್ಲಿಯೇ ಇರುತ್ತಾ ಶಾಶ್ವತವಾದ ಯಶಸ್ಸನ್ನು ಗಳಿಸಿದನು. ಭರತನು ಪ್ರಪಂಚದ ಎಲ್ಲ ರಾಜರನ್ನೂ ಜಯಿಸಿ ಸಾರ್ವಭೌಮನೂ ಚಕ್ರವರ್ತಿಯೂ ಆದನು. ಮರುತ್ಪತಿಯಾದ ಇಂದ್ರನಂತೆ ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿದನು. ಕಣ್ವಮಹರ್ಷಿಗಳು ಭರತನಿಂದ ಬಹುದಕ್ಷಿಣಾಕವಾದ ಗೋವಿತತವೆಂಬ ಯಾಗವನ್ನೂ–ಅಶ್ವಮೇಧಯಾಗವನ್ನೂ ಮಾಡಿಸಿದರು. ಆ ಯಾಗದಲ್ಲಿ ಭರತಚಕ್ರ ವರ್ತಿಯು ಕಣ್ವಮಹರ್ಷಿಗಳಿಗೆ ಪದ್ಮದ ಮುದ್ರೆಯುಳ್ಳ ಒಂದು ಸಾವಿರ ಸುವರ್ಣನಾಣ್ಯಗಳನ್ನು ದಕ್ಷಿಣೆಯಾಗಿ ಕೊಟ್ಟನು.

**ಭರತಾದ್ಭಾರತೀ ಕೀರ್ತಿರ್ಯೇನೇದಂ ಭಾರತಂ ಕುಲಮ್ ।**
**ಅಪರೇ ಯೇ ಚ ಪೂರ್ವೇ ವೈ ಭಾರತಾ ಇತಿ ವಿಶ್ರುತಾಃ ॥೧೩೧॥**

ಭರತನಿಂದಲೇ ಈ ದೇಶಕ್ಕೆ ಭಾರತವೆಂದೂ, ಅವನ ವಂಶಕ್ಕೆ ಭಾರತವಂಶವೆಂದೂ ಹೆಸರಾಯಿತು. ಭರತನ ಮುಂದಿನ ಪೀಳಿಗೆಯವರೂ ಭಾರತರೆಂದೇ ಪ್ರಸಿದ್ಧರಾದರು. ಭರತನ ವಂಶದಲ್ಲಿ ದೈವಸದೃಶರಾದ, ಮಹಾತೇಜಸ್ವಿಗಳಾದ, ಬ್ರಹ್ಮಸದೃಶರಾದ ಅನೇಕ ರಾಜಶ್ರೇಷ್ಠರು ಹುಟ್ಟಿದರು. ಅವರ ಹೆಸರುಗಳು ಅಸಂಖ್ಯಾತವಾಗಿವೆ. ಜನಮೇಜಯ! ಸತ್ಯನಿಷ್ಠರಾದ, ಕಪಟರಹಿತರಾದ, ದೇವಸದೃಶರಾದ, ಮಹಾಭಾಗರಾದ ಅವರಲ್ಲಿ ಬಹುಮುಖ್ಯರಾದವರ ನಾಮಧೇಯಗಳನ್ನು ಹೇಳುವೆನು, ಕೇಳು."

ಎಳನೆಯ ಅಧ್ಯಾಯವು ಮುಗಿಯಿತು.

೭೫ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಭರತಕುಲೋತ್ಪನ್ನರ ಸಂಕ್ಷಿಪ್ತ ಇತಿಹಾಸ

ಜನಮೇಜಯ! ದಕ್ಷಪ್ರಜಾಪತಿ, ವೈವಸ್ವತಮನು, ಭರತ, ಕುರು, ಪೂರು, ಅಜಮೀಢ, ಯಾದವ, ಕೌರವ ಮತ್ತು ಭಾರತರು–ಇವರ ಸಂಕೀರ್ತನವು ಮಂಗಳಕರವಾದುದು ; ಧನ-ಧಾನ್ಯಸಮೃದ್ಧಿಯನ್ನುಂಟು ಮಾಡತಕ್ಕುದು ; ಯಶಸ್ಕರವಾದುದು. ಆ ಮಹನೀಯರ ಸಂಕೀರ್ತನದಿಂದ

ದೀರ್ಘಾಯುಷ್ಯವು ಲಭಿಸುತ್ತದೆ. ಅಂತಹ ಪುಣ್ಯತಮವಾದ ಚರಿತ್ರೆಯನ್ನು ಹೇಳುವೆನು, ಕೇಳು. ಮಹಾರಾಜ! ಮಹರ್ಷಿಗಳಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಹತ್ತು ಮಕ್ಕಳು ಪ್ರಾಚೇತಸನಿಗೆ ಹುಟ್ಟಿದರು. ಅವರೆಲ್ಲರೂ ಪುಣ್ಯವಂತರಾಗಿಯೂ ಮಹಾತೇಜಸ್ವಿಗಳಾಗಿಯೂ ಇದ್ದರು. ಅವರು ತಮ್ಮ ಮುಖದಲ್ಲಿದ್ದ ಅಗ್ನಿಯಿಂದ (ತೇಜಸ್ಸಿನಿಂದ) ಪ್ರಾಣಿಗಳಿಗೆ ತೊಂದರೆಯನ್ನುಂಟುಮಾಡುತ್ತಿದ್ದ ದೊಡ್ಡ-ದೊಡ್ಡ ವೃಕ್ಷಗಳನ್ನು ಸುಟ್ಟು ಭಸ್ಮಮಾಡಿದರು. ಆ ಹತ್ತು ಮಕ್ಕಳು ಹುಟ್ಟಿದನಂತರ ಪ್ರಾಚೇತಸನಿಗೆ ದಕ್ಷನೆಂಬ ಮಗನು ಹುಟ್ಟಿದನು. ಆ ದಕ್ಷನಿಂದಲೇ ಈ ಎಲ್ಲ ಪ್ರಜೆಗಳೂ ಹುಟ್ಟಿದರು. ಆದುದರಿಂದ ದಕ್ಷನು ಜಗತ್ತಿಗೇ ಪಿತಾಮಹನೆನಿಸಿಕೊಂಡಿರುತ್ತಾನೆ. 'ವೀರಿಣೀ' ಎಂಬ ಪತ್ನಿಯಿಂದ ದಕ್ಷನು ತನಗೆ ಅನುರೂಪರಾದ ಸಾವಿರ ಮಕ್ಕಳನ್ನು ಪಡೆದನು. ಅವರೆಲ್ಲರೂ ಕಠಿನವ್ರತಿಗಳಾಗಿದ್ದರು. ದಕ್ಷನ ಸಾವಿರ ಮಕ್ಕಳಿಗೂ ನಾರದನು ಸಾಂಖ್ಯಶಾಸ್ತ್ರದ ಮೂಲಕವಾಗಿ ಮೋಕ್ಷಮಾರ್ಗವನ್ನು ಉಪದೇಶಿಸಿದನು. ಅವರೆಲ್ಲರೂ ವಿರಕ್ತಿಮಾರ್ಗವನ್ನು ಅವಲಂಬಿಸಿದುದರಿಂದ ಅವರಿಗೆ ಮಕ್ಕಳಾಗಲಿಲ್ಲ.

ತನ್ನ ಸಾವಿರ ಮಂದಿ ಗಂಡುಮಕ್ಕಳೂ ವಿರಕ್ತಿಮಾರ್ಗವನ್ನು ಹಿಡಿಯಲಾಗಿ ದಕ್ಷನು ಪ್ರಪಂಚದ ಸೃಷ್ಟಿಗೋಸ್ಕರ ಐವತ್ತುಮಂದಿ ಹೆಣ್ಣುಮಕ್ಕಳನ್ನು ಪಡೆದನು. ಹಿಂದೆಯೇ ಒಮ್ಮೆ ಹೇಳಿದಂತೆ ಆ ಐವತ್ತು ಹೆಣ್ಣುಮಕ್ಕಳಲ್ಲಿ ಹತ್ತು ಹೆಣ್ಣುಮಕ್ಕಳನ್ನು ಧರ್ಮನಿಗೂ, ಹದಿಮೂರು ಹೆಣ್ಣುಮಕ್ಕಳನ್ನು ಕಶ್ಯಪನಿಗೂ, ಉಳಿದ ಇಪ್ಪತ್ತೇಳು ಹೆಣ್ಣುಮಕ್ಕಳನ್ನು ಕಾಲನಯನಾರ್ಥವಾಗಿ ಚಂದ್ರನಿಗೂ ಕೊಟ್ಟು ಮದುವೆಮಾಡಿದನು.

ಮರೀಚಿಮಹರ್ಷಿಯ ಮಗನಾದ ಕಶ್ಯಪನು ತನ್ನ ಹದಿಮೂರು ಪತ್ನಿಯರಲ್ಲಿ ಶ್ರೇಷ್ಠಳಾದ ಮತ್ತು ಮೊದಲನೆಯವಳಾದ ದಾಕ್ಷಾಯಣಿಯಲ್ಲಿ (ಅದಿತಿಯಲ್ಲಿ) ಇಂದ್ರನೇ ಮೊದಲಾದ ಮಹಾಪರಾಕ್ರಮಿಗಳಾದ ದ್ವಾದಶಾದಿತ್ಯರನ್ನೂ, ವಿವಸ್ವಂತನೆಂಬ ಸೂರ್ಯನನ್ನೂ ಪಡೆದನು. ವಿವಸ್ವಂತನ ಮಗನೇ ಪ್ರಭುವಾದ ಯಮನು. ಅವನನ್ನು ವೈವಸ್ವತನೆಂದೂ ಕರೆಯುತ್ತಾರೆ. ವಿವಸ್ವಂತನ ಮೊದಲನೆಯ ಮಗ ಸುವಿಖ್ಯಾತನಾದ ಮನು. ಯಮನು ಎರಡನೆಯ ಮಗ. ಅರ್ಥಾತ್ ಯಮನು ಮನುವಿನ ತಮ್ಮ.

ಮನುವು ಧರ್ಮಾತ್ಮನಾಗಿಯೂ ಧೀಮಂತನಾಗಿಯೂ ಇದ್ದನು. ಅವನ ಹೆಸರಿನಿಂದಲೇ ಮನುವಂಶವು ಬೆಳೆಯಿತು. ಅವನ ವಂಶೀಯರೆಲ್ಲರೂ ಮಾನವರೆಂದು ಖ್ಯಾತರಾದರು. ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಲ್ಲರೂ ಮನುವಿನಿಂದಲೇ ಹುಟ್ಟಿದರು. ಅನಂತರದಲ್ಲಿ ಬ್ರಾಹ್ಮಣರಿಗೂ, ಕ್ಷತ್ರಿಯರಿಗೂ ನಿಕಟಸಂಬಂಧವೇರ್ಪಟ್ಟಿತು.

ಮನುವಿನ ಮಕ್ಕಳಲ್ಲಿ ಬ್ರಾಹ್ಮಣರಾಗಿದ್ದವರು ಸಾಂಗವಾದ ವೇದಾಧ್ಯಯನದಲ್ಲಿಯೇ ನಿರತರಾಗಿರುತ್ತಿದ್ದರು. ಕ್ಷತ್ರಧರ್ಮಪರಾಯಣರಾದ ಒಂಬತ್ತು ಗಂಡುಮಕ್ಕಳೂ, ಒಬ್ಬಳು ಹೆಣ್ಣುಮಗಳೂ ಮನುವಿಗೆ ಹುಟ್ಟಿದರು. ವೇನ, ಧೃಷ್ಣು, ನರಿಷ್ಯಂತ, ನಾಭಾಗ, ಇಕ್ಷ್ವಾಕು, ಕಾರೂಷ, ಶರ್ಯಾತಿ, ಎಂಟನೆಯವಳಾದ ಇಲಾ, ಪೃಷಧ್ರು ಮತ್ತು ನಾಭಾಗಾರಿಷ್ಟ– ಇವರೇ ಮನುವಿನ ಹತ್ತು ಮಕ್ಕಳು. ಇವರುಗಳಲ್ಲದೇ ಇನ್ನೂ ಐವತ್ತು ಮಂದಿ ಮಕ್ಕಳು ಮನುವಿಗೆ ಹುಟ್ಟಿದರು. ಆದರೆ ಆ ಐವತ್ತುಮಂದಿ ಮಕ್ಕಳೂ ತಮ್ಮ-ತಮ್ಮಲ್ಲಿಯೇ ಜಗಳವಾಡಿಕೊಂಡು ವಿನಾಶಹೊಂದಿದರೆಂದು ನಾವು ಕೇಳಿದ್ದೇವೆ. ಇಲಾ ಎಂಬುವಳಲ್ಲಿ ಪುರೂರವನು ಹುಟ್ಟಿದನು. ಪುರೂರವನಿಗೆ ಇಲಾ ಎಂಬುವಳೇ ತಂದೆ ಮತ್ತು ತಾಯಿಯೂ ಆಗಿದ್ದಳೆಂದು ನಾವು ಕೇಳಿದ್ದೇವೆ. ( ಇಲಾ ಎಂಬುವಳ ಪತಿ ಚಂದ್ರನ ಮಗನಾದ ಬುಧ. ಬುಧನಿಂದ ಇಲಾ ಎಂಬುವಳಲ್ಲಿ ಪುರುಷನಾಗಿ ಪುರೂರವನು ಹುಟ್ಟಿದನು. ಮುಂದೆ ಕಾರಣಾಂತರಗಳಿಂದ ಇಲಾ ಎಂಬುವಳು ಪರಿವರ್ತನೆಹೊಂದಿ ಸುದ್ಯುಮ್ನನೆಂಬ ಹೆಸರನ್ನು ಪಡೆದು ಪುರೂರವನಿಗೆ ರಾಜ್ಯಪ್ರದಾನಮಾಡಿದಳು. ಈ ಕಾರಣದಿಂದ ಪುರೂರವನಿಗೆ ತಂದೆ-ತಾಯಿ ಇಬ್ಬರೂ ಇಲಾ ಎಂಬುವಳೇ ಆಗಿದ್ದಳೆಂದು ಇಲ್ಲಿ ಹೇಳಲಾಗಿದೆ. ) ಪುರೂರವನು ಸಮುದ್ರದಲ್ಲಿದ್ದ ಹದಿಮೂರು ದ್ವೀಪಗಳಿಗೆ ಅಧಿಪತಿಯಾಗಿದ್ದನು. ಅವನು ಮಾನವನಾಗಿದ್ದರೂ ಸತ್ತ್ವಯುಕ್ತರಾದ ಮಾನವೇತರರ ಜೊತೆಯಲ್ಲಿಯೇ ಯಾವಾಗಲೂ ಇರುತ್ತಿದ್ದನು.

ವೀರ್ಯೋನ್ಮತ್ತನಾಗಿದ್ದ ಪುರೂರವನು ಬ್ರಾಹ್ಮಣರೊಡನೆ ದ್ವೇಷ ಕಟ್ಟಿಕೊಂಡನು. ಬ್ರಾಹ್ಮಣರು ರೋದನಮಾಡುತ್ತಿದ್ದರೂ ಬಿಡದೇ ಅವರಲ್ಲಿರುತ್ತಿದ್ದ ಧನ-ಕನಕ-ವಸ್ತುಗಳೆಲ್ಲವನ್ನೂ ಸುಲಿಗೆಮಾಡುತ್ತಿದ್ದನು. ಅವನ

ದೌಷ್ಟ್ಯವನ್ನು ಕಂಡು ಬ್ರಹ್ಮಲೋಕದಿಂದ ಸನತ್ಕುಮಾರನು ಅವನ ಸಮೀಪಕ್ಕೆ ಬಂದು ಬ್ರಾಹ್ಮಣರ ವಿಷಯದಲ್ಲಿ ದೌಷ್ಟ್ಯದಿಂದ ನಡೆದುಕೊಳ್ಳಬಾರದೆಂದು ಉಪದೇಶಿಸಿದನು. ಸನತ್ಕುಮಾರನ ಉಪದೇಶವನ್ನೂ ರಾಜನು ತಿರಸ್ಕರಿಸಿದನು. ಕ್ರುದ್ಧರಾದ ಮಹರ್ಷಿಗಳ ಶಾಪದಿಂದಾಗಿ ಪುರೂರವನು ವಿನಾಶ ಹೊಂದಿದನು. ಪುರೂರವನಿಗೆ ಬಲದ ಮದವಿದ್ದಿತು. ಮಹಾಲೋಭಿಯಾಗಿದ್ದನು. ಕಾರ್ಯಾಕಾರ್ಯವಿವೇಚನೆಯಿರಲಿಲ್ಲ. ಆದರೆ ಅವನು ಮಹಾಸಾಹಸಿಯು. ಗಂಧರ್ವಲೋಕದಲ್ಲಿದ್ದ ಉರ್ವಶಿಯನ್ನೂ, ಅವಳ ಜೊತೆಯಲ್ಲಿಯೇ ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯಗಳೆಂಬ ಅಗ್ನಿಗಳನ್ನೂ ಭೂಲೋಕಕ್ಕೆ ತಂದನು. ಪುರೂರವನಿಗೆ ಉರ್ವಶಿಯಲ್ಲಿ ಆಯು, ಧೀಮಂತ, ಅಮಾವಸು, ದೃಢಾಯು, ವನಾಯು ಮತ್ತು ಶತಾಯುಗಳೆಂಬ ಆರು ಮಕ್ಕಳು ಹುಟ್ಟಿದರು. ಅವರಲ್ಲಿ ಮೊದಲನೆಯವನಾದ ಆಯುವಿಗೆ ಸ್ವರ್ಭಾನವೀ ಎಂಬುವಳಲ್ಲಿ ನಹುಷ, ವೃದ್ಧಶರ್ಮಾ, ರಜಿ, ಗಯ ಮತ್ತು ಅನೇನಸರೆಂಬ ಐವರು ಮಕ್ಕಳು ಹುಟ್ಟಿದರು. ಅವರಲ್ಲಿ ಮೊದಲನೆಯವನಾದ ನಹುಷನು ಧೀಮಂತನಾಗಿಯೂ, ಸತ್ಯನಿಷ್ಠನಾಗಿಯೂ, ಪರಾಕ್ರಮಿಯಾಗಿಯೂ ಇದ್ದನು.

ನಹುಷನು ರಾಜ್ಯವನ್ನು ಧರ್ಮದಿಂದ ಪರಿಪಾಲನೆಮಾಡುತ್ತಿದ್ದನು. ಪಿತೃಗಳನ್ನೂ, ದೇವತೆಗಳನ್ನೂ, ಬ್ರಾಹ್ಮಣರನ್ನೂ, ಗಂಧರ್ವರನ್ನೂ, ಸರ್ಪಗಳನ್ನೂ, ರಾಕ್ಷಸರನ್ನೂ ಅವರವರಿಗೆ ಹಿತವಾದ ಕಾರ್ಯಗಳನ್ನು ಮಾಡುತ್ತಾ ಪರಿಪಾಲಿಸುತ್ತಿದ್ದನು. ತನ್ನ ರಾಜ್ಯದಲ್ಲಿದ್ದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರನ್ನೂ ಯಾವ ವಿಧವಾದ ತಾರತಮ್ಯವೂ ಇಲ್ಲದೇ ಸಂರಕ್ಷಿಸುತ್ತಿದ್ದನು. ದಸ್ಯುಗಳೆಂಬ ದರೋಡೆಕಾರರನ್ನು ಸಂಪೂರ್ಣವಾಗಿ ನಿರ್ಮೂಲಮಾಡಿದ್ದನು. ಋಷಿಗಳಿಗೆ ತೊಂದರೆಕೊಡುತ್ತಿದ್ದ ದಸ್ಯುಗಳನ್ನು ನಿರ್ಮೂಲಮಾಡಿದ್ದಕ್ಕಾಗಿ ಋಷಿಗಳು ಪ್ರಾಣಿಗಳೋಪಾದಿಯಲ್ಲಿ ನಹುಷನ ಪಲ್ಲಕ್ಕಿಯನ್ನು ಅವನು ಹೇಳಿದೆಡೆಗೆ ಹೊತ್ತುಕೊಂಡು ತಿರುಗಬೇಕಾಯಿತು. ತನ್ನ ತೇಜಸ್ಸಿನಿಂದಲೂ, ಪರಾಕ್ರಮದಿಂದಲೂ, ತಪಸ್ಸಿನಿಂದಲೂ ದೇವತೆಗಳನ್ನೂ ಪರಾಜಯಗೊಳಿಸಿ ಸ್ವಲ್ಪಕಾಲ ಇಂದ್ರಪದವಿಯನ್ನೂ ಪಡೆದಿದ್ದನು. ಅವನಿಗೆ ಯತಿ, ಯಯಾತಿ, ಸಂಯಾತಿ, ಆಯಾತಿ

ಅಯತಿ ಮತ್ತು ಧ್ರುವ ಎಂಬ ಆರು ಮಂದಿ ಗಂಡುಮಕ್ಕಳಿದ್ದರು. ಅವರೆಲ್ಲರೂ ಪ್ರಿಯವಾದಿಗಳಾಗಿಯೂ, ಪರಾಕ್ರಮಿಗಳಾಗಿಯೂ ಇದ್ದರು. ಮೊದಲನೆ ಯವನಾದ ಯತಿಯು ತನ್ನ ಹೆಸರಿಗೆ ಅನುಗುಣವಾಗಿ ಯೋಗಾಭ್ಯಾಸ ನಿರತನಾಗಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದನು. ನಹುಷನ ಎರಡನೆಯ ಮಗನಾದ ಯಯಾತಿಯು ಭೂಮಂಡಲದ ಚಕ್ರವರ್ತಿಯಾದನು. ಅವನು ಸತ್ಯನಿಷ್ಠನಾಗಿಯೂ, ಪರಾಕ್ರಮಿಯಾಗಿಯೂ ಇದ್ದನಲ್ಲದೇ ರಾಜ್ಯವನ್ನು ಧರ್ಮದಿಂದಲೂ ಪರಿಪಾಲನೆಮಾಡುತ್ತಿದ್ದನು. ಅವನು ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿದನು. ಅತಿಭಕ್ತಿಭಾವದಿಂದ ಪಿತೃಗಳನ್ನೂ ದೇವತೆ ಗಳನ್ನೂ ಸಂಪೂಜಿಸುತ್ತಿದ್ದನು. ಪ್ರಜೆಗಳ ವಿಷಯದಲ್ಲಿ ಹೆಚ್ಚು ಅನುರಾಗ ವುಳ್ಳವನಾಗಿದ್ದನು. ಅವನ ಪತ್ನಿಯರಾದ ದೇವಯಾನೀ ಮತ್ತು ಶರ್ಮಿಷ್ಠೆ ಯರಲ್ಲಿ ಅವನಿಗೆ ಗುಣವಂತರಾದ, ಪರಾಕ್ರಮಿಗಳಾದ ಮಕ್ಕಳು ಹುಟ್ಟಿದರು. ದೇವಯಾನಿಯಲ್ಲಿ ಯದು, ತುರ್ವಸು ಎಂಬುವರೂ–ಶರ್ಮಿಷ್ಠೆ ಯಲ್ಲಿ ದ್ರುಹ್ಯು, ಅನು ಮತ್ತು ಪೂರು ಎಂಬುವರೂ ಹುಟ್ಟಿದರು. ಯಯಾತಿಯು ಅನೇಕ ವರ್ಷಗಳ ಕಾಲ ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದು ರೂಪನಾಶಿಯಾದ, ನೋಡಲು ಮಹಾಘೋರವಾಗಿದ್ದ ವೃದ್ಧಾಪ್ಯವನ್ನು ಅಕಾಲದಲ್ಲಿ ಪಡೆಯಬೇಕಾಯಿತು. ಆ ಕಾರಣದಿಂದಲೇ ಅವನಿಗೆ ಕಾಮಪಿಪಾಸೆಯು ಕಡಿಮೆಯಾಗಿರಲಿಲ್ಲ. ಯದು, ತುರ್ವಸು, ಪೂರು, ದ್ರುಹ್ಯು, ಮತ್ತು ಅನುಗಳನ್ನು ಕರೆದು ಯಯಾತಿಯು ಹೇಳಿದನು : "ಮಕ್ಕಳಿರಾ! ನನಗೆ ವೃದ್ಧಾಪ್ಯವು ಅಕಾಲಿಕವಾಗಿ ಪ್ರಾಪ್ತವಾಗಿದೆ. ಆದರೆ ನನ್ನ ಕಾಮನೆಗಳು ಪೂರ್ಣವಾಗಿರುವುದಿಲ್ಲ. ಪುನಃ ಯುವಕನಾಗಿ ಕೆಲವು ಕಾಲ ಯುವತಿಯರೊಡನೆ ವಿಹರಿಸಿಕೊಂಡಿರಲು ಇಚ್ಛಿಸಿದ್ದೇನೆ. ಅದಕ್ಕಾಗಿ ನೀವು ನನಗೆ ಸಹಾಯಮಾಡಿರಿ."

ತಂದೆಯು ಹೇಳಿದ ಮಾತುಗಳನ್ನು ಕೇಳಿ ದೇವಯಾನಿಯ ಮಗನಾದ ಮತ್ತು ಹಿರಿಯವನಾದ ಯದುವು ಹೇಳಿದನು :

"ಅಪ್ಪ! ನಮ್ಮ ಯೌವನವನ್ನು ಪಡೆದು ನೀನೇನು ಮಾಡುವೆ?"

"ಮಕ್ಕಳಿರಾ! ನೀವು ನಿಮ್ಮ ಯೌವನವನ್ನು ನನ್ನ ವೃದ್ಧಾಪ್ಯಕ್ಕೆ

ವಿನಿಮಯರೂಪವಾಗಿ ಕೊಡಬೇಕು. ನಿಮ್ಮ ಯೌವನವನ್ನು ಪಡೆದು ನಾನು ಇನ್ನೂ ಹಲವಾರು ವರ್ಷಗಳು ವಿಷಯೋಪಭೋಗಗಳನ್ನು ಅನುಭವಿಸು ವೆನು. ನನ್ನ ಈ ಜೀವಮಾನದಲ್ಲಿ ನನಗೆ ವಿಷಯೋಪಭೋಗಗಳನ್ನು ಅನುಭವಿಸಲು ಸರಿಯಾದ ಸಮಯವೇ ಸಿಕ್ಕಿರುವುದಿಲ್ಲ. ಇದುವರೆಗೂ ನಾನು ಸುದೀರ್ಘಕಾಲದ ಯಜ್ಞಗಳಲ್ಲಿ ದೀಕ್ಷಿತನಾಗಿದ್ದುಬಿಟ್ಟೆನು. ಆ ಯಜ್ಞಗಳ ಅವಭೃಥವು ಆಯಿತೆನ್ನುವ ವೇಳೆಗೆ ಸರಿಯಾಗಿ ಮುನಿಶ್ರೇಷ್ಠರಾದ ಶುಕ್ರಾಚಾರ್ಯರ ಶಾಪಕ್ಕೆ ಗುರಿಯಾದೆನು. ಕಾಮರೂಪವಾದ ಪುರು ಷಾರ್ಥವು ನನಗೆ ಇಲ್ಲದೆಯೇ ಹೋಗಿದೆ. ಇದರಿಂದಾಗಿ ನಾನು ಪರಿತಪಿ ಸುತ್ತಿದ್ದೇನೆ. ನಿಮ್ಮಲ್ಲಿ ಯಾರಾದರೊಬ್ಬರು ತನ್ನ ಯೌವನವನ್ನು ನನ್ನ ಮುದಿತನಕ್ಕೆ ವಿನಿಮಯವಾಗಿ ಕೊಟ್ಟು ನನ್ನ ಅಖಂಡಸಾಮ್ರಾಜ್ಯವನ್ನೂ ಶಾಸನ ಮಾಡಲಿ. ನಾನು ನಿಮ್ಮಲ್ಲಿ ಒಬ್ಬನ ಯೌವನವನ್ನು ಪಡೆದು ಯುವಕನಾಗಿ ನನ್ನ ಕಾಮನೆಗಳನ್ನು ಪೂರೈಸಿಕೊಳ್ಳುವೆನು."

ಯಯಾತಿಯ ಮಾತನ್ನು ಯದುಪ್ರಭೃತಿಗಳಾದ ನಾಲ್ವರು ರಾಜಕುಮಾರರೂ ಒಪ್ಪಲಿಲ್ಲ. ಕಡೆಯವನಾದ, ಶರ್ಮಿಷ್ಠೆಯ ಮಗನಾದ, ಸತ್ಯವಿಕ್ರಮನಾದ ಪೂರುವು ತಂದೆಗೆ ಹೀಗೆ ಹೇಳಿದನು :

"ತಂದೆಯೇ! ನಾನು ನನ್ನ ಯೌವನವನ್ನು ನಿನಗೆ ಕೊಡಲು ಸಿದ್ಧ ನಾಗಿರುವೆನು. ನನ್ನ ಯೌವನವನ್ನು ಪಡೆದು ನೂತನವಾದ ಯುವಕನ ಶರೀರವನ್ನು ಹೊಂದಿ ಯಥೇಚ್ಛವಾಗಿ ವಿಹರಿಸು. ನಿನ್ನ ಆಜ್ಞಾನುಸಾರವಾಗಿ ನಿನ್ನ ವೃದ್ಧಾಪ್ಯವನ್ನು ನಾನು ಸ್ವೀಕರಿಸಿ ರಾಜ್ಯಭಾರವನ್ನು ನಿರ್ವಹಿಸುತ್ತೇನೆ."

ಜನಮೇಜಯ! ಪೂರುವಿನ ಆ ಮಾತುಗಳನ್ನು ಕೇಳಿದೊಡನೆಯೇ ಸಂತೋಷಭರಿತನಾದ ಯಯಾತಿಯು ತಪಸ್ಸಿನ ಮತ್ತು ತನ್ನ ಆತ್ಮಶಕ್ತಿಯ ಸಹಾಯದಿಂದ ಮಹಾತ್ಮನಾದ ಪೂರುವಿಗೆ ತನ್ನ ವೃದ್ಧಾಪ್ಯವನ್ನು ವಹಿಸಿ ಕೊಟ್ಟನು. ಪೂರುವಿನಿಂದ ಅವನ ಯೌವನವನ್ನು ಪಡೆದು ನವಯುವಕನಾಗಿ ಕಾಮೋಪಭೋಗಗಳಲ್ಲಿ ಆಸಕ್ತನಾದನು. ತಂದೆಯಿಂದ ವೃದ್ಧಾಪ್ಯವನ್ನು ಪಡೆದು ಪೂರುವು ರಾಜ್ಯದ ಆಡಳಿತದಲ್ಲಿ ನಿರತನಾದನು.

ಶಾರ್ದೂಲಸಮವಿಕ್ರಮನಾದ, ಅಪರಾಜಿತನಾದ ಯಯಾತಿಯು ಅನೇಕಸಹಸ್ರವರ್ಷಗಳ ಪರ್ಯಂತವಾಗಿ ದೇವಯಾನೀ-ಶರ್ಮಿಷ್ಠೆಯ

ರೊಡನೆ ವಿಹರಿಸುತ್ತಿದ್ದನು. ಚೈತ್ರರಥವನದಲ್ಲಿ ವಿಶ್ವಾಚೀ ಎಂಬ ಅಪ್ಸರೆ ಯೊಡನೆಯೂ ಅನೇಕವರ್ಷಗಳ ಪರ್ಯಂತವಾಗಿ ಕಾಮಕೇಳಿಗಳಲ್ಲಿ ನಿರತ ನಾಗಿದ್ದನು. ಅಷ್ಟು ಕಾಲದವರೆಗೆ ಯಯಾತಿಯು ಬೇರೆ ಹವ್ಯಾಸವೇ ಇಲ್ಲದೇ ಕಾಮೋಪಭೋಗಗಳಲ್ಲಿಯೇ ನಿರತನಾಗಿದ್ದರೂ ಅವನಿಗದರಲ್ಲಿ ತೃಪ್ತಿಯೆಂಬುದೇ ಉಂಟಾಗಲಿಲ್ಲ. ಅದನ್ನು ಮನಗಂಡು ರಾಜನು ಈ ಮಾತುಗಳನ್ನು ಉದ್ಘೋಷಿಸಿದನು :

**ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥೫೦॥**

"ಬೆಂಕಿಗೆ ತುಪ್ಪವನ್ನು ಸುರಿದಷ್ಟೂ ಬೆಂಕಿಯು ವೃದ್ಧಿಹೊಂದುವುದೇ ಹೊರತು ಆರಿಹೋಗುವುದಿಲ್ಲ. ಅಂತೆಯೇ ಕಾಮವೆಂಬ ಅಗ್ನಿಗೆ ಆಶಾ ಪೂರಣವೆಂಬ ತುಪ್ಪವನ್ನು ಸುರಿದಷ್ಟೂ ಕಾಮವೆಂಬ ಅಗ್ನಿಯು ಅಭಿ ವೃದ್ಧಿಯಾಗುತ್ತಿರುವುದೇ ಹೊರತು ಅದು ಸುಪ್ತವಾಗುವುದಿಲ್ಲ." (ಆಸೆ ಯೆಂಬುದು ತೊಡೆದುಹಾಕಲಾಗದ ಒಂದು ರೋಗ. ಒಂದು ಆಸೆಯನ್ನು ಪೂರ್ಣಮಾಡಿಕೊಳ್ಳಲು ಹೊರಟರೆ ಆ ಆಸೆಯು ಪೂರ್ಣವಾಗುವುದರೊಳ ಗಾಗಿ ಮತ್ತೊಂದು ಆಸೆಯು ಮೊಳಕೆಯಾಗಿರುತ್ತದೆ. ಆಸೆಗೆ ಮಿತಿಯನ್ನು ಯಾರಿಂದಲೂ ಯಾವಾಗಲೂ ಕಲ್ಪಿಸುವ ಸಾಧ್ಯತೆಯಿಲ್ಲ. ರತಿಸುಖಕ್ಕೂ ಒಂದು ಮಿತಿಯೆಂಬುದಿಲ್ಲ. ಕಾಮಾಭಿಭೂತನಾದ ಮನುಷ್ಯನಿಗೆ ಪ್ರತಿ ನಿತ್ಯವೂ ಪ್ರತಿಯೊಂದೂ ನೂತನವಾಗಿಯೇ ಕಾಣುತ್ತಿರುತ್ತದೆ. 'ನಾನು ಹಿಂದೆ ಅನುಭವಿಸಿದ್ದೆನು ; ಇದರ ಸುಖವಿಷ್ಟೇ'–ಎಂಬ ಮನೋಭಾವನೆಯು ಯಾವಾಗಲೂ ಬರುವುದಿಲ್ಲ. ಯಯಾತಿಯು ಹೇಳಿರುವ ಈ ಮಾತುಗಳು ನಿಶ್ಚಯವಾಗಿಯೂ ಸುವರ್ಣಾಕ್ಷರಗಳಲ್ಲಿ ಬರೆದಿಡತಕ್ಕವುಗಳು. 'ಆಶೆ' ಎಂಬುದೊಂದು ಪದವು ಎಲ್ಲ ವಿಧವಾದ ಕಾಮನೆಗಳನ್ನೂ ಒಳಗೊಂಡಿದೆ. ಯಾವುದೊಂದರ ಆಸೆಯಾದರೂ ಸರಿಯೇ ದಿನ-ದಿನಕ್ಕೂ ಹೆಚ್ಚುತ್ತಾ ಹೋಗುತ್ತದೆಯೇ ಹೊರತು ಕಡಿಮೆಯಾಗುವುದಿಲ್ಲ.)

ಯಯಾತಿಯು ಮುಂದುವರಿದು ಹೇಳುತ್ತಾನೆ :

**ಪೃಥಿವೀ ರತ್ನಸಮ್ಪೂರ್ಣಾ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ಸರ್ವಮಿತಿ ಮತ್ವಾ ಶಮಂ ವ್ರಜೇತ್ ॥೫೧॥**

'ಆಸೆಗೆ ಮಿತಿಯಿಲ್ಲ' ಎಂಬುದು ಎಲ್ಲ ಹಂತಗಳಲ್ಲಿಯೂ ಸತ್ಯ ವಾದುದು. ರತ್ನಗಳಿಂದ ಪರಿಪೂರ್ಣವಾದ ಅಖಂಡಭೂಮಂಡಲ, ಹಿರಣ್ಯ, ಪಶುಗಳು, ಸ್ತ್ರೀಯರು–ಇಷ್ಟನ್ನೂ ಒಪ್ಪಿಸಿದರೂ ಒಬ್ಬನಿಗೇ ಸಾಲದಾಗುತ್ತದೆ. ಇವಿಷ್ಟನ್ನು ಪಡೆದಮೇಲೂ ಅವನಿಗೆ ಸ್ವರ್ಗಲೋಕವನ್ನೂ ತನ್ನದನ್ನಾಗಿ ಮಾಡಿಕೊಳ್ಳುವ ಆಸೆಯು ಉಂಟಾಗುವುದೇ ಹೊರತು–'ಇವಿಷ್ಟೇ ನನಗೆ ಸಾಕು'–ಎಂಬ ತೃಪ್ತಿಯು ಖಂಡಿತವಾಗಿಯೂ ಉಂಟಾಗುವುದಿಲ್ಲ. ಈ ಒಂದು ಕಾರಣದಿಂದ ಆಸೆಗೆ ಮಿತಿಯಿಲ್ಲವೆಂಬುದನ್ನು ಮನಗಂಡು ಸಕಲ ವಿಧವಾದ ಸುಖೋಪಭೋಗವಸ್ತುಗಳಿಂದಲೂ ವಿರತನಾಗಬೇಕು. ಭೋಗೇಚ್ಛೆಯನ್ನು ಪೂರ್ಣವಾಗಿ ಪರಿತ್ಯಜಿಸಬೇಕು.

**ಯದಾ ನ ಕುರುತೇ ಪಾಪಂ ಸರ್ವಭೂತೇಷು ಕರ್ಹಿಚಿತ್ ।**
**ಕರ್ಮಣಾ ಮನಸಾ ವಾಚಾ ಬ್ರಹ್ಮ ಸಮ್ಪದ್ಯತೇ ತದಾ ॥೫೨॥**

ಪ್ರಪಂಚದಲ್ಲಿರುವ ಯಾವ ಪ್ರಾಣಿಗೂ ಕಾರ್ಯದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ತೊಂದರೆಯನ್ನುಂಟುಮಾಡಕೂಡದೆಂಬ ಸಂಕಲ್ಪಮಾಡಿ ಅದರಂತೆಯೇ ನಡೆದರೆ ಪರಬ್ರಹ್ಮವಸ್ತುವನ್ನು ಕಂಡುಕೊಳ್ಳ ಬಹುದು.

**ಯದಾ ಚಾಯಂ ನ ಬಿಭೇತಿ ಯದಾ ಚಾಸ್ಮಾನ್ನ ಬಿಭ್ಯತಿ ।**
**ಯದಾ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಮ್ಪದ್ಯತೇ ತದಾ ॥೫೩॥**

ಆಸೆ-ಆಕಾಂಕ್ಷೆಗಳು ಹೆಚ್ಚಿದಷ್ಟೂ ಮನುಷ್ಯನಿಗೆ ಭಯವೂ ಹೆಚ್ಚುತ್ತದೆ. ಆಸೆ-ಆಕಾಂಕ್ಷೆಗಳನ್ನು ತೊರೆದವನಿಗೆ ಯಾವ ವಿಧವಾದ ಭಯವೂ ಇರುವುದಿಲ್ಲ. ಅಂತಹ ಒಂದು ಸ್ಥಿತಿಯನ್ನು ಸಾಧಿಸಬೇಕು. ಯಾವಾಗ ಮಾನವನು ಯಾರಿಗೂ ಹೆದರುವುದಿಲ್ಲವೋ ಮತ್ತು ಅವನನ್ನು ನೋಡಿ ಯಾರೂ ಭಯಪಡುವುದಿಲ್ಲವೋ ಅರ್ಥಾತ್ ಅವನು ಸರ್ವರಿಗೂ ಪ್ರಿಯನಾಗಿರುತ್ತಾನೆಯೋ, ಪ್ರಪಂಚದಲ್ಲಿ ಅವನಿಗೆ ಬೇಕೆನ್ನುವ ವಸ್ತುವೇ ಯಾವುದೂ ಇರುವುದಿಲ್ಲವೋ, ಅವನು ಯಾವಾಗಲೂ ಯಾರೊಬ್ಬರನ್ನೂ ದ್ವೇಷಿಸುವುದಿಲ್ಲವೋ–ಆಗ ಅವನು ಬ್ರಹ್ಮನನ್ನು ಕಂಡುಕೊಳ್ಳಬಹುದು."

ಸಹಸ್ರವರ್ಷಗಳ ಅನುಭವದಿಂದ ಈ ರೀತಿಯ ನಿರ್ಧಾರಕ್ಕೆ ಬಂದ ಯಯಾತಿಯು ಕಾಮೋಪಭೋಗಗಳಲ್ಲಿ ನಿಃಸಾರತೆಯನ್ನು ಪರಿಪೂರ್ಣವಾಗಿ

ಮನಗಂಡವನಾಗಿ, ಮನಸ್ಸನ್ನು ಬುದ್ಧಿಯಲ್ಲಿ ಲೀನಗೊಳಿಸಿ, ಯೋಗಶಕ್ತಿಯಿಂದ ತನ್ನ ವೃದ್ಧಾಪ್ಯವನ್ನು ಮಗನಿಂದ ಪುನಃ ಪಡೆದನು. ಪೂರುವಿಗೆ ಅವನ ಯೌವನವನ್ನು ಕೊಟ್ಟು–ಅವನು ಕಿರಿಯವನಾದರೂ ಮೊದಲೇ ಕೊಟ್ಟಿದ್ದ ಪ್ರತಿಜ್ಞಾವಚನದಂತೆ–ಪೂರುವಿಗೇ ರಾಜ್ಯಸಿಂಹಾಸನದ ಪಟ್ಟಗಟ್ಟಿ ಕಾಮೇಚ್ಛೆಯನ್ನು ಪೂರ್ಣಮಾಡಿಕೊಳ್ಳಲಾಗದೇ ಇದ್ದ ( ಕಾಮೋಪಭೋಗವು ಸಾಕೆಂಬ ತೃಪ್ತಿಯನ್ನು ಹೊಂದದ ) ಯಯಾತಿಯು ಮಗನೊಡನೆ ಹೇಳಿದನು :

"ಮಗು! ನಿನ್ನಿಂದ ನಾನು ಪುತ್ರವಂತನೆನಿಸಿಕೊಂಡಿರುತ್ತೇನೆ. ನನಗೆ ಇತರ ನಾಲ್ವರು ಮಕ್ಕಳಿದ್ದರೂ ತಂದೆಯ ಮಾತನ್ನು ನಡೆಸದ ಅವರನ್ನು ನಾನು ಮಕ್ಕಳೆಂದು ಪರಿಗಣಿಸಲಾರೆನು. ನೀನು ನನ್ನ ವಂಶದ ಕೀರ್ತಿಗೂ, ಅಭಿವೃದ್ಧಿಗೂ ಕಾರಣನಾಗಿರುವೆ. ನಿನ್ನಿಂದಲೇ ಹೊಸದೊಂದು ವಂಶದ ಉದಯವಾಗಲೆಂದು ನಾನು ಅನುಗ್ರಹಿಸುತ್ತೇನೆ. ನಿನ್ನಿಂದ ಉದಯಿಸುವ ವಂಶವು ಪೌರವವಂಶವೆಂದೇ ಲೋಕದಲ್ಲಿ ಖ್ಯಾತವಾಗುತ್ತದೆ."

ಹೀಗೆ ಆಶೀರ್ವದಿಸಿ, ಅವನಿಗೆ ಪಟ್ಟಾಭಿಷೇಕಮಾಡಿ, ತನ್ನ ಪತ್ನಿಯರಿಂದೊಡಗೂಡಿ ಭೃಗುತುಂಗವೆಂಬ ಪರ್ವತದ ತಪ್ಪಲಿಗೆ ಹೋಗಿ, ಅಲ್ಲಿ ಅನೇಕ ಸತ್ಕರ್ಮಗಳನ್ನು ಮಾಡಿ, ಅನೇಕವರ್ಷಗಳ ಕಾಲ ಅಲ್ಲಿಯೇ ತಪಸ್ಸನ್ನು ಮಾಡಿಕೊಂಡಿದ್ದು, ಪ್ರಾಯೋಪವೇಶವ್ರತದ ಮೂಲಕವಾಗಿ ಪತ್ನಿಯರೊಡನೆ ಪಾರ್ಥಿವಶರೀರವನ್ನು ತೊರೆದು ಸ್ವರ್ಗಕ್ಕೆ ತೆರಳಿದನು."

ಲ೫ನೆಯ ಅಧ್ಯಾಯವು ಮುಗಿಯಿತು.

೭೬ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಶುಕ್ರಾಚಾರ್ಯರಲ್ಲಿ ಕಚನ ಶಿಷ್ಯವೃತ್ತಿ: ರಾಕ್ಷಸರಿಂದ ಉಪಟಳ : ಕಡೆಗೆ ಶುಕ್ರಾಚಾರ್ಯರಿಂದ ಮೃತಸಂಜೀವಿನೀವಿದ್ಯೆಯ ಉಪದೇಶ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ತಾವು ನಮ್ಮ ಪೂರ್ವಜನಾದ ಮತ್ತು

ಪ್ರಜಾಪತಿಗೆ ಹತ್ತನೆಯವನಾದ ಯಯಾತಿಯ ವಿಷಯವನ್ನು ಪ್ರಸ್ತಾಪಿಸಿದಾಗ ದೇವಯಾನೀ ಮತ್ತು ಶರ್ಮಿಷ್ಠೆಯರು ಅವನ ಭಾರ್ಯೆಯರೆಂದು ಹೇಳಿದಿರಿ. ದುರ್ಲಭಳಾದ, ಬ್ರಾಹ್ಮಣಕನ್ಯೆಯಾದ ಶುಕ್ರಪುತ್ರಿಯನ್ನು ಯಯಾತಿಯು ಹೇಗೆ ಮದುವೆಯಾದನು? ಈ ವಿಷಯವನ್ನು ನಾನು ವಿಸ್ತಾರವಾಗಿ ಕೇಳಲಿಚ್ಛಿಸಿದ್ದೇನೆ. ಈ ಕಥೆಯನ್ನು ನನಗೆ ಮೊದಲಿನಿಂದಲೂ ಹೇಳಿರಿ. ನಮ್ಮ ವಂಶಜರಾದ ರಾಜರ ಕಥೆಗಳನ್ನು ಅನುಕ್ರಮವಾಗಿ ಕೇಳುವ ಆಸೆಯಿದೆ."

"ಜನಮೇಜಯ! ನಿಮ್ಮ ವಂಶದಲ್ಲಿ ಜನಿಸಿದ ಯಯಾತಿಮಹಾರಾಜನು ದೇವರಾಜನಾದ ಇಂದ್ರನಿಗೆ ಸಮಾನನಾಗಿದ್ದನು. ಅವನ ಪಿತೃ-ಪಿತಾಮಹರಾರೆಂಬುದನ್ನು ಈ ಹಿಂದೆಯೇ ಹೇಳಿದ್ದೇನೆ. ಶುಕ್ರ-ವೃಷಪರ್ವರ ಹೆಣ್ಣುಮಕ್ಕಳು ಯಯಾತಿಯನ್ನು ಹೇಗೆ ವರಿಸಿದರು? ದೇವಯಾನಿಯೊಡನೆ ಯಯಾತಿಯ ಸಂಯೋಗವು ಹೇಗುಂಟಾಯಿತು?–ಈ ವಿಷಯಗಳನ್ನೂ ವಿವರವಾಗಿ ಹೇಳುತ್ತೇನೆ.

ಜನಮೇಜಯ! ತ್ರೈಲೋಕ್ಯದ ಮೇಲಿನ ಹತೋಟಿಯನ್ನು ಪಡೆಯುವ ಸಲುವಾಗಿ ದೇವತೆಗಳಿಗೂ-ದಾನವರಿಗೂ ಆಗಿಂದಾಗ್ಗೆ ಯುದ್ಧಗಳು ನಡೆಯುತ್ತಲೇ ಇದ್ದುವು. ಅಸುರರನ್ನು ಜಯಿಸುವ ಸಲುವಾಗಿ ದೇವತೆಗಳು ಬೃಹಸ್ಪತಿಯನ್ನು ತಮ್ಮ ಪುರೋಹಿತರನ್ನಾಗಿ ಮಾಡಿಕೊಂಡರು. ದೇವತೆಗಳನ್ನು ಜಯಿಸುವ ಸಲುವಾಗಿ ಅಸುರರು ಶುಕ್ರಾಚಾರ್ಯರನ್ನು ಪುರೋಹಿತರನ್ನಾಗಿ ಮಾಡಿಕೊಂಡರು. ಶುಕ್ರ-ಬೃಹಸ್ಪತಿಗಳಿಬ್ಬರೂ ಬ್ರಾಹ್ಮಣರೇ ಆಗಿದ್ದರು. ತಮ್ಮ-ತಮ್ಮ ತಪಶ್ಶಕ್ತಿಗಳಿಂದಲೂ ಬುದ್ಧಿ-ಸಾಮರ್ಥ್ಯಗಳಿಂದಲೂ ತಮ್ಮ ಪಕ್ಷೀಯರನ್ನು ನಿಯಂತ್ರಣಮಾಡುತ್ತಾ ಪರಸ್ಪರವಾಗಿ ಸ್ಪರ್ಧಿಸುತ್ತಿದ್ದರು.

ಬೃಹಸ್ಪತಿಯಿಂದ ನಿಯಂತ್ರಿತರಾದ ದೇವತೆಗಳು ದಾನವರನ್ನೆಲ್ಲಾ ಸಂಹಾರಮಾಡಿ ಬರುತ್ತಿದ್ದರು. ಶುಕ್ರನು ತನ್ನ ವಿದ್ಯಾಬಲದಿಂದ ಸತ್ತ ದಾನವರನ್ನು ಬದುಕಿಸಿ ದೇವತೆಗಳೊಡನೆ ಯುದ್ಧಮಾಡಲು ಅವರನ್ನು ಪುನಃ ಕಳುಹಿಸಿಕೊಡುತ್ತಿದ್ದನು. ಬೃಹಸ್ಪತಿಯು ಯದ್ಯಪಿ ಮಂತ್ರಶಾಸ್ತ್ರದಲ್ಲಿ ಮತ್ತು

ನೀತಿಶಾಸ್ತ್ರದಲ್ಲಿ ನಿಪುಣನಾಗಿದ್ದರೂ ಅವನಿಗೆ ಸತ್ತವರನ್ನು ಬದುಕಿಸುವ ಸಂಜೀವಿನೀವಿದ್ಯೆಯು ತಿಳಿದಿರಲಿಲ್ಲ. ಆದುದರಿಂದ ಯುದ್ಧದಲ್ಲಿ ಮೃತರಾಗುತ್ತಿದ್ದ ದೇವತೆಗಳನ್ನು ಬದುಕಿಸಲು ಅಸಮರ್ಥನಾಗಿದ್ದನು. ಆದರಿಂದಾಗಿ ದೇವತೆಗಳಿಗೆ ಬಹಳ ವಿಷಾದವುಂಟಾಯಿತು. ಶುಕ್ರನಲ್ಲಿದ್ದ ಸಂಜೀವಿನೀವಿದ್ಯೆಯಿಂದ ಭೀತರಾದ ದೇವತೆಗಳು ತಮ್ಮ-ತಮ್ಮಲ್ಲಿಯೇ ಸಮಾಲೋಚಿಸಿದರು. ಶುಕ್ರನಲ್ಲಿರುವ *ಸಂಜೀವಿನೀವಿದ್ಯೆಯನ್ನು ತಮ್ಮ ಕಡೆಯವರಲ್ಲಿ ಯಾರಾದರೊಬ್ಬರು ಕಲಿತು ಬರಬೇಕೆಂಬ ನಿರ್ಧಾರಕ್ಕೆ ಬಂದರು.

ಜಿತೇಂದ್ರಿಯರಾಗಿ, ಜಿತಕ್ರೋಧರಾಗಿ ಅಂತಹ ಮಹಾವಿದ್ಯೆಯನ್ನು ಶುಕ್ರನಿಂದಲೇ ಪಡೆದುಕೊಳ್ಳುವ ಸಾಮರ್ಥ್ಯವು ತಮ್ಮಲ್ಲಿ ಯಾರಿಗಿದೆಯೆಂಬುದನ್ನು ದೇವತೆಗಳು ಸ್ವಲ್ಪಕಾಲ ಯೋಚಿಸಿ, ಬೃಹಸ್ಪತಿಯ ಮಗನಾದ ಕಚನೇ ಆ ಮಹಾವಿದ್ಯೆಯನ್ನು ಕಲಿತು ಬರಲು ಸಮರ್ಥನೆಂದು ನಿರ್ಧರಿಸಿದವರಾಗಿ ಬೃಹಸ್ಪತಿಯ ಹಿರಿಯಮಗನಾದ ಕಚನ ಬಳಿಗೆ ಹೋಗಿ ಅವನನ್ನು ಕುರಿತು ಹೇಳಿದರು :

"ಬ್ರಾಹ್ಮಣೋತ್ತಮನೇ! ನಾವು ನಿನ್ನನ್ನು ಪ್ರಾರ್ಥಿಸಲು ಬಂದಿರುವೆವು. ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ ನಮಗೆ ನೀನು ಸಹಾಯ ಮಾಡಬೇಕಾಗಿದೆ. ಸತ್ತವರನ್ನು ಬದುಕಿಸುವ ಸಂಜೀವಿನೀಮಹಾವಿದ್ಯೆಯು ಅಮಿತತೇಜಸ್ವಿಯಾದ, ಬ್ರಾಹ್ಮಣೋತ್ತಮನಾದ ಶುಕ್ರನಲ್ಲಿ ಉಪಸ್ಥಿತವಾಗಿದೆ.

---

* ಸಂಜೀವಿನೀವಿದ್ಯೆಯು ರಾಸಾಯನಿಕಪದಾರ್ಥಗಳಿಂದ ಸಿದ್ಧವಾಗುವುದಾಗಿರಲಿಲ್ಲ. ಅದಕ್ಕಾಗಿ ಹೇರಳವಾದ ದ್ರವ್ಯವನ್ನು ವೆಚ್ಚಮಾಡಬೇಕಾಗಿಯೂ ಇರಲಿಲ್ಲ. ಅದೊಂದು ಮಹಾಮಂತ್ರ. ಆ ಮಹಾಮಂತ್ರದ ಉಪದೇಶವನ್ನು ಪಡೆಯಬೇಕು. ಉಪದೇಶವನ್ನು ಪಡೆಯುವವನು ಸತ್ಪಾತ್ರನಾಗಿರಬೇಕು. ಬ್ರಹ್ಮಚರ್ಯಾದಿವ್ರತಾನುಷ್ಠಾನಪರನಾಗಿರಬೇಕು. ಮೇಲಾಗಿ ಆ ವಿದ್ಯೆಯನ್ನು ಶತ್ರುಪಕ್ಷದ ಪುರೋಹಿತರಾದ ಶುಕ್ರಾಚಾರ್ಯರಲ್ಲಿಯೇ ಹೋಗಿ ಕಲಿಯಬೇಕು. ಗೂಢಚಾರನಾಗಿ ವೇಷಮರೆಯಿಸಿ ಹೋಗುವ ಸಾಧ್ಯತೆಯಿಲ್ಲ. ಹಾಗೆ ಮಾಡಿದರೆ ವಂಚಕನಾಗುತ್ತಾನೆ. ವಂಚಕನಿಗೆ ಮಹಾವಿದ್ಯೆಯು ಫಲಿಸದು. ಗುರುಶುಶ್ರೂಷೆಮಾಡಿ ಗುರುಗಳ ಪ್ರೀತಿಯನ್ನು ಸಂಪಾದಿಸಿಯೇ ಆ ಮಹಾವಿದ್ಯೆಯನ್ನು ಪಡೆಯಬೇಕು.

ನೀನು ಅವನಲ್ಲಿಗೆ ಹೋಗಿ ಆ ಮಹಾವಿದ್ಯೆಯ ಸಿದ್ಧಿಯನ್ನು ಪಡೆದು ಬರಬೇಕು. ನಮಗೆ ಈ ಉಪಕಾರವನ್ನು ನೀನು ಮಾಡಿದೆಯಾದರೆ ಯಜ್ಞ-ಯಾಗಾದಿಗಳಲ್ಲಿ ನಮ್ಮೊಡನೆ ನಿನಗೂ ಹವಿರ್ಭಾಗವು ಸಿಕ್ಕುತ್ತದೆ. ಆ ಬ್ರಾಹ್ಮಣನು ವೃಷಪರ್ವನ ರಾಜಧಾನಿಯಲ್ಲಿ ನಿನಗೆ ಸಿಕ್ಕುತ್ತಾನೆ. ಆದುದರಿಂದ ನೀನೀಗಲೇ ಹೋಗಿ ಕ್ಷಿಪ್ರವಾಗಿ ಆ ಮಹಾವಿದ್ಯೆಯನ್ನು ಸಿದ್ಧಿಮಾಡಿಕೊಂಡು ಬರುವವನಾಗು. ಶುಕ್ರನು ಯಾವಾಗಲೂ ಆ ಮಹಾವಿದ್ಯೆಯ ಮೂಲಕವಾಗಿ ದಾನವರನ್ನು ರಕ್ಷಣೆಮಾಡುತ್ತಾನೆ. ದಾನವರಲ್ಲದವರ ರಕ್ಷಣೆಯನ್ನು ಮಾಡುವುದಿಲ್ಲ. ಶುಕ್ರನನ್ನು ಶುಶ್ರೂಷೆಮಾಡಿ ಅವನ ಅನುಗ್ರಹಕ್ಕೆ



ಪಾತ್ರನಾಗಲು ನಮ್ಮ ಪಕ್ಷದಲ್ಲಿ ನೀನೊಬ್ಬನು ಮಾತ್ರವೇ ಸಮರ್ಥನಾಗಿ ರುವೆ. ನೀನಿನ್ನೂ ಪೂರ್ವವಯಸ್ಕನಾಗಿರುವೆ. ನೀನಲ್ಲಿಗೆ ಹೋಗುವ ಮೊದಲು

ಮತ್ತೊಂದು ವಿಷಯವನ್ನೂ ನಿನಗೆ ಹೇಳಬೇಕಾಗಿದೆ. ಮಹಾತ್ಮನಾದ ಶುಕ್ರನಿಗೆ ದೇವಯಾನೀ ಎಂಬ ಮಗಳೊಬ್ಬಳಿರುವಳು. ಅವಳನ್ನು ಕಂಡರೆ ಶುಕ್ರನಿಗೆ ಪಂಚಪ್ರಾಣ. ಶುಕ್ರನ ಅನುಗ್ರಹವನ್ನು ಸಂಪಾದಿಸಬೇಕಾದರೆ ನೀನು ದೇವಯಾನಿಯ ಒಲುಮೆಯನ್ನೂ ಪಡೆಯಬೇಕಾಗುವುದು. ಸೌಶೀಲ್ಯ, ಉದಾರತೆ, ಮಧುರಸ್ವಭಾವ, ಸದಾಚಾರ ಮತ್ತು ಜಿತೇಂದ್ರಿಯತೆ–ಇವುಗಳ ಮೂಲಕವಾಗಿ ನೀನು ದೇವಯಾನಿಯನ್ನು ಸಂತೃಪ್ತಿಗೊಳಿಸಬೇಕು. ಅವಳು ಸುಪ್ರೀತಳಾದರೆ ನೀನು ಶುಕ್ರಾಚಾರ್ಯನಿಂದ ಈ ವಿದ್ಯೆಯನ್ನು ಪಡೆಯುವೆ. ಇದು ನಿಶ್ಚಯ."

ತೇಜಸ್ವಿಯಾದ ಕಚನು ದೇವತೆಗಳ ಪ್ರಾರ್ಥನೆಯನ್ನು ಅಂಗೀಕರಿಸಿದನು. ದೇವತೆಗಳು ಅವನನ್ನು ಯಥೋಚಿತವಾಗಿ ಸತ್ಕರಿಸಿದನಂತರ ಕಚನು ವೃಷಪರ್ವನ ರಾಜಧಾನಿಯ ಕಡೆಗೆ ಪ್ರಯಾಣಮಾಡಿದನು. ಜನಮೇಜಯ! ಬಹುಶೀಘ್ರವಾಗಿಯೇ ಕಚನು ವೃಷಪರ್ವನ ರಾಜಧಾನಿಯನ್ನು ತಲುಪಿ ಶುಕ್ರರಿದ್ದ ಅರಮನೆಗೆ ಹೋಗಿ ಅವರನ್ನು ಕಂಡು ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಿ ಹೇಳಿದನು :

"ಪೂಜ್ಯರೇ! ನಾನು ಅಂಗಿರಸಮಹರ್ಷಿಯ ಪೌತ್ರನೂ, ಬೃಹಸ್ಪತಿಯ ಪುತ್ರನೂ ಆಗಿರುವೆನು. ಕಚನೆಂಬ ಹೆಸರಿನಿಂದ ವಿಖ್ಯಾತನಾಗಿದ್ದೇನೆ. ದಯಮಾಡಿ ತಾವು ನನ್ನನ್ನು ಶಿಷ್ಯನನ್ನಾಗಿ ಪರಿಗ್ರಹಿಸಬೇಕೆಂದು ಪ್ರಾರ್ಥಿಸುತ್ತೇನೆ. ಗುರುಗಳಾದ ತಮ್ಮ ಬಳಿಯಲ್ಲಿ ಸಹಸ್ರವರ್ಷಪರ್ಯಂತವಾಗಿ ಬ್ರಹ್ಮಚರ್ಯವ್ರತದಲ್ಲಿದ್ದು ವಿದ್ಯಾಭ್ಯಾಸವನ್ನು ಮಾಡುವ ಆಶಯದಿಂದ ಬಂದಿರುತ್ತೇನೆ. ದಯಮಾಡಿ ಅನುಗ್ರಹಿಸಿರಿ."

"ಮಗು, ಕಚ! ನಿನಗೆ ಸ್ವಾಗತವನ್ನು ಬಯಸುತ್ತೇನೆ. ನಿನ್ನ ಇಚ್ಛೆಯಂತೆ ನೀನು ನನ್ನ ಬಳಿಯಲ್ಲಿ ಶಿಷ್ಯನಾಗಿರಲು ಅನುಮತಿಸಿದ್ದೇನೆ. ನೀನು ಪುರಸ್ಕಾರಕ್ಕೆ ಅರ್ಹನೂ ಆಗಿರುವೆ. ನಿನ್ನನ್ನು ಪುರಸ್ಕರಿಸುವುದರಿಂದ ದೇವಗುರುವಾದ ಮತ್ತು ನಿನ್ನ ತಂದೆಯಾದ ಬೃಹಸ್ಪತಿಯನ್ನೇ ಪುರಸ್ಕರಿಸಿದಂತಾಗುತ್ತದೆ."*

---

* ದಾನವರಿಗೆ ದೇವತೆಗಳು ಶತ್ರುಗಳಾಗಿದ್ದರೂ–ಶುಕ್ರನಿಗೆ ಬೃಹಸ್ಪತಿಯು ಶತ್ರುವಲ್ಲ. ಶುಕ್ರನಿಗೆ ಬೃಹಸ್ಪತಿಯ ವಿಷಯದಲ್ಲಿ ಶತ್ರುತ್ವವೂ ಇಲ್ಲ : ಮಿತ್ರತ್ವವೂ ಇಲ್ಲ–ಸಮಭಾವ

ಶುಕ್ರರು ತನ್ನನ್ನು ಶಿಷ್ಯನನ್ನಾಗಿ ಅಂಗೀಕರಿಸಲು ಒಪ್ಪಿದುದಕ್ಕೆ ಕಚನು ತನ್ನ ಆನಂದವನ್ನು ವ್ಯಕ್ತಪಡಿಸಿದನು. ಗುರುಗಳ ಆದೇಶದಂತೆ ಬ್ರಹ್ಮಚರ್ಯವ್ರತ ವನ್ನು ಸ್ವೀಕರಿಸಲು ಸಿದ್ಧನಾದನು. ಗುರುಗಳ ಅಪ್ಪಣೆಯನ್ನು ಪಡೆದು ಸುಮುಹೂರ್ತದಲ್ಲಿ ಬ್ರಹ್ಮಚರ್ಯವ್ರತವನ್ನು ಯಥಾವಿಧಿಯಾಗಿ ಪರಿಗ್ರಹಿಸಿದ ನಂತರ ಗುರುಗಳಾದ ಶುಕ್ರಾಚಾರ್ಯರನ್ನೂ, ಗುರುಪುತ್ರಿಯಾದ ದೇವಯಾನಿಯನ್ನೂ ಯಥೋಚಿತವಾಗಿ ಶುಶ್ರೂಷೆಮಾಡುತ್ತಿದ್ದನು. ಗುರು ಗಳಿಗೆ ಮಾಡಬೇಕಾಗಿದ್ದ ಶುಶ್ರೂಷಾವಿಧಾನವೇ ಬೇರೆ. ದೇವಯಾನಿಗೆ ಮಾಡ ಬೇಕಾಗಿದ್ದ ಶುಶ್ರೂಷಾವಿಧಾನವೇ ಬೇರೆಯಾಗಿದ್ದಿತು. ಗುರುಗಳಿಗೆ ಸಮಿದ್ದರ್ಭೆ ಗಳನ್ನೂ, ಪುಷ್ಪ-ಫಲಗಳನ್ನೂ ತರಬೇಕಾಗಿದ್ದಿತು. ಯುವತಿಯಾದ ದೇವ ಯಾನಿಗೆ ಯುವಕನಾದ ಕಚನೊಡನೆ ವಿಹರಿಸುವ ಆಶಯವಿತ್ತು. ಆದರೂ ದೇವಯಾನಿಗೆ ಕಚನನ್ನು ಬ್ರಹ್ಮಚರ್ಯದಿಂದ ಭ್ರಷ್ಟನನ್ನಾಗಿ ಮಾಡುವ ಇಚ್ಛೆಯಿರಲಿಲ್ಲ. ಬ್ರಹ್ಮಚರ್ಯವ್ರತಕ್ಕೆ ಭಂಗವು ಬರದಂತೆ ಅವಳೂ ನಡೆದು ಕೊಳ್ಳುತ್ತಿದ್ದಳು. ಕಚನು ಗಾಯನಪಟುವೂ ಆಗಿದ್ದನು. ಕಚನು ಹಾಡುತ್ತಿದ್ದನು; ವಾದ್ಯಗಳನ್ನು ಬಾರಿಸುತ್ತಿದ್ದನು. ಕೆಲವು ಸಮಯಗಳಲ್ಲಿ ನೃತ್ಯಮಾಡುತ್ತಿದ್ದನು. ಅವಳಿಗೆ ಬೇಕಾದ ಹೂವು-ಹಣ್ಣುಗಳನ್ನೂ ತಂದುಕೊಡುತ್ತಿದ್ದನು. ದೇವ ಯಾನಿಯು ಹೇಳಿದಂತೆಯೇ ಕಚನು ನಡೆದುಕೊಳ್ಳುತ್ತಿದ್ದನು. ಕಚನ ಮನಸ್ಸಿನಲ್ಲಿ ದೇವಯಾನಿಯು ಗುರುಪುತ್ರಿಯೆಂಬ ಪೂಜ್ಯಭಾವನೆಯಿದ್ದಿತು. ದೇವಯಾನಿಯು ರಹಸ್ಯದಲ್ಲಿ ಬ್ರಹ್ಮಚರ್ಯವ್ರತನಿಷ್ಠನಾದ ಕಚನನ್ನು ಕುಳ್ಳಿರಿಸಿ ಗಾಯನ-ನೃತ್ಯಗಳಿಂದ ಅವನನ್ನು ಉಪಚರಿಸುತ್ತಿದ್ದಳು. ಅವಳ ಆಜ್ಞಾನುಸಾರ ವಾಗಿ ಆ ಎಲ್ಲ ಉಪಚಾರಗಳನ್ನೂ ಕಚನು ಪರಿಗ್ರಹಿಸಬೇಕಾಗುದ್ದಿತು. ಭಕ್ತಿ

---

ವಿರುತ್ತದೆ. ಈ ಕಾರಣದಿಂದಲೇ ಶುಕ್ರನು ಬೃಹಸ್ಪತಿಯ ಮಗನನ್ನು ಶಿಷ್ಯನನ್ನಾಗಿ ಅಂಗೀಕರಿಸಲು ಸಾಧ್ಯವಾಯಿತು. ದೇವತೆಗಳಿಗೆ ರಾಕ್ಷಸರು ಶತ್ರುಗಳಾಗಿದ್ದರಿಂದ ಕಚನನ್ನು ಶುಕ್ರನಲ್ಲಿಗೆ ಕಳುಹಿಸುವ ವಿಷಯದಲ್ಲಿ ದೇವತೆಗಳು ಬೃಹಸ್ಪತಿಯೊಡನೆ ಸಮಾಲೋಚಿಸಲಿಲ್ಲ. ಕಚನೊಡನೆ ನೇರವಾಗಿ ಮಾತನಾಡಿ ಅವನನ್ನು ಶುಕ್ರನ ಬಳಿಗೆ ಕಳುಹಿಸಿಕೊಟ್ಟರು. ಕಚನೂ ಸಹ ವಿದ್ಯಾಭ್ಯಾಸಕ್ಕಾಗಿ ಹೊರಡುವಾಗ ತಂದೆಯ ಅನುಮತಿಯನ್ನು ಕೇಳಿದನೆಂಬ ಉಲ್ಲೇಖವಿಲ್ಲ. ಇವೆಲ್ಲವೂ ದೇವರಹಸ್ಯಗಳು.

ಪರವಶರಾದವರು ಭಗವದ್ವಿಗ್ರಹವನ್ನೇ ತಮ್ಮ ಸ್ವಾಮಿಯೆಂದು ಭಾವಿಸಿ, ವಿಗ್ರಹವನ್ನೇ ಪೂಜಿಸಿ ಅದರ ಮುಂದೆ ಹಾಡಿ-ಪಾಡಿ, ನಲಿಯುವ ರೀತಿಯಲ್ಲಿ– ದೇವಯಾನಿಯೂ ಕಚನನ್ನು ಆರಾಧನೆಮಾಡುತ್ತಿದ್ದಳು. ಆ ಸಮಯದಲ್ಲಿ ಕಚನೂ ಸಹ ವಿಗ್ರಹರೂಪನಾಗಿಯೇ ಇದ್ದುಬಿಡುತ್ತಿದ್ದನು. ಜಿತೇಂದ್ರಿಯನಾದ ಕಚನಿಗೆ ದೇವಯಾನಿಯು ಮಾಡುತ್ತಿದ್ದ ಚೇಷ್ಟೆಗಳಿಂದ ಯಾವ ವಿಧವಾದ ಮನೋವಿಕಾರವೂ ಉಂಟಾಗಲಿಲ್ಲ. ಅವಳ ಮನಸ್ಸಿಗೆ ಉಲ್ಲಾಸವಾಗುವಂತೆ ವಿಗ್ರಹರೂಪದಲ್ಲಿದ್ದು ಅವಳ ಗಾಯನ-ನೃತ್ಯಗಳನ್ನು ಕೇಳುವುದೂ ಮತ್ತು ನೋಡುವುದೂ ಗುರುಪುತ್ರಿಗೆ ತಾನು ಸಲ್ಲಿಸಬೇಕಾದ ಸೇವೆಯೆಂದೇ ಭಾವಿಸುತ್ತಿದ್ದನು. ಕಚನ ವಿಷಯದಲ್ಲಿ ದೇವಯಾನಿಗೆ ಪೂರ್ಣವಾದ ಪ್ರೇಮವು ಅಂಕುರಿಸಿತ್ತಾದರೂ ಅವನು ಬ್ರಹ್ಮಚರ್ಯದಲ್ಲಿಯೇ ಇದ್ದು ನಿಯಮವ್ರತಾನುಷ್ಠಾನಗಳಿಂದ ತನ್ನ ತಂದೆಯಲ್ಲಿರುವ ವಿದ್ಯೆಯನ್ನು ಕಲಿತು ಮಹಾತ್ಮನಾಗಬೇಕೆಂಬ ಆಶಯವೂ ದೇವಯಾನಿಗೆ ಸಂಪೂರ್ಣವಾಗಿ ಇದ್ದಿತಾದ್ದರಿಂದ ವ್ರತವನ್ನು ಭಂಗಪಡಿಸಲು ಇಚ್ಛಿಸಲಿಲ್ಲ. ಕಚನು ತನ್ನ ಶುಶ್ರೂಷೆಯಿಂದಾಗಿ ಶುಕ್ರರಿಗೆ ಅಚ್ಚುಮೆಚ್ಚಿನ ಶಿಷ್ಯನಾದನು. ಹೀಗೆಯೇ ಐದುನೂರು ವರ್ಷಗಳು ಕಳೆದುವು.

ತಮ್ಮ ಪುರೋಹಿತರಾದ ಶುಕ್ರರ ಬಳಿಗೆ ಕಚನು ಬಂದಿರುವ ಉದ್ದೇಶವು ದಾನವರಿಗೂ ತಿಳಿಯಿತು. ಕಚನು ಸಂಜೀವಿನೀವಿದ್ಯೆಯನ್ನು ತಮ್ಮ ಗುರುಗಳಿಂದ ಪಡೆದುಕೊಂಡು ಹೋಗುವುದು ದಾನವರಿಗೆ ಸಹ್ಯವಾಗಲಿಲ್ಲ.

ಆದರೆ ಕಚನಿಗೆ ವಿದ್ಯೆಯನ್ನು ಉಪದೇಶಿಸಕೂಡದೆಂದು ಶುಕ್ರಾಚಾರ್ಯರಿಗೆ ಹೇಳುವ ಧೈರ್ಯವೂ ದಾನವರಿಗಿರಲಿಲ್ಲ. ಮೇಲಾಗಿ ಗುರುಗಳ ಪ್ರೇಮಪುತ್ರಿಯಾದ ದೇವಯಾನಿಯು ಕಚನ ವಿಷಯದಲ್ಲಿ ಇಟ್ಟುಕೊಂಡಿದ್ದ ಅನುರಾಗವೂ ಅವರಿಗೆ ತಿಳಿದಿತ್ತು. ಇಂತಹ ಸಂದರ್ಭದಲ್ಲಿ ಮಹಾವಿದ್ಯೆಯ ರಕ್ಷಣಾರ್ಥವಾಗಿ ಕಚನನ್ನು ಕೊಲೆಮಾಡುವುದೇ ಸೂಕ್ತವೆಂದು ದುರುಳರಾದ, ಕ್ರೂರಿಗಳಾದ ರಾಕ್ಷಸರು ನಿರ್ಧರಿಸಿದರು. ಕಚನೊಬ್ಬನೇ ಅರಣ್ಯದಲ್ಲಿ ಹಸುಗಳನ್ನು ಕಾಯುತ್ತಾ ಕುಳಿತಿದ್ದನು. ಇದೇ ಸುಸಮಯವೆಂದು ಭಾವಿಸಿದ ರಾಕ್ಷಸರು ಕಚನನ್ನು ಹಗ್ಗಗಳಿಂದ ಬಿಗಿದು ಹೊತ್ತುಕೊಂಡು ಹೋಗಿ ನಿಗೂಢವಾಗಿದ್ದ ಸ್ಥಳದಲ್ಲಿ ಅವನ ಕಟ್ಟುಗಳನ್ನು ಬಿಚ್ಚಿ, ಚೂರು-ಚೂರುಗಳಾಗಿ

ಅವನನ್ನು ಕತ್ತರಿಸಿ, ಮೂಳೆಗಳ ಸಮೇತವಾಗಿ ಅರೆದು ಅರಣ್ಯದಲ್ಲಿದ್ದ ನಾಯಿಗಳಿಗೂ ಮತ್ತು ತೋಳಗಳಿಗೂ ಆಹಾರವಾಗಿ ಹಾಕಿದರು. ಕಾಡು ಪ್ರಾಣಿಗಳು ನಿಮಿಷಮಾತ್ರದಲ್ಲಿ ಕಚನ ಮಾಂಸವನ್ನು ತಿಂದು ತೇಗಿಬಿಟ್ಟವು.

ಗೋಪಾಲನಿಲ್ಲದೆಯೇ ಹಸುಗಳು ಶುಕ್ರರ ಮನೆಗೆ ಹಿಂದಿರುಗಿದುವು. ಕಚನೊಡನೆ ಹಾಡಿ-ಕುಣಿಯಲು ತವಕಿಸುತ್ತಿದ್ದ ದೇವಯಾನಿಯು ಹಸುಗಳೊಡನೆ ಕಚನು ಬಾರದಿದ್ದುದನ್ನು ನೋಡಿ ಬಹುದುಃಖಿತಳಾಗಿ ತಂದೆಯ ಸಮೀಪಕ್ಕೆ ಹೋಗಿ ಹೇಳಿದಳು :

“ಅಪ್ಪಾ! ನೀನು ಸಾಯಂಕಾಲದ ಅಗ್ನಿಹೋತ್ರವನ್ನೂ ಮಾಡಿ ಮುಗಿಸಿಬಿಟ್ಟಿರುವೆ. ಸೂರ್ಯನೂ ಅಸ್ತಂಗತನಾಗಿ ಹೋಗಿದ್ದಾನೆ. ಗೋಪಾಲನಿಲ್ಲದೆಯೇ ಹಸುಗಳೂ ಮನೆಗೆ ಬಂದುಬಿಟ್ಟಿವೆ. ಗೋಪಾಲನು (ಕಚನು ) ಮಾತ್ರ ಇದುವರೆಗೂ ಬರಲೇ ಇಲ್ಲ. ಅವನು ಕೊಲೆಗೀಡಾಗಿರುವನು ಅಥವಾ ಸತ್ತುಹೋಗಿರುವನು. ಅವನು ವೇಳೆಗೆ ಸರಿಯಾಗಿ ಬಾರದಿರಲು ಮತ್ತಾವ ಕಾರಣವೂ ಇರುವುದಿಲ್ಲ. ಅವನು ಎಂದೂ ವೇಳೆ ಮೀರಿ ಬಂದವನೇ ಅಲ್ಲ. ಸತ್ಯವಾಗಿ ಹೇಳುವೆನಪ್ಪಾ! ಅವನನ್ನು ಬಿಟ್ಟು ನಾನು ಖಂಡಿತವಾಗಿಯೂ ಜೀವಿಸಿರುವುದಿಲ್ಲ.”

ಮಗಳಿಗೆ ಕಚನ ಮೇಲೆ ಅಪಾರವಾದ ಪ್ರೀತಿಯಿರುವುದೆಂಬ ವಿಷಯವು ಶುಕ್ರರಿಗೂ ತಿಳಿದಿತ್ತು. ಬಿಕ್ಕಿ-ಬಿಕ್ಕಿ ಅಳುತ್ತಿದ್ದ ದೇವಯಾನಿಯನ್ನು ಸಮಾಧಾನಗೊಳಿಸುತ್ತಾ ಶುಕ್ರರು ಹೇಳಿದರು : “ದುಃಖಿಸಬೇಡ ಮಗಳೇ! ‘ಏಹಿ’ ‘ಆಗಮಿಸು’–ಈ ಒಂದು ಶಬ್ದವನ್ನು ಹೇಳಿ ಸತ್ತುಹೋಗಿರುವ ಕಚನನ್ನು ಬದುಕಿಸುವೆನಮ್ಮಾ!” ಎಂಬುದಾಗಿ ಹೇಳಿ, ಆಚಮನಮಾಡಿ ಮಹಾಮಂತ್ರವನ್ನು ಪುನಶ್ಚರಣೆಮಾಡಿ ‘ಭೋಃ ಕಚ! ಏಹಿ’ ‘ಕಚನೇ! ಆಗಮಿಸು’ ಎಂದು ಉದ್ಘೋಷಿಸಿದರು. ಮರುಕ್ಷಣದಲ್ಲಿಯೇ ನಾಯಿ-ತೋಳಗಳ ಹೊಟ್ಟೆಯಲ್ಲಿ ಸೇರಿಕೊಂಡಿದ್ದ ಕಚನ ಶರೀರದ ಭಾಗಗಳು ಅವುಗಳ ಹೊಟ್ಟೆಯನ್ನು ಭೇದಿಸಿಕೊಂಡು ಹೊರಗೆ ಬಂದು ಒಂದೆಡೆಯಲ್ಲಿ ಸೇರಿದುವು. ನಿಮಿಷಮಾತ್ರದಲ್ಲಿ ಕಚನ ಶರೀರವು ಮತ್ತೆ ರಚಿತವಾಗಿ ಗುರುಗಳ ವಿದ್ಯಾಪ್ರಭಾವದಿಂದ ಅಚೇತನವಾದ ಶರೀರದಲ್ಲಿ ಪ್ರಾಣವು ಸೇರಿ

ಕೊಂಡಿತು. ಕಚನು ಬಹುಸಂತುಷ್ಟನಾಗಿ ಒಡನೆಯೇ ಮೇಲೆದ್ದು ಗುರುಗಳ ಹತ್ತಿರಕ್ಕೆ ಧಾವಿಸಿಬಂದು ಸಾಷ್ಟಾಂಗಪ್ರಣಾಮಮಾಡಿದನು.

ಕಚನನ್ನು ನೋಡಿದೊಡನೆಯೇ ದೇವಯಾನಿಯ ಮುಖವರಳಿತು.

"ಇಷ್ಟು ಹೊತ್ತೂ ಎಲ್ಲಿ ಹೋಗಿದ್ದೆ? ಕಚ!"–ಎಂದು ಕಾತುರತೆಯಿಂದ ಕೇಳಿದಳು.

"ಭಾಮಿನಿ! ಸಮಿತ್ತುಗಳನ್ನೂ, ದರ್ಭೆಯನ್ನೂ ಮತ್ತು ಸೌದೆಯನ್ನೂ ಹೊತ್ತುಕೊಂಡು ಬರುತ್ತಿದ್ದೆನು. ಮಧ್ಯಾಹ್ನದ ಬಿಸಿಲಿನ ಬೇಗೆಯನ್ನು ತಡೆಯ ಲಾಗಲಿಲ್ಲ. ವಟವೃಕ್ಷದ ನೆಳಲಿನಲ್ಲಿ ಹಸುಗಳನ್ನು ನಿಲ್ಲಿಸಿಕೊಂಡು ಶ್ರಮವನ್ನು ಪರಿಹರಿಸಿಕೊಳ್ಳುತ್ತಾ ನಿಂತಿದ್ದೆನು. ಹತ್ತಾರು ಮಂದಿ ರಾಕ್ಷಸರು ಆ ವೇಳೆಗೆ ಅಲ್ಲಿಗೆ ಬಂದು ನಾನಲ್ಲಿ ನಿಂತಿರುವುದನ್ನು ನೋಡಿ ನನ್ನನ್ನು ಕುರಿತು ನೀನಾರೆಂದು ಪ್ರಶ್ನಿಸಿದರು. ನಾನು ದೇವಗುರುವಾದ ಬೃಹಸ್ಪತಿಯ ಮಗನೆಂದು ಅವರೊಡನೆ ಹೇಳಿದೆನು. ನಾನು ಹೀಗೆ ಹೇಳುತ್ತಲೇ ನನ್ನನ್ನು ನಿರ್ಜನಪ್ರದೇಶಕ್ಕೆ ಕರೆದೊಯ್ದು ಕತ್ತರಿಸಿ ಮಾಂಸ-ರಕ್ತ-ಮೂಳೆಗಳ ಸಮೇತವಾಗಿ ನನ್ನನ್ನರೆದು, ಸುತ್ತಲೂ ಇದ್ದ ನಾಯಿಗಳಿಗೂ, ತೋಳಗಳಿಗೂ ಆಹಾರವಾಗಿ ಹಾಕಿ, ಅವುಗಳು ತಿನ್ನುವವರೆಗೂ ಕಾದಿದ್ದು ಆನಂದದಿಂದ ಕೇಕೆಹಾಕುತ್ತಾ ಹೊರಟುಹೋದರು. ಮಹಾತ್ಮರಾದ ನಿನ್ನ ತಂದೆಯವರಿಂದ ಮಂತ್ರಪೂರ್ವಕವಾಗಿ ಆಹೂತನಾದ ನಾನು ಯಥಾಪೂರ್ವಸ್ಥಿತಿಯಲ್ಲಿಯೇ ಇಲ್ಲಿಗೆ ಆಗಮಿಸಿದೆನು."

"ಹಾಗಾದರೆ ನಿಶ್ಚಯವಾಗಿಯೂ ನೀನು ಸತ್ತುಹೋಗಿದ್ದೆಯಾ, ಕಚ!,"

"ನಿಜ ಭದ್ರೇ! ಹತನಾಗಿಯೇ ಹೋಗಿದ್ದೆನು. ನಿನ್ನ ಅನುಕಂಪ ದಿಂದಲೂ ಗುರುಗಳ ವಿದ್ಯಾಮಹತ್ವದಿಂದಲೂ ಉಳಿದುಕೊಂಡೆನು."

ಜನಮೇಜಯ! ಮುಂದೆ ಹಲವಾರು ದಿನಗಳು ಕಳೆದುವು. ರಾಕ್ಷಸರ ಕೈಗೆ ಸಿಕ್ಕದಂತೆ ದೇವಯಾನಿಯೂ ಕಚನನ್ನು ಎಚ್ಚರಿಸುತ್ತಲೇ ಇದ್ದಳು. ಒಮ್ಮೆ ದೇವಯಾನಿಯು ಸಿಂಗರಿಸಿಕೊಳ್ಳಲು ಅರಣ್ಯದಿಂದ ಪುಷ್ಪಗಳನ್ನು ತರುವಂತೆ ಕಚನಿಗೆ ಹೇಳಿಕಳುಹಿಸಿದಳು. ಕಚನು ಅರಣ್ಯಕ್ಕೆ ಹೋಗಿರಲಾಗಿ ದಾನವರು

ಕಚನನ್ನು ಕಂಡರು. ಅವನನ್ನು ಕಂಡೊಡನೆಯೇ ಅವರ ಕೋಪಾಸೂಯೆಗಳು ಕೆರಳಿದುವು. ಪುನಃ ಅವನನ್ನು ದರ-ದರನೆ ಸಮುದ್ರದ ಬಳಿಗೆ ಸೆಳೆದುಕೊಂಡು ಹೋಗಿ ನುಚ್ಚುನೂರುಮಾಡಿ ಸಮುದ್ರದ ನೀರಿನಲ್ಲಿ ಕದಡಿಬಿಟ್ಟರು.

ಬಹಳ ಹೊತ್ತಿನವರೆಗೂ ಕಚನು ಬಾರದಿರಲು ದೇವಯಾನಿಯು ಬಹಳ ದುಃಖಿತಳಾಗಿ ಪುನಃ ಕಚನು ಬಾರದಿರುವ ವಾರ್ತೆಯನ್ನು ತಂದೆಗೆ ತಿಳಿಸಿದಳು. ಮಗಳಿಗೆ ಸಮಾಧಾನ ಹೇಳಿ ಪುನಃ ಸಂಜೀವಿನೀಮಂತ್ರದ ಪುನಶ್ಚರಣೆಮಾಡಿ ಶುಕ್ರರು ಕಚನನ್ನು ಆಹ್ವಾನಿಸಿದರು. ಕಚನು ಓಡುತ್ತಾ ಬಂದು ನಡೆದುದೆಲ್ಲವನ್ನೂ ಯಥಾವತ್ತಾಗಿ ದೇವಯಾನಿಗೆ ಹೇಳಿದನು.

ದಾನವರಿಗೆ ಶುಕ್ರರ ಮೇಲೆಯೇ ಛಲವುಂಟಾಯಿತು. ಛಲದಿಂದ, ಕೋಪದಿಂದ, ದ್ವೇಷದಿಂದ ಕಾರ್ಯಮಾಡುವಾಗ ಸಾಮಾನ್ಯವಾಗಿ ಮನುಷ್ಯನು ಅದರ ಪರಿಣಾಮವೇನಾಗುವುದೆಂಬುದನ್ನು ಯೋಚಿಸುವುದಿಲ್ಲ. ಇನ್ನು ದಾನವರ ಮಾತೇನು? ಕಚನು ಎರಡು ಬಾರಿ ಬದುಕಿಬಂದ ಮೇಲಾದರೂ ದಾನವರು ತಮ್ಮ ಪ್ರಯತ್ನವನ್ನು ಕೈಬಿಡಬಹುದಾಗಿತ್ತು. ದೈವೇಚ್ಛೆಯೋ ಎಂಬಂತೆ ದಾನವರು ಗುರುಗಳ ಮೇಲೆಯೇ ಛಲಸಾಧಿಸಲು ಹೊರಟರು. ಕಚನು ದೇವಯಾನಿಯ ಆಜ್ಞೆಯಂತೆ ಮತ್ತೊಮ್ಮೆ ಪುಷ್ಪಗಳ ಆಹರಣಕ್ಕಾಗಿ ಕಾಡಿಗೆ ಹೋಗಿದ್ದಾಗ ಪುನಃ ಅವನನ್ನು ಹಿಡಿದು ಸಂಹರಿಸಿ, ಸುಟ್ಟು, ಕಲ್ಲಿನ ಮೇಲೆ ನುಣುಪಾಗಿ ಅರೆದು, ಸುರೆಯಲ್ಲಿ ಬೆರೆಸಿ ಶುಕ್ರರಿಗೇ ಕುಡಿಯಲು ಕೊಟ್ಟುಬಿಟ್ಟರು.

ಎಷ್ಟು ಹೊತ್ತಾದರೂ ಕಚನು ಬಾರದಿರಲು ಪುನಃ ದೇವಯಾನಿಯು ತಂದೆಯ ಬಳಿಗೆ ಹೋಗಿ ಗೋಳಿಡುತ್ತಾ ಹೇಳಿದಳು :

"ಅಪ್ಪಾ! ಕಚನನ್ನು ನಾನು ಇಂದೂ ಹೂಗಳನ್ನು ತರಲು ಕಾಡಿಗೆ ಕಳುಹಿಸಿದ್ದೆನು. ಎಷ್ಟು ಹೊತ್ತಾದರೂ ಬರಲೇ ಇಲ್ಲ. ಇಂದೂ ಸಹ ನಿನ್ನ ಶಿಷ್ಯರು ಕಚನನ್ನು ಕೊಂದಿರಬೇಕು ಅಥವಾ ಬೇರಾವ ಕಾರಣದಿಂದಲಾದರೂ ಅವನು ಸತ್ತುಹೋಗಿರಬೇಕು. ಕಚನನ್ನು ಬಿಟ್ಟು ನಾನು ಸತ್ಯವಾಗಿಯೂ ಜೀವಿಸಲಾರೆ"—ಎಂದು ಬಿಕ್ಕಿ-ಬಿಕ್ಕಿ ಅತ್ತಳು.

ಮಗಳನ್ನು ಸಮಾಧಾನಪಡಿಸುತ್ತಾ ಶುಕ್ರರು ಹೇಳಿದರು :

"ಮಗಳೇ! ಅವನೀಗ ಸತ್ತುಹೋಗಿರುವುದು ನಿಜ. ನಾನೇನು ಮಾಡಲಿ? ದೇವಯಾನಿ! ನಾನು ಸಂಜೀವಿನೀವಿದ್ಯೆಯಿಂದ ಅವನನ್ನು ಬದುಕಿಸುತ್ತಲೇ ಇರುತ್ತೇನೆ. ರಾಕ್ಷಸರು ಅವನನ್ನು ಕೊಲ್ಲುತ್ತಲೇ ಇರುತ್ತಾರೆ. ಸತ್ತುಹೋದರೆ ಹೋಗಲಿ ಬಿಡು, ಮಗಳೇ! ಅವನಿಗಾಗಿ ನೀನೇಕಿಷ್ಟು ಕಾತುರಳಾಗುವೆ? ಅಳಬೇಡ, ದೇವಯಾನಿ! ಶೋಕಿಸಬೇಡ. ನಿನ್ನಂತಹ ವಳು ಅನುದಿನವೂ ಸಾಯುವ ಮರ್ತ್ಯನ ವಿಷಯದಲ್ಲಿ ಇಷ್ಟು ಶೋಕಿಸ ಬಾರದು. ವೇದಗಳು, ಬ್ರಾಹ್ಮಣರು, ಇಂದ್ರನೇ ಮೊದಲಾದ ದೇವತೆಗಳು, ಅಷ್ಟವಸುಗಳು, ಅಶ್ವಿನೀದೇವತೆಗಳು, ರಾಕ್ಷಸರು–ಎಲ್ಲರೂ ನನ್ನ ಪ್ರಭಾವ ದಿಂದಾಗಿ ನಿನ್ನನ್ನು ತ್ರಿಸಂಧ್ಯೆಗಳಲ್ಲಿಯೂ ಸ್ತೋತ್ರಮಾಡುತ್ತಾರೆ. ನೀನಷ್ಟು ಪ್ರಭಾವಶಾಲಿನಿಯಾಗಿರುವೆ. ಈ ಬ್ರಾಹ್ಮಣವಟುವನ್ನು ಬದುಕಿಸಲು ಕೂಡ ಇನ್ನು ಮುಂದೆ ಶಕ್ಯವಾಗುವುದಿಲ್ಲ. ಏಕೆಂದರೆ ನಾನೆಷ್ಟು ಬಾರಿ ಬದುಕಿಸಿದರೂ ರಾಕ್ಷಸರು ಅವನನ್ನು ಕೊಂದುಹಾಕುತ್ತಾರೆ. ಬದುಕಿಸುವುದರಿಂದಾಗುವ ಪ್ರಯೋಜನವಾದರೂ ಏನಿದೆ? ಸತ್ತುಹೋದರೆ ಹೋಗಲಿ. ಸುಮ್ಮ ನಿದ್ದುಬಿಡು."

ರಾಕ್ಷಸರು ಸಹವಾಸದೋಷದಿಂದ–ತಮ್ಮ ಶಿಷ್ಯನನ್ನೇ ಕೊಂದುಹಾಕಿ ದ್ದರೂ, ಪದೇ-ಪದೇ ಕೊಂದುಹಾಕುತ್ತಿದ್ದರೂ–ಶುಕ್ರರು ನಿರ್ದಯರಾಗಿ ಮಗಳೊಡನೆ ಈ ಮಾತನ್ನು ಹೇಳಿದರು. ಆದರೆ ದೇವಯಾನಿಯು ತಂದೆಯ ಮಾತನ್ನು ಕೇಳುವವಳಾಗಿರಲಿಲ್ಲ. ಕಚನ ಗುಣಾತಿಶಯಕ್ಕೂ ಮನೋಹರ ವಾದ ರೂಪಕ್ಕೂ ಮಾರುಹೋಗಿದ್ದಳು. ಕಚನೇ ತನ್ನ ಜೀವನಸರ್ವಸ್ವವೆಂದೂ ಭಾವಿಸಿಬಿಟ್ಟಿದ್ದಳು. ತಂದೆಯು ಹೇಳಿದ ಮಾತಿಗೆ ಯಥಾನುರೂಪವಾಗಿಯೇ ಉತ್ತರಿಸಿದಳು :

"ಅಪ್ಪ! ಇದೇನು ಹೀಗೆ ಹೇಳುತ್ತಿರುವಿರಿ? ಕಚನನ್ನು ಸಾಮಾನ್ಯನೆಂದು ಭಾವಿಸುವಿರಾ? ನಾನೆಂದಿಗೂ ಹಾಗೆ ಭಾವಿಸಲಾರೆ. ಅವನ ಪಿತಾಮಹನು ವಯೋವೃದ್ಧನಾದ ಅಂಗೀರಸನು. ತಂದೆಯು ತಪೋನಿಧಿಯಾದ, ದೇವಗುರುವಾದ ಬೃಹಸ್ಪತಿಯು. ಅಂಗೀರಸಮಹರ್ಷಿಯ ಪೌತ್ರನೂ, ಮಹಾ ಮಹಿಮನಾದ ಬೃಹಸ್ಪತಿಯ ಪುತ್ರನೂ ಆಗಿರುವ ಕಚನ ವಿಷಯದಲ್ಲಿ ನಾನು ಹೇಗೆ ತಾನೇ ದುಃಖಿಸದಿರಲಿ? ಮೇಲಾಗಿ, ತಾತ! ಕಚನು ಬ್ರಹ್ಮಚಾರಿಯು.

ನಮ್ಮ ಆಶ್ರಯದಲ್ಲಿರತಕ್ಕವನು. ಅವನ ಪೋಷಣೆ ಮತ್ತು ರಕ್ಷಣೆಗಳ ಭಾರವೂ ನಮ್ಮದಾಗಿರುತ್ತದೆ. ಅವನು ತಪೋಧನನು. ಯಾವಾಗಲೂ ಜಾಗರೂಕತೆಯಿಂದಿರತಕ್ಕವನು. ಕಾರ್ಯನಿರ್ವಹಣೆಯಲ್ಲಿ ದಕ್ಷನು. ನನ್ನ ಮಾತಿನಂತೆ ಮತ್ತು ನನ್ನ ಮನಸ್ಸಿನಂತೆ ನಡೆದುಕೊಳ್ಳತಕ್ಕವನು. ನನಗಂತೂ ಪರಮಪ್ರಿಯನು. ನೀವೇನಾದರೂ ಅವನನ್ನು ಬದುಕಿಸದಿದ್ದರೆ ಅವನ ಮಾರ್ಗವನ್ನೇ ಹಿಡಿದು ನಾನೂ ಹೊರಟುಹೋಗುತ್ತೇನೆ. ನಾನು ಭೋಜನ-ಪಾನೀಯಗಳನ್ನೂ ತ್ಯಜಿಸಿ ಉಪವಾಸವ್ರತದಿಂದಲೇ ಪ್ರಾಣ ತೊರೆಯುತ್ತೇನೆ."

ಶುಕ್ರರಿಗೆ ಮಗಳೆಂದರೆ ಪಂಚಪ್ರಾಣ. ಮೇಲಾಗಿ ಮಗಳು ಹೇಳಿದು ದರಲ್ಲಿ ಯಾವ ವಿಧವಾದ ದೋಷವೂ ಇರಲಿಲ್ಲ. ದೇವಯಾನಿಯು ತಂದೆ ಯನ್ನು ಬಹುವಾಗಿ ಪೀಡಿಸತೊಡಗಿದಳು. ದೇವಯಾನಿಗೆ ಶುಕ್ರರು ಮಣಿಯಲೇಬೇಕಾಯಿತು. ಕಚನನ್ನು ಮಂತ್ರಪುರಸ್ಸರವಾಗಿ ಆಹ್ವಾನಿಸಿದರು. ರಾಕ್ಷಸರ ಮೇಲೆ ಕೋಪವೂ ಬಂದಿತು. ವಿವೇಕದ ಮಾತುಗಳೂ ಶುಕ್ರರ ಬಾಯಿಂದ ಹೊರಟುವು.

"ನಿಜ! ದೇವಯಾನಿ! ನೀನು ಹೇಳುತ್ತಿರುವುದು ನಿಜ. ಬೃಹಸ್ಪತಿಯ ಮಗನ ರಕ್ಷಣೆಯ ಭಾರವು ನಮ್ಮದಾಗಿದೆ. ಈ ದುಷ್ಟದಾನವರು ನನ್ನನ್ನು ಕೂಡ ದ್ವೇಷಿಸುವರೆಂಬುದರಲ್ಲಿ ಸಂಶಯವೇ ಇಲ್ಲ. ನನ್ನ ಸಮೀಪಕ್ಕೆ ಯಾವ ಶಿಷ್ಯರೇ ಬಂದರೂ ಈ ದಾನವರು ಅವರನ್ನು ವಿನಾಶಗೊಳಿಸುತ್ತಾರೆ. ರೌದ್ರರಾದ ಈ ರಾಕ್ಷಸರು ನನ್ನನ್ನು ಬ್ರಾಹ್ಮಣ್ಯದಿಂದಲೇ ಜಾರುವಂತೆ ಮಾಡಲೂ ಯತ್ನಿಸುತ್ತಿದ್ದಾರೆ. ನನಗೆ ವಿರುದ್ಧವಾದ ಕಾರ್ಯಗಳನ್ನೇ ಮಾಡುತ್ತಿದ್ದಾರೆ. ಇಂತಹ ಪಾಪಕಾರ್ಯಗಳ ಅಂತ್ಯವಾಗಲೇಬೇಕು. ಬ್ರಹ್ಮಹತ್ಯಾಪಾಪವು ಇಂದ್ರನನ್ನೂ ದಹಿಸಿಬಿಡುತ್ತದೆ."

ದೇವಯಾನಿಯೊಡನೆ ಶುಕ್ರರು ಮಾತನಾಡುತ್ತಿದ್ದಾಗ ಅವರ ಜಠರ ದಿಂದ ಶಬ್ದವೊಂದು ಕೇಳಿಬಂದಿತು. ಚಕಿತರಾದ ಶುಕ್ರರು ಶಬ್ದವನ್ನು ಆಲಿಸಿ ಕೇಳಿದರು. 'ಗುರುದೇವ!' 'ಗುರುದೇವ!'–ಎಂಬ ಶಬ್ದವು ಕೇಳಿಬರುತ್ತಿದ್ದಿತು.

ಹೊಟ್ಟೆಯಲ್ಲಿ ಮೆಲ್ಲ-ಮೆಲ್ಲನೆ ಮಾತನಾಡುತ್ತಿರುವವನು ಕಚನೇ ಎಂಬುದನ್ನು ಸ್ಥಿರಪಡಿಸಿಕೊಂಡು ಪ್ರಶ್ನಿಸಿದರು :

"ಕಚ! ನೀನು ಯಾವ ಮಾರ್ಗವಾಗಿ ನನ್ನ ಹೊಟ್ಟೆಯೊಳಗೆ ಹೋಗಿ ಸೇರಿಕೊಂಡೆಯೆಂಬುದನ್ನು ಹೇಳು, ವಿಪ್ರ!"

ಕಚನು ಹೇಳುತ್ತಾನೆ :

**ತವ ಪ್ರಸಾದಾನ್ನ ಜಹಾತಿ ಮಾಂ ಸ್ಮೃತಿಃ**
**ಸ್ಮರಾಮಿ ಸರ್ವಂ ಯಚ್ಚ ಯಥಾ ಚ ವೃತ್ತಮ್ ।**
**ನ ತ್ವೇವಂ ಸ್ಯಾತ್ತಪಸಃ ಸಂಕ್ಷಯೋ ಮೇ**
**ತತಃ ಕ್ಲೇಶಂ ಘೋರಮಿಮಂ ಸಹಾಮಿ ॥೫೪॥**

"ಗುರುದೇವ! ನಿಮ್ಮ ಅನುಗ್ರಹದಿಂದ ನನಗೆ ವಿಸ್ಮರಣೆಯುಂಟಾಗಿರುವುದಿಲ್ಲ. ಹೇಗೆ ನಡೆಯಿತೋ ಹಾಗೆಯೇ ಎಲ್ಲ ವಿಷಯಗಳನ್ನೂ ನನ್ನ ಸ್ಮರಣೆಯಲ್ಲಿಟ್ಟುಕೊಂಡಿರುತ್ತೇನೆ. ಹೊಟ್ಟೆಯನ್ನು ಸೀಳಿ ಹೊರಗೆ ಬಂದು ಬಿಟ್ಟರೆ ಗುರುಗಳ ವಧೆಯಾಗಿ ನಾನು ಮಾಡಿದ ತಪಸ್ಸಿನ ಫಲವೆಲ್ಲವೂ ನಾಶವಾಗಿ ಬಿಡಬಹುದೆಂಬ ಭಯದಿಂದಾಗಿ ಬಹುದಾರುಣವಾದ ಕ್ಲೇಶವನ್ನು ಸಹಿಸಿಕೊಂಡು ಹೊಟ್ಟೆಯಲ್ಲಿಯೇ ಇದ್ದುಬಿಟ್ಟಿದ್ದೇನೆ.

**ಅಸುರೈಃ ಸುರಾಯಾಂ ಭವತೋಽಸ್ಮಿ ದತ್ತೋ**
**ಹತ್ವಾ ದಗ್ಧ್ವಾ ಚೂರ್ಣಯಿತ್ವಾ ಚ ಕಾವ್ಯ ।**
**ಬ್ರಾಹ್ಮೀಂ ಮಾಯಾಂ ಚಾಸುರೀಂ ವಿಪ್ರ ಮಾಯಾಂ**
**ತ್ವಯಿ ಸ್ಥಿತೇ ಕಥಮೇವಾತಿವರ್ತೇತ್ ॥೫೫॥**

ದೇವಯಾನಿಯ ಆಜ್ಞೆಯಂತೆ ಪುಷ್ಪಗಳನ್ನು ತರಲು ಕಾಡಿಗೆ ಹೋಗಿದ್ದೆನು. ಅಸುರರು ಪುನಃ ನನ್ನನ್ನು ಕತ್ತರಿಸಿ ಸುಟ್ಟು ಬೂದಿಮಾಡಿ ನಿಮಗೆ ಅರ್ಪಿಸಲಿದ್ದ ಸುರೆಯಲ್ಲಿ ಬೆರೆಸಿ ಅದನ್ನೇ ನಿಮಗೆ ಕುಡಿಯಲು ಕೊಟ್ಟರು. ಸುರೆಯ ಮೂಲಕವಾಗಿ ನಾನು ನಿಮ್ಮ ಹೊಟ್ಟೆಯನ್ನು ಸೇರಿದೆನು. ಗುರುದೇವ! ನಿಮ್ಮಲ್ಲಿರುವ ಬ್ರಾಹ್ಮೀಮಾಯೆ ಮತ್ತು ಆಸುರೀಮಾಯೆಗಳನ್ನು ಯಾರು ತಾನೇ ಮೀರಬಲ್ಲರು?"

ಶುಕ್ರರಿಗೆ ಆಗೊಂದು ಸಮಸ್ಯೆಯೊದಗಿತು. ಕಚನು ಹೊರಬರಬೇಕಾದರೆ ತಮ್ಮ ಹೊಟ್ಟೆಯನ್ನು ಸೀಳಿಯೇ ಬರಬೇಕು. ಅರ್ಥಾತ್ ತಮ್ಮ ಪ್ರಾಣವುಳಿಯದು. ಈ ವಿಷಯವನ್ನೇ ದೇವಯಾನಿಯೊಡನೆಯೂ ಹೇಳಿದರು :

**ಕಿಂ ತೇ ಪ್ರಿಯಂ ಕರವಾಣ್ಯದ್ಯ ವತ್ಸೇ**
**ವಧೇನ ಮೇ ಜೀವಿತಂ ಸ್ಯಾತ್ಕಚಸ್ಯ ।**
**ನಾನ್ಯತ್ರ ಕುಕ್ಷೇರ್ಮಮ ಭೇದನೇನ**
**ದೃಶ್ಯೇತ್ಕಚೋ ಮದ್ಗತೋ ದೇವಯಾನಿ ॥೫೭॥**

“ಮಗಳೇ! ಈಗ ನಾನೇನು ಮಾಡಲಿ? ಯಾವ ಕಾರ್ಯಮಾಡಿದರೆ ನಿನಗೆ ಪ್ರಿಯವಾಗುತ್ತದೆ? ಯೋಚಿಸಿ ಹೇಳು. ನಿನ್ನ ಪ್ರಿಯಕಚನು ಹೊರಬರಬೇಕಾದರೆ ನನ್ನ ವಧೆಯಾಗುತ್ತದೆ. ನನ್ನ ಕುಕ್ಷಿಯನ್ನು ಭೇದಿಸಿಕೊಂಡು ಬರುವ ಒಂದು ಮಾರ್ಗದ ಹೊರತಾಗಿ ಅವನು ಹೊರಬರಲು ಬೇರೆಯ ಮಾರ್ಗವನ್ನೇ ಕಾಣೆನು. ನಾನು ಏನು ಮಾಡಬೇಕೆಂಬುದನ್ನು ಶೀಘ್ರವಾಗಿ ಹೇಳು, ದೇವಯಾನಿ!”

ದೇವಯಾನಿಯು ಬಹುದುಃಖಿತೆಯಾಗಿ ಹೇಳಿದಳು :

**ದ್ವೌ ಮಾಂ ಶೋಕಾವಗ್ನಿಕಲ್ಪೌ ದಹೇತಾಂ**
**ಕಚಸ್ಯ ನಾಶಸ್ತವ ಚೈವೋಪಘಾತಃ ।**
**ಕಚಸ್ಯ ನಾಶೇ ಮಮ ನಾಸ್ತಿ ಶರ್ಮ**
**ತವೋಪಘಾತೇ ಜೀವಿತುಂ ನಾಸ್ಮಿ ಶಕ್ತಾ ॥೫೮॥**

“ಅಪ್ಪ! ಈ ಎರಡರಲ್ಲಿ ಯಾವ ಒಂದು ಆಘಾತವನ್ನೂ ನಾನು ಸಹಿಸಿಕೊಳ್ಳಲಾರೆನು. ನಿನ್ನ ವಿಯೋಗ ಅಥವಾ ಕಚನ ವಿಯೋಗ–ಈ ಎರಡೂ ನನಗೆ ಅಗ್ನಿಗೆ ಸದೃಶವಾದ ಶೋಕಗಳೇ ಆಗಿವೆ. ಈ ಎರಡರಲ್ಲಿ ಯಾವುದೊಂದನ್ನೂ ನಾನು ಸಹಿಸಿಕೊಳ್ಳಲು ಅಶಕ್ತಳಾಗಿದ್ದೇನೆ. ಕಚನ ವಿನಾಶವಾದರೆ ನನಗೆ ಶಾಂತಿಯೆಂಬುದೇ ಇಲ್ಲವಾಗುತ್ತದೆ. ನಿನಗೇನಾದರೂ ಅಪಘಾತವುಂಟಾದರೆ ನಾನು ಜೀವಿಸಿರಲೇ ಸಾಧ್ಯವಿಲ್ಲ.”–ಎಂದು ಹೇಳುತ್ತಾ ದೇವಯಾನಿಯು ಬಿಕ್ಕಿ-ಬಿಕ್ಕಿ ಅತ್ತಳು.

ಶುಕ್ರರಿಗೇನೋ ಒಂದು ಉಪಾಯವು ಹೊಳೆಯಿತು. ಅದೊಂದು ಉಪಾಯದ ಹೊರತಾಗಿ ಬೇರೆ ಯಾವ ರೀತಿಯಿಂದಲೂ ಇಬ್ಬರೂ ಪ್ರಾಣ ಸಹಿತ ಉಳಿಯುವ ಸಾಧ್ಯತೆಯೇ ಇರಲಿಲ್ಲ. ಮಗಳ ದುಃಖವನ್ನು ಶುಕ್ರರಿಗೆ ಸಹಿಸಿಕೊಳ್ಳಲಾಗಲಿಲ್ಲ. ಸುದೀರ್ಘವಾದ ನಿಟ್ಟುಸಿರುಬಿಡುತ್ತಾ ತಮ್ಮ ಜಠರ ದಲ್ಲಿದ್ದ ಕಚನಿಗೆ ಹೇಳಿದರು :

"ಬೃಹಸ್ಪತಿಯ ಪುತ್ರನೇ! ನೀನು ಬಂದ ಕಾರ್ಯದ ಸಿದ್ಧಿಯಾಯಿತು. ದೇವಯಾನಿಯು ನಿನ್ನ ವಿಷಯದಲ್ಲಿ ವಿಶೇಷವಾದ ಅನುರಾಗದಿಂದಿರುವುದೇ ಇದಕ್ಕೆ ಮುಖ್ಯಕಾರಣವಾಗಿದೆ. ಭಕ್ತನಾದ ನಿನ್ನ ವಿಷಯದಲ್ಲಿ ಅವಳು ಅನುಗ್ರಹಬುದ್ಧಿಯುಳ್ಳವಳಾಗಿದ್ದಾಳೆ. ನಿನ್ನ ವಿಯೋಗವನ್ನು ಅವಳು ಸಹಿಸ ಲಾರಳು. ಆದುದರಿಂದ ನಾನೀಗ ನಿನಗೆ ಮೃತಸಂಜೀವಿನೀವಿದ್ಯೆಯನ್ನು ಉಪ ದೇಶಿಸುವುದು ಅನಿವಾರ್ಯವೇ ಆಗಿದೆ. ಮೇಲಾಗಿ ನಾನು ಅನುಮಾನಿ ಸಿದ್ದಂತೆ ನೀನು ಕಚನ ರೂಪದಲ್ಲಿ ಬಂದಿರುವ ಇಂದ್ರನಾಗಿರದಿದ್ದರೆ ನೀನು ಈ ವಿದ್ಯೆಯನ್ನು ಹೊಂದಬಹುದು.

**ನ ನಿವರ್ತೇತ್ಪುನರ್ಜೀವನ್ಕಶ್ಚಿದನ್ಯೋ ಮಮೋದರಾತ್ ।**
**ಬ್ರಾಹ್ಮಣಂ ವರ್ಜಯಿತ್ವೈಕಂ ತಸ್ಮಾದ್ವಿದ್ಯಾಮವಾಪ್ನುಹಿ ॥೫೯॥**

ನನ್ನ ಹೊಟ್ಟೆಯಿಂದ ಜೀವಂತನಾಗಿ ಹೊರಬರಲು ಬ್ರಾಹ್ಮಣನೊಬ್ಬ ನನ್ನು ಬಿಟ್ಟು ಮತ್ತಾರಿಂದಲೂ ಸಾಧ್ಯವಾಗುವುದಿಲ್ಲ. ಆದುದರಿಂದ, ವಿಪ್ರೋತ್ತಮನೇ! ನಾನು ಈ ಮಹಾವಿದ್ಯೆಯನ್ನು ನಿನಗೆ ಉಪದೇಶಿಸುವೆನು. ಮೃತಸಂಜೀವಿನೀವಿದ್ಯೆಯನ್ನು ಕಲಿತು ನನ್ನ ಹೊಟ್ಟೆಯನ್ನು ಸೀಳಿಬರುವ ನೀನು ನನ್ನನ್ನು ತಂದೆಯೆಂದು ಭಾವಿಸುವವನಾಗು. ಗುರುವಿನಿಂದ ಈ ಮಹಾವಿದ್ಯೆಯನ್ನು ಕಲಿತು ಸವಿದ್ಯನಾಗಿ (ವಿದ್ಯಾವಂತನಾಗಿ) ನನ್ನಿಂದ ಸಂಜೀವಿತನಾಗಿ ನನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೋ, ಹೇಗೆ ನಡೆದುಕೊಳ್ಳುವುದು ಧರ್ಮವೋ–ಹಾಗೆ ನಡೆದುಕೋ."

ಜನಮೇಜಯ! ಶುಕ್ರರು ಕಚನಿಗೆ ಹೀಗೆ ಹೇಳಿ ಮೃತಸಂಜೀವಿನೀ ಮಹಾವಿದ್ಯೆಯನ್ನು ಉಪದೇಶಿಸಿದರು. ಕಚನು ಆ ಮಹಾವಿದ್ಯೆಯನ್ನು ಶುಕ್ರರ ಜಠರದಲ್ಲಿಯೇ ಕುಳಿತು ಗುರುವಿನ ಅನುಗ್ರಹದಿಂದ ನಿಮಿಷಾರ್ಧ

ದಲ್ಲಿ ಸಿದ್ಧಿಮಾಡಿಕೊಂಡು, ಶುಕ್ರರ ಹೊಟ್ಟೆಯನ್ನು ಭೇದಿಸಿಕೊಂಡು ಹೊರ ಬಂದು–ಶುಕ್ಲಪಕ್ಷದ ಕಡೆಯ ದಿನವಾದ ಪೂರ್ಣಿಮೆಯ ಚಂದ್ರನಂತೆ–ಉಜ್ಜ್ವಲವಾದ ಮುಖಕಾಂತಿಯಿಂದ ಬೆಳಗಿದನು. ಶುಕ್ರರ ಹೊಟ್ಟೆಯನ್ನು ಸೀಳಿ ಹೊರಬಂದೊಡನೆಯೇ ಭೂಮಿಯ ಮೇಲೆ ಗತಪ್ರಾಣರಾಗಿ ಬಿದ್ದಿದ್ದ ಶುಕ್ರರನ್ನೂ ತಾನು ಆಗತಾನೇ ಸಿದ್ಧಿಮಾಡಿಕೊಂಡಿದ್ದ ಮೃತಸಂಜೀವಿನೀ ಮಹಾವಿದ್ಯೆಯಿಂದ ಸಜೀವರನ್ನಾಗಿ ಮಾಡಿ ಮೇಲೆಬ್ಬಿಸಿ, ಗುರುವರೇಣ್ಯರಿಗೆ ಅಭಿವಾದನಮಾಡಿ ಕೈಜೋಡಿಸಿನಿಂತು ಹೇಳಿದನು :

"ಗುರುದೇವ! ಮೃತಸಂಜೀವಿನೀವಿದ್ಯೆಯೆಂಬ ಅಮೃತಧಾರೆಯನ್ನು ಅವಿದ್ಯಾವಂತನಾದ ನನ್ನೆರಡು ಕಿವಿಗಳಲ್ಲಿಯೂ ಸುರಿದುಬಿಟ್ಟಿರುವಿರಿ. ಪರಮಾನಂದಕರವಾದ ಅಮೃತಧಾರೆಯನ್ನು ಸುರಿಸಿದ ಮಹಾನುಭಾವರನ್ನೇ (ನಿಮ್ಮನ್ನೇ) ನಾನು ತಂದೆಯೆಂದೂ ತಾಯಿಯೆಂದೂ ಭಾವಿಸಿದ್ದೇನೆ. ಗುರುಭಗವಂತನು ಮಾಡಿದ ಈ ಮಹೋಪಕಾರವನ್ನು ಪ್ರತಿಕ್ಷಣದಲ್ಲಿಯೂ ಸ್ಮರಿಸುತ್ತಾ ಗುರುವೆಂಬ ಪ್ರಭುವಿಗೆ ಮನಸ್ಸಿನಿಂದಲೂ ದ್ರೋಹವನ್ನೆಸಗುವುದಿಲ್ಲ.

**ಋತಸ್ಯ ದಾತಾರಮನುತ್ತಮಸ್ಯ**
**ನಿಧಿಂ ನಿಧೀನಾಮಪಿ ಲಬ್ಧವಿದ್ಯಾಃ ।**
**ಯೇ ನಾದ್ರಿಯನ್ತೇ ಗುರುಮರ್ಚನೀಯಂ**
**ಪಾಪಾಲ್ಲೋಕಾಂಸ್ತೇ ವ್ರಜನ್ತ್ಯಪ್ರತಿಷ್ಠಾಃ ॥೬೪॥**

ಉತ್ತಮೋತ್ತಮವಾದ ಜ್ಞಾನವನ್ನು ದಯಪಾಲಿಸುವ, ಸಕಲವಿದ್ಯೆಗಳಿಗೂ ನಿಧಿಪ್ರಾಯನಾಗಿರುವ, ಪರಮಪೂಜ್ಯನಾದ ಗುರುವನ್ನು–ಅವನಿಂದ ವಿದ್ಯೆಗಳನ್ನು ಕಲಿತವರು–ಸರ್ವಕಾಲಗಳಲ್ಲಿಯೂ ಗೌರವಿಸಬೇಕು. ಅವ ನಿಂದ ವಿದ್ಯೆಗಳನ್ನು ಕಲಿತು ಯಾರು ಅಂತಹ ಗುರುವನ್ನು ಗೌರವಿಸುವು ದಿಲ್ಲವೋ, ಪೂಜಿಸುವುದಿಲ್ಲವೋ–ಅವರು ಇಹದಲ್ಲಿ ದುಷ್ಕೀರ್ತಿಯನ್ನು ಪಡೆದು ಅವಸಾನಾನಂತರದಲ್ಲಿ ಪಾಪಿಷ್ಠರು ಹೋಗುವ ನರಕಕ್ಕೆ ಹೋಗುತ್ತಾರೆ."

ಕಚನು ಹೀಗೆ ಹೇಳಲಾಗಿ ಶುಕ್ರರು ಕಚನನ್ನು ಬಾಚಿ ತಬ್ಬಿಕೊಂಡು

ನೆತ್ತಿಯನ್ನು ಆಘ್ರಾಣಿಸಿದರು. ಕಚನಿಗಾಗಿಯೇ ತವಕಪಡುತ್ತಿದ್ದ ದೇವಯಾನಿಯು ಅವನನ್ನು ಕರೆದುಕೊಂಡು ಹೊರಟುಹೋದಳು.

ಶುಕ್ರರು ಸುರಾಪಾನದಿಂದಾದ ಅನರ್ಥವನ್ನು ತಮ್ಮಲ್ಲಿಯೇ ಕ್ಷಣಕಾಲ ಯೋಚಿಸಿದರು. ತಾವು ಸುರಾಪಾನಮಾಡಿದ್ದರಿಂದಲೇ ಅಸುರರು ತಮ್ಮನ್ನು ವಂಚಿಸಲು ಸಾಧ್ಯವಾಯಿತೆಂದು ಶುಕ್ರರು ಮನಗಂಡರು. ಕಚನನ್ನು ಚೂರ್ಣ ಮಾಡಿ ಬೆರೆಸಿದ್ದ ಸುರೆಯನ್ನು ಕುಡಿದುದರ ಪರಿಣಾಮವಾಗಿ ಮತ್ತರಾಗಿ ಪ್ರಜ್ಞೆಯಿಲ್ಲದೇ ಬಹಳ ಹೊತ್ತಿನವರೆಗೆ ತಾವು ಬಿದ್ದಿದ್ದನ್ನು ನೆನೆದು ಪರಿತಾಪ ಪಟ್ಟರು. ಮಹಾತೇಜಸ್ವಿಯಾದ ಕಚನನ್ನು ನೋಡಿ–ಈ ಬ್ರಾಹ್ಮಣವಟುವನ್ನು ಸುರೆಯೊಡನೆ ಕುಡಿದುಬಿಟ್ಟೆನಲ್ಲಾ–ಎಂಬ ಪಶ್ಚಾತ್ತಾಪವೂ ಶುಕ್ರರಿಗುಂಟಾಯಿತು. ಸುರಾಪಾನದಿಂದ ಆಗಬಾರದುದೆಲ್ಲಾ ಆಗಿಹೋಯಿತೆಂದು ಬಹಳ ದುಃಖಪಟ್ಟರು. ತಮ್ಮ ಈ ಅನುಭವದಿಂದಾಗಿ ಸುರಾಪಾನವನ್ನೇ ಬಹಿಷ್ಕರಿಸಬೇಕೆಂದು ನಿಶ್ಚಯಿಸಿದರು.*

**ಯೋ ಬ್ರಾಹ್ಮಣೋಽದ್ಯಪ್ರಭೃತೀಹ ಕಶ್ಚಿ-**
**ನ್ಮೋಹಾತ್ಸುರಾಂ ಪಾಸ್ಯತಿ ಮನ್ದಬುದ್ಧಿಃ ।**
**ಅಪೇತಧರ್ಮಾ ಬ್ರಹ್ಮಹಾ ಚೈವ ಸ ಸ್ಯಾ-**
**ದಸ್ಮಿಲ್ಲೋಕೇ ಗರ್ಹಿತಃ ಸ್ಯಾತ್ಪರೇ ಚ ॥೬೭॥**

"ಇನ್ನು ಮುಂದೆ ಮಂದಬುದ್ಧಿಯವನಾದ ಯಾವ ಬ್ರಾಹ್ಮಣನು ಸುರಾಪಾನಮಾಡುತ್ತಾನೆಯೋ–ಅವನು ಧರ್ಮಭ್ರಷ್ಟನಾಗುತ್ತಾನೆ. ಬ್ರಾಹ್ಮಣನಾಗಿದ್ದು ಸುರಾಪಾನಮಾಡುವವನಿಗೆ ಬ್ರಹ್ಮಹತ್ಯಾದೋಷವು

---

* ಹಿಂದಿನ ಕಾಲದಲ್ಲಿ ಸಾಮಾನ್ಯವಾಗಿ ಋಷಿ-ಮಹರ್ಷಿಗಳು ವಿಧಿ-ನಿಯಮಗಳ ನಿಯಂತೃಗಳಾಗಿದ್ದರು. ಯಾವ ವಿಧವಾದ ಸ್ವಾರ್ಥವೂ ಇಲ್ಲದೇ ಶರೀರಶಾಸ್ತ್ರವನ್ನು ಪೂರ್ಣವಾಗಿ ಅಧ್ಯಯನಮಾಡಿ ಮನುಷ್ಯನು ಪೂರ್ಣನಾಗಲು ಅನುಸರಿಸಬೇಕಾದ ನಿಯಮಾವಳಿಗಳನ್ನು ಸ್ಮೃತಿ-ಧರ್ಮಶಾಸ್ತ್ರಗಳ ರೂಪದಲ್ಲಿ ಋಷಿಗಳು ಸಿದ್ಧಪಡಿಸುತ್ತಿದ್ದರು. ರಾಜನೇ ಆದಿಯಾಗಿ ಎಲ್ಲ ಪ್ರಜೆಗಳೂ ಅವನ್ನು ಅನುಷ್ಠಾನಕ್ಕೆ ತರುತ್ತಿದ್ದರು.

ಅದೇ ರೀತಿಯಾಗಿ ಶುಕ್ರರೂ ಸಹ ಸುರಾಪಾನಮಾಡಕೂಡದೆಂಬ ನಿಯಮವನ್ನು ಬ್ರಾಹ್ಮಣರ ಮೇಲೆ ವಿಧಿಸಿದರು.

ಪ್ರಾಪ್ತವಾಗುತ್ತದೆ. ಅವನು ಇಹ-ಪರಗಳೆರಡರಲ್ಲಿಯೂ ಬಹುನಿಂದ್ಯನಾಗುತ್ತಾನೆ.

ಬ್ರಾಹ್ಮಣಧರ್ಮದ ವಿಷಯವಾಗಿ ಧರ್ಮಶಾಸ್ತ್ರಗಳಲ್ಲಿ ಇದುವರೆಗೆ ಯಾವ ನಿಯಮಗಳು ಹೇಳಲ್ಪಟ್ಟಿವೆಯೋ–ಆ ನಿಯಮಗಳೊಡನೆ ನಾನಿಂದು ಮಾಡಿರುವ ಈ ನಿಯಮವೂ ಸೇರುತ್ತದೆ. ಅಖಂಡಪ್ರಪಂಚಕ್ಕೂ ಈ ನನ್ನ ನಿಯಮವು ಅನ್ವಯಿಸುತ್ತದೆ. ನಾನು ಉದ್ಘೋಷಿಸಿರುವ ಈ ನಿಯಮವನ್ನು ಸತ್ಪುರುಷರು, ಬ್ರಾಹ್ಮಣರು, ಆಚಾರ್ಯರು, ಆಚಾರ್ಯರ ಶಿಷ್ಯರು, ದೇವತೆಗಳು ಮತ್ತು ಎಲ್ಲ ಪ್ರಜೆಗಳೂ ಕೇಳಲಿ! ಅದರಂತೆ ನಡೆಯಲಿ."*

ಅಪ್ರಮೇಯರಾದ, ತಪೋನಿಧಿಗಳಲ್ಲಿ ಶ್ರೇಷ್ಠರಾದ, ಮಹಾನುಭಾವರಾದ ಶುಕ್ರರು ತಮ್ಮ ಅಪ್ರತಿಹತವಾದ ವಾಣಿಯಿಂದ ಹೀಗೆ ಉದ್ಘೋಷಿಸಿದ ನಂತರ–ದೈವದಿಂದಲೇ ಪರಿಭ್ರಮಿತವಾದ ಬುದ್ಧಿಯುಳ್ಳವರಾಗಿದ್ದ ದಾನವರನ್ನು ಕರೆಯಿಸಿ ಹೇಳಿದರು :

"ನೀವು ಮೂರ್ಖರು. ನೀವು ಮಾಡಿದ ಅನಾಚಾರದ ಕಾರಣದಿಂದಾಗಿ ಕಚನಿಂದು ವಿದ್ಯಾಸಿದ್ಧಿಯನ್ನು ಪಡೆದನು. ನಿಮಗಿಂತಹ ದುಷ್ಟ ಬುದ್ಧಿಯು ಬರಲೂ ಸಹ ದೈವವೇ ಕಾರಣವಿರಬಹುದು. ಹಾಗಿರದಿದ್ದರೆ ಮಾಡಬಾರದ ಕಾರ್ಯವನ್ನೆಂದಿಗೂ ನೀವು ಮಾಡುತ್ತಿರಲಿಲ್ಲ. ಅದರ ಪ್ರತಿಫಲವನ್ನಾದರೂ ಈಗ ಕಾಣಿರಿ. ಕಚನನ್ನು ವಿನಾಶಮಾಡಿಬಿಡಬೇಕೆಂಬ ಹವಣಿಕೆಯು ನಿಮ್ಮದಾಗಿತ್ತು. ಅದಕ್ಕಾಗಿ ನೀವು ಬಹುಕುತ್ಸಿತವಾದ ಕಾರ್ಯವನ್ನು ಮಾಡಿದಿರಿ. ಅದರ ಪರಿಣಾಮವಾಗಿ ಅವನಿಗೆ ಮೃತಸಂಜೀವಿನೀವಿದ್ಯೆಯು ಬಹಳ ಬೇಗ ಸಿದ್ಧಿಸುವಂತಾಯಿತು. ಅವನಿಂದು ನನಗೆ ಸಮಾನನೆನಿಸಿದ್ದಾನೆ. ಆ ಬ್ರಾಹ್ಮಣನಿಂದು ಸಾಕ್ಷಾತ್ ಬ್ರಹ್ಮನೇ ಆಗಿದ್ದಾನೆ. ಇನ್ನಾದರೂ ನೀವು ಈ

---

* ಋಷಿ-ಮಹರ್ಷಿಗಳು ಮಾಡುತ್ತಿದ್ದ ಧರ್ಮಮೂಲವಾದ ವಿಧಿ-ನಿಯಮಗಳಿಗೆ ರಾಜರೂ ಬದ್ಧರಾಗಿದ್ದರು. ಅದಕ್ಕಿಂತಲೂ ಹೆಚ್ಚಾಗಿ ಪ್ರಜೆಗಳೂ ಸಹ ಒತ್ತಾಯವಿಲ್ಲದೇ ಋಷಿಪ್ರಣೀತವಾದ ಮಾರ್ಗದಲ್ಲಿ ನಡೆದುಕೊಳ್ಳುತ್ತಿದ್ದರು. ಶುಕ್ರರು ಎಂದೋ ಮಾಡಿದ್ದ ಈ ನಿಯಮವನ್ನು ಇಂದೂ ಬ್ರಾಹ್ಮಣರು ಅಧಿಕಸಂಖ್ಯೆಯಲ್ಲಿ ಪರಿಪಾಲಿಸಿಕೊಂಡು ಬರುತ್ತಿದ್ದಾರೆ. ಸುರಾಪಾನವು ಬಹಳ ಪಾಪವೆಂದು ಭಾವಿಸಿದ್ದಾರೆ.

ವಿಧವಾದ ಕುತ್ಸಿತಕಾರ್ಯವನ್ನು ಮಾಡಬೇಡಿರಿ"–ಎಂದು ಎಚ್ಚರಿಸಿ ಅವ ರನ್ನು ಕಳುಹಿಸಿಕೊಟ್ಟರು. ದಾನವರೂ ಸಹ ಬಹುವಿಸ್ಮಿತರಾಗಿ ತಾವು ಮಾಡಿದ ಅಕಾರ್ಯಕ್ಕೆ ಪಶ್ಚಾತ್ತಾಪಪಡುತ್ತಾ ತಮ್ಮ-ತಮ್ಮ ಮನೆಗಳನ್ನು ಸೇರಿದರು.

ಸಂಕಲ್ಪಿಸಿದ್ದ ಒಂದು ಸಾವಿರ ವರ್ಷದ ಬ್ರಹ್ಮಚರ್ಯೆಯಲ್ಲಿ ಐದು ನೂರು ವರ್ಷಗಳ ಅವಧಿಯಲ್ಲಿಯೇ ಕಚನಿಗೆ ವಿದ್ಯೆಯ ಸಿದ್ಧಿಯಾಯಿ ತಾದರೂ ಸಂಕಲ್ಪಿಸಿದ್ದ ಸಾವಿರ ವರ್ಷಗಳ ಬ್ರಹ್ಮಚರ್ಯೆಯನ್ನು ಮುಗಿಸದೇ ಕಚನು ದೇವಲೋಕಕ್ಕೆ ಹಿಂದಿರುಗಲಿಲ್ಲ. ಗುರುವಿನ ಅಂತೇವಾಸಿತ್ವದಲ್ಲಿ ಸಾವಿರ ವರ್ಷಗಳು ಕಳೆದನಂತರ ಕಚನು ಗುರುಗಳ ಅನುಜ್ಞೆಯನ್ನು ಪಡೆದು ಸ್ವರ್ಗಲೋಕಕ್ಕೆ ಹೊರಡಲು ಸಿದ್ಧನಾದನು."

ಎ೬ನೆಯ ಅಧ್ಯಾಯವು ಮುಗಿಯಿತು.

೭೭ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಕಚನನ್ನು ವರಿಸಲು ದೇವಯಾನಿಯ ಅನುರೋಧ : ಕಚನ ಅಸಮ್ಮತಿ : ಪರಸ್ಪರ ಶಾಪಪ್ರದಾನ

"ಜನಮೇಜಯ! ದೇವಯಾನಿಯು ಕಚನಲ್ಲಿ ಹೆಚ್ಚು ಅನುರಾಗ ವುಳ್ಳವಳಾಗಿದ್ದಳೆಂಬುದನ್ನು ಹಿಂದೆಯೇ ಹೇಳಿರುವೆನಲ್ಲವೇ? ಸಾವಿರ ವರ್ಷ ಗಳ ಬ್ರಹ್ಮಚರ್ಯವ್ರತವು ಪೂರ್ಣವಾಗಲು ಕಚನು ಗುರುಗಳ ಅನುಜ್ಞೆಯನ್ನು ಪಡೆದು ದೇವಲೋಕಕ್ಕೆ ಹೊರಡಲನುವಾದನು. ದೇವಲೋಕಕ್ಕೆ ಹೊರಟಿದ್ದ ಕಚನನ್ನು ಕುರಿತು ದೇವಯಾನಿಯು ಹೇಳಿದಳು :

"ಅಂಗೀರಸಮಹರ್ಷಿಯ ಪೌತ್ರನೇ! ಚಾರಿತ್ರ್ಯದಿಂದಲೂ, ಉತ್ತಮ ವಾದ ಕುಲದಲ್ಲಿ ಜನ್ಮತಾಳಿರುವುದರಿಂದಲೂ, ನಿನಗೆ ಪ್ರಾಪ್ತವಾಗಿರುವ ವಿದ್ಯೆ ಯಿಂದಲೂ, ತಪಸ್ಸಿನಿಂದಲೂ ಮತ್ತು ಜಿತೇಂದ್ರಿಯತೆಯಿಂದಲೂ ನೀನಿಂದು ಪ್ರಜ್ವಲಿಸುವ ಸೂರ್ಯನಂತೆಯೇ ಪ್ರಕಾಶಮಾನನಾಗಿ ಕಾಣುತ್ತಿ ರುವೆ. ಅಂಗೀರಸಮಹರ್ಷಿಯು ನನ್ನ ತಂದೆಗೆ ಮಾನ್ಯನಾಗಿರುವಂತೆ ನನಗೆ ನಿನ್ನ ತಂದೆಯು ಮಾನ್ಯನಾಗಿರುತ್ತಾನೆ. ಇದನ್ನೇ ಮನಸ್ಸಿನಲ್ಲಿಟ್ಟುಕೊಂಡು

ನಾನು ಹೇಳಲಿರುವ ಈ ಮಾತನ್ನು ಕೇಳು. ತಪೋಧನನೇ! ನೀನು ವ್ರತಸ್ಥ ನಾಗಿದ್ದಾಗ, ನಿಯಮಾನುಷ್ಠಾನಪರನಾಗಿದ್ದಾಗ–ನಾನು ನಿನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಿದ್ದೆನೆಂಬುದನ್ನೂ ಸ್ಮರಿಸು. ನೀನು ನನ್ನ ತಂದೆಯ ಬಳಿಗೆ ಬಂದ ಕಾರ್ಯವು ಪೂರ್ಣವಾಗಿದೆ. ಮೃತಸಂಜೀವಿನೀವಿದ್ಯೆಯನ್ನು ಸಿದ್ಧಿಮಾಡಿಕೊಂಡಿರುವೆ. ಮೊದಲೇ ಸಂಕಲ್ಪಿತವಾಗಿದ್ದ ಸಹಸ್ರವರ್ಷ ಪರ್ಯಂತವಾದ ಬ್ರಹ್ಮಚರ್ಯೆಯನ್ನೂ ಮುಗಿಸಿರುವೆ. ಇದುವರೆಗೆ ನಾನು ರಹಸ್ಯದಲ್ಲಿ ಭಕ್ತಿಯಿಂದ ನಿನ್ನನ್ನು ಆರಾಧಿಸುತ್ತಿದ್ದೆನು. ಆದುದರಿಂದ ನೀನೀಗ ವಿಧಿವತ್ತಾಗಿ ಮಂತ್ರಪುರಃಸರವಾಗಿ ನನ್ನ ಪಾಣಿಗ್ರಹಣಮಾಡಿಕೊಂಡು ನಿನ್ನೊಡನೆಯೇ ನನ್ನನ್ನೂ ದೇವಲೋಕಕ್ಕೆ ಕರೆದುಕೊಂಡು ಹೋಗು. ನಾನು ನಿನ್ನನ್ನು ಖಂಡಿತವಾಗಿಯೂ ಬಿಟ್ಟಿರಲಾರೆನು."

ಕಚನು ಹೇಳುತ್ತಾನೆ :

"ಅನಿಂದಿತವಾದ ಶರೀರಲಾವಣ್ಯವುಳ್ಳವಳೇ! ದೇವಯಾನಿ! ನೀನು ಹೀಗೆ ಹೇಳಬೇಡ. ನೀನು ನನಗೆ ಪರಮಪೂಜ್ಯಳಾಗಿರುವೆ. ನಿನ್ನ ತಂದೆ ಯವರು ಹೇಗೆ ನನಗೆ ಮಾನ್ಯರೂ, ಪೂಜ್ಯರೂ ಆಗಿರುವರೋ–ಅಂತೆಯೇ ನೀನೂ ಸಹ ನನಗೆ ಮಾನ್ಯಳೂ, ಪೂಜ್ಯಳೂ ಆಗಿರುವೆ. ಮೇಲಾಗಿ ನೀನು ಧರ್ಮತಃ ನನಗೆ ಪೂಜ್ಯಳಾಗಿರುವೆ. ನನ್ನ ಗುರುಗಳು ಹೇಗೆ ನನಗೆ ಸರ್ವದಾ ಮಾನ್ಯರಾಗಿರುವರೋ ಅಂತೆಯೇ ನೀನೂ ಸಹ ನನಗೆ ಸರ್ವದಾ ಮಾನ್ಯ ಳಾಗಿರುವೆ. ಆದುದರಿಂದ ನೀನು ಈ ವಿಧವಾದ ಮಾತುಗಳನ್ನಾಡಬೇಡ."

"ದ್ವಿಜೋತ್ತಮನೇ! ಮಾನ್ಯರಾರೆಂಬುದನ್ನು ಪರಿ-ಪರಿಯಾಗಿ ಹೇಳಲು ಪ್ರಯತ್ನಿಸಬೇಡ. ನನ್ನ ತಂದೆಯ ಗುರು ಅಂಗೀರಸ. ಅವರ ಮೊಮ್ಮ ಗನು ನೀನು. ಈ ದೃಷ್ಟಿಯಿಂದ ನೀನೂ ಸಹ ನನಗೆ ಮಾನ್ಯನಲ್ಲವೇ? ಪೂಜ್ಯ ನಲ್ಲವೇ? ನಾನು ನಿನ್ನ ಮೇಲಿನ ಅನುರಾಗದ ಕಾರಣದಿಂದಾಗಿ ಮಾಡಿದ ಉಪಕಾರವನ್ನಾದರೂ ಸ್ಮರಿಸು, ಗುರುಪುತ್ರ! ನಿನ್ನನ್ನು ಅಸುರರು ಪದೇ ಪದೇ ಕೊಂದುಹಾಕುತ್ತಿದ್ದರು. ಆ ಸಮಯದಲ್ಲಿ ನಾನು ನಿನ್ನ ಮೇಲಿನ ಪ್ರೇಮದ ಕಾರಣದಿಂದ ಎಷ್ಟು ತವಕಿಸುತ್ತಿದ್ದೆನು? ನನ್ನ ತಂದೆಯವರ ಬಳಿ ಎಷ್ಟೊಂದು ಗೋಳಿಡುತ್ತಿದ್ದೆನು? ನಿನ್ನನ್ನು ಪುನಃ ಜೀವಂತನನ್ನಾಗಿ ಮಾಡಲು

ನನ್ನ ತಂದೆಯವರ ಮುಂದೆ ಕಣ್ಣೀರಿನ ಕಾಲುವೆಯನ್ನೇ ಹರಿಸುತ್ತಿದ್ದೆನು. ಕಚ! ನೀನು ಜೀವಂತನಾಗಿ ಬಂದೊಡನೆಯೇ ನನ್ನ ಹೃದಯಕಮಲವು ಅರಳುತ್ತಿದ್ದಿತು. ನನ್ನ ಹೃದಯಕಮಲದಲ್ಲಿ ಕುಳಿತಿರುವ ಸ್ವಾಮಿಯು ಎದುರಿಗೆ ಬಂದನಲ್ಲಾ–ಎಂದು ಆನಂದಬಾಷ್ಪಗಳನ್ನೇ ಸುರಿಸುತ್ತಿದ್ದೆನು. ಇದಾವುದೂ ನಿನಗೆ ತಿಳಿಯದ ವಿಷಯಗಳಾಗಿರುವುದಿಲ್ಲ. ನನ್ನ ಸೌಹಾರ್ದ ಮತ್ತು ಅನುರಾಗ, ನಾನು ನಿನ್ನಲ್ಲಿಟ್ಟಿದ್ದ ಅನುಪಮವಾದ ಭಕ್ತಿ–ಎಲ್ಲವೂ ನಿನಗೆ ತಿಳಿದಿರುವುದಲ್ಲವೇ? ದ್ವಿಜೋತ್ತಮ! ನಿನ್ನಲ್ಲಿಯೇ ಅನುರಕ್ತಳಾಗಿರುವ, ನಿರಪರಾಧಿನಿಯಾದ ನನ್ನನ್ನು ತ್ಯಜಿಸಿಹೋಗುವುದು ನಿನಗೆ ಖಂಡಿತ ವಾಗಿಯೂ ಯುಕ್ತವಲ್ಲ."

"ಶುಭವ್ರತಳೇ! ಮಾಡಬಾರದ ಅಧರ್ಮದ ಕಾರ್ಯಕ್ಕೆ ನನ್ನನ್ನು ನಿಯೋಜಿಸುತ್ತಿರುವೆ. ಪ್ರಸನ್ನಳಾಗು, ದೇವಿ! ನನ್ನನ್ನು ಇಂತಹ ಧರ್ಮ ಸಂಕಟಕ್ಕೆ ಸಿಕ್ಕಿಸಬೇಡ. ನಿಶ್ಚಯವಾಗಿಯೂ ನೀನೇ ನನಗೆ ಜನ್ಮದಾತಳು. ಗುರುಗಳಿಗಿಂತಲೂ ಹೆಚ್ಚು ಮಾನ್ಯಳಾಗಿರುವೆ. ಮತ್ತೊಂದು ವಿಷಯವನ್ನೂ ಹೇಳುವೆನು ; ಕೇಳು. ಇದರಿಂದಲಾದರೂ ನಿನಗೆ ನನ್ನನ್ನು ಈ ಅಧರ್ಮ ಕಾರ್ಯಕ್ಕೆ ಪ್ರಚೋದಿಸಬಾರದೆಂಬ ಮನಸ್ಸುಂಟಾಗಬಹುದು. ನಾವಿಬ್ಬರೂ ಭಗವಾನ್ ಶುಕ್ರರ ಹೊಟ್ಟೆಯಿಂದಲೇ ಬಂದವರಲ್ಲವೇ? ಶುಕ್ರರೂ ಸಹ ಇದೇ ವಿಷಯವಾಗಿ ನನ್ನನ್ನು ಕುರಿತು ಹೇಳಿದ ಮಾತುಗಳು ನಿನ್ನ ಜ್ಞಾಪಕದಲ್ಲಿಲ್ಲವೇ? ಅವರ ಹೊಟ್ಟೆಯಲ್ಲಿದ್ದಾಗ ನನಗೆ ಗುರುಗಳು ಹೀಗೆಂದು ಹೇಳಿದ್ದರು :

**ಪುತ್ರೋ ಭೂತ್ವಾ ಭಾವಯ ಭಾವಿತೋ ಮಾ-**
**ಮಸ್ಮದ್ದೇಹಾದುಪನಿಷ್ಕ್ರಮ್ಯ ತಾತ ।**
**ಸಮೀಕ್ಷೇಥಾ ಧರ್ಮವತೀಮವೇಕ್ಷಾಂ**
**ಗುರೋಃ ಸಕಾಶಾತ್ಪ್ರಾಪ್ಯ ವಿದ್ಯಾಂ ಸವಿದ್ಯಃ ॥೬೦॥**

ಅಧ್ಯಾಯ ೭೬

'ತಾತ! ನನ್ನ ಶರೀರದಿಂದ ಹೊರಬಂದ ನೀನು ನನ್ನ ಪುತ್ರನಾಗಿ ಈಗ ನಾನು ಉಪದೇಶಿಸಲಿರುವ ಮೃತಸಂಜೀವಿನೀವಿದ್ಯೆಯಿಂದ ನನ್ನನ್ನು

ಬದುಕಿಸಬೇಕು. ಈ ವಿದ್ಯೆಯನ್ನು ಕಲಿತು ನೀನು ವಿದ್ವಾಂಸನಾದರೂ ನನ್ನನ್ನು ನೀನು ಧರ್ಮದ ದೃಷ್ಟಿಯಿಂದ ಕಾಣಬೇಕು' – ಎಂದು ಹೇಳಿ ಬಹುಸ್ಪಷ್ಟವಾಗಿ ನನ್ನನ್ನು ಶುಕ್ರರು ಪುತ್ರನೆಂದೇ ಕರೆದಿರುತ್ತಾರೆ. ಈ ಎರಡು ಕಾರಣಗಳಿಂದಲೂ, ಧರ್ಮದ ದೃಷ್ಟಿಯಿಂದಲೂ ನೀನು ನನಗೆ ಪ್ರೀತಿಪಾತ್ರಳಾದ ಸನ್ಮಾನ್ಯಳಾದ ಭಗಿನಿಯಾಗಿರುವೆ. ನಾನೂ ಸಹ ಹಾಗೆಯೇ ಭಾವಿಸಿದ್ದೇನೆ. ನಾನು ಇದುವರೆಗೂ ನಿನ್ನೊಡನೆ ಬಹಳ ಸುಖದಿಂದಲೇ ಕಾಲಕಳೆದೆನು. ಈ ಕಾರಣದಿಂದಲೇ ನೀನು ಅಧರ್ಮಯುಕ್ತವಾದ ಮಾತುಗಳನ್ನಾಡಿದರೂ ನಾನು ನಿನ್ನೊಡನೆ ಕೋಪಿಸಿಕೊಳ್ಳುತ್ತಿಲ್ಲ. ನಾನು ಹೊರಡಲು ಅನುಜ್ಞೆಯನ್ನು ಬೇಡುತ್ತಿರುವೆನು. 'ಶಿ ವಾಸ್ತೇ ಪನ್ಥಾನಃ ಸನ್ತು' ಎಂದು ಆಶೀರ್ವದಿಸು. ಧರ್ಮಕ್ಕೆ ಚ್ಯುತಿಯುಂಟಾಗದ ರೀತಿಯಲ್ಲಿ ಮುಂದೆ ಬರಬಹುದಾದ ಪ್ರಸಂಗಗಳಲ್ಲಿ ನನ್ನನ್ನು ಸ್ಮರಿಸು. (ನಾನವನನ್ನು ಪ್ರೀತಿಸಿದ್ದೇನೆಂದಾಗಲೀ, ಅವನು ನನ್ನನ್ನು ಮದುವೆಯಾಗದೇ ಹೊರಟುಹೋದನೆಂದಾಗಲೀ, ನನ್ನನ್ನು ಸ್ಮರಿಸಬೇಡ. ಹೀಗೆ ಮನಸ್ಸಿನಲ್ಲಿ ಮಾಡಿಕೊಳ್ಳುವುದೂ ಸಹ ಧರ್ಮಕ್ಕೆ ವಿರೋಧವಾಗುತ್ತದೆ. 'ನಾವಿಬ್ಬರೂ ಒಡಹುಟ್ಟಿದವರಲ್ಲದಿದ್ದರೂ ಒಡಹುಟ್ಟಿದವರಂತೆಯೇ ಇದ್ದುಬಿಟ್ಟೆವು. ಪ್ರಸಂಗವಶಾತ್ ಅವನು ನಮ್ಮ ತಂದೆಯ ಹೊಟ್ಟೆಯಲ್ಲಿಯೂ ಹುಟ್ಟಬೇಕಾಯಿತು.' ಹೀಗೆ ಸ್ಮರಿಸಿದರೆ ಇದು ಧರ್ಮಕ್ಕೆ ವಿರೋಧವಾಗುವುದಿಲ್ಲ.) ಅಪ್ರಮತ್ತಳಾಗಿ ಜಾಗರೂಕತೆಯಿಂದಿರುತ್ತಾ ನನ್ನ ಪರಮಗುರುಗಳ ಶುಶ್ರೂಷೆಯನ್ನು ಮಾಡುತ್ತಿರು, ದೇವಯಾನಿ!"

ಕಚನನ್ನೇ ಪೂರ್ಣವಾಗಿ ಪ್ರೇಮಿಸಿದ್ದ ದೇವಯಾನಿಗೆ ಕಚನು ಮಾಡಿದ ಧರ್ಮೋಪದೇಶವು ಸಹ್ಯವಾಗಲಿಲ್ಲ. ಕಾಮಕ್ಕೆ ಉಂಟಾದ ಪ್ರತಿಬಂಧವು ಕ್ರೋಧದಲ್ಲಿ ಪರ್ಯವಸಾನಹೊಂದಿತು. ಕುಪಿತಳಾದ ದೇವಯಾನಿಯು ಕಚನನ್ನು ಕುರಿತು ಗಂಭೀರವಾದ ಧ್ವನಿಯಿಂದ ಹೇಳಿದಳು :

"ಕಚ! ಧರ್ಮಾರ್ಥ-ಕಾಮಗಳ ಪ್ರಾಪ್ತಿಗಾಗಿ ನಿನ್ನನ್ನು ನಾನು ನನ್ನ ಪತಿಯಾಗುವಂತೆ ಯಾಚನೆಮಾಡುತ್ತಿದ್ದೇನೆ. ಸಲ್ಲದ ಕಾರಣಗಳನ್ನು ಮುಂದೊಡ್ಡಿ ನನ್ನ ಪ್ರಾರ್ಥನೆಗೆ ಪ್ರತಿಯಾಗಿ ನೀನು ನಡೆದುಕೊಳ್ಳುವೆ

ಯಾದರೆ ನೀನು ನನ್ನ ತಂದೆಯ ಬಳಿಯಲ್ಲಿ ನನ್ನ ಸಹಾಯದಿಂದ ಕಲಿತಿರುವ ವಿದ್ಯೆಯು ನಿನಗೆ ಸಿದ್ಧಿಸಲಾರದು."

"ದೇವಯಾನಿ! 'ನೀನು ಗುರುಪುತ್ರಿಯು ; ಪರಮಪೂಜ್ಯಳು' ಎಂಬ ಕಾರಣದಿಂದಾಗಿ ಧರ್ಮಕ್ಕೆ ವಿರೋಧವಾಗಿರುವ ನಿನ್ನ ಮಾತುಗಳಿಗೆ ಪ್ರತಿಯಾಗಿ ನಾನು ಮಾತನಾಡುತ್ತಿರುವೆನು. ನಿನ್ನಲ್ಲಿ ಯಾವುದಾದರೂ ದೋಷವಿರುವುದೆಂಬ ಕಾರಣದಿಂದ ನಾನು ನಿನ್ನನ್ನು ಮದುವೆಯಾಗು ವುದಿಲ್ಲವೆಂದು ಹೇಳುತ್ತಿಲ್ಲ. ಗುರುಪುತ್ರೀ, ಗುರುಗಳ ಭಾರ್ಯೆ, ಗುರುಗಳ ಅಕ್ಕ-ತಂಗಿಯರು–ಇವರೆಲ್ಲರನ್ನೂ ಗೌರವಿಸಬೇಕೆಂದು ಹಿರಿಯರು ಹೇಳು ತ್ತಾರೆ. ಮೇಲಾಗಿ ಗುರುಗಳೂ ಸಹ ನಿನ್ನನ್ನು ಮದುವೆಯಾಗುವ ವಿಷಯದಲ್ಲಿ ನನ್ನೊಡನೆ ಯಾವುದೊಂದು ಮಾತನ್ನೂ ಹೇಳಿರುವುದಿಲ್ಲ. ಅವರು ನನಗೆ ಈ ವಿಷಯದಲ್ಲಿ ಅನುಜ್ಞೆಯನ್ನೂ ನೀಡಿಲ್ಲ ; ಆಜ್ಞೆಯನ್ನೂ ಮಾಡಿರುವುದಿಲ್ಲ. (ಅವರು ಧರ್ಮಾತ್ಮರಾದುದರಿಂದ ನನ್ನ-ನಿನ್ನ ಸಂಬಂಧವು ಹೇಗಿರ ಬೇಕೆಂಬುದು ಅವರಿಗೆ ತಿಳಿದಿರುವುದು.) ಹಾಗೂ ನೀನು ಶಾಪಕೊಡುವು ದಾದರೆ ಕೊಟ್ಟುಬಿಡು."

ಕುಪಿತಳಾದ ದೇವಯಾನಿಯು–'ನನ್ನ ತಂದೆಯಿಂದ ಕಲಿತ ಮೃತ ಸಂಜೀವಿನೀವಿದ್ಯೆಯು ನಿನಗೆ ಸಿದ್ಧಿಯಾಗದಿರಲಿ'–ಎಂದು ಕಚನಿಗೆ ಶಾಪ ವನ್ನು ಕೊಟ್ಟೇಬಿಟ್ಟಳು.

ಸ್ವಲ್ಪ ಖಿನ್ನನಾದ ಕಚನು ದೇವಯಾನಿಗೆ ಹೇಳಿದನು :

"ದೇವಯಾನಿ! ಗುರುಪುತ್ರಿಯನ್ನು ಮದುವೆಮಾಡಿಕೊಳ್ಳಬಹುದೇ? 'ಹಿಂದಿನಿಂದಲೂ ನಮ್ಮ ಪದ್ಧತಿಯು ಹೇಗೆ ನಡೆದು ಬಂದಿದೆ? ಧರ್ಮವೇನು ಹೇಳುತ್ತದೆ?' ಈ ಎಲ್ಲ ವಿಷಯಗಳನ್ನೂ ನಿನ್ನೊಡನೆ ಹೇಳಿದೆನು. ನಾನು ನಿನ್ನ ಸೋದರನೆಂಬುದನ್ನೂ ನಿಮ್ಮ ತಂದೆಯವರ ಮಾತನ್ನೇ ಉಲ್ಲೇಖಿಸಿ ಹೇಳಿದೆನು. ನಿನ್ನ ಶಾಪಕ್ಕೆ ನಾನು ಖಂಡಿತವಾಗಿಯೂ ಗುರಿ ಯಾಗಬಾರದಾಗಿತ್ತು. ಆದರೂ ಕಾಮವಶಳಾದ ನೀನು ನನಗೆ ಶಾಪವನ್ನಿ ತ್ತಿರುವೆ. ಧರ್ಮದ ಕಾರಣದಿಂದ ನೀನು ನನಗೆ ಶಾಪವಿತ್ತಿರುವುದಿಲ್ಲ. ಯಾವ ಉದ್ದೇಶದಿಂದ ನೀನು ನನಗೆ ಶಾಪವನ್ನಿತ್ತೆಯೋ ಆ ಉದ್ದೇಶವು ( ಆ

ಕಾಮನೆಯು ) ಪೂರ್ಣವಾಗಿ ಫಲಿಸಲಾರದು. ಈ ನಿನ್ನ ಕಾಮುಕತೆಯಿಂದಾಗಿ ಯಾವ ಋಷಿಪುತ್ರನೂ ನಿನ್ನ ಪಾಣಿಯನ್ನು ಪರಿಗ್ರಹಿಸುವುದಿಲ್ಲ. ನನಗೆ ಶಾಪ ಕೊಡುವಾಗ ನಿನ್ನ ಮನಸ್ಸಿನಲ್ಲಿದ್ದ ಆಶಯವೂ ಪೂರ್ಣವಾಗಿ ಫಲಿಸದಿರುವುದು ಹೇಗೆಂಬುದನ್ನು ಹೇಳುವೆನು ಕೇಳು : ನಿನ್ನ ಮಾತಿನಂತೆ ಅಥವಾ ಶಾಪದಂತೆ ನಾನಿಲ್ಲಿ ಕಲಿತಿರುವ ವಿದ್ಯೆಯು ನನಗೆ ಸಿದ್ಧಿಸಲಾರದೆಂಬುದರಲ್ಲಿ ಸಂದೇಹವೇ ಇಲ್ಲ. ನಿನ್ನ ಶಾಪವು ಫಲಿಸಿಯೇ ಫಲಿಸುವುದು. ಇಷ್ಟು ಮಾತ್ರದಿಂದ ಕಲಿತ ವಿದ್ಯೆಗೆ ಪ್ರಯೋಜನವಾಗಲಾರದೆಂದು ಭಾವಿಸಬೇಡ. ನನಗೀ ವಿದ್ಯೆಯು ಫಲಿಸದಿದ್ದರೂ ನಾನು ಯಾರಿಗೆ ಈ ವಿದ್ಯೆಯನ್ನು ಉಪದೇಶಿಸುವೆನೋ ಅವರಿಗೆ ಈ ಮೃತಸಂಜೀವಿನೀವಿದ್ಯೆಯು ಫಲಿಸಿಯೇ ಫಲಿಸುವುದು. ನಾನಿನ್ನು ಹೋಗಿಬರುವೆನು, ದೇವಯಾನಿ!"–ಎಂದು ಹೇಳಿ ದ್ವಿಜಸತ್ತಮನಾದ ಕಚನು ಸ್ವರ್ಗಲೋಕಕ್ಕೆ ಪ್ರಯಾಣಮಾಡಿದನು.

ಕಚನು ದೇವಲೋಕಕ್ಕೆ ಆಗಮಿಸಿದ ಶುಭವಾರ್ತೆಯನ್ನು ಕೇಳಿ ಆನಂದಭರಿತರಾದ ಇಂದ್ರಪ್ರಮುಖರಾದ ದೇವತೆಗಳು ಬೃಹಸ್ಪತಿಯನ್ನು ಪೂಜಿಸಿ ತಂದೆಯಾದ ಬೃಹಸ್ಪತಿಯ ಸೇವೆಯಲ್ಲಿ ನಿರತನಾಗಿದ್ದ ಕಚನನ್ನು ಕಂಡು ಹೇಳಿದರು :

"ಕಚ! ನೀನು ನಮ್ಮ ಹಿತವನ್ನು ಸಾಧಿಸುವ ಸಲುವಾಗಿ ಅತ್ಯುದ್ಭುತ ವಾದ ವಿದ್ಯೆಯನ್ನು ಸಾಧಿಸಿರುವೆ. ನಿನ್ನ ಯಶಸ್ಸಿಗೆ ಯಾವಾಗಲೂ ಕುಂದುಂಟಾಗುವುದಿಲ್ಲ. ನಾವು ಹಿಂದೆಯೇ ಹೇಳಿದ್ದಂತೆ ನೀನು ಯಜ್ಞಗಳ ಹವಿಸ್ಸುಗಳಲ್ಲಿ ನಮ್ಮೊಡನೆ ಸಹಭಾಗಿಯಾಗುವೆ."

೭೭ನೆಯ ಅಧ್ಯಾಯವು ಮುಗಿಯಿತು.

೭೮ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದೇವಯಾನೀ-ಶರ್ಮಿಷ್ಠೆಯರ ಕಲಹ : ಬಾವಿಯಲ್ಲಿ ಬಿದ್ದಿದ್ದ ದೇವಯಾನಿಯನ್ನು ಯಯಾತಿಯು ಮೇಲಕ್ಕೆ ತಂದುದು : ಶುಕ್ರಾಚಾರ್ಯರೊಡನೆ ದೇವಯಾನಿಯ ಸಂಭಾಷಣೆ

"ಜನಮೇಜಯ! ಕಚನು ಮೃತಸಂಜೀವಿನೀವಿದ್ಯೆಯನ್ನು ಸಿದ್ಧಿಮಾಡಿ ಕೊಂಡು ಬಂದನೆಂಬ ವಾರ್ತೆಯನ್ನು ಕೇಳಿ ದೇವತೆಗಳ ಆನಂದಕ್ಕೆ ಪಾರವೇ

ಇಲ್ಲದಂತಾಯಿತು. ದೇವಯಾನಿಯಿತ್ತ ಶಾಪವು ದೇವತೆಗಳಿಗೆ ತಿಳಿದರೂ ಅವರು ಖಿನ್ನರಾಗಲಿಲ್ಲ. ಕಚನು ದೇವಯಾನಿಯೊಡನೆ ಹೇಳಿದ್ದಂತೆಯೇ ಮಹಾವಿದ್ಯೆಯನ್ನು ಶಿಷ್ಯರಿಗೆ ಉಪದೇಶಿಸಿದನು. ಅವರಿಗೆ ಆ ಮಹಾಮಂತ್ರದ ಸಿದ್ಧಿಯಾಯಿತು. ದೇವತೆಗಳು ಅಮಿತೋತ್ಸಾಹಗೊಂಡರು. ಸತ್ತವರನ್ನು ಬದುಕಿಸುವ ವಿದ್ಯೆಯು ತಿಳಿದಮೇಲೆ ಅವರಿಗೆ ಯುದ್ಧದ ಭಯವೆಲ್ಲಿಯದು? ದೇವತೆಗಳೆಲ್ಲರೂ ಶತಕ್ರತುವಿನ ಸಮೀಪಕ್ಕೆ ಬಂದು ಹೇಳಿದರು : "ಪುರಂದರ! ಜೈತ್ರಯಾತ್ರೆ ಹೊರಡಲು ಇದು ನಿನಗೆ ಸಕಾಲವಾಗಿದೆ. ಈಗಲೇ ನೀನು ದಾನವರ ಮೇಲೆ ಯುದ್ಧಕ್ಕೆ ಹೊರಟು ಅವರುಗಳನ್ನು ಪರಾಜಯ ಗೊಳಿಸುವವನಾಗು."

ಹಾಗೆಯೇ ಆಗಲೆಂದು ಹೇಳಿದ ಇಂದ್ರನು ದೇವಸೇನೆಯೊಡನೆ ಯುದ್ಧಸನ್ನದ್ಧನಾಗಿ ಹೊರಟನು. ಪ್ರಯಾಣಮಾಡುತ್ತಿರುವ ಕಾಲದಲ್ಲಿ ಸುಮನೋಹರವಾದ ಒಂದು ಉದ್ಯಾನವನವನ್ನು ಕಂಡನು. ಉದ್ಯಾನವನದ ಮಧ್ಯದಲ್ಲಿ ಸುಂದರವಾದೊಂದು ಸರೋವರವಿದ್ದಿತು. ಹತ್ತಾರು ಪ್ರಮದೆ ಯರು ಆ ಸರೋವರದಲ್ಲಿ ಜಲಕ್ರೀಡೆಯಾಡುತ್ತಿದ್ದರು. ಅವರನ್ನು ನೋಡಿದ ಇಂದ್ರನು ಕುಚೋದ್ಯಕ್ಕಾಗಿ ವಾಯುವಿನ ರೂಪವನ್ನು ತಾಳಿ ಸರೋವರದ ದಂಡೆಯ ಮೇಲಿದ್ದ ಪ್ರಮದೆಯರ ವಸ್ತ್ರಗಳನ್ನು ಚೆಲ್ಲಾಪಿಲ್ಲಿಯಾಗಿ ಮಾಡಿ ತನ್ನ ಪಾಡಿಗೆ ಹೊರಟುಹೋದನು.

ಕೆಲವು ಸಮಯಗಳಲ್ಲಿ ವಿನೋದಕ್ಕಾಗಿ ಮಾಡುವ ಕಾರ್ಯವು ವಿರಸ ದಲ್ಲಿ ಪರ್ಯವಸಾನವನ್ನು ಹೊಂದುತ್ತದೆ. ಜಲಕ್ರೀಡೆಯನ್ನು ಮುಗಿಸಿ ಸರೋವರದ ದಂಡೆಯ ಮೇಲಕ್ಕೆ ಬಂದ ಪ್ರಮದೆಯರು ಸ್ತ್ರೀಸಹಜವಾದ ನಾಚಿಕೆಯಿಂದಾಗಿ ಯಾರದ್ದು ಯಾವ ಸೀರೆಯೆಂಬುದನ್ನು ವಿವೇಚಿಸಲು ಸಾಧ್ಯವಾಗದೇ ಕೈಗೆ ಸಿಕ್ಕಿದ ಸೀರೆಗಳನ್ನು ಅವಸರ-ಅವಸರವಾಗಿ ಉಟ್ಟು ಕೊಂಡರು.

ಆ ಸಮಯದಲ್ಲಿ ವೃಷಪರ್ವನ ಮಗಳಾದ ಶರ್ಮಿಷ್ಠೆಯು ಸೀರೆಗಳು ಅದಲು-ಬದಲಾಗಿವೆಯೆಂಬುದನ್ನು ತಿಳಿಯದೇ ದೇವಯಾನಿಯ ಸೀರೆ ಯನ್ನು ಉಟ್ಟುಕೊಂಡುಬಿಟ್ಟಳು.

ದೇವಯಾನೀ-ಶರ್ಮಿಷ್ಠೆಯರು ಗೆಳತಿಯರಂತೆ ಕೊಳದಲ್ಲಿ ಜಲ

ಕ್ರೀಡೆಯಾಡುತ್ತಿದ್ದರಾದರೂ–ವಸ್ತ್ರಗಳ ಪಲ್ಲಟವು ಅವರಿಬ್ಬರ ವಿರಸದಲ್ಲಿ ಪರ್ಯವಸಾನಹೊಂದಿತು. ಎಂದರೆ ಅದಕ್ಕೆ ಸ್ವಲ್ಪವಾದರೂ ಕಾರಣವಿರದಿರ ಲಿಲ್ಲ. ಅವರು ಜೊತೆಯಲ್ಲಿ ಸೇರಿ ಜಲಕ್ರೀಡೆಯಾಡುತ್ತಿದ್ದರೂ ಅವರಿಬ್ಬರಿಗೂ ಸ್ವಲ್ಪ ಅಂತರವಿದ್ದಿತು. ದೇವಯಾನಿಯು ಗುರುಪುತ್ರಿಯು; ಶರ್ಮಿಷ್ಠೆಯು ರಾಜಪುತ್ರಿಯು. ಅವರಿಬ್ಬರಲ್ಲೇ ನಾನು ಹೆಚ್ಚು-ತಾನು ಹೆಚ್ಚೆಂಬ ದುರಭಿಮಾನವು ತಾತ್ಕಾಲಿಕವಾಗಿ ಮೂಡಿತು. ಅದೇ ಅವರ ವಿರಸಕ್ಕೆ ಮುಖ್ಯಕಾರಣವಾಯಿತು.

ಶರ್ಮಿಷ್ಠೆಯು ತನ್ನ ಸೀರೆಯನ್ನುಟ್ಟಿದ್ದನ್ನು ಕಂಡು ಕುಪಿತಳಾದ ದೇವಯಾನಿಯು ಅವಳನ್ನು ಕುರಿತು ಹೇಳಿದಳು : “ಆಚಾರ-ವ್ಯವಹಾರ ಗಳನ್ನು ಕಿಂಚಿತ್ತಾದರೂ ತಿಳಿಯದಿರುವ ಅಸುರಪುತ್ರಿಯೇ! ನನ್ನ ಸೀರೆಯನ್ನೇಕೆ ನೀನುಟ್ಟುಕೊಂಡೆ? ನೀನು ನನ್ನ ( ನನ್ನ ತಂದೆಯ ) ಶಿಷ್ಯಳೆಂಬುದನ್ನು ಮರೆತೆಯಾ? ಇದರಿಂದ ನಿನಗೆ ಖಂಡಿತವಾಗಿಯೂ ಒಳ್ಳೆಯದಾಗು ವುದಿಲ್ಲ.”

ದೇವಯಾನಿಯ ಆ ಮಾತುಗಳನ್ನು ಶರ್ಮಿಷ್ಠೆಯು ಸಹಿಸಿಕೊಳ್ಳಲಿಲ್ಲ. ಅಸುರಭಾವಕ್ಕೆ ಅನುರೂಪವಾಗಿಯೇ ಉತ್ತರಕೊಟ್ಟಳು :

“ಬಾಯಿಮುಚ್ಚು ಸಾಕು! ನಿಮ್ಮಪ್ಪನ ಯೋಗ್ಯತೆಯನ್ನು ಕಂಡಿದ್ದೇನೆ. ನಮ್ಮಪ್ಪನು ಮಲಗಿರಲಿ ; ಕುಳಿತಿರಲಿ–ಕೈಕಟ್ಟಿಕೊಂಡು ಕೆಳಗಡೆ ನಿಂತು ವಂದಿ-ಮಾಗಧರಂತೆ ಸ್ತೋತ್ರಮಾಡುವ ನಿನ್ನಪ್ಪನು ನನಗೆ ತಿಳಿಯದವನೇ! ಭಿಕ್ಷುಕನ, ಮೇಲಾಗಿ ಹೊಗಳುಭಟ್ಟನ ಮಗಳು ನೀನು! ನನ್ನೊಡನೆ ಸಮಾನತೆಯನ್ನು ಹೇಳಿಕೊಳ್ಳಲು ಯತ್ನಿಸುವೆಯಾ? ಹೊಗಳಿಸಿಕೊಳ್ಳುವವನ ಮಗಳು ನಾನು. ಇಷ್ಟು ಮಾತ್ರವಲ್ಲ ; ನಿನ್ನಪ್ಪನಂತಹ ಹೊಗಳುಭಟ್ಟರಿಗೆ ದಾನಮಾಡುವ ಮತ್ತು ಬೇರೆಯವರಿಂದ ಏನನ್ನೂ ಪ್ರತಿಗ್ರಹಮಾಡದಿರುವ ರಾಜನ ಮಗಳು ನಾನೆಂಬುದನ್ನು ಮರೆಯಬೇಡ. ಯಾಚಕಿಯಾದ ನೀನು ನನ್ನ ಮೇಲೆ ಕೋಪಿಸಿಕೊಂಡು ನನ್ನನ್ನೇನು ತಾನೇ ಮಾಡಬಲ್ಲೆ? ನನ್ನನ್ನೇನು ಮಾಡಲೂ ನಿನಗೆ ಸಾಧ್ಯವಾಗದು. ಕುಪಿತಳಾದ ನೀನು ನಿನ್ನೆದೆಯನ್ನೇ ಕುಟ್ಟಿಕೊಂಡು ಸಾಯಬಹುದು. ಅಥವಾ ನೆಲದ ಮೇಲೆ ಬಿದ್ದು ಹೊರಳಾಡ ಬಹುದು. ಆಗಲಾದರೂ ನಿನ್ನ ಕೋಪವು ಸ್ವಲ್ಪ ಶಾಂತವಾಗಬಹುದು. ನನ್ನ ಬಳಿ ಕತ್ತಿಯಿದೆ. ನಿರಾಯುಧಳಾದ ನೀನು ನನ್ನನ್ನೇನೂ ಮಾಡಲಾರೆ.

ದರಿದ್ರಳಾದ ನಿನಗೆ ಕೋಪಬರುವುದು ಸ್ವಾಭಾವಿಕವಾಗಿಯೇ ಇದೆ. ಬಡವರ ಕೋಪವು ದವಡೆಗೆ ಮೂಲವೆಂಬುದನ್ನು ಮರೆಯಬೇಡ. ಇಲ್ಲ-ಸಲ್ಲದ ಕಾರಣಗಳನ್ನು ಎತ್ತಿಕೊಂಡು ನನ್ನೊಡನೆ ಜಗಳವಾಡಲು ನೀನು ಹವಣಿಸಿರಬಹುದು. ನನ್ನೊಡನೆ ನೀನು ಜಗಳವಾಡಲು ಕೂಡ ಅಸಮಾನಳು. ಭಿಕ್ಷುಕಿಯೊಡನೆ ಜಗಳವಾಡುವುದೇನಿದೆ? ಮನಬಂದಂತೆ ಕೂಗಿಕೊಳ್ಳಲೆಂದು ಉಪೇಕ್ಷೆಮಾಡುವುದೇ ಸೂಕ್ತವಾಗಿದೆ."

ಜನಮೇಜಯ! ಶರ್ಮಿಷ್ಠೆಯ ಕರ್ಣಕಠೋರವಾದ ಆ ಮಾತುಗಳನ್ನು



ಕೇಳಿ ದೇವಯಾನಿಯು ಸುಮ್ಮನಿರಲಿಲ್ಲ. ಶರ್ಮಿಷ್ಠೆಯುಟ್ಟಿದ್ದ ತನ್ನ ಸೀರೆಯನ್ನು ಕಿತ್ತುಕೊಳ್ಳುವ ಸಲುವಾಗಿ ಅವಳನ್ನು ಅತ್ತಲಿತ್ತ ಎಳೆದಾಡಿದಳು.

ಶರ್ಮಿಷ್ಠೆಯೂ ದೇವಯಾನಿಯನ್ನು ದರ-ದರನೆ ಎಳೆದುಕೊಂಡು ಹೋಗಿ ಹತ್ತಿರದಲ್ಲಿಯೇ ಇದ್ದ ಬಾವಿಗೆ ತಳ್ಳಿಬಿಟ್ಟಳು. ಅವಳು ಸತ್ತೇಹೋಗಿರುವಳೆಂದು ಭಾವಿಸಿ ಹಿಂದಿರುಗಿಯೂ ನೋಡದೇ ದಾಸಿಯರೊಡನೆ ಅರಮನೆಗೆ ಹೊರಟುಹೋದಳು.

ರಾಜಕುಮಾರಿಯು ಹೊರಟುಹೋದ ಸ್ವಲ್ಪ ಹೊತ್ತಿನಲ್ಲಿಯೇ ಅದೇ ಮಾರ್ಗವಾಗಿ ಯಯಾತಿಯು ಹೋಗುತ್ತಿದ್ದು, ಬೇಟೆಯಾಡಿದ ಆಯಾಸ ದಿಂದ ನೀರು ಕುಡಿಯುವ ಸಲುವಾಗಿ ರಥವನ್ನು ನಿಲ್ಲಿಸಿದನು. ಅವನ ಕುದುರೆಗಳೂ ಬಹಳವಾಗಿ ಬಳಲಿದ್ದುವು. ಯಯಾತಿಯು ನೀರನ್ನು ಹುಡು ಕುತ್ತಾ ಹೋಗಿ ದೇವಯಾನಿಯು ಬಿದ್ದಿದ್ದ ಬಾವಿಯ ಸಮೀಪಕ್ಕೇ ಬಂದನು. ಬಾವಿಯೊಳಗೆ ಬಗ್ಗಿ ನೋಡಲಾಗಿ ಅಮರರೂಪಿಣಿಯಾದ, ಯಜ್ಞೇಶ್ವರನ ಜ್ವಾಲೆಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ನಾರೀಮಣಿಯನ್ನು ಆ ಬಾವಿಯಲ್ಲಿ ಕಂಡನು. ಬಾವಿಯಲ್ಲಿ ಬಿದ್ದಿರುವವರನ್ನು ಕಂಡರೆ ಎಂತಹವರಿ ಗಾದರೂ ಅನುಕಂಪವು ಹುಟ್ಟುವುದಲ್ಲವೇ? ಬಾವಿಯೊಳಗೆ ಬಿದ್ದಿದ್ದ ಭಾಮಿನಿಯನ್ನು ಬಹಳ ಮೃದುವಾದ ಧ್ವನಿಯಿಂದ ಸಂತೈಸುತ್ತಾ ರಾಜನು ಪ್ರಶ್ನಿಸಿದನು : "ಕರ್ಣಕುಂಡಲಗಳನ್ನು ಧರಿಸಿರುವ ಶ್ಯಾಮಲವರ್ಣದವಳಾದ ನೀನು ಯಾರು? ನಿನ್ನ ಕುಲ-ಗೋತ್ರಗಳೇನು? ಜೀವನದಲ್ಲೇನಾದರೂ ಜುಗುಪ್ಸೆಯುಂಟಾಯಿತೇ? ಬಹಳ ಯೋಚನಾಪರಳಾಗಿರುವಂತೆಯೂ, ಬಹಳ ದುಃಖಿತಳಾಗಿರುವಂತೆಯೂ ಕಾಣುತ್ತಿರುವೆ. ಲಾಮಂಚದ ಗಿಡ ಗಳಿಂದಲೂ, ಲತೆಗಳಿಂದಲೂ, ಹುಲ್ಲಿನಿಂದಲೂ ಆವೃತವಾಗಿರುವ ಈ ಬಾವಿಯಲ್ಲಿ ಬೀಳಲು ಕಾರಣವೇನು? ನೀನು ಯಾರ ಮಗಳು? ಕಲ್ಯಾಣಿ! ಎಲ್ಲ ವಿಷಯಗಳನ್ನೂ ಸತ್ಯವಾಗಿ ಹೇಳು."

ಶರ್ಮಿಷ್ಠೆಯು ಆಗತಾನೇ ಹೇಳಿದ್ದ ಮಾತುಗಳು ದೇವಯಾನಿಯ ಹೃದಯದಲ್ಲಿ ಶೂಲಪ್ರಾಯವಾಗಿ ನಾಟಿಕೊಂಡಿದ್ದುವು. ಆದರೂ ತನ್ನ ದುಃಖವನ್ನು ತಾನೇ ನುಂಗಿಕೊಳ್ಳುತ್ತಾ ಯಯಾತಿಗೆ ಹೇಳಿದಳು :

"ದೇವತೆಗಳಿಂದ ಹತರಾದ ರಾಕ್ಷಸರನ್ನು ತನ್ನಲ್ಲಿರುವ ಅಮೋಘ ವಾದ ಮೃತಸಂಜೀವಿನೀವಿದ್ಯೆಯಿಂದ ಯಾರು ಬದುಕಿಸುವರೋ–ಅಂತಹ

ಮಹಾನುಭಾವರಾದ ಶುಕ್ರರ ಮಗಳು ನಾನು. ನಾನು ಬಾವಿಗೆ ಬಿದ್ದಿರು ವುದನ್ನು ನನ್ನ ತಂದೆಯು ತಿಳಿದಿಲ್ಲ. ಕೆಂಪಾದ ಉಗುರುಗಳುಳ್ಳ ಬೆರಳುಗಳಿಂದ ಕೂಡಿರುವ ಈ ಬಲಗೈಯನ್ನು ಮೇಲೆತ್ತಿರುವೆನು. ಇದನ್ನು ಹಿಡಿದು ನನ್ನನ್ನು ಮೇಲಕ್ಕೆ ಎಳೆದುಕೋ. ಈ ನನ್ನ ಕೈಹಿಡಿದು ಮೇಲೆತ್ತಲು ನೀನು ಅರ್ಹನಾಗಿರುವೆ. ನೀನು ಕುಲೀನ (ಸತ್ಕುಲಪ್ರಸೂತ)ನೆಂದು ನಾನು ಭಾವಿಸಿದ್ದೇನೆ. ನೀನು ಶಾಂತಸ್ವಭಾವದವನೆಂದೂ, ವೀರ್ಯವಂತನೆಂದೂ, ಯಶೋವಂತನೆಂದೂ ತಿಳಿದಿದ್ದೇನೆ. ಆದುದರಿಂದ ಈ ಕೂಪದಲ್ಲಿ ಬಿದ್ದಿರುವ ನನ್ನನ್ನು ಮೇಲೆತ್ತಿ ಉದ್ಧರಿಸುವುದು ನಿನಗೆ ಧರ್ಮವಾಗಿದೆ."

ದೇವಯಾನಿಯು ಶುಕ್ರರ ಮಗಳೆಂದು ಹೇಳಿ ತನ್ನ ಪರಿಚಯವನ್ನು ಮಾಡಿಕೊಟ್ಟಿದ್ದರಿಂದ ಅವಳು ಬ್ರಾಹ್ಮಣೀ ಎಂಬುದನ್ನು ನಿಶ್ಚಯಿಸಿದವನಾಗಿ, ಯಯಾತಿಯು ಅವಳ ಬಲಗೈಹಿಡಿದು ಒಡನೆಯೇ ಮೇಲೆತ್ತಿ, ಬಾವಿಯ ದಂಡೆಯ ಮೇಲೆ ಕುಳ್ಳಿರಿಸಿ, ಅವಳ ಅನುಮತಿಯನ್ನು ಪಡೆದು ತನ್ನ ರಾಜಧಾನಿಗೆ ಹೊರಟುಹೋದನು.

ಘೂರ್ಣಿಕೆಯೆಂಬ ದೇವಯಾನಿಯ ದಾಸಿಯು ತನ್ನ ಸ್ವಾಮಿನಿಯನ್ನು ಕಾಣದೇ ಅಲೆದಲೆದು ಬೇಸತ್ತು ಪಟ್ಟಣಕ್ಕೆ ಹಿಂದಿರುಗುವುದರಲ್ಲಿದ್ದಾಗ, ಬಾವಿಯೊಂದರ ಸಮೀಪದಲ್ಲಿ ದೇವಯಾನಿಯು ಕುಳಿತಿರುವುದನ್ನು ದೂರದಿಂದಲೇ ನೋಡಿ, ಅವಳ ಹತ್ತಿರಕ್ಕೆ ಓಡಿಬಂದು, ಮುಂದೆ ನಿಂತು ಕಾತುರತೆಯಿಂದ ಹೇಳಿದಳು :

"ದೇವಿ! ನಾನು ಈ ಮೊದಲು ನಿನ್ನನ್ನು ಇಲ್ಲೆಲ್ಲಾ ಹುಡುಕಿದೆನು. ನಾನು ಹಿಂದೆ ಈ ಜಾಗಕ್ಕೆ ಬಂದಿದ್ದಾಗ ನೀನು ಇಲ್ಲಿರಲಿಲ್ಲ. ಈಗೆಲ್ಲಿಂದ ಬಂದೆ? ದೇವಯಾನಿ! ಪಟ್ಟಣಕ್ಕೆ ಬರುವುದಿಲ್ಲವೇ? ಗುರುಗಳು ಕರೆತರುವಂತೆ ಹೇಳಿದ್ದಾರೆ."

"ಇಲ್ಲ, ಸಖಿ! ನಾನೀಗ ಪಟ್ಟಣಕ್ಕೆ ಬರುವುದಿಲ್ಲ. ನೀನೀಗಲೇ ಪಟ್ಟ ಣಕ್ಕೆ ಹೋಗಿ ನಾನು ವೃಷಪರ್ವನ ಪಟ್ಟಣಕ್ಕೆ ಬರುವುದಿಲ್ಲವೆಂಬ ವಿಷಯ

ವನ್ನು ನನ್ನ ತಂದೆಗೆ ಹೇಳಿಬಿಡು"–ಎಂದು ಹೇಳಿ ತಾನು ಪಟ್ಟಣಕ್ಕೆ ಹೋಗದಿರುವ ಕಾರಣವನ್ನು ಸೂಕ್ಷ್ಮವಾಗಿ ಘೂರ್ಣಿಕೆಯೊಡನೆ ಹೇಳಿಕಳುಹಿಸಿದಳು.

ಘೂರ್ಣಿಕೆಯು ವೃಷಪರ್ವನ ಅರಮನೆಗೆ ಶೀಘ್ರವಾಗಿ ಧಾವಿಸಿ ಶುಕ್ರರನ್ನು ಸಂದರ್ಶಿಸಿ, ದೇವಯಾನಿಗೆ ಒದಗಿದ ದುರವಸ್ಥೆಯನ್ನು ಬಣ್ಣಿಸಿ ಹೇಳಿದಳು :

"ಗುರುದೇವ! ವೃಷಪರ್ವನ ಮಗಳಾದ ಶರ್ಮಿಷ್ಠೆಯು ದೇವಯಾನಿಯನ್ನು ಹೊಡೆದು ಬಾವಿಗೆ ನೂಕಿ ಬಂದಿದ್ದಾಳೆ."

"ವೃಷಪರ್ವನ ಮಗಳು ನನ್ನ ದೇವಯಾನಿಯನ್ನು ಹೊಡೆದು ಬಾವಿಗೆ ನೂಕಿದಳೇ?"–ಎಂಬುದಾಗಿ ಶುಕ್ರರು ಹೇಳುತ್ತಾ ಘೂರ್ಣಿಕೆಯೊಡನೆ ವನಕ್ಕೆ ಹೊರಟರು. ಬಾವಿಯ ದಂಡೆಯ ಮೇಲೆ ಬಿಕ್ಕಿ-ಬಿಕ್ಕಿ ಅಳುತ್ತಾ ಕುಳಿತಿದ್ದ ಮಗಳನ್ನು ನೋಡಿದರು. ಬಹಳ ದುಃಖವಾಯಿತು. 'ಅಳಬೇಡ ಮಗಳೇ!' ಎಂದು ಸಂತೈಸುತ್ತಾ ದೇವಯಾನಿಯನ್ನು ಹಿಡಿದು ಮೇಲೆತ್ತಿ ತಬ್ಬಿಕೊಂಡು ಮುಂದಲೆಯನ್ನು ಸವರುತ್ತಾ ಕಣ್ಣೀರೊರೆಸುತ್ತಾ ಹೇಳಿದರು :

**ಆತ್ಮದೋಷೈರ್ನಿಯಚ್ಛನ್ತಿ ಸರ್ವೇ ದುಃಖಸುಖೇ ಜನಾಃ ।**
**ಮನ್ಯೇ ದುಶ್ಚರಿತಂ ತೇಽಸ್ತಿ ಯಸ್ಯೇಯಂ ನಿಷ್ಕೃತಿಃ ಕೃತಾ ॥೩೦॥**

"ಮಗು! ಪ್ರಪಂಚದಲ್ಲಿರುವ ಎಲ್ಲ ಜನರೂ ತಮಗೆ ಒದಗುವ ಸುಖ-ದುಃಖಗಳನ್ನು ತಮ್ಮ ಕರ್ಮಾನುಸಾರವಾಗಿಯೇ ಪಡೆಯುವರು. ನಮ್ಮ ಸುಖ-ದುಃಖಗಳಿಗೆ ಇತರರೆಂದಿಗೂ ಕಾರಣರಾಗುವುದಿಲ್ಲ. ಆದುದರಿಂದ ಈ ವಿಧವಾದ ದುಃಖವನ್ನು ಅನುಭವಿಸಲು ನೀನು ಯಾವುದೋ ಅಪರಾಧವನ್ನು ಮಾಡಿರಲೇಬೇಕೆಂದು ನಾನು ಭಾವಿಸುತ್ತೇನೆ."

ತಾನು ದುಃಖದಲ್ಲಿದ್ದಾಗ ಹೀಗೆ ಹೇಳಿಕೊಂಡು ತಾನೇ ಸಮಾಧಾನಪಟ್ಟುಕೊಳ್ಳಬೇಕೇ ಹೊರತು ಇತರರು ದುಃಖದಲ್ಲಿದ್ದಾಗ–'ನೀನು ಮಾಡಿದ ಯಾವುದೋ ಪಾಪಕರ್ಮದಿಂದ ಈ ದುಃಖವನ್ನು ಅನುಭವಿಸುತ್ತಿರುವೆ'–ಎಂದು ಹೇಳಿದರೆ ಮನುಷ್ಯನ ತಾಳ್ಮೆಯೇ ಹೊರಟುಹೋಗುತ್ತದೆ. ಸುಖ-ದುಃಖಗಳಿಗೆ ತಾನು ಮಾಡಿದ ಕರ್ಮವೇ ಕಾರಣವೆಂಬುದು ಶತಾಂಶ ಸತ್ಯವಾದರೂ ಸಾಮಾನ್ಯವಾಗಿ ಮನುಷ್ಯನು ಹಾಗೆ ಭಾವಿಸುವುದಿಲ್ಲ.

ಇಂತಹವರಿಂದ ತಾನು ಹೀಗೆ ಕಷ್ಟಪಡಬೇಕಾಯಿತೆಂದೇ ಹೇಳುತ್ತಿರುತ್ತಾನೆ. ಪ್ರಕೃತಸಂದರ್ಭದಲ್ಲಿ ಶರ್ಮಿಷ್ಠೆಯೇ ದೇವಯಾನಿಯನ್ನು ಬಾವಿಗೆ ನೂಕಿದ್ದಾಳೆ. ಅದನ್ನು ಕರ್ಮಫಲವೆಂದು ಭಾವಿಸಿ ಸಮಾಧಾನಪಟ್ಟುಕೊಳ್ಳುವುದಾದರೂ ಹೇಗೆ ಸಾಧ್ಯವಾದೀತು? ದೇವಯಾನಿಗೆ ತಂದೆಯ ಮಾತು ಹಿಡಿಸಲಿಲ್ಲ. ಗಡುಸಾದ ಧ್ವನಿಯಿಂದಲೇ ಹೇಳಿದಳು :

"ಅಪ್ಪಾ! ಈಗ ನಾನು ಅನುಭವಿಸುತ್ತಿರುವ ಕಷ್ಟವು ನಾನು ಮಾಡಿದ ದುಷ್ಕರ್ಮದ ಫಲವೇ? ಅಥವಾ ಅಲ್ಲವೇ?–ಎಂಬುದರ ವಿವೇಚನೆಯನ್ನು ಈಗ ಮಾಡುವ ಕಾರಣವಿಲ್ಲ. ಅಥವಾ ನನಗೆ ಈ ಅವಸ್ಥೆಯುಂಟಾದುದಕ್ಕಾಗಿಯೂ ನಾನು ಯೋಚಿಸುತ್ತಿಲ್ಲ. ನಾನು ಹೇಳುವುದನ್ನು ಕೇಳು. ಇದರಲ್ಲಿನ ಸತ್ಯಾಂಶವೇನೆಂಬುದನ್ನೂ ಮರೆಮಾಚದೇ ಕೇಳು. ನೀನು ನನ್ನ ಪ್ರಶ್ನೆಗಳಿಗೆ ಉತ್ತರಿಸಿದನಂತರ ಮುಂದೇನು ಮಾಡಬೇಕೆಂಬುದನ್ನು ನಾನೇ ನಿರ್ಧರಿಸುವೆನು.

ವೃಷಪರ್ವನ ಮಗಳಾದ ಶರ್ಮಿಷ್ಠೆಯು ನಿನ್ನನ್ನು ವೃಷಪರ್ವನ ಹೊಗಳುಭಟ್ಟನೆಂದು ಹೇಳಿದಳು. ಇದು ನಿಜವೇ? ಈ ಮಾತುಗಳನ್ನವಳು ಕುಪಿತಳಾಗಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಹತ್ತಾರು ಬಾರಿ ಹೇಳಿ ದಳು. ಅವಳು ಹೇಳಿದುದನ್ನು ಅವಳ ಮಾತಿನಲ್ಲಿಯೇ ಹೇಳುವೆನು, ಕೇಳಪ್ಪಾ!

**ಸ್ತುವತೋ ದುಹಿತಾ ನಿತ್ಯಂ ಯಾಚತಃ ಪ್ರತಿಗೃಹ್ಣತಃ ।**
**ಅಹಂ ತು ಸ್ತೂಯಮಾನಸ್ಯ ದದತೋಽಪ್ರತಿಗೃಹ್ಣತಃ ॥೩೪॥**

**(ಯಾಚತಸ್ತ್ವಂ ಹಿ ದುಹಿತಾ ಸ್ತುವತಃ ಪ್ರತಿಗೃಹ್ಣತಃ ।**
**ಸುತಾಹಂ ಸ್ತೂಯಮಾನಸ್ಯ ದದತೋಽಪ್ರತಿಗೃಹ್ಣತಃ ॥೧೦॥)**

"ನಿತ್ಯವೂ ಸಿಂಹಾಸನದ ಕೆಳಭಾಗದಲ್ಲಿ ಕೈಕಟ್ಟಿಕೊಂಡು ನಿಂತು ನನ್ನ ತಂದೆಯನ್ನು ಹೊಗಳುವ, ಜೀವಿಕೆಗಾಗಿ ಪದೇ-ಪದೇ ಯಾಚನೆಮಾಡುವ ಮತ್ತು ನನ್ನ ತಂದೆಯು ಕರುಣೆಯಿಂದ ಕೊಟ್ಟ ದಾನವನ್ನು ದೈನ್ಯದಿಂದ ಪರಿಗ್ರಹಿಸುವ ಶುಕ್ರನ ಮಗಳು ನೀನು. ವಂದಿ-ಮಾಗಧರಿಂದಲೂ, ವಿಶೇಷವಾಗಿ ನಿನ್ನಪ್ಪನಿಂದಲೂ ಹೊಗಳಿಸಿಕೊಳ್ಳುವ, ಯಾವಾಗಲೂ ದಾನಶೀಲ

ನಾಗಿರುವ, ಒಮ್ಮೆಯಾದರೂ ಪ್ರತಿಗ್ರಹವನ್ನು ಮಾಡದಿರುವ ಮಹಾಶೂರ ನಾದ ವೃಷಪರ್ವನ ಮಗಳು ನಾನು."

–ಎಂದು ಬಹುಸ್ಪಷ್ಟವಾಗಿ ಹೇಳಿದಳು. ಅವಳು ಹೀಗೆ ಹೇಳುವಾಗ ಅವಳ ಕಣ್ಣುಗಳಿಂದ ಕೆಂಡಗಳೇ ಉದುರುತ್ತಿದ್ದುವು. ದುರಭಿಮಾನವೆಂಬುದು ಅವಳ ಮುಖದಲ್ಲಿ ತಾಂಡವವಾಡುತ್ತಿದ್ದಿತು. ಒಂದು ಬಾರಿಯಲ್ಲ; ಹತ್ತಾರು ಬಾರಿ ಹೇಳಿ ನನ್ನನ್ನವಳು ಮೂದಲಿಸಿದಳು.

ಅಪ್ಪ! ಈಗ ನಾನು ತಮ್ಮನ್ನು ಕುರಿತು ಪ್ರಶ್ನಿಸುವುದಿಷ್ಟೇ. ಶರ್ಮಿಷ್ಠೆಯು ಹೇಳಿದಂತೆ ನಾನು ಹೊಗಳುಭಟ್ಟನ ಮಗಳೇ? ದಾನವನ್ನು ಪ್ರತಿಗ್ರಹಿಸಲು ಆತುರನಾಗಿರುವ ದೀನನ ಮಗಳೇ?–ಇದನ್ನು ಸ್ಪಷ್ಟವಾಗಿ ಹೇಳಿರಿ. ಒಂದು ವೇಳೆ ಶರ್ಮಿಷ್ಠೆಯು ಹೇಳಿದ್ದು ನಿಜವಾದರೆ ನಾನೀಗಲೇ ಅವಳಲ್ಲಿಗೆ ಹೋಗಿ ಅವಳನ್ನೇ ನನ್ನ ಸ್ವಾಮಿನಿಯೆಂದು ಒಪ್ಪಿಕೊಂಡು ಶುಶ್ರೂಷೆಮಾಡಿ ಅವಳ ಕೃಪೆಯನ್ನಾದರೂ ಸಂಪಾದಿಸುವೆನು. ಹೀಗೆಂದು ನಾನು ನನ್ನ ಸಖಿಯೊಡನೆಯೂ ಹೇಳಿರುವೆನು."

ಶುಕ್ರರು ಹೇಳುತ್ತಾರೆ :

"ದೇವಯಾನಿ! ನೀನು ನಿಶ್ಚಯವಾಗಿಯೂ ಹೊಗಳುಭಟ್ಟನ ಮಗಳೂ ಅಲ್ಲ; ಯಾಚಕನ ಮಗಳೂ ಅಲ್ಲ; ದಾನವನ್ನು ದೈನ್ಯದಿಂದ ಪ್ರತಿಗ್ರಹಿಸುವವನ ಮಗಳೂ ಅಲ್ಲ. ನೀನು ಯಾರೊಬ್ಬರ ಸ್ತೋತ್ರವನ್ನೂ ಯಾವಾಗಲೂ ಯಾವ ಕಾರಣದಿಂದಲೂ ಮಾಡದಿರುವವನ ಪುತ್ರಿಯೇ ಆಗಿರುವೆ. ನನ್ನ ಸಾಮರ್ಥ್ಯವೆಷ್ಟೆಂಬುದನ್ನು ನಾನು ಹೇಳಿಕೊಳ್ಳಬೇಕಾದ ಕಾರಣವೂ ಇಲ್ಲ. ಮಗಳೇ! ನಿನ್ನನ್ನು ಯಾಚಕನ ಮಗಳೆಂದು ಮೂದಲಿಸಿದ ಶರ್ಮಿಷ್ಠೆಯ ಅಪ್ಪನಿಗೆ ಈ ವಿಷಯವು ಚೆನ್ನಾಗಿ ತಿಳಿದಿರುವುದು. ದೇವೇಂದ್ರ ನಾದ ಶಕ್ರನಿಗೂ, ಮಾನವೇಂದ್ರನಾದ ಯಯಾತಿಗೂ ನನ್ನ ಬಲವು ತಿಳಿದಿರುವುದು. ನನ್ನನ್ನು ಅವರೆಲ್ಲರೂ ಅಚಿಂತ್ಯನೆಂದೂ, ದ್ವಂದ್ವರಹಿತನಾದ ಈಶ್ವರನೆಂದೂ, ಪರಬ್ರಹ್ಮನೇ ಎಂದೂ ಭಾವಿಸಿದ್ದಾರೆ. ನನ್ನ ವಿಷಯದಲ್ಲಿ ಸುಪ್ರೀತನಾದ ಚತುರ್ಮುಖನು ಭೂಮಿಯಲ್ಲಿರುವ ಮತ್ತು ಸ್ವರ್ಗದಲ್ಲಿ ರುವ ಎಲ್ಲ ಚರಾಚರವಸ್ತುಗಳಿಗೂ ನಾನೇ ಸ್ವಾಮಿಯೆಂಬುದನ್ನು ಉದ್ಘೋ

ಷಿಸಿದ್ದಾನೆ. ನನ್ನ ವಿಷಯದಲ್ಲಿ ಯಾರು ಏನೇ ಹೇಳಿಕೊಳ್ಳಲಿ ; ಪ್ರಕೃತ ಸಂದರ್ಭದಲ್ಲಿ ನಾನು ಮಾಡುತ್ತಿರುವ ಕಾರ್ಯವನ್ನು ಹೇಳುವೆನು ಕೇಳು. ಇದರಿಂದಲೇ ನಾನಾರು? ನನ್ನ ಪ್ರಭಾವವೆಷ್ಟೆಂಬುದನ್ನು ನೀನು ತಿಳಿದು ಕೊಳ್ಳಬಹುದು.

**ಅಹಂ ಜಲಂ ವಿಮುಞ್ಚಾಮಿ ಪ್ರಜಾನಾಂ ಹಿತಕಾಮ್ಯಯಾ ।**
**ಪುಷ್ಣಾಮ್ಯೋಷಧಯಃ ಸರ್ವಾ ಇತಿ ಸತ್ಯಂ ಬ್ರವೀಮಿ ತೇ ॥೪೦॥**

ಪ್ರಜೆಗಳಿಗೆ ಹಿತವನ್ನುಂಟುಮಾಡುವ ಸಲುವಾಗಿ ಕಾಲ-ಕಾಲಕ್ಕೆ ಮಳೆ ಸುರಿಸುವವನೂ ಮತ್ತು ಪ್ರಪಂಚದಲ್ಲಿರುವ ಓಷಧಿಲತೆಗಳನ್ನೂ, ಪೈರು-ಪಚ್ಚೆಗಳನ್ನೂ ಪೋಷಿಸುವವನೂ ನಾನೇ ಆಗಿರುತ್ತೇನೆ, ಮಗಳೇ!"

ಜನಮೇಜಯ! ಈ ರೀತಿಯಾಗಿ ಬಹಳ ದುಃಖಿತಳಾಗಿದ್ದ, ಶರ್ಮಿಷ್ಠೆಯ ಮೇಲಿನ ಕೋಪದಿಂದ ಉರಿದುರಿದು ಬೀಳುತ್ತಿದ್ದ ದೇವ ಯಾನಿಯನ್ನು ಶುಕ್ರರು ಸುಮಧುರವಾದ ಸಾಂತ್ವವಚನಗಳಿಂದ ಸಮಾಧಾನ ಪಡಿಸಲು ಬಹುವಾಗಿ ಪ್ರಯತ್ನಿಸುತ್ತಿದ್ದರು."

ಎ೮ನೆಯ ಅಧ್ಯಾಯವು ಮುಗಿಯಿತು.

೭೯ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದೇವಯಾನಿಗೆ ಶುಕ್ರರ ಉಪದೇಶ: ದೇವಯಾನಿಯ ಅಸಮ್ಮತಿ

"ಜನಮೇಜಯ! ಶುಕ್ರರು ತಮ್ಮ ಪ್ರಭಾವವೆಷ್ಟೆಂಬುದನ್ನು ದೇವ ಯಾನಿಯೊಡನೆ ಹೇಳಿದರೂ ಸಂಯಮದಿಂದಲೇ ಇರಬೇಕೆಂದು ಮಗಳಿಗೆ ಉಪದೇಶಿಸಿದರು :

**ಯಃ ಪರೇಷಾಂ ನರೋ ನಿತ್ಯಮತಿವಾದಾಂಸ್ತಿತಿಕ್ಷತೇ ।**
**ದೇವಯಾನಿ ವಿಜಾನೀಹಿ ತೇನ ಸರ್ವಮಿದಂ ಜಿತಮ್ ॥೧॥**

"ದೇವಯಾನಿ! ಇತರರಾಡಿಕೊಳ್ಳುವ ನಿಂದೆಯ ಮಾತುಗಳನ್ನು ಯಾವನು ಸಹಿಸಿಕೊಳ್ಳುವನೋ, ಲಕ್ಷಿಸುವುದಿಲ್ಲವೋ–ಅಂತಹವನು ಜಗತ್ತನ್ನೇ ಜಯಿಸಲು ಸಮರ್ಥನಾಗುತ್ತಾನೆ.

ಕೋಪಕ್ಕೆ ಎಂದಿಗೂ ಆಶ್ರಯವನ್ನು ನೀಡಬಾರದು, ಮಗಳೇ!

**ಯಃ ಸಮುತ್ಪತಿತಂ ಕ್ರೋಧಂ ನಿಗೃಹ್ಣಾತಿ ಹಯಂ ಯಥಾ ।**
**ಸ ಯನ್ತೇತ್ಯುಚ್ಯತೇ ಸದ್ಭಿರ್ನ ಯೋ ರಶ್ಮಿಷು ಲಮ್ಬತೇ ॥೨॥**

ಕುದುರೆಗಳು ಓಡುತ್ತಿರುವಾಗ ಕಡಿವಾಣಗಳನ್ನು ಬಿಗಿಯಾಗಿ ಹಿಡಿದು ಓಡುತ್ತಿರುವ ಕುದುರೆಗಳನ್ನು ನಿಲ್ಲಿಸುವವನೇ ಸಾರಥಿ–ಎಂದು ಕರೆಯಲ್ಪಡುತ್ತಾನೆ. ಆದರೆ ಕಡಿವಾಣಗಳನ್ನು ಸೆಳೆದು ಹಿಡಿಯದೇ ಸುಮ್ಮನೇ ಹಿಡಿದಿದ್ದು ಕುದುರೆಗಳು ಓಡಿದ ಕಡೆಗೇ ರಥವನ್ನು ನಡೆಸುವ ಪ್ರವೃತ್ತಿಯುಳ್ಳವನನ್ನು ರಥಿಕನೆಂದಾಗಲೀ ಸಾರಥಿಯೆಂದಾಗಲೀ ಹೇಳುವುದಿಲ್ಲ. ಅಂತಹವನು ಸಾರಥಿಯಾಗಲೂ ಕೂಡ ಯೋಗ್ಯನಾಗುವುದಿಲ್ಲ. ಅಂತೆಯೇ ಉಕ್ಕಿಬರುತ್ತಿರುವ ಕೋಪವನ್ನು ತಡೆದುಹಿಡಿಯುವವನು ಸತ್ಪುರುಷರಿಂದ ಯಂತಾರನೆಂದು ಕರೆಯಲ್ಪಡುತ್ತಾನೆ. ಕೋಪವನ್ನು ತಡೆಹಿಡಿಯಲಾರದೇ ಪ್ರತಿಕ್ರಿಯೆಯನ್ನು ಮಾಡಲು ಹೋಗುವವನು ಕಡಿವಾಣಗಳನ್ನು ಸಡಿಲಿಸಿದ ಕುದುರೆಗಳುಳ್ಳ ರಥಿಕನಂತೆ ಕಷ್ಟಕ್ಕೆ ಗುರಿಯಾಗುತ್ತಾನೆ.

**ಯಃ ಸಮುತ್ಪತಿತಂ ಕ್ರೋಧಮಕ್ರೋಧೇನ ನಿರಸ್ಯತಿ ।**
**ದೇವಯಾನಿ ವಿಜಾನೀಹಿ ತೇನ ಸರ್ವಮಿದಂ ಜಿತಮ್ ॥೩॥**

ಮಗಳೇ! ವಿಷಮಿಸಿದ ಸನ್ನಿವೇಶಗಳಿಂದ ಉಂಟಾಗಬಹುದಾದ ಕ್ರೋಧವನ್ನು ಯಾವನು ಕ್ಷಮಾಗುಣದಿಂದ ತಡೆಹಿಡಿಯುತ್ತಾನೆಯೋ ಅಂತಹವನೇ ಸಕಲಜಗತ್ತನ್ನೂ ಜಯಿಸಲು ಸಮರ್ಥನಾಗುತ್ತಾನೆ.

**ಯಃ ಸಮುತ್ಪತಿತಂ ಕ್ರೋಧಂ ಕ್ಷಮಯೇಹ ನಿರಸ್ಯತಿ ।**
**ಯಥೋರಗಸ್ತ್ವಚಂ ಜೀರ್ಣಾಂ ಸ ವೈ ಪುರುಷ ಉಚ್ಯತೇ ॥೪॥**

ಕೋಪಕ್ಕೆ ಆಶ್ರಯವಿತ್ತವನು ಕ್ರೂರವಾಗಿ ವರ್ತಿಸಿದರೂ ಅವನನ್ನು ಪುರುಷನೆಂದು ಹೇಳುವ ಸಾಧ್ಯತೆಯಿಲ್ಲ. ಸಂದರ್ಭಾನುಸಾರವಾಗಿ ಉಂಟಾಗುವ ಕೋಪವನ್ನು ಕ್ಷಮಾಗುಣದಿಂದ ತ್ಯಜಿಸುವವನೇ ಪುರುಷನೆನಿಸಿಕೊಳ್ಳುತ್ತಾನೆ. ಜೀರ್ಣವಾದ ಪೊರೆಯನ್ನು ಕಳಚಿದ ಹಾವಿನಂತೆ–ಅಂತಹವನು ಶೋಭಿಸುತ್ತಾನೆ.

**ಯಃ ಸಂಧಾರಯತೇ ಮನ್ಯುಂ ಯೋಽತಿವಾದಾಂಸ್ತಿತಿಕ್ಷತೇ ।**
**ಯಶ್ಚ ತಪ್ತೋ ನ ತಪತಿ ದೃಢಂ ಸೋಽರ್ಥಸ್ಯ ಭಾಜನಮ್ ॥೫॥**

ಯಾವನು ಸಂದರ್ಭಾನುಸಾರವಾಗಿ ಬಂದ ಕೋಪವನ್ನು ತಡೆ ಹಿಡಿಯುತ್ತಾನೆಯೋ, ಯಾವನು ನಿಂದೆಗೆ ಲಕ್ಷ್ಯಕೊಡುವುದಿಲ್ಲವೋ ಮತ್ತು



ಯಾವನು ಇತರರಿಂದ ತೊಂದರೆಯನ್ನೇ ಅನುಭವಿಸಿದರೂ ಮನಸ್ಸಿಗೆ ಯಾವ ವಿಧವಾದ ತಾಪವನ್ನೂ ತಂದುಕೊಳ್ಳದೇ ಸ್ಥೈರಣೆಯಿಂದಿರುತ್ತಾನೆಯೋ–ಅಂತಹವನಿಗೆ ನಾಲ್ಕು ಪುರುಷಾರ್ಥಗಳ ಸಿದ್ಧಿಯೂ ಆಗುತ್ತದೆ. (ನಾಲ್ಕು ಪುರುಷಾರ್ಥಗಳನ್ನೂ ಅನುಭವಿಸಲು ಅಂತಹವನೇ ಅರ್ಹನಾಗುತ್ತಾನೆ.)

**ಯೋ ಯಜೇದಪರಿಶ್ರಾನ್ತೋ ಮಾಸಿ ಮಾಸಿ ಶತಂ ಸಮಾ ।**
**ನ ಕ್ರುಧ್ಯೇದ್ಯಶ್ಚ ಸರ್ವಸ್ಯ ತಯೋರಕ್ರೋಧನೋಽಧಿಕಃ ॥೬॥**

ಯಾವನು ವಿಶ್ರಾಂತಿಯೇ ಇಲ್ಲದೇ ನೂರು ವರ್ಷಗಳ ಕಾಲ ಪ್ರತಿಮಾಸವೂ ಯಾಗಮಾಡುವನೋ, ಅವನಿಗೆ ಲಭ್ಯವಾಗುವ ಫಲಕ್ಕಿಂತಲೂ ಅಧಿಕವಾದ ಫಲವು ಯಾವ ವಿಷಯಕ್ಕೂ ಯಾವ ಕಾರಣದಿಂದಲೂ ಕೋಪಿಸಿಕೊಳ್ಳದೇ ಇರುವ ಕ್ಷಮಾಶೀಲನಿಗೆ ಲಭ್ಯವಾಗುತ್ತದೆ. ದೇವಯಾನಿ! ತಿಳಿವಳಿಕೆಯಿಲ್ಲದ ದುರ್ಬಲರಾದ ಬಾಲಕ-ಬಾಲಕಿಯರು ಏನು ಹೇಳುವರು ಅಥವಾ ಏನು ಮಾಡುವರು–ಎಂಬ ವಿಷಯವಾಗಿ ಪ್ರಾಜ್ಞರಾದವರೆಂದಿಗೂ ಲಕ್ಷ್ಯವಿಡಬಾರದು. ಅವರನ್ನು ಅನುಕರಣೆ ಮಾಡಲೂ ಹೋಗಬಾರದು. ಏಕೆಂದರೆ : ನಮ್ಮ ಬಲಾಬಲಗಳನ್ನು ಅವರು ತಿಳಿದವರಾಗಿರುವುದಿಲ್ಲ."

ಜನಮೇಜಯ! ಶುಕ್ರರು ತಮ್ಮ ಮಗಳ ಕೋಪವನ್ನು ಶಾಂತಗೊಳಿಸುವ ಸಲುವಾಗಿ ನಾನಾವಿಧವಾಗಿ ಉಪದೇಶಮಾಡಿದರೂ ದೇವಯಾನಿಗೆ ಕೋಪವು ಕಡಿಮೆಯಾಗಲಿಲ್ಲ. ತಂದೆಯನ್ನು ಕುರಿತು ಹೇಳಿದಳು :

"ಅಪ್ಪ! ನಾನು ಬಾಲೆಯಾಗಿದ್ದರೂ ತಮ್ಮಂತಹ ಧರ್ಮಾತ್ಮರ ಅನವರತವಾದ ಸಹವಾಸದಿಂದಾಗಿ ಧರ್ಮಾಧರ್ಮಗಳ ಅಂತರವೇನೆಂಬುದನ್ನು ಸಂಪೂರ್ಣವಾಗಿ ತಿಳಿದಿರುತ್ತೇನೆ. ಕ್ಷಮಾಗುಣದಲ್ಲಿ ಮತ್ತು ನಿಂದೆಯನ್ನು ಅಲಕ್ಷ್ಯಮಾಡುವುದರಲ್ಲಿರುವ ಬಲಾಬಲಗಳನ್ನೂ ತಿಳಿದಿರುತ್ತೇನೆ. ಎಲ್ಲ ಸಮಯಗಳಲ್ಲಿಯೂ ಎಲ್ಲರ ವಿಷಯದಲ್ಲಿಯೂ ಕ್ಷಮೆಯೇ ಇರಬೇಕೆಂಬುದೂ ಅಸಹಜವಾಗಿ ಕಾಣುತ್ತದೆ. ಶಿಷ್ಯರಾದವರು ಶಿಷ್ಯವೃತ್ತಿಯನ್ನು ಮೀರಿ ಧೂರ್ತರಾಗಿ ವರ್ತಿಸಿದರೆ ಅಂತಹವರನ್ನು ಖಂಡಿತವಾಗಿಯೂ ಕ್ಷಮಿಸಬಾರದು. ಶಿಕ್ಷಾರ್ಹನಾದ ಶಿಷ್ಯನನ್ನು ಕ್ಷಮಿಸುವುದರಿಂದ ಗುರುವಿಗೂ ಹಿತವಾಗುವುದಿಲ್ಲ ; ಶಿಷ್ಯನಿಗೂ ಹಿತವಾಗುವುದಿಲ್ಲ. ಆದುದರಿಂದ ಶುದ್ಧವಾದ ಆಚಾರ-ವಿಚಾರ-ವ್ಯವಹಾರಗಳಿಲ್ಲದವರೊಡನೆ ನಾನು ಖಂಡಿತವಾಗಿಯೂ ಇರಲು ಇಚ್ಛಿಸುವುದಿಲ್ಲ.

**ಪುಮಾಂಸೋ ಯೇ ಹಿ ನಿನ್ದನ್ತಿ ವೃತ್ತೇನಾಭಿಜನೇನ ಚ ।**
**ನ ತೇಷು ನಿವಸೇತ್ಪ್ರಾಜ್ಞಃ ಶ್ರೇಯೋಽರ್ಥೀ ಪಾಪಬುದ್ಧಿಷು ॥೧೦॥**

ಯಾವ ಪುರುಷರು ಇತರರ ಸದಾಚಾರ ಮತ್ತು ಕುಲಗಳನ್ನು ನಿಂದನೆ ಮಾಡುತ್ತಾರೆಯೋ–ಅಂತಹವರ ಆಶ್ರಯದಲ್ಲಿ ಪ್ರಾಜ್ಞನಾದವನೂ, ಶ್ರೇಯೋಭಿಲಾಷಿಯೂ ಇರಬಾರದು.

**ಯೇ ತ್ವೇನಮಭಿಜಾನನ್ತಿ ವೃತ್ತೇನಾಭಿಜನೇನ ವಾ ।**
**ತೇಷು ಸಾಧುಷು ವಸ್ತವ್ಯಂ ಸ ವಾಸಃ ಶ್ರೇಷ್ಠ ಉಚ್ಯತೇ ॥೧೧॥**

ಸದಾಚಾರಸಂಪನ್ನರೆಂದೂ, ಸತ್ಕುಲಪ್ರಸೂತರೆಂದೂ ಯಾರನ್ನು ಗೌರವಿಸುತ್ತಾರೆಯೋ–ಅಂತಹ ಸಾಧುಗಳ ಮಧ್ಯದಲ್ಲಿ ವಾಸಮಾಡಬೇಕು. ಅಂತಹ ವಾಸವು ಶ್ರೇಷ್ಠವೆನಿಸುತ್ತದೆ.

ಅಗ್ನಿಯನ್ನು ಅಪೇಕ್ಷಿಸುವವನು ಮಥನದಂಡದಿಂದ ಅರಣಿಯನ್ನು ಕಡೆಯುವಂತೆ–ನಿನ್ನ ಶಿಷ್ಯನಾದ ವೃಷಪರ್ವನ ಮಗಳು ಹೇಳಿದ ಮಹಾ ಘೋರವಾದ ದುರುಕ್ತಿಗಳು ನನ್ನ ಹೃದಯವನ್ನು ಮಥಿಸುತ್ತಿವೆ. (ಕಲಕುತ್ತಿವೆ.) ಶ್ರೀಮಂತರ ಸೇವೆಮಾಡಿಕೊಂಡು ಜೀವನವನ್ನು ಹೊರೆಯುವುದಕ್ಕಿಂತಲೂ ಮರಣವೇ ಲೇಸಪ್ಪ! ವಿದ್ವಜ್ಜನರ ಅಭಿಪ್ರಾಯವೂ ಇದೇ ಆಗಿರುವುದು.

**ನ ಹ್ಯತೋ ದುಷ್ಕರತರಂ ಮನ್ಯೇ ಲೋಕೇಷ್ವಪಿ ತ್ರಿಷು ।**
**ಯಃ ಸಪತ್ನಶ್ರಿಯಂ ದೀಪ್ತಾಂ ಹೀನಶ್ರೀಃ ಪರ್ಯುಪಾಸತೇ ।**
**ಮರಣಂ ಶೋಭನಂ ತಸ್ಯ ಇತಿ ವಿದ್ವಜ್ಜನಾ ವಿದುಃ ॥೧೩॥**

ದರಿದ್ರನಾದವನು ಐಶ್ವರ್ಯವಂತನಾದ ತನ್ನ ಶತ್ರುವನ್ನು ಸೇವೆ ಮಾಡುವುದಕ್ಕಿಂತಲೂ ದುಷ್ಕರವಾದುದು ಮತ್ತು ಸಹಿಸಲಸಾಧ್ಯವಾದುದು ಈ ಮೂರು ಲೋಕಗಳಲ್ಲಿಯೂ ಮತ್ತೊಂದಿಲ್ಲವೆಂದು ನಾನು ಭಾವಿಸುತ್ತೇನೆ. ದರಿದ್ರನಾದವನು ಐಶ್ವರ್ಯವಂತನಾದ ಶತ್ರುವಿನ ಸೇವೆಮಾಡಿಕೊಂಡು ಹೊಟ್ಟೆಹೊರೆಯುವುದಕ್ಕಿಂತಲೂ ಸಾಯುವುದೇ ಶ್ರೇಷ್ಠವೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಆದುದರಿಂದ ನೀನು ನನಗೆ ಈ ವಿಷಯದಲ್ಲಿ ಎಷ್ಟೇ ಉಪದೇಶಿಸಿದರೂ ನಿನ್ನ ಶಿಷ್ಯನ ಪಟ್ಟಣಕ್ಕೆ ಮಾತ್ರ ನಾನು ಖಂಡಿತವಾಗಿ ಬರುವುದಿಲ್ಲ."

೭೯ನೆಯ ಅಧ್ಯಾಯವು ಮುಗಿಯಿತು.

## ಶುಕ್ರಾಚಾರ್ಯರನ್ನು ರಾಕ್ಷಸರಾಜ್ಯದಲ್ಲಿಯೇ ಉಳಿಸಿಕೊಳ್ಳಲು ವೃಷಪರ್ವನ ಅನುರೋಧ : ವೃಷಪರ್ವನ ಅಪ್ಪಣೆಯ ಪ್ರಕಾರ ಶರ್ಮಿಷ್ಠೆಯು ದೇವಯಾನಿಗೆ ದಾಸಿಯಾದುದು

"ಪಾರಿಕ್ಷಿತ! ದೇವಯಾನಿಯ ಮಾತುಗಳನ್ನು ಕೇಳಿ ಶುಕ್ರರೂ ಸ್ವಲ್ಪ ಕಾಲ ಯೋಚಿಸಿದರು. ಅವಳು ಹೇಳಿದ ಮಾತುಗಳೂ ಧರ್ಮಸಮ್ಮತವಾಗಿಯೇ ಇವೆಯೆಂದು ಶುಕ್ರರಿಗೆ ಮನವರಿಕೆಯಾಯಿತು. ತಪ್ಪುಮಾಡಿದವಳು ವೃಷಪರ್ವನ ಮಗಳು ಶರ್ಮಿಷ್ಠೆ. ಆದರೆ ಅವರು ನೇರವಾಗಿ ವೃಷಪರ್ವನ ಸಮೀಪಕ್ಕೆ ಹೋಗಿ ಹಿಂದು-ಮುಂದು ಯೋಚಿಸದೇ–ಮಕ್ಕಳಿಬ್ಬರ ಜಗಳಕ್ಕೆ ದೊಡ್ಡವರು ಪ್ರವೇಶಿಸಿ ವ್ಯಾಜ್ಯವಾಡುವಂತೆ–ವೃಷಪರ್ವನನ್ನೇ ನಿಷ್ಠುರವಾದ ಮಾತುಗಳಿಂದ ನಿಂದಿಸಿದರು :

**ನಾಧರ್ಮಶ್ಚರಿತೋ ರಾಜನ್ಸದ್ಯಃ ಫಲತಿ ಗೌರಿವ ।**
**ಶನೈರಾವರ್ತ್ಯಮಾನೋ ಹಿ ಕರ್ತುರ್ಮೂಲಾನಿ ಕೃನ್ತತಿ ॥೨॥**

**ಪುತ್ರೇಷು ವಾ ನಪ್ತೃಷು ವಾ ನ ಚೇದಾತ್ಮನಿ ಪಶ್ಯತಿ ।**
**ಫಲತ್ಯೇವ ಧ್ರುವಂ ಪಾಪಂ ಗುರು ಭುಕ್ತಮಿವೋದರೇ ॥೩॥**

"ಅಸುರೇಂದ್ರನೇ! ಬೀಜವನ್ನು ಬಿತ್ತಿದ ಸ್ವಲ್ಪ ದಿವಸಗಳಲ್ಲಿಯೇ ಭೂಮಿಯು ಫಲವೀಯುವಂತೆ–ಅಥವಾ ಹುಲ್ಲುತಿಂದ ಸ್ವಲ್ಪಹೊತ್ತಿನಲ್ಲಿಯೇ ಹಸುವು ಹಾಲುಕೊಡುವಂತೆ–ಪಾಪಕಾರ್ಯವು ಒಡನೆಯೇ ಫಲ ಕೊಡುವುದಿಲ್ಲ. ಆದರೆ ಕಾಲಕ್ರಮದಲ್ಲಿ ಅವಿಜ್ಞಾತವಾಗಿ ಪಾಪಕರ್ಮಿಯ ಕುಲವನ್ನೇ ನಾಶಮಾಡುವುದು. ಪಾಪಕರ್ಮವನ್ನು ಮಾಡಿದವನೇ ಅದರ ಫಲವನ್ನು ಅನುಭವಿಸುವನೆಂದೂ ಹೇಳಲಾಗುವುದಿಲ್ಲ ; ಅವನ ಮಕ್ಕಳು-ಮೊಮ್ಮಕ್ಕಳೂ ಅನುಭವಿಸಬಹುದು. ಒಟ್ಟಿನಲ್ಲಿ ಪಾಪಕರ್ಮವು ಮಾತ್ರ ತಪ್ಪದೇ ಅದರ ಫಲವನ್ನು ಕೊಟ್ಟೇ ಕೊಡುವುದು. ಮಿತಿಮೀರಿದ ಭೋಜನ ವನ್ನು ಹೇಗೆ ಅರಗಿಸಿಕೊಳ್ಳಲು ಸಾಧ್ಯವಿಲ್ಲವೋ–ಹಾಗೆಯೇ ಮಾಡಿದ ಪಾಪದ ಫಲವನ್ನು ಎಂದಿಗೂ ಅನುಭವಿಸದೇ ಇರಲು ಸಾಧ್ಯವೇ ಇಲ್ಲ, ವೃಷಪರ್ವ!

ನೀನು ನನ್ನ ಶಿಷ್ಯನಾದ ಕಚನ ಹತ್ಯೆಗೆ ಕಾರಣನಾಗಿ ಬ್ರಹ್ಮಹತ್ಯೆಯೆಂಬ ಮಹಾ ಪಾತಕಕ್ಕೆ ಗುರಿಯಾಗಿರುವೆ. ಅಲ್ಲದೇ ನಿನ್ನ ಮಗಳೂ ಕೂಡ ನನ್ನ ಮಗಳನ್ನು ಬಹಳ ನಿಂದಿಸಿರುತ್ತಾಳೆ. ಹೊಡೆದಿರುತ್ತಾಳೆ. ಮೇಲಾಗಿ ನೀನು ನಿನ್ನ ಅಪರಾಧಗಳೆಲ್ಲವನ್ನೂ ಅಲ್ಪವೆಂದೇ ಭಾವಿಸಿರುವೆಯೇ ಹೊರತು ಅದಕ್ಕಾಗಿ ಪಶ್ಚಾತ್ತಾಪವನ್ನೂ ಪಡುತ್ತಿಲ್ಲ. ಈ ಕಾರಣಗಳಿಂದ ನಾನು ನಿನ್ನೊಡನೆ ನಿನ್ನ ರಾಜ್ಯದಲ್ಲಿರಲಾರೆ, ಅಸುರೇಂದ್ರ! ನನ್ನ ಮಾತುಗಳು ಸುಳ್ಳೆಂದು ಭಾವಿಸ ಬೇಡ. ನಾನೀಗಲೇ ಹೊರಡುವೆನು."

ಶುಕ್ರರ ಬಾಯಿಂದ ಅಂತಹ ನುಡಿಗಳನ್ನು ವೃಷಪರ್ವನು ಎಂದೂ ಕೇಳಿರಲಿಲ್ಲ. ಹೊರಟುಹೋಗುವೆನೆಂದು ಶುಕ್ರರು ಹೇಳಿದೊಡನೆಯೇ ದೈತ್ಯ ರಾಜನ ಹೃದಯವು ಕಂಪಿಸಿತು. ಒಡನೆಯೇ ಸಿಂಹಾಸನದಿಂದೆದ್ದು ಶುಕ್ರರ ಪಾದಗಳಿಗೆರಗಿ ಬದ್ಧಾಂಜಲಿಯಾಗಿ ಗದ್ಗದಕಂಠದಿಂದ ಹೇಳಿದನು :

"ಗುರುದೇವ! ತಮ್ಮನ್ನು ಅಧರ್ಮಿಗಳೆಂದಾಗಲೀ, ಸುಳ್ಳುಹೇಳುವ ರೆಂದಾಗಲೀ ನಾನು ಎಂದಾದರೂ ಹೇಳಿರುವೆನೇ? ಮಹಾನುಭಾವರೇ! ತಮ್ಮಲ್ಲಿ ಸತ್ಯ ಮತ್ತು ಧರ್ಮಗಳು ಮೂರ್ತಿಮತ್ತಾಗಿ ನೆಲೆಸಿವೆ. ಕರುಣಾ ನಿಧಿಗಳೇ! ದಯೆತೋರಿರಿ. ತಾವು ಇಲ್ಲಿಂದ ಹೊರಟುಹೋದರೆ ನಾವು ರಕ್ಷಕರೇ ಇಲ್ಲದೆ ಪಾತಾಳವನ್ನು ಸೇರಬೇಕಾಗುವುದು."

"ದೈತ್ಯೇಂದ್ರ! ನೀನು ಪಾತಾಳಕ್ಕೆ ಹೋದರೂ ಅಥವಾ ನಾಲ್ಕು ದಿಕ್ಕುಗಳಿಗೆ ಓಡಿಹೋದರೂ ನನಗಾಗಬೇಕಾದುದೇನು? ಇಂದು ನಾನು ನನ್ನ ಮಗಳ ದುಃಖವನ್ನು ನೋಡಿ ಸಹಿಸದವನಾಗಿದ್ದೇನೆ. ನನ್ನ ಮಗಳು ನನಗೆ ಪ್ರಾಣಸಮಾನಳು. ನನ್ನ ಜೀವನವೇ ಅವಳನ್ನವಲಂಬಿಸಿ ನಿಂತಿದೆ. ನೀನವಳನ್ನು ಸಂತೈಸಿದಲ್ಲಿ ಬೃಹಸ್ಪತಿಯು ಇಂದ್ರನ ಹಿತಚಿಂತಕನಾಗಿರುವಂತೆ ಮುಂದೆಯೂ ನಾನು ನಿನ್ನ ಹಿತಚಿಂತಕನಾಗಿಯೇ ಇರುವೆನು."

"ಗುರುದೇವ! ನಾನು ಹೆಚ್ಚೇನು ಹೇಳಲಿ? ನನ್ನ ಅಷ್ಟೈಶ್ವರ್ಯಕ್ಕೂ ತಾವೇ ಸ್ವಾಮಿಗಳಾಗಿರುವಿರಿ. ಇಷ್ಟುಮಾತ್ರವಲ್ಲದೇ ನಾನೂ ಸಹ ತಮ್ಮ ಸೇವಕನಾಗಿದ್ದೇನೆ. ತಾವು ಹೇಳಿದಂತೆ ನಡೆಯಲು ಸದಾ ಸಿದ್ಧನಿದ್ದೇನೆ."

"ಅಸುರರ ಸಕಲೈಶ್ವರ್ಯಕ್ಕೂ ನಾನೇ ಸ್ವಾಮಿಯೆಂದು ನೀನು ಭಾವಿ

ಸುವೆಯಾದರೆ–ಈಗಲೇ ಹೋಗಿ ನನ್ನ ಆಜ್ಞೆಯಂತೆ ದೇವಯಾನಿಯನ್ನು ಸಮಾಧಾನಗೊಳಿಸು.”

“ಹಾಗೆಯೇ ಆಗಲಿ, ಗುರುದೇವ! ಈಗಲೇ ಹೊರಡುವೆನು.”

ವೃಷಪರ್ವನು ದೇವಯಾನಿಯ ಬಳಿಗೆ ಹೋಗುವ ಮೊದಲೇ ಶುಕ್ರರು ತಮ್ಮ ಮಗಳ ಸಮೀಪಕ್ಕೆ ಹೋಗಿ ವೃಷಪರ್ವನ ಆಸ್ಥಾನದಲ್ಲಿ ನಡೆದ ಸಮಾಚಾರಗಳನ್ನೆಲ್ಲಾ ದೇವಯಾನಿಗೆ ತಿಳಿಸಿದ್ದರು. ತಾವೇ ಅಸುರರ ಐಶ್ವರ್ಯಕ್ಕೆಲ್ಲಾ ಒಡೆಯರೆಂಬುದನ್ನು ವೃಷಪರ್ವನು ಒಪ್ಪಿರುವನೆಂದೂ



ಹೇಳಿದ್ದರು. ಆದರೆ ಅಷ್ಟರಿಂದಲೇ ದೇವಯಾನಿಗೆ ಸಮಾಧಾನವಾಗಲಿಲ್ಲ. “ತಂದೆಯೇ! ನೀವು ಹೇಳುವುದು ನಿಶ್ಚಯವಾಗಿದ್ದರೆ, ತಾವೇ ಅಸುರರ

ಐಶ್ವರ್ಯಕ್ಕೆಲ್ಲಾ ಒಡೆಯರೆಂಬುದನ್ನು ರಾಕ್ಷಸರಾಜನು ಒಪ್ಪಿದ್ದರೆ–ಅವನೇ ನನ್ನ ಬಳಿಗೆ ಬಂದು ಹಾಗೆಯೇ ಹೇಳಲಿ."

ಆ ವೇಳೆಗೆ ಸರಿಯಾಗಿ ವೃಷಪರ್ವನೂ ಮಿತಪರಿವಾರದೊಡನೆ ದೇವಯಾನಿಯ ಬಳಿಗೆ ಬಂದು ಕೈಜೋಡಿಸಿ–"ಗುರುಪುತ್ರಿಯೇ! ನಾನೂ ಮತ್ತು ನನ್ನ ರಾಜ್ಯ-ಕೋಶಾದಿಗಳೆಲ್ಲವೂ ಆಚಾರ್ಯರಿಗೇ ಸೇರಿದ್ದಾಗಿವೆ. ಅವರ ಅನುಗ್ರಹದಿಂದಲೇ ನಾನು ರಾಜ್ಯವಾಳುತ್ತಿರುವೆನು. ನೀನು ಅವರ ಪುತ್ರಿಯಾಗಿರುವುದರಿಂದ ನಮ್ಮೆಲ್ಲರಿಗೂ ನೀನು ಸನ್ಮಾನ್ಯಳಾಗಿರುವೆ. ನಿನ್ನ ಇಚ್ಛೆಯು ಏನೆಂಬುದನ್ನು ತಿಳಿಸು. ಎಷ್ಟೇ ದುಸ್ಸಾಧ್ಯವಾಗಿದ್ದರೂ ಮಾಡಿ ಕೊಡುವೆನು. ಶಿಷ್ಯರಾಗಿರುವ ನಮ್ಮ ಮೇಲೆ ಕೋಪಿಸಬೇಡಮ್ಮಾ!"

"ಮಹಾರಾಜ! ನಿಶ್ಚಯವಾಗಿಯೂ ಹೇಳುವುದನ್ನು ಮಾಡಲು ಸಿದ್ಧ ನಿರುವೆಯಾ?"

"ಸಂಶಯವೇಕೆ? ಗುರುಪುತ್ರಿ!"

"ಹಾಗಾದರೆ ಕೇಳು, ಮಹಾರಾಜ! ನಿನ್ನ ಮಗಳಾದ ಶರ್ಮಿಷ್ಠೆಯು ಎರಡು ಸಾವಿರ ದಾಸಿಯರೊಡನೆ ನನ್ನ ಕಿಂಕರಳಾಗಿರಬೇಕು. ಎರಡನೆಯ ದಾಗಿ ನನ್ನ ತಂದೆಯವರು ನನ್ನನ್ನು ವಿವಾಹಮಾಡಿಕೊಟ್ಟೆಡೆಗೆ ಅವಳೂ ಬರ ಬೇಕು."

ಆ ಮಾತುಗಳನ್ನು ಕೇಳಿ ವೃಷಪರ್ವನು ಕ್ಷಣಮಾತ್ರವಾದರೂ ಯೋಚಿಸಲಿಲ್ಲ. ಒಡನೆಯೇ ಶರ್ಮಿಷ್ಠೆಗೆ ಹೇಳಿಕಳುಹಿಸಿದನು.

ಶರ್ಮಿಷ್ಠೆಯನ್ನು ಕರೆಯಲು ಹೋದ ಸೇವಕಿಯು ಶರ್ಮಿಷ್ಠೆಯ ಮುಂದಿನ ಜೀವನವನ್ನು ನೆನೆದು ದುಃಖಿಸುತ್ತಾ ಅಂತಃಪುರಕ್ಕೆ ಹೋಗಿ ಶರ್ಮಿಷ್ಠೆಗೆ ಹೇಳಿದಳು :

"ರಾಜಕುಮಾರಿ! ದೇವಯಾನಿಯ ಮಾತುಗಳಿಂದ ಆಚಾರ್ಯರು ನಮ್ಮನ್ನಗಲಿ ಹೊರಡಲು ಸಿದ್ಧರಾಗಿರುವರು. ಅವರು ಇಲ್ಲಿರಬೇಕಾದರೆ ನೀನು ದೇವಯಾನಿಯ ದಾಸಿಯಾಗಿರಬೇಕು. ಬಂಧುಗಳ ಮತ್ತು ದೇಶದ ಹಿತದೃಷ್ಟಿಯಿಂದ ನೀನು ಈ ದಾರುಣಾವಸ್ಥೆಯನ್ನು ಅನುಭವಿಸಲೇಬೇಕಾಗಿದೆ, ಕುಮಾರಿ!"

ತನ್ನ ಕಷ್ಟವನ್ನು ನೆನೆದು ಕಣ್ಣೀರಿಡುತ್ತಿದ್ದ ಸೇವಕಿಯ ಕಪೋಲದ ಮೇಲಿದ್ದ ಅಶ್ರುಬಿಂದುಗಳನ್ನು ತನ್ನ ವಸ್ತ್ರದಿಂದಲೇ ಒರೆಸುತ್ತಾ ಶರ್ಮಿಷ್ಠೆಯು ಹೇಳಿದಳು: "ದುಃಖಿಸಬೇಡ ಸಖಿ! ನಾನು ಅತ್ಯಾನಂದದಿಂದ ದೇವಯಾನಿಯ ದಾಸ್ಯವನ್ನು ಸ್ವೀಕರಿಸುವೆನು. ನಾನು ದೇವಯಾನಿಯ ದಾಸ್ಯವನ್ನು ವಹಿಸುತ್ತಿರುವುದು ದೇವಯಾನಿಯ ಅಪೇಕ್ಷೆಯಿಂದಲ್ಲ. ನಮ್ಮ ಗುರುಗಳೇ ನನ್ನನ್ನು ದೇವಯಾನಿಯ ದಾಸ್ಯಕ್ಕೆ ನಿಯೋಜಿಸುತ್ತಿರುವರು. ಗುರುಗಳ ಆಜ್ಞೆಯನ್ನು ಪಾಲಿಸುವುದು ನಮ್ಮೆಲ್ಲರ ಧರ್ಮ. ನನ್ನೊಬ್ಬಳ ತಪ್ಪಿಗಾಗಿ ನಮ್ಮ ಶ್ರೇಯಃಕಾಂಕ್ಷಿಗಳಾದ ಗುರುಗಳಾಗಲೀ ಗುರುಪುತ್ರಿಯಾಗಲೀ ನಮ್ಮನ್ನಗಲಿ ಹೋಗಬಾರದು." ರಾಜಕುಮಾರಿಯ ಮಾತುಗಳನ್ನು ಕೇಳಿ ಸೇವಕಿಗೂ ಅಚ್ಚರಿಯುಂಟಾಯಿತು.

ತಂದೆಯ ಆಜ್ಞೆಯಂತೆ ಶರ್ಮಿಷ್ಠೆಯು ಎರಡು ಸಾವಿರ ಮಂದಿ ಸೇವಕಿಯರ ಸಮೇತಳಾಗಿ ಪಲ್ಲಕ್ಕಿಯಲ್ಲಿ ಕುಳಿತು ಅರಣ್ಯಕ್ಕೆ ಬಂದು, ದೇವಯಾನಿಯಿದ್ದೆಡೆಗೆ ಸ್ವಲ್ಪ ದೂರದಲ್ಲಿ ಪಲ್ಲಕ್ಕಿಯನ್ನು ನಿಲ್ಲಿಸಲು ಹೇಳಿ, ಕೆಳಗಿಳಿದು ಕಾಲ್ನಡಿಗೆಯಲ್ಲಿಯೇ ಗುರುಪುತ್ರಿಯ ಸಮೀಪಕ್ಕೆ ಬಂದು ಕೈಮುಗಿದು ನಿಂತು ಹೇಳಿದಳು :

"ದೇವಿ! ನನ್ನೊಡನೆ ಇರುವ ಎರಡು ಸಾವಿರ ಸೇವಕಿಯರೊಡನೆ ನಿನ್ನ ಕೈಂಕರ್ಯವನ್ನು ಮಾಡಲು ಬಂದಿರುವೆನಮ್ಮಾ. ನಿನ್ನನ್ನು ಕೈಹಿಡಿಯುವ ಸಮ್ರಾಟನ ರಾಜ್ಯಕ್ಕೂ ನಿನ್ನನ್ನೇ ಅನುಸರಿಸಿ ಬರುವೆನು, ಗುರುಪುತ್ರಿ!"

"ರಾಜಕುಮಾರಿಯಾದ ಶರ್ಮಿಷ್ಠೆಯ ಬಾಯಿಂದ ಇಂತಹ ಮಾತುಗಳನ್ನು ಕೇಳುತ್ತಿರುವೆನೇ?"

"ನಿಜ! ವೃಷಪರ್ವನ ಮಗಳಾದ ನಾನೇ ಹೇಳುತ್ತಿರುವೆನು, ದೇವಯಾನಿ!"

"ಹೊಗಳುಭಟ್ಟನ ಮಗಳ ದಾಸಿಯಾಗುವೆಯಾ, ರಾಜಕುಮಾರಿ! ದೀನನ ಮಗಳ ದಾಸಿಯಾಗಿರಲು ದಾನಿಯ ಮಗಳಾದ ರಾಜಕುಮಾರಿಯಾದ ಶರ್ಮಿಷ್ಠೆಯಿಂದ ಸಾಧ್ಯವೇ?"

ಇಂತಹ ತೀಕ್ಷ್ಣವಾದ ಚುಚ್ಚುಮಾತುಗಳನ್ನು ಕೇಳಿದರೂ

ಶರ್ಮಿಷ್ಠೆಯ ಮುಖವು ಕಾಂತಿಹೀನವಾಗಲಿಲ್ಲ. ಗಂಭೀರಳಾಗಿಯೇ ನಿಂತಿದ್ದು ಉತ್ತರವನ್ನಿತ್ತಳು :

"ಬಂಧು-ಬಾಂಧವರ ಮತ್ತು ದೇಶದ ಹಿತಕ್ಕಾಗಿ ಸ್ವಾರ್ಥತ್ಯಾಗವನ್ನು ಮಾಡಲೇಬೇಕು. ದೇವಯಾನಿ! ನಿನ್ನ ಸೇವೆಯನ್ನು ಮಾಡಬೇಕೆಂದು ನಿಶ್ಚಯಮಾಡಿಯೇ ಬಂದಿರುವೆನು."

ದೇವಯಾನಿಗೆ ಪರಮಾನಂದವಾಯಿತು. ಅವಳು ಶುಕ್ರರಿಗೆ ಹೇಳಿದಳು :

"ಅಪ್ಪಾ! ತಮ್ಮ ಬ್ರಾಹ್ಮೀಶಕ್ತಿಯಲ್ಲಿ ಇನ್ನು ನನಗೆ ಸಂಶಯವಿಲ್ಲ. ತಮ್ಮ ಬ್ರಹ್ಮಬಲವು ನಿಷ್ಪ್ರಯೋಜಕವೆಂದು ನಾನಿನ್ನು ಭಾವಿಸಲಾರೆ. ಇನ್ನು ಅಸುರಪುರಪ್ರವೇಶಕ್ಕೆ ನನ್ನ ಆತಂಕವೇನೂ ಇಲ್ಲ."

ಶುಕ್ರರಿಗೂ ಆನಂದವಾಯಿತು. 'ಮಗಳ ಆನಂದವೇ ತಮ್ಮ ಆನಂದ' ಎಂದಲ್ಲವೇ ಶುಕ್ರರ ಭಾವನೆ? ಎಲ್ಲರೂ ಪತ್ತನಾಭಿಮುಖವಾಗಿ ತೆರಳಿದರು. ಅಸುರರನ್ನು ಬಿಟ್ಟು ಹೋಗಬೇಕೆಂದಿದ್ದ ತಮ್ಮ ನಿರ್ಧಾರವನ್ನು ಪರಿತ್ಯಜಿಸಿ ಶಾಂತರಾಗಿ ಪುರಪ್ರವೇಶಮಾಡಿದ ಗುರುಗಳ ಮತ್ತು ಗುರುಪುತ್ರಿಯ ಮೇಲೆ ಅಸುರರೆಲ್ಲರೂ ಪುಷ್ಪವೃಷ್ಟಿಯನ್ನು ಸುರಿಸುತ್ತಾ ಅರಮನೆಗೆ ಕರೆದೊಯ್ದು, ಅಲ್ಲಿ ಅವರಿಬ್ಬರನ್ನೂ ಯಥೋಚಿತವಾಗಿ ಸತ್ಕರಿಸಿದರು."

ಳ೦ನೆಯ ಅಧ್ಯಾಯವು ಮುಗಿಯಿತು.

ಳ೧ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದೇವಯಾನೀ-ಶರ್ಮಿಷ್ಠೆಯರ ವನವಿಹಾರ : ರಾಜಾ ಯಯಾತಿಯ ಆಗಮನ : ಯಯಾತಿಯೊಡನೆ ದೇವಯಾನಿಯ ಸಂಭಾಷಣೆ : ಯಯಾತಿ-ದೇವಯಾನಿಯರ ವಿವಾಹ

(ವಿಧಿವಿಲಾಸದಂತೆ ರಾಜಕುಮಾರಿಯಾದ ಶರ್ಮಿಷ್ಠೆಯು ದೇವಯಾನಿಯ ದಾಸ್ಯವೃತ್ತಿಯನ್ನು ಪ್ರಾರಂಭಿಸಿದಳು. ತಂದೆಯು ಚಕ್ರವರ್ತಿಯಾಗಿದ್ದರೂ ತನ್ನ ದಾಸ್ಯಜೀವನದ ಬಿಡುಗಡೆಯ ಆಶೆಯು ಅವಳಿಗಿರಲಿಲ್ಲ. ಶರ್ಮಿಷ್ಠೆಗೆ ಇದೊಂದು ವ್ರತವೆಂದೇ ಹೇಳಬಹುದು. ಜೀವನಕ್ಕಾಗಿ ದಾಸ್ಯವೃತ್ತಿಯನ್ನು ಅವಲಂಬಿಸುವುದು ಸ್ವಾಭಾವಿಕ. ಆದರೆ ರಾಜಭೋಗಗಳನ್ನು

ಅನುಭವಿಸುತ್ತಿರುವಾಗ–ಬಂಧುಗಳ ಯೋಗಕ್ಷೇಮಗಳಿಗಾಗಿ ದೇಶದ ಉದ್ಧಾರಕ್ಕಾಗಿ ಎಲ್ಲವನ್ನೂ ತ್ಯಜಿಸಿ ಜೀವನಪರ್ಯಂತ ದಾಸ್ಯಜೀವನವನ್ನು ಸ್ವೇಚ್ಛೆಯಿಂದ ನಡೆಸುವುದೆಂದರೆ ಸಾಮಾನ್ಯವಲ್ಲ. ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಲ್ಲವನ್ನೂ ದೂರಮಾಡಿ ದೇವಯಾನಿಯ ಇಂಗಿತವನ್ನರಿತು ಶರ್ಮಿಷ್ಠೆಯು ಸೇವೆಮಾಡುತ್ತಿದ್ದಳು. ಅವಳು ತಪ್ಪು ಮಾಡಲಿಲ್ಲವೆಂದಲ್ಲ. ಆದರೆ ಅವಳು ಮಾಡಿದ ತಪ್ಪಿಗೆ ತಪಸ್ಸಿನ ರೂಪವಾದ ಶಿಕ್ಷೆಯು ಸಿಕ್ಕಿತು. ಈ ವಿಧವಾದ ತಪಸ್ಸಿನಿಂದಲೇ ಮುಂದೆ ಚಕ್ರವರ್ತಿಯ ತಾಯಿಯಾಗಲು ಸಾಧ್ಯವಾಯಿತು ಎಂದೂ ಹೇಳಬಹುದಾಗಿದೆ. )

"ಜನಮೇಜಯ! ಹಲವು ದಿನಗಳನಂತರ ವಸಂತಶ್ರೀಯೊಡನೆ ಕಲೆತು ಆನಂದವನ್ನನುಭವಿಸಲು ದೇವಯಾನಿಯು ಸಖಿಯಾದ ಶರ್ಮಿಷ್ಠೆಯೊಡನೆ ವನಪ್ರವೇಶಮಾಡಿದಳು. ಸಾವಿರ ಮಂದಿ ಸೇವಕಿಯರು ಶರ್ಮಿಷ್ಠೆಯನ್ನು ಅನುಸರಿಸಿದರು. ಅಲ್ಲಿ ನಡೆಯಬೇಕಾಗಿದ್ದ ಆಟ-ಪಾಟಗಳಿಗೆಲ್ಲಾ ದೇವಯಾನಿಯೇ ನಿರ್ದೇಶಕಿ. ಮಾವು, ಕಿತ್ತಳೆ, ದ್ರಾಕ್ಷಿ, ನೇರಳೆ, ಬಾಳೆ, ಹಲಸು, ದಾಳಿಂಬೆ, ಮಾದಲ ಮುಂತಾದ ಫಲವೃಕ್ಷಗಳಿಂದಲೂ–ಹಲವು ಬಣ್ಣದ ಸೇವಂತಿಗೆ, ಜಾಜಿ, ಪುನ್ನಾಗ, ಕೇತಕೀ, ಮಲ್ಲಿಗೆ, ಚಂಪಕ, ಸೌಗಂಧಿಕಾ, ಸುಗಂಧರಾಜಾದಿ ಪುಷ್ಪಲತೆಗಳಿಂದಲೂ ಆ ವನವು ನಿಬಿಡ ವಾಗಿತ್ತು. ದೇವಯಾನಿಯ ನಿರ್ದೇಶನದಂತೆ ನೃತ್ಯ-ಗಾಯನಗಳು ಪ್ರಾರಂಭ ವಾದುವು. ವನದ ನಾನಾಭಾಗಗಳಲ್ಲಿ ಸಖಿಯರೆಲ್ಲರೂ ಗುಂಪು-ಗುಂಪಾಗಿ ಸೇರಿಕೊಂಡು ನಾಟ್ಯ-ಗಾಯನಗಳನ್ನು ಪ್ರಾರಂಭಿಸಿದರು. ದೇವಯಾನಿಯೂ ನರ್ತಕಿಯಾಗಿ ಶರ್ಮಿಷ್ಠೆಯನ್ನು ಗಾನಮಾಡಲು ಹೇಳಿದಳು. ಗಾಯನ ದೊಡನೆ ತಾಳ-ಮೃದಂಗ-ವೀಣಾವಾದನಗಳೂ ಸೇರಿದುವು. ದೇವ ಯಾನಿಯು ಮನಃಪೂರ್ತಿಯಾಗಿ ನರ್ತಿಸಿದಳು. ಸ್ವಲ್ಪಕಾಲ ವಿಶ್ರಾಂತಿಪಡೆ ಯಲು ಅಲ್ಲಿಯೇ ಸರೋವರವೊಂದರ ಸಮೀಪದಲ್ಲಿ ಹಂಸತೂಲಿಕಾತಲ್ಪ ವೇರ್ಪಟ್ಟಿತು. ಆಯಾಸಪರಿಹಾರಕ್ಕಾಗಿ ತಂದಿದ್ದ ವನಪುಷ್ಪಗಳ ಮಧುವನ್ನು ಎಲ್ಲರೂ ಯಥೇಚ್ಛವಾಗಿ ಸೇವಿಸಿದರು. ಹಂಸತೂಲಿಕೆಯಲ್ಲಿ ಮಲಗಿದ್ದ ದೇವಯಾನಿಯ ಕಾಲುಗಳನ್ನು ಶರ್ಮಿಷ್ಠೆಯು ಒತ್ತುತ್ತಿದ್ದಳು.

ಆ ಸಮಯಕ್ಕೆ ಸರಿಯಾಗಿ ಬೇಟೆಯಾಡಲು ಬಂದಿದ್ದ ನಹುಷನ ಮಗ

ನಾದ ಯಯಾತಿಯು ಆಯಾಸಗೊಂಡವನಾಗಿ ನೀರುಕುಡಿಯಲು ಅದೇ ವನವನ್ನು ಪ್ರವೇಶಿಸಿದನು. ಅವನು ದೇವಯಾನಿಯನ್ನು ಹಿಂದೊಮ್ಮೆ ನೋಡಿದ್ದನಾದರೂ ಅಂದಿನ ಅವಳ ಮುಖಕಾಂತಿಗೂ ಇಂದಿನ ಮುಖ ಕಾಂತಿಗೂ ಅಸಾಧಾರಣವಾದ ವ್ಯತ್ಯಾಸವಿತ್ತು. ಅಂದು ಅವಳ ಮುಖದಲ್ಲಿ ಕಾಂತಿಯೆಂಬುದೇ ಇರಲಿಲ್ಲ ; ಜೀವನದಲ್ಲಿ ಜುಗುಪ್ಸೆಯಾಗಿತ್ತು. ಇಂದು



ದೇವಯಾನಿಯು ಸಾಕ್ಷಾತ್ ಚಕ್ರವರ್ತಿನಿಯಂತೆಯೇ ಕಾಣುತ್ತಿದ್ದಳಲ್ಲವೇ? ಈ ಕಾರಣದಿಂದ ರಾಜನು ಅಲ್ಲಿದ್ದ ಇಬ್ಬರು ನಾರೀಮಣಿಯರನ್ನೂ ಪ್ರಶ್ನಿಸಿದನು:

"ಈ ವನದಲ್ಲಿ ವಿಶ್ರಾಂತಿಯನ್ನನುಭವಿಸುತ್ತಿರುವ ನೀವಾರು? ನಿಮ್ಮ

ವಂಶವಾವುದು? ಇಲ್ಲಿರುವ ಅಸಂಖ್ಯಾತರಾದ ದಾಸಿಯರೂ ನಿಮ್ಮಿಬ್ಬರ ಸೇವಕಿಯರು ತಾನೇ?"

ರಾಜನು ಬಂದ ಸಮಯದಲ್ಲಿ ಮಲಗಿದ್ದ ದೇವಯಾನಿಯು ಮೇಲೆದ್ದು ಕುಳಿತಿದ್ದಳು. ಶರ್ಮಿಷ್ಠೆಯೂ ಪಕ್ಕಕ್ಕೆ ಸರಿದು ನಿಂತಿದ್ದಳು.

ದೇವಯಾನಿಯು ರಾಜನಿಗೆ ಹೇಳಿದಳು :

"ಮಹಾತ್ಮನೇ! ನಾನು ಅಸುರಗುರುಗಳಾದ ಶುಕ್ರರ ಮಗಳು. ಈ ನನ್ನ ಸಖಿಯು ವೃಷಪರ್ವನ ಮಗಳಾದ ಶರ್ಮಿಷ್ಠೆಯು. ಇವಳು ಸಖಿಯು ಮಾತ್ರವೇ ಅಲ್ಲದೇ ನಾನು ಹೋದಲ್ಲಿಗೆ ನನ್ನ ಹಿಂದೆ ಬರುವ ದಾಸಿಯೂ ಆಗಿರುವಳು."

"ದೈತ್ಯರಾಜನ ಮಗಳು ನಿನ್ನ ದಾಸಿಯೇ? ಈ ವಾರ್ತೆಯು ನನಗೆ ಬಹಳ ಆಶ್ಚರ್ಯವನ್ನುಂಟುಮಾಡಿದೆ. ಕಾರಣವನ್ನು ಕೇಳಬಹುದೇ?"

"ಮಹಾರಾಜ! ಎಲ್ಲವೂ ವಿಧಿವಿಲಾಸಕ್ಕೆ ಸಂಬಂಧಿಸಿದುವು. ಆಶ್ಚರ್ಯಪಡಬೇಕಾದ ಕಾರಣವೇನೂ ಇಲ್ಲ. ಅದಿರಲಿ. ನನ್ನ ಒಂದೆರಡು ಪ್ರಶ್ನೆಗಳಿಗೆ ನೀನು ಉತ್ತರವೀಯಬಹುದಲ್ಲವೇ? ನೀನು ಯಾರು? ಎಲ್ಲಿಂದ ಬಂದೆ? ಯಾರ ಮಗನು? ನಿನ್ನ ವೇಷ-ಭೂಷಣಗಳು, ನಡೆ-ನುಡಿಗಳು, ಮುಖಲಕ್ಷಣ—ಇವುಗಳಿಂದ ರಾಜನಂತೆ ತೋರುವೆ. ಆದರೆ ಬ್ರಾಹ್ಮೀವಾಣಿಯನ್ನು ( ವಿಶುದ್ಧ ಸಂಸ್ಕೃತವಾಣಿಯನ್ನು ) ಆಡುತ್ತಿರುವೆ."

"ನಿನ್ನ ಊಹೆಯು ನಿಜ. ನಾನೊಬ್ಬ ರಾಜನ ಮಗ. ನನ್ನನ್ನು ಯಯಾತಿಯೆಂದು ಕರೆಯುತ್ತಾರೆ. ನಾನು ಹಲವಾರು ದೇಶಗಳಿಗೆ ರಾಜನಾಗಿದ್ದೇನೆ. ನಾನು ಬ್ರಹ್ಮಚರ್ಯದಲ್ಲಿದ್ದು, ಸಾಂಗೋಪಾಂಗವಾಗಿ ವೇದಾಭ್ಯಾಸವನ್ನೂ ಮಾಡಿರುವೆನು."

"ನೀನಿಲ್ಲಿ ಬಂದುದೇಕೆ? ಕಮಲವನ್ನು ಆರಿಸಲೆಂದೋ ಅಥವಾ ಬೇಟೆಗಾಗಿ ಬಂದೆಯೋ?"

"ಬೇಟೆಯಾಡಲು ಬಂದೆನು. ಬೇಟೆಯಾಡಿ ಬಳಲಿ ಬೇಸತ್ತೆನಾದ ಕಾರಣ ನೀರುಕುಡಿಯಲು ಸರೋವರವನ್ನು ಹುಡುಕುತ್ತಾ ಇಲ್ಲಿಗೆ ಬಂದಿರುವೆನು. ಇನ್ನು ನೀನು ಅನುಜ್ಞೆಯನ್ನಿತ್ತರೆ ಹೊರಡುವೆನು."

ದೇವಯಾನಿಯು ಒಡನೆಯೇ ಮೇಲೆದ್ದಳು.

"ಮಹಾರಾಜ! ನಾನು ಎರಡು ಸಾವಿರ ಸಖಿಯರೊಡನೆ ಮತ್ತು ದಾಸಿಯಾದ ಶರ್ಮಿಷ್ಠೆಯಿಂದೊಡಗೂಡಿ ನಿನ್ನ ಆಜ್ಞೆಯನ್ನು ಪರಿಪಾಲಿಸಲು ಸಿದ್ಧಳಾಗಿರುವೆನು. ಇನ್ನು ಮುಂದೆ ನೀನು ನನಗೆ ಸಖನು ಮಾತ್ರವಲ್ಲದೇ ಪ್ರಾಣೇಶ್ವರನೂ ಆಗಿರುತ್ತೀಯೆ."

ದೇವಯಾನಿಯ ಮಾತುಗಳನ್ನು ಕೇಳಿದೊಡನೆಯೇ ರಾಜನಿಗೆ ರೋಮಾಂಚನವಾಯಿತು. ಒಂದೆರಡು ಹೆಜ್ಜೆಗಳು ಹಿಂದೆ ಸರಿದು ಹೇಳಿದನು:

"ಬ್ರಾಹ್ಮಣಪುತ್ರಿಯೇ! ನಿನ್ನನ್ನು ಪರಿಗ್ರಹಿಸಲು ನಾನು ಸರ್ವಥಾ ಯೋಗ್ಯನಲ್ಲ. ನೀನು ಶುಕ್ರರ ಮಗಳಾಗಿರುವುದರಿಂದ ನನಗಿಂತಲೂ ಸರ್ವಥಾ ಉತ್ತಮಳು. ನಿನ್ನ ತಂದೆಯವರು ನನಗೆ ಮಾತ್ರವಲ್ಲ; ನನಗಿಂತಲೂ ಶ್ರೇಷ್ಠನಾದ ಚಕ್ರವರ್ತಿಗೂ ನಿನ್ನನ್ನು ಕೊಟ್ಟು ಮದುವೆಯನ್ನು ಮಾಡಲಾರರು."

"ಮಹಾರಾಜ! ಶಂಕಿಸಬೇಡ. ಬ್ರಾಹ್ಮಣ-ಕ್ಷತ್ರಿಯರಲ್ಲಿ ಪರಸ್ಪರ ವಿವಾಹಗಳು ಈಗಾಗಲೇ ಹಲವಾರು ಕಡೆಗಳಲ್ಲಿ ನಡೆದುಹೋಗಿವೆ. ಅದೂ ಅಲ್ಲದೇ ನೀನು ರಾಜರ್ಷಿಯ ಮಗನೂ ಮತ್ತು ರಾಜರ್ಷಿಯೂ ಆಗಿರುವೆ. ಹೀಗಿರದಿದ್ದರೆ ನನ್ನ ಮನಸ್ಸು ನಿನ್ನಲ್ಲಿ ಅನುರಕ್ತವೇ ಆಗುತ್ತಿರಲಿಲ್ಲ. ಈ ಕಾರಣದಿಂದ ನೀನು ನನ್ನನ್ನು ಮದುವೆಯಾಗಲು ಹಿಂಜರಿಯಬೇಡ."

"ಆದರೂ ವರಾಂಗನೆಯೇ!

**ಏಕದೇಹೋದ್ಭವಾ ವರ್ಣಾಶ್ಚತ್ವಾರೋಽಪಿ ವರಾಙ್ಗನೇ ।**
**ಪೃಥಗ್ಧರ್ಮಾಃ ಪೃಥಕ್ಶೌಚಾಸ್ತೇಷಾಂ ತು ಬ್ರಾಹ್ಮಣೋ ವರಃ ॥೨೦॥**

ನಾಲ್ಕು ವರ್ಣಗಳೂ ಪರಮಪುರುಷನ ಶರೀರದಿಂದಲೇ ಉತ್ಪನ್ನವಾದುವೆಂಬುದು ನಿಶ್ಚಯ. ಆದರೆ ಅವರವರ ಗುಣ-ಕರ್ಮಗಳು ಬೇರೆ ಬೇರೆಯಾಗಿರುತ್ತವೆ ಮತ್ತು ಶೌಚಾಚಾರಗಳೂ ವ್ಯತ್ಯಾಸವಾಗಿರುತ್ತವೆ. ಗುಣ-ಕರ್ಮಗಳಿಗೆ ಅನುಸಾರವಾಗಿ ಬ್ರಾಹ್ಮಣವರ್ಣವು ಉಳಿದ ವರ್ಣಗಳಿಗಿಂತಲೂ ಶ್ರೇಷ್ಠವೆಂಬುದರಲ್ಲಿ ಯಾವ ಸಂಶಯವೂ ಇಲ್ಲ."

“ಮಹಾರಾಜ! ನಿನ್ನನ್ನು ನಾನು ಮದುವೆಯಾಗಲು ಮುಖ್ಯ ಕಾರಣವೂ ಮತ್ತೊಂದಿದೆ. ನನ್ನ ಪಾಣಿಗ್ರಹಣವನ್ನು ಮೊದಲು ಮಾಡಿದವನು ನೀನೇ ಅಲ್ಲವೇ? ಪಾಣಿಗ್ರಹಣಕ್ಕೆ ಕಾರಣವು ಯಾವುದಾದರೂ ಇರಬಹುದು. ಆದರೆ ರಾಜರ್ಷಿಪುತ್ರನೂ, ರಾಜರ್ಷಿಯೂ ಆಗಿರುವ ನಿನ್ನಿಂದ ಪರಿಗೃಹೀತವಾದ ಪಾಣಿಯನ್ನು ಮತ್ತಾರು ತಾನೇ ಪರಿಗ್ರಹಿಸಲು ಸಾಧ್ಯವಾಗುವುದು?”

ಯಯಾತಿಯು ಹಿಂದೆ ನಡೆದುದನ್ನು ಕ್ಷಣಕಾಲ ಯೋಚಿಸಿ ಹೇಳಿದನು:

“ನೀನು ಹೇಳುವುದು ನಿಜ. ಆದರೆ ಬ್ರಾಹ್ಮಣನನ್ನು ಕೆಣಕಿ ಕೋಪ ಗೊಳಿಸಬಾರದೆಂದು ಹಿರಿಯರು ಹೇಳುವರು.

**ಕ್ರುದ್ಧಾದಾಶೀವಿಷಾತ್ಸರ್ಪಾಜ್ಜ್ವಲನಾತ್ಸರ್ವತೋಮುಖಾತ್ ।**
**ದುರಾಧರ್ಷತರೋ ವಿಪ್ರೋ ಜ್ಞೇಯಃ ಪುಂಸಾ ವಿಜಾನತಾ ॥೨೩॥**

ಕೋಪಗೊಂಡ ವಿಷದ ಹಾವಿನೊಡನೆ ಸರಸವಾಡಬಹುದು ; ಹಲ್ಲಿ ನಲ್ಲಿ ವಿಷವಿರುವ ಹಾವಿಗಿಂತಲೂ ಸರ್ವತೋಮುಖವಾಗಿ ಉರಿಯುತ್ತಿರುವ ಬೆಂಕಿಗಿಂತಲೂ ಬ್ರಾಹ್ಮಣನು ಕೆಣಕಲು ಸಾಧ್ಯವಿಲ್ಲದವನೆಂಬುದನ್ನು ವಿವೇ ಕಿಯು ಅರಿತುಕೊಳ್ಳಬೇಕು.”

“ಬ್ರಾಹ್ಮಣನ ವಿಷಯದಲ್ಲಿ ಹೀಗೇಕೆ ಹೇಳುವೆ, ಮಹಾರಾಜ! ಅಗ್ನಿ ಗಿಂತಲೂ–ವಿಷಸರ್ಪಕ್ಕಿಂತಲೂ ಬ್ರಾಹ್ಮಣನು ಕ್ರೂರಿಯೇ?”

“ಸುಂದರಿ! ಬ್ರಾಹ್ಮಣನೆಂದಿಗೂ ಕ್ರೂರಿಯಲ್ಲ. ಸತ್ತ್ವಗುಣಸಂಪನ್ನನು. ಸತ್ತ್ವಗುಣವಿಹೀನನು ಬ್ರಾಹ್ಮಣನಾಗಲಾರನು. ಆದರೆ ಬ್ರಾಹ್ಮಣನ ಕೋಪವು ಮಹಾಕ್ರೂರವಾದುದು.

**ಏಕಮಾಶೀವಿಷೋ ಹನ್ತಿ ಶಸ್ತ್ರೇಣೈಕಶ್ಚ ವಧ್ಯತೇ ।**
**ಹನ್ತಿ ವಿಪ್ರಃ ಸರಾಷ್ಟ್ರಾಣಿ ಪುರಾಣ್ಯಪಿ ಹಿ ಕೋಪಿತಃ ॥೨೫॥**

ವಿಷಸರ್ಪವು ಕಚ್ಚಿ ಒಬ್ಬನನ್ನು ಮಾತ್ರವೇ ಸಾಯಿಸಬಲ್ಲುದು. ಆಯುಧದಿಂದ ಒಮ್ಮೆ ಒಬ್ಬನನ್ನು ಮಾತ್ರವೇ ಸಾಯಿಸಬಹುದು. ಆದರೆ ಕೋಪಗೊಂಡ ಬ್ರಾಹ್ಮಣನು ಒಬ್ಬನನ್ನು ಮಾತ್ರವಲ್ಲ ; ಅವನ ವಂಶ, ಗ್ರಾಮ, ಪಟ್ಟಣ, ದೇಶಗಳನ್ನೂ ಧ್ವಂಸಮಾಡಬಲ್ಲನು. ಈ ಕಾರಣದಿಂದ

ಬ್ರಾಹ್ಮಣನೊಡನೆ ಸೆಣೆಸಾಟವು ಕೂಡದೆಂಬ ನೀತಿಯು ಯೋಗ್ಯವಾಗಿದೆಯಲ್ಲವೇ? ನಿನ್ನನ್ನು ಮದುವೆಯಾಗಿ ಶುಕ್ರರ ಕೋಪಕ್ಕೆ ಪಾತ್ರನಾಗಿ ರಾಜ್ಯ-ಕೋಶಾದಿಗಳನ್ನು ಕಳೆದುಕೊಳ್ಳಲು ಸಿದ್ಧನಾಗಿಲ್ಲ. ದೇವಯಾನಿ! ನಿನ್ನ ತಂದೆಯವರು ದಾನರೂಪವಾಗಿ ಕೊಡದೇ ನಿನ್ನನ್ನು ನಾನೆಂದೂ ಪರಿಗ್ರಹಿಸಲಾರೆನು."

"ಮಹಾರಾಜ! ನಾನೇ ನಿನ್ನನ್ನು ವರಿಸಿದ್ದೇನೆ. ನನ್ನ ತಂದೆಯವರು ಮದುವೆಮಾಡಿಕೊಟ್ಟರೆ ಪಾಣಿಗ್ರಹಣಮಾಡಿಕೊಳ್ಳುವೆಯಲ್ಲವೇ? ಅದಕ್ಕಾಗಿ ಸ್ವಲ್ಪವೂ ಯೋಚಿಸಬೇಡ. ಮೇಲಾಗಿ ನೀನಾಗಿ ನನ್ನನ್ನು ವರಿಸಲು ಬಂದಿಲ್ಲವಾದ್ದರಿಂದ ಯಾವ ದೋಷವೂ ನಿನಗುಂಟಾಗುವುದಿಲ್ಲ."

ಎಂದು ಹೇಳಿ ಒಡನೆಯೇ ತಂದೆಯನ್ನು ಕರೆತರಲು ಸೇವಕಿಯೊಬ್ಬಳನ್ನು ನಗರಿಗೆ ಕಳುಹಿಸಿದಳು. ಸೇವಕಿಯು ಶುಕ್ರರಿಗೆ ಎಲ್ಲವನ್ನೂ ವಿವರವಾಗಿ ತಿಳಿಸಿದಳು. ಶುಕ್ರರು ಸೇವಕಿಯೊಡನೆ ಅರಣ್ಯಕ್ಕೂ ಬಂದರು. ದೈತ್ಯಗುರುಗಳ ಆಗಮನವನ್ನು ದೂರದಿಂದಲೇ ನೋಡಿದ ಯಯಾತಿಯು ನಮ್ರಭಾವದಿಂದ ಕೈಜೋಡಿಸಿ ನಿಂತನು. ಶುಕ್ರರು ಸಮೀಪಕ್ಕೆ ಬಂದೊಡನೆಯೇ ಸಾಷ್ಟಾಂಗಪ್ರಣಾಮಮಾಡಿ, ಯಥೋಚಿತವಾಗಿ ಪೂಜೆಯನ್ನೂ ಸಲ್ಲಿಸಿ, ಅವರ ನಿರ್ದೇಶನವೇನೆಂಬುದನ್ನು ನಿರೀಕ್ಷಿಸುತ್ತಾ ನಿಂತನು.

ಈ ಮಧ್ಯದಲ್ಲಿ ದೇವಯಾನಿಯು ತಂದೆಯನ್ನು ಕುರಿತು–'ಅಪ್ಪಾ!' ಎಂದಳು. ಯಯಾತಿಯೊಡನೆ ಏನೋ ಹೇಳಬೇಕೆಂದಿದ್ದ ಶುಕ್ರರು ಕೂಡಲೇ ದೇವಯಾನಿಯ ಕಡೆಗೆ ತಿರುಗಿ–'ಏನಮ್ಮಾ?'–ಎಂದರು.

"ಇವನು ರಾಜರ್ಷಿಯಾದ ನಹುಷನ ಮಗ ಯಯಾತಿಯಪ್ಪಾ! ನನ್ನ ಕಷ್ಟಕಾಲದಲ್ಲಿ ಇವನೇ ನನ್ನ ಕೈಹಿಡಿದು ಮೇಲೆತ್ತಿದವನು. ಆದುದರಿಂದ ನಾನು ಇವನನ್ನೇ ಮದುವೆಯಾಗಲು ನಿಶ್ಚಯಿಸಿರುವೆನಪ್ಪಾ!"

'ನಿನ್ನಿಚ್ಛೆಯಿದ್ದಂತಾಗಲಮ್ಮಾ!' ಎಂದು ಹೇಳಿ ಯಯಾತಿಗೆ ಹೇಳಿದರು:

"ಮಹಾರಾಜ! ನನ್ನ ಮಗಳು ನಿನ್ನನ್ನೇ ವರಿಸಲು ನಿಶ್ಚಯಿಸಿರುತ್ತಾಳಾದ್ದರಿಂದ ಇವಳನ್ನು ನಿನಗೆ ಕೊಟ್ಟು ವಿವಾಹಮಾಡುವೆನು. ಇವಳನ್ನು ನಿನ್ನ ಪಟ್ಟಮಹಿಷಿಯನ್ನಾಗಿ ಸ್ವೀಕರಿಸು."

“ಬ್ರಾಹ್ಮಣೋತ್ತಮರೇ! ತಮ್ಮ ಮಾತನ್ನು ನಿರಾಕರಿಸುವ ಸಾಮರ್ಥ್ಯವು ನನ್ನಲ್ಲಿಲ್ಲ. ಆದರೆ ನನಗೆ ವರವೊಂದನ್ನು ಮಾತ್ರ ತಾವು ದಯ ಪಾಲಿಸಬೇಕು.”

“ನನ್ನ ಮಗಳ ಹಿತಚಿಂತನೆಯ ಕಾರಣದಿಂದ ಯಾವ ವರವನ್ನು ಬೇಕಾದರೂ ಕೊಡುವೆನು. ಸಂಕೋಚವಿಲ್ಲದೆಯೇ ಕೇಳು, ಮಹಾರಾಜ!”

“ತಮ್ಮ ಮಗಳನ್ನು ಮದುವೆಯಾಗುವುದರಿಂದ ಶಾಸ್ತ್ರವಿಹಿತವಲ್ಲದ ವಿಲೋಮವಿವಾಹವು ( ವರ್ಣಸಂಕರದೋಷವು ) ನನಗುಂಟಾಗಬಾರದು ಮತ್ತು ಇದರಿಂದ ನಾನು ಲೋಕದಲ್ಲಿ ಧರ್ಮಹೀನನಾಗಬಾರದು.”

“ಯಯಾತಿಯೇ! ನಿನ್ನ ಅಪೇಕ್ಷೆಯಂತೆಯೇ–ಕ್ಷತ್ರಿಯನು ಬ್ರಾಹ್ಮಣ ಯುವತಿಯನ್ನು ವರಿಸುವುದರಿಂದುಂಟಾಗುವ ದೋಷವನ್ನು–ನಾನು ನನ್ನ ತಪಃಶಕ್ತಿಯಿಂದ ಪರಿಹರಿಸುವೆನು. ಇದರಿಂದ ನಿನ್ನನ್ನು ಧರ್ಮಹೀನನೆಂದು ಯಾರೂ ಹೇಳಲಾರರು. ನನ್ನ ಮಗಳನ್ನು ಧರ್ಮಪತ್ನಿಯನ್ನಾಗಿ ಸ್ವೀಕರಿಸು. ಅವಳೊಡನೆ ನೀನು ಸಕಲವಾದ ಸುಖೋಪಭೋಗಗಳನ್ನೂ ಪಡೆಯ ಬಹುದು. ಎರಡನೆಯದಾಗಿ : ದೇವಯಾನಿಯ ಸಖಿಯಾದ ಶರ್ಮಿಷ್ಠೆ ಯನ್ನೂ ಸಾಧಾರಣಸ್ತ್ರೀಯೆಂದು ಭಾವಿಸಬೇಡ. ಇವಳು ರಾಜಕುಮಾರಿಯು, ಅಂತೆಯೇ ಇವಳನ್ನೂ ನೀನು ಗೌರವಿಸಬೇಕು. ಆದರೆ ಯಾವಾಗಲೂ ಯಾವ ಕಾರಣದಿಂದಲೂ ಇವಳೊಡನೆ ಸಮಾಗಮವನ್ನು ಮಾತ್ರ ಮಾಡಬಾರದು.”

ಯಯಾತಿಯು ಶುಕ್ರರ ಮಾತಿಗೆ ಸಮ್ಮತಿಸಿದನು.

ವೃಷಪರ್ವನ ಪಟ್ಟಣದಲ್ಲಿ ಸಂಭ್ರಮದಿಂದ ದೇವಯಾನೀ-ಯಯಾತಿ ಯರ ವಿವಾಹಮಹೋತ್ಸವವು ಶುಭಮುಹೂರ್ತದಲ್ಲಿ ಶಾಸ್ತ್ರೋಕ್ತವಾಗಿ ನಡೆಯಿತು. ಶುಕ್ರರು ಅಳಿಯನಿಗೆ ಯಥೇಚ್ಛವಾಗಿ ಐಶ್ವರ್ಯವನ್ನು ಬಳುವಳಿ ಯಾಗಿ ಕೊಟ್ಟರು. ಎರಡು ಸಾವಿರ ಸೇವಕಿಯರಿಂದಲೂ–ಶರ್ಮಿಷ್ಠೆ ಯಿಂದಲೂ ಪರಿವೃತಳಾದ ದೇವಯಾನಿಯೊಡನೆ ಯಯಾತಿಯು ಶುಕ್ರರ ಆಶೀರ್ವಾದವನ್ನು ಪಡೆದು ತನ್ನ ಪಟ್ಟಣಕ್ಕೆ ಪ್ರಯಾಣಮಾಡಿದನು.

(ಕಚನ ಶಾಪವೇನೆಂಬುದನ್ನು ನಾವಿಲ್ಲಿ ಸ್ಮರಿಸಬಹುದಾಗಿದೆ. ಋಷಿ ಕುಮಾರನಾರೂ ದೇವಯಾನಿಯನ್ನು ಮದುವೆಯಾಗುವುದಿಲ್ಲವೆಂದು ಕಚನು

ಶಾಪವನ್ನಿತ್ತನು. ಅದರಂತೆಯೇ ಬ್ರಾಹ್ಮಣಿಯು ಕ್ಷತ್ರಿಯನನ್ನು ಮದುವೆಯಾಗಬೇಕಾಯಿತು. ಮಹಾಪುರುಷರ ಶಾಪಾನುಗ್ರಹಗಳು ಜೀವಿತ ವನ್ನೇ ಮಾರ್ಪಾಡುಮಾಡಬಲ್ಲವೆಂಬುದಕ್ಕೆ ಇದೊಂದು ಉತ್ತಮನಿದರ್ಶನ ವಾಗಿದೆ. )

ಳಗನೆಯ ಅಧ್ಯಾಯವು ಮುಗಿಯಿತು.

ಳ೨ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದೇವಯಾನಿಗೆ ಯಯಾತಿಯಿಂದ ಸಂತಾನಪ್ರಾಪ್ತಿ: ಶರ್ಮಿಷ್ಠಾ-ಯಯಾತಿಯರ ರಹಸ್ಯಪ್ರಣಯ : ಪುತ್ರಜನನ

"ಪಾರಿಕ್ಷಿತ! ಶಚೀಸಮೇತನಾದ ಇಂದ್ರನನ್ನು ಹೋಲುತ್ತಿದ್ದ ಯಯಾತಿಯು ದೇವಯಾನಿಯಿಂದೊಡಗೂಡಿ ಚತುರಂಗಬಲಸಮೇತನಾಗಿ ತಾಳ-ಮೇಳ-ವಾದ್ಯಗಳೊಡನೆ ತನ್ನ ಪಟ್ಟಣವನ್ನು ಪ್ರವೇಶಿಸಿದನು. ನಗರವೆಲ್ಲವೂ ತಳಿರು-ತೋರಣಗಳಿಂದ ಅಲಂಕೃತವಾಗಿತ್ತು. ಗಗನಚುಂಬಿಗಳಾದ ಸೌಧ ಗಳಿಂದ ಕಮಲವದನೆಯರು ಹೊರಬಂದು ರಾಜನಿಗೆ ಆರತಿಯನ್ನು ಎತ್ತುತ್ತಿದ್ದರು. ಅಮಾತ್ಯಶ್ರೇಷ್ಠರು ಪೂರ್ಣಕುಂಭವನ್ನು ಹೊತ್ತಿದ್ದ ಪುರೋಹಿತ ಪುರಸ್ಸರರಾಗಿ ಅರಮನೆಯಿಂದ ಹೊರಬಂದು ಪತ್ನೀಸಮೇತನಾಗಿದ್ದ ರಾಜ ನನ್ನು ಸ್ವಾಗತಿಸಿದರು. ಯಯಾತಿ-ದೇವಯಾನಿಯರು ಶುಭಲಗ್ನದಲ್ಲಿ ಅರಮನೆಯನ್ನು ಪ್ರವೇಶಿಸಿದರು. ಪುರೋಹಿತರು ನೂತನ ವಧೂ-ವರರಿಗೆ ಸ್ವಸ್ತಿವಾಚನಮಾಡಿ, ಫಲ-ತಾಂಬೂಲಗಳನ್ನು ಸ್ವೀಕರಿಸಿ ತಮ್ಮ-ತಮ್ಮ ಮನೆಗಳಿಗೆ ಹಿಂದಿರುಗಿದರು.

ರಾಜನ ಅಂತಃಪುರವು ನೂತನವಧೂರತ್ನದಿಂದ ಕಂಗೊಳಿಸಿತು. ದೇವ ಯಾನಿಯ ಇಚ್ಛೆಯಂತೆಯೇ ಯಯಾತಿಯು ವೃಷಪರ್ವನ ಮಗಳಾದ ಶರ್ಮಿಷ್ಠೆಗೆ ಅರಮನೆಗೆ ಸೇರಿದ ಅಶೋಕವನದ ಹತ್ತಿರ ಸುಂದರವಾದ ಸೌಧ ವೊಂದನ್ನು ನಿರ್ಮಿಸಿದನು. ಶರ್ಮಿಷ್ಠೆಯು ಸಾವಿರಾರು ದಾಸಿಯರ ಸಮೇತ ಳಾಗಿ ಅಲ್ಲಿ ಸುಖದಿಂದ ವಾಸಮಾಡುತ್ತಿದ್ದಳು. ಅವಳ ಉಡುಗೆ-ತೊಡುಗೆ-ಊಟ-ಉಪಚಾರಗಳೆಲ್ಲವೂ ಸುವ್ಯವಸ್ಥೆಯಿಂದಲೇ ನಡೆಯುತ್ತಿತ್ತು.

ದೇವಯಾನಿಗೂ ಸಹ ಶರ್ಮಿಷ್ಠೆಯ ಅಹಂಕಾರವನ್ನು ಮುರಿಯ

ಬೇಕೆಂಬ ಛಲವಿತ್ತೇ ಹೊರತು, ಅವಳಿಗೆ ಕಿರುಕುಳವನ್ನು ಕೊಡಬೇಕೆಂಬ ಭಾವನೆಯಿರಲಿಲ್ಲ. ಆದರೆ ಯಯಾತಿಗೆ ಮಾತ್ರ ಶರ್ಮಿಷ್ಠೆಯನ್ನು ನೋಡುವ ಅವಕಾಶವೂ ಇರಲಿಲ್ಲ.

ಯಯಾತಿಯು ದೇವಯಾನಿಯೊಡನೆ ಅನೇಕವರ್ಷಗಳ ಕಾಲ ಸುಖ ದಿಂದ ಕಳೆದನು. ಅವರ ದಾಂಪತ್ಯಜೀವನವು ದೇವತೆಗಳಿಗೂ ಕೂಡ ಮಾತ್ಸರ್ಯವನ್ನುಂಟುಮಾಡುವಂತಿತ್ತು. ದಾಂಪತ್ಯಜೀವನದ ಫಲವೆಂದರೆ ಪುತ್ರಪ್ರಾಪ್ತಿಯೇ ಅಲ್ಲವೇ? ಕೆಲವು ವರ್ಷಗಳು ಕಳೆದನಂತರ ದೇವ ಯಾನಿಯು ಗರ್ಭವತಿಯಾದಳು. ಶುಭಮುಹೂರ್ತದಲ್ಲಿ ಸರ್ವಾಂಗ ಸುಂದರವಾದ ಗಂಡುಮಗುವನ್ನೂ ಪ್ರಸವಿಸಿದಳು.

ಸಾಮಾನ್ಯವಾಗಿ ಪುರುಷರೇ ಆಗಲೀ, ಸ್ತ್ರೀಯರೇ ಆಗಲೀ–ಇಬ್ಬರು ಜೊತೆಗಾರರಲ್ಲಿ ಒಬ್ಬರಿಗೆ ಮದುವೆಯಾದರೆ ಅಥವಾ ಮಕ್ಕಳಾದರೆ ಮತ್ತೊಬ್ಬರಿಗೆ ತಮಗೂ ಮದುವೆಯಾಗಲಿಲ್ಲವಲ್ಲಾ ಅಥವಾ ಮಕ್ಕಳಾಗಲಿಲ್ಲ ವಲ್ಲಾ–ಎಂಬ ಚಿಂತೆಯುಂಟಾಗುವುದು ಸಹಜ.

ತನ್ನ ಜೊತೆಗಾತಿಯಾದ ದೇವಯಾನಿಗೆ ಮದುವೆಯಾಗಿ ಮಕ್ಕಳಾದ ನಂತರವೂ ತಾನು ಮದುವೆಯೇ ಇಲ್ಲದೇ ಇರುವೆನೆಂಬ ಚಿಂತೆಯು ಶರ್ಮಿಷ್ಠೆಗುಂಟಾದುದರಲ್ಲಿ ಆಶ್ಚರ್ಯವೇನೂ ಇಲ್ಲ. ಒಂದು ಸಾವಿರವರ್ಷ ಗಳು ಕಳೆದ ನಂತರ ಋತುಸ್ನಾನಮಾಡಿದ ಶರ್ಮಿಷ್ಠೆಯು ತನ್ನಲ್ಲಿ ಯೌವನವು ಆವಿರ್ಭವಿಸಿರುವುದನ್ನು ಕಂಡುಕೊಂಡು ತನ್ನ ಅರಮನೆಯ ಪಕ್ಕದಲ್ಲಿದ್ದ ಸರೋವರದ ಸಮೀಪದಲ್ಲಿ ಕುಳಿತು ಸೂರ್ಯನ ಕಿರಣಗಳ ಸ್ಪರ್ಶದಿಂದ ಅರಳಿದ್ದ ಕಮಲಪುಷ್ಪಗಳನ್ನೇ ದಿಟ್ಟಿಸಿನೋಡುತ್ತಾ ತನ್ನಲ್ಲಿಯೇ ಮಾತನಾಡಿಕೊಳ್ಳುತ್ತಿದ್ದಳು :

"ಋತುಮತಿಯಾಗಿದ್ದೇನೆ. ಆದರೆ ನಾನಿನ್ನೂ ಅವಿವಾಹಿತಳು. ನನಗೆ ಎಂತಹ ದುರವಸ್ಥೆಯುಂಟಾಯಿತು? ರಾಜಪುತ್ರಿಯಾದ ನನಗೆ ಇಂತಹ ದುರವಸ್ಥೆಯೇ? ಮಾಡಿದ ಪಾಪಕ್ಕೆ ತಕ್ಕ ಫಲವನ್ನು ಅನುಭವಿಸಬೇಕಾದು ದೇನೋ ನಿಜ. ಅಂತೆಯೇ ದೇವಯಾನಿಗೆ ದಾಸಿಯಾಗಿದ್ದೇನೆ. ದೇವ ಯಾನಿಯ ದಾಸಿಯಾದ ಮಾತ್ರಕ್ಕೆ ವಿವಾಹವಾಗಬಾರದೇ? ದಾಂಪತ್ಯಸುಖ ವನ್ನು ಅನುಭವಿಸಬಾರದೇ? ವಿವಾಹವಾಗಬಾರದೆಂದಾಗಲೀ–ದಾಂಪತ್ಯ

ಸುಖವನ್ನು ಅನುಭವಿಸಬಾರದೆಂದಾಗಲೀ ನಿಯಮವೇನೂ ಇಲ್ಲವಲ್ಲ? ಆದರೆ ಈ ದಾಸ್ಯಶೃಂಖಲೆಯಲ್ಲಿರುವಾಗ ಪತಿಯನ್ನು ವರಿಸುವ ಬಗೆ ಹೇಗೆ? ದೇವಯಾನಿಯು ನನ್ನನ್ನು ದಾಸಿಯಂತೆ ಕಾಣದೇ, ತನ್ನ ಪರಿಚರ್ಯೆಯನ್ನೂ ನನ್ನಿಂದ ಮಾಡಿಸಿಕೊಳ್ಳುತ್ತಿಲ್ಲವಾದರೂ–ನಾನು ಸ್ವೇಚ್ಛೆಯಿಂದ ರಾಜಪುತ್ರಿಯಂತೆ ವಿವಾಹವಾಗುವ ಸಾಧ್ಯತೆಯಿಲ್ಲ ಅಥವಾ ನನ್ನ ತಂದೆಯೂ ಸಹ ನನ್ನನ್ನು ಬೇರೆಯವರಿಗೆ ಸ್ವಯಂವರಮಾಡಿಕೊಡುವಂತೆಯೂ ಇಲ್ಲ. ಆದರೂ ನಿರಾಶಳಾಗಬಾರದೆಂದು ನನಗನಿಸುತ್ತದೆ. ಈ ಸಮಯದಲ್ಲಿ ನನ್ನ ಕರ್ತವ್ಯವೇನೆಂಬುದನ್ನು ಸುದೀರ್ಘವಾಗಿ ಯೋಚಿಸಬೇಕಾಗಿದೆ ಮತ್ತು ಹೇಗಾದರೂ ಮಾಡಿ ನನ್ನ ಮನಸ್ಸಿನ ಆಶಯವನ್ನು ಈಡೇರಿಸಿಕೊಳ್ಳಬೇಕು. ನನ್ನ ಗೆಳತಿಯಾದ ದೇವಯಾನಿಯು ಪುತ್ರವತಿಯಾದಳು. ನನ್ನ ಯೌವನವು ಮಾತ್ರ ವ್ಯರ್ಥವಾಗಿ ಹೋಗುತ್ತಿದೆ. ಈಗ ನನಗುಳಿದಿರುವುದು ಒಂದೇ ಒಂದು ಮಾರ್ಗ. ನನ್ನ ಗೆಳತಿಯು ಅಥವಾ ಸ್ವಾಮಿನಿಯು ಹೇಗೆ ಯಯಾತಿಯನ್ನು ಪತಿಯನ್ನಾಗಿ ವರಿಸಿದಳೋ ಅಂತೆಯೇ ನಾನೂ ಸಹ ಅವನನ್ನೇ ಪತಿಯನ್ನಾಗಿ ವರಿಸಬೇಕು.

ರಾಜನು ನನಗೆ ಪುತ್ರಫಲವನ್ನು ದಯಪಾಲಿಸುವನೆಂದು ನನ್ನ ಅಂತ ರಾತ್ಮವು ಹೇಳುತ್ತಿದೆ. ಅವನು ನನ್ನ ಪ್ರಾರ್ಥನೆಯನ್ನು ತಿರಸ್ಕರಿಸಲಾರನು. ಆದರೆ ಅವನನ್ನು ಏಕಾಂತದಲ್ಲಿ ಸಂದರ್ಶಿಸುವ ಬಗೆ ಹೇಗೆ?"

ಜನಮೇಜಯ! ಶರ್ಮಿಷ್ಠೆಯು ಅಶೋಕವನದಲ್ಲಿ ಕುಳಿತು ಈ ರೀತಿ ಯಲ್ಲಿ ಯೋಚಿಸುತ್ತಿರುವಾಗಲೇ–ಯಯಾತಿಯು ದೈವಯೋಗದಿಂದ ಅಶೋಕವನದ ಸಮೀಪಕ್ಕೆ ಬಂದು ಅಲ್ಲಿ ಏಕಾಕಿನಿಯಾಗಿದ್ದ ಶರ್ಮಿಷ್ಠೆಯನ್ನು ಕಂಡನು. 'ನೆನೆದವರು ಮನದಲ್ಲಿ' ಎಂಬಂತೆ ತಾನು ಸ್ಮರಿಸುತ್ತಿದ್ದ ಯಯಾತಿಯೇ ಎದುರಿನಲ್ಲಿ ಬಂದು ನಿಂತಿರಲಾಗಿ ಚಾರುಹಾಸಿನಿಯಾದ ಶರ್ಮಿಷ್ಠೆಯು ನಸುನಗುತ್ತಾ ರಾಜನ ಸಮೀಪಕ್ಕೆ ಧಾವಿಸಿ ನಮ್ರತೆಯಿಂದ ಹೇಳಿದಳು :

'ಮಹಾರಾಜ! ಇತ್ತಲಾಗಿ ಬಿಜಯಮಾಡಿರಿ'–ಎಂದು ವಿನೀತಳಾಗಿ ಹೇಳಿ, ಅಶೋಕವನದಲ್ಲಿದ್ದ ಲತಾಗೃಹಕ್ಕೆ ಯಯಾತಿಯನ್ನು ಕರೆದೊಯ್ದು ಕುಳ್ಳಿರಿಸಿ, ವಿನಮ್ರಳಾಗಿ ಹೇಳಿದಳು :

"ಚಂದ್ರ, ಇಂದ್ರ, ವಿಷ್ಣು, ಯಮ, ವರುಣ ಮತ್ತು ಯಯಾತಿ– ಇವರ ಅರಮನೆಯಲ್ಲಿರುವ ಸ್ತ್ರೀಯರನ್ನು ಪರಪುರುಷರು ಯಾವ ಕಾರಣ ದಿಂದಲೂ ಯಾವಾಗಲೂ ನೋಡುವುದಕ್ಕೆ ಸಾಧ್ಯವಾಗುವುದಿಲ್ಲ. ಅಂತೆಯೇ ನಾನು ಸಹ ನಿನ್ನ ಅರಮನೆಯಲ್ಲಿ ಸುರಕ್ಷಿತಳಾಗಿದ್ದೇನೆ. ನನ್ನ ರೂಪು, ಗುಣ, ಶೀಲ ಮತ್ತು ಮನೆತನಗಳ ವಿಷಯಗಳೆಲ್ಲವೂ ನಿನಗೆ ಕೂಲಂಕಷವಾಗಿ ತಿಳಿದಿವೆಯಲ್ಲವೇ? ಇಂದು ನಾನು ನಿನ್ನನ್ನು ಯಾಚನೆಮಾಡಲು ಸಂಕಲ್ಪಿ ಸಿದ್ದೇನೆ. ನನ್ನ ಪ್ರಾರ್ಥನೆಯನ್ನು ಧರ್ಮಾತ್ಮನಾದ ನೀನು ನಡೆಸಿಕೊಡುವೆ ಯೆಂಬ ಭರವಸೆಯಿದೆ."

ರಾಜನು ಕೇಳುತ್ತಾ ಕುಳಿತಿದ್ದನು. ಕ್ಷಣಕಾಲ ಸ್ತ್ರೀಸಹಜವಾದ ನಾಚಿಕೆಯಿಂದ ಸುಮ್ಮನಿದ್ದ ಶರ್ಮಿಷ್ಠೆಯು ತನ್ನ ಮಾತನ್ನು ಮುಂದುವರಿಸಿ ಕೇಳಿದಳು :

"ನಾನೂ ಮತ್ತು ನನ್ನ ಸ್ವಾಮಿನಿಯಾದ ದೇವಯಾನಿಯೂ ನಿನ್ನ ಅರಮನೆಗೆ ಜೊತೆಯಲ್ಲಿಯೇ ಬಂದೆವು. ಅವಳೀಗಾಗಲೇ ತನ್ನ ಯೌವನದ ಪ್ರಯೋಜನವನ್ನು ( ಮಕ್ಕಳಾಗುವುದರ ಮೂಲಕವಾಗಿ ) ಪಡೆದುಕೊಂಡು ಬಿಟ್ಟಿರುವಳು. ನನ್ನ ಯೌವನವು ವ್ಯರ್ಥವಾಗಿ ಹೋಗುತ್ತಿದೆ. ಮಹಾರಾಜ! ಆದುದರಿಂದ ನನ್ನ ಋತುಕಾಲವು ಸಫಲವಾಗುವಂತೆ ಮತ್ತು ನನ್ನ ಯೌವನವು ವ್ಯರ್ಥವಾಗದಂತೆ ನಡೆದುಕೊಳ್ಳಬೇಕಾಗಿ ಪ್ರಾರ್ಥಿಸುತ್ತೇನೆ."

ಸತ್ಕುಲಪ್ರಸೂತಳಾದ ಯುವತಿಯೊಬ್ಬಳು ಬಂದು ಧರ್ಮಮೂಲಕ ವಾಗಿ ಪ್ರಣಯಭಿಕ್ಷೆಯನ್ನು ಕೇಳಿದರೆ ಇಲ್ಲವೆನ್ನುವುದು ಪುರುಷರಿಗೆ ಬಹಳ ಕಷ್ಟವೇ ಆಗುತ್ತದೆ.

ಒಬ್ಬಳಿರುವಾಗ ಮತ್ತೊಬ್ಬಳನ್ನು ಮದುವೆಯಾಗುವ ವಿಷಯವಾಗಿ ರಾಜನು ಯೋಚಿಸಬೇಕಾಗಿಲ್ಲ. 'ರಾಜಾನೋ ಬಹುವಲ್ಲಭಾಃ' ರಾಜರಿಗೆ ಅನೇಕಪತ್ನಿಯರಿರುವುದು ಅಸ್ವಾಭಾವಿಕವಾಗಿರಲಿಲ್ಲ. ಆದರೆ ಹಿಂದೆ ಶುಕ್ರರು ಯಯಾತಿಗೆ ಬಹುಸ್ಪಷ್ಟವಾಗಿ ಹೇಳಿದ್ದರು :

ಇಯಂ ಚಾಪಿ ಕುಮಾರೀ ತೇ ಶರ್ಮಿಷ್ಠಾ ವಾರ್ಷಪರ್ವಣೀ ।
ಸಮ್ಪೂಜ್ಯಾ ಸತತಂ ರಾಜನ್ಮಾ ಚೈನಾಂ ಶಯನೇ ಹ್ವಯೇಃ ॥೩೫॥

ಅಧ್ಯಾಯ ೮೧

"ವೃಷಪರ್ವನ ಮಗಳಾದ, ರಾಜಕುಮಾರಿಯಾದ ಈ ಶರ್ಮಿಷ್ಠೆಯು ನನ್ನ ಮಗಳ ಜೊತೆಯಲ್ಲಿಯೇ ನಿನ್ನ ಅರಮನೆಗೆ ಬರುವಳು. ಇವಳನ್ನೂ ನೀನು ಯಾವಾಗಲೂ ಆದರಿಸಬೇಕು. ಯಾವ ಕಾರಣದಿಂದಲೂ ನೀನಿವಳನ್ನು ಅನಾದರಣೆಮಾಡಬಾರದು. ಆದರೆ ಇವಳೊಡನೆ ನೀನು ಸಂಗವನ್ನು ಮಾತ್ರ ಮಾಡಬಾರದು"–ಎಂಬ ಮಾತುಗಳು ಯಯಾತಿಯ ಕಿವಿಗಳಲ್ಲಿ ಪ್ರತಿಧ್ವನಿಸುತ್ತಿದ್ದುವು. ಆ ವಿಷಯವನ್ನೇ ಯಯಾತಿಯು ಶರ್ಮಿಷ್ಠೆಯೊಡನೆಯೂ ಹೇಳಿದನು :

"ಶರ್ಮಿಷ್ಠೇ! ನೀನು ಸತ್ಕುಲಪ್ರಸೂತಳು ಮಾತ್ರವಲ್ಲದೇ ಸರ್ವಾಂಗ ಸುಂದರಿಯೂ ಆಗಿರುವೆ. ನಿನ್ನಲ್ಲಿ ಸೂಜಿಯ ಮೊನೆಯಷ್ಟು ದೋಷವನ್ನೂ ಎಣಿಸಲು ಸಾಧ್ಯವಿಲ್ಲ. ಆದರೆ ನಾನು ಮಾತ್ರ ನಿರುಪಾಯನಾಗಿದ್ದೇನೆ. ಶುಕ್ರರ ಆಜ್ಞೆಯು ನಿನಗೆ ತಿಳಿಯದೇ?"

"ಮಹಾರಾಜ! ಸತ್ಯಪರಿಪಾಲನವೆಂಬುದೂ ರಾಜನ ಮುಖ್ಯಕರ್ತವ್ಯಗಳಲ್ಲೊಂದು. ಆದರೆ ಕೆಲವು ವಿಷಯಗಳಲ್ಲಿ ಅಸತ್ಯವನ್ನಾಡಿದರೆ ದೋಷವಿಲ್ಲವೆಂದು ಜ್ಞಾನಿಗಳು ಹೇಳುತ್ತಾರೆ.

ನ ನರ್ಮಯುಕ್ತಂ ವಚನಂ ಹಿನಸ್ತಿ
ನ ಸ್ತ್ರೀಷು ರಾಜನ್ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ
ಪಞ್ಚಾನೃತಾನ್ಯಾಹುರಪಾತಕಾನಿ ॥೧೬॥

ಹಾಸ್ಯಕ್ಕಾಗಿ ಸುಳ್ಳುಹೇಳಬಹುದು. ಸ್ತ್ರೀಯರೊಡನೆ ವಿಹರಿಸುವಾಗ ಅವರಿಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ಸುಳ್ಳುಹೇಳಬಹುದು. ವಿವಾಹಸಂದರ್ಭದಲ್ಲಿಯೂ ಸುಳ್ಳುಹೇಳಬಹುದು. ಯಾರಿಗಾದರೂ ಪ್ರಾಣಾಪಾಯವೊದಗಿದ ಕಾಲದಲ್ಲಿ ಪ್ರಾಣವನ್ನು ಉಳಿಸುವ ಸಲುವಾಗಿಯೂ, ಒಬ್ಬರಿಗೆ ಅಪಾರವಾದ ನಷ್ಟವು ಸಂಭವಿಸುವುದಾದರೆ ಅದನ್ನು ತಪ್ಪಿಸಲೂ ಸುಳ್ಳುಹೇಳಿದರೆ ದೋಷವಿಲ್ಲ. ಹೀಗೆ ಈ ಐದು ವಿಷಯಗಳಲ್ಲಿ ಸುಳ್ಳಾಡಿದರೆ ಅದರಿಂದ ಸತ್ಯಚ್ಯುತನಾಗಲಾರನು. ಆದರೆ ಇತರರು ಸತ್ಯ ವಿಷಯವೇನೆಂದು ಕೇಳಿದಾಗ ಇರುವ ವಿಷಯವನ್ನು ಹೇಳದೇ ನಿಜವನ್ನು

ಮರೆಮಾಚುವವನನ್ನು ಮಿಥ್ಯಾವಾದಿಯೆಂದು ಹೇಳುವರು. ಈಗ ನೀನು ಮಿಥ್ಯಾವಾದಿಯಾಗಿರುವೆಯಲ್ಲವೇ? ಹೇಗೆಂದರೆ : ನಾನೂ ಮತ್ತು ದೇವಯಾನಿಯೂ ನಿನ್ನ ಸೇವೆಮಾಡುವ ಒಂದೇ ಕಾರಣದಿಂದ ಇಲ್ಲಿ ಬಂದಿರುತ್ತೇವೆ. ಹೀಗಿರುವಾಗ ದೇವಯಾನಿಯನ್ನು ಮಾತ್ರ ನೀನು ಪತ್ನೀ–ಎಂದು ತಿಳಿದಿರುವೆ. ಇದು ಅಸತ್ಯ ವಿಷಯವಲ್ಲವೇ?"

"ಶರ್ಮಿಷ್ಠೇ! ನೀನು ಮಾತಿನಲ್ಲಿ ಬಹಳ ಚತುರಳಾಗಿರುವೆ. ಆದರೆ ರಾಜನು ಎಲ್ಲ ವಿಷಯಗಳಲ್ಲಿಯೂ ಜನರಿಗೆ ಆದರ್ಶನಾಗಿರಬೇಕು. ಅಸತ್ಯವಾದಿಯಾದ ರಾಜನು ಸರ್ವನಾಶಕ್ಕೆ ಕಾರಣನಾಗುವನು. ನನ್ನ ವಿಷಯದಲ್ಲಿ ಹೇಳುವುದಾದರೆ ಎಂತಹ ಕಷ್ಟವೊದಗಿದರೂ ಸುಳ್ಳನ್ನು ಮಾತ್ರ ಹೇಳಲಾರೆನು, ರಾಜಕುಮಾರಿ!"

"ಮಹಾರಾಜ! ಸ್ನೇಹದ ಮಹತ್ತ್ವವನ್ನರಿಯೆಯಾ? ಸುಖ-ದುಃಖಗಳೆರಡರಲ್ಲಿಯೂ ಮಿತ್ರನು ಸಮಭಾಗಿಯಲ್ಲವೇ? ಹಾಗೆಯೇ ನನ್ನ ಗೆಳತಿಯು ಮಾಡುತ್ತಿರುವ ನಿನ್ನ ಸೇವೆಯಲ್ಲಿ ನಾನೂ ಸಮಭಾಗಿನಿಯಾಗಿರುವಾಗ ಅವಳ ಸುಖದಲ್ಲಿಯೂ ನನಗೆ ಸಮಭಾಗವು ಬೇಡವೇ? ಆದುದರಿಂದ ಗೆಳತಿಯ ಗಂಡನನ್ನೇ ನನ್ನ ಗಂಡನೆಂದು ಭಾವಿಸಕೂಡದೇಕೆ? ಅಂದು ದೇವಯಾನಿಗೆ ನಿನ್ನೊಡನೆ ಆದ ಪಾಣಿಗ್ರಹಣದಿಂದ ನಿನ್ನೊಡನೆ ನನ್ನ ಪಾಣಿಗ್ರಹಣವೂ ಆದಂತಾಗಿದೆ. ಆದುದರಿಂದ ನೀನೇ ನನ್ನ ಪತಿಯೆಂದು ದೃಢವಾಗಿ ನಿಶ್ಚಯಿಸಿರುವೆನು, ರಾಜೇಂದ್ರ!"

ಯಯಾತಿಯು ಹೇಳಿದನು :

"ಶರ್ಮಿಷ್ಠೇ! ಯಾಚಕರಿಗೆ ಇಲ್ಲವೆನ್ನಲಾಗದೆಂಬ ನನ್ನ ವ್ರತ ವೊಂದಿದೆ. ನೀನು ನಿನ್ನ ಇಷ್ಟಾರ್ಥಕ್ಕಾಗಿ ನನ್ನನ್ನು ಯಾಚಿಸುತ್ತಿರುವೆ. ನಿನಗೇನು ಬೇಕೆಂಬುದನ್ನಾದರೂ ತಿಳಿಸು. ತಪ್ಪದೇ ಕೊಡುವೆನು."

"ಇದು ನಿಜವೇ?"

"ನಿಶ್ಚಯವಾಗಿಯೂ ಕೊಡುವೆನು."

"ಮಹಾರಾಜ! ನನ್ನನ್ನು ಅಧರ್ಮದಿಂದ ಕಾಪಾಡು. ಧರ್ಮವನ್ನು ರಕ್ಷಿಸು. ನಿನ್ನಿಂದ ಪುತ್ರವತಿಯಾಗುವ ನಾನು ಅನೇಕವಿಧವಾದ ಧರ್ಮಕಾರ್ಯಗಳಿಗೆ ಕಾರಣಳಾಗುವಂತೆ ಮಾಡು.

**ತ್ರಯ ಏವಾಧನಾ ರಾಜನ್ಭಾರ್ಯಾ ದಾಸಸ್ತಥಾ ಸುತಃ ।**
**ಯತ್ತೇ ಸಮಧಿಗಚ್ಛನ್ತಿ ಯಸ್ಯೈತೇ ತಸ್ಯ ತದ್ಧನಮ್ ॥೨೨॥**

ಮಹಾರಾಜ! ಹೆಂಡತಿ, ಸೇವಕ ಮತ್ತು ಮಗ–ಈ ಮೂವರೂ ಅಧನರೆಂದು ಅಥವಾ ಅರ್ಥಹೀನರೆಂದು ಹೇಳುತ್ತಾರೆ. ಏಕೆಂದರೆ : ಇವರು ಮಾಡಿದ ಸಂಪಾದನೆಯು ಇವರ ಸ್ವಾಮಿಯನ್ನೇ ಸೇರುತ್ತದೆ. ಅರ್ಥಾತ್ ಪತ್ನಿಯ ಐಶ್ವರ್ಯವು ಪತಿಗೂ, ಆಳಿನ ಐಶ್ವರ್ಯವು ಸ್ವಾಮಿಗೂ, ಮಗನ ಐಶ್ವರ್ಯವು ತಂದೆಗೂ ಸೇರುತ್ತದೆ. ಮಹಾರಾಜ! ನಾನು ದೇವಯಾನಿಯ ದಾಸಿಯು ; ನೀನು ದೇವಯಾನಿಗೆ ಪತಿಯೂ ಮತ್ತು ಸ್ವಾಮಿಯೂ ಆದುದರಿಂದ ನನಗೂ ಸಹ ನೀನು ಪತಿ ಮತ್ತು ಸ್ವಾಮಿಯಾಗಿರುತ್ತೀಯೆ. ನನ್ನ ಯೌವನವೆಂಬ ಐಶ್ವರ್ಯವು ನಿನಗೆ ಸೇರಿದ್ದಾಗಿದೆ. ಇದನ್ನು ಉಪಭೋಗಿಸಲು ನೀನು ಅರ್ಹನಾಗಿರುವೆ."

ಯಯಾತಿಗೆ ಶರ್ಮಿಷ್ಠೆಯು ಹೇಳುತ್ತಿರುವುದು ಸರಿ ಎನ್ನಿಸಿತು. ಅವಳ ಪ್ರಾರ್ಥನೆಯನ್ನು ನಡೆಸಿಕೊಟ್ಟನು. ಅವರಿಬ್ಬರೂ ಸ್ವಲ್ಪ ಹೊತ್ತು ಆ ವನದಲ್ಲಿಯೇ ವಿಹರಿಸುತ್ತಿದ್ದು ತಮ್ಮ-ತಮ್ಮ ನಿವಾಸಗಳಿಗೆ ಹೊರಟು ಹೋದರು.

ಶರ್ಮಿಷ್ಠೆಯು ಗರ್ಭವತಿಯಾದಳು. ನವಮಾಸಗಳು ಕಳೆದೊಡನೆಯೇ ಸರ್ವಾಂಗಸುಂದರವಾದ, ದೇವಶಿಶುವನ್ನು ಹೋಲುತ್ತಿದ್ದ ಗಂಡು ಮಗುವನ್ನು ಪ್ರಸವಿಸಿದಳು."

ಲ೨ನೆಯ ಅಧ್ಯಾಯವು ಮುಗಿಯಿತು.

ಲ೩ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ದೇವಯಾನೀ–ಶರ್ಮಿಷ್ಠೆಯರ ಸಂವಾದ : ಶುಕ್ರರ ಶಾಪ: ಯಯಾತಿಗೆ ಅಕಾಲಿಕವೃದ್ಧಾಪ್ಯ

ವೈಶಂಪಾಯನರು ಹೇಳುತ್ತಾರೆ :

**ಶ್ರುತ್ವಾ ಕುಮಾರಂ ಜಾತಂ ತು ದೇವಯಾನೀ ಶುಚಿಸ್ಮಿತಾ ।**
**ಚಿನ್ತಯಾಮಾಸ ದುಃಖಾರ್ತಾ ಶರ್ಮಿಷ್ಠಾಂ ಪ್ರತಿ ಭಾರತ ॥೧॥**

**ಅಭಿಗಮ್ಯ ಚ ಶರ್ಮಿಷ್ಠಾಂ ದೇವಯಾನ್ಯಬ್ರವೀದಿದಮ್ ।**
**ಕಿಮಿದಂ ವೃಜಿನಂ ಸುಭ್ರು ಕೃತಂ ವೈ ಕಾಮಲುಬ್ಧಯಾ ॥೨॥**

"ಶರ್ಮಿಷ್ಠೆಗೆ ಗಂಡುಮಗುವಾಗಿದೆಯೆಂಬ ವಿಷಯವು ಒಡನೆಯೇ ಶುಚಿಸ್ಮಿತೆಯಾದ ದೇವಯಾನಿಗೂ ತಿಳಿಯಿತು. ಅವಳು ಶರ್ಮಿಷ್ಠೆಯ ವ್ಯವಹಾರದಿಂದ ದುಃಖಾರ್ತಳಾಗಿ ಶರ್ಮಿಷ್ಠೆಯ ಬಳಿಗೆ ಹೋಗಿ ಕೇಳಿದಳು : "ಸುಭ್ರು! ಕಾಮಪಿಪಾಸೆಯ ತೃಪ್ತಿಗಾಗಿ ಇಂತಹ ಪಾಪಕಾರ್ಯವನ್ನು ಮಾಡಿದೆಯಾ ?"

ಶರ್ಮಿಷ್ಠೆಯು ಉತ್ತರಿಸಿದಳು :

"ಮಹಾತಪಸ್ವಿಗಳಾದ, ಧರ್ಮನಿಷ್ಠರಾದ, ವೇದಪಾರಂಗತರಾದ ಮಹರ್ಷಿಗಳೊಬ್ಬರು ದೈವಸಂಘಟನೆಯಿಂದ ನನ್ನೀ ಅರಮನೆಗೆ ಬಂದಿದ್ದರು. ಬಂದವರನ್ನು ಆದರಪೂರ್ವಕವಾಗಿ ಸತ್ಕರಿಸಿದೆನು. ನನ್ನ ಸೇವೆಯಿಂದ ತೃಪ್ತರಾದ ಆ ಮಹರ್ಷಿಗಳು ಯಾವುದಾದರೂ ವರವೊಂದನ್ನು ಕೇಳೆಂದರು. ಧರ್ಮಚ್ಯುತಳಾಗದ ರೀತಿಯಲ್ಲಿ ನನ್ನ ಆಕಾಂಕ್ಷೆಯನ್ನು ಪೂರೈಸಿಕೊಡ ಬೇಕೆಂದು ಕೇಳಿಕೊಂಡೆನು. ಅವರ ಅನುಗ್ರಹದ ಫಲವಾಗಿ ಈ ಗಂಡುಮಗು ವಿನ ಜನನವಾಯಿತು. ಆದುದರಿಂದ ನಾನು ಕಾಮತೃಪ್ತಿಗಾಗಿ ಪಾಪ ಕಾರ್ಯವನ್ನು ಮಾಡಿರುವೆನೆಂದು ಭಾವಿಸಬೇಡ. ಋಷಿಗಳಿಂದಲೇ ಈ ಮಗುವು ಹುಟ್ಟಿದೆ. ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ."

ಮಹರ್ಷಿಗಳು ಬಂದಿದ್ದರೆಂದು ಕೇಳಿದೊಡನೆಯೇ ದೇವಯಾನಿಯ ಕೋಪವು ಇಳಿದುಹೋಯಿತು. ಏಕೆಂದರೆ : ತಪಸ್ವಿಗಳ ವಿಷಯದಲ್ಲಿ ಸಂಶಯಪಡುವಂತಿಲ್ಲ. ಧರ್ಮವಿಹಿತವಲ್ಲದ ಕಾರ್ಯವನ್ನು ಅವರೆಂದೂ ಮಾಡುವುದಿಲ್ಲ.

ದೇವಯಾನಿಯು ಮೃದುಧ್ವನಿಯಿಂದ ಪುನಃ ಕೇಳಿದಳು :

"ಬ್ರಾಹ್ಮಣನ ಕುಲ-ಗೋತ್ರಗಳು ತಿಳಿಯವೇ? ಅವನ ಕುಲ-ಗೋತ್ರಗಳನ್ನು ತಿಳಿಯಲು ನಾನು ಬಯಸುತ್ತೇನೆ."

"ಮಹಾತಪಸ್ವಿಗಳ ಸೂರ್ಯಸಮಾನವಾದ ತೇಜೋರಾಶಿಯನ್ನು

ನೋಡಿ ನೀವಾರೆಂದು ಕೇಳಲು ನನಗಂತೂ ಧೈರ್ಯವುಂಟಾಗಲಿಲ್ಲ, ದೇವಿ! ತಪಸ್ವಿಗಳ ವಿಷಯದಲ್ಲಿ ಮೌನವಾಗಿದ್ದು ಸೇವೆ ಸಲ್ಲಿಸುವುದೇ ಉತ್ತಮ ವಲ್ಲವೇ?"

"ನಿಜ. ಅವರ ಕೋಪಕ್ಕೆ ನಾವು ಗುರಿಯಾಗಬಾರದು. ನೀನು ಹೇಳಿದುದೆಲ್ಲಾ ನಿಜವಾಗಿ, ಈ ಶಿಶುವು ವರ್ಣಜ್ಯೇಷ್ಠನಾದ ಮತ್ತು ಶ್ರೇಷ್ಠ ನಾದ ಬ್ರಾಹ್ಮಣನಿಂದ ಹುಟ್ಟಿದುದಾಗಿದ್ದರೆ ನನಗಾವ ಕೋಪವೂ ಇಲ್ಲ, ಶರ್ಮಿಷ್ಠೇ!"

ದೇವಯಾನಿಗೆ ಸಮಾಧಾನವಾದ ಮೇಲೆ ಸಖಿಯರಿಬ್ಬರೂ ಸ್ವಲ್ಪಕಾಲ ಸಲ್ಲಾಪಮಾಡುತ್ತಿದ್ದು ತಮ್ಮ ತಮ್ಮ ಅಂತಃಪುರಗಳಿಗೆ ತೆರಳಿದರು.

ಶರ್ಮಿಷ್ಠೆಯು ಋಷಿಯು ಬಂದಿದ್ದ ವಾರ್ತೆಯನ್ನು ಹೇಳಿದಳೇ ಹೊರತು ಬ್ರಾಹ್ಮಣನೆಂದು ಹೇಳಲಿಲ್ಲ. ದೇವಯಾನಿಯು ಋಷಿ ಎಂಬ ಪದಕ್ಕೆ ಬ್ರಾಹ್ಮಣನಿರಬಹುದೆಂದು ಕಲ್ಪನೆಮಾಡಿಕೊಂಡಳು. ಶರ್ಮಿಷ್ಠೆಯು ರಾಜನನ್ನೇ ಮನದಲ್ಲಿ ನೆನೆದು ಋಷಿ–ಎಂದು ಹೇಳಿದುದರಲ್ಲಿ ಸುಳ್ಳುಹೇಳಿದಂತೆಯೂ ಆಗಲಿಲ್ಲ. ಏಕೆಂದರೆ : ಯಯಾತಿಯು ಮಹಾತಪಸ್ವಿಯೆಂದೂ–ರಾಜರ್ಷಿಯೆಂದೂ ಹೆಸರು ಪಡೆದಿದ್ದನು.

ಕಾಲಕ್ರಮದಲ್ಲಿ ದೇವಯಾನಿಗೆ ಯದು, ತುರ್ವಸು–ಎಂಬ ಇಬ್ಬರು ಮಕ್ಕಳೂ ಶರ್ಮಿಷ್ಠೆಗೆ ದ್ರುಹ್ಯು, ಅನು, ಪುರು–ಎಂಬ ಮೂವರು ಮಕ್ಕಳೂ ಜನಿಸಿದರು.

ಯಯಾತಿ-ದೇವಯಾನಿಯರು ಒಂದು ದಿನ ಸಂಜೆ ಅಶೋಕವನದಲ್ಲಿ ಬಹಳ ದೂರ ನಡೆದುಹೋದರು. ಅವರು ಸ್ವಲ್ಪಕಾಲ ವಿಶ್ರಮಿಸಿಕೊಳ್ಳ ಬೇಕೆಂದು ನಿರ್ಧರಿಸಿದ್ದ ಸ್ಥಳದಲ್ಲಿಯೇ ಮೂರು ಮಂದಿ ಬಾಲಕರು ಆಟ ವಾಡುತ್ತಿದ್ದರು. ಆ ಬಾಲಕರಿಗೆ ಬೇರೆ ಕಡೆಗೆ ಬಂದು ಆಟವಾಡುತ್ತಿದ್ದೇವೆಂಬ ಭಾವನೆಯಿರಲಿಲ್ಲ. ತಮ್ಮ ಮನೆಯ ಆವರಣದಲ್ಲಿಯೇ ಆಟವಾಡುತ್ತಿದ್ದೇ ವೆಂಬ ನಂಬಿಕೆಯಿದ್ದಂತೆ ಭಾಸವಾಗುತ್ತಿತ್ತು. ಮಕ್ಕಳೆಲ್ಲರೂ ದೇವಕುಮಾರ ರಂತೆ ವಿರಾಜಿಸುತ್ತಿದ್ದರು. ಅವರನ್ನು ನೋಡಿ ದೇವಯಾನಿಗೆ ಬಹಳ ಆಶ್ಚರ್ಯವಾಯಿತು. ರಾಜನನ್ನು ಕೇಳಿದಳು :

“ಮಹಾರಾಜ! ಈ ಮಕ್ಕಳಾರು? ದೇವತೆಗಳ ಮಕ್ಕಳಂತೆಯೇ ಇದ್ದಾರೆ. ಇವರು ನಿಶ್ಚಯವಾಗಿಯೂ ರೂಪಿನಲ್ಲಿಯೂ, ಕಾಂತಿಯಲ್ಲಿಯೂ ನಿನ್ನನ್ನೇ ಹೋಲುತ್ತಿರುವರಲ್ಲಾ?”

ಅವಳು ಮಕ್ಕಳ ಸಮೀಪಕ್ಕೆ ಓಡಿಹೋಗಿ ಪ್ರಶ್ನಿಸಿದಳು :

**ಕಿಂ ನಾಮಧೇಯಂ ವಂಶೋ ವಃ ಪುತ್ರಕಾಃ ಕಶ್ಚ ವಃ ಪಿತಾ ।**
**ಪ್ರಬ್ರೂತ ಮೇ ಯಥಾತಥ್ಯಂ ಶ್ರೋತುಮಿಚ್ಛಾಮಿ ತಂ ಹ್ಯಹಮ್ ॥**

“ಮಕ್ಕಳೇ! ನಿಮ್ಮ ನಾಮಧೇಯಗಳೇನು? ನಿಮ್ಮ ವಂಶವು ಯಾವುದು? ನಿಮ್ಮ ತಂದೆ-ತಾಯಿಗಳಾರು? ಅವರೆಲ್ಲಿದ್ದಾರೆ? ಈ ವಿಷಯವನ್ನು ಯಥಾವತ್ತಾಗಿ ಹೇಳಿರಿ ; ನನಗೆ ಇದನ್ನು ತಿಳಿಯುವ ಅಪೇಕ್ಷೆಯಾಗಿದೆ.”

ಮಕ್ಕಳೆಲ್ಲರೂ ತರ್ಜನಿಯನ್ನು (ತೋರುಬೆರಳನ್ನು) ಮುಂದೆಮಾಡಿ– “ಅದೋ ಅಲ್ಲಿರುವವನೇ ನಮ್ಮಪ್ಪ ; ಶರ್ಮಿಷ್ಠೆಯೇ ನಮ್ಮ ತಾಯಿ”– ಎಂದು ಹೇಳುತ್ತಾ ಯಯಾತಿಯ ಬಳಿಗೆ ಬಂದುವು. ದೇವಯಾನಿಯು ಹತ್ತಿರದಲ್ಲಿದ್ದುದರಿಂದ ರಾಜನು ಆ ಮಕ್ಕಳನ್ನು ಅಭಿನಂದಿಸಲಿಲ್ಲ. ತಂದೆಯು ತಮ್ಮನ್ನು ಮಾತನಾಡಿಸದೇ ಇದ್ದುದಕ್ಕಾಗಿ ಬಿಕ್ಕಿ-ಬಿಕ್ಕಿ ಅಳುತ್ತಾ ಮಕ್ಕಳು ತಾಯಿಯ ಸಮೀಪಕ್ಕೆ ತೆರಳಿದುವು.

ಬಾಲಕರಿಗೆ ಯಯಾತಿಯಲ್ಲಿದ್ದ ಸಲಿಗೆಯನ್ನು ನೋಡಿ ದೇವಯಾನಿಗೆ ಎಲ್ಲವೂ ತಿಳಿದುಹೋಯಿತು.

ದೇವಯಾನಿಯು ಆ ಮಕ್ಕಳ ಹಿಂದೆಯೇ ಶರ್ಮಿಷ್ಠೆಯ ಬಳಿಗೆ ಹೋದಳು. ಕರ್ಕಶವಾದ ಧ್ವನಿಯು ಹೊರಹೊರಟಿತು :

“ನನ್ನ ದಾಸಿಯಾಗಿದ್ದರೂ ನನಗೆ ಅಪರಾಧವನ್ನೆಸಗಲು ನಿನಗೆ ಹೇಗೆ ಧೈರ್ಯವುಂಟಾಯಿತು? ಶರ್ಮಿಷ್ಠೆ! ಆಸುರಿಯ ಧರ್ಮವನ್ನೇ ಆಶ್ರಯಿಸಿರುವ ನೀನು ನನ್ನ ವಿಷಯದಲ್ಲಿ ಭಯಪಡುತ್ತಿಲ್ಲ ಅಲ್ಲವೇ? ನಿನಗೆ ನನ್ನ ಭಯವೆಲ್ಲಿಯದು?”

“ದೇವಯಾನಿ! ಕೋಪಿಸಬೇಡ. ಅಂದು ನಾನು ಋಷಿಯ ವಿಷಯ ವಾಗಿ ಹೇಳಿದುದರಲ್ಲಿ ಸುಳ್ಳೇನಿದೆ? ಈತನು ರಾಜರ್ಷಿಯು. ನಾನು ನ್ಯಾಯ

ಧರ್ಮಮಾರ್ಗಾನುವರ್ತಿನಿಯಾಗಿದ್ದೇನೆ. ಆದುದರಿಂದ ನಿನಗೆ ಭಯಪಡುವ ಕಾರಣವೂ ಇಲ್ಲ. ನೀನು ರಾಜನನ್ನು ಪತಿಯನ್ನಾಗಿ ಸ್ವೀಕರಿಸಿದಂತೆಯೇ ನಾನೂ ನಿನ್ನ ಸಖಿಯಾದುದರಿಂದ ಅದೇ ರಾಜನನ್ನೇ ಪತಿಯನ್ನಾಗಿ ವರಿಸಿದೆನು. ಸಖಿಯ ಪತಿಯು ತನ್ನ ಪತಿಯೂ ಆಗಬಹುದೆಂಬ ಸಂಪ್ರದಾಯವಿರುವುದನ್ನು ನೀನರಿಯೆಯಾ? ನೀನು ಬ್ರಾಹ್ಮಣಿಯಾಗಿರು ವುದರಿಂದ ನನಗೆ ಪೂಜ್ಯಳೆಂಬುದೇನೋ ನಿಜ. ಆದರೆ ನಾನು ಈ ರಾಜರ್ಷಿ ಯನ್ನು ನಿನಗಿಂತಲೂ ಪೂಜ್ಯತಮನೆಂದು ಭಾವಿಸಿರುವುದು ನಿನಗೆ ತಿಳಿದಿಲ್ಲವೇ?"

ಶರ್ಮಿಷ್ಠೆಯ ಮಾತುಗಳಿಗೆ ದೇವಯಾನಿಯಿಂದ ಉತ್ತರಿಸಲು ಸಾಧ್ಯ ವಾಗಲಿಲ್ಲ. ರಾಜನೂ ಮೆಲ್ಲ-ಮೆಲ್ಲನೆ ಹೆಜ್ಜೆಯಿಡುತ್ತಾ ಆ ವೇಳೆಗೆ ಶರ್ಮಿಷ್ಠೆಯ ಅರಮನೆಯೊಳಗೆ ಬಂದಿದ್ದನು. ದೇವಯಾನಿಯು ಕೋಪದಿಂದ ರಾಜನ ಕಡೆಗೆ ತಿರುಗಿ ಹೇಳಿದಳು :

"ಮಹಾರಾಜ! ನೀನು ಮಹಾಪರಾಧವನ್ನು ಮಾಡಿರುವೆ. ನಾನು ಇನ್ನು ಮುಂದೆ ಇಲ್ಲಿ ಒಂದು ಕ್ಷಣಕಾಲವೂ ನಿಲ್ಲಲಾರೆನು."–ಎಂದು ಹೇಳುತ್ತಾ ಹೊರಟೇಬಿಟ್ಟಳು.

ಯಯಾತಿಯೂ ದೇವಯಾನಿಯನ್ನೂ ಸಮಾಧಾನಮಾಡುವ ಸಲು ವಾಗಿ ಅವಳ ಹಿಂದೆಯೇ ಹೊರಟನು. 'ಕೋಪಿಸಬೇಡ, ದೇವಿ!'–ಎಂದೂ ಅಂಗಲಾಚಿದನು.

ದೇವಯಾನಿಯು ಒಂದು ಮಾತನ್ನೂ ಆಡದೇ ಮುಂದೆ-ಮುಂದೆ ಹೊರಟಳು. ಕಣ್ಣುಗಳು ಕೆಂಪಾಗಿದ್ದುವು. ಕಾದ ಕಂಬನಿಗಳು ಉದುರು ತ್ತಿದ್ದುವು. ಅವಳು ತಂದೆಯಾದ ಶುಕ್ರರ ಸಮೀಪವನ್ನು ಸೇರಿ ಬಿಕ್ಕಿ-ಬಿಕ್ಕಿ ಅಳಲಾರಂಭಿಸಿದಳು. ಯಯಾತಿಯೂ ಬಂದು ಶುಕ್ರರಿಗೆ ಸಾಷ್ಟಾಂಗವೆರಗಿ, ಸ್ವಲ್ಪದೂರದಲ್ಲಿ ನಿಂತನು. ಶುಕ್ರರು ಮಗಳನ್ನು ಸಮಾಧಾನಪಡಿಸುತ್ತಾ 'ಏಕಳುವೆಯಮ್ಮಾ?'–ಎಂದು ಕೇಳಿದರು.

"ಅಪ್ಪಾ! ಅಧರ್ಮದಿಂದ ಧರ್ಮವು ಜಯಿಸಲ್ಪಟ್ಟಿತು. ನೀಚರು ಪ್ರಾಬಲ್ಯಕ್ಕೆ ಬಂದರು. ಸತ್ಪುರುಷರ ಪತನವಾಗಿಹೋಯಿತಪ್ಪಾ! ನನ್ನ

ದುಃಖವನ್ನು ಏನೆಂದು ಹೇಳಿಕೊಳ್ಳಲಿ? ಯಯಾತಿಯಿಂದ ನನ್ನ ದಾಸಿಯಾದ ಶರ್ಮಿಷ್ಠೆಗೆ ಮೂವರು ಪುತ್ರರು ಜನಿಸಿರುವರಪ್ಪಾ! ದುರ್ಭಾಗ್ಯಳಾದ ನನಗೆ



ಎರಡೇ ಮಕ್ಕಳು. ಇದರಿಂದ ನನಗಿಂತಲೂ ಶರ್ಮಿಷ್ಠೆಯೇ ಮೇಲಾದ ಹಾಗಾಯಿತಲ್ಲಾ! ಈ ರಾಜನಾದರೋ ಮಹಾಧರ್ಮಿಷ್ಠನೆಂದು ಹೆಸರು ಪಡೆದಿರುವನು. ಆದರೆ ಪ್ರಕೃತವಿಷಯದಲ್ಲಿ ಇವನು ಲೋಕಮರ್ಯಾದೆ ಯನ್ನೇ ಮೀರಿ ನಡೆದಿರುವನಪ್ಪಾ!"

ಮಗಳ ಮಾತುಗಳನ್ನು ಕೇಳಿ ಶುಕ್ರರಿಗೆ ದುಃಖ-ಕೋಪಗಳೆರಡೂ ಉಂಟಾದುವು. ರಾಜನ ಹೇಳಿಕೆಯನ್ನು ಕೇಳುವ ಸಹನೆಯೂ ಇಲ್ಲವಾಯಿತು. ರಾಜನನ್ನು ಶಪಿಸಿಯೇ ಬಿಟ್ಟರು.

“ಧರ್ಮಜ್ಞನಾಗಿದ್ದೂ ಕಾಮತೃಪ್ತಿಗಾಗಿ ಅಧರ್ಮವನ್ನೆಸಗಿದ್ದರಿಂದ ನಿನಗೆ ಈಗಲೇ ವೃದ್ಧಾಪ್ಯವುಂಟಾಗಲಿ.”

“ಪೂಜ್ಯರೇ! ಧರ್ಮೈಕಬುದ್ಧಿಯುಳ್ಳ ನನ್ನನ್ನು ವೃಥಾ ಶಾಪಕ್ಕೀಡು ಮಾಡಬೇಡಿರಿ. ನಾನು ಶರ್ಮಿಷ್ಠೆಯಿಂದ ಯಾಚಿತನಾದೆನು. ಯಾಚಕರಿಗೆ ಇಲ್ಲವೆನ್ನುವುದು ಧರ್ಮಸಮ್ಮತವೆನಿಸಲಾರದು. ಅವಳ ಯಾಚನೆಯ ಪೂರಣಕ್ಕಾಗಿ ಅವಳೊಡನೆ ಸೇರಿದೆನೇ ಹೊರತು ಕಾಮತೃಪ್ತಿಗಾಗಿ ಖಂಡಿತ ವಾಗಿಯೂ ಅಲ್ಲ.

**ಋತುಂ ವೈ ಯಾಚಮಾನಾಯ ನ ದದಾತಿ ಪುಮಾನೃತುಮ್ ।**
**ಭ್ರೂಣಹೇತ್ಯುಚ್ಯತೇ ಬ್ರಹ್ಮನ್ಸ ಇಹ ಬ್ರಹ್ಮವಾದಿಭಿಃ ॥೩೩॥**

ಋತುಸ್ನಾತೆಯಾದ ಸ್ತ್ರೀಯ ಆಕಾಂಕ್ಷೆಗೆ ಮನ್ನಣೆಕೊಡದ ಪುರುಷನಿಗೆ ಭ್ರೂಣಹತ್ಯೆಮಾಡಿದ ಪಾಪವುಂಟಾಗುವುದೆಂದು ಬ್ರಹ್ಮವಿದರು ಹೇಳುತ್ತಾರೆ.

**ಅಭಿಕಾಮಾಂ ಸ್ತ್ರಿಯಂ ಯಶ್ಚ ಗಮ್ಯಾಂ ರಹಸಿ ಯಾಚಿತಃ ।**
**ನೋಪೈತಿ ಸ ಚ ಧರ್ಮೇಷು ಭ್ರೂಣಹೇತ್ಯುಚ್ಯತೇ ಬುಧೈಃ ॥೩೪॥**

ಕಾಮಿನಿಯಾದ ಮತ್ತು ಧರ್ಮತಃ ರತಿಸುಖಕ್ಕೆ ಯೋಗ್ಯಳಾದ ಸ್ತ್ರೀಯು ರಹಸ್ಯದಲ್ಲಿ ರತಿಸುಖಕ್ಕಾಗಿ ಮಾಡುವ ಯಾಚನೆಯನ್ನು ಯಾವನು ತಿರಸ್ಕರಿಸುತ್ತಾನೆಯೋ–ಅಂತಹವನು ಭ್ರೂಣಹತ್ಯೆಮಾಡಿದ ಪಾತಕಿಗೆ ಸಮಾನನೆಂದು ವಿದ್ವಾಂಸರು ಹೇಳುತ್ತಾರೆ. ಈ ಕಾರಣದಿಂದ ನಾನು ಶರ್ಮಿಷ್ಠೆಯ ಯಾಚನೆಯನ್ನು ಸಲ್ಲಿಸಿದೆನು.”

“ಮಹಾರಾಜ! ನೀನು ಹೇಳುವುದು ನಿಜವಾದರೂ ನನ್ನ ಅಧೀನ ದಲ್ಲಿರುವ ನೀನು ನನ್ನ ಅನುಜ್ಞೆಯನ್ನು ಪಡೆಯಬೇಕಾಗಿತ್ತಲ್ಲವೇ?

**ಮಿಥ್ಯಾಚಾರಸ್ಯ ಧರ್ಮೇಷು ಚೌರ್ಯಂ ಭವತಿ ನಾಹುಷ ॥೩೬॥**

ನಹುಷಪುತ್ರನೇ! ಮಾಡಬಾರದುದನ್ನು ಮಾಡಿ ಅದಕ್ಕೆ ಧರ್ಮದ ಬಣ್ಣವನ್ನು ಬಳಿಯಲು ಹೋದರೆ ಅದು ಧರ್ಮದ ಕಳ್ಳತನವೆನಿಸಿಕೊಳ್ಳು ತ್ತದೆ.”

ಯಯಾತಿಯು ನಿರುತ್ತರನಾದನು. ಶುಕ್ರರ ಶಾಪವು ಒಡನೆಯೇ ಪರಿಣಾಮಕಾರಿಯಾಯಿತು. ಅವನು ಮುದುಕನಾದನು. ತನಗುಂಟಾದ

ಪರಿಸ್ಥಿತಿಯನ್ನು ಕಂಡು ಪಶ್ಚಾತ್ತಾಪಪಟ್ಟವನಾಗಿ ಪುನಃ ಶುಕ್ರರನ್ನು ಪ್ರಾರ್ಥಿಸಿದನು: "ಮಹರ್ಷಿಗಳೇ! ನಾನು ಯೌವನದ ಸುಖದಿಂದ ತೃಪ್ತನಾಗಿಲ್ಲ. ದೇವಯಾನಿಯೊಡನೆ ಇನ್ನೂ ಹಲವಾರು ವರ್ಷಗಳ ಕಾಲ ಸುಖ



ಪಡಬೇಕೆಂಬ ಅಭಿಲಾಷೆಯಿದೆ. ದಯೆಯಿಟ್ಟು ಮುದಿತನವು ನನ್ನಿಂದ ದೂರನಿಲ್ಲುವಂತೆ ಅನುಗ್ರಹಿಸಿರಿ."

"ಶಾಪವನ್ನು ಹಿಂದಕ್ಕೆ ತೆಗೆದುಕೊಳ್ಳಲು ಸಾಧ್ಯವಾಗಲಾರದು, ಮಹಾರಾಜ! ನಾನೆಂದೂ ಸುಳ್ಳನ್ನಾಡಿದವನಲ್ಲ. ನನ್ನ ಶಾಪದ ಫಲವಾಗಿ ಈಗಾಗಲೇ ನಿನ್ನ ಮುಖದ ಮೇಲೆ ಮುಪ್ಪಿನ ಚಿಹ್ನೆಗಳು ಕಾಣುತ್ತಿವೆ."

ಶುಕ್ರರು ಕ್ಷಣಕಾಲ ಯೋಚಿಸಿದರು. ದೇವಯಾನಿಯ ಸುಖವು ಅವರ ಕಣ್ಣುಮುಂದೆ ನಿಂತಿತು. ಯಯಾತಿಗೆ ಹೇಳಿದರು :

"ಆದರೆ ನಿನ್ನ ಮುದಿತನವನ್ನು ಬೇರಾರಿಗಾದರೂ ಕೊಟ್ಟು ಅವರಿಂದ ನೀನು ಯೌವನವನ್ನು ವಿನಿಮಯವಾಗಿ ಪಡೆಯಬಹುದು."

ದುಃಖದಲ್ಲಿಯೇ ಸುಖವೂ ಇರುವುದೆಂದರೆ ಇದೇ ಅಲ್ಲವೇ? ಯಯಾತಿಯು ಪ್ರಾರ್ಥಿಸಿದನು :

"ಪೂಜ್ಯರೇ! ತಮ್ಮ ಅನುಗ್ರಹಕ್ಕೆ ನಾನು ಕೃತಜ್ಞನಾಗಿರುವೆನು. ನನ್ನ ಮಕ್ಕಳಲ್ಲಿ ಯಾರು ನನ್ನ ವೃದ್ಧಾಪ್ಯವನ್ನು ತೆಗೆದುಕೊಂಡು ತಮ್ಮ ಯೌವನವನ್ನು ಕೊಡುತ್ತಾರೆಯೋ–ಅವರಿಗೇ ನನ್ನ ರಾಜ್ಯ-ಕೋಶಾದಿಗಳು ಸಲ್ಲುವಂತೆ ಅನುಗ್ರಹಮಾಡಿರಿ ಮತ್ತು ಆತನೇ ಧರ್ಮಾತ್ಮನೆಂದು ಲೋಕಪ್ರಸಿದ್ಧನಾಗಲಿ."

"ಮಹಾರಾಜ! ನನ್ನನ್ನು ಸ್ಮರಿಸಿ ನೀನು ನಿನ್ನ ವೃದ್ಧಾಪ್ಯವನ್ನು ಯಾರಿಗೆ ಬೇಕಾದರೂ ಕೊಡಲು ಸಾಧ್ಯವಾಗುವುದು. ಅಲ್ಲದೇ ನಿನ್ನ ಇಚ್ಛೆಯಂತೆ ತನ್ನ ಯೌವನವನ್ನು ನಿನಗೆ ಕೊಡುವ ಮಗನೇ ಮುಂದೆ ಈ ರಾಜ್ಯದ ಉತ್ತರಾಧಿಕಾರಿಯಾಗಿ ಕೀರ್ತಿವಂತನಾಗಿ ಬಾಳಿ ಆದರ್ಶಪುರುಷನಾಗುವನು."

೮೩ನೆಯ ಅಧ್ಯಾಯವು ಮುಗಿಯಿತು.

೮೪ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಮುಪ್ಪನ್ನು ಸ್ವೀಕರಿಸಿ ಯೌವನವನ್ನು ಕೊಡುವಂತೆ ಯಯಾತಿಯು ಮಕ್ಕಳನ್ನು ಕೇಳಿದುದು : ನಾಲ್ಕು ಮಕ್ಕಳ ಅಸಮ್ಮತಿ : ಅವರಿಗೆ ಶಾಪಪ್ರದಾನ : ಪೂರುವಿನ ಸಮ್ಮತಿ : ರಾಜನು ಅವನನ್ನು ಅನುಗ್ರಹಿಸಿ ಯೌವನವನ್ನು ಪಡೆದುದು

ವೈಶಂಪಾಯನರು ಹೇಳುತ್ತಾರೆ :

**ಜರಾಂ ಪ್ರಾಪ್ಯ ಯಯಾತಿಸ್ತು ಸ್ವಪುರಂ ಪ್ರಾಪ್ಯ ಚೈವ ಹಿ।**
**ಪುತ್ರಂ ಜ್ಯೇಷ್ಠಂ ವರಿಷ್ಠಂ ಚ ಯದುಮಿತ್ಯಬ್ರವೀದ್ವಚಃ ॥೧॥**

"ಜನಮೇಜಯ! ಹೀಗೆ ಯಯಾತಿಯು ವೃದ್ಧಾಪ್ಯವನ್ನು ಹೊಂದಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಒಂದು ದಿನ ಜ್ಯೇಷ್ಠನೂ ಶ್ರೇಷ್ಠನೂ ಆದ ಯದುವೆಂಬ ಮಗನನ್ನು ಕರೆದು ಹೇಳಿದನು :

**ಜರಾ ವಲೀ ಚ ಮಾಂ ತಾತ ಪಲಿತಾನಿ ಚ ಪರ್ಯಗುಃ ।**
**ಕಾವ್ಯಸ್ಯೋಶನಸಃ ಶಾಪಾನ್ನ ಚ ತೃಪ್ತೋಽಸ್ಮಿ ಯೌವನೇ ॥೨॥**

"ಮಗು! ಶುಕ್ರರ ಶಾಪದಿಂದ ನನಗೆ ವೃದ್ಧಾಪ್ಯವುಂಟಾಗಿದೆ. ಇದಕ್ಕೆ ಸೂಚಕವಾಗಿ ಮೈಯೆಲ್ಲವೂ ಸುಕ್ಕಿ, ಕೂದಲುಗಳೆಲ್ಲವೂ ನರೆತುಹೋಗಿವೆ. ಆದರೆ ಯೌವನದ ಸುಖೋಪಭೋಗಗಳಲ್ಲಿ ನಾನಿನ್ನೂ ಸಂಪೂರ್ಣವಾದ ತೃಪ್ತಿಯನ್ನು ಹೊಂದಿರುವುದಿಲ್ಲ.

**ತ್ವಂ ಯದೋ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ।**
**ಯೌವನೇನ ತ್ವದೀಯೇನ ಚರೇಯಂ ವಿಷಯಾನಹಮ್ ॥೩॥**

**ಪೂರ್ಣೇ ವರ್ಷಸಹಸ್ರೇ ತು ಪುನಸ್ತೇ ಯೌವನಂ ತ್ವಹಮ್ ।**
**ದತ್ತ್ವಾ ಸ್ವಂ ಪ್ರತಿಪತ್ಸ್ಯಾಮಿ ಪಾಪ್ಮಾನಂ ಜರಯಾ ಸಹ ॥೪॥**

ಆದುದರಿಂದ ಯದುಕುಮಾರ! ಈ ದುರ್ಬಲವಾದ ವೃದ್ಧಾಪ್ಯ ದೊಡನೆ ನನ್ನ ದೋಷಗಳನ್ನು ತೆಗೆದುಕೊಂಡು ನನಗೆ ನಿನ್ನ ಯೌವನವನ್ನು ಕೊಡುವೆಯಾ? ಒಂದು ಸಾವಿರ ವರ್ಷಗಳು ಕಳೆದನಂತರ ನಿನ್ನ ಯೌವನ ವನ್ನು ಪುನಃ ನಿನಗೇ ಕೊಟ್ಟು ವೃದ್ಧಾಪ್ಯವನ್ನು ದೋಷದೊಡನೆ ಹಿಂದಕ್ಕೆ ತೆಗೆದುಕೊಳ್ಳುವೆನು."

ಯದುವು ಹೇಳುತ್ತಾನೆ :

**ಜರಾಯಾಂ ಬಹವೋ ದೋಷಾಃ ಪಾನಭೋಜನಕಾರಿತಾಃ ।**
**ತಸ್ಮಾಜ್ಜರಾಂ ನ ತೇ ರಾಜನ್ಗ್ರಹೀಷ್ಯ ಇತಿ ಮೇ ಮತಿಃ ॥೫॥**

**ಸಿತಶ್ಮಶ್ರುರ್ನಿರಾನನ್ದೋ ಜರಯಾ ಶಿಥಿಲೀಕೃತಃ ।**
**ವಲೀಸಂಗತಗಾತ್ರಸ್ತು ದುರ್ದರ್ಶೋ ದುರ್ಬಲಃ ಕೃಶಃ ॥೬॥**

**ಅಶಕ್ತಃ ಕಾರ್ಯಕರಣೇ ಪರಿಭೂತಃ ಸ ಯೌವನೈಃ ।**
**ಸಹೋಪಜೀವಿಭಿಶ್ಚೈವ ತಾಂ ಜರಾಂ ನಾಭಿಕಾಮಯೇ ॥೭॥**

**ಸನ್ತಿ ತೇ ಬಹವಃ ಪುತ್ರಾ ಮತ್ತಃ ಪ್ರಿಯತರಾ ನೃಪ ।**
**ಜರಾಂ ಗ್ರಹೀತುಂ ಧರ್ಮಜ್ಞ ತಸ್ಮಾದನ್ಯಂ ವೃಣೀಷ್ವ ವೈ ॥೮॥**

"ಅಪ್ಪಾ! ಮುದಿತನದಲ್ಲಿ ಅನೇಕವಿಧವಾದ ಲೋಪ-ದೋಷಗಳಿವೆ.

ಅನ್ನ-ಪಾನಾದಿಗಳನ್ನು ಯಥೇಚ್ಛವಾಗಿ ಸೇವಿಸಲು ಸಾಧ್ಯವಿಲ್ಲ. ಶಕ್ತಿಹೀನತೆ ಯಿಂದ ಕೆಲಸಮಾಡಲಾಗದೇ ಇತರರ ಅಸಡ್ಡೆಗೆ ಗುರಿಯಾಗಬೇಕು. ಬಿಳಿಯ ಗಡ್ಡ, ಜೋಲುಬಿದ್ದ ಮುಖ, ಸವೆದುಹೋಗಿರುವ ಕೈ-ಕಾಲುಗಳು, ಸುಕ್ಕಿ ಹೋಗಿರುವ ಚರ್ಮ–ಇಂತಹ ದುರವಸ್ಥೆಯ ವೃದ್ಧಾಪ್ಯವನ್ನು ನಾನು ಇಚ್ಛಿಸೆನಪ್ಪಾ. ನನಗಿಂತಲೂ ಹೆಚ್ಚಿನ ಮಮತೆಯ ಮಕ್ಕಳು ನಿನಗೆ ಇದ್ದಾರೆ. ಅವರಲ್ಲಿ ಯಾರಾದರೂ ನಿನ್ನ ವೃದ್ಧಾಪ್ಯವನ್ನು ತೆಗೆದುಕೊಳ್ಳಲಿ."

ಯಯಾತಿಗೆ ಮುದಿತನದ ವರ್ಣನೆಯು ಬೇಕಾಗಿರಲಿಲ್ಲ. ತಾನೇ ಸ್ವತಃ ಅನುಭವಿಸುತ್ತಿದ್ದಾನೆ. ಯದುವು ಮಾಡಿದ ಮುದಿತನದ ವರ್ಣನೆಯನ್ನು ಕೇಳಿ ಕುಪಿತನಾಗಿ ಹೇಳಿದನು :

**ಯತ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।**
**ತಸ್ಮಾದರಾಜ್ಯಭಾಕ್ತಾತ ಪ್ರಜಾ ತವ ಭವಿಷ್ಯತಿ ॥೯॥**

"ನನ್ನ ಔರಸಪುತ್ರನಾಗಿಯೂ ನಾನು ಹೇಳಿದ ಕಾರ್ಯವನ್ನು ಮಾಡ ಲಾರೆಯಾ? ನೀನು ನಿನ್ನ ಯೌವನವನ್ನು ಕೊಡಲು ನಿರಾಕರಿಸಿದುದರಿಂದ ನಿನ್ನ ಮಕ್ಕಳಾರೂ ರಾಜರಾಗದಿರಲಿ"–ಎಂದು ಶಪಿಸಿ ಎರಡನೆಯವನಾದ ತುರ್ವಸುವನ್ನು ಕರೆಯಿಸಿ ಕೇಳಿದನು :

"ತುರ್ವಸು! ನಿನ್ನ ಯೌವನವನ್ನು ಒಂದು ಸಾವಿರ ವರ್ಷಗಳವರೆಗೆ ಮಾತ್ರ ಕೊಟ್ಟಿರಪ್ಪಾ! ಅನಂತರ ನಾನೇ ನಿನಗೆ ಮತ್ತೆ ನಿನ್ನ ಯೌವನವನ್ನು ಕೊಡುವೆನು. ನಿನ್ನ ಯೌವನವನ್ನು ಪಡೆದುಕೊಂಡು ಇನ್ನೂ ಒಂದು ಸಾವಿರ ವರ್ಷಗಳ ಕಾಲ ಸುಖಪಡುವ ಅಭಿಲಾಷೆಯಿದೆ, ಮಗು!"

ತುರ್ವಸುವು ಹೇಳಿದನು :

**ನ ಕಾಮಯೇ ಜರಾಂ ತಾತ ಕಾಮಭೋಗಪ್ರಣಾಶಿನೀಮ್ ।**
**ಬಲರೂಪಾನ್ತಕರಣೀಂ ಬುದ್ಧಿಪ್ರಾಣಪ್ರಣಾಶಿನೀಮ್ ॥೧೨॥**

"ತಂದೆಯೇ! ಕಾಮೋಪಭೋಗಗಳಿಗೆ ವಿನಾಶಕವಾದ, ಶಕ್ತಿ-ಸಾಮರ್ಥ್ಯಗಳನ್ನೂ ಸೌಂದರ್ಯವನ್ನೂ ವಿನಾಶಮಾಡುವ, ಬುದ್ಧಿಶಕ್ತಿ ಯನ್ನೂ–ಕೊನೆಗೆ ಪ್ರಾಣವನ್ನೂ ಕುಂಠಿತಗೊಳಿಸುವ ವೃದ್ಧಾಪ್ಯವನ್ನು ನಾನು ಅಪೇಕ್ಷಿಸುವುದಿಲ್ಲ."

ಕುಪಿತನಾದ ಯಯಾತಿಯು ಹೇಳುತ್ತಾನೆ :

**ಯತ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।**
**ತಸ್ಮಾತ್ಪ್ರಜಾ ಸಮುಚ್ಛೇದಂ ತುರ್ವಸೋ ತವ ಯಾಸ್ಯತಿ ॥೧೩॥**

**ಸಂಕೀರ್ಣಾಚಾರಧರ್ಮೇಷು ಪ್ರತಿಲೋಮಚರೇಷು ಚ ।**
**ಪಿಶಿತಾಶಿಷು ಚಾನ್ತ್ಯೇಷು ಮೂಢ ರಾಜಾ ಭವಿಷ್ಯಸಿ ॥೧೪॥**

**ಗುರುದಾರಪ್ರಸಕ್ತೇಷು ತಿರ್ಯಗ್ಯೋನಿಗತೇಷು ಚ ।**
**ಪಶುಧರ್ಮೇಷು ಪಾಪೇಷು ಮ್ಲೇಚ್ಛೇಷು ತ್ವಂ ಭವಿಷ್ಯಸಿ ॥೧೫॥**

"ನನ್ನ ಮಗನಾಗಿ ಹುಟ್ಟಿಯೂ ನಿನ್ನ ಯೌವನವನ್ನು ಕೊಡದೇ ಇರುವುದಕ್ಕಾಗಿ ನಿನ್ನ ಸಂತಾನವು ನಶಿಸಲಿ. ಸಂಕೀರ್ಣಜಾತಿಯ, ದುರಾಚಾರಿಗಳ, ವಿಲೋಮಜಾತಿಯ, ಮಾಂಸಭಕ್ಷಕರ, ಗುರುಪತ್ನೀಸಮಾಗಮವನ್ನೂ ಸಹ ಮಾಡಲು ಹಿಂಜರಿಯದ, ಕೇವಲ ಪಶು-ಪಕ್ಷಿಗಳಂತೆ ಜೀವನ ನಡೆಸುವ ಮ್ಲೇಚ್ಛಜಾತಿಗೆ ನೀನು ರಾಜನಾಗು."

ಯಯಾತಿಯು ದೇವಯಾನಿಯ ಮಕ್ಕಳಿಬ್ಬರಿಗೂ ಶಾಪವನ್ನಿತ್ತು ಕಳುಹಿಸಿದ ಮೇಲೆ ಶರ್ಮಿಷ್ಠೆಯ ಮಗನಾದ ದ್ರುಹ್ಯುವನ್ನು ಕರೆದು ಹೇಳಿದನು:

"ದ್ರುಹ್ಯುವೇ! ಒಂದೇ ಒಂದು ಸಾವಿರ ವರ್ಷಗಳ ಕಾಲ ಈ ನನ್ನ ಕಾಂತಿ ಮತ್ತು ರೂಪಗಳನ್ನು ವಿನಾಶಗೊಳಿಸುವ ವೃದ್ಧಾಪ್ಯವನ್ನು ನೀನು ತೆಗೆದುಕೋ. ನಿನ್ನ ಯೌವನವನ್ನು ನನಗೆ ಕೊಡು. ಸಾವಿರವರ್ಷಗಳು ಮುಗಿದೊಡನೆಯೇ ನಿನ್ನ ಯೌವನವನ್ನು ಪುನಃ ನಿನಗೇ ಕೊಟ್ಟು ನನ್ನ ವೃದ್ಧಾಪ್ಯವನ್ನು ದೋಷದೊಡನೆ ಹಿಂದಕ್ಕೆ ತೆಗೆದುಕೊಳ್ಳುವೆನು."

ದ್ರುಹ್ಯುವು ಹೇಳುತ್ತಾನೆ :

**ನ ಗಜಂ ನ ರಥಂ ನಾಶ್ವಂ ಜೀರ್ಣೋ ಭುಙ್ಕ್ತೇ ನ ಚ ಸ್ತ್ರಿಯಮ್ ।**
**ವಾಕ್ಸಙ್ಗಶ್ಚಾಸ್ಯ ಭವತಿ ತಾಂ ಜರಾಂ ನಾಭಿಕಾಮಯೇ ॥೧೬॥**

"ಅಪ್ಪಾ! ಮುದಿತನದಲ್ಲಿ ಕುದುರೆಸವಾರಿ ಮಾಡಲು ಸಾಧ್ಯವಿಲ್ಲ.

ಆನೆ, ರಥಾದಿಗಳ ಮೇಲೆ ಹತ್ತಲೂ ಸಾಧ್ಯವಾಗಲಾರದು. ಹೆಂಗಸರನ್ನೂ ಉಪಭೋಗಿಸಲು ಸಾಧ್ಯವಿಲ್ಲ. ಮುದಿತನದಲ್ಲಿ ಮಾತೂ ತೊದಲುತ್ತದೆ. ಇಂತಹ ನಿಷ್ಪ್ರಯೋಜಕವಾದ ಮುದಿತನವು ನನಗೆ ಬೇಡವಪ್ಪಾ."

ಯಯಾತಿಗೆ ಇಂತಹ ಮಾತುಗಳನ್ನು ಕೇಳಿ ಸೈರಣೆಯು ತಪ್ಪಿತು. ಕೋಪವು ಹೆಚ್ಚಿತು.

"ಮಕ್ಕಳು, ಮಕ್ಕಳು–ಎಂದು ಹಂಬಲಿಸುವುದೇಕೆ? ಕೇವಲ ಒಂದು ಸಾವಿರ ವರ್ಷಗಳ ಕಾಲ ನಿನ್ನ ಯೌವನವನ್ನು ನನಗೆ ಕೊಡಲು ಸಾಧ್ಯವಿಲ್ಲ ವೆಂದರೆ ನೀನು ಮಗನಾಗಿ ಹುಟ್ಟಿದುದರ ಪ್ರಯೋಜನವಾದರೂ ಏನು? ಆನೆ, ರಥ, ಕುದುರೆ–ಇತ್ಯಾದಿಗಳಿಂದ ಸುಖವನ್ನು ಅಭಿಲಾಷಿಸಿರುವೆಯಲ್ಲವೇ? ರಥಸಂಚಾರಕ್ಕೆ ಅಯೋಗ್ಯವಾದ, ಸರಿಯಾದ ದಾರಿಯಿಲ್ಲದ, ಹಳ್ಳ-ಕೊಳ್ಳಗಳೂ, ಬೆಟ್ಟ-ಗುಡ್ಡಗಳೂ ಇರುವ ಪ್ರದೇಶಕ್ಕೆ ನೀನು ರಾಜ ನಾಗುವೆ. ನೀನು ಹೆಸರಿಗೆ ಮಾತ್ರ ರಾಜನಾಗಿರುವೆಯೇ ಹೊರತು ನಿನ್ನ ಅಧಿಕಾರವೇನೂ ಆ ರಾಜ್ಯದಲ್ಲಿ ನಡೆಯದಿರಲಿ."

ಅನಂತರ ಯಯಾತಿಯು ಅನುವನ್ನು ಕರೆದು ಹೇಳಿದನು :

"ಕುಮಾರ! ಕೇವಲ ಹತ್ತು ನೂರು ವರ್ಷಗಳ ಕಾಲ ನನ್ನ ಮುದಿ ತನವನ್ನು ನನ್ನ ಪಾಪದೊಡನೆ ತೆಗೆದುಕೊಂಡು ನಿನ್ನ ಯೌವನವನ್ನು ನನಗೆ ಕೊಡು. ಅವಧಿಯು ಕಳೆದ ದಿನವೇ ನಿನಗೆ ನಿನ್ನ ಯೌವನವನ್ನು ಕೊಟ್ಟು ಬಿಡುತ್ತೇನೆ."

ಅನುವು ಹೇಳುತ್ತಾನೆ :

**ಜೀರ್ಣಃ ಶಿಶುವದಾದತ್ತೇSಕಾಲೇSನ್ನಮಶುಚಿರ್ಯಥಾ ।**
**ನ ಜುಹೋತಿ ಚ ಕಾಲೇSಗ್ನಿಂ ತಾಂ ಜರಾಂ ನಾಭಿಕಾಮಯೇ ॥೨೪॥**

"ಮುದಿತನದಲ್ಲಿ ಹೋಮ-ಹವನಾದಿಗಳನ್ನೂ, ಯಜ್ಞ-ಯಾಗಾದಿ ಗಳನ್ನೂ ಮಾಡಲಾಗುವುದಿಲ್ಲ. ಮಕ್ಕಳಂತೆ ಕಾಲಾಕಾಲವಿವೇಚನೆಯಿಲ್ಲದೇ ಆಹಾರವನ್ನು ತಿನ್ನಬೇಕಾಗುವುದು. ಅಶುಚಿಯಾಗಿರಬೇಕಾಗುವುದು. ಆದುದರಿಂದ ನಾನು ಮುಪ್ಪನ್ನು ಅಪೇಕ್ಷಿಸುವುದಿಲ್ಲ."

ಯಯಾತಿಯು ಹೇಳಿದನು :

ಯತ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।
ಜರಾದೋಷಸ್ತ್ವಯಾ ಪ್ರೋಕ್ತಸ್ತಸ್ಮಾತ್ತ್ವಂ ಪ್ರತಿಪತ್ಸ್ಯಸೇ ॥೨೫॥

ಪ್ರಜಾಶ್ಚ ಯೌವನಪ್ರಾಪ್ತಾ ವಿನಶಿಷ್ಯನ್ತ್ಯನೋ ತವ ।
ಅಗ್ನಿಪ್ರಸ್ಕನ್ದನಪರಸ್ತ್ವಂ ಚಾಪ್ಯೇವಂ ಭವಿಷ್ಯಸಿ ॥೨೬॥

"ನೀನು ನನ್ನ ಮಗನಾದರೂ ನಾನು ಕೇಳಿದ ಯೌವನವನ್ನು ನೀನು ಕೊಡದೇ ಮುದಿತನದ ವಿಷಯದಲ್ಲಿ ದೋಷವನ್ನೆಣಿಸುತ್ತಿರುವ ನಿನ್ನನ್ನು ಈಗಲೇ ವೃದ್ಧಾಪ್ಯವು ಆವರಿಸಲಿ. ನಿನ್ನ ಮಕ್ಕಳೆಲ್ಲರೂ ಯೌವನಕ್ಕೆ ಕಾಲಿಟ್ಟೊಡನೆಯೇ ಸತ್ತುಹೋಗಲಿ. ಇದೂ ಅಲ್ಲದೇ ನನ್ನ ಶಾಪದಿಂದ ಉಂಟಾಗುವ ವೃದ್ಧಾಪ್ಯದ ಕಾರಣದಿಂದ ನೀನು ಅಭಿಲಷಿಸಿರುವ ಯಜ್ಞ-ಯಾಗಾದಿಗಳೂ, ಹೋಮ-ಹವನಾದಿಗಳೂ ಯಾವುದೂ ನಿನ್ನಿಂದ ನಡೆಯ ಲಾರವು."

ಅನಂತರ ಪೂರುವನ್ನು ಸಂಬೋಧಿಸಿ ಹೇಳಿದನು :

"ಪೂರುವೇ! ನೀನು ಕಿರಿಯವನಾದರೂ ನನ್ನ ಅಭಿಲಾಷೆಯನ್ನು ಪೂರೈಸಿಕೊಡುವುದರಿಂದ ಶ್ರೇಷ್ಠನೆನಿಸುವೆ. ನನ್ನ ಮಾತೊಂದನ್ನು ನಡೆಸಿಕೊಡುವೆಯಾ? ಶುಕ್ರರ ಶಾಪದಿಂದ ನನಗೆ ಅಕಾಲದಲ್ಲಿ ವೃದ್ಧಾಪ್ಯವು ಒದಗಿದೆ, ಮಗು! ಆದರೆ ಯೌವನಾವಸ್ಥೆಯಲ್ಲಿಯೇ ಇನ್ನೂ ಹಲವಾರು ವರ್ಷಗಳು ಕಳೆಯಬೇಕೆಂಬ ಅಭಿಲಾಷೆಯು ನನಗಿದೆ. ಇದುವರೆಗಿನ ಯೌವನದ ಸುಖೋಪಭೋಗಗಳಿಂದ ನನಗಿನ್ನೂ ತೃಪ್ತಿಯುಂಟಾಗಿಲ್ಲ. ಆದುದರಿಂದ ನಿನ್ನ ಯೌವನವನ್ನು ಕೇವಲ ಒಂದು ಸಾವಿರ ವರ್ಷಗಳ ಕಾಲ ನನಗೆ ಕೊಟ್ಟು ನನ್ನ ವೃದ್ಧಾಪ್ಯವನ್ನು ಸ್ವೀಕರಿಸು. ಅವಧಿಯು ಮುಗಿದನಂತರ ನಿನ್ನ ಯೌವನವನ್ನು ನಿನಗೇ ಕೊಟ್ಟು ನನ್ನ ಮುದಿತನವನ್ನು ಹಿಂದಕ್ಕೆ ತೆಗೆದುಕೊಳ್ಳುವೆನು, ಆಗಬಹುದೇ?"

ತಂದೆಯ ಮಾತಿಗೆ ಉತ್ತರವಾಗಿ ಪೂರುವು ಹೇಳಿದನು :

ಪ್ರತಿಪತ್ಸ್ಯಾಮಿ ತೇ ರಾಜನ್ಪಾಪ್ಮಾನಂ ಜರಯಾ ಸಹ ।
ಗೃಹಾಣ ಯೌವನಂ ಮತ್ತಶ್ಚರಕಾ ಮಾನ್ಯಥೇಪ್ಸಿತಾನ್ ॥೩೦॥

"ಮಹಾರಾಜ! ನಿನ್ನ ಆಜ್ಞೆಯನ್ನು ನಾನು ಶಿರಸಾವಹಿಸಿ ಪರಿಪಾಲಿಸುವೆನು. ನಿನ್ನ ದೋಷದೊಡನೆ ಮುಪ್ಪನ್ನು ನಾನು ತೆಗೆದುಕೊಳ್ಳುತ್ತೇನೆ. ನನ್ನಿಂದ ಯೌವನವನ್ನು ಪಡೆದು ಯಥೇಚ್ಛವಾಗಿ ವಿಹರಿಸು. ನೀನು ಹೇಳಿದಂತೆಯೇ ನಾನು ಒಂದು ಸಾವಿರ ವರ್ಷಗಳ ಕಾಲ ವೃದ್ಧಾಪ್ಯದಲ್ಲಿಯೇ ಜೀವಿಸಿರುವೆನು."

ಯಯಾತಿಗೆ ಅತೀವ ಆನಂದವುಂಟಾಗಿ ಅವನು ಪೂರುವಿಗೆ ಹೀಗೆಂದನು :

"ಪೂರುವೇ! ನೀನಾಳುವ ರಾಜ್ಯದಲ್ಲಿ ಪ್ರಜೆಗಳು ಧಾರ್ಮಿಕರಾಗಿ ಸಕಲಸಂಪತ್ಸಮೃದ್ಧಿಯಿಂದಲೂ ಕೂಡಿ ತೃಪ್ತಿಯಿಂದಿರಲಿ. ನಿನ್ನ ಸಂತತಿಯೇ ಸರ್ವಸಮೃದ್ಧಿಯಿಂದ ಕೂಡಿ ರಾಜ್ಯಪದವಿಯನ್ನು ಅನುಭವಿಸಲಿ"–ಎಂದು ಹೇಳಿ, ಆಶೀರ್ವದಿಸಿ, ಶುಕ್ರರನ್ನು ನೆನೆದು, ತನ್ನ ವೃದ್ಧಾಪ್ಯವನ್ನು ಪೂರುವಿಗೆ ಕೊಟ್ಟು ಅವನ ಯೌವನವನ್ನು ವಿನಿಮಯಮಾಡಿಕೊಂಡನು."

ಲ೪ನೆಯ ಅಧ್ಯಾಯವು ಮುಗಿಯಿತು.

ಲ೫ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಯಯಾತಿರಾಜನ ವಿಷಯಸೇವನೆ : ವೈರಾಗ್ಯ: ಪೂರುವಿಗೆ ಪಟ್ಟಗಟ್ಟಿ ವನಪ್ರಸ್ಥಾನ

ಯಯಾತಿಗೆ ಯೌವನವು ಪುನಃ ಲಭಿಸಿತು. ಆದರೆ ಕಾಮೋಪಭೋಗಗಳನ್ನು ಅನುಭವಿಸುವ ಸಲುವಾಗಿಯೇ ಯೌವನವನ್ನು ಪುನಃ ಅವನು ಪಡೆದಿದ್ದರೂ–ಧರ್ಮಕ್ಕೆ ವಿರುದ್ಧವಾದ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ. ರಾಜಯೋಗ್ಯವಾದ ನಿತ್ಯ-ನೈಮಿತ್ತಿಕಕರ್ಮಗಳನ್ನು ಯಥೋಕ್ತ ರೀತಿಯಲ್ಲಿ ಮಾಡಿ ದೇವತೆಗಳನ್ನು ತೃಪ್ತಿಪಡಿಸುತ್ತಿದ್ದನು. ದೀನರಾದವರಿಗೆ ಅವರು ಪ್ರಾರ್ಥಿಸಿದುದನ್ನು ಕೊಟ್ಟು ಅನುಗ್ರಹಿಸುತ್ತಿದ್ದನು. ಬ್ರಾಹ್ಮಣರನ್ನೂ ಅತಿಥಿಗಳನ್ನೂ ಅನ್ನ-ಪಾನಾದಿಗಳಿಂದಲೂ, ವೈಶ್ಯರನ್ನು ಅವರ ಐಶ್ವರ್ಯದ ರಕ್ಷಣೆಯಿಂದಲೂ, ಶೂದ್ರರನ್ನು ದಯೆಯಿಂದಲೂ ಸಂರಕ್ಷಿಸುತ್ತಿದ್ದನು. ಪ್ರಜೆಗಳಿಗೆ ಉಪಟಳಕೊಡುತ್ತಿದ್ದ ದಸ್ಯುಗಳಿಗೆ ಘೋರವಾದ ಶಿಕ್ಷೆಯನ್ನು

ವಿಧಿಸುತ್ತಿದ್ದನು. ರಾಜ್ಯಾಡಳಿತದಲ್ಲಿಯೂ ದುಷ್ಟಶಿಕ್ಷಣ-ಶಿಷ್ಟಪರಿಪಾಲನೆ ಗಳನ್ನು ಮಾಡುತ್ತಾ ಬಹಳ ಧರ್ಮದಿಂದ ಸಾಕ್ಷಾತ್ ಇಂದ್ರನಂತೆಯೇ ರಾಜ್ಯಪರಿಪಾಲನೆ ಮಾಡುತ್ತಿದ್ದನು.

ಸುಂದರವಾದ ಯೌವನ, ಸಿಂಹದ ಶಕ್ತಿ, ಅಪರಿಮಿತವಾದ ಕಾಮೋಪ ಭೋಗವಸ್ತುಗಳು–ಇವುಗಳನ್ನು ಹೊಂದಿ ಇತರರಿಂದ ಊಹಿಸಲೂ ಅಶಕ್ಯ ವಾದ, ಪರಿಮಿತಿಯಿಲ್ಲದ ಸುಖವನ್ನು ಯಯಾತಿಯು ಅನುಭವಿಸಿದನು. ಅಂತಹ ಸುಖದಲ್ಲಿಯೂ ಕಾಲವು ಕಳೆದುಹೋಗುತ್ತಿದೆಯಲ್ಲಾ–ಎಂದು ಅವನಿಗೆ ಸ್ವಲ್ಪ ಸಂಕಟವಾಗುತ್ತಿತ್ತು. ಕಾಲದ ಸ್ವರೂಪವನ್ನು ಯಯಾತಿಯು ತಿಳಿದವನಾಗಿ ಕಾಲಾನುಸಾರವಾಗಿ ವಿಶ್ವಾಚೀ ಎಂಬ ಅಪ್ಸರೆಯೊಡನೆ ಕೆಲವು ಕಾಲ ಇಂದ್ರನ ನಂದನವನದಲ್ಲಿಯೂ, ಮತ್ತೊಂದು ವೇಳೆ ಕುಬೇರನ ಅಲಕಾಪಟ್ಟಣದಲ್ಲಿಯೂ, ಬೇರೊಂದು ಸಮಯದಲ್ಲಿ ಮೇರುಪರ್ವತದ ಮೇಲೆಯೂ ವಿಹರಿಸುತ್ತಿದ್ದನು.

ಸುಖಸಾಗರದಲ್ಲಿ ಮುಳುಗಿದ್ದ ಯಯಾತಿಗೆ ಸಹಸ್ರವರ್ಷಗಳು ಕಳೆದು ಸುಖಸಾಗರದಿಂದ ಹೊರಬರುವ ಕಾಲವೂ ಸನ್ನಿಹಿತವಾಯಿತು.

ಆಗ ಸಾವಿರ ವರ್ಷಗಳ ಕಾಲ ಯೌವನದ ಸುಖವೇನೆಂಬುದನ್ನೇ ಕಾಣದೇ ವೃದ್ಧಾಪ್ಯವನ್ನು ಅನುಭವಿಸುತ್ತಿದ್ದ ಪೂರುವನ್ನು ಕರೆಯಿಸಿ ಹೇಳಿದನು:

“ಮಗು! ನಿನ್ನ ಯೌವನಲಾಭದಿಂದ ಸಹಸ್ರವರ್ಷಪರ್ಯಂತವೂ ಕಾಲ-ದೇಶ-ವರ್ತಮಾನಗಳನ್ನನುಸರಿಸಿ ಕಾಮೋಪಭೋಗಗಳನ್ನು ಅನು ಭವಿಸಿದೆನು. ಆದರೆ ಈ ಸಾವಿರ ವರ್ಷಗಳ ಸಾಂಸಾರಿಕ ಸುಖದಿಂದ ನಾನು ಸಂತುಷ್ಟನಾಗಿರುವೆನೆಂದು ಭಾವಿಸಬೇಡ. ಈ ಪ್ರಪಂಚದಲ್ಲಿ ಆಸೆ ಮತ್ತು ಸಂತುಷ್ಟಿ–ಎಂಬುವು ಪರಸ್ಪರವಿರೋಧಿಗಳು. ಒಂದು ಆಸೆಯ ಪೂರಣದಿಂದ ಮತ್ತೊಂದು ಆಸೆಯು ಅಂಕುರಿಸುವುದೇ ಹೊರತು ಒಂದು ಆಸೆಯು ಪೂರೈಸಿದೊಡನೆಯೇ ಸಂತುಷ್ಟಿಯುಂಟಾಗುವುದಿಲ್ಲ. ಯಜ್ಞೇಶ್ವರನಿಗೆ ತುಪ್ಪ ವನ್ನು ಸುರಿದಂತೆ–ಒಂದು ಆಸೆಯ ಪೂರಣವು ಮತ್ತೊಂದು ಆಸೆಯನ್ನು ಉದ್ಬೋಧಿಸುತ್ತದೆ. ಹೆಚ್ಚೇನು ಹೇಳಲಿ? ಈ ಪ್ರಪಂಚದಲ್ಲಿರುವ ಧನ-

ಕನಕ-ವಸ್ತುಗಳೆಲ್ಲವೂ ಒಬ್ಬನದೇ ಆಗಿದ್ದರೂ ಅವನಿಗೆ ತೃಪ್ತಿಯುಂಟಾಗುವುದಿಲ್ಲ. ತಲೆಯೆತ್ತಿ ಮೇಲೆ ನೋಡಿ ಆಕಾಶದಲ್ಲಿರುವುದೂ ತನಗೆ ಬೇಕೆಂದು ಮಾನವನು ಬಯಸುತ್ತಾನೆ. ಆದುದರಿಂದ ಮಾನವನು ಮುಖ್ಯವಾಗಿ ಆಸೆಯೆಂಬುದನ್ನು ಪರಿತ್ಯಜಿಸಬೇಕು. ಆದರೆ ಆಸೆಯ ಪರಿತ್ಯಾಗವು ಅಷ್ಟು ಸುಲಭವಲ್ಲ.

**ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ ।**
**ಯೋಽಸೌ ಪ್ರಾಣಾನ್ತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಮ್ ॥**

ದುರ್ಮತಿಗಳಿಗಂತೂ ಇದನ್ನು ಪರಿತ್ಯಜಿಸಲು ಸಾಧ್ಯವೇ ಆಗಲಾರದು. ಏಕೆಂದರೆ : ಶರೀರವು ಜೀರ್ಣವಾಗಿ ಹೋದರೂ ಆಸೆಯು ಜೀರ್ಣವಾಗಿ ಹೋಗುವುದಿಲ್ಲ. ಆಸೆಯೆಂಬುದು ನಿಶ್ಚಯವಾಗಿಯೂ ಮಾನವನಿಗೆ ಒಂದು ಮಾರಕರೋಗವಿದ್ದಂತೆ. ಅಂತಹ ಆಸೆಯನ್ನು ತ್ಯಜಿಸಿದವನೇ ಪರಮಸುಖಿಯು. ಪೂರು! ನನ್ನ ವಿಷಯದಲ್ಲೇ ಹೇಳುವುದಾದರೆ ನಿನ್ನ ಯೌವನದ ಲಾಭ ಪಡೆದು ಈ ಒಂದು ಸಾವಿರವರ್ಷಗಳು ಯಥೇಚ್ಛವಾಗಿ ಕಾಮೋಪಭೋಗಗಳನ್ನು ಅನುಭವಿಸಿದೆನು. ನನ್ನ ಸಂಕಲ್ಪ ಮತ್ತು ಕಾರ್ಯಗಳೆಲ್ಲವೂ ಕೇವಲ ಸುಖಾನುಭವಕ್ಕಾಗಿಯೇ ಆಗಿತ್ತು. ಆದರೆ ನನ್ನ ಆಸೆಗಳು ಅನುಭವದಿಂದ ತೃಪ್ತಿಗೊಳ್ಳುತ್ತಿರಲಿಲ್ಲ. ಇನ್ನೂ ಹೆಚ್ಚು ಸುಖವನ್ನು ಅನುಭವಿಸಬೇಕೆಂಬ ಹೊಸ-ಹೊಸ ಆಸೆಗಳು ಮೂಡುತ್ತಿದ್ದುವು. ಆದುದರಿಂದ ಮೇಧಾವಿಯು ಆಸೆಯನ್ನು ಪರಿತ್ಯಜಿಸಬೇಕೇ ಹೊರತು ಆಸೆಯನ್ನು ಪೂರ್ಣಮಾಡಿಕೊಳ್ಳಲು ಪ್ರಯತ್ನಿಸಬಾರದು. ನಾನಿನ್ನು ಈ ಆಸೆಯನ್ನು ಪರಿತ್ಯಾಗಮಾಡಿ ನನ್ನ ಮನಸ್ಸನ್ನು ಸಂಪೂರ್ಣವಾಗಿ ಅಂತರ್ಯಾಮಿಯಾದ ಸಚ್ಚಿದಾನಂದಸ್ವರೂಪಿಯೆಡೆಗೆ ಸೆಳೆಯಬೇಕೆಂದಿರುವೆನು. ಪ್ರಾಪಂಚಿಕವಸ್ತುಗಳ ಮೇಲಿನ ಆಸೆಗಳೆಲ್ಲವನ್ನೂ ತೊರೆದು, ಕಾಡಿನಲ್ಲಿ ಜಿಂಕೆ ಮೊದಲಾದ ಪ್ರಾಣಿಗಳೊಡನೆ ಜೀವಿಸಬೇಕೆಂದು ನಿರ್ಧರಿಸಿರುವೆನು. ಕುಮಾರ! ನಿನ್ನ ಉದಾರತೆಯಿಂದ ನಾನು ಸಂತುಷ್ಟನಾಗಿರುವೆನು. ನಿನಗೆ ಮಂಗಳವಾಗಲಿ. ನಿನ್ನ ಯೌವನವನ್ನು ನೀನಿನ್ನು ತೆಗೆದುಕೊಳ್ಳಬಹುದು. ಇದರೊಡನೆ ನನ್ನ ರಾಜ್ಯ-ಕೋಶಾದಿಗಳೆಲ್ಲವೂ ನಿನಗೇ ಸೇರುವುವು.”

ಪೂರುವು ಸರ್ವಾಂಗಸುಂದರನಾದನು. ಯಯಾತಿಯು ಪೂರುವಿನ ಪಟ್ಟಾಭಿಷೇಕಕ್ಕೆ ಸಿದ್ಧತೆಯನ್ನು ನಡೆಸುವಂತೆ ಆಜ್ಞಾಪಿಸಿದನು.

ಪೂರುವಿನ ರಾಜ್ಯಾಭಿಷೇಕವಾರ್ತೆಯು ತಿಳಿದೊಡನೆಯೇ ಬ್ರಹ್ಮ-ಕ್ಷತ್ರ-ವೈಶ್ಯ-ಶೂದ್ರವರ್ಗಗಳ ಪ್ರಮುಖರು ರಾಜನ ಸಮೀಪಕ್ಕೆ ಹೋಗಿ ವಿನಯಪೂರ್ವಕವಾಗಿ ವಿಜ್ಞಾಪಿಸಿಕೊಂಡರು :

"ಮಹಾರಾಜ! ಎಲ್ಲರಿಗಿಂತಲೂ ಕಿರಿಯವನಾದ ಪೂರುವಿಗೆ ರಾಜ್ಯಾಭಿಷೇಕವಾಗುವುದೆಂದು ತಿಳಿದು ಆಶ್ಚರ್ಯಭರಿತರಾಗಿದ್ದೇವೆ. ಪಟ್ಟ ಮಹಿಷಿಯಾದ ದೇವಯಾನಿಯಲ್ಲಿ ಹುಟ್ಟಿರುವ, ಹಿರಿಯ ಮಗನಾಗಿರುವ ಮತ್ತು ಶುಕ್ರರ ಮೊಮ್ಮಗನಾಗಿರುವ ಯದುವನ್ನು ಉಪೇಕ್ಷಿಸಿ ಪೂರುವಿಗೆ ರಾಜ್ಯದ ಪಟ್ಟಗಟ್ಟುವುದು ಸಂಪ್ರದಾಯವಿರುದ್ಧವೂ–ಧರ್ಮವಿರುದ್ಧವೂ ಆಗುವುದಿಲ್ಲವೇ? ಯಾವುದಾದರೂ ಕಾರಣದಿಂದ ಜ್ಯೇಷ್ಠಪುತ್ರನು ಧರ್ಮ ಸಿಂಹಾಸನಕ್ಕೆ ಅಯೋಗ್ಯನಾದರೆ ಜ್ಯೇಷ್ಠಾನುಕ್ರಮವಾಗಿ ಕಿರಿಯರಿಗೆ ಪಟ್ಟಾಭಿ ಷೇಕವು ನಡೆಯಬೇಕೇ ಹೊರತು ಹಿರಿಯ ಮಕ್ಕಳೆಲ್ಲರನ್ನೂ ಉಪೇಕ್ಷಿಸಿ ಕಿರಿಯವನಿಗೆ ಪಟ್ಟಗಟ್ಟುವುದು ಸುನೀತಿಯಾಗಲಾರದಲ್ಲವೇ? ಧರ್ಮಕ್ಕೆ ವಿರೋಧವಿಲ್ಲದಂತೆ ನಡೆಯುವುದು ಸೂಕ್ತವಾಗಿದೆ ಮಹಾರಾಜ!"

"ಬ್ರಾಹ್ಮಣಪ್ರಮುಖರಾದ ಪ್ರಜೆಗಳೇ! ನೀವು ಹೇಳುವುದು ನಿಶ್ಚಯ. ಆದರೆ ಸಂಪ್ರದಾಯವಿರುದ್ಧವೆನಿಸಿದರೂ, ನಾನು ಹಿರಿಯ ಮಕ್ಕಳನ್ನು ಬಿಟ್ಟು ಕಿರಿಯವನಿಗೇ ಪಟ್ಟಗಟ್ಟಲು ನಿಶ್ಚಯಿಸಿರುವ ಕಾರಣವನ್ನು ಕೇಳಿರಿ. ಪೂರು ವೊಬ್ಬನನ್ನುಳಿದು ಉಳಿದ ಮಕ್ಕಳೆಲ್ಲರೂ ನನ್ನ ಮಾತನ್ನು ಉಲ್ಲಂಘಿಸಿರುವರು.

**ಪ್ರತಿಕೂಲಃ ಪಿತುರ್ಯಶ್ಚ ನ ಸ ಪುತ್ರಃ ಸತಾಂ ಮತಃ ॥೨೪॥**

ತಂದೆಯ ವಾಕ್ಯಪರಿಪಾಲನೆಯನ್ನು ಮಾಡದ ಮಗನು ಮಗನೇ ಅಲ್ಲ ವೆಂದು ಧರ್ಮಜ್ಞರು ಹೇಳುತ್ತಾರೆ.

**ಮಾತಾಪಿತ್ರೋರ್ವಚನಕೃದ್ಧಿತಃ ಪಥ್ಯಶ್ಚ ಯಃ ಸುತಃ ।**
**ಸ ಪುತ್ರಃ ಪುತ್ರವದ್ಯಶ್ಚ ವರ್ತತೇ ಪಿತೃಮಾತೃಷು ॥೨೫॥**

ಮಾತಾ-ಪಿತೃಗಳ ವಚನಪರಿಪಾಲನೆಯನ್ನು ಮಾಡುವವನು, ಮಾತಾ-ಪಿತೃಗಳಿಗೆ ಸುಖವನ್ನು ಬಯಸುವವನು ಮತ್ತು ಅವರ ಇಚ್ಛೆಯಂತೆ ನಡೆಯುವವನೇ–ಸುಪುತ್ರನೆನಿಸುವನು. ಯದು, ತುರ್ವಸು, ದ್ರುಹ್ಯು, ಅನು–ಈ ನಾಲ್ವರೂ ನನ್ನ ಮಾತನ್ನು ಉಲ್ಲಂಘಿಸಿದರು. ಪೂರುವೊಬ್ಬನೇ ನನಗೆ ಮಗನು ಮಾತ್ರವಲ್ಲದೇ, ಮಿತ್ರನಂತೆಯೂ ಇದ್ದಾನೆ. ನನ್ನ ಮಾತಿನಂತೆ ತನ್ನ ಯೌವನವನ್ನು ನನಗಿತ್ತನು. ನನ್ನ ವೃದ್ಧಾಪ್ಯವನ್ನು ಒಂದು ಸಾವಿರ ವರ್ಷಗಳ ಕಾಲ ಅನುಭವಿಸಿರುತ್ತಾನೆ. ಆದುದರಿಂದ ನನ್ನ ರಾಜ್ಯಕ್ಕೆ ಒಡೆಯ ನಾಗಲು ಪೂರುವೊಬ್ಬನು ಹೊರತಾಗಿ ಮತ್ತಾರೂ ಯೋಗ್ಯರಲ್ಲ. ಪ್ರಜೆಗಳೇ! ಇದಕ್ಕಿಂತಲೂ ಮಿಗಿಲಾಗಿ ಈ ನಿರ್ಧಾರಕ್ಕೆ ಶುಕ್ರರ ಸಮ್ಮತಿಯೂ ಇರುವುದು. ನನ್ನ ಮಾತನ್ನು ಯಾರು ನಡೆಸಿಕೊಡುವರೋ ಅವರೇ ಈ ರಾಜ್ಯದ ಅಧಿಪತಿಗಳಾಗುವುದಕ್ಕೆ ಶುಕ್ರರೂ ಒಪ್ಪಿದ್ದಾರೆ. ಈ ಕಾರಣಗಳಿಂದ ಪೂರು ವಿಗೇ ರಾಜ್ಯಾಭಿಷೇಕಮಾಡಲು ಅನುಮತಿಕೊಡಬೇಕೆಂಬುದಾಗಿ ತಮ್ಮೆಲ್ಲ ರನ್ನೂ ಪ್ರಾರ್ಥಿಸುತ್ತೇನೆ.''

ಪ್ರಜಾಪ್ರಮುಖರಿಗೆ ರಾಜನಾಡಿದ ಮಾತುಗಳು ಧರ್ಮಸಮ್ಮತವೆನಿಸಿ ದುವು. ಮೇಲಾಗಿ ರಾಜನ ನಿರ್ಧಾರಕ್ಕೆ ಶುಕ್ರರ ಸಮ್ಮತಿಯೂ ಇದ್ದಿತಾದ್ದರಿಂದ ಮುಂದಿನ ರಾಜನ ಮೇಲೆ ದೇವಯಾನಿಯ ಸಂಬಂಧವಾಗಿ ಶುಕ್ರರು ಆಗ್ರಹವನ್ನು ಮಾಡುವರೆಂಬ ಭಯದ ನಿವಾರಣೆಯೂ ಆಯಿತು.

ಪಟ್ಟಣಿಗರು ರಾಜನಿಗೆ ಹೇಳಿದರು :

"ಮಹಾರಾಜ! ತಾವು ಹೇಳಿದುದು ಸರಿ. ಧರ್ಮಸಮ್ಮತವಾಗಿದೆ.

**ಯಃ ಪುತ್ರೋ ಗುಣಸಮ್ಪನ್ನೋ ಮಾತಾಪಿತ್ರೋರ್ಹಿತಃ ಸದಾ ।**
**ಸರ್ವಮರ್ಹತಿ ಕಲ್ಯಾಣಂ ಕನೀಯಾನಪಿ ಸತ್ತಮಃ ॥೩೦॥**

ತಾಯಿ-ತಂದೆಗಳ ವಚನಾನುವರ್ತಿಯಾದವನೇ ಸತ್ಪುತ್ರನೆನಿಸುವನು. ಅವನು ಕಿರಿಯವನಾಗಿದ್ದರೂ ಸಕಲವಾದ ರಾಜ್ಯ-ಕೋಶಾದಿಗಳಿಗೂ ಉತ್ತರಾಧಿಕಾರಿಯಾಗಲು ಅರ್ಹನಾಗುವನು. ನಿಮ್ಮ ಆಜ್ಞೆಯನ್ನು ಪುರಸ್ಕರಿ ಸಿದ ಪೂರುವು ರಾಜನಾಗಲು ಸರ್ವಥಾ ಯೋಗ್ಯನಾಗಿದ್ದಾನೆ. ಶುಕ್ರರ

ನಿರ್ದೇಶನವೂ ಹಾಗೆಯೇ ಇರುವಾಗ ನಮ್ಮ ಆಕ್ಷೇಪವೇನೂ ಇಲ್ಲ"–ಎಂದು ಹೇಳಿ ಪಟ್ಟಾಭಿಷೇಕಮಹೋತ್ಸವದ ಆಹ್ವಾನವನ್ನು ಅಂಗೀಕರಿಸಿ ಸಂತಸ ದಿಂದ ಪುರಪ್ರಮುಖರು ಹೊರಟುಹೋದರು.

ಸುಮುಹೂರ್ತದಲ್ಲಿ ಪೂರುವಿಗೆ ಪಟ್ಟಾಭಿಷೇಕವಾಯಿತು. ಯಯಾತಿಯು ತನ್ನ ಮೊದಲಿನ ನಿರ್ಧಾರದಂತೆ ಯಥಾವಿಧಿಯಾಗಿ ವಾನಪ್ರಸ್ಥಾಶ್ರಮ ವನ್ನು ಸ್ವೀಕರಿಸಿ, ಬ್ರಾಹ್ಮಣರೊಡನೆ ಮತ್ತು ತಪಸ್ವಿಗಳೊಡನೆ ಅರಣ್ಯಕ್ಕೆ ತೆರಳಿದನು.

ಯಯಾತಿಯ ಶಾಪದ ಫಲವಾಗಿ ರಾಜ್ಯಾಧಿಕಾರವನ್ನು ಪಡೆಯದ ರಾಜನ ನಾಲ್ವರು ಮಕ್ಕಳಾದ ಯದು, ತುರ್ವಸು, ದ್ರುಹ್ಯು, ಅನು– ಇವರಿಂದ ಅನುಕ್ರಮವಾಗಿ ಯಾದವರು, ಯವನರು, ಭೋಜರು, ಮ್ಲೇಚ್ಛರೆಂಬುವರು ಜನಿಸಿದರು. ಪೂರುವಿನಿಂದ ಪೌರವರು ಜನಿಸಿ ಧರ್ಮಿಷ್ಠರೆಂದು ಲೋಕಪ್ರಸಿದ್ಧರಾದರು.

ಜನಮೇಜಯ! ಸುಪ್ರಸಿದ್ಧವಾದ ಅದೇ ಪೌರವವಂಶದಲ್ಲಿಯೇ ನೀನು ಒಂದು ಸಾವಿರ ವರ್ಷಗಳ ಕಾಲ ಈ ಪೃಥ್ವಿಯನ್ನಾಳಲು ಜನ್ಮತಾಳಿರುವೆ."

೮೫ನೆಯ ಅಧ್ಯಾಯವು ಮುಗಿಯಿತು.

೮೬ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಅರಣ್ಯದಲ್ಲಿ ಯಯಾತಿಯ ತಪಸ್ಸು : ಸ್ವರ್ಗಪ್ರಾಪ್ತಿ

"ಜನಮೇಜಯ! ಈ ರೀತಿಯಾಗಿ ಯಯಾತಿಯು ತನ್ನ ಕಡೆಯ ಮಗನಾದ ಪೂರುವನ್ನು ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿ, ಪಟ್ಟಾಭಿಷೇಕ ಮಾಡಿ, ಅತ್ಯಂತಸಂತೋಷದಿಂದ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಮುನಿ ಯಾದನು. ಕಠೋರವ್ರತನಿಷ್ಠನಾದ ಯಯಾತಿಯು ಬ್ರಾಹ್ಮಣರೊಡನೆ ಅರಣ್ಯದಲ್ಲಿ ಅನೇಕವರ್ಷಗಳ ಕಾಲ ಕಂದ-ಮೂಲ-ಫಲಗಳನ್ನೇ ತಿನ್ನುತ್ತಿದ್ದು, ಜಿತೇಂದ್ರಿಯತೆಯಿಂದ ತಪಸ್ಸನ್ನು ಮಾಡುತ್ತಿದ್ದು, ಹಲವಾರು ವರ್ಷಗಳ ನಂತರ ಸ್ವರ್ಗವನ್ನೈದಿದನು. ಅನೇಕಸಹಸ್ರವರ್ಷಗಳವರೆಗೆ ತಾನು ಮಾಡಿದ್ದ ಪುಣ್ಯದ ಫಲರೂಪವಾದ ಸ್ವರ್ಗವನ್ನನುಭವಿಸುತ್ತಿದ್ದು, ಪುಣ್ಯದ ಫಲವೆಲ್ಲವೂ

ಮುಗಿದುಹೋದನಂತರ ಸ್ವರ್ಗದಿಂದ ದೂಡಲ್ಪಟ್ಟನು. ಇಂದ್ರನು ಯಯಾತಿಯನ್ನು ಸ್ವರ್ಗದಿಂದ ನೂಕಿಬಿಟ್ಟರೂ ಅವನು ಭೂಮಿಯ ಮೇಲೆ ಬೀಳದೆ ಅಂತರಿಕ್ಷದಲ್ಲಿಯೇ ನಿಂತಿದ್ದನೆಂಬ ಅತ್ಯಾಶ್ಚರ್ಯಕರವಾದ ಸಂಗತಿಯನ್ನು ನಾನು ಕೇಳಿದ್ದೇನೆ. ಪುನಃ ಅವನು ಹಾಗೆಯೇ ಸ್ವರ್ಗಕ್ಕೆ ಹಿಂದಿರುಗಿ ಹೋದನಂತೆ. ಸತ್ಪುರುಷರಾದ ವಸುಮಂತ, ಅಷ್ಟಕ, ಪ್ರತರ್ದನ ಮತ್ತು ಶಿಬಿ–ಇವರುಗಳ ಮಧ್ಯದಲ್ಲಿ ಯಯಾತಿಯು ಬಿದ್ದನಾದ ಕಾರಣ ಆ ಸತ್ಪುರುಷರ ಪ್ರಭಾವದಿಂದಾಗಿ ಪುನಃ ಸ್ವರ್ಗಕ್ಕೆ ಹೋಗಲು ಸಾಧ್ಯವಾಯಿತು, ಜನಮೇಜಯ!"

"ಬ್ರಾಹ್ಮಣೋತ್ತಮರೇ! ತಾವು ಹೇಳಿದ ವಿಷಯವು ನನಗೆ ಅಚ್ಚರಿ ಯನ್ನುಂಟುಮಾಡಿದೆ. ಪುಣ್ಯಫಲವು ಮುಗಿದು ಭೂಮಿಗೆ ಬಿದ್ದವನು ಒಡ ನೆಯೇ ಸ್ವರ್ಗಕ್ಕೆ ಹೋಗಲು ಹೇಗೆ ಸಾಧ್ಯವಾಯಿತು? ಅಷ್ಟು ಬೇಗ ಯಯಾತಿಯು ಸ್ವರ್ಗಕ್ಕೆ ಹೋಗುವಷ್ಟು ಪುಣ್ಯವನ್ನು ಹೇಗೆ ಸಂಪಾದಿಸಿದನು? ಈ ಎಲ್ಲ ವಿಷಯಗಳನ್ನೂ ವಿಸ್ತಾರವಾಗಿ ನಿಮ್ಮಿಂದ ಕೇಳಿ ತಿಳಿಯ ಬೇಕೆಂದಿರುವೆನು. ಕುರುವಂಶವರ್ಧನನಾದ, ಪೃಥ್ವೀಪತಿಯಾದ ಯಯಾ ತಿಯು ರಾಜ್ಯಾಡಳಿತದಲ್ಲಿ ದೇವರಾಜನಿಗೆ ಸಮಾನನಾಗಿಯೂ ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನನಾಗಿಯೂ ಇದ್ದನು. ಆ ಮಹಾನುಭಾವನ ಯಶಸ್ಸು ಮತ್ತು ಕೀರ್ತಿಗಳು ಸರ್ವತ್ರ ವ್ಯಾಪ್ತವಾಗಿದ್ದುವು. ಅಂತಹವನ ಸುಚರಿತೆಯನ್ನು ಕೇಳಲು ನಾನು ಹೆಚ್ಚು ಆಸಕ್ತನಾಗಿದ್ದೇನೆ."

"ಜನಮೇಜಯ! ನಾನೂ ಸಹ ಅತ್ಯಾನಂದದಿಂದಲೇ ಮಹಾನು ಭಾವನಾದ ಯಯಾತಿಯ ಕಥೆಯನ್ನು ಹೇಳುತ್ತೇನೆ. ಕಥೆಗಳಲ್ಲಿಯೇ ಉತ್ತ ಮೋತ್ತಮವೆನಿಸಿದ ಈ ಕಥೆಯ ಕಥನವು ಮತ್ತು ಶ್ರವಣವು ಪುಣ್ಯಪ್ರದ ವಾದುದು ಹಾಗೂ ಸರ್ವಪಾಪಗಳ ನಿವಾರಕವಾದುದು. ಸಾವಧಾನಚಿತ್ತನಾಗಿ ಕೇಳು.

ನಾನು ಈ ಹಿಂದೆ ಹೇಳಿದಂತೆ ನಹುಷನ ಮಗನಾದ ಯಯಾತಿಯು ಸುಪುತ್ರನಾದ ಪೂರುವನ್ನು ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿ, ಯದುವೇ ಮೊದಲಾದ ನಾಲ್ವರು ಮಕ್ಕಳನ್ನೂ ಗಡಿಯ ಪ್ರಾಂತಗಳಿಗೆ ಕಳುಹಿಸಿ,

ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಅರಣ್ಯಕ್ಕೆ ಹೋದನು. ಕಂದ-ಮೂಲ-ಫಲಗಳನ್ನೇ ಭಕ್ಷಿಸುತ್ತಾ ರಾಜನು ಅರಣ್ಯದಲ್ಲಿ ಅನುದಿನವೂ ಬಹಳ ಕಾಲದ ವರೆಗೆ ತಪಸ್ಸನ್ನು ಮಾಡುತ್ತಿದ್ದನು. ಮನಸ್ಸನ್ನು ಪರಿಶುದ್ಧಗೊಳಿಸಿ, ಕೋಪವನ್ನು ಜಯಿಸಿದವನಾಗಿ, ಪರ್ವಕಾಲಗಳಲ್ಲಿ ಪಿತೃದೇವತೆಗಳನ್ನೂ ಶ್ರಾದ್ಧ-ತರ್ಪಣಾದಿಗಳಿಂದ ಆರಾಧಿಸುತ್ತಿದ್ದನು. ವಾನಪ್ರಸ್ಥಾಶ್ರಮೋಕ್ತವಾದ ವಿಧಾನ ದಿಂದ ಆಯಾ ಕಾಲಗಳಲ್ಲಿ ಹೋಮ-ಹವನಾದಿಗಳನ್ನು ಮಾಡಿ ಯಜ್ಞೇಶ್ವರ ನನ್ನು ಸಂತೃಪ್ತಿಗೊಳಿಸುತ್ತಿದ್ದನು. ಅರಣ್ಯದಲ್ಲಿದ್ದರೂ ಅತಿಥಿಸತ್ಕಾರವನ್ನು ಯಥಾಯೋಗ್ಯವಾಗಿ ಮಾಡುತ್ತಿದ್ದನು. ಅರಣ್ಯದಲ್ಲಿ ಸಿಕ್ಕುವ ಕಂದ-ಮೂಲ-ಫಲಗಳನ್ನೇ ಅತಿಥಿಗಳಿಗೂ ಸಮರ್ಪಿಸಿ ಉಳಿದುದನ್ನು ತಾನು ಭಕ್ಷಿಸುತ್ತಿದ್ದನು. ಗಿಡವು ಸಂಪೂರ್ಣವಾಗಿ ಒಣಗಿಹೋದನಂತರ ಅದರ ತಳದಲ್ಲಿ ಸಿಕ್ಕುವ ಗೆಡ್ಡೆ ಅಥವಾ ಗೆಣಸುಗಳನ್ನು ಮಾತ್ರವೇ ತರುತ್ತಿದ್ದನು. ಹಣ್ಣುಗಳಲ್ಲಿ ಪಕ್ವವಾಗಿ ಕೆಳಗೆ ಬಿದ್ದುವುಗಳನ್ನು ಮಾತ್ರವೇ ಯಯಾತಿಯು ತರುತ್ತಿದ್ದನಲ್ಲದೇ ವೃಕ್ಷಗಳಿಂದ ಕಿತ್ತು ತರುತ್ತಿರಲಿಲ್ಲ. ಈ ರೀತಿಯಾಗಿ ಒಂದು ಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿದನು. ಅನಂತರದಲ್ಲಿ ಮೂವತ್ತು ವರ್ಷಗಳ ಕಾಲ ನೀರನ್ನು ಮಾತ್ರವೇ ಕುಡಿಯುತ್ತಿದ್ದು ವಾಙ್ಮನಸ್ಸುಗಳೆರಡನ್ನೂ ನಿರೋಧಿಸಿದ್ದನು. (ಮೌನಿಯಾಗಿದ್ದನು.) ಅನಂತರದಲ್ಲಿ ನೀರನ್ನೂ ಕುಡಿಯದೇ ಕೇವಲ ವಾಯುಸೇವನೆಮಾಡುತ್ತಾ ಒಂದು ವರ್ಷ ಕಾಲ ತಪಸ್ಸುಮಾಡಿದನು. ಅನಂತರ ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು (ನಾಲ್ಕು ದಿಕ್ಕುಗಳಲ್ಲಿ ಅಗ್ನಿ, ಮೇಲ್ಭಾಗದಲ್ಲಿ ಉರಿಯುತ್ತಿರುವ ಸೂರ್ಯ) ಒಂದು ವರ್ಷಕಾಲ ತಪಸ್ಸುಮಾಡಿದನು. ಅನಂತರದಲ್ಲಿ ಆರು ತಿಂಗಳ ಕಾಲ ಒಂದೇ ಕಾಲಿನಲ್ಲಿ ನಿಂತು ಕೇವಲ ವಾಯುಸೇವನೆಮಾಡುತ್ತಾ ತಪಸ್ಸುಮಾಡಿದನು. 'ಯಯಾತಿಯು ಮಹಾತಪಸ್ವೀ' ಎಂಬ ಕೀರ್ತಿಯು ದಿಗಂತದವರೆಗೂ ಹರಡಿತು. ಆ ಮಹಾತಪಸ್ಸಿನ ಫಲವಾಗಿ ಯಯಾತಿಯು ಸ್ವರ್ಗವನ್ನೈದಿದನು.

೮೬ನೆಯ ಅಧ್ಯಾಯವು ಮುಗಿಯಿತು.

೮೭ನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಇಂದ್ರನ ಅಪೇಕ್ಷೆಯಂತೆ ಯಯಾತಿಯು ಪೂರುವಿಗೆ ಮಾಡಿದ ಉಪದೇಶದ ವಿವರಣೆ

"ಯಯಾತಿಯು ಸ್ವರ್ಗಾರೋಹಣಮಾಡಿದನಂತರ ಅಲ್ಲಿದ್ದ ಸಾಧ್ಯರು, ಮರುದ್ಗಣಗಳು, ವಸುಗಳೇ ಮೊದಲಾದ ಸಕಲದೇವತೆಗಳೂ ಯಯಾತಿಯನ್ನು ಅವನ ತಪಃಶಕ್ತಿಗಾಗಿ ಗೌರವಿಸಿದರು. ಜಿತೇಂದ್ರಿಯನಾದ ಯಯಾತಿಯು ದೇವಲೋಕದಲ್ಲಿಯೂ, ಬ್ರಹ್ಮಲೋಕದಲ್ಲಿಯೂ ಸಂಚರಿಸುತ್ತಾ ಅನೇಕಸಹಸ್ರವರ್ಷಗಳ ಕಾಲ ಅಲ್ಲಿಯೇ ವಾಸವಾಗಿದ್ದನು.

ಒಮ್ಮೆ ಯಯಾತಿಯು ಇಂದ್ರನ ಬಳಿಗೆ ಬಂದು ಇಬ್ಬರೂ ಮಾತನಾಡುತ್ತಿದ್ದಾಗ ಇಂದ್ರನು ಕೇಳಿದನು :

"ರಾಜೇಂದ್ರನೇ! ನೀನು ನಿನ್ನ ಮಗನಿಂದ ವೃದ್ಧಾಪ್ಯವನ್ನು ಪುನಃ ಪಡೆದು, ರಾಜ್ಯ-ಕೋಶಾದಿಗಳೆಲ್ಲವನ್ನೂ ಪೂರುವಿಗೆ ಕೊಟ್ಟ ಕಾಲದಲ್ಲಿ ಏನು ಹೇಳಿದೆ? ಏನು ಉಪದೇಶಮಾಡಿದೆ–ಎಂಬುದನ್ನು ಕೇಳುವ ಆಸೆಯಿದೆ. ಹೇಳುವೆಯಾ?"

ಯಯಾತಿಯು ನಸುನಗುತ್ತಾ ಹೇಳಿದನು : "ಗಂಗಾ-ಯಮುನೆಯರ ಮಧ್ಯದಲ್ಲಿರುವ ದೇಶಗಳೆಲ್ಲವೂ ನಿನ್ನದೇ–ಎಂದು ನಾನು ಪೂರುವಿಗೆ ಹೇಳಿದೆನು. ಅದರ ಎಲ್ಲೆಯಾಚೆ ಇರುವ ದೇಶಗಳನ್ನು ನಿನ್ನ ಸಹೋದರರು ಆಳಲೆಂದು ಹೇಳಿ ಅರಣ್ಯಕ್ಕೆ ಹೊರಟೆನು."

"ನೀನು ಹೇಳಿದ ಹಿತೋಕ್ತಿಗಳ ವಿಷಯವಾಗಿಯೂ ಕೇಳಬೇಕೆಂದಿರುವೆನು."

"ಹಿತೋಕ್ತಿಗಳೇ? ರಾಜನಾದವನು ಅನುಸರಿಸಬೇಕಾದ ಹಲವಾರು ನೀತಿಗಳನ್ನು ಉಪದೇಶಿಸಿದೆನು. ದೇವೇಂದ್ರ! ನನ್ನ ಅಭಿಪ್ರಾಯದಲ್ಲಿ ಮಾನವನು ಮುಖ್ಯವಾಗಿ ಕೋಪವನ್ನು ಬಿಡಬೇಕು.

**ಅಕ್ರೋಧನಃ ಕ್ರೋಧನೇಭ್ಯೋ ವಿಶಿಷ್ಟ-**
**ಸ್ತಥಾ ತಿತಿಕ್ಷುರತಿತಿಕ್ಷೋರ್ವಿಶಿಷ್ಟಃ ।**

ಅಮಾನುಷೇಭ್ಯೋ ಮಾನುಷಾಶ್ಚ ಪ್ರಧಾನಾ
ವಿದ್ವಾಂಸ್ತಥೈವಾವಿದುಷಃ ಪ್ರಧಾನಃ ॥೬॥

ಕೋಪವಿಲ್ಲದವನು ಕೋಪಿಷ್ಠನಿಗಿಂತಲೂ ಉತ್ತಮನೆನಿಸುವನು. ಹಾಗೆಯೇ ಕ್ಷಮಾಶೀಲನು ಸಹನೆಯಿಲ್ಲದವನಿಗಿಂತಲೂ ಉತ್ತಮನೆನಿಸು ವನು. ಮನುಷ್ಯೇತರ ಪ್ರಾಣಿಗಳಿಗಿಂತಲೂ ಮನುಷ್ಯನು ಉತ್ತಮನೆನಿಸು ವನು. ಮೂರ್ಖರಿಗಿಂತಲೂ ತಿಳುವಳಿಕೆಯುಳ್ಳವನು ಉತ್ತಮನೆನಿಸುವನು.

ಆಕ್ರುಶ್ಯಮಾನೋ ನಾಕ್ರೋಶೇನ್ಮನ್ಯುರೇವ ತಿತಿಕ್ಷತಃ ।
ಆಕ್ರೋಷ್ಟಾರಂ ನಿರ್ದಹತಿ ಸುಕೃತಂ ಚಾಸ್ಯ ವಿನ್ದತಿ ॥೭॥

ಅಪರಾಧವನ್ನೆಸಗಿದವನಿಗೆ ಪ್ರತೀಕಾರಮಾಡದವನೇ ವಿವೇಕಿಯು. ಕೋಪದ ವಿಷಯವಾಗಿ ಹೇಳುವುದಾದರೆ ಒಬ್ಬನ ಕೋಪವು ಅವನನ್ನೇ ಸುಟ್ಟುಹಾಕುತ್ತದೆ. ಕೋಪವು ಹೃದಯವನ್ನು ಹೊಕ್ಕೊಡನೆಯೇ ಮಾನವನು ಬಹಳ ಸಂಕಟಪಡುತ್ತಾನೆ. ಆದುದರಿಂದ ಕೋಪವು ತನಗೆ ಆಶ್ರಯ ಕೊಟ್ಟವನನ್ನು ಸುಟ್ಟುಹಾಕುವುದೆಂಬುದು ನಿಶ್ಚಯವಾಯಿತು. ಎರಡನೆಯ ದಾಗಿ : ಯಾರ ಮೇಲೆ ಕೋಪಗೊಳ್ಳುವನೋ ಅವನು ಕೋಪಿಷ್ಠನ ಕೋಪಕ್ಕೆ ಪ್ರತಿಯಾಗಿ ತಾನೂ ಕೋಪಿಷ್ಠನಾಗದೇ ಸ್ಥೈರಣೆಯನ್ನು ತಾಳಿದರೆ– ಕೋಪಿಷ್ಠನಲ್ಲಿರುವ ಸತ್ಕರ್ಮಫಲಗಳೆಲ್ಲವೂ ಸ್ಥೈರಣೆಯಿಂದಿರುವವನನ್ನೇ ಬಂದು ಸೇರಿಕೊಳ್ಳುತ್ತವೆ. ಧರ್ಮಸೂಕ್ಷ್ಮವು ಹೀಗಿರುವುದರಿಂದ ಎದು ರಾಳಿಯು ಕೋಪದಿಂದ ಎಂತಹ ಅಪರಾಧವನ್ನೆಸಗಿದರೂ ಸ್ಥೈರಣೆಯಿಂದಿರು ವುದೇ ಸೂಕ್ತವಾಗಿದೆ.

ನಾರುನ್ತುದಃ ಸ್ಯಾನ್ನ ನೃಶಂಸವಾದೀ
ನ ಹೀನತಃ ಪರಮಭ್ಯಾದದೀತ ।
ಯಯಾಸ್ಯ ವಾಚಾ ಪರ ಉದ್ವಿಜೇತ
ನ ತಾಂ ವದೇದುಷತೀಂ ಪಾಪಲೋಕ್ಯಾಮ್ ॥೮॥

ಕೆಟ್ಟಮಾತುಗಳಿಂದ ಅಥವಾ ಚುಚ್ಚುಮಾತುಗಳಿಂದ ಮತ್ತೊಬ್ಬರ ಮನಸ್ಸನ್ನು ನೋಯಿಸಬಾರದು. ಹೀನಕೃತ್ಯಗಳಿಂದ ಶತ್ರುಗಳನ್ನು ಗೆಲ್ಲ

ಬಾರದು. ಇತರರ ಮನಸ್ಸನ್ನು ಉದ್ವೇಗಗೊಳಿಸುವ, ಪಾಪಿಷ್ಠರಾಡುವ ಮಾತುಗಳನ್ನೆಂದಿಗೂ ಆಡಬಾರದು.

ಅರುನ್ತುದಂ ಪರುಷಂ ತೀಕ್ಷ್ಣವಾಚಂ
ವಾಕ್ಕಣ್ಟಕೈರ್ವಿತುದನ್ತಂ ಮನುಷ್ಯಾನ್ ।
ವಿದ್ಯಾದಲಕ್ಷ್ಮೀಕತಮಂ ಜನಾನಾಂ
ಮುಖೇ ನಿಬದ್ಧಾಂ ನಿರ್ಋತಿಂ ವಹನ್ತಮ್ ॥೯॥

ಮುಳ್ಳಿಗಿಂತಲೂ ತೀಕ್ಷ್ಣವಾಗಿ ಪರರ ಮನವನ್ನು ನೋಯಿಸುವ ಮಾತುಗಳನ್ನು ಆಡುವವನ ಬಾಯಲ್ಲಿ ಯಾವಾಗಲೂ ರಾಕ್ಷಸನ ಆವಿರ್ಭಾವ ವಿರುವುದೆಂದು ಹೇಳುವರು. ರಾಕ್ಷಸನಿರುವೆಡೆಯಲ್ಲಿ ಶ್ರೇಯಸ್ಸಿಗೆ ಅವಕಾಶ ವೆಲ್ಲಿಯದು?

ಸದ್ಭಿಃ ಪುರಸ್ತಾದಭಿಪೂಜಿತಃ ಸ್ಯಾ-
ತ್ಸದ್ಭಿಸ್ತಥಾ ಪೃಷ್ಠತೋ ರಕ್ಷಿತಃ ಸ್ಯಾತ್ ।
ಸದಾಸತಾಮತಿವಾದಾಂಸ್ತಿತಿಕ್ಷೇ-
ತ್ಸತಾಂ ವೃತ್ತಂ ಚಾದದೀತಾರ್ಯವೃತ್ತಃ ॥೧೦॥

ನಾವು ಯಾವಾಗಲೂ ಸತ್ಪುರುಷರನ್ನೂ, ಧಾರ್ಮಿಕರನ್ನೂ, ತ್ಯಾಗಿ ಗಳನ್ನೂ ಆದರ್ಶಪುರುಷರನ್ನಾಗಿ ಭಾವಿಸಬೇಕು. ನಮ್ಮ ಕ್ರಿಯೆಗಳೆಲ್ಲವನ್ನೂ ಅಂತಹ ಸತ್ಪುರುಷರ ಕಾರ್ಯಗಳಿಗೆ ಹೋಲಿಸಿ ನಮ್ಮಲ್ಲಿ ಅಳಿದುಳಿದಿರುವ ಲೋಪ-ದೋಷಗಳನ್ನು ತಿದ್ದಿಕೊಳ್ಳಬೇಕು. ನೀಚಪುರುಷರ ದುರ್ವಚನ ಗಳನ್ನು ನಿರ್ಲಕ್ಷಿಸಬೇಕು.

ವಾಕ್ಸಾಯಕಾ ವದನಾನ್ನಿಷ್ಪತನ್ತಿ
ಯೈರಾಹತಃ ಶೋಚತಿ ರಾತ್ರ್ಯಹಾನಿ ।
ಪರಸ್ಯ ನಾಮರ್ಮಸು ತೇ ಪತನ್ತಿ
ತಾನ್ಪಣ್ಡಿತೋ ನಾವಸೃಜೇತ್ಪರೇಷು ॥೧೧॥

ಶಸ್ತ್ರಧಾರೆಗೆ ಸಮಾನವಾದ ನಿಂದಾವಾಕ್ಯಗಳನ್ನು ಕೇಳಿದ ಮನುಷ್ಯನು ನಿಜವಾಗಿಯೂ ಹಗಲಿರುಳೂ ಆ ಮಾತುಗಳನ್ನು ನೆನೆದು ದುಃಖಿಸುತ್ತಾನೆ. ಮುಳ್ಳನ್ನು ತೆಗೆದುಹಾಕುವಂತೆ ಆ ವಾಕ್ಯಗಳನ್ನು ತೆಗೆದುಹಾಕಲು ಸಾಧ್ಯವಾಗ

ಲಾರದು. ಆ ಬಿರುನುಡಿಗಳು ಮರ್ಮಸ್ಥಾನಗಳನ್ನೂ ಕೊರೆದುಕೊಂಡು ಹೃದಯದಲ್ಲಿ ಸೇರಿ ಚಿರಸ್ಥಾಯಿಗಳಾಗಿರುತ್ತವೆ. ಆದುದರಿಂದ ತಿಳಿದವನು–ಪರರನ್ನು ಎಂದೆಂದಿಗೂ ತುಚ್ಛವಾದ ವಚನಗಳಿಂದ ನಿಂದಿಸಬಾರದು.

**ನ ಹೀದೃಶಂ ಸಂವನನಂ ತ್ರಿಷು ಲೋಕೇಷು ವಿದ್ಯತೇ ।**
**ದಯಾ ಮೈತ್ರೀ ಚ ಭೂತೇಷು ದಾನಂ ಚ ಮಧುರಾ ಚ ವಾಕ್ ॥**

ಒಟ್ಟಿನಲ್ಲಿ ರಾಜನಿಗಿರಬೇಕಾದ ಮುಖ್ಯಗುಣಗಳೆಂದರೆ : ದಯೆ, ಮೈತ್ರೀ, ದಾನ ಮತ್ತು ಮಧುರವಾಣಿ. ರಾಜನಲ್ಲಿ ಮಾತ್ರವೇನು? ಸಕಲರಲ್ಲಿಯೂ ಇರಬೇಕಾದ ಉತ್ತಮಗುಣಗಳಿವು. ದೇವೇಂದ್ರ! ಬೇರೆಯವರನ್ನು ವಶಪಡಿಸಿಕೊಳ್ಳಲು ಇವುಗಳಿಗಿಂತಲೂ ಉತ್ತಮಗುಣಗಳು ಬೇರೆ ಯಾವುವೂ ಇಲ್ಲ.

**ತಸ್ಮಾತ್ಸಾನ್ತ್ವಂ ಸದಾ ವಾಚ್ಯಂ ನ ವಾಚ್ಯಂ ಪರುಷಂ ಕ್ವಚಿತ್ ।**
**ಪೂಜ್ಯಾನ್ಸಮ್ಪೂಜಯೇದ್ದದ್ಯಾನ್ನ ಚ ಯಾಚೇತ್ಕದಾಚನ ॥೧೩॥**

ಪೂಜೆ, ಆರಾಧನೆ–ಇವಿಷ್ಟರಿಂದಲೇ ದೇವತೆಗಳು ತೃಪ್ತರಾಗಲಾರರು. ದಯೆ, ಮೈತ್ರೀ–ಮೊದಲಾದ ಗುಣಗಳಿದ್ದರೆ ಪೂಜೆಮಾಡದಿದ್ದರೂ ದೇವತೆಗಳು ತಾವಾಗಿಯೇ ಒಲಿಯುವರು. ಆದುದರಿಂದ ರಾಜನಾದವನು ಯಾವಾಗಲೂ ಪ್ರಿಯವಾಕ್ಯಗಳನ್ನಾಡಬೇಕು. ಕಟುವಾಕ್ಯಗಳನ್ನಾಡಬಾರದು. ಸಕಲರೊಡನೆ ಮೈತ್ರಿಯಿಂದಿರಬೇಕು. ದೀನ-ದಲಿತರಿಗೆ ದಾನಮಾಡಬೇಕು. ಆದರೆ ಯಾವಾಗಲೂ ಯಾವ ಕಾರಣದಿಂದಲೂ ಯಾಚನೆಮಾಡಬಾರದು. ಮಾನ್ಯರನ್ನು ಸಮ್ಮಾನಿಸಬೇಕು. ಅಮಾನ್ಯರನ್ನು ಅವಮಾನಿಸಕೂಡದು. ಇವುಗಳೇ ನಾನು ಪೂರುವಿಗೆ ಹೇಳಿದ ಹಿತೋಕ್ತಿಗಳು, ದೇವೇಂದ್ರ!"

ಆ೭ನೆಯ ಅಧ್ಯಾಯವು ಮುಗಿಯಿತು.

ಆಆನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಸ್ವರ್ಗದಿಂದ ಯಯಾತಿಯ ಪತನ : ಅಷ್ಟಕನೊಡನೆ ಸಂಭಾಷಣೆ

ಇಂದ್ರನು ಪುನಃ ಪ್ರಶ್ನಿಸಿದನು :

"ರಾಜೇಂದ್ರ! ನಿನ್ನ ಕರ್ತವ್ಯವೆಲ್ಲವನ್ನೂ ಮುಗಿಸಿ, ಪೂರುವಿಗೆ

ಹಿತೋಕ್ತಿಗಳನ್ನೂ ಹೇಳಿ, ತಪಸ್ಸುಮಾಡಲು ಅರಣ್ಯಕ್ಕೆ ಬಂದೆಯಲ್ಲವೇ? ಅಲ್ಲಿ ಅತಿಘೋರವಾದ ತಪಸ್ಸನ್ನೂ ಮಾಡಿದೆ. ಆದರೆ ನೀನು ತಪಸ್ಸಿನಲ್ಲಿ ಯಾರಿಗೆ ಸಮಾನನಾಗಿರುವೆ? ಅಥವಾ ನಿನ್ನ ತಪಸ್ಸು ಯಾವ ತಪಸ್ವಿಯ ತಪಸ್ಸನ್ನು ಹೋಲುವುದಾಗಿದೆ, ಹೇಳುವೆಯಾ?"

ಯಯಾತಿಯು ಸ್ವಲ್ಪ ಅಟ್ಟಹಾಸದ ನಗುವನ್ನೇ ನಗುತ್ತಾ ಹೇಳಿದನು: "ಮಹೇಂದ್ರ! ನನ್ನ ಹಾಗೆ ತಪಸ್ಸನ್ನು ಮಾಡಿರುವವರನ್ನು ಮಾನವರಲ್ಲಾಗಲೀ, ಗಂಧರ್ವರಲ್ಲಾಗಲೀ ಅಥವಾ ಮಹರ್ಷಿಗಳಲ್ಲೇ ಆಗಲೀ ನಾನು ಕಾಣೆನು. ಹೀಗಿರುವಾಗ ಬೇರೊಬ್ಬರ ತಪಸ್ಸಿಗೆ ನನ್ನ ತಪಸ್ಸನ್ನು ಹೋಲಿಸುವುದೆಂತು?"

"ಯಯಾತಿ! ನೀನು ಗುಣಗಳಿಗೆ ಆಕರನಾಗಿದ್ದರೂ 'ಅಹಂಕಾರ' ಎಂಬ ಒಂದು ಮಹಾದೋಷವು ನಿನ್ನಲ್ಲಿ ಅಳಿಯದೆಯೇ ಉಳಿದಿದೆ. ನೀನು ಹಿರಿಯರನ್ನೂ, ಸಮಾನರನ್ನೂ ಮತ್ತು ಕಿರಿಯರನ್ನೂ ಅವರುಗಳ ತಪಃ ಶಕ್ತಿಗಳು ಎಷ್ಟಿರಬಹುದೆಂಬುದನ್ನು ವಿವೇಚಿಸದೆಯೇ ಅಲಕ್ಷಿಸಿ ಮಾತನಾಡಿದೆ ಯಲ್ಲವೇ? ಇದರಿಂದ ನಿನ್ನ ಸತ್ಕರ್ಮಗಳ ಫಲವು ಲುಪ್ತವಾಗಿ ಹೋಯಿತು. ಸತ್ಕರ್ಮಗಳ ಫಲವು ತೀರಿದನಂತರ ನೀನಿಲ್ಲಿ ನಿಲ್ಲಲು ಸಾಧ್ಯವಾಗಲಾರದು."

ಯಯಾತಿಯು ಬದ್ಧಾಂಜಲಿಯಾಗಿ ದುಗುಡದ ಧ್ವನಿಯಲ್ಲಿ ಹೇಳಿದನು:

"ದೇವರಾಜ! ನಿಶ್ಚಯವಾಗಿಯೂ ನಾನು ಮಾಡಿದ ಪರಾವಮಾನ ದಿಂದ ನನ್ನ ಸತ್ಕರ್ಮಫಲವು ಲುಪ್ತವಾಗಿಹೋಯಿತೇ? ಅಯ್ಯೋ! ನಾನು ಪುನಃ ಭೂಲೋಕವನ್ನು ಪ್ರವೇಶಿಸಬೇಕೇ? ನಾನು ಭೂಮಿಯಲ್ಲಿ ಬೀಳಲೇ ಬೇಕಾದರೆ ಸತ್ಪುರುಷರ ಮತ್ತು ಧಾರ್ಮಿಕರ ಮಧ್ಯದಲ್ಲಾದರೂ ಬೀಳುವಂತೆ ಅನುಗ್ರಹಿಸು, ಮಹೇಂದ್ರ!"

"ಹಾಗೆಯೇ ಆಗಲಿ, ನಾಹುಷ! ನೀನು ಧರ್ಮಪುರುಷರೆನಿಸಿರುವ ಸತ್ಪುರುಷರ ಮಧ್ಯದಲ್ಲಿಯೇ ಬೀಳುವೆ. ಅದೂ ಅಲ್ಲದೇ ಅವರ ಸಹವಾಸ ದಿಂದ ನೀನು ಕೀರ್ತಿಮಂತನಾಗುವೆ. ಮತ್ತೆ ಮೊದಲಿನ ಸ್ಥಿತಿಯನ್ನೂ ಪಡೆ

ಯುವೆ. ಅವರ ಸಹವಾಸಾನುಭವದಿಂದಲಾದರೂ ಹಿರಿಯರನ್ನೂ ಸಮಾನರನ್ನೂ ಅಲಕ್ಷಿಸುವ ಭಾವವನ್ನು ದೂರಮಾಡು.”

ಹೀಗೆಂದು ಇಂದ್ರನು ಹೇಳುತ್ತಿದ್ದಂತೆಯೇ ಯಯಾತಿಯು ಸ್ವರ್ಗದಿಂದ ಚ್ಯುತನಾದನು.

ಯಯಾತಿಯು ತನ್ನ ಅಹಂಕಾರದ ಕಾರಣದಿಂದ ಸತ್ಕರ್ಮಫಲದಲ್ಲಿ ನ್ಯೂನತೆಯುಂಟಾಗಿ ಸ್ವರ್ಗದಿಂದ ತಳ್ಳಲ್ಪಟ್ಟರೂ ತೇಜೋಹೀನನಾಗಿರಲಿಲ್ಲ. ಅವನ ತೇಜಃಪುಂಜವಾದ ದಿವ್ಯದೇಹವು ಭೂಮಿಯ ಮೇಲಿದ್ದವರಿಗೆ–'ಸೂರ್ಯನೇ ಕೆಳಗಿಳಿದು ಬರುತ್ತಿರುವನೋ'–ಎಂಬ ಭ್ರಾಂತಿಯನ್ನುಂಟು ಮಾಡುತ್ತಿತ್ತು. ಯಯಾತಿಯ ಇಚ್ಛೆಯಂತೆ ಮತ್ತು ಇಂದ್ರನ ಅನುಗ್ರಹದಂತೆ ಯಯಾತಿಯು ಭೂಮಿಯ ಮೇಲೆ ಬೀಳುವ ಪ್ರದೇಶವು ಸತ್ಪುರುಷರಿಂದ ಅಲಂಕೃತವಾಗಿದ್ದಿತು.

ರಾಜರ್ಷಿಯೂ ಮತ್ತು ಪರಮಧಾರ್ಮಿಕನೂ ಆದ ಅಷ್ಟಕನು ಆಶ್ರಮಾಭಿಮುಖವಾಗಿ ಆಕಾಶದಿಂದ ಬೀಳುತ್ತಿದ್ದ ಯಯಾತಿಯನ್ನು ಕಂಡು ಪ್ರಶ್ನಿಸಿದನು : “ಇಂದ್ರನಿಗೆ ಸಮಾನವಾದ ಸುಂದರರೂಪವುಳ್ಳ ಯುವಕನಾದ ನೀನಾರು? ನೀನು ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿರುವೆ. ಅಂಧಕಾರರೂಪವಾದ ಮೇಘಗಳ ಮಧ್ಯದಿಂದ ಹೊರಬೀಳುವ, ಆಕಾಶಮಾರ್ಗದಲ್ಲಿ ಸಂಚರಿಸುವವರೆಲ್ಲರಿಗೂ ಶ್ರೇಷ್ಠನೆನಿಸಿರುವ ಸೂರ್ಯನಂತೆ ಪ್ರಕಾಶಮಾನನಾಗಿರುವೆ. ಅಗ್ನಿ-ಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳ ನೀನು ಸೂರ್ಯನ ಮಾರ್ಗವಾದ ಆಕಾಶದಿಂದ ಬೀಳುತ್ತಿರುವುದನ್ನು ನೋಡಿ–'ಇದೇನಿರಬಹುದು? ಇವನು ಯಾರಾಗಿರಬಹುದು?' ಎಂಬುದಾಗಿ ನಮ್ಮ-ನಮ್ಮಲ್ಲಿಯೇ ತರ್ಕಿಸುತ್ತಿದ್ದೇವೆ ಮತ್ತು ನಿನ್ನನ್ನು ನೋಡಿ ಭ್ರಾಂತರಾಗಿದ್ದೇವೆ. ದೇವಮಾರ್ಗದಲ್ಲಿ ಬರುತ್ತಿರುವ ಇಂದ್ರ, ಸೂರ್ಯ ಮತ್ತು ವಿಷ್ಣುಗಳ ತೇಜಸ್ಸಿಗೆ ಸಮಾನವಾದ ತೇಜಸ್ಸನ್ನು ಹೊಂದಿರುವ ನಿನ್ನನ್ನು ನೋಡಿ ನೀನು ಕೆಳಕ್ಕೆ ಬೀಳುತ್ತಿರುವ ಕಾರಣವೇನಿರಬಹುದೆಂಬುದನ್ನು ತಿಳಿಯುವ ಸಲುವಾಗಿ ನಿನ್ನ ಸಮೀಪವರ್ತಿಗಳಾಗಿದ್ದೇವೆ. ನೀನೇ ಮೊದಲು ನಮ್ಮನ್ನು ನೀವಾರೆಂದು ಪ್ರಶ್ನಿಸಿದ್ದಿದ್ದರೆ ನಾವು ಮೊದಲು ನಿನ್ನನ್ನು ಕೇಳುವ ದಿಟ್ಟತನಕ್ಕೆ

ಅವಕಾಶವಿರುತ್ತಿರಲಿಲ್ಲ. ಮೊದಲು ನಮ್ಮನ್ನು ನೀನು ಪ್ರಶ್ನಿಸದ ಕಾರಣದಿಂದಲೂ ಮತ್ತು ಇಂದ್ರ, ಅಗ್ನಿ, ಸೂರ್ಯರಿಗೆ ಸಮಾನ ಪ್ರಭೆಯುಳ್ಳ ನಿನ್ನ ವಿಷಯದಲ್ಲಿ ಸಂಶಯವುಂಟಾಗಿರುವುದರಿಂದಲೂ ನಾವೇ ಮೊದಲು ನಿನ್ನನ್ನು ಪ್ರಶ್ನಿಸಬೇಕಾಯಿತು. ನೀನು ಯಾರಿಗಾದರೂ ಭಯಪಟ್ಟು ಬಂದಿರುವೆಯಾದರೆ ನಮ್ಮ ಆಶ್ರಮದಲ್ಲಿ ಇರಬಹುದು. ಇಲ್ಲಿ ಭಯಕ್ಕೆ ಅವಕಾಶವೇ ಇಲ್ಲ. ನಮ್ಮ ಆಶ್ರಮದಲ್ಲಿ ಆಶ್ರಯಹೊಂದಿದವರಿಗೆ ಇಂದ್ರನೂ ಸಹ ತೊಂದರೆಯನ್ನು ಕೊಡಲಾರನು. ನಿನ್ನ ದುಃಖಗಳೇನೇ ಇದ್ದರೂ ಇಲ್ಲಿ ವಿನಾಶಹೊಂದುವುವು. ಸತ್ಪುರುಷರ ಕಷ್ಟಗಳಲ್ಲಿ ಸತ್ಪುರುಷರೇ ನೆರವಾಗ ಬೇಕಲ್ಲದೇ ದುರ್ಜನರು ನೆರವಾಗಬಲ್ಲರೇ? ಈ ಆಶ್ರಮದಲ್ಲಿ ನಿನ್ನಂತೆಯೇ ಧರ್ಮೈಕದೃಷ್ಟಿಯುಳ್ಳ, ಸ್ಥಾವರ-ಜಂಗಮಗಳಿಗೂ ಶಾಸಕರಾದ ಸತ್ಪುರುಷ ರಿದ್ದಾರೆ. ಆದುದರಿಂದ ನೀನು ನಿಶ್ಚಿಂತನಾಗಿ ಕೆಳಗಿಳಿದು ಈ ಆಶ್ರಮದಲ್ಲಿ ತಂಗಬಹುದು.

**ಪ್ರಭುರಗ್ನಿಃ ಪ್ರತಪನೇ ಭೂಮಿರಾವಪನೇ ಪ್ರಭುಃ ।**
**ಪ್ರಭುಃ ಸೂರ್ಯಃ ಪ್ರಕಾಶಿತ್ವೇ ಸತಾಂ ಚಾಭ್ಯಾಗತಃ ಪ್ರಭುಃ ॥೧೩॥**

ಅಗ್ನಿಗೆ ಶಾಖವುಂಟುಮಾಡುವ ಶಕ್ತಿಯಿರುವಂತೆ, ಭೂಮಿಗೆ ಬೀಜಕ್ಕೆ ಜೀವಕೊಟ್ಟು ಬೆಳೆಯುವಂತೆ ಮಾಡುವ ಶಕ್ತಿಯಿರುವಂತೆ ಮತ್ತು ಸೂರ್ಯ ನಿಗೆ ಸಕಲವನ್ನೂ ಪ್ರಕಾಶಗೊಳಿಸುವ ಶಕ್ತಿಯಿರುವಂತೆ–ಅಭ್ಯಾಗತನಿಗೆ ಸತ್ಪುರುಷನಾದ ಆತಿಥೇಯನನ್ನು ನಿರ್ದೇಶಿಸುವ ಶಕ್ತಿಯೂ ಇರುತ್ತದೆ. ಆದುದರಿಂದ ಕೆಳಗಿಳಿದು ನಮ್ಮ ಸತ್ಕಾರವನ್ನು ಸ್ವೀಕರಿಸಬಹುದು."

ಅಲನೆಯ ಅಧ್ಯಾಯವು ಮುಗಿಯಿತು.

ಅಆನೆಯ ಅಧ್ಯಾಯ ಸಂಭವಪರ್ವ (ಮುಂದುವರಿದಿದೆ.)

## ಯಯಾತಿ ಮತ್ತು ಅಷ್ಟಕರ ಸಂವಾದ

ಯಯಾತಿಯು ಹೇಳುತ್ತಾನೆ :

"ನಾನು ನಹುಷನ ಮಗ. ಯಯಾತಿ–ಎಂದು ನನ್ನನ್ನು ಕರೆಯು ತ್ತಾರೆ. ನನ್ನ ಮಗನ ಹೆಸರು ಪೂರು. ಅಹಂಕಾರದಿಂದ ನಾನು ನನ್ನ ಹಿರಿಯರನ್ನೂ, ಸಮಾನರನ್ನೂ, ಕಿರಿಯರನ್ನೂ ಅಲಕ್ಷಿಸಿದ ಕಾರಣದಿಂದ ನನ್ನ

ಸತ್ಕರ್ಮಫಲದಲ್ಲಿ ನ್ಯೂನತೆಯುಂಟಾಗಿ ಸ್ವರ್ಗದಿಂದ ತಳ್ಳಲ್ಪಟ್ಟಿರುವೆನು. ನಾನು ನಿಮಗಿಂತಲೂ ಹಿರಿಯವನಾದ ಕಾರಣ ಮೊದಲು ನಿಮಗೆ ಅಭಿವಾದನಮಾಡಲಿಲ್ಲ.

**ಯೋ ವಿದ್ಯಯಾ ತಪಸಾ ಜನ್ಮನಾ ವಾ ।**
**ವೃದ್ಧಃ ಸ ಪೂಜ್ಯೋ ಭವತಿ ದ್ವಿಜಾನಾಮ್ ॥೨॥**

ಯಾವನು ವಿದ್ಯೆಯಿಂದ, ತಪಸ್ಸಿನಿಂದ ಮತ್ತು ವಯಸ್ಸಿನಿಂದ ವೃದ್ಧನಾಗಿರುತ್ತಾನೆಯೋ–ಅವನು ದ್ವಿಜರಿಗೆ ಪೂಜ್ಯನಾಗುತ್ತಾನೆ."

ಅಷ್ಟಕ :

"ವಯಸ್ಸಿನಿಂದ ಹಿರಿಯನಾದವನೂ ದ್ವಿಜನಿಗೆ ಪೂಜ್ಯನಾಗುತ್ತಾನೆ ಎಂಬುದು ನಿನ್ನ ಅಭಿಪ್ರಾಯ ಮಾತ್ರ. ಕೇವಲ ವಯಸ್ಸಿನಿಂದ ಪೂಜಾರ್ಹನಾಗುವುದಿಲ್ಲವೆಂದು ಹೇಳುವುದನ್ನು ನಾವು ಕೇಳಿದ್ದೇವೆ.

**ಯೋ ವಿದ್ಯಯಾ ತಪಸಾ ಸಮ್ಪ್ರವೃದ್ಧಃ ।**
**ಸ ಏವ ಪೂಜ್ಯೋ ಭವತಿ ದ್ವಿಜಾನಾಮ್ ॥೩॥**

ಯಾವನು ವಿದ್ಯೆಯಿಂದಲೂ ಮತ್ತು ತಪಸ್ಸಿನಿಂದಲೂ ಅಧಿಕನಾಗಿರುವನೋ–ಅಂತಹವನು ಮಾತ್ರವೇ ದ್ವಿಜರಿಗೆ ಪೂಜಾರ್ಹನಾಗುತ್ತಾನೆ–ಎಂಬುದು ನಮ್ಮ ಅಭಿಪ್ರಾಯವಾಗಿದೆ."

ಯಯಾತಿ :

**ಪ್ರತಿಕೂಲಂ ಕರ್ಮಣಾಂ ಪಾಪಮಾಹು–**
**ಸ್ತದ್ವರ್ತತೇಽಪ್ರವಣೇ ಪಾಪಲೋಕ್ಯಮ್ ।**
**ಸನ್ತೋಽಸತಾಂ ನಾನುವರ್ತನ್ತಿ ಚೈತ–**
**ದ್ಯಥಾ ಚೈಷಾಮನುಕೂಲಾಸ್ತಥಾಽಽಸನ್ ॥೪॥**

"ಋಷಿಗಳೇ! ಪಾಪವು ಸತ್ಕಾರ್ಯದ ಫಲವನ್ನೂ ವಿನಾಶಗೊಳಿಸುವುದು. ಪಾಪದ ಉತ್ಪತ್ತಿಗೆ ನಾನಾಕಾರಣಗಳಿವೆ. ಅಹಂಕಾರವೆಂಬುದೂ ಪಾಪಕ್ಕೆ ಮೂಲರೂಪವಾಗಿದೆ. ಅಹಂಕಾರದಲ್ಲಿ ಮಾನವರನ್ನು ನರಕಕ್ಕೆಳೆಯುವ ಒಂದು ಅಂಶವಿದೆ. ಸತ್ಪುರುಷರೆಂದಿಗೂ ಅಹಂಕಾರಿಗಳಾಗುವುದಿಲ್ಲ. ಆದುದರಿಂದಲೇ ಅವರು ಮಾಡುವ ಸತ್ಕಾರ್ಯಗಳಿಗೆ ಪ್ರತಿಕೂಲವುಂಟಾ

ಗುವುದಿಲ್ಲ. ಅಹಂಕಾರವಿಹೀನರಾಗಿ ಅವರು ಮಾಡುವ ಸತ್ಕಾರ್ಯಗಳೆಲ್ಲವೂ ಉತ್ತಮವಾದ ಫಲಗಳನ್ನೇ ಕೊಡುತ್ತವೆ.

ಅಹಂಕಾರಪಟ್ಟರೆ ಸತ್ಕರ್ಮದ ಫಲವು ಹೇಗೆ ನಾಶವಾಗುವುದೆಂಬುದಕ್ಕೆ ನಾನೇ ಸಾಕ್ಷಿಭೂತನಾಗಿರುತ್ತೇನೆ.

**ಅಭೂದ್ಧನಂ ಮೇ ವಿಪುಲಂ ಗತಂ ತ-**
**ದ್ವಿಚೇಷ್ಟಮಾನೋ ನಾಧಿಗನ್ತಾ ತದಸ್ಮಿ ।**
**ಏವಂ ಪ್ರಧಾರ್ಯಾತ್ಮಹಿತೇ ನಿವಿಷ್ಟೋ**
**ಯೋ ವರ್ತತೇ ಸ ವಿಜಾನಾತಿ ಧೀರಃ ॥೫॥**

ನಾನು ಅನೇಕ ಯಜ್ಞ-ಯಾಗಾದಿಗಳನ್ನೂ, ದಾನ-ಧರ್ಮಾದಿಗಳನ್ನೂ ಮಾಡಿ ಅದ್ಭುತವಾದ ಪುಣ್ಯರಾಶಿಯನ್ನೇ ಗಳಿಸಿದ್ದೆನು. ಆದರೆ ಎಲ್ಲವೂ ನನ್ನ ಅಹಂಕಾರದ ಫಲದಿಂದ ವಿನಾಶವಾಗಿ ಹೋದುವು. ಈಗ ನಾನೇನು ಮಾಡಿದ್ದೆನೆಂದು ಸ್ಮರಿಸಲು ಕೂಡ ಸಾಧ್ಯವಿಲ್ಲವಾಗಿದೆ. ನನ್ನ ದುರ್ವಿಧಿಯನ್ನಾದರೂ ನೋಡಿರಿ. ಸತ್ಪುರುಷನಾದವನು ಅಹಂಕಾರವನ್ನು ತೊರೆದು ಆತ್ಮಕಲ್ಯಾಣದ ಸಾಧನೆಯಲ್ಲಿ ನಿರತನಾದರೆ ಅವನು ನಿಶ್ಚಯವಾಗಿಯೂ ಧೀರನಾಗಿ ಆತ್ಮದ ರಹಸ್ಯವನ್ನು ತಿಳಿದುಕೊಳ್ಳುತ್ತಾನೆ.

**ಮಹಾಧನೋ ಯೋ ಯಜತೇ ಸುಯಜ್ಞೈ-**
**ರ್ಯಃ ಸರ್ವವಿದ್ಯಾಸು ವಿನೀತಬುದ್ಧಿಃ ।**
**ವೇದಾನಧೀತ್ಯ ತಪಸಾಯೋಜ್ಯ ದೇಹಂ**
**ದಿವಂ ಸಮಾಯಾತ್ಪುರುಷೋ ವೀತಮೋಹಃ ॥೬॥**

ಮನುಷ್ಯನು ಮಹೈಶ್ವರ್ಯದಿಂದ ಉತ್ತಮೋತ್ತಮವಾದ ಯಜ್ಞಗಳನ್ನು ನಿಷ್ಕಾಮನೆಯಿಂದ ಮಾಡಬೇಕು. ಯಾಗಮಾಡಿದವನೆಂಬ ಅಹಂಕಾರವಿರಬಾರದು. ಸಕಲವಿದ್ಯಾಪಾರಂಗತನಾಗಿದ್ದರೂ ವಿನೀತಬುದ್ಧಿಯುಳ್ಳವನಾಗಿರಬೇಕು. ವಿದ್ಯಾಮದವಿರಬಾರದು. ವೇದಗಳನ್ನು ಅಧ್ಯಯನ ಮಾಡಬೇಕು. ತಪಸ್ಸಿನಿಂದ ದೇಹವನ್ನು ದಂಡಿಸಬೇಕು. ಇಂತಹವನು ಮಾತ್ರವೇ ಎಲ್ಲ ವಿಧವಾದ ಭ್ರಾಂತಿಯನ್ನೂ ತೊರೆದು ಸ್ವರ್ಗಕ್ಕೆ ಹೋಗುತ್ತಾನೆ.

ನ ಜಾತು ಹೃಷ್ಯೇನ್ಮಹತಾ ಧನೇನ
ವೇದಾನಧೀಯೀತಾನಹಂಕೃತಃ ಸ್ಯಾತ್ ।
ನಾನಾಭಾವಾ ಬಹವೋ ಜೀವಲೋಕೇ
ದೈವಾಧೀನಾ ನಷ್ಟಚೇಷ್ಟಾಧಿಕಾರಾಃ ।
ತತ್ತತ್ಪ್ರಾಪ್ಯ ನ ವಿಹನ್ಯೇತ ಧೀರೋ
ದಿಷ್ಟಂ ಬಲೀಯ ಇತಿ ಮತ್ವಾತ್ಮಬುದ್ಧ್ಯಾ ॥೭॥

ಅಪಾರವಾದ ಐಶ್ವರ್ಯವಿದ್ದರೂ ಹಿಗ್ಗಬಾರದು. ವೇದಗಳನ್ನು ಅಧ್ಯಯನಮಾಡಬೇಕು. ಆದರೆ ತಾನು ವೇದವಿದ್ಯಾಪಾರಂಗತನೆಂದು ಅಹಂಕಾರಪಡಬಾರದು. ಈ ಜಗತ್ತಿನಲ್ಲಿ ವಿಧ-ವಿಧವಾದ ಸ್ವಭಾವಗಳಿಂದ ಕೂಡಿದ ಜನರಿದ್ದಾರೆ. ಅವರೆಲ್ಲರೂ ಕೇವಲ ದೈವಕ್ಕೆ ಅಧೀನರಾಗಿರುತ್ತಾರೆ. ದೈವದ ಮುಂದೆ ಅಥವಾ ಅದೃಷ್ಟದ ಮುಂದೆ ಅವರ ದುರಹಂಕಾರ, ದುರಭಿ ಮಾನ, ಅಧಿಕಾರ, ಮದ–ಇವುಗಳಾವುವೂ ಕೆಲಸಕ್ಕೆ ಬಾರವು. ದೈವವು ಕ್ಷಣಮಾತ್ರದಲ್ಲಿ ಎಲ್ಲವನ್ನೂ ವಿನಾಶಮಾಡಿಬಿಡಬಲ್ಲುದು. ಆದುದರಿಂದ ಧೀರನಾದವನು ಐಶ್ವರ್ಯವನ್ನು ಹೊಂದಿದ್ದರೂ, ವಿದ್ಯಾವಂತನಾಗಿದ್ದರೂ, ಬಲಿಷ್ಠನಾಗಿದ್ದರೂ, ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿದ್ದರೂ ಅಹಂಕಾರಪಡಬಾರದು. 'ಅದೃಷ್ಟವೆಂಬುದು ಬಲವತ್ತರವಾದುದು'– ಎಂಬುದನ್ನು ಆತ್ಮವಿವೇಚನೆಯಿಂದ ನಿರ್ಧರಿಸಿಕೊಂಡು ಅಹಂಕಾರವನ್ನು ದೂರಮಾಡಬೇಕು. ಕಷ್ಟಗಳು ಒದಗಿದಾಗ ಕುಗ್ಗಲೂ ಬಾರದು. ಸುಖವು ಬಂದಾಗ ಹಿಗ್ಗಲೂ ಬಾರದು. (ಮನುಷ್ಯನಿಗೆ ವಿದ್ಯಾಮದ, ಧನಮದ– ಇತ್ಯಾದಿಗಳು ಬರುವುದು ಸ್ವಾಭಾವಿಕ. ಐಶ್ವರ್ಯವಿದ್ದೂ ಸಿರಿತನವು ನಶ್ವರವೆಂದು ಭಾವಿಸಿ ಅಹಂಕಾರಪಡದಿರುವುದು ಸಾಧಾರಣಮನುಷ್ಯನಿಂದ ಸಾಧ್ಯವಾಗುವುದಿಲ್ಲ. ಅದಕ್ಕಾಗಿಯೇ ಇಲ್ಲಿ ಯಯಾತಿಯು ಧೀರನು ಮಾತ್ರವೇ ನಿರಹಂಕಾರಿಯಾಗುವನೆಂದು ಹೇಳಿದ್ದಾನೆ.)

ಸುಖಂ ಹಿ ಜನ್ತುರ್ಯದಿ ವಾಪಿ ದುಃಖಂ
ದೈವಾಧೀನಂ ವಿನ್ದತೇ ನಾತ್ಮಶಕ್ತ್ಯಾ।
ತಸ್ಮಾದ್ದಿಷ್ಟಂ ಬಲವನ್ಮನ್ಯಮಾನೋ
ನ ಸಂಜ್ವರೇನ್ನಾಪಿ ಹೃಷ್ಯೇತ್ಕಥಂಚಿತ್ ॥೮॥

ಪ್ರಾಣಿಗಳಿಗೆ ಸುಖ-ದುಃಖಗಳೆರಡೂ ದೈವಾಧೀನವಾದುವುಗಳು. ಆತ್ಮಶಕ್ತಿಯಿಂದ ಪ್ರಾಪಂಚಿಕವಾದ ಸುಖ-ದುಃಖಗಳನ್ನು ವಿಪರ್ಯಾಸಗೊಳಿಸುವ ಸಾಧ್ಯತೆಯಿಲ್ಲ. ಆದುದರಿಂದ ಮಾನವನು ಸುಖ-ದುಃಖಗಳೆರಡೂ ದೈವಾಯತ್ತವೆಂದು ಭಾವಿಸಿ ಸುಖವು ಬಂದಾಗ ಹಿಗ್ಗಲೂಬಾರದು ; ಕಷ್ಟವು ಬಂದಾಗ ಕುಗ್ಗಲೂಬಾರದು. (ಸುಖ-ದುಃಖಗಳು ಬ್ರಹ್ಮನಿಯಾಮಕವಾದುವುಗಳು. ಜನ್ಮ-ಜನ್ಮಾಂತರಗಳ ಕರ್ಮಫಲದಿಂದ ಲಭಿಸತಕ್ಕುವುಗಳು. ಸುಖ-ದುಃಖಗಳಿಗೆ ಧನಿಕರು-ಬಡವರೆಂಬ ವಿವೇಚನೆಯಾಗಲೀ, ದುಷ್ಟರು-ಶಿಷ್ಟರೆಂಬ ವಿವೇಚನೆಯಾಗಲೀ ಇರುವುದಿಲ್ಲ. ಪ್ರತಿಯೊಬ್ಬ ಮಾನವನೂ ಮತ್ತೊಬ್ಬನ ದೃಷ್ಟಿಯಿಂದ ಸುಖೀ. ತನ್ನ ವಿಷಯವಾಗಿ ಹೇಳಿಕೊಳ್ಳುವಾಗ ಪ್ರತಿಯೊಬ್ಬನೂ ತನ್ನ ಕಷ್ಟಪರಂಪರೆಗಳನ್ನೇ ತೋಡಿಕೊಳ್ಳುತ್ತಾನೆ. ಅರ್ಥಾತ್ ದೈವವು ಅಥವಾ ವಿಧಿಯು ಪ್ರಪಂಚದಲ್ಲಿರುವ ಪ್ರತಿಯೊಂದು ಪ್ರಾಣಿಯನ್ನೂ ನಿಷ್ಪಕ್ಷಪಾತವಾಗಿ ಸರ್ವಸಮತ್ವದಿಂದ ಕಾಣುತ್ತದೆ. ಪ್ರಪಂಚದಲ್ಲಿ ಸುಖಿಯು ಯಾರೆಂದರೆ ಯಯಾತಿಯು ಹೇಳಿರುವಂತೆ ಸುಖ-ದುಃಖಗಳೆರಡಕ್ಕೂ ಸಮತ್ವವನ್ನು ಕಲ್ಪಿಸಿರುವ ಧೀರನೊಬ್ಬನೇ. ಈ ವಿಷಯವನ್ನೇ ವಿಸ್ತರಿಸಿ ಯಯಾತಿಯು ಮುಂದೆ ಹೇಳುತ್ತಾನೆ.)

**ದುಃಖೈರ್ನ ತಪ್ಯೇನ್ನ ಸುಖೈಃ ಪ್ರಹೃಷ್ಯೇ-**
**ತ್ಸಮೇನ ವರ್ತೇತ ಸದೈವ ಧೀರಃ ।**
**ದಿಷ್ಟಂ ಬಲೀಯ ಇತಿ ಮನ್ಯಮಾನೋ**
**ನ ಸಂಜ್ವರೇನ್ನಾಪಿ ಹೃಷ್ಯೇತ್ಕಥಂಚಿತ್ ॥೯॥**

ಬಹುವಿಧವಾದ ದುಃಖಗಳು ಅಥವಾ ಕಷ್ಟಗಳು ಪ್ರಾಪ್ತವಾದಾಗಲೂ ಅಧೀರನಾಗಬಾರದು. ಅಂತೆಯೇ ಬಹುವಿಧವಾದ ಸುಖಗಳು ಪ್ರಾಪ್ತವಾದಾಗಲೂ ಸಂತೋಷಾಧಿಕ್ಯದಿಂದ ಮೆರೆಯಬಾರದು. ಈ ಎರಡೂ ಅಶಾಶ್ವತವಾದುವುಗಳು ಮತ್ತು ಮನುಷ್ಯನ ಹಿಡಿತಕ್ಕೆ ಸಿಕ್ಕದುವುಗಳು. ಕೇವಲ ದೈವದಿಂದಲೇ ನಿಯಂತ್ರಿತವಾದುವುಗಳು. ಆದುದರಿಂದ ಸುಖ- ದುಃಖಗಳನ್ನು ಕೇವಲ ಅದೃಷ್ಟಾಯತ್ತವೆಂದು ಭಾವಿಸಿ ಧೀರನಾದವನು ಕಷ್ಟ ಬಂದಾಗ ಸಂತಾಪಪಡಬಾರದು ; ಸುಖವು ಪ್ರಾಪ್ತವಾದಾಗ ಸಂತೋಷಿಸಲೂ ಬಾರದು.

**ಭಯೇ ನ ಮುಹ್ಯಾಮ್ಯಷ್ಟಕಾಹಂ ಕದಾಚಿ-**
**ತ್ಸನ್ತಾಪೋ ಮೇ ಮಾನಸೋ ನಾಸ್ತಿ ಕಶ್ಚಿತ್ ।**
**ಧಾತಾ ಯಥಾ ಮಾಂ ವಿದಧೀತ ಲೋಕೇ**
**ಧ್ರುವಂ ತಥಾಹಂ ಭವಿತೇತಿ ಮತ್ವಾ ॥೧೦॥**

ಅಷ್ಟಕ! ಮಾನವನು ಸರ್ವದಾ ತನ್ನ ಮನಸ್ಸಿನಲ್ಲಿ ಈ ವಿಧವಾಗಿಯೇ ಯೋಚಿಸಬೇಕು : 'ಭಯದಲ್ಲಿ ( ಕಷ್ಟದಲ್ಲಿ ) ನಾನು ಮೋಹಗೊಳ್ಳುವುದಿಲ್ಲ. ( ಭ್ರಾಂತನಾಗುವುದಿಲ್ಲ. ) ನನ್ನ ಮನಸ್ಸಿಗೆ ಯಾವಾಗಲೂ ಯಾವ ಕಾರಣ ದಿಂದಲೂ ಸಂತಾಪವುಂಟಾಗುವುದಿಲ್ಲ. ಬ್ರಹ್ಮನು ನನ್ನ ಜೀವನದ ನಿಯಂತ್ರಣವನ್ನು ಹೇಗೆ ಮಾಡುತ್ತಾನೆಯೋ ಹಾಗೆಯೇ ನನ್ನ ಜೀವನವು ನಡೆಯುತ್ತದೆಂದು ನಾನು ದೃಢವಾಗಿ ನಂಬಿದ್ದೇನೆ'–ಎಂಬುದಾಗಿ ಮನಸ್ಸಿನಲ್ಲಿ ಪದೇ-ಪದೇ ಹೇಳಿಕೊಳ್ಳುತ್ತಿದ್ದರೆ ಸುಖ-ದುಃಖಗಳ ಸಂಬಂಧವಾದ ಆತಂಕವು ದೂರವಾಗುವುದು. ಪ್ರಪಂಚದಲ್ಲಿರುವ ಸ್ವೇದಜಗಳು, ಅಂಡಜಗಳು, ಉದ್ಭಿಜ್ಜಗಳು, ಸರೀಸೃಪಗಳು, ಕ್ರಿಮಿಗಳು, ನೀರಿನಲ್ಲಿ ವಾಸಮಾಡುವ ಮತ್ಸ್ಯಾದಿಗಳು, ಕಲ್ಲು, ಹುಲ್ಲು, ಕಟ್ಟಿಗೆಗಳೂ ಸಹ ಬ್ರಹ್ಮನ ಸಂಕಲ್ಪಮಾತ್ರ ದಿಂದಲೇ ಹುಟ್ಟುತ್ತವೆ ಮತ್ತು ಅದೇ ಬ್ರಹ್ಮನ ಸಂಕಲ್ಪದಿಂದಲೇ ಪರಮಾತ್ಮ ನಲ್ಲಿ ಲೀನವಾಗುತ್ತವೆ. ಅಷ್ಟಕ! ಸುಖ-ದುಃಖಗಳ ಅನಿತ್ಯತೆಯನ್ನು ತಿಳಿದೂ ಸಹ ಸ್ವರ್ಗದಿಂದ ಚ್ಯುತನಾದುದಕ್ಕೇಕೆ ಸಂತಾಪಪಡಲಿ? ನಾನೀಗ ಏನು ಮಾಡಬಲ್ಲೆನು? ಏನು ಮಾಡುವುದರಿಂದ ನನಗೆ ಈಗ ಪ್ರಾಪ್ತವಾಗಿರುವ ಈ ನನ್ನ ಪರಿತಾಪವು ಪರಿಹಾರವಾಗುವುದು? ಈ ಹಿಂದೆ ನನ್ನ ಅಧಃಪತನವು ನನಗೆ ಹೇಗೆ ತಿಳಿದಿರಲಿಲ್ಲವೋ ಅಂತೆಯೇ ಈಗ ನನ್ನ ಉದ್ಧಾರವೂ ನನಗೆ ತಿಳಿಯದೆಯೇ ನಿಗೂಢವಾಗಿದೆ. ನನ್ನ ಉದ್ಧಾರ ಅಥವಾ ಅಧಃಪತನ ಗಳೆರಡೂ ಬ್ರಹ್ಮನ ಸಂಕಲ್ಪಕ್ಕೇ ಸೇರಿದ್ದಾಗಿವೆ. ಆದುದರಿಂದ ನಾನು ಇಂದು ಪ್ರಾಪ್ತವಾಗಿರುವ ಈ ದುರವಸ್ಥೆಯಿಂದ ವಿಮೋಹಿತನಾಗದೇ ( ಭ್ರಾಂತ ನಾಗದೇ ) ನನಗೆ ಸಂತಾಪವುಂಟಾಗಿದೆಯೆಂಬುದನ್ನೇ ಮರೆತುಬಿಡುತ್ತೇನೆ."

ದೇವಸಮಾನನಾದ ರಾಜನನ್ನು ಕುರಿತು ಅಷ್ಟಕನು ಪುನಃ ಪ್ರಶ್ನಿಸಿದನು:

---

* ಅಷ್ಟಕಾದಿ ರಾಜರ್ಷಿಗಳೂ ಯಯಾತಿಯ ಮಗಳ ಮಕ್ಕಳು. (ದೌಹಿತ್ರರು). ಯಯಾತಿಯ ಮಗಳ ಹೆಸರು ಮಾಧವೀ. ಅವಳ ಚರಿತ್ರೆಯು ಮಹಾಭಾರತದಲ್ಲಿ ಮುಂದೆ ವಿಸ್ತಾರವಾಗಿ ಹೇಳಲ್ಪಟ್ಟಿದೆ.

"ಮಹಾರಾಜ! ನಿನ್ನ ಅಸ್ಖಲಿತವಾಣಿಯನ್ನು ಕೇಳಿದರೆ ಕ್ಷೇತ್ರಜ್ಞರಾಡುವ ಮಾತುಗಳ ಸ್ಮರಣೆಯುಂಟಾಗುತ್ತದೆ. ನಿನ್ನ ಮಾತುಗಳೆಲ್ಲವೂ ಧರ್ಮದ ಹಿನ್ನೆಲೆಯಲ್ಲಿಯೇ ಹೇಳಲ್ಪಟ್ಟಿವೆ. ನಿನ್ನ ಲೋಕಾನುಭವವೂ ಅಸದೃಶವಾದುದು. ಆದುದರಿಂದ ನೀನು ಯಾವ-ಯಾವ ಲೋಕಗಳಲ್ಲಿ ಎಷ್ಟೆಷ್ಟು ವರ್ಷಗಳು ಇದ್ದೆಯೆಂಬುದನ್ನು ಕೇಳಲು ಇಚ್ಛಿಸುತ್ತೇನೆ. ದಯವಿಟ್ಟು ಹೇಳುವೆಯಾ?"

"ನಾನು ಭೂಲೋಕದಲ್ಲಿ ಸಕಲರಾಜ್ಯಗಳನ್ನೂ ಜಯಿಸಿ, ಚಕ್ರವರ್ತಿಯೆಂಬ ಕೀರ್ತಿಯನ್ನೂ ಗಳಿಸಿ, ಅನೇಕ ಸಹಸ್ರವರ್ಷಗಳ ಕಾಲ ಜೀವಿಸಿದ್ದೆನು. ಆ ಕಾಲದಲ್ಲಿ ಮಾಡಿದ ಅನೇಕಯಜ್ಞ-ಯಾಗಾದಿಗಳ ಮತ್ತು ಘೋರ ತಪಸ್ಸಿನ ಫಲವಾಗಿ ನನಗೆ ಇಂದ್ರಲೋಕದ ಆವಾಸವು ಸಿಕ್ಕಿತು. ಇಂದ್ರಲೋಕಕ್ಕೆ ಸಾವಿರ ಬಾಗಿಲುಗಳಿವೆ. ಅದು ಶತಯೋಜನವಿಸ್ತೀರ್ಣವಾಗಿದೆ. ಅಲ್ಲಿಯೂ ಒಂದು ಸಹಸ್ರವರ್ಷಗಳು ವಾಸಿಸಿದನಂತರ ಅದಕ್ಕಿಂತಲೂ ಉತ್ತಮಲೋಕವೆನಿಸಿದ ಬ್ರಹ್ಮಲೋಕಕ್ಕೆ ಹೋದೆನು. ಅದು ಬಹಳ ಸುಂದರವಾದ ಲೋಕ. ಅಲ್ಲಿ ವಿನಾಶವೆಂಬುದೇ ಇಲ್ಲ. ಆ ಲೋಕವನ್ನು ಸಾಧಾರಣರಾದ ಮಾನವರು ಹೊಂದಲು ಸಾಧ್ಯವೇ ಇಲ್ಲ. ಅಲ್ಲಿಯೂ ಒಂದು ಸಾವಿರ ವರ್ಷಗಳನ್ನು ಕಳೆದು ಅದಕ್ಕಿಂತಲೂ ಉತ್ತಮವೆನಿಸಿದ ದೇವದೇವನಾದ ಮಹಾವಿಷ್ಣುವಿನ ಲೋಕಕ್ಕೆ ಹೋದೆನು. ಅಲ್ಲಿಯೂ ನನ್ನ ಜೀವನವು ಬಹಳ ಆನಂದದಾಯಕವಾಗಿತ್ತು. ನಾನು ಯಾವ ಲೋಕಕ್ಕೆ ಹೋದರೂ ನನ್ನನ್ನು ಸಕಲದೇವತೆಗಳೂ ಪುರಸ್ಕರಿಸುತ್ತಿದ್ದರು. ನನ್ನನ್ನೂ ತಮಗೆ ಸಮಾನನೆಂದೇ ಭಾವಿಸಿದ್ದರು. ನನಗೆ ಇಚ್ಛಿತವಾದ ರೂಪವನ್ನು ಹೊಂದಬಹುದಾದ ಅಣಿಮಾದಿಸಿದ್ಧಿಗಳೂ ಲಭಿಸಿದ್ದುವು. ಅತ್ಯಂತಸುಂದರವೆನಿಸಿದ ನಂದನವನದಲ್ಲಿ ಹತ್ತುಲಕ್ಷ ವರ್ಷಗಳ ಕಾಲ ವಾಸವಾಗಿದ್ದೆನು. ಅಲ್ಲಿಯ ಸುಖವನ್ನು ವರ್ಣಿಸಲು ಸಾಧ್ಯವೇ ಇಲ್ಲ. ತ್ರಿಲೋಕಸುಂದರಿಯರಾದ ಅಪ್ಸರೆಯರು, ಸರ್ವ ಕಾಲದಲ್ಲಿಯೂ ಸುಮನೋಹರವಾಗಿಯೂ ಪುಷ್ಪಭರಿತವಾಗಿಯೂ ಇರುವ ಸಾವಿರಾರು ಮರಗಳು, ಇಚ್ಛಿಸಿದ ವಸ್ತುಗಳನ್ನು ಒಡನೆಯೇ ಕೊಡುವ ಕಲ್ಪತರು–ಇವುಗಳೆಲ್ಲವೂ ಆ ನಂದನವನದಲ್ಲಿದ್ದುವು. ಅವುಗಳ ಮಧ್ಯದಲ್ಲಿ ವಾಸಮಾಡುತ್ತಿದ್ದ ನನಗೆ ಹತ್ತುಲಕ್ಷ ವರ್ಷಗಳೂ ಹತ್ತು ಕ್ಷಣಗಳಂತೆ ಕಳೆದು

ಹೋದುವು. ಕೂಡಿಟ್ಟ ಧನವನ್ನು ಕುಳಿತು ವೆಚ್ಚಮಾಡಲು ಪ್ರಾರಂಭಿಸಿದರೆ ಎಷ್ಟೇ ಕೋಟಿಗಳಿದ್ದರೂ ಎಷ್ಟು ವರ್ಷಗಳ ಕಾಲ ತಡೆದು ಬರಬಹುದು? ಅಂತೆಯೇ ಸಾವಿರಾರು ವರ್ಷಗಳ ಕಾಲ ಮಾಡಿದ ತಪಸ್ಸಿನಿಂದಲೂ ಯಜ್ಞ-ಯಾಗಾದಿಗಳಿಂದಲೂ ಕೂಡಿಟ್ಟ ಪುಣ್ಯದ ಫಲವನ್ನು ಅನುಭವಿಸಲು ಮೊದಲಿಟ್ಟರೆ ಆ ಫಲವೆಲ್ಲವೂ ಎಂದಾದರೊಂದು ದಿನ ಮುಗಿಯಲೇ ಬೇಕಲ್ಲವೇ?

ನನ್ನ ಪುಣ್ಯವೆಲ್ಲವೂ ತೀರಿತು. ಆ ಸಮಯಕ್ಕೆ ಸರಿಯಾಗಿ ನನ್ನ ಅಹಂಕಾರದ ಕಾರಣದಿಂದ ಇಂದ್ರನ ಶಾಪವನ್ನೂ ಅನುಭವಿಸಬೇಕಾಯಿತು. ಪುಣ್ಯವು ಕಳೆದೊಡನೆಯೇ ಅಲ್ಲಿದ್ದ ನಂದನವನವಾಗಲೀ, ಅಪ್ಸರೆಯರಾಗಲೀ ನನ್ನ ಕಣ್ಣಿಗೆ ಕಾಣಿಸಲಿಲ್ಲ. ಉಗ್ರರೂಪಿಯಾದ ದೇವದೂತನೊಬ್ಬನು ಬಂದು 'ಧ್ವಂಸ' ಎಂದು ಮೂರು ಬಾರಿ ಉಚ್ಚಸ್ವರದಲ್ಲಿ ಕಿರುಚಿದಂತಾಯಿತು. 'ಅಯ್ಯೋ! ಮಹಾಪುಣ್ಯಶಾಲಿಯಾದ ಯಯಾತಿಯು ತನ್ನ ಪುಣ್ಯವನ್ನೆಲ್ಲಾ ಕಳೆದುಕೊಂಡು ಕೆಳಗೆ ಬೀಳುತ್ತಿರುವನಲ್ಲಾ?'–ಎಂಬ ದೇವತೆಗಳ ಅನುಕಂಪದ ಧ್ವನಿಯು ಮಾತ್ರ ಕೇಳಿಸಿತು. ಆ ಸಮಯದಲ್ಲಿ ಸತ್ಪುರುಷರ ಮಧ್ಯೇ ಬೀಳಬೇಕೆಂಬ ಒಂದೇ ಒಂದು ಆಸೆಯು ನನ್ನ ಮನದಲ್ಲಿತ್ತು. ದೇವವಾಣಿಯನ್ನು ಕೇಳಿ ಒಡನೆಯೇ ನಾನು ಅವರನ್ನು ಕುರಿತು ಸತ್ಪುರುಷರಲ್ಲಿಗೆ ಹೋಗುವುದು ಹೇಗೆಂದು ಕೇಳಿದೆನು. ಅವರು ಯಜ್ಞಧೂಮದಿಂದ ಆವೃತವಾಗಿದ್ದ ಈ ಪ್ರದೇಶವನ್ನು ನಿರ್ದೇಶಿಸಿದರು. ಅವರ ನಿರ್ದೇಶಾನುಸಾರವಾಗಿಯೇ ಪ್ರಶಾಂತವಾಗಿರುವ ನಿಮ್ಮ ಆಶ್ರಮದ ಸಮೀಪಕ್ಕೆ ಬಂದಿರುವೆನು. ಸತ್ಪುರುಷರ ಮಧ್ಯದಲ್ಲಿರುವುದರಿಂದ ನನ್ನ ಹೃದಯವು ಸಂತುಷ್ಟವಾಗಿದೆ."

ೞೱನೆಯ ಅಧ್ಯಾಯವು ಮುಗಿಯಿತು.

## ಪ್ರಥಮ ಸಂಪುಟವು ಮುಗಿಯಿತು.

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು

ಓಂ ತತ್ಸತ್

❖

